ಚಳುವಳಿಗಳು ಸಾಮಾಜಿಕ ಸ್ವಾಸ್ಥ್ಯಕ್ಕೆ ಪೂರಕವಾಗಬೇಕೆನ್ನುವ ಮಾತುಗಳಲ್ಲಿ ಲಲಿತಾಂಬಾ ಅವರ ಸ್ತ್ರೀಪರ ಕಾಳಜಿ ವ್ಯಕ್ತವಾಗಿದೆ.

ಮಹಿಳೆ ಮನೆಯೊಳಗೇ ಬಂಧಿಯಾದರೆ
ಪುರುಷ ಸ್ವೇಚ್ಛಾಚಾರಿ
ಅವನಿಗಿಲ್ಲ ಯಾವ ಕಟ್ಟು ಕಟ್ಟಳೆ
ಮಹಿಳೆ ಹೊರಗೆ ದುಡಿದು ಬಂದರೂ, ಮನೆಯ
ಕೆಲಸಕ್ಕೂ ಅವಳೇ ಜವಾಬ್ದಾರಿ !
ದುಡಿದು ಮನೆಗೆ ಬಂದ ಪುರುಷ, ಮನೆಯಲ್ಲಿ

ರುದ್ರಭಯಂಕರಿಯಾದ ಪ್ರಕೃತಿಯನ್ನು ಮನಬಂದಂತೆ ಬಗೆಯುತ್ತಿರುವ ಮನುಷ್ಯ ಕುಲಕ್ಕೆ ಎಚ್ಚರಿಕೆಯಗಂಟೆಯಂತೆ ಅಪ್ಪಳಿಸುವ ಕವನ 'ಮುನಿದೆವಿಕಮ್ಮ ನೆಲದಾಯಿ'. ಪ್ರಾಕೃತಿಕ ವಿಕೋಪಗಳು ಮನುಕುಲವನ್ನು ಮೃತ್ಯುವಿನ ಬಾಯಿಗೆ ನೂಕಿ ಬಿಡುತ್ತವೆ. ಇಂಥದೊಂದು ದುರಂತ ಮಹಾರಾಷ್ಟ್ರದಲ್ಲಿ ೧೯೯೩ರಲ್ಲಿ ಸಂಭವಿಸಿದ ಭೂಕಂಪ. ಏಕಕಾಲಕ್ಕೆ ೧೫೦೦೦ದಷ್ಟು ಮನುಷ್ಯರನ್ನು ಆಹುತಿ ತೆಗೆದುಕೊಂಡ ಈ ಮಹಾ ದುರಂತ ಘಟನೆಯಿಂದ ನೊಂದ ಕವಯಿತ್ರಿ ಭೂಮಿತಾಯಿಯನ್ನು ಮುನಿಯದಿರುವಂತೆ ಪ್ರಾರ್ಥಿಸುವ ಪದ್ಯ,

ಓ ತಾಯಿ ಮಾತಾಯಿ ಭೂತಾಯಿ ಶ್ರೀಶಂಕರಿ
ನೀನಿಂದುಏಕಾದೆ ಮಹಾ ಭಯಂಕರಿ
..............................................................
ಹಾಲನುಣಿಸುವ ತಾಯಿ ಉಣಿಸಬಹುದೆ ಹಾಲಾಹಲವನು?

ಸತ್ಯ, ಸಜ್ಜನಿಕೆ ದಾನ, ದಯೆ ಇತ್ಯಾದಿ ಮೌಲ್ಯಗಳು ಪೌರಾಣಿಕ ಪ್ರತಿಮೆಗಳಾಗಿ ಮಾತ್ರ ಪ್ರಸ್ತುತಗೊಳ್ಳುತ್ತಿರುವ ಇಂದಿನ ಮೌಲ್ಯವಿಹೀನ ಸಮಾಜದಲ್ಲಿ, ಮೋಸ, ದ್ವೇಷ, ವಂಚನೆ–ಸಂಚು, ತಂತ್ರ ಕುತಂತ್ರಗಳ ಮೇಲಾಟ ನಡೆದಿರುವದನ್ನು ದುಗುಡ–ವಿಷಾದದಿಂದ ಲೇಖಕಿ ಗಮನಿಸಿದ್ದಾರೆ. ಸಮಯ ಸಾಧಕ ದುಷ್ಟ ಪ್ರವೃತ್ತಿಗಳಿಂದಾಗಿ ಕಣ್ಮರೆಯಾಗುತ್ತಿರುವ ಜೀವನ ಮೌಲ್ಯಗಳನ್ನು ಬದುಕಿನಲ್ಲಿ ಜೀವಂತಗೊಳಿಸಿಕೊಳ್ಳಬೇಕಾದ ಅಗತ್ಯವನ್ನು ಪರಿಶೀಲಿಸುವ ವಿಶಿಷ್ಟ ಕವನ 'ಅಂಜದಿರು ಮೌಲ್ಯವೆ"

ಅಂಜದಿರು ಮೌಲ್ಯವೇ, ನಮಗಾಗಿ ಅಂಜದಿರು
ವಂಚಕರು, ದ್ರೋಹಿಗಳು, ಕುಟಿಲನೀತಿಯ ಪರಿಣಿತರು
ನಯ, ನೀತಿ, ಪ್ರೀತಿ, ಭೀತಿ ಎಂಬ ಸೋಗಿನ ಮಾತಿನಲಿ

ನಿನ್ನ ಮುಖಕೆ ಮಂಗಳಾರತಿ ಎತ್ತುವರೆಂಬ ಅಳುಕೇ ನಿನಗೆ?
ಮೌಲ್ಯವೇ ನೀ ಅಳುಕಿದರೆ ಪಾಂಡವರಿಗೆಲ್ಲಿದೆ ಉಳಿಗಾಲ?

–ಒಟ್ಟಾರೆ, ಚಿಂತನಶೀಲ ಲೇಖಕಿಯಾಗಿ ತಮ್ಮ ನಿರರ್ಗಳ ಶಕ್ತಿಯುತ ಶೈಲಿಯಿಂದ ಯಶಸ್ವಿಯಾದ ಲಲಿತಾಂಬಾ ಅವರು ಕವಯಿತ್ರಿಯಾಗಿಯೂ ಗಮನಸೆಳೆಯುತ್ತಾರೆ. ತಮ್ಮ ಸೂಕ್ಷ್ಮಸಂವೇದನೆ ಪ್ರಖರವೈಚಾರಿಕತೆಯಿಂದ ವಿಶಿಷ್ಟರೆನಿಸುತ್ತಾರೆ. ರಸ–ಭಾವಪೂರ್ಣ ನಿರೂಪಣೆ ಅಲಂಕಾರ ಉಪಮೆ, ರೂಪಕಗಳಿಗೆ, ಮಾರು ಹೋಗದೆ, ನೇರ ಸರಳ, ಸಹಜ ಶೈಲಿಯಲ್ಲಿ ನೇರವಾಗಿ ಮನಸ್ಸನ್ನು ಮುಟ್ಟುವ ಗುಣ ಈ ಕವನಗಳ ಗಮನಾರ್ಹ ಸಾಧನೆ. ನವೋದಯ ಕಾವ್ಯಸಾಧನೆಯ ಒಂದು ಮಾದರಿ.

### ಹಣತೆ ಹಚ್ಚಿ ಹುಡುಕುತಿರುವೆ (೨೦೦೩)

ಕವಯಿತ್ರಿ ಲಲಿತಾಂಬಾ ಅವರ ಸೃಜನಶೀಲತೆಯ ಮೂಲದ್ರವ್ಯವನ್ನು ಅರ್ಥಪೂರ್ಣವಾಗಿ ಪ್ರತಿನಿಧಿಸುವ ೫೧ ಕವನಗಳ ಸಂಕಲನವಿದು. ಸಮಾಜ–ಸಂಸ್ಕೃತಿ, ಮನುಷ್ಯ ಸಂಬಂಧಗಳ ಗುಣಾತ್ಮಕ ಆಯಾಮಗಳನ್ನು ಮತ್ತು ಸಮಷ್ಠಿಯ ಸತ್ವವನ್ನು ಛಿದ್ರೀಕರಿಸುವ ಕೆಟ್ಟ ಪ್ರವೃತ್ತಿಗಳನ್ನು ತೀವ್ರವಾಗಿ ಖಂಡಿಸುತ್ತ, ಆರೋಗ್ಯಕರ ಬದುಕಿಗೆ ಅಗತ್ಯವಾದ ಬೌದ್ಧಿಕ– ಮಾನಸಿಕ ಸ್ವಾಸ್ಥ್ಯವನ್ನು ವರ್ಧಿಸುವ ರಚನಾತ್ಮಕ ಚಿಂತನೆಗಳನ್ನು ತಮ್ಮ ವೈಚಾರಿಕ ಬರಹಗಳ ಮೂಲಕ ಪ್ರತಿಪಾದಿಸುತ್ತ ಬಂದ ಪ್ರೊ. ಲಲಿತಾಂಬಾ ಅವರದು, ವೈಚಾರಿಕ ವ್ಯಕ್ತಿತ್ವ; ಸಮಷ್ಠಿಗೆ ಮಿಡಿಯುವ ಮಾತೃಹೃದಯದ ಅಂತಃಕರಣ. ವಿನಾಶಕಾರಿ ಪ್ರವೃತ್ತಿಗಳ ಪ್ರತಿ ಸಮಾಜವನ್ನು ಎಚ್ಚರಿಸುವ ಶಿಕ್ಷಕಿ ಅವರೊಳಗೆ ಹಾಸುಹೊಕ್ಕಾಗಿದ್ದಾಳೆ. ಆಧುನಿಕ ಸಮಾಜದ ಅಸಾಂಗತ್ಯ, ಕೇಡು, ತಲ್ಲಣಗಳು ಅವರನ್ನು ಅತೀವ ವಾಗಿ ಕಾಡಿವೆ. ಅಂತೆಯೇ ಲಲಿತಾಂಬಾ ಅವರ ಸಾಮಾಜಿಕ ಸೃಜನಶೀಲತೆ ಅವರ ಬರಹಗಳಲ್ಲಿ ವ್ಯಕ್ತವಾಗಿದೆ. ಗುಣಗ್ರಾಹಿಗಳಾದ ಅವರು, ಸಮಾಜದಲ್ಲಿ ಬೂಟಾಟಿಕೆಯ ಸ್ವಾರ್ಥ ಪ್ರವೃತ್ತಿಗಳು ವಿಜೃಂಭಿಸುವುದನ್ನು ಕಂಡು ಸಿಡಿಮಿಡಿಗೊಂಡಿದ್ದಾರೆ. ಪ್ರಸ್ತುತ ಕವನ ಸಂಕಲನದಲ್ಲಿಯೂ ಲಲಿತಾಂಬಾ ಅವರು ಮನುಷ್ಯ ಸಮಾಜ ಮತ್ತು ಸ್ವಭಾವದಲ್ಲಿರುವ ಕೇಡಿನ ಮುಖಗಳ ಬಗೆಗೆ, ತಮ್ಮ ಅಸಹನೆ –ಅತೃಪ್ತಿಗಳನ್ನು ಹೊರಹಾಕಿದ್ದಾರೆ. ಜಾತಿ, ಹಣ ಅಧಿಕಾರದ ಮೇಲಾಟಗಳಿಂದ, ಆದರ್ಶದ ನಾಟಕವಾಡುತ್ತಾ ಒಳಗೊಂದು ಹೊರಗೊಂದಾಗಿ ಬದುಕುವ ಸಮಯಸಾಧಕರಿಂದ ಕಲುಷಿತಗೊಂಡಿರುವ ವರ್ತಮಾನಕ್ಕೆ, ದುಗುಡ ದುಮ್ಮಾನಗಳಿಂದ ಪ್ರತಿಕ್ರಿಯಿಸುವ ಲೇಖಕಿ "ಇದು ಸಮಯ ಸಾಧಕರ ಕಾಲ, ಮತ್ತೆ ಬಾಲ ಬಡುಕರಿಗೆ ಬಹಳ ಅನುಕೂಲ, ಮೌಲ್ಯಗಳ ಬೆಂಬತ್ತಿ ಹೋದವರಿಗೆ ದುಷ್ಕಾಲ. ಒಳಿತಾಗಿ ಬದುಕ

ಬೇಕೆಂಬುವವರಿಗೆ ಕೆಟ್ಟಕಾಲ" ಎಂದು ಸಮಕಾಲೀನ ಬದುಕಿನ ವಿಕ್ಷಿಪ್ತತೆಗೆ ಭಾಷ್ಯ ನೀಡುತ್ತಾರೆ. "ಕಟ್ಟಿದ ನಂಬುಗೆಯ ಸೇತುವೆಯೇ ಕುಸಿಯುವಂತಾದಾಗ ದಾಟುವದೆಂತು ನದಿಯ? ಸೇರುವದೆಂತು ಗುರಿಯ?"ಎಂದು ಕಳವಳಿಸುತ್ತಾರೆ. ನಿರಾಶೆಯ ಕಾರ್ಮೋಡದಲ್ಲಿಯೂ ಭರವಸೆಯ ಸೆಳೆಮಿಂಚೊಂದನ್ನು ಗುರುತಿಸುವ ಅವರು "ಪೊರಕೆಗಳ ತಂದು, ಹೊಲಸನೆಲ್ಲ ಹೊರದೂಡಬನ್ನಿ, ಎತ್ತಿ ಎಸೆಯ ಬನ್ನಿ ಕೊಳೆತುದುದನ್ನು ಹಳಸಿದುದನ್ನು, ತಗ್ಗಿನೊಳಗೆ ಸುರಿದು ಮಣ್ಣು ಮುಚ್ಚ ಬನ್ನಿ, ಹೊಸ ದಾರಿಗೆ, ಹೊಸ ಗಾಳಿಗೆ, ಶುದ್ಧ ಪರಿಸರಕ್ಕೆ ಎಡೆಮಾಡ ಬನ್ನಿ" (ಏಳಿ ಎದ್ದೇಳಿ) ಎಂದು ಎಚ್ಚರಿಸುವ ಜೀವನೋತ್ಸಾಹವನ್ನು ತೋರಿಸುತ್ತ ಓದುಗರ ಭಾವಕೋಶದಲ್ಲಿ ನೆಲೆಯೂರುತ್ತಾರೆ. ಹೀಗೆ ತಮ್ಮನ್ನು ಕಾಡಿಕಂಗೆಡಿಸಿದ ಸಂಗತಿಗಳ ಹಿನ್ನೆಲೆ ಮುನ್ನೆಲೆಗಳನ್ನು ಕೆದಕಿ –ಬೆದಕಿ ತಮ್ಮ ಚಿಂತನದ ತಿರುಳನ್ನು ಪಿಸುಮಾತುಗಳಲ್ಲಿ ಉಸುರಿ, ತಮ್ಮ ತಲೆಭಾರ ಎದೆ ಭಾರವನ್ನು ಹಂಚಿಕೊಳ್ಳುತ್ತಾರೆ.

ಮೌಲ್ಯಗಳು ಅಪಮೌಲ್ಯಗಳಾಗಿ ಮುಖಮುಚ್ಚಿ ಮುದುರಿಕೊಳ್ಳುತ್ತಿರುವ ಆಧುನಿಕ ಸಮಾಜದ ಅಸಹನೀಯತೆಗಳಿಗೆ ನೊಂದ ಕವಯಿತ್ರಿ " ಹುಡುಕುತಿರುವೆ ಹಣತೆ ಹಚ್ಚಿ ಈ ದೇಶದೆಲ್ಲೆಲ್ಲಿಯಾದರೂ ಸಾಚಾಜನರಿಹರೆ ಎಂದು" ತಮ್ಮ ವಿಷಾದವನ್ನು ತೀಕ್ಷ್ಣ ಮಾತುಗಳಲ್ಲಿ ಪ್ರಕಟಿಸುತ್ತಾರೆ. ಹಣ ಮಾತಾಡುವ ಪ್ರಪಂಚದಲ್ಲಿ "ಗುಣಕ್ಕೆ ಸ್ಥಾನವಿರಲು ಸಾಧ್ಯವೆಲ್ಲಿ? ಎನ್ನುವ ಮೂಲಪ್ರಶ್ನೆಯನ್ನು ಎತ್ತಿ ಚಿಂತನೆಗೆ ಹಚ್ಚುತ್ತಾರೆ. "ಹಣವು ಹೆಣವಾಗಿ, ಗುಣವು ಗಣನೆಗೆ ಬಂದೀತು"ಎನ್ನುವ ಆಶಾವಾದವನ್ನು ಬಿತ್ತಿ ಸಂತೈಸುತ್ತಾರೆ. "ಒಕ್ಕಟ್ಟಿಲ್ಲದೆ ಬಿಕ್ಕಟ್ಟು" ಸೃಷ್ಟಿಸಿಕೊಳ್ಳುತ್ತ ಮುಳುಗುವ ಹಡಗಿನಂತಾಗುತ್ತಿರುವ "ಭಾರತೀಯರಿಗೆ ಒಕ್ಕಟ್ಟಿನ ಬೆಲೆಯೇ ತಿಳಿಯುತ್ತಿಲ್ಲವಲ್ಲ" ಎನ್ನುವ ಕವಯಿತ್ರಿ, ರಾಮರಾಜ್ಯದ ಕನಸು, ರಾವಣರಾಜ್ಯದಲ್ಲಿ ಕರಗುತ್ತಿರುವುದಕ್ಕೆ ವಿಷಾದಿಸುತ್ತಾರೆ. ಬಡವರನ್ನು ಕುಡಿತಕ್ಕೆ ದೂಡಿ, ಮನೆಮಂದಿಯನ್ನು ಬೀದಿಪಾಲಾಗಿಸಿ, ಲಾಭಗಳಿಸುವ ಸರಕಾರದ ಸಾರಾಯಿ ನೀತಿಯನ್ನು ನಿಷ್ಠುರವಾಗಿ ವಿಡಂಬಿಸುವ ಅವರ ಹರಿತ ವ್ಯಂಗ್ಯದ ಶೈಲಿ ವಿಶಿಷ್ಟವಾಗಿದೆ. (ಘನಸರ್ಕಾರ)

ಸ್ವತಂತ್ರ ಭಾರತ ನಿರ್ಮಾಣಕ್ಕಾಗಿ ಹೋರಾಡಿ ಸತ್ತವರು ಹಲವರು. ಐವತ್ತು ವರ್ಷಗಳಲ್ಲಿ ಭಾರತೀಯರು ಕಟ್ಟಿದ ಸ್ವತಂತ್ರ ಭಾರತದ ದುಃಸ್ಥಿತಿಯನ್ನು ಲಲಿತಾಂಬಾ ಅವರು ಕಂಡದ್ದು ಹೀಗೆ:

"ಬೇರೆಯವರದ್ನೆಲ್ಲಾ ಪಡ್ಕೊಂಡಿದ್ದೀವಿ, ನಮ್ಮದ್ನೆಲ್ಲಾ ಕಳ್ಕೊಂಡಿದೀವಿ
ಮೋಜು ಮಾಡಿ ಮೆರೆಯೋದನ್ನು ಕಲ್ತಿದೀವಿ,
ಮಾನ ಮರ್ಯಾದೇನೂ ಬಿಟ್ಟಿದೀವಿ"

ಗಡಿ, ಭಾಷೆ, ಜಾತಿ, ಮೀಸಲಾತಿ ಮುಂದೆ ಮಾಡಿ, ಲಾಭ ಪಡೆಯುವ ಮನೆ– ಮುರುಕ ರಾಜಕಾರಣಿಗಳನ್ನು ತರಾಟೆಗೆ ತೆಗೆದುಕೊಳ್ಳುವಾಗಿನ ಆಕ್ರೋಶ, ಸ್ವತಂತ್ರ ಭಾರತದ ಪ್ರಜೆಗಳ ಹೊಣೆಗೇಡಿತನವನ್ನು, ಭ್ರಷ್ಟ ರಾಜಕಾರಣಿಗಳನ್ನು ಕಂಡು "ಇಂದೇನಾಗಿದೆ ಭಾರತೀಯರಿಗೆ? ಎಂದು ಚುಚ್ಚಿ ಎಚ್ಚರಿಸುವ ಸಾತ್ವಿಕ ಸಂತಾಪದ ಕೋಪತಾಪದ ನಿರ್ಭಿಡೆಯ ಧಾಟಿ ಲಲಿತಾಂಬಾ ಅವರ ಜನಪರ ಮನೋಧರ್ಮ –ಕಾವ್ಯ ಧರ್ಮ ಪ್ರತಿಫಲಿಸುವ ವಿಶಿಷ್ಟ ದನಿ:

ಇಂದೇನಾಗಿದೆ ಈ ಭಾರತೀಯರಿಗೆ?
ಸ್ವಾರ್ಥಕ್ಕಾಗಿ ದೇಶವನೇ ದುಸ್ಥಿತಿಗೆ ದೂಡುತಿಹರಲ್ಲ!
ಅಂದು ದೇಶಕ್ಕಾಗಿ ಮಾಡಿದ ಜನರ ತ್ಯಾಗವೆಷ್ಟು?
(ಇಂದು) ದೇಶವನೆ ಮಾರಿ–ತೂರಿ ಬಗಿದು ಬಾಚಿಕೊಳ್ಳುತಿಹರು"

ಸ್ವಂತಿಕೆಯನ್ನು ಮರೆತು ಅನ್ಯಕ್ಕೆ ಕೈಯೊಡ್ಡುವ ಪರ ಸಂಸ್ಕೃತಿಯ ವ್ಯಾಮೋಹವನ್ನು ಲೇಖಕಿ ಖಂಡಿಸುತ್ತಾರೆ. (ಭಾರತೀಯ ಮೌಲ್ಯ) ಕೈಕೆಸರಾಗದೆ ಬಾಯಿ ಮೊಸರಾಗಬೇಕೆನ್ನುವ ಫಲಾಯನವಾದವನ್ನು, (ಬಹುಜನರ ಬದುಕಂತೆ) ಜಾತಿ ಮೀಸಲಾತಿ ಗಡಿ–ಭಾಷೆಯ ಹೆಸರಿನಲ್ಲಿ ಜನರ ಮನಸ್ಸು ಒಡೆದು ವಿಷಬೀಜ ಬಿತ್ತಿ" ವಿಷ ಫಲ ಉಣಿಸುವ ಅನೀತಿಯನ್ನು ಮತ್ತೆ ಮತ್ತೆ ತರಾಟೆಗೆ ತೆಗೆದುಕೊಳ್ಳುವ (ಭಾರತದ ರಾಜಕಾರಣ) ಕವನಗಳಲ್ಲಿ ಎಚ್ಚತ್ತ ಸ್ತ್ರೀ ಸಂವೇದನೆಯ ಕೆಚ್ಚು ಗರಿಗೆದರಿದೆ.

"ಗುರಿ ಇಲ್ಲದ ನಡಿಗೆ" ಲಲಿತಾಂಬಾ ಅವರ ಹಾಸ್ಯ, ವಿನೋದ, ವಿಡಂಬನೆಯ ನವಿರಿನಿಂದ ಮುದಗೊಳಿಸುವ ಕವನ. ದೂರು, ದುಗುಡ, ದುಮ್ಮಾನದ ಇಕ್ಕಟ್ಟಿನ ನಿಟ್ಟುಸಿರಿನ ಭಾರದಲ್ಲಿ ಸಾಗುವ ಲಲಿತಾಂಬಾ ಅವರ ಕಾವ್ಯದ ನಡಿಗೆಗೆ ಚುರುಕು ಮುಟ್ಟಿಸಿ, ಚೈತನ್ಯ ಶಾಲಿಯಾಗಿಸುವ ಉತ್ಸಾಹ, ವಿನೋದ ಶೈಲಿಗೆ ಮಾದರಿ. ಆಧುನಿಕತೆಯ ಅಪರಾವತಾರಗಳನ್ನು ಗುಮಾನಿಯಿಂದ ನೋಡುತ್ತ ಸಿನಿಕತನದಿಂದ ಪ್ರತಿಕ್ರಿಯಿಸುವ ಸಿದ್ಧಮಾದರಿಗಿಂತ ಭಿನ್ನವಾಗಿ ಆಧುನಿಕತೆಯ ಹೆಸರಿನ ಅಸಾಂಗತ್ಯವನ್ನು ಹಾಸ್ಯಪೂರ್ಣವಾಗಿ ಲೇವಡಿ ಮಾಡುವ ವಿಭಿನ್ನ ದನಿ ಇಲ್ಲಿದೆ:

ಏ ಹುಡುಗ, ಹೊರಟಿರುವೆ ಎಲ್ಲಿಗೆ ಈಗ?
ಏಕೆ? ನಿನ್ನ ಪ್ಯಾಂಟಿಗೆ ತೇಪೆ ಹಚ್ಚಿದೆಯಲ್ಲಾ?
ನೆನ್ನೆ ತೊಟ್ಟ ಚಡ್ಡಿ ಹರಿದುದಾಗಿತ್ತಲ್ಲ?
ಏಕಪ್ಪಾ? ನಿನ್ನಪ್ಪ ಶ್ರೀಮಂತನಿದ್ದ
ಈಗವನು ಬಡವನಾಗಿಹನೇನು?
ಹುಡುಗಿಯಂತೇಕೆ ಕಿವಿಗೆ ಉಂಗುರ?

ಅದೂ ಒಂದೇ ಕಿವಿಯಲ್ಲಿದೆಯಲ್ಲೊ
ಇನ್ನೊಂದು ಉದುರಿ ಹೋಗಿದೆಯೇನು?

–ಹೀಗೆ ವಿಡಂಬನೆ ವಿಮರ್ಶೆಯ ಚಾಟಿ ಮಾತುಗಳನ್ನೂ ಕಿಡಿಗೆದರದಂತೆ ಮಾತುಗಳ ಮೂಲಕ ಸಿಡಿಸುತ್ತ, ಮಾತು ಮಧುರವಾಗಿ, ಭಾವ ಬಂಧುರವಾಗಿಸುವ ಪರಿ ಅನನ್ಯ.

ಬದುಕಿನ ಗಂಭೀರ ಸತ್ಯಗಳಿಗೆ ಮುಖಾಮುಖಿಯಾಗುವ ಕ್ಷಣಗಳಲ್ಲಿ ಕವಯಿತ್ರಿ ಲಲಿತಾಂಬಾ ಅವರ ಚಿತ್ತ ಹುತ್ತಗಟ್ಟಿಕೊಳ್ಳುತ್ತದೆ. ಮನಸ್ಸನ್ನು ಧ್ಯಾನಸ್ಥ ಸ್ಥಿತಿಗೆ ನಿಲ್ಲಿಸಿ, ನಿಜದ ಅನ್ವೇಷಣೆಗೆ ತೊಡಗುವ ಹಲವು ಕವನಗಳು ಲಲಿತಾಂಬಾ ಅವರ ವ್ಯಕ್ತಿತ್ವದ ಮತ್ತೊಂದು ಮಗ್ಗುಲನ್ನು ಪರಿಚಯಿಸುತ್ತವೆ. ಸೋಲು– ಗೆಲವುಗಳ ನಿಡಿದಾದ ಹೋರಾಟದಲ್ಲಿ ಸವೆದ ಬಾಳದಾರಿಯನ್ನು ಹಿಂದುರುಗಿ ನೋಡಿದಾಗ ಮಿಡಿವ ಭಾವದಲ್ಲಿ ಮನುಷ್ಯ ಜೀವನದ ವಿಲಕ್ಷಣ ಸತ್ಯದ ಮಿಂಚಿದೆ.

"ಜೀವನದ ದೀರ್ಘದಾರಿಯಲಿ .... ಕನಸು ನನಸು ಮಾಡುವಾಸೆಯಲಿ....
ಎದ್ದುಬಿದ್ದು, ನೆಗೆದು ಜಿಗಿದು... ಗುರಿಗಂಬ ಎದುರಾಗಿ, ಏದುಸಿರು
ಬಿಡುವಾಗಿ ಕೇಳಿಸುವುದು ನಿರ್ಣಾಯಕನ ಸೀಟಿ" (ಬಾಳದಾರಿ)

ಪುರುಷ ಪ್ರಧಾನ ವ್ಯವಸ್ಥೆಯಲ್ಲಿನ ಹೆಣ್ಣಿನ ಬವಣೆಗಳು ಕವಯಿತ್ರಿಯ ಕಾವ್ಯ ಸಂವೇದನೆಯನ್ನು ಪುಟಗೊಳಿಸಿವೆ. ಸಂಪ್ರದಾಯ ಮತ್ತು ಆಧುನಿಕತೆಯ ದ್ವಂದ್ವದಲ್ಲಿ ದಿಕ್ಕುಗಾಣದೇ ಕಕ್ಕಾಬಿಕ್ಕಿಯಾಗುತ್ತಿರುವ ಸ್ತ್ರೀಸಮಾಜದ ತೊಳಲಾಟವನ್ನು 'ಇಬ್ಬಗೆಯ ಸಂಸ್ಕೃತಿ'ಯಲ್ಲಿ ಬಿಚ್ಚಿಟ್ಟಿದ್ದಾರೆ. ಬದಲಾದ ಕಾಲಕ್ಕೆ ಹೊಂದಿ ಬಾಳುವ ಕಲೆಯನ್ನು ಕೈಬಿಟ್ಟಿರುವ "ಪುರುಷ ಪ್ರಧಾನ ಸಮಾಜದಲಿ, ಇಬ್ಬಗೆಯ ನೀತಿ, ಹೆಣ್ಣಿಗೊಂದು ನೀತಿ, ಗಂಡಿಗೊಂದು ನೀತಿ; ಹೆಂಡತಿಗೊಂದು ನಿಯಮ, ಸೇವಕರಿಗಾದರೆ ಇನ್ನೊಂದು, ಎತ್ತಲ್ಲಾ ದುಃಖ–ದುಮ್ಮಾನ– ಅಸಮಾಧಾನ' ಎಂದು ಪುರಷ ಸಮಾಜದ ಪಕ್ಷಪಾತ ನೀತಿಯನ್ನು ತರಾಟೆಗೆ ತೆಗೆದುಕೊಳ್ಳುವ ಅವರು "ಸಮರಸ ಜೀವನ ಬಾಳಿಗೆ ಮುಖ್ಯ .... ವಿನಾಕಾರಣ ನರಕ ಮಾಡಿಕೊಳ್ಳದಿರು ಜೀವನ" ಎಂದು ಬಾಳ್ವೆಯ ಬೆಳಕನ್ನು ಕಾಣಿಸುವ ಕಿವಿಮಾತು ಹೇಳಿದ್ದಾರೆ.

ಉಪಕಾರಕ್ಕೆ ಪ್ರತಿ ಅಪಕಾರವನ್ನು, ನಂಬಿಕೆಗೆ ದ್ರೋಹವನ್ನು, ಪ್ರೀತಿಗೆ ದ್ವೇಷವನ್ನು, ಸಜ್ಜನಿಕೆಗೆ ದೌರ್ಜನ್ಯವನ್ನು ಮುಖಾಮುಖಿಯಾಗಿಸುವ ವಿನಾಶಕಾರಿ ಪ್ರವೃತ್ತಿಗಳ ಬಗೆಗೆ ವಿಷಾದ ಪೂರ್ಣ ಹಳಹಳಿಕೆಯಂತಿರುವ 'ಹಾಲಿಗೆ ಹಾಲಾಹಲ' 'ಸಮಯ ಸಾಧಕರು'. ಒಕ್ಕಟ್ಟಿಲ್ಲದ ಬಿಕ್ಕಟ್ಟು', 'ಬಹುಜನರ ಬದುಕಂತೆ', ಕೊಟ್ಟಿದ್ದು ತನಗೆನ್ನಬೇಡ', ಕವನಗಳು ಹಳಸುತ್ತಿರುವ ಮನುಷ್ಯ ಸಂಬಂಧಗಳನ್ನು ಕುರಿತು ಎತ್ತುವ ಪ್ರಶ್ನೆಗಳಿಗೆ,

'ಬವಣೆಯ ನೀಗಿಸುವವರು ಯಾರು?, ಎಂದು ಮರು ಪ್ರಶ್ನೆಯನ್ನು ಹಾಕುವ ಕವನಗಳು, ಉತ್ತರವಿಲ್ಲದ ಪ್ರಶ್ನೆಗಳ ಸಾಲನ್ನು ಬೆಳೆಸುತ್ತ ಹೋಗುತ್ತವೆ. ಹೀಗೆ ಮತ್ತೆ ಮತ್ತೆ ಕಾಡುವ, ಕೊರೆಯುವ ಪ್ರಶ್ನೆಗಳಿಗೆ ಉತ್ತರ ಹುಡುಕಲು ಓದುಗರನ್ನು ಹಣತೆ ಹಚ್ಚಿ ಹುಡುಕಾಡುವಂತೆ ಮಾಡುವ ಕವನಗಳು ಸಮಕಾಲೀನ ಸಮಾಜದ ದ್ವಂದಗಳಿಗೆ ಸಂವೇದನಾಶೀಲ ಜಾಗೃತ ಪ್ರಜ್ಞೆಯ ಕಾವ್ಯಾತ್ಮಕ ಪ್ರತಿಕ್ರಿಯೆಯಾಗಿವೆ. ಮಾದರಿಗಳಿವೆ ಇಲ್ಲಿನ ರಚನೆಗಳು.

**ಅಪ್ರಕಟಿತ ಕವನ – ಮೊಟಕಗಳು**

ಸೃಜನಶೀಲಮನಸ್ಸಿನ ಪ್ರೊ. ಲಲಿತಾಂಬ ಅನೇಕ 'ಕವನ' ಮತ್ತು ಮೊಟಕುಗಳನ್ನು ಬರೆದಿರುವವರು. ಇವುಗಳಲ್ಲಿ ವೈವಿಧ್ಯತೆ ಗಮನಾರ್ಹ. ಕೊನೆಯ ದಿನಗಳಲ್ಲಿ, ಕೊನೆಯ ದಿನವೇ ಬರೆದ 'ನಿದ್ದೆ ಬರುತಿದೆ ನನಗೆ' ಎಂಬ 'ಭಾವಪೂರ್ವ ರಚನೆ'–ಅವರ ಇಹಜೀವನಚಿರನಿದ್ರೆಯ ಸಂಕೇತ. ನವೋದಯ ಕಾವ್ಯ ಪರಂಪರೆಯ ಆದರ್ಶವಾದ, ಮಾನವತಾವಾದ, ಮೌಲ್ಯಚಿಂತನೆಯ ಪ್ರತೀಕಗಳಾಗಿರುವ ಲಲಿತಾಂಬಾ ಅವರ ಕವನಗಳು, ಅವರೊಳಗಿನ ಸಂವೇದನಾಶೀಲ ಕವಯಿತ್ರಿಯನ್ನು ಪರಿಚಯಿಸುತ್ತವೆ. ವಿಚಾರಗಳ ಅಭಿವ್ಯಕ್ತಿಗೆ, ಗದ್ಯವನ್ನು, ಭಾವಸ್ಪಂದನಕ್ಕೆ ಕಾವ್ಯವನ್ನು ಹೀಗೆ ಗದ್ಯ–ಪದ್ಯದ ಸಮ್ಮಿಳಿತ ಅಭಿವ್ಯಕ್ತಿಯಲ್ಲಿ ಮನುಷ್ಯ ಜೀವನದ ಸಾರವನ್ನು, ಭಾವನೆ, ಚಿಂತನೆಗಳ ಚಿತ್ತ ಚಿತ್ತಾರಗಳನ್ನು ಅರಳಿಸಿರುವುದು ಲಲಿತಾಂಬಾ ಅವರ ವಿಶಿಷ್ಟ ಸಾಧನೆ.

'ಚಿತ್ತಾರ' ನಿರ್ಮಲನಗರ, ಪ್ರೊ ಶಾಂತಾ ಇಮ್ರಾಪೂರ
೧೨ನೆಯ ಅಡ್ಡರಸ್ತೆ, ಧಾರವಾಡ–೩

■

## ಪ್ರಕಾಶನದ – 'ಬಿನ್ನಹ'

ಮಾನ್ಯರೇ,

ನಮ್ಮ ತಂದೆ–ತಾಯಿ (ಪ್ರೊ. ವೃಷಭೇಂದ್ರಸ್ವಾಮಿ ಮತ್ತು ಪ್ರೊ. ಲಲಿತಾಂಬ) ತಮ್ಮ ಸ್ವ ಸಂತೋಷಕ್ಕಾಗಿ ಪ್ರಾರಂಭಿಸಿದ 'ಪ್ರಸಾದ ಪ್ರಕಾಶನ'ದ ಮೂಲಕ, ಈಗ ಪ್ರೊ. ಲಲಿತಾಂಬ ಅವರ ಸಮಗ್ರ ಕೃತಿ ಸಂಪುಟಗಳನ್ನು–ಪುಣ್ಯಸ್ಮರಣೆಯಾಗಿ ಪ್ರಕಟಿಸುವುದು ನನಗೆ ಪ್ರೀತಿಯ ಕಾಯಕ ಹಾಗೂ ಕರ್ತವ್ಯ, ಈ ಸಂಪುಟಗಳನ್ನು ಸಂಪಾದಿಸಿ – ಮುನ್ನುಡಿ – ಹಿನ್ನುಡಿಗಳನ್ನು ಅಭ್ಯಾಸಪೂರ್ಣವಾಗಿ ಬರೆದು, ಕರಡಚ್ಚುಗಳನ್ನು ಶ್ರಮ ವಹಿಸಿ ತಿದ್ದಿ–ತೀಡಿ. ಪ್ರಕಟಣೆಗೆ ಅನುವು ಮಾಡಿಕೊಟ್ಟ, ನಮ್ಮ ಮನೆತನದ ಹಿತೈಷಿಗಳಾದ ಪ್ರೊ. ಶಾಂತಾ ಇಮ್ರಾಪುರ ಮತ್ತು ಪ್ರೊ. ಹಸನ್‌ಬಿ. ಬೀಳಗಿ ಹಾಗೂ ಮೂಲ ಸಾಮಗ್ರಿಗಳನ್ನು ದೊರಕೊಳಿಸಿದ ನಮ್ಮ ತಂದೆ, ಹಾಗೂ ಬಂಧು ಮಿತ್ರರ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಸಂಪುಟದ ಸುಂದರ ಮುಖಚಿತ್ರ, ಅಂದವಾದ ಮುದ್ರಣ ಮಾಡಿದ ಅಭಿಮಾನೀ ಮಿತ್ರ ಶ್ರೀ ಜಿ. ಬಿ. ಪಾಟೀಲ, ಮಾಲೀಕರು ಪ್ರಿಂಟ್ ಪಾರ್ಕ್, ಬೆಂಗಳೂರು ಮತ್ತು ಅವರ ಕ್ರಿಯಾಶೀಲ ಸಿಬ್ಬಂದಿಗೆ ನಮ್ಮ ವಂದನೆಗಳು, ಈ ಕೃತಿಗಳ ಲೋಕಾರ್ಪಣೆ ಮಾಡಿದ ಅಭಿಮಾನೀ ಹಿರಿಯರಿಗೆ, ಸಾಹಿತಿ ಮಾನ್ಯರಿಗೆ ಕೃತಜ್ಞತೆಗಳು.

ನಮ್ಮ ತಾಯಿ–ತಂದೆಯರ ಅಭಿಮಾನಿಗಳೂ, ಪ್ರಖ್ಯಾತ ಉದ್ದಿಮೆದಾರರೂ ಆದ, ಶ್ರೀ ಪ್ರಭುಲಿಂಗೇಶ್ವರ ಸಕ್ಕರೆ ಕಾರ್ಖಾನೆಯ ಸಂಸ್ಥಾಪಕ ಎಂ.ಡಿ.ಯಾಗಿರುವ ಶ್ರೀ ಜಗದೀಶ ಗುಡಗುಂಟಿ ಅವರು ತಮ್ಮ ಪೂಜ್ಯ ತಂದೆ ತಾಯಿಯರಾದ ಡಾ॥ ಎಸ್. ವ್ಹಿ. ಗುಡಗುಂಟಿಮಠ ಮತ್ತು ಪುಷ್ಪಾತಾಯಿ ಅವರ ಸ್ಮರಣಾರ್ಥ – ಪ್ರಥಮ ಸಂಪುಟದ ಪ್ರಕಟಣೆಗೆ ವಿಶೇಷ 'ಕಾಣಿಕೆ'ಸಲ್ಲಿಸಿರುವ ಅವರ ಉದಾರತೆಗೆ–ಶಿಕ್ಷಣ–ಸಂಸ್ಕೃತಿ ಪ್ರೇಮಕ್ಕೆ ನನ್ನ ವಂದನೆಗಳು.

ತಮಗೆಲ್ಲ ತಿಳಿದಿರುವಂತೆ 'ಪ್ರಸಾದ ಪ್ರಕಾಶನ'ದ ಗುರಿ ಹಣಸಂಪಾದನೆಯಲ್ಲ–ಕಾಯಕ–ಶಿಕ್ಷಣ ದಾಸೋಹ. ಪ್ರಕೃತ ಈ ಮೂರು ಸಂಪುಟಗಳನ್ನು ಖರೀದಿಸಿ. ಶಿಕ್ಷಣಸಂಸ್ಥೆಗಳಿಗೆ ದಾನ ಮಾಡುವ 'ಉದಾರಹೃದಯಿ'ಗಳಿಗೆ, ಸ್ವಾಗತ.

ಈ 'ಪ್ರೀತಿಯಕಾಯಕ'ದಿಂದ ಬರುವ ವರಮಾನವೆನ್ನೆಲ್ಲ ಬಡಮಕ್ಕಳ ಶಿಕ್ಷಣ ನೆರವಿಗೆ ಮೀಸಲಾಗಿರಸಲು ನಿರ್ಧರಿಸಿದ್ದೇವೆ. ನಮ್ಮ ಮಾತಾ-ಪಿತೃಗಳ-ಅಭಿಮಾನೀ ಬಂಧುಗಳ "ಸದಾಶಯ"ದ ಮುಂದುವರಿಕೆ ನಮ್ಮ ಈ ಪ್ರಕಾಶನದ ಗುರಿ. ಎಲ್ಲರ ನೆರವನ್ನು ಕೃತಜ್ಞತೆಯಿಂದ ಸ್ಮರಿಸಿ, ಸಮಾನರೀತಿಯ ಸಹಕಾರವನ್ನು ನಿರೀಕ್ಷಿಸುತ್ತಿದ್ದೇನೆ.

ಕೊನೆಯದಾಗಿ, ನಮ್ಮ ಈ ಪ್ರಯತ್ನದಿಂದ ಪ್ರೀತಿಯ 'ಅಮ್ಮ'ನ ಆತ್ಮಕ್ಕೆ ಶಾಂತಿ – ಸಮಾಧಾನ – ತೃಪ್ತಿ ದೊರೆಯಲೆಂದು ಹಾರೈಸುತ್ತೇನೆ. ಅಮ್ಮನ ಪ್ರೀತಿಯ ಸೊಸೆ ಶ್ರೀಮತಿ ಅನುಪಮಾ, ಮುದ್ದಿನ ಏಕಮಾತ್ರ ಮೊಮ್ಮಗಳು ಕು॥ ಶರ್ವಾಣಿ ಮತ್ತು ನಮ್ಮ ಎಲ್ಲ ಬಂಧು-ಮಿತ್ರ-ಅಭಿಮಾನಿಗಳಿಗೆ ಹೃದಯಪೂರ್ವಕ ವಂದನೆಗಳು.

ಧಾರವಾಡ — ಡಾ. ಎಸ್. ಎಮ್. ಶಿವಪ್ರಸಾದ

೧೩-೦೮-೨೦೦೮

## ಪರಿವಿಡಿ



■

# ವಚನಾಂಜಲಿ

(ಶರಣರ ವಿಶ್ವಮಾನ್ಯ ವಚನಗಳ ವಿಶ್ಲೇಷಣೆ)

ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ
ಧಾರವಾಡ

ಶಿವಪ್ರಸಾದ ಪ್ರಕಾಶನ
ಕಲ್ಯಾಣನಗರ, ಧಾರವಾಡ - ೫೮೦ ೦೦೭

## ಮುನ್ನುಡಿ

ಪ್ರೊ. ಲಲಿತಾಂಬ ವೃಷಭೇಂದ್ರ ಸ್ವಾಮಿಯವರು ನಿವೃತ್ತ ಪ್ರಾಧ್ಯಾಪಕರು; ಶಿಕ್ಷಣ ತಜ್ಞರು, ಸಾಹಿತ್ಯದಲ್ಲಿ ರುಚಿಯುಳ್ಳ ಕವಿ ಹೃದಯದ ವಿಮರ್ಶಕರು; ಮೇಲಾಗಿ ವಚನ ಸಾಹಿತ್ಯದ ಶ್ರದ್ಧಾವಂತ ಓದುಗರು. ಅವರು 'ವಚನಾಂಜಲಿ" ವಚನ ಸಾಹಿತ್ಯದ ಹಾಸು-ಬೀಸನ್ನು ಎಷ್ಟು ಚೆನ್ನಾಗಿ ಗ್ರಹಿಸಿದ್ದಾರೆ ಎಂಬುದು ೩೩ ಮಂದಿ ವಚನಕಾರರ ಸು. ೧೭೪ ವಚನಗಳು ಆಯ್ಕೆಯಲ್ಲಿ ವ್ಯಕ್ತವಾಗಿದೆ. ಈ ಆಯ್ಕೆಯಲ್ಲಿ ಸಿಂಹಪಾಲು ಬಸವಣ್ಣನವರದು (೭೫ ವಚನಗಳು); ಅನಂತರ ಅಕ್ಕಮಹಾದೇವಿಯದು (೧೮); ತದನಂತರ ಅಲ್ಲಮ ಪ್ರಭುವಿನದು (೧೫). ಜೇಡರ ದಾಸಿಮಯ್ಯನಿಂದ ಪ್ರಾರಂಭಿಸಿ ಪಂಚಾಕ್ಷರಿ ಗವಾಯಿಗಳವರೆವಿಗೆ ವಚನಕಾರರ ಹರವು ವ್ಯಾಪಿಸಿಕೊಂಡಿದೆ. ಈ ವಚನಗಳು ಸಂಕಲನ ಹಾಗೂ ವಚನಗಳ ವಿಶ್ಲೇಷಣೆಯ ಹಿಂದಿರುವ ಮಹತ್ವಾಕಾಂಕ್ಷೆ ಹೀಗಿದೆ :

"ನನಗೆ ನಿವೃತ್ತಿಯಾದ ನಂತರ, ಏನಾದರೂ ಒಳ್ಳೆಯ ಕೆಲಸವನ್ನು ಸಾಹಿತ್ಯ ಕ್ಷೇತ್ರದಲ್ಲಿ ಮಾಡಬೇಕು ಎನ್ನಿಸಿತು. ಆಗ ವಿವಿಧ ಶರಣರ ಕೆಲವು ಸರಳ ವಚನಗಳನ್ನಾರಿಸಿ, ಅವುಗಳ ಅರ್ಥವನ್ನು ವಿಶ್ಲೇಷಿಸಿ ಬರೆದರೆ, ಜನಸಾಮಾನ್ಯರಿಗೆ ವಚನಗಳ, ಶರಣರ, ಪರಿಚಯ ಆಗುತ್ತದೆ. ಶರಣ ತತ್ವವೂ ತಿಳಿಯುತ್ತದೆ ಎನ್ನಿಸಿ, ವಿವಿಧ, ಶರಣ ಶರಣೆಯರ ನೂರಾಎಪ್ಪತ್ತನಾಲ್ಕು ವಚನಗಳನ್ನು ಆರಿಸಿಕೊಂಡು ಅವುಗಳ ಅರ್ಥ ವಿವರಣೆಯನ್ನು ಇಲ್ಲಿ ಕೊಡುವ ಪ್ರಯತ್ನ ಮಾಡಿದ್ದೇನೆ. ಇದರಿಂದ ಓದುಗರಿಗೆ ವಚನಗಳು ಅರ್ಥವಾಗುವುದರ ಜೊತೆಗೆ, ಶರಣ ಸಾಹಿತ್ಯದ ಬಗ್ಗೆ ಆಸಕ್ತಿ ಬೆಳೆಯಬಹುದು, ಬೆಳೆಯಬೇಕು ಎಂಬುದು ನನ್ನಾಸೆ........"

ಪ್ರೊ. ಲಲಿತಾಂಬ ವೃಷಭೇಂದ್ರ ಸ್ವಾಮಿಯವರ ಈ ಪ್ರಯತ್ನ ಖಂಡಿತಾ ಸ್ವಾಗತಾರ್ಹವಾದುದು. ವಚನಗಳನ್ನು ಅರ್ಥೈಸಿಹೇಳುವ ಪ್ರಯತ್ನ ಡಾ ॥ ಎಲ್. ಬಸವರಾಜು ಮೊದಲಾದ ವಿದ್ವಾಂಸರಿಂದ ನಡೆದಿದೆ. ಇದರ ಮುಂದುವರಿಕೆ ಇದು. ನನಗೆ ಇಲ್ಲಿ ಮೆಚ್ಚುಗೆಯಾದದ್ದು ಸಾಮಾನ್ಯ ಓದುಗನನ್ನು ಲಕ್ಷ್ಯದಲ್ಲಿಟ್ಟುಕೊಂಡು ವಚನಕಾರರ ವಚನಗಳನ್ನು ಆಯ್ಕೆಮಾಡುವಲ್ಲಿ ಪ್ರೊ. ಲಲಿತಾಂಬ ಅವರು ವಹಿಸಿರುವ ಶ್ರದ್ಧೆ ಹಾಗೂ ಎಚ್ಚರ. ಜನಪ್ರಿಯತೆಯ ಮಾನದಂಡದಲ್ಲಿ ಅಗ್ರಸ್ಥಾನ

ಬಸವಣ್ಣನವರಿಗೆ ಸೇರುತ್ತದೆ. ಇದು ಸಹಜ. ಇಲ್ಲಿ ಬಸವಣ್ಣನವರ ಅರ್ಥಪೂರ್ಣವಾದ ೭೫ ವಚನಗಳು ವ್ಯಾಖ್ಯಾನಕ್ಕೆ ಎಡೆ ಪಡೆದಿದ್ದರೂ ಲಿಂಗಮ್ಮ, ಗಂಗಮ್ಮ, ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಿ, ಬೊಂತಾದೇವಿ, ರೇಕಮ್ಮ, ಸತ್ಯಕ್ಕ ಕೇತಲದೇವಿ, ಹಡಪದ ಅಪ್ಪಣ, ಬಿಬ್ಬಿ ಬಾಚಯ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ ತುರುಗಾಹಿ ರಾಮಣ್ಣ, ಘನಮಠ ಶಿವಯೋಗಿ, ಪಂಚಾಕ್ಷರಿ ಗವಾಯಿ – ಇವರೇ ಮೊದಲಾದ ಅಷ್ಟಾಗಿ ಪರಿಚಿತರಲ್ಲದ ವಚನಕಾರರೂ ಸೇರ್ಪಡೆಯಾಗಿರುವರು. ಇಲ್ಲಿ ಪ್ರಸಿದ್ಧರು, ಅಪ್ರಸಿದ್ಧರು ಎನ್ನುವುದು ಅಮುಖ್ಯ. ವಚನಕಾರರ ಚಿಂತನೆ ಹೇಗೆ ಮಾತಿನಲ್ಲಿ ಅರ್ಥಪೂರ್ಣವಾಗಿ ಹರಳುಗೊಂಡಿದೆ ಎನ್ನುವುದು ಮುಖ್ಯ. ವಚನಗಳ ನೇರವಾದ ಅರ್ಥವನ್ನು ಇಲ್ಲಿ ಕೊಡಹೊರಡದೆ, ವಚನಕಾರರ ಅಂತರಂಗವನ್ನು ಪ್ರವೇಶಿಸಿ ಅವರ ವಿಚಾರಧಾರೆಯನ್ನು ಸರಳವಾಗಿ ಪರಿಚಯಿಸುವ ಪ್ರಾಂಜಲ ಪ್ರಯತ್ನ. ಇದಕ್ಕೆ ವಿದ್ವತ್ತು ಬೇಕಾಗಿಲ್ಲ; ೧೨ನೇ ಶತಮಾನದ ವಚನ ಚಳುವಳಿಯ ಪರಿಚಯ, ವೀರಶೈವ ಧರ್ಮ ತತ್ವಗಳ ಸಾಮಾನ್ಯ ತಿಳುವಳಿಕೆ, ವಚನಕಾರರ ಆಲೋಚನೆಯ ಎಳೆಯನ್ನು ಗರಹಿಸುವಲ್ಲಿ ಸೂಕ್ಷ್ಮವಾದ ಮನಸ್ಸು, ವಚನಗಳ ಅಂತರಾಳವನ್ನು ತಿಳಿಯಹೇಳುವುದುಕ್ಕೆ ಹದವಾದ ಭಾಷೆ, ಪಕ್ವವಾದ ಹೃದಯ, ವಚನಕಾರರ ಅಂದಿನ ವಿಚಾರ ಇಂದಿಗೂ ಪ್ರಸ್ತುತವಾಗಿರುವ ತುಲನೆ –ಇದಿಷ್ಟಿದ್ದರೆ ಸಾಕು. ಪ್ರೊ. ಲಲಿತಾಂಬ ಅವರಲ್ಲಿ ಇವೆಲ್ಲವೂ ಇವೆ. ಅವರ ವಚನಗಳ ವ್ಯಾಖ್ಯಾನ ತೀರಾ ಸರಳವಾಗಿದೆ. ಬೆಳಗಿಟ್ಟ ಕನ್ನಡಿಯಲ್ಲಿ ವಚನಕಾರರ ಬಿಂಬ ಗ್ರಾಹ್ಯವಾಗುತ್ತದೆ. ನಿತ್ಯವೂ ಒಂದೊಂದು ವಚನವನ್ನು ಆಸ್ವಾದಿಸುತ್ತಾ ಹೋದಲ್ಲಿ ನಿಮ್ಮಲ್ಲಿ ಅರಿವು ತುಂಬಿಕೊಳ್ಳುತ್ತಾ ಹೋಗುತ್ತದೆ. ವಚನಕಾರರ ಮಹೋನ್ನತ ವಿಚಾರಧಾರೆಯೂ ಪರಿಚಯವಾಗುತ್ತಾ ಹೋಗುತ್ತದೆ.

ಪ್ರೊ. ಲಲಿತಾಂಬ ವೃಷಭೇಂದ್ರ ಸ್ವಾಮಿಯವರ ಧ್ಯೇಯ ದೊಡ್ಡದು. ಧ್ಯೇಯಕ್ಕೆ ತಕ್ಕ ಶ್ರದ್ಧೆಯೂ ಇದೆ. ಹೀಗಾಗಿ ಅವರ ಬರವಣಿಗೆ ಇಲ್ಲಿ ಸಾರ್ಥಕತೆಯನ್ನು ಪಡೆದಿದೆ. ಈ ಪ್ರಯತ್ನ ಇನ್ನಷ್ಟು ಮುಂದುವರಿಯಲಿ ವಚನಮಾಣಿಕ್ಯಗಳ ನೆಲೆ–ಬೆಲೆ ಇಂತಹ ವ್ಯಾಖ್ಯಾನವೆನ್ನುವ ಅಂಜನದ ಮೂಲಕ ಶ್ರದ್ಧಾವಂತರ ಕಣ್ಣು–ಮನಗಳನ್ನು ಅರಳಿಸಲಿ

೨೪–೮–೯೫

– ಎಸ್. ವಿದ್ಯಾಶಂಕರ

## ಆಶಯ

ವಚನ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ಒಂದು ಅಮೂಲ್ಯ ಕೊಡುಗೆ. ಈ ಸಾಹಿತ್ಯದ ರಚನೆ ವಿಪುಲವಾಗಿ ಹನ್ನೆರಡನೆಯ ಶತಮಾನದಲ್ಲಿ ಆದರೂ ಅದು ಬೆಳಕಿಗೆ ಬಂದುದು, ಸಾಮಾನ್ಯ ಜನತೆಗೆ ದೊರೆಯುವಂತಾದುದು ಈಚೆಗೆ. ಇಂತಹ ಅಮೂಲ್ಯ ಸಾಹಿತ್ಯ, ಮೂಲೆಗುಂಪಾಗಿದ್ದರೆ ಕನ್ನಡ ಸಾಹಿತ್ಯಕ್ಕೆ ಹಾಗೂ ಧಾರ್ಮಿಕ ಕ್ಷೇತ್ರಕ್ಕೆ ದೊಡ್ಡ ಕೊರತೆಯಾಗುತ್ತಿತ್ತೆನ್ನುವುದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ಅದೃಷ್ಟವಶಾತ್ ಕಾರಣಿಕ ಹಾನಗಲ್ ಶಿವಕುಮಾರ ಯೋಗಿಗಳು ಕೈಬರಹದ ಪ್ರತಿಗಳನ್ನು ಸಂಗ್ರಹಿಸಿ ಶರಣ ಫ.ಗು. ಹಳಕಟ್ಟಿಯವರನ್ನು ಅವುಗಳ ಪ್ರಕಟಣೆಗೆ ಪ್ರೇರೇಪಿಸಿದ್ದು, ಅವರು ಆ ಕೆಲಸವನ್ನು ಶಿರಸಾವಹಿಸಿ, ತಮ್ಮ ಬದುಕನ್ನೇ ಆ ಕಾರ್ಯಕ್ಕಾಗಿ ಮುಡುಪಿಟ್ಟುದೂ, ಒಂದು ದೈವಯೋಗವೆಂದೇ ಹೇಳಬೇಕು.

ವಚನಗಳು, ಅನರ್ಘ್ಯ ರತ್ನಗಳಂತಹ ಅಮೂಲ್ಯ ವಿಷಯಗಳನ್ನು ಒಳಗೊಂಡಿವೆ. ಶರಣರ ಅನುಭಾವದ ಸಂಪತ್ತು ಇಲ್ಲಿ ಶೇಖರವಾಗಿದೆ. ವೀರಶೈವಧರ್ಮದ ತಿರುಳು ಇವುಗಳಲ್ಲಿ ಅಧಿಕವಾಗಿದೆ. ಶರಣ ತತ್ವವು ನಾನಾ ರೂಪದಲ್ಲಿ, ನಾನಾ ಉಪಮೆಗಳ ಮೂಲಕ, ನಾನಾ ಶರಣರಿಂದ ವಿವಿಧ ರೀತಿಯಲ್ಲಿ ವ್ಯಕ್ತಗೊಂಡಿದೆ. ಇವುಗಳನ್ನು ಓದುವುದು, ಅರ್ಥಮಾಡಿಕೊಳ್ಳುವುದು, ಸಾಧ್ಯವಾದಷ್ಟನ್ನಾದರೂ ನಮ್ಮಲ್ಲಿ ಅಳವಡಿಸಿಕೊಳ್ಳುವುದು ಭಾಗ್ಯದ ಮಾತೇ ಸರಿ.

ವೀರಶೈವ ಧರ್ಮ ವಿಶ್ವಧರ್ಮವೆಂದೇ ಹೇಳಬಹುದು. ಏಕೆಂದರೆ ಇಲ್ಲಿ ಧಾರ್ಮಿಕ ಆಚರಣೆಗಳಿಗಿಂತ, ನೈತಿಕ ಹಾಗೂ ತಾತ್ವಿಕ ನಡವಳಿಕೆಗೆ ಹೆಚ್ಚು ಒತ್ತುಕೊಡಲಾಗಿದೆ. ಮೌಲ್ಯಾಧಾರಿತ ಜೀವನಕ್ಕೆ, ಕರ್ತವ್ಯ ಪ್ರಜ್ಞೆಗೆ, ಜ್ಞಾನಕ್ಕೆ, ವಿವೇಕಯುತವಾದ ಜೀವನಕ್ಕೆ ಮಹತ್ವವೀಯಲಾಗಿದೆ. ಹಾಗಾಗಿ ಈ ತತ್ವಗಳನ್ನು ಯಾರು ಬೇಕಾದರೂ, ಯಾವ ಧರ್ಮೀಯರಾದರೂ ಪಾಲಿಸಬಹುದು. ಅವನ್ನು ಪಾಲಿಸಿದಾಗಲೇ ವ್ಯಕ್ತಿಜೀವನ, ಕೌಟುಂಬಿಕ ಜೀವನ, ಸಾಮಾಜಿಕ ಜೀವನ, ರಾಷ್ಟ್ರೀಯ ಜೀವನ, ಇಷ್ಟೇ ಏಕೆ ಮಾನವನ ಬದುಕು ನೆಮ್ಮದಿಯುತವಾಗಿ ಇರಲು ಸಾಧ್ಯ. ಈ ವಚನಗಳು ವೀರಶೈವರಿಗಷ್ಟೇ ಅಲ್ಲ, ಮಾನವತೆಗೇ ದಾರಿದೀಪವಾಗಬಲ್ಲವು. ಇವುಗಳನ್ನು ಯಾರೇ ಓದಿ ಅರ್ಥಮಾಡಿಕೊಂಡರೂ, ಅವುಗಳ ಸೊಬಗಿಗೆ, ಅರ್ಥಕ್ಕೆ, ಮಾರ್ಗದರ್ಶನಕ್ಕೆ ಮಾರುಹೋಗದಿರಲಾರರು.

ನಾನು ಈ ವಚನಗಳನ್ನು ಓದುವ ಸಂದರ್ಭ ಬಂದದ್ದು ಮಠಗಳವರು, ಶರಣೆಯರ ಬಗೆಗೆ ಭಾಷಣ ಮಾಡಲು ಆಹ್ವಾನಿಸಿದಾಗ. ವಚನಗಳನ್ನು ಓದುತ್ತಾ ಹೋದಂತೆ ನಾನು ಆನಂದ ಸಾಗರದಲ್ಲಿ ತೇಲಾಡಿದಂತಾಗುತ್ತಿತ್ತು. ಓದಿದಷ್ಟೂ ಮತ್ತಷ್ಟು ಓದಬೇಕೆನ್ನಿಸುತ್ತಿತ್ತು. ಅದರ ಅರ್ಥವ್ಯಾಪ್ತಿಗೆ, ವಿಷಯದ ಆಳಕ್ಕೆ ಎಣೆ ಇಲ್ಲ. ಇದನ್ನು ಆಳವಾಗಿ ಅಭ್ಯಾಸಮಾಡಬೇಕೆನ್ನಿಸುತ್ತಿತ್ತು. ಆದರೆ ಗೃಹಕೃತ್ಯ, ಸಾಹಿತ್ಯಕ್ಕೆ ಭಿನ್ನವಾದ ಉದ್ಯೋಗ, ಇವುಗಳಲ್ಲಿ ನನ್ನ ಆಸೆ, ಅಲ್ಲಿಯೇ ಕಮರಿ, ಅವಕಾಶ ಬಂದಾಗ ಮಾತ್ರ ಸ್ವಲ್ಪ ಕಣ್ಣು ಹಾಯಿಸುತ್ತಿದ್ದೆ ಅಷ್ಟೆ.

ವಚನಗಳು ಮಾನವತೆಗೇ ಅವಶ್ಯಕವಾಗಿವೆ. ಆದುದರಿಂದ ಇವುಗಳ ಪ್ರಸಾರ ಇನ್ನೂ ಹೆಚ್ಚಾಗಿ ಆಗಬೇಕಾಗಿದೆ. ಈ ವಚನಗಳಿಗೆ ಅತ್ಯಂತ ಸಮೀಪದವರಾದ ವೀರಶೈವರಿಗೂ ಇವುಗಳ ಸಂಪೂರ್ಣ ಜ್ಞಾನವಾಗಲೀ ಪರಿಚಯವಾಗಲೀ ಇಲ್ಲದ ಕೊರತೆ ಇದೆ. ಕೆಲವು ವಚನಗಳು ಸರಳವೂ ಸುಂದರವೂ ಆಗಿವೆ. ಸ್ವಲ್ಪ ಕಲಿತವರೂ ಓದಿ ಅರ್ಥ ಮಾಡಿಕೊಳ್ಳಬಹುದು. ಅಂತಹ ವಚನಗಳಾಗಲೇ ಜನಜನಿತವಾಗಿವೆ. ಅವು ಹೆಚ್ಚಾಗಿ ಬಸವಣ್ಣ ಮತ್ತು ಅಕ್ಕಮಹಾದೇವಿಯ ವಚನಗಳು. ಉಳಿದ ಶರಣರ ವಚನಗಳು ವಿದ್ವಾಂಸರ, ಸಾಹಿತಿಗಳ, ವಿದ್ಯಾವಂತರ ಹಂತದಲ್ಲೇ ಉಳಿದಿವೆ. ಏಕೆಂದರೆ ವಚನಗಳಲ್ಲಿ ಎಲ್ಲವೂ ಸರಳವಾಗಿಲ್ಲ. ಅನೇಕವು ಕ್ಲಿಷ್ಟವಾಗಿವೆ. ಅಲ್ಲಿಯ ಶಬ್ದಕ್ಕೆ ವಿವಿಧಾರ್ಥಗಳಿವೆ. ಕೆಲವು ಒಗಟುಗಳಂತಿವೆ. ಹಲವು ಬೆಡಗಿನ ವಚನಗಳು. ಮತ್ತೆ ಕೆಲವು ಸಾಧಾರಣ ಓದಿಗೆ ಒಂದು ಅರ್ಥಮಾಡಬಹುದಾದರೆ, ಅವುಗಳ ನಿಜವಾದ ಒಳ ಅರ್ಥವೇ ಬೇರೆಯದಾಗಿರುತ್ತದೆ. ವಚನ ಸಾಹಿತ್ಯದಲ್ಲಿ ಸಾಕಷ್ಟು ಕೃಷಿ ಮಾಡಿದವರಿಗೆ ಮಾತ್ರ ಅವುಗಳನ್ನು ವಿಶ್ಲೇಷಿಸಲು ಸಾಧ್ಯ. ಅರ್ಥವಿವರಣೆ ಕೊಟ್ಟಿರುವ ಅನೇಕ ವಿದ್ವಾಂಸರ ವ್ಯಾಖ್ಯೆಯನ್ನು ಓದಿದ್ದೇನೆ. ಕೆಲವು ಕಡೆ, ನಮಗೆ ಸಂದಿಗ್ಧತೆ ಉಂಟಾದ ಕಡೆ ಅವರಿಗೂ ಆಗಿಯೋ ಏನೋ ಅವುಗಳನ್ನು ವಿಶ್ಲೇಷಿಸದೆ ಹಾಗೆಯೇ ಬಿಟ್ಟಿರುವುದನ್ನು ಗಮನಿಸಿದ್ದೇನೆ. ಕೆಲವರಂತೂ ಅಪಾರ್ಥ ಮಾಡಿರುವುದೂ ಉಂಟು. ಏಕೆಂದರೆ ವಚನಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ನಾವು ತಿಳಿದಷ್ಟು ಸುಲಭವಲ್ಲ. ಅದಕ್ಕೆ ಆಳವಾದ ಅಭ್ಯಾಸ, ನಿಷ್ಠೆಯಿಂದ ಕೂಡಿದ ಪ್ರಯತ್ನ, ನಿಧಾನವಾದ ವಿಶ್ಲೇಷಣೆ ಅಗತ್ಯ.

ತತ್ವಗಳನ್ನು ಬೋಧಿಸುವ ಅನೇಕ ವಚನಗಳನ್ನು ಬೇರೆ, ಬೇರೆ ಶರಣರು ರಚಿಸಿದ್ದಾರೆ. ಕೆಲವು ಸರಳವಾಗಿವೆ. ಸ್ವಲ್ಪ ತಾಳ್ಮೆಯಿಂದ ಓದಿದರೆ ಅರ್ಥವಾಗುತ್ತವೆ. ಈ ವಚನಾಮೃತದ ಸುಧೆಯನ್ನು ಸವಿಯಲು ವಚನಗಳನ್ನು ಓದಿ ಅರ್ಥಮಾಡಿಕೊಳ್ಳುವ ಒಂದು ಅಭಿಲಾಷೆ ಬೇಕು. ಆಗ ಅದರ ಸಾರಸರ್ವಸ್ವದ ಲಾಭ ಸ್ವಲ್ಪ ಮಟ್ಟಿಗೆ ಪಡೆಯಬಹುದು. ಜೀವನಕ್ಕೆ ಮಾರ್ಗದರ್ಶನ ನೀಡುವ,

ಮನಸ್ಸಿಗೆ ಶಾಂತಿಯನ್ನು ಈಯುವ, ಸಾರ್ಥಕ ಬಾಳನ್ನು ಬಾಳಲು ಪ್ರೇರೇಪಿಸುವ ವಚನಗಳನ್ನು ಸಾಮಾನ್ಯರೆಲ್ಲರೂ ಓದುವಂತಾಗಬೇಕು. ಎಲ್ಲಾ ವಚನಗಳನ್ನು ಓದಿ ತಿಳಿದುಕೊಳ್ಳಬೇಕಿಲ್ಲ. ಸರಳವಾದ ಹಾಗೂ ವೀರಶೈವಧರ್ಮದ ತತ್ವವನ್ನು ಸ್ಪಷ್ಟವಾಗಿ ತಿಳಿಸುವ ಕೆಲವು ವಚನಗಳ ಪರಿಚಯವಾದರೂ ವೀರಶೈವರೆಲ್ಲರಿಗೂ ಆಗಬೇಕಾದರೆ, ಹಾಗೆ ಸಾಮಾನ್ಯರೂ ಓದಿ ಅವುಗಳ ಬಗ್ಗೆ ಆಸಕ್ತಿವಹಿಸಬೇಕಾದರೆ, ಅವುಗಳ ಅರ್ಥ ಸಾಮಾನ್ಯರ ಕೈಗೆ ಎಟುಕಬೇಕಾಗುತ್ತದೆ. ತಾವೇ ಓದಿ ಅರ್ಥೈಸಿಕೊಳ್ಳುವುದು ಬಹಳ ಜನರಿಗೆ ಸಾಧ್ಯವಾಗುವುದಿಲ್ಲ. ಹಾಗಾಗಿ ಅವರು ಓದುವ ಗೊಡವೆಗೇ ಹೋಗುವುದಿಲ್ಲವಾಗಿ, ವಚನಗಳ ಅಮೂಲ್ಯ ತತ್ವಗಳಿಂದ ವಂಚಿತರಾಗುತ್ತಾರೆ. ಅಲ್ಲದೆ ನಮ್ಮಲ್ಲಿ ವೀರಶೈವರನೇಕರಿಗೆ ತಮ್ಮ ಧರ್ಮದ ತತ್ವಗಳೇ ಗೊತ್ತಿಲ್ಲ. ಬಹಳಷ್ಟು ಜನ ಹುಟ್ಟಿನಿಂದಷ್ಟೇ ವೀರಶೈವರಾಗಿದ್ದೇವೆ. ಎಲ್ಲರಿಗೂ ಅವರವರ ಧರ್ಮದ ತತ್ವಗಳ ಪರಿಚಯವಿರುವುದು ಅವಶ್ಯಕ. ತತ್ವಗಳ ಪರಿಚಯ ಸರಿಯಾಗಿ ಇಲ್ಲದಾಗಲೇ ಜಾತಿಯ ಸಂಬಂಧ ಘರ್ಷಣೆಗಳುಂಟಾಗುತ್ತವೆ. ವೀರಶೈವ ಧರ್ಮದ ತಿರುಳನ್ನು ಸರಿಯಾಗಿ ಅರ್ಥಮಾಡಿಕೊಂಡ ಯಾರೂ ಸಂಕುಚಿತ ಜಾತೀಯ ಭಾವನೆಯವರಾಗಿರಲು ಸಾಧ್ಯವಿಲ್ಲ. ಆದುದರಿಂದ ಜನಸಾಮಾನ್ಯರೂ, ಮುಖ್ಯವಾದ, ಸರಳವಾದ ವಚನಗಳನ್ನು ಓದಬೇಕು. ಅವುಗಳ ಅರ್ಥ ತಿಳಿದುಕೊಳ್ಳಬೇಕು. ಅದಕ್ಕೆ ಸಹಾಯಕವಾದ ವ್ಯವಸ್ಥೆಯನ್ನು, ಮಠಗಳು, ಗುರುಗಳು, ವಿದ್ವಾಂಸರು, ಸದ್ಧರ್ಮಾಸಕ್ತರು ಮಾಡುವಂತಾಗಬೇಕು ಎಂಬುದು ನನ್ನಾಸೆ. ಅಲ್ಲದೆ ಜನರಿಗೆ ಅಕ್ಕಮಹಾದೇವಿ ಹಾಗೂ ಬಸವಣ್ಣನವರನ್ನು ಬಿಟ್ಟು ಹೆಚ್ಚಿನ ಶರಣರ ಹಾಗೂ ಅವರ ವಚನಗಳ ಪರಿಚಯವಿಲ್ಲ. ಅದರ ಕೆಲಸವೂ ಆಗಬೇಕಿದೆಯೆಂದು ನನ್ನ ಅನಿಸಿಕೆ.

ನನಗೆ ನಿವೃತ್ತಿಯಾದ ನಂತರ, ಏನಾದರೂ ಒಳ್ಳೆಯ ಕೆಲಸವನ್ನು ಸಾಹಿತ್ಯಕ್ಷೇತ್ರದಲ್ಲಿ ಮಾಡಬೇಕು ಎನ್ನಿಸಿತು. ಆಗ ವಿವಿಧ ಶರಣರ ಕೆಲವು ಸರಳ ವಚನಗಳನ್ನಾರಿಸಿ, ಅವುಗಳ ಅರ್ಥವನ್ನು ವಿಶ್ಲೇಷಿಸಿ ಬರೆದರೆ, ಜನಸಾಮಾನ್ಯರಿಗೆ ವಚನಗಳ ಹಾಗೂ ಶರಣರ ಪರಿಚಯ ಆಗುತ್ತದೆ. ಶರಣತತ್ವವೂ ತಿಳಿಯುತ್ತದೆ ಎನ್ನಿಸಿ, ವಿವಿಧ ಶರಣ–ಶರಣೆಯರ ನೂರಾ ಎಪ್ಪತ್ತನಾಲ್ಕು ವಚನಗಳನ್ನು ಆರಿಸಿಕೊಂಡು ಅವುಗಳ ಅರ್ಥವಿವರಣೆ ಕೊಡುವ ಪ್ರಯತ್ನ ಮಾಡಿದ್ದೇನೆ. ಇವುಗಳಲ್ಲಿ ಘನಮಠದ ಶಿವಯೋಗಿಗಳು, ನಿಜಗುಣಶಿವಯೋಗಿಗಳು, ಸರ್ವಜ್ಞನ ವಚನ ಹಾಗೂ ಹಾಡುಗಳನ್ನು ಉಪಯುಕ್ತತೆಯ ದೃಷ್ಟಿಯಿಂದ ಕೆಲವನ್ನು ಅಳವಡಿಸಿಕೊಂಡಿದ್ದೇನೆ. ಈ ಪ್ರಯತ್ನದಿಂದ ಓದುಗರಿಗೆ ವಚನಗಳು ಅರ್ಥವಾಗುವುದರ ಜೊತೆಗೆ ಶರಣ ಸಾಹಿತ್ಯದ ಬಗೆಗೆ ಆಸಕ್ತಿ ಬೆಳೆಯಬಹುದೆ;

ಬೆಳೆಯಬೇಕು ಎಂಬುದು ನನ್ನಾ ಸಾಧ್ಯವಾದಷ್ಟು ಮಟ್ಟಿಗೆ ವಿವರಣೆಯನ್ನು ಸರಳವಾಗಿ ಕೊಟ್ಟಿದ್ದೇನೆ, ಅರ್ಥ ವಿವರಣೆಯೂ ನನ್ನ ಮನಸ್ಸಿಗೆ ಸಮಾಧಾನ ತಂದಿದೆ. ಕೆಲವೊಂದು ವಚನಗಳ ಅರ್ಥವಿವರಣೆ ನನಗೇ ಆಶ್ಚರ್ಯವಾಗುವ ರೀತಿಯಲ್ಲಿ ಬಂದಿರುವುದು ಶರಣರ ಆಶೀರ್ವಾದದ ಫಲವೆಂದು ತಿಳಿದಿದ್ದೇನೆ. ಕೆಲವು ಕಡೆ, ಓದುಗರಿಗೆ ಅರ್ಥ ಸರಳವೆನ್ನಿಸದಿದ್ದರೆ ಕ್ಷಮೆ ಕೋರುತ್ತೇನೆ.

ಈ ಗ್ರಂಥದ ಮೂಲಕ ಓದುಗರಿಗೆ ಒಂಬತ್ತು ವಚನಕಾರ್ತಿಯರ ಹಾಗೂ ಇಪ್ಪತ್ತನಾಲ್ಕು ಶರಣರ ಹಾಗೂ ಶಿವಯೋಗಿಗಳನ್ನು ಪರಿಚಯಿಸಿದ್ದೇವೆ.

ಈ ವಚನಗಳನ್ನು ಜನಸಾಮಾನ್ಯರೆಲ್ಲರೂ ಓದಿ ಲಾಭ ಮಾಡಿಕೊಳ್ಳಬಹುದು. ವೀರಶೈವರಂತೂ ಈ ಗ್ರಂಥವನ್ನು ಮನೆಯಲ್ಲಿಟ್ಟುಕೊಂಡು, ಒಮ್ಮೆಗೇ ಓದುವುದಕ್ಕಿಂತ ಪೂಜೆಯ ಸಮಯದಲ್ಲಿ ದಿನಕ್ಕೊಂದು ಅಥವಾ ಎರಡು ವಚನಗಳನ್ನು ಸಮಾಧಾನದಿಂದ ಓದುವ ಪರಿಪಾಠವಿಟ್ಟುಕೊಂಡರೆ ಉಪಯೋಗವಾಗುವುದು. ದಿನಕ್ಕೊಂದನ್ನಾದರೂ ಓದಲೇಬೇಕೆಂಬ ನಿಯಮ ಹಾಕಿಕೊಂಡರೆ ಒಳ್ಳೆಯದು. ಇಲ್ಲದೆ ಬಿಡುವಿದ್ದಾಗ ಓದಿದರಾಯ್ತು ಎಂದುಕೊಂಡರೆ ಪುಸ್ತಕ ಇದ್ದಲ್ಲೇ ಇರುತ್ತದೆ. ಓದುವುದು ಮುಂದು ಮುಂದಕ್ಕೆ ಹೋಗುತ್ತದೆ. ಶಿವಪೂಜೆಯಂತೆ, ವಚನ ಓದುವುದನ್ನು ಕಡ್ಡಾಯಮಾಡಿಕೊಳ್ಳುವುದು ಒಳ್ಳೆಯದು. ಪ್ರತೀ ವೀರಶೈವ ಮನೆಯಲ್ಲೂ ಇಂತಹ ಪುಸ್ತಕವೊಂದು ಇದ್ದರೆ, ವಚನ ಓದುವ ಆಸಕ್ತಿ ಬೆಳೆಯುತ್ತದೆ. ವೀರಶೈವರಾದವರೆಲ್ಲರಿಗೂ ತಮ್ಮ ಮತಧರ್ಮದ ತತ್ವ ತಿಳಿದಂತಾಗುತ್ತದೆ. ಮಕ್ಕಳಲ್ಲಿ ಮೌಲ್ಯಾಧಾರಿತ ವ್ಯಕ್ತಿತ್ವರೂಪುಗೊಳ್ಳಲು ಸಹಾಯಕವಾಗುತ್ತದೆ ಎಂಬುದನ್ನು ನನ್ನ ಅನಿಸಿಕೆ ಹಾಗೂ ಆಸೆ.

ವಚನಕಾರರು ಜನಸಾಮಾನ್ಯರ ಮಾರ್ಗದರ್ಶನಕ್ಕಾಗಿಯೂ ಅನೇಕ ವಚನಗಳನ್ನು ರಚಿಸಿದ್ದಾರೆ. ಅವು, ಜನರಾಡುವ ಭಾಷೆಯಲ್ಲಿ ಸರಳವಾಗಿಯೇ ಇವೆಯಾದರೂ ಅಂದಿನ ಪ್ರಯೋಗಕ್ಕೂ ವ್ಯತ್ಯಾಸವಿರುವುದರಿಂದಲೂ, ವಿಷಯವು ಆಧ್ಯಾತ್ಮಕ್ಕೆ ಸಂಬಂಧಿಸಿರುವುದರಿಂದಲೂ ಕೆಲವು ವಚನಗಳನ್ನು ಅರ್ಥೈಸಲು ಕಷ್ಟವಾಗಬಹುದು. ಅರ್ಥವಾಗದಿದ್ದರೆ ಓದಲು ಮನಸ್ಸೇ ಬರುವುದಿಲ್ಲ. ಶರಣರು ಎಲ್ಲಾ ಕಾಲದಲ್ಲಿಯೂ ಜನರು ಓದಿ ಉಪಯೋಗ ಮಾಡಿಕೊಳ್ಳಲೆಂಬ ದೃಷ್ಟಿಯಿಂದ ಈ ವಚನಗಳನ್ನು ಉಳಿಸಿ ಹೋಗಿದ್ದಾರೆ. ಕಲ್ಯಾಣದಲ್ಲಿ ಕ್ರಾಂತಿಯಾದಾಗ ಊರು ಬಿಟ್ಟು ಹೋಗುವ ಪ್ರಸಂಗ ಬಂದಿತು. ಆಗ ಸಾಮಾನ್ಯರಾದವರು ಹಣ, ವಸ್ತ್ರ, ಒಡವೆಗಳನ್ನು ತಮ್ಮೊಡನೆ ಒಯ್ಯುವಂತೆ, ಶರಣರು ವಚನಗಳ ಕಟ್ಟುಗಳನ್ನು ತಮ್ಮೊಡನೆ ಒಯ್ದರು. ಅವು ಶರಣದ್ವೇಷಿಗಳಿಗೆ ದೊರೆತು ಹಾಳಾಗಬಾರದೆಂದು, ಅವು ಸುರಕ್ಷಿತವಾಗಿ ಇರುವಂತಹ ವ್ಯವಸ್ಥೆ ಮಾಡಿ ಹೋದರು. ಹಾಗಾಗಿಯೇ

ಇಂದು ಅವು ನಮ್ಮ ಕೈಸೇರಲು ಸಾಧ್ಯವಾಗಿದೆ. ವೀರಶೈವ ತತ್ವವನ್ನು ಜನಸಾಮಾನ್ಯರಿಗೆ ತಿಳಿಸುವ ಕೆಲವು ವಚನಗಳ ಪರಿಚಯವಾದರೂ ಆಗಲಿ ಎಂಬುದು ಈ ಕೃತಿ ರಚನೆಯ ಉದ್ದೇಶ. ಇವುಗಳನ್ನು ಸುಮ್ಮನೆ ಓದಿಕೊಂಡರೆ ವಿಷಯದ ಆಳಕ್ಕೆ ಮನಸ್ಸು ಇಳಿಯಲಾರದು. ಆದುದರಿಂದ ಓದುಗರು ದಿನಕ್ಕೊಂದು ವಚನವನ್ನು ಮನನ ಮಾಡಿಕೊಂಡರೆ ಸಾಕು. ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕಾದರೆ, ವಚನದ ಅರ್ಥದ ಕಡೆಗೆ ಗಮನವಿಟ್ಟು ವಚನದ ಮೂಲಾರ್ಥವನ್ನು ಗ್ರಹಿಸಲಿಕ್ಕೆ ಓದುಗರು ಮೊದಲು ಪ್ರಯತ್ನಿಸಬೇಕು. ನಂತರ ವಿಶದವಾಗಿ ವಾಕ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ವಚನದ ವಿವರಣೆ ಓದಬೇಕು. ಓದಿ ವಚನದ ತಿರುಳನ್ನು ತಿಳಿದುಕೊಂಡ ನಂತರ, ಮತ್ತೊಮ್ಮೆ ವಚನವನ್ನು ಓದಬೇಕು. ಬಲ್ಲವರೊಂದಿಗೆ ಚರ್ಚಿಸಿ ಕೂಡ, ಅರ್ಥವನ್ನು ಸ್ಥಿರೀಕರಿಸಕೊಳ್ಳಬಹುದು. ಆಗ ವಿಷಯು ಮನದಟ್ಟಾಗುತ್ತದೆ; ಶರಣರ ನುಡಿ ಮರೆತುಹೋಗದಂತೆ ಮನದಾಳದಲ್ಲಿ ನೆಲೆಯೂರುತ್ತದೆ; ಶರಣರ ಉದ್ದೇಶ ನೆರವೇರುತ್ತದೆ ಎಂಬುದು ನನ್ನ ಅನಿಸಿಕೆ.

ಈ ವಚನ ವಿವರಣೆಯನ್ನು ೧೯೬೨ ರಲ್ಲೇ ಬರೆದು ಮುಗಿಸಿದ್ದೆ. ಆದರೆ ಇದರ ಪ್ರಕಟಣೆಯನ್ನು ನಾನೇ ಮಾಡಿಸಬೇಕೋ ಅಥವಾ ಯಾರನ್ನಾದರೂ ಕೇಳಬೇಕೋ ಎಂಬ ಜಿಜ್ಞಾಸೆಯಲ್ಲಿಯೇ ಇಷ್ಟು ದಿನ ಕಳೆದು ಹೋಯಿತು.

ಈ ಕೃತಿಯ ಉದ್ದೇಶ ನೆರವೇರುವುದೆಂಬ ಆಸೆಯಿಂದ ನಿಮ್ಮಗಳ ಕೈಯಲ್ಲಿ ಈ ಗ್ರಂಥವನ್ನು ಇಡುತ್ತಿದ್ದೇನೆ. ಸಹೃದಯರು ಇದರ ಉಪಯೋಗ ಮಾಡಿಕೊಂಡರೆ ನನ್ನ ಶ್ರಮ ಸಾರ್ಥಕ. ಶರಣ ಸಾಹಿತ್ಯದಲ್ಲಿ ಅಪಾರ ಕೃಷಿಗೈದಿರುವ ಡಾ||ವಿದ್ಯಾಶಂಕರರನ್ನು 'ಮುನ್ನುಡಿ' ಬರೆಯಬೇಕೆಂದು ಕೇಳಿದಾಗ, ಅವರು ಸಹೃದಯತೆಯಿಂದ ಒಪ್ಪಿಕೊಂಡು ಅತ್ಯಂತ ಪ್ರೋತ್ಸಾಹಕರವಾಗಿ ಆದರೆ ತೂಕಬದ್ಧವಾದ ಶಬ್ದಗಳ ಮೂಲಕ, ವಿಮರ್ಶಾತ್ಮಕವಾದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಮತ್ತು ಈ ಕೃತಿಗೆ 'ವಚನಾಂಜಲಿ' ಎಂಬ ಅರ್ಥಪೂರ್ಣ ಹೆಸರನ್ನೂ ಸೂಚಿಸಿದ್ದಾರೆ. ವಿದ್ವಾಂಸರೂ, ಶರಣ ಹೃದಯಿಗಳೂ ಆದ ಡಾ||ವಿದ್ಯಾಶಂಕರರಿಗೆ ಆತ್ಮೀಯತೆಯಿಂದ ಕೂಡಿದ ನಮನಗಳು. ಪುಸ್ತಕ ಸಿದ್ಧತೆಯಲ್ಲಿ ಅನೇಕ ಸೂಚನೆ ಸಲಹೆಗಳನ್ನು ನೀಡಿದ ಡಾ||ವೃಷಭೇಂದ್ರ ಸ್ವಾಮಿಯವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಮುಖಪುಟದ ವಿನ್ಯಾಸವನ್ನು ಮಾಡಿದ ವಿಜಯಕುಮಾರ ಅವರಿಗೂ ...ನವಾಗಿ ಮುದ್ರಿಸಿಕೊಟ್ಟ ಸ್ನೇಹ ಪ್ರಿಂಟರ್ಸ್‌ರವರಿಗೂ ನನ್ನ ವಂದನೆಗಳು.

ಭಾಷೆ, ಅರ್ಥವಿವರಣೆ ಮುಂತಾದ ಯಾವುದೇ ಅಂಶಗಳಲ್ಲಿ ದೋಷ ಕಂಡುಬಂದರೂ ಸಹೃದಯಿಗಳು ನನ್ನ ಗಮನಕ್ಕೆ ತರಬೇಕಾಗಿ ವಿನಂತಿ. ಮತ್ತೆ ಮುದ್ರಿಸುವ ಅವಕಾಶ ದೊರೆತರೆ ಸರಿಪಡಿಸುವೆ.

ಲಲಿತಾಂಬಾ ವೃಷಭೇಂದ್ರ ಸ್ವಾಮಿ

■

## ಪರಿವಿಡಿ

ವಚನ

| ಸಂ. | ವಚನಕಾರ | ವಚನ |
|---|---|---|
| ೧ | ಅಲ್ಲಮಪ್ರಭು | –ಅಂಗೈಯೊಳಗೊಂದು (೧೦) |
| ೨ | ಅಕ್ಕಮಹಾದೇವಿ | –ಅರಿಯದವರೊಡನೆ |
| ೩ | ಬಸವಣ್ಣ | –ಅಕಟಕಟಾ ಶಿವ ನಿನಗಿನಿತು |
| ೪ | ಚನ್ನಬಸವಣ್ಣ | –ಅವನ ಕಾಯಕವ ವಿಚಾರಿಸದೆ |
| ೫ | ಉರಿಲಿಂಗಪೆದ್ದಿ | –ಅಮೃತಕ್ಕೆ ಹಸಿವುಂಟೆ? |
| ೬ | ಬಸವಣ್ಣ | –ಅರ್ಥರೇಖೆ ಇದ್ದಲ್ಲಿ |
| ೭ | ಬಸವಣ್ಣ | –ಅರಿಸಿನವನೆ ಮಿಂದು |
| ೮ | ಬಸವಣ್ಣ | –ಅತ್ತಲಿತ್ತಲು ಹೋಗದಂತೆ |
| ೯ | ಅಕ್ಕಮಹಾದೇವಿ | –ಅಷ್ಟವಿಧಾರ್ಚನೆಮಾಡಿ |
| ೧೦ | ಅಲ್ಲಮಪ್ರಭು | –ಅಜ್ಞಾನವೆಂಬ ತೊಟ್ಟಿಲೊಳಗೆ (೧) |
| ೧೧ | ಬಸವಣ್ಣ | –ಅಂಜಿದಡಾಗದು ಅಳುಕಿದಡಾಗದು |
| ೧೨ | ಲಿಂಗಮ್ಮ | –ಅಂಗವ ಮರೆದವಂಗೆ |
| ೧೩ | ಬಸವಣ್ಣ | –ಅಂದನವನೇರಿದ ಸೊಣಗನಂತೆ |
| ೧೪ | ಚನ್ನಬಸವಣ್ಣ | –ಅಂಗದಮೇಲೆ ಲಿಂಗಉಳ್ಳದ್ದೆಲ್ಲಾ |
| ೧೫ | ಅಲ್ಲಮಪ್ರುಭು | –ಆಸೆಗೆ ಸತ್ತುದು ಕೋಟಿ |
| ೧೬ | ಬಸವಣ್ಣ | –ಆಡಿದಡೇನು ಹಾಡಿದಡೇನು |
| ೧೭ | ಗಂಗಮ್ಮ | –ಆವಕಾಯಕವ ಮಾಡಿದಡೂ |
| ೧೮ | ಆಯ್ದಕ್ಕಿ ಲಕ್ಕಮ್ಮ | –ಆಸೆಯೆಂಬುದು ಅರಸಿಂಗಲ್ಲದೆ |
| ೧೯ | ಜೇಡರ ದಾಸಿಮಯ್ಯ | –ಇಳೆ ನಿಮ್ಮದಾನ, ಬೆಳೆ ನಿಮ್ಮದಾನ |
| ೨೦ | ಅಕ್ಕಮಹಾದೇವಿ | –ಇದನರಿದು ಗುರುಕೊಟ್ಟ |
| ೨೧ | ಬಸವಣ್ಣ | –ಇಂದಿಯನಿಗ್ರಹ ಮಾಡಿದರೆ |
| ೨೨ | ಅಲ್ಲಮಪ್ರಭು | –ಇಷ್ಟಲಿಂಗಕ್ಕೆ ತೋರಿ |
| ೨೩ | ಅಕ್ಕಮಹಾದೇವಿ | –ಈಳೆ–ನಿಂಬೆ–ಮಾವು ಮಾದಳಕ್ಕೆ |

| | | |
|---|---|---|
| ೨೪ | ಅಕ್ಕಮಹಾದೇವಿ | –ಉದಯಾಸ್ತಮಾನವೆಂಬ |
| ೨೫ | ಬಸವಣ್ಣ | –ಉಳ್ಳವರು ಶಿವಾಲಯವ |
| ೨೬ | ಬಸವಣ್ಣ | –ಉಂಬ ಬಟ್ಟಲು ಬೇರೆ ಕಂಚಲ್ಲ |
| ೨೭ | ಮೋಳಿಗೆ ಮಹಾದೇವಿ | –ಊರ್ವಶಿ ಕರ್ಪೂರವ ತಿಂದು |
| ೨೮ | ಬೊಂತಾದೇವಿ | –ಊರ ಒಳಗಣ ಬಯಲು |
| ೨೯ | ಬಸವಣ್ಣ | –ಎನಿಸು ಕಾಲ ಕಲ್ಲು ನೀರೊಳಗೆ |
| ೩೦ | ಬಸವಣ್ಣ | –ಏನಬಂದಿರಿ |
| ೩೧ | ಬಸವಣ್ಣ | –ಏತ ತಲೆವಾಗಿದರೇನು |
| ೩೨ | ಘನಮಠ ಶಿವಯೋಗಿ | –ಏಳಿ ಮನುಜರಿರಾ |
| ೩೩ | ಜೇಡರ ದಾಸಿಮಯ್ಯ | –ಒಡಲೊಳಗೆ ಕಿಚ್ಚು |
| ೩೪ | ಬಸವಣ್ಣ | –ಕಲ್ಲುನಾಗರ ಕಂಡರೆ |
| ೩೫ | ಬಸವಣ್ಣ | –ಕರಿಯಂಜುವುದು |
| ೩೬ | ಜೇಡರ ದಾಸಿಮಯ್ಯ | –ಕಡೆಗೀಲಿಲ್ಲದ ಬಂಡಿ |
| ೩೭ | ಅಕ್ಕಮಹಾದೇವಿ | –ಕಲ್ಲತಾಗಿದ ಮಿಟ್ಟೆ |
| ೩೮ | ಸರ್ವಜ್ಞ | –ಕಲ್ಲುಗುಂಡಿನ ಮೇಲೆ |
| ೩೯ | ಬಸವಣ್ಣ | –ಕಬ್ಬುನದ ಶುನಕವ ತಂದು |
| ೪೦ | ಷಣ್ಮುಖ ಸ್ವಾಮಿ | –ಕನಕ ಕಾಮಿನಿ ಭೂಮಿಗಾಗಿ |
| ೪೧ | ಬಸವಣ್ಣ | –ಕಳಬೇಡ, ಕೊಲಬೇಡ |
| ೪೨ | ಸಕಲೇಶಮಾದರಸ | –ಕಾಯದಿಂದ ಗುರವ ಕಂಡೆ |
| ೪೩ | ಬಸವಣ್ಣ | –ಕಾಸಿ ಕಮ್ಮಾರನಾದ |
| ೪೪ | ಅಕ್ಕಮಹಾದೇವಿ | –ಕಾಯದ ಕಳವಳದ ಕೆಡಿಸಿ |
| ೪೫ | ಅಕ್ಕಮಹಾದೇವಿ | –ಕಾಮ ಒಂದನೆ ಭವಿ |
| ೪೬ | ಆಯ್ದಕ್ಕಿ ಮಾರಯ್ಯ | –ಕಾಯಕದಲ್ಲಿ ನಿರತನಾದೊಡೆ |
| ೪೭ | ಬಸವಣ್ಣ | –ಕಿವಿಯ ಸೂತಕ ಹೋಯಿತ್ತು |
| ೪೮ | ಅಲ್ಲಮಪ್ರಭು | –ಕುರೂಪಿ ಸುರೂಪಿಯ |
| ೪೯ | ಬಸವಣ್ಣ | –ಕುರಿವಿಂಡು ಕಬ್ಬಿನ |
| ೫೦ | ಬಸವಣ್ಣ | –ಕುದುರೆ ಸತ್ತಿಗೆಯವರ |
| ೫೧ | ಮೋಳಿಗೆ ಮಹಾದೇವಿ | –ಕೂಟಕ್ಕೆ ಕುರುಹಾದುದನರಿಯದೆ |
| ೫೨ | ಬಸವಣ್ಣ | –ಕೊಲ್ಲುವವನೇ ಮಾದಿಗ |
| ೫೩ | ಸರ್ವಜ್ಞ | –ಕೊಟ್ಟಿದ್ದು ತನಗೆ |
| ೫೪ | ತೋಂಟದಸಿದ್ಧಲಿಂಗ | –ಯತಿ ಕೋತಿಗೆ ಕೊಂಬುಹುಟ್ಟಬಲ್ಲುದೆ |

೪೫ ಆಯ್ದಕ್ಕಿ ಲಕ್ಕಮ್ಮ –ಕೈಯ್ಯಲ್ಲಿ ಜ್ಯೋತಿಯ ಹಿಡಿದು
೪೬ ಬಸವಣ್ಣ –ಕಂಡ ಭಕ್ತರಿಗೆ
೪೭ ಲಿಂಗಮ್ಮ –ಕಂಗಳಮುಂದೆ ಮಾಣಿಕ
೪೮ ಬಸವಣ್ಣ –ಕುಂಬಳದ ಕಾಯಿಗೆ ಕಬ್ಬುನದ
೪೯ ಅಕ್ಕಮಹಾದೇವಿ –ಗಗನದ ಗುಂಪ ಚಂದ್ರ
೫೦ ಬಸವಣ್ಣ –ಗಂಡನ ಮೇಲೆ ಸ್ನೇಹವಿಲ್ಲದ
೫೧ ಬಸವಣ್ಣ –ಚೇಳಿಂಗೆ ಬಸುರಾಯಿತ್ತೆ ಕಡೆ
೫೨ ಬಸವಣ್ಣ –ಚಂದ್ರೋದಯಕ್ಕೆ ಅಂಬುಧಿ
೫೩ ಬಸವಣ್ಣ –ಛಲಬೇಕು ಶರಣಂಗೆ
೫೪ ಬಸವಣ್ಣ –ಜಗದಗಲ ಮುಗಿಲಗಲ
೫೫ ಸರ್ವಭೂಷಣ ಶಿವಯೋಗಿ –ಜನರು ಮೆಚ್ಚುತೆ ನಿನ್ನ
೫೬ ಬಸವಣ್ಣ –ಜಂಬೂದ್ವೀಪ ನವಖಂಡ
೫೭ ಪಂಚಾಕ್ಷರಿ ಗವಾಯಿಗಳು –ಜ್ಞಾನಶೂನ್ಯವಾದ ಕ್ರಿಯೆಯು
೫೮ ಅಂಬಿಗರ ಚೌಡಯ್ಯ –ತಟಾಕ ಒಡೆದಡೆ
೫೯ ಚನ್ನಬಸವಣ್ಣ –ತನುಮುಟ್ಟಿ ಮನಮುಟ್ಟದೆ
೬೦ ಸ್ವತಂತ್ರ ಸಿದ್ಧಲಿಂಗೇಶ್ವರ –ತತ್ತಿಯೊಳಗಣ ಪಕ್ಷಿಯಂತೆ
೬೧ ಬಸವಣ್ಣ –ತನಗೆ ಮುನಿಯುವವರಿಗೆ
೬೨ ಅಲ್ಲಮಪ್ರಭು –ತನು ಬತ್ತಲೆ ಇದ್ದರೇನೋ
೬೩ ಬಸವಣ್ಣ –ತನುವ ಬೇಡಿದಡೀವೆ
೬೪ ಅಲ್ಲಮಪ್ರಭು –ತನುವ ತೋಂಟವಮಾಡಿ
೬೫ ಸಿದ್ಧರಾಮ –ತಾಮಾಡಿದ ಹೆಣ್ಣು
೬೬ ಬಿಬ್ಬ ಬಾಚಯ್ಯ –ತಿಲದ ಮರೆಯ ತೈಲವ
೬೭ ಬಸವಣ್ಣ –ತಂದೆ ನೀನು, ತಾಯಿ ನೀನು
೬೮ ಬಸವಣ್ಣ –ದಯವಿಲ್ಲದ ಧರ್ಮಯಾವುದಯ್ಯಾ
೬೯ ಘನಮಠದ ಶಿವಯೋಗಿ –ದಿನವಿಂದೆ ಲಿವಲಿಂಗ ಕರುಣಮಂ
೭೦ ಬಸವಣ್ಣ –ದೂಷಕನವನೊಬ್ಬ ದೇಶವ ಕೊಟ್ಟೊಡೆ
೭೧ ಬಸವಣ್ಣ –ದೇವಲೋಕ ಮರ್ತ್ಯಲೋಕವೆಂಬುದು
೭೨ ಬಸವಣ್ಣ –ದೇವದೇವಾ ಬಿನ್ನಪ ಅವಧಾರು
೭೩ ಬಸವಣ್ಣ –ದೇವಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ
೭೪ ಸರ್ವಜ್ಞ –ನಡೆವುದೊಂದೇ ಭೂಮಿ
೭೫ ತೋಂಟದಸಿದ್ಧಲಿಂಗ –ಯತಿನಾನೆಂಬುದು ಅಹಂಕಾರ

೮೬ ಸರ್ವಜ್ಞ -ನಿತ್ಯನೇಮಗಳೇಕೆ
೮೭ ಮೆರೆಮಿಂಡ -ನೀರೊಳಗಣ ಕಿಚ್ಚಿಗೆ
೮೮ ಬಸವಣ್ಣ -ನೀರಕಂಡಲ್ಲಿ ಮುಳುಗವರಯ್ಯಾ
೮೯ ಬಸವಣ್ಣ -ನುಡಿಯಲಿ ಎಚ್ಚತ್ತು
೯೦ ಬಸವಣ್ಣ -ನುಡಿದರೆ ಮುತ್ತಿನ ಹಾರ
೯೧ ಬಸವಣ್ಣ -ನೆರೆ ಕೆನ್ನೆಗೆ ತೆರೆ ಗಲ್ಲಕೆ
೯೨ ಬಸವಣ್ಣ -ನೆಲನೊಂದೆ ಹೊಲಗೇರಿ
೯೩ ಬಸವಣ್ಣ -ನಂಬರು ನೆಚ್ಚರು ಬರಿದೆ ಕರೆವರು
೯೪ ಅಲ್ಲಮಪ್ರಭು -ಪ್ರಣತೆಯೂ ಇದೆ, ಬತ್ತಿಯೂ ಇದೆ
೯೫ ಬಸವಣ್ಣ -ಬಚ್ಚಲ ನೀರು ತಿಳಿದಡೇನು
೯೬ ಅಂಬಿಗರ ಚೌಡಯ್ಯ -ಬಡತನಕ್ಕೆ ಉಂಬುವ ಚಿಂತೆ
೯೭ ಚನ್ನಬಸವಣ್ಣ -ಬಟ್ಟಬಯಲೆಲ್ಲಾ ಗಟ್ಟಿಗೊಂಡಡೆ
೯೮ ಷಣ್ಮುಖ ಸ್ವಾಮಿ -ಬಾರನೇತಕವ್ವಾ ನಮ್ಮನೆಯಾತ
೯೯ ಅಂಬಿಗರ ಚೌಡಯ್ಯ -ಬ್ರಹ್ಮದ ಮಾತಾಡಿ
೧೦೦ ಸರ್ವಭೂಷಣ ಶಿವಯೋಗಿ -ಬಿಡುಬಾಹ್ಯದೊಳು ಡಂಭವ
೧೦೧ ಅಲ್ಲಮ ಪ್ರಭು -ಬಿರುಗಾಳಿ ಬೀಸೀ
೧೦೨ ಕೋಲಶಾಂತಯ್ಯ -ಬಿತ್ತಿದ ಬೆಳೆ, ಕಟ್ಟಿದ ಕೆರೆ
೧೦೩ ಪಂಚಾಕ್ಷರಿ ಗವಾಯಿಗಳು -ಬೀಜದಲ್ಲಿರುವ ವೃಕ್ಷವು
೧೦೪ ಅಲ್ಲಮಪ್ರಭು -ಬೆಟ್ಟಕ್ಕೆ ಚಳಿಯಾದರೆ
೧೦೫ ಅಕ್ಕಮಹಾದೇವಿ -ಬೆಟ್ಟದಾ ಮೇಲೊಂದು ಮನೆಯ
೧೦೬ ಅರಿವಿನಮಾರಿ ತಂದೆ -ಬೇರಿಗೆ ನೀರನೆರೆದಲ್ಲಿ
೧೦೭ ತುರುಗಾಹಿರಾಮಣ್ಣ -ಬಂದಿತ್ತು ದಿನ! ಬಸವಣ್ಣ ಕಲ್ಲಿಗೆ
೧೦೮ ಅಕ್ಕಮಹಾದೇವಿ -ಬಂಜೆ ಬೇನೆಯರಿವಳು
೧೦೯ ಬಸವಣ್ಣ -ಭಕ್ತಹೀನನ ದಾಸೋಹ
೧೧೦ ಬಸವಣ್ಣ -ಮಡಕೆಯ ಮಾಡುವೊಡೆ
೧೧೧ ಲಿಂಗಮ್ಮ -ಮದ ಮತ್ಸರ ಬಿಡದು
೧೧೨ ಷಣ್ಮುಖ ಸ್ವಾಮಿ -ಮನವೆಂಬ ಮರ್ಕಟನು
೧೧೩ ಅಕ್ಕಮಹಾದೇವಿ -ಮರಮರ ಮಥನಿಸಿ
೧೧೪ ಅಕ್ಕಮಹಾದೇವಿ -ಮನೆಮನೆದಪ್ಪದೆ
೧೧೫ ಬಸವಣ್ಣ -ಮರ್ತ್ಯಲೋಕವೆಂಬುದು
೧೧೬ ಲಿಂಗಮ್ಮ -ಮನವ ನಿರ್ಮಲ ಮಾಡ್ವೆನೆಂದು

೧೪೮ ಸರ್ವಜ್ಞ –ಸತ್ಯಕ್ಕೆ ಸರಿಇಲ್ಲ
೧೪೯ ಬಸವಣ್ಣ –ಸಗಣಿಯ ಬೆನಕಂಗೆ
೧೫೦ ಹಡಪದ ಅಪ್ಪಣ್ಣ –ಸಾವಾಗ ದೇವನೆಂದರೆ
೧೫೧ ಬಸವಣ್ಣ –ಸಾರ! ಸಜ್ಜನರ ಸಂಗವ
೧೫೨ ಅಲ್ಲಮಪ್ರಭು –ಸಂಸಾರವೆಂಬ ಹೆಣಬಿದ್ದಿರೆ
೧೫೩ ಬಸವಣ್ಣ –ಸ್ವಾಮಿ ಭೃತ್ಯ ಸಂಬಂಧಕ್ಕೆ
೧೫೪ ಬಸವಣ್ಣ –ಹರಿವ ಹವಿಗಂಜೆ
೧೫೫ ಜೇಡರ ದಾಸಿಮಯ್ಯ –ಹರಿದ ಗೋಣಿಯಲೊಬ್ಬ
೧೫೬ ಅಕ್ಕಮಹಾದೇವಿ –ಹಣ್ಣಮೆದ್ದಬಳಿಕ
೧೫೭ ಬಸವಣ್ಣ –ಹಬ್ಬಕ್ಕೆ ತಂದ ಹರಕೆಯ ಕುರಿ
೧೫೮ ಅಕ್ಕಮಹಾದೇವಿ –ಹಾವಿನ ಹಲ್ಲ ಕಳೆದು
೧೫೯ ಸರ್ವಜ್ಞ –ಹಿರಿತನವು ಹೇಡಿಂಗೆ
೧೬೦ ಅಲ್ಲಮಪ್ರಭು –ಹೊಟ್ಟೆಯಮೇಲೆ ಕಟ್ಟೋಗರದ
೧೬೧ ಬಸವಣ್ಣ –ಹರನೀವಕಾಲಕ್ಕೆ ಸಿರಿಯು
೧೬೨ ಬಸವಣ್ಣ –ಹಸಿದು ಎಕ್ಕೆಯ ಕಾಯ
೧೬೩ ಅಕ್ಕಮಹಾದೇವಿ –ಹರಿಯ ನುಂಗಿತ್ತು ಮಾಯೆ
೧೬೪ ಕೇತಲದೇವಿ –ಹದಮಣ್ಣಲ್ಲದೆ
೧೬೫ ಅಲ್ಲಮಪ್ರಭು –ಹರಿವಗ್ನಿಜಲಮೊಳೆದೋರದಂದು
೧೬೬ ಜೇಡರ ದಾಸಿಮಯ್ಯ –ಹರ ತನ್ನ ಭಕ್ತರನು
೧೬೭ ಬಸವಣ್ಣ –ಹಾವಿನ ಬಾಯ ಕಪ್ಪೆ
೧೬೮ ಹಡಪದ ಅಪ್ಪಣ್ಣ –ಹಾಲ ಕಂಡ ಬೆಕ್ಕು
೧೬೯ ಸತ್ಯಕ್ಕ –ಹಿರಿಯತನಕ್ಕೆ ಪಥವೆ
೧೭೦ ಬಿಬ್ಬ ಬಾಚಯ್ಯ –ಹಿಂಡಿನೊಳಗಣ ಕುರುಬನ
೧೭೧ ಬಸವಣ್ಣ –ಹುತ್ತದ ಮೇಲಣ ರಜ್ಜು
೧೭೨ ಬಸವಣ್ಣ –ಹುತ್ತವ ಬಡಿದೊಡೆ ಹಾವು
೧೭೩ ಬಸವಣ್ಣ –ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ
೧೭೪ ಬಸವಣ್ಣ –ಹೊತ್ತಾರೆ ಎದ್ದು ಅಘ್ಫವಣಿಯ ತಂದು

■

೧

ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು
ಕಂಗಳ ಮುತ್ತ ಪವಣಿಸುವಾಕೆ ನೀನಾರು ಹೇಳಾ?
ಸದ ಸಂಪಗೆಯರಳ ತುಂಬಿ ಬಂಡುಂಬ ಭೇದವನರಿಯದೆ
ಹಂಬಲಿಸುವ ಪರಿತಾಪವೇನು ಹೇಳಾ?
ಅರಿವಿನೊಳಗಿನ ಮರವಿದೇನು ಹೇಳಾ? ಗುಹೇಶ್ವರಾ

– ಅಲ್ಲಮಪ್ರಭು

ಅನುಭಾವಿ, ಅಜಗಣ್ಣ ಐಕ್ಯವಾಗಲು ಆತನ ಸೋದರಿ ಮುಕ್ತಾಯಕ್ಕನು ಬಂದು, ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ರೋದಿಸುತ್ತಿದ್ದುದನ್ನು ಪ್ರಭುದೇವರು ನೋಡಿದಾಗ ಹೇಳಿರಬಹುದಾದ ವಚನ ಇದು. ಆಕೆಯೂ ಒಬ್ಬ ಶರಣೆ. ಅಜಗಣ್ಣನು ಜ್ಞಾನ, ಆಧ್ಯಾತ್ಮ, ಧರ್ಮದ ತಿಳಿವಳಿಕೆಯಲ್ಲಿ ಅಗ್ರಗಣ್ಯ; ಸಂಪೂರ್ಣ ಜ್ಞಾನವನ್ನು ಪಡೆದ ವಿಕಸಿತ ಆತ್ಮ. ಅವನು ದೇಹರೂಪದಲ್ಲಿ ಇದ್ದ. ಅವನ ಕಾಲವಾಯ್ತು. ದೇಹ ಬಿಟ್ಟುಹೋದ. ಇದೆಲ್ಲಾ ಸಹಜ ಕ್ರಿಯೆ ಶರಣರಿಗೆ. ಮರಣವೇ ಮಹಾನವಮಿ. ದೇಹಬಿಟ್ಟು ಜೀವ ಹೋದಾಗ ಅದು ಆತ್ಮನ ಸಾವಲ್ಲ, ಪರಮಾತ್ಮನ ಒಂದಂಶವಾದ ಜೀವಾತ್ಮ ಇಷ್ಟ ದಿನ ದೇಹದಲ್ಲಿತ್ತು, ಈಗ ದೇಹ ಬಿಟ್ಟು ಪರಮಾತ್ಮನಲ್ಲಿ ಐಕ್ಯವಾಯಿತು. ನಾವು ಕೂಡ ಒಂದೂರಿನಿಂದ ಮತ್ತೊಂದು ಊರಿಗೆ ಹೋದಂತೆ. ಯಾರದೋ ಬಟ್ಟೆಯನ್ನು ಧರಿಸಿದವರು ಅದನ್ನು ಕಳಚಿ, ತಮ್ಮದೇ ಆದ ಬಟ್ಟೆಯನ್ನು ಧರಿಸಿದಂತೆ ಇದು. ಆದ್ದರಿಂದ ಶರಣರು ಸಾವಿಗೆ ಅಂಜುವುದಿಲ್ಲ, ದುಃಖಿಸುವುದಿಲ್ಲ. ದುಃಖಿಸಿದರೆ ಆ ವ್ಯಕ್ತಿ ಇನ್ನೂ ಪರಿಪೂರ್ಣ ಜ್ಞಾನವನ್ನು ಪಡೆದಿಲ್ಲವೆಂದು ಅರ್ಥ. ಅಥವಾ ಅರಿವನ್ನು ಮರೆವು ಆವರಿಸಿದೆ ಎಂದು ತಿಳಿದುಕೊಳ್ಳಬೇಕಾಗುತ್ತದೆ. ಅಜಗಣ್ಣನ ತಂಗಿಯೂ ಶಿಷ್ಯಳೂ ಆದ ಮುಕ್ತಾಯಕ್ಕ, ಸಾಕಷ್ಟು ಅರಿವನ್ನು ಪಡೆದವಳು. ಆದರೂ ಆಕೆ ಅಣ್ಣನ ಮೃತದೇಹವನ್ನು ಇಟ್ಟುಕೊಂಡು ಅಜ್ಞರಂತೆ, ಸಾಮಾನ್ಯರಂತೆ ಅಳುತ್ತಿದ್ದಾಳೆ. ಈಗ ಅಲ್ಲಮಪ್ರಭು ಅವಳನ್ನು ಎಚ್ಚರಿಸಿ, ಪುನಃ ಸಾಮಾನ್ಯ ಜೀವನದ ಕಡೆಗೆ ಹೋಗದೆ, ಶರಣಜೀವನದಲ್ಲಿ ಮುಂದುವರಿಯುವಂತೆ ಮಾಡಬೇಕಾಗಿದೆ. ಹಾಗೆ ಮಾಡದಿದ್ದಲ್ಲಿ ಅಣ್ಣನ ಅಗಲಿಕೆಯ ನೋವಿನಿಂದ ಆವೃತಳಾಗಿ ಈ ಶರಣಜೀವನದಿಂದ ವಿಮುಖಳಾಗಲೂ ಸಾಧ್ಯ

ಇದರಿಂದ ಅವಳು ಇಷ್ಟು ಕಾಲದವರೆಗೆ ಮಾಡಿದ ಸಾಧನೆ ವ್ಯರ್ಥವಾಗುತ್ತದೆ. ಅದಕ್ಕಾಗಿ ಅಲ್ಲಿಂದ ಬಂದ ಅಲ್ಲಮ ಈ ಬೆಡಗಿನ ವಚನದ ಮೂಲಕ ಅವಳನ್ನು ಮಾತನಾಡಿಸುತ್ತಾನೆ.

ಜ್ಞಾನದಿಂದ ಅರಳಿದ ತಲೆಯನ್ನು ಅಂಗೈಯಲ್ಲಿ ಹಿಡಿದುಕೊಂಡು (ಕಂಗಳ ಮುತ್ತು ಪವಣಿಸುವಾಕೆ) ಕಣ್ಣೀರನ್ನು ಸುರಿಸುತ್ತಿರುವ ನೀನು ಯಾರು ಸಂಪಗೆಯ ಹೂವು ಅರಳಿದ ಮೇಲೆ ದುಂಬಿಯು ಬಂದು ಹೂವಿನಲ್ಲಿರುವ ಮಕರಂದವನ್ನು ಹೀರಿಕೊಂಡು ಹೋಗುತ್ತದೆಯೆಂಬುದು ಸಹಜವಾದ, ಎಲ್ಲರಿಗೂ ಗೊತ್ತಿರುವ ವಿಚಾರ. ಹಾಗೆಯೇ ವ್ಯಕ್ತಿ ಭೂಲೋಕಕ್ಕೆ ಬಂದು ತನ್ನ ಕರ್ತವ್ಯಗಳನ್ನು ಮುಗಿಸಿದ ಮೇಲೆ, ಈ ದೇಹ ತ್ಯಜಿಸಿ ಹೋಗುತ್ತಾನೆ. ಅದೇ ರೀತಿ ಅಜಗಣ್ಣನು ಆಧ್ಯಾತ್ಮ ಮಾರ್ಗದ ತುಟ್ಟತುದಿಯನ್ನು ಮುಟ್ಟಿ ಪರಿಪೂರ್ಣ ವಿಕಸನಗೊಂಡಿದ್ದಾನೆ. ಅವನ ಕೆಲಸ ಮುಗಿಸಿ ತನ್ನ ಸ್ಥಾನಕ್ಕೆ ಹೋಗಿದ್ದಾನೆ. ಇದನ್ನು ತಿಳಿಯದೆ ದುಃಖದಿಂದ ಪರಿತಪಿಸುವುದು ಸರಿಯಲ್ಲ. ಜ್ಞಾನಿಯಾದ ನೀನು, ಸರಿಯಾದ ವಿಷಯವನ್ನು ಮರೆತು ಸಾಮಾನ್ಯರಂತೆ ದುಃಖಪಡಬಾರದು ಎಂದು ಅಲ್ಲಮಪ್ರಭು ಬೋಧಿಸಿದ್ದಾರೆ.

■

೨

ಅರಿಯದವರೊಡನೆ ಸಂಗವಮಾಡಿದಡೆ
ಕಲ್ಲಹೊಯ್ದು ಕಿಡಿಯ ತೆಗೆದುಕೊಂಬಂತೆ
ಬಲ್ಲವರೊಡನೆ ಸಂಗವ ಮಾಡಿದಡೆ
ಮೊಸರ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ
ಚನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣರ ಸಂಗವ ಮಾಡಿದಡೆ
ಕರ್ಪೂರದ ಗಿರಿಯನುರಿಕೊಂಬಂತೆ

– ಅಕ್ಕಮಹಾದೇವಿ

ಸರಿಯಾದ ತಿಳಿವಳಿಕೆ ಇಲ್ಲದ ಅಜ್ಞಾನಿಗಳೊಡನೆ ಸ್ನೇಹ ಬೆಳಸಿದರೆ ಕಲ್ಲಿಗೆ ಕಲ್ಲು ಹೊಡೆದು ಬೆಂಕಿಯನ್ನು ಪಡೆದುಕೊಂಡಂತೆ, ಅವರ ಸಂಗವು ವೈರ, ದ್ವೇಷಗಳಿಗೆ ಅವಕಾಶ. ಕಲ್ಲಿಗೆ ಕಲ್ಲು ಬಡಿದಾಗ ಕಿಡಿಯು ಹೊರಟು ನಮಗೆ ಸಿಡಿದು ಸುಡುವಂತೆ, ಅಜ್ಞಾನಿಗಳ ಸ್ನೇಹದಿಂದ, ವೈಷಮ್ಯ ದ್ವೇಷವೆಂಬ ಬೆಂಕಿ ಹತ್ತಿ ನಾವು ಸುಟ್ಟುಹೋಗಬಹುದು. ಆದರೆ ಸಜ್ಜನರಾದ ಜ್ಞಾನಿಗಳೊಡನೆ ಸಂಗವ ಬೆಳೆಸಿದರೆ, ಮೊಸರನ್ನು ಕಡೆದು ಪುಷ್ಟಿದಾಯಕವಾದ, ದೇಹಕ್ಕೆ ಬುದ್ಧಿಗೆ, ಶಕ್ತಿದಾಯಕವದ

ಬೆಣ್ಣೆಯನ್ನು ಪಡೆದಂತೆ ಆಪ್ಯಾಯಮಾನವಾಗಿರುತ್ತದೆ. ಅದೇ ರೀತಿ ಜ್ಞಾನಿಗಳೂ, ಭಕ್ತರೂ, ಶಿವಯೋಗಿಗಳೂ, ಪಾರಮಾರ್ಥ ಸಾಧನೆ ಮಾಡಿದವರೂ, ಐಕ್ಯಸ್ಥಲವನ್ನು ಮುಟ್ಟಿದವರೂ ಆದಂತಹ ಶರಣರ ಸಂಗವ ಮಾಡಿದರೆ, ಕರ್ಪೂರದ ಬೆಟ್ಟಕ್ಕೆ ಉರಿಯನ್ನು ಹಚ್ಚಿದರೆ ಹೇಗೆ ಕರ್ಪೂರವೆಲ್ಲಾ ಉರಿದು, ಏನೊಂದೂ ಉಳಿಯದಿರುವಂತೆ, ಶರಣರ ಸಂಗದಿಂದ ಈ ದೇಹದ ದುರ್ಗುಣಗಳೆಲ್ಲಾ ಸುಟ್ಟು ನಿರ್ನಾಮವಾಗಿ ಹೋಗುತ್ತವೆ. ಕಲ್ಮಷವು ಸ್ವಲ್ಪವೂ ಉಳಿಯುವುದಿಲ್ಲ. ಚಿತ್ತವೆಲ್ಲಾ ಬರಿದಾಗಿ ಅಲ್ಲಿ ಪರಮಾತ್ಮನ ಅನುಗ್ರಹಕ್ಕೆ ದಾರಿಯಾಗುತ್ತದೆ ಎಂಬ ಮಾತನ್ನು ಇಲ್ಲಿ ಅಕ್ಕಮಹಾದೇವಿ ತನ್ನನ್ನು ಕುರಿತು ಹೇಳಿಕೊಂಡಿರುವಳು. ಈ ಮಾತು ಸರ್ವರಿಗೂ ಅನ್ವಯವಾಗುತ್ತದೆ.

■

೩

ಅಕಟಕಟಾ ಶಿವ ನನಗಿನಿತು ಕರುಣವಿಲ್ಲ!
ಅಕಟಕಟಾ ಶಿವ ನನಗಿನಿತು ಕೃಪೆಯಿಲ್ಲ!
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ?
ಏಕೆ ಹುಟ್ಟಿಸಿದೆ ಪರಲೋಕ ದೂರನ?
ಏಕೆ ಹುಟ್ಟಿಸಿದೆ ಕೂಡಲಸಂಗಮದೇವ ಕೇಳಯ್ಯಾ
ಎನಗಾಗಿ ಇನ್ನೊಂದು ತರುಮರನಿದ್ದಿಲ್ಲವೆ?

– ಬಸವಣ್ಣ

ಯಾವುದೋ ಒಂದು ಸಂದರ್ಭದಲ್ಲಿ ಬಸವಣ್ಣನವರಿಗೂ ನಾನು ಏಕಾದರೂ ಹುಟ್ಟಿದೆನೋ ಅನ್ನಿಸಿರಬೇಕು. ಈ ಭವಬಂಧನದಲ್ಲಿ ಕಷ್ಟಗಳು ಯಾರಿಗೂ ತಪ್ಪಿದ್ದವಲ್ಲ. ಭವದ ಕಷ್ಟಗಳು ಎಲ್ಲರನ್ನೂ ಬಾಧಿಸಿ, ನಾವು ಹುಟ್ಟಬಾರದಾಗಿತ್ತು ಎನ್ನುವಷ್ಟು ಸಂಕಟವನ್ನು ಉಂಟುಮಾಡಿಬಿಡುತ್ತವೆ. ಅದಕ್ಕಾಗಿಯೇ ಆಧ್ಯಾತ್ಮಜೀವನದ ಬದುಕಿದ ಮಹಾಪುರುಷರು ಐಹಿಕ ಸುಖದ ನಶ್ವರತೆಯನ್ನೂ, ಅದಕ್ಕಾಗಿ ಅನುಭವಿಸಬೇಕಾದ ಸಂಕಟಗಳನ್ನೂ ಅರಿತು, ಹುಟ್ಟುಸಾವುಗಳ ಚಕ್ರದಿಂದ ಬಿಡುಗಡೆ ಪಡೆಯುವ ಸಲುವಾಗಿ ಪರಮಾತ್ಮನಲ್ಲಿ ಪ್ರಾರ್ಥಿಸುತ್ತಾರೆ. `ದುಃಖದಿಂದ ,ಆವೃತನಾದಾಗ ಮನುಷ್ಯನು, ಹೀಗೆ ಮನುಷ್ಯನಾಗಿ ಹುಟ್ಟಿ ನಶ್ವರ ಸುಖಕ್ಕೆ ಹಾತೊರೆದು ಒದ್ದಾಡುವುದಕ್ಕಿಂತ ಒಂದು ತರುಮರವಾಗಿಂತಾದರೂ ಹುಟ್ಟಿದ್ದರೆ, ಗೊಂದಲಗಳಿಲ್ಲದೆ, ಸಾಧ್ಯವಾದ ಉಪಕಾರವನ್ನು ಹೆರರಿಗೆ ಮಾಡುತ್ತಾ ಆಸೆ ಆಮಿಷಗಳಿಗೆ ಬಲಿಯಾಗದೆ ನಿಶ್ಚಿಂತೆಯಿಂದ ನಮ್ಮ ಪಾಡಿಗೆ ನಾವು

ಇರಬಹುದಾಗಿತ್ತೆಂದು ಅಂದುಕೊಳ್ಳುತ್ತಾನೆ. ಅದೇ ರೀತಿ ಬಸವಣ್ಣನವರೂ ಅಂದುಕೊಂಡಿರುವ ವಚನವಾಗಿ ಕಾಣಿಸುತ್ತದೆ.

ಅಯ್ಯೋ ಶಿವನೆ ನಿನಗೆ ಸ್ವಲ್ಪವಾದರೂ ಕರುಣೆ ಇಲ್ಲವೆ? ನನಗೆ ಕೃಪೆ ಮಾಡುವುದಿಲ್ಲವೆ? ಈ ಲೋಕದಲ್ಲಿ ದುಃಖ ಅನುಭವಿಸುವುದನ್ನೇ ಪಡೆದುಕೊಂಡು ಬಂದಿರುವ ನನ್ನನ್ನು ಏಕೆ ಹುಟ್ಟಿಸಿದೆ? ದೇವಲೋಕದಿಂದ ದೂರವಾಗುವಂತಹ ಗುಣವುಳ್ಳ ನನ್ನನ್ನೇಕೆ ಸೃಷ್ಟಿಸಿದೆ. ಮನುಷ್ಯನಾಗಿ ಹುಟ್ಟಿ ಪರಮಾತ್ಮನ ಬಗ್ಗೆ ಅರಿವು ಮಾಡಿಕೊಳ್ಳಲು ಪ್ರಯತ್ನಿಸಿದೆ, ಈ ಇಹಲೋಕದ ಸುಖಕ್ಕೆ ಆಸೆಪಟ್ಟು ದುಃಖಕ್ಕೆ ಒಳಗಾಗಿ ವಿಲಿವಿಲಿ ಒದ್ದಾಡುವ ಮೂರ್ಖನಾದ ನನಗೆ, ಈ ಮಾನವ ಜನ್ಮವನ್ನೇಕೆ ಕೊಟ್ಟೆ? ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲಾರದ ನನ್ನನ್ನು ಒಂದು ಮರವನ್ನಾಗಿಯಾದರೂ ಹುಟ್ಟಿಸಬಾರದಿತ್ತೇ? ಮರವಾಗಿ ಜನರಿಗೆ ನೆರಳು, ಹಣ್ಣು, ಕಟ್ಟಿಗೆ ಮುಂತಾದುವನ್ನು ಕೊಟ್ಟು ಜನ್ಮ ಸಾರ್ಥಕ ಮಾಡಿಕೊಳ್ಳುತ್ತಿದ್ದೆ. ಮಾನವನಾಗಿ ಹುಟ್ಟಿ, ಭವದ ಜೀವನಕ್ಕೆ ಮಾರುಹೋಗಿ ಈಗ ಸಂಕಟಕ್ಕೆ ಒಳಗಾಗುತ್ತಿರುವೆ. ನನ್ನಂತಹವನನ್ನು ಏಕೆ ಹುಟ್ಟಿಸಿದೆ? ಎಂದು ಪರಮಾತ್ಮನಲ್ಲಿ ಪರಿಪರಿಯಾಗಿ ಮೊರೆ ಇಟ್ಟಿದ್ದಾರೆ ಬಸವಣ್ಣ. ಲೌಕಿಕವನ್ನು ದಾಟಿ ಅಲೌಕಿಕದತ್ತ ಸಾಗುತ್ತಿರುವ ಸಾಧನೆಯ ಪ್ರಾರಂಭ ಮಾರ್ಗದಲ್ಲಿದ್ದಾಗ, ಬಸವಣ್ಣನವರಿಗೆ ಅನೇಕ ಕಷ್ಟಗಳು ಎದುರಾಗಿರಬೇಕು. ಅಂತಹ ಸಂದರ್ಭದಲ್ಲಿ ತಮ್ಮ ಜೀವನ ಎಲ್ಲಿ ಸಾರ್ಥಕವಾಗದೆ ವ್ಯರ್ಥವಾಗುತ್ತದೆಯೋ ಎನ್ನಿಸಿ ಆತಂಕ ಉಂಟಾದಗ, ಪರಮಾತ್ಮನಲ್ಲಿ ಮೊರೆ ಇಟ್ಟಿರಬಹುದಾದ ಭಾವ ಈ ವಚನದಲ್ಲಿ ಮೂಡಿದೆ.

■

ಳ

ಅವನ ಕಾಯಕವ ವಿಚಾರಿಸದೆ, ಅವನ ಮನಯ ಹೂಕ್ಕು
ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ
ಇಂತಪ್ಪ ಗುರು ಶಿಷ್ಯ ಜಂಗಮರ ಬಾಳುವೆ.
ಹುಲಿ ಕವಿಲೆಯ ತಿಂದು, ಮಿಕ್ಕಿತ ನರಿ ತಿಂದಂತಾಯ್ತು ಕಾಣಾ
ಕೂಡಲ ಚನ್ನಸಂಗಮದೇವಾ

– ಚನ್ನಬಸವಣ್ಣ

ಚನ್ನಬಸವಣ್ಣನವರು ಶುದ್ಧಾಚರಣೆಗಳ ಬಗೆಗೆ ಬಹು ಕಟ್ಟುನಿಟ್ಟಾದ ನಿಯಮ ಉಳ್ಳವರು. ಗುರು-ಜಂಗಮರು ತಾವು ಶುದ್ಧರಾಗಿದ್ದರೆ ಸಾಲದು ತಾವು ಧನವನ್ನು

ಅನ್ಯಾಯಮಾರ್ಗದಿಂದ ಗಳಿಸದಿದ್ದರೆ ಸಾಲದು; ಅವರು ಲಿಂಗಾರ್ಚನೆ ಮಾಡಲು ಹೋಗುವ ಮನೆಯವರು ಸಹ ಧನವನ್ನು ನ್ಯಾಯಮಾರ್ಗದಿಂದ ಗಳಿಸಿರಬೇಕು. ಅನ್ಯಾಯದಿಂದ ಗಳಿಸಿದ ವ್ಯಕ್ತಿಯ ಮನೆಯಲ್ಲಿ ಲಿಂಗಾರ್ಚನೆ ಮಾಡುವುದೂ ತಪ್ಪು, ಪಾಪ ಎಂದು ಈ ವಚನದಲ್ಲಿ ಗುರು–ಜಂಗಮರಿಗೆ ಮಾರ್ಗದರ್ಶನ ಮಾಡಿದ್ದಾರೆ.

ಭಕ್ತನಾದವನು ನ್ಯಾಯಮಾರ್ಗದಿಂದ ಧನ ಗಳಿಸಬೇಕು. ಆಗ ಮಾತ್ರ ಅವನ ಗಳಿಕೆ ಜಂಗಮಾರ್ಚನೆಗೆ, ಶಿವಾರ್ಚನೆಗೆ ಯೋಗ್ಯವಾಗುತ್ತದೆ. ಅನ್ಯಾಯದಿಂದ ಗಳಿಸಿದ ಧನ ಶಿವಾರ್ಚನೆಗೆ ವರ್ಜ್ಯ. ಆದುದರಿಂದ ಜಂಗಮರು ಶಿವಾರ್ಚನೆಗೆಂದು ಯಾರಾದರೂ ತಮ್ಮನ್ನು ಬಿನ್ನವಿಸಿದಾಗ ಮೊದಲು ಅವನ ಕಾಯಕವೆಂತಹುದು, ಅವನ ಧನ ಯೋಗ್ಯ ಮಾರ್ಗದಿಂದ ಗಳಿಸಿದುದೇ ಅಲ್ಲವೇ ಎಂಬುದನ್ನು ಖಾತ್ರಿ ಮಾಡಿಕೊಳ್ಳಬೇಕು. ಅದು ನ್ಯಾಯವಾದ ಮಾರ್ಗದಿಂದ ಗಳಿಸಿದುದಾರೆ ಮಾತ್ರ ಅಲ್ಲಿ ಲಿಂಗಾರ್ಚನೆಗೆ ಹೋಗಬೇಕು. ದುಷ್ಟರೀತಿಯಿಂದ, ವಂಚಕತನದಿಂದ ಗಳಿಸಿದ್ದರೆ ಬಿನ್ನಹವನ್ನು ನಿರಾಕರಿಸಬೇಕು. ಇಲ್ಲದೆ ಅಂತಲ್ಲಿಗೆ ಹೋಗಿ ಶಿವಾರ್ಚನೆ ಮಾಡಿದರೆ, ಪ್ರಸಾದ ಸೇವಿಸಿದರೆ ಅಂತಹ ಗುರು–ಜಂಗಮರು ಆ ವ್ಯಕ್ತಿಗಿಂತ ಕೀಳು. ಅವನ ಎಂಜಲಿಗೆ ಚಾಚಿ ಹೋದ ತುಚ್ಛರ ಗುಂಪಿಗೆ ಸೇರುತ್ತಾರೆ ಎಂಬ ಹಿತವಚನವನ್ನು 'ಹುಲಿ ಕವಿಲೆಯ ತಿಂದು ಮಿಕ್ಕಿತ ನರಿ ತಿಂದಂತೆ' ಎಂಬ ಉಪಮೆಯ ಮೂಲಕ ಇದು ಎಷ್ಟು ಹೇಯ ಎಂಬುದನ್ನು ತಿಳಿಯಪಡಿಸಿದ್ದಾರೆ.

ದುರ್ಮಾರ್ಗದಿಂದ ಹಣ ಗಳಿಸಿದವರು ಬಾಹ್ಯವಾಗಿ ಭಕ್ತರಂತೆ ಬದುಕಬಹುದು. ಜಂಗಮರನ್ನು ಶಿವಾರ್ಚನೆಗೆ ಕರೆದು ಪಾಪದಿಂದ ಸಂಪಾದಿಸಿದ ಹಣ ಉಪಯೋಗಿಸಿ ಲಿಂಗಾರ್ಚನೆಗೆ ಏರ್ಪಾಟು ಮಾಡಿರುತ್ತಾರೆ. ಅವರ ಹಣ ನ್ಯಾಯದಿಂದ ಸಂಪಾದಿಸಿದುದು ಅಲ್ಲವೆಂದು ಗೊತ್ತಿದ್ದರೂ, ಅಲ್ಲಿಗೆ ಲಿಂಗಾರ್ಚನೆಗೆ ಜಂಗಮರು ಹೋದರೆ, ಕ್ರೂರ ಹುಲಿ ದುಷ್ಟತನದಿಂದ ಸಾಧು ಹಾಗೂ ಪೂಜ್ಯ ಪ್ರಾಣಿಯಾದ ಗೋವನ್ನು ಕೊಂದು, ತನಗೆ ಸಾಕಾಗುವಷ್ಟನ್ನು ತಿಂದು ಮಿಕ್ಕಿದುದನ್ನು ಬಿಟ್ಟು ಹೋಗುತ್ತದೆ. ಆ ಹೆಚ್ಚಾದ ಎಂಜಲ ಮಾಂಸವನ್ನು ನರಿ ಬಂದು ತಿಂದು ತನ್ನ ಹೊಟ್ಟೆ ಹೊರೆದುಕೊಳ್ಳುತ್ತದೆಯಲ್ಲಾ ಅದರಷ್ಟು ಹೇಯ ಎಂದು ಕಟ್ಟುನಿಟ್ಟಾಗಿ ಚನ್ನಬಸವಣ್ಣನವರು ಎಚ್ಚರಿಸಿದ್ದಾರೆ.

ನಿಜವಾದ ಜಂಗಮ, ಸತ್ಯಮಾರ್ಗದಿಂದ ದುಡಿದು ಹಣವಿದ್ದಲ್ಲಿ ಮಾತ್ರ ಲಿಂಗಾರ್ಚನೆಗೆ ಹೋಗಬೇಕಲ್ಲದೆ, ಸಿಕ್ಕ ಸಿಕ್ಕಲ್ಲಿ ಹೋಗಿ ಲಿಂಗಾರ್ಚನೆ ಮಾಡಬಾರದು, ಅದು ಮಹಾಪಾಪ ಎಂಬುದು ಈ ವಚನ ಬೋಧಿಸುವ ನೀತಿಯಾಗಿದೆ. ಮತ್ತು

ಜಂಗಮರು ಹಾಗೂ ಭಕ್ತರು ಮಾಡಬೇಕಾದ ಕಾಯಕ ಸತ್ಯ ಶುದ್ಧವಾಗಿರಬೇಕು ಎಂಬ ಶರಣತತ್ವನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

■

೩೦

ಅಮೃತಕ್ಕೆ ಹಸಿವುಂಟೆ? ಜಲಕ್ಕೆ ತೃಷೆಯುಂಟೆ?
ಘನಪುರುಷಂಗೆ ವಿಷಯವುಂಟೆ? ಸದ್ಗುರುಕಾರುಣ್ಯವಂ ಪಡೆದು
ಲಿಂಗಾರ್ಚನೆಯ ಮಾಡುವ ಶರಣಂಗೆ ಮುಕ್ತಿಯ ಬಯಕೆಯುಂಟೆ
ಅವರುಗಳಿಗೆ ಅದು ಸ್ವಯಂಭು, ಸಹಜ ಸ್ವಭಾವ.
ಇನ್ನು ತೃಪ್ತಿ ಆಪ್ಯಾಯನ ಅರಸಲುಂಟೆ ಉರಿಲಿಂಗಪೆದ್ದಿಪ್ರಿಯ
ವಿಶ್ವೇಶ್ವರಾ.

– ಉರಿಲಿಂಗ

ಹಸಿವು, ಮುಪ್ಪು, ಸಾವುಗಳಿಂದ ಅಮೃತ ಪಾರುಮಾಡುವುದು. ದೇವತೆಗಳಿಗೆ ಹಸಿವಿಲ್ಲ, ಮುಪ್ಪಿಲ್ಲ, ಸಾವಿಲ್ಲ; ಅವರು ಅಮೃತ ಸೇವಿಸಿದವರು. ಹೀಗೆ ಅಮೃತ ಸೇವಿಸಿದವರಿಗೇ ಹಸಿವಾಗದಿರುವಾಗ ಅಮೃತಕ್ಕೇ ಎಂದಾದರೂ ಹಸಿವಾಗಲು ಸಾಧ್ಯವೆ? ಇಲ್ಲ. ಅದೇ ರೀತಿ ಬಾಯಾರಿಕೆಯಾದಾಗ ಅದನ್ನು ಹಿಂಗಿಸಿಕೊಳ್ಳಲು ನೀರು ಕುಡಿಯುತ್ತೇವೆ. ಬಾಯಾರಿಕೆಯನ್ನು ಹಿಂಗಿಸುವ ಶಕ್ತಿಯುಳ್ಳ ಜಲಕ್ಕೆ ಎಂದಾದರೂ ಬಾಯಾರಿಕೆಯಾಗಲು ಸಾಧ್ಯವೇ? ಇಲ್ಲ. ಶ್ರೇಷ್ಠರಾದ ಸತ್ಪುರುಷರು, ತಮ್ಮ ತನುಗುಣಗಳನ್ನು ಕಳೆದುಕೊಂಡುದರಿಂದಲೇ ಅವರು ಘನಪುರುಷರೆನ್ನಿಸಿಕೊಳ್ಳುತ್ತಾರೆ. ಅಂತಹವರಿಗೆ ಅಮೃತಕ್ಕೆ ಹಸಿವಿಲ್ಲದಿರುವಂತೆ, ನೀರಿಗೆ ಬಾಯಾರಿಕೆ ಇಲ್ಲದಿರುವಂತೆ, ವಿಷಯಾಸಕ್ತಿಗಳು ಇರುವುದಿಲ್ಲ. ಅವರು ಸದ್ಗುರುವಿನ ಕಾರುಣ್ಯವನ್ನು ಪಡೆದವರಾಗಿ ಲಿಂಗಾರ್ಚನೆ ಮಾಡುವವರಾಗಿರುತ್ತಾರೆ. ಎಲ್ಲಾ ಆಸೆಗಳನ್ನು ದಾಟಿ ದೇವರೇ ಆಗಿರುವ ಶರಣರಿಗೆ ಮುಕ್ತಿಯ ಬಯಕೆ ಸಹ ಇರುವುದಿಲ್ಲ. ಮುಕ್ತಿಯೂ ಕೂಡ ಅವರಲ್ಲೇ ಅಡಗಿರುತ್ತದೆ. ಅದಕ್ಕಾಗಿ, ಬೇರೆ ಬಯಕೆ ಬೇಕಿಲ್ಲ. ಅಂತಹ ಶರಣರು ಸಾಮಾನ್ಯರಂತೆ ತೃಪ್ತಿ, ಆಪ್ಯಾಯಮಾನ ಇವುಗಳಿಗಾಗಿ ಹುಡುಕಬೇಕಿಲ್ಲ, ಪ್ರಯತ್ನಿಸಬೇಕಿಲ್ಲ. ಅವೆಲ್ಲವೂ ಅವರಲ್ಲಿ ತಾನೇ ತಾನಾಗಿರುತ್ತದೆಯೆಂದು ಉರಿಲಿಂಗಪೆದ್ದಿಗಳು ಈ ವಚನದಲ್ಲಿ ವ್ಯಕ್ತಪಡಿಸಿದ್ದಾರೆ.

■

೬

ಅರ್ಥರೇಖೆ ಇದ್ದಲ್ಲಿ ಫಲವೇನು ಆಯುಷ್ಯರೇಖೆ ಇಲ್ಲದನ್ನಕ್ಕ?
ಹಂದೆಯ ಕೈಲ್ಲಿ ಚಂದ್ರಾಯುಧವಿರ್ದು ಫಲವೇನು?
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು?
ಮರ್ಕಟನ ಕೈಯಲ್ಲಿ ಮಾಣಿಕವಿರ್ದು ಫಲವೇನು?
ನಮ್ಮ ಕೂಡಲಸಂಗ ಶರಣನರಿಯದವರ ಕೈಯಲ್ಲಿ
ಲಿಂಗವಿರ್ದು ಫಲವೇನು? ಶಿವಪಥವನರಿಯದನ್ನಕ್ಕ.

– ಬಸವಣ್ಣ

ಹಸ್ತಸಾಮುದ್ರಿಕೆಯ ಪ್ರಕಾರ ಕೈಯ್ಯಲ್ಲಿ ಅರ್ಥರೇಖೆಯು ಚೆನ್ನಾಗಿ ಇದ್ದರೆ, ಆ ವ್ಯಕ್ತಿಯಲ್ಲಿ ಸಾಕಷ್ಟು ಧನ–ಧಾನ್ಯ, ಸಂಪತ್ತು ಇರುತ್ತದೆ ಎಂಬ ನಂಬಿಕೆ ಇದೆ. ಆದರೆ ಸಂಪತ್ತಿದ್ದರೂ ಎಂದರೆ ಧನರೇಖೆ ಇದ್ದರೂ, ಆಯುಷ್ಯರೇಖೆ (ದೀರ್ಘಾಯುಷ್ಯ) ಇಲ್ಲದಿದ್ದರೆ, ಧನರೇಖೆ(ಧನ) ಇದ್ದೂ ಪ್ರಯೋಜನವಿಲ್ಲ. ಅನುಭವಿಸಲು ಆ ವ್ಯಕ್ತಿಯೇ ಬದುಕಿಲ್ಲದಿರುವಾಗ ಹಣದ ಪ್ರಯೋಜನ ಪಡೆಯುವುದೆಲ್ಲಿ ಬಂತು? ಹಾಗೆಯೇ ಹೇಡಿಯಾದವನ ಕೈಯ್ಯಲ್ಲಿ ಚಂದ್ರಾಯುಧವಿದ್ದರೂ ಉಪಯೋಗವಿಲ್ಲ. ಚಂದ್ರಾಯುಧವೇನೋ ತುಂಬಾ ಶಕ್ತಿಶಾಲಿಯಾಗಿರಬಹುದು. ಶತ್ರುಗಳನ್ನು ಕ್ಷಣಾರ್ಧದಲ್ಲಿ ನಾಶಮಾಡುವಷ್ಟು ಹರಿತವಾಗಿಬಹುದು. ಆದರೆ ಅದನ್ನು ಹಿಡಿದವನು, ಹೇಡಿಯಾಗಿದ್ದರೆ ಅವನು ಅದನ್ನು ಸರಿಯಾಗಿ ಉಪಯೋಗಿಸಲಾರ. ಆದುದರಿಂದ ಹೇಡಿಯ ಕೈಲಿ ಚಂದ್ರಾಯುಧವಿದ್ದರೂ ನಿರುಪಯೋಗ. ಕುರುಡನ ಕೈಯ್ಯಲಿಯ ಕನ್ನಡಿಯೂ ಅಷ್ಟೇ ನಿಷ್ಪ್ರಯೋಜಕ. ಕನ್ನಡಿಗೆ ತಾನು ನೋಡಿಕೊಂಡವರ ಪ್ರತಿಬಿಂಬವನ್ನು ತೋರಿಸುವ ಶಕ್ತಿ ಇರಬಹುದು. ಆದರೆ ಅದನ್ನು ಹಿಡಿದುಕೊಂಡವನಿಗೆ ಕಣ್ಣೇ ಕಾಣದಿದ್ದರೆ, ಎಂದರೆ ಅವನು ಅಂಧನಾಗಿದ್ದರೆ, ಪ್ರತಿಬಿಂಬವಿದ್ದರೂ ಅವನು ನೋಡಲಾರ. ಕನ್ನಡಿ ಇದ್ದೂ ಅದರ ಉಪಯೋಗ ಪಡೆಯಲು ಅವನಿಗೆ ಸಾಧ್ಯವಿಲ್ಲವಾಗಿ, ಕನ್ನಡಿ ಇದ್ದರೂ ಅದು ನಿಷ್ಪ್ರಯೋಜಕ. ಅದೇ ರೀತಿ ಕಪಿಯ ಕೈಲಿ ಮಾಣಿಕ್ಯವನ್ನು ಕೊಟ್ಟರೆ, ಅದರ ಬೆಲೆ ಅದಕ್ಕೆ ತಿಳಿಯದು. ಅದರ ದೃಷ್ಟಿಯಲ್ಲಿ ಮಾಣಿಕ್ಯವೂ ಅಷ್ಟೆ, ಒಂದು ಕಲ್ಲಿನ ಚೂರೂ ಅಷ್ಟೆ. ಅದೇ ಮಾಣಿಕ್ಯ, ಅದರ ಬೆಲೆ ತಿಳಿದವರ ಕೈಗೆ ಸಿಕ್ಕರೆ, ಮಾಣಿಕ್ಯಕ್ಕೂ ಬೆಲೆ ಬರುತ್ತದೆ, ಅದನ್ನು ಪಡೆದವರೂ ಅದರ ಲಾಭವನ್ನೂ ಪಡೆಯುತ್ತಾರೆ. ಆದರೆ ತಾರತಮ್ಯ ತಿಳಿಯದ ಕಪಿಯ ಕೈಲಿದ್ದ ರತ್ನ ವ್ಯರ್ಥ, ನಿಷ್ಪ್ರಯೋಜಕ. ಅದೇ ರೀತಿ ಎಂದರೆ, ಆಯುಷ್ಯವಿಲ್ಲದವನ

ಕೈಯಲ್ಲಿನ ಧನ, ಹೇಡಿಯ ಕೈಲಿರುವ ಚಂದ್ರಾಯುಧ, ಕಣ್ಣಿಲ್ಲದವನ ಕೈಲಿರುವ ಕನ್ನಡಿ, ಮರ್ಕಟನ ಕೈಲಿರುವ ಮಾಣಿಕ್ಯ ಹೇಗೆ ವ್ಯರ್ಥವಾಗಿ ಹೋಗುತ್ತವೋ ಹಾಗೆ, ಕೂಡಲಸಂಗಮನ ಶರಣರನ್ನು ಅರಿಯುವ, ಜ್ಞಾನವಿಲ್ಲದವರ ಕಲಿ ಲಿಂಗವಿದ್ದರೂ ಫಲವಿಲ್ಲ. ಕೇವಲ ಲಿಂಗ ಧರಿಸಿದರೆ ಸಾಲದು. ಅರಿವನ್ನೇ ಗುರುವನ್ನಾಗಿ ಮಾಡಿಕೊಂಡು, ಆತ್ಮ ಪರಮಾತ್ಮರನ್ನು ತಿಳಿದುಕೊಳ್ಳುವ ಜ್ಞಾನಪಡೆದು ಆಧ್ಯಾತ್ಮದ, ಹಾದಿಯಲ್ಲಿ ಮುಂದುವರಿದು, ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಳ್ಳುವ ಶಕ್ತಿ ಮನಸ್ಸುಗಳಿದ್ದರೆ ಮಾತ್ರ ಕೈಲಿ ಲಿಂಗವಿದ್ದುದಕ್ಕೆ ಫಲ ದೊರೆಯುತ್ತದೆ. ಇಲ್ಲದಿದ್ದಲ್ಲಿ ಎಲ್ಲಾ ನಿಷ್ಫಲ.

■

೭

ಅರಿಸಿನಘನೆ ಮಿಂಧು ಹೊಂದೊಡಿಗೆಯನೆ ತೊಟ್ಟು
ಪುರುಷನ ಒಲವಿಲ್ಲದ ಅಲಸೆಯಂತಾಗಿರ್ದೆನಯ್ಯಾ!
ವಿಭೂತಿಯನೆ ಹೂಸಿ ರುದ್ರಾಕ್ಷಿಯನೆ ಕಟ್ಟಿ,
ಶಿವ, ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ!
ಕೆಟ್ಟು ಬಾಳುವರಿಲ್ಲಾ ಎಮ್ಮವರ ಕುಲದಲ್ಲಿ.
ನೀನೊಲಿದಂತೆ ಸಲಹಯ್ಯಾ, ಕೂಡಲಸಂಗಮದೇವಾ.

– ಬಸವಣ್ಣ

ಭಕ್ತಿಭಂಡಾರಿ ಬಸವಣ್ಣವರು ದೇವರನ್ನು ಒಲಿದು ಸಲಹು ಎಂದು ಆರ್ತರಾಗಿ ಬೇಡಿಕೊಂಡಿದ್ದಾರೆ.

ದೇವರನ್ನು ಕುರಿತು ಬಸವಣ್ಣನವರು, ಅರಿಸಿನವನ್ನು ಹಚ್ಚಿಕೊಂಡು ಹೊಸದಾದ ಉಡುಗೆಯನ್ನು ಉಟ್ಟು, ಹೊನ್ನಿನ ಆಭರಣಗಳನ್ನು ಧರಿಸಿ ಇನಿಯನ ಆಗಮನಕ್ಕಾಗಿ ನಿರೀಕ್ಷಿಸುವ ನವವಧುವಿಗೆ ಪತಿಯ ಒಲವಿಲ್ಲದಾಗ ಎಂತಹ ದುಃಖ, ನಿರಾಸೆಗಳುಂಟಾಗಬಹುದೋ ಆ ಸ್ಥಿತಿಯಲ್ಲಿ ನಾನಿದ್ದೇನೆ. ನಿಮ್ಮಲ್ಲಿ ಭಕ್ತಿಯುಕ್ತನಾಗಿ ನಿಮ್ಮ ಕೃಪೆಗಾಗಿ ಕಾದಿರುವ ನಾನು ವಿಭೂತಿಯನ್ನು ಮೈತುಂಬಾ ಧರಿಸಿಕೊಂಡು, ರುದ್ರಾಕ್ಷಿಯನ್ನು ಕಟ್ಟಿಕೊಂಡು, ಭಕ್ತಿಭಾವದಿಂದ ನಿಮ್ಮೊಲುಮೆಗಾಗಿ ಕಾಯುತ್ತಿದ್ದ ನಾನು, ನಿಮ್ಮೊಲವಿಲ್ಲದೆ ತೊಳಲಾಡುತ್ತಿದ್ದೇನೆ. ನಿಮ್ಮ ಕೃಪೆ ಇಲ್ಲದಿದ್ದರೆ, ಕಷ್ಟಕಾರ್ಪಣ್ಯಗಳಿಗೆ ತುತ್ತಾಗುತ್ತೇನೆ. ಮಾನವರ ಮಧ್ಯೆ ಬಾಳುವೆಗೆಟ್ಟವನು ಬದುಕಲು ಸಾಧ್ಯವಿಲ್ಲ. ಕೆಟ್ಟುಹೋದವರನ್ನು ಯಾರೂ ತಿರುಗಿ ಸಹ ನೋಡುವುದಿಲ್ಲ. ಹಾಗೆಯೇ

ಶರಣರ ಕುಲದಲ್ಲಿ ದೇವರ ಕೃಪೆ ಇಲ್ಲದ ಮಾನವನಿಗೆ ಯಾವ ಮನ್ನಣೆಯೂ ಇಲ್ಲ; ಆದರವೂ ಇಲ್ಲ. ಆದುದರಿಂದ ನೀನು ಕೃಪೆಮಾಡಿ ಎನ್ನನ್ನು ರಕ್ಷಿಸು ಎಂದು ಬೇಡಿಕೊಂಡಿದ್ದಾರೆ ಬಸವಣ್ಣ. ಏಕೆಂದರೆ ದೇವರ ಕೃಪೆಯೇ ಸರ್ವರ ಜೀವ-ಜೀವಾಳ.

■

೮

ಅತ್ತಲಿತ್ತಲು ಹೋಗದಂತೆ ಎನ್ನ ಹೆಳವನ ಮಾಡಯ್ಯ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ
ನಿಮ್ಮ ಶರಣರ ಪಾದವಲ್ಲದೆ, ಅನ್ಯವಿಷಯಕ್ಕೆಳಸದಂತೆ
ಇರಿಸು ಕೂಡಲ ಸಂಗಮದೇವಾ

– ಬಸವಣ್ಣ

ಪರಮಾತ್ಮನ ಒಲುಮೆ ದೊರೆಯಬೇಕಾದರೆ, ಕೃಪೆಗೆ ಪಾತ್ರರಾಗಬೇಕಾದರೆ ಸ್ಥಿರ ಮನಸ್ಸಿನಿಂದ, ಕಣ್ಣು, ಕಿವಿ, ಕಾಲು, ಕೈ ಎಂದರೆ ಇಡೀ ದೇಹವೇ ಒಂದಾಗಿ, ದೇವರಲ್ಲಿ ತನ್ಮಯತೆಯಿಂದ ಪ್ರಾರ್ಥನೆ ಮಾಡಬೇಕು. ಸತ್ಸಂಗದಲ್ಲಿ ಸಜ್ಜನಿಕೆಯ ಬದುಕು ಬದುಕಬೇಕು. ಶರಣರ ಪಾದವಲ್ಲದೆ ಬೇರೆ ಸಾಮಾನ್ಯ ವಿಷಯಗಳಿಗೆ ಮನ ಕೊಡಬಾರದು. ಆದುದರಿಂದ ಬಸವಣ್ಣನವರು ಅಂತಹ ಒಂದು ಒಲುಮೆಗಾಗಿ ದೇವರನ್ನು ಪ್ರಾರ್ಥಿಸಿದ್ದಾರೆ.

ಪಂಚೇಂದ್ರಿಯಗಳ ಬಯಕೆಯ ಈಡೇರಿಕೆಗಾಗಿ ಅತ್ತಲಿತ್ತ ಹೋಗದಂತೆ ನನ್ನನ್ನು ಹೆಳವನನ್ನಾಗಿ ಮಾಡು. ನನ್ನ ಮನಸ್ಸು ಕಾಮದ ಆಸೆಗೆ ಬಲಿಯಾಗಬಹುದು. ಆದುದರಿಂದ ಹಾಗೆ ಆಶಿಸದಂತೆ ಕುರುಡನನ್ನಾಗಿ ಮಾಡು ತಂದೆ. ನಿನ್ನ ನಾಮಸ್ಮರಣೆ, ಸದ್ವಿಚಾರಗಳನ್ನಲ್ಲದೆ, ವಿಷಯಸುಖಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಕೇಳದಂತೆ ಕಿವುಡನನ್ನಾಗಿ ಮಾಡು. ನಿಮ್ಮ ಶರಣರ ಪಾದವಲ್ಲದೆ ಬೇರೆ ವಿಷಯಗಳಿಗೆ ಮನಸ್ಸು ಹರಿಯದಂತೆ ಮನಸ್ಸನ್ನು ಪರಿಶುದ್ಧವಾಗಿ ಇಡು ಎಂದು ಭಕ್ತಿಪೂರ್ವಕವಾಗಿ ಕೂಡಲಸಂಗಮನನ್ನು ಬೇಡಿಕೊಂಡಿದ್ದಾರೆ.

■

೬

ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯಾ?
ನೀನು ಬಹಿರಂಗ ವ್ಯವಹಾರ ದೂರಸ್ಥನು
ಅಂತರಂಗದಲ್ಲಿ ಧ್ಯಾನಮಾಡಿ ಒಲಿಸುವೆನೆ ಅಯ್ಯಾ?
ನೀನು ವಾಙ್ಮನಕೃತೀತನು.
ಜಪಸ್ತೋತ್ರದಿಂದ ಒಲಿಸುವೆನೆ ಅಯ್ಯಾ?
ನೀನು ನಾದಾತೀತನು.
ಭಾವಜ್ಞಾನದಿಂದ ಒಲಿಸುವೆನೆ ಅಯ್ಯಾ?
ನೀನು ಮತಿಗತೀತನು.
ಹೃದಯಕಮಲದಲ್ಲಿ ಇಟ್ಟುಕೊಂಬೆನೆ ಅಯ್ಯಾ?
ನೀನು ಸರ್ವಾಂಗ ಪರಿಪೂರ್ಣನು.
ಒಲಿಸಲೆನ್ನಳವಲ್ಲ; ನೀವೊಲಿವುದೆ ಸುಖವಯ್ಯಾ
ಚನ್ನಮಲ್ಲಿಕಾರ್ಜುನಯ್ಯಾ.

–ಅಕ್ಕಮಹಾದೇವಿ

ಅಕ್ಕಮಹಾದೇವಿಯು ಚನ್ನಮಲ್ಲಿಕಾರ್ಜುನನನ್ನು ಜಪಿಸಿ, ತಪಿಸಿ, ಅವನನ್ನು ಹುಡುಕಿಕೊಂಡು ಕಾಡುಮೇಡುಗಳನ್ನೆಲ್ಲಾ ಸುತ್ತಿ ಅವನನ್ನು ಒಲಿಸಲು, ಅವನ ಸಾಕ್ಷಾತ್ಕಾರ ಪಡೆಯಲು ಎಲ್ಲಾ ರೀತಿಯ ಪ್ರಿತಯ್ನಪಟ್ಟರೂ ಅವನನ್ನು ಕಾಣಲು ಸಾಧ್ಯವಾಗಲಿಲ್ಲ. ಆಗ ಅವನು ಏಕೆ ಒಲಿದಿರಲಿಕ್ಕಿಲ್ಲ ಎಂದು ತನ್ನನ್ನೇ ಪ್ರಶ್ನಿಸಿಕೊಂಡು ತಾನೇ ಉತ್ತರಿಸಬಹುದಾದ ವಚನವೆನ್ನಿಸುತ್ತದೆ. ಉತ್ತರಿಸಿದ್ದಾಳೆ.

ಭಸ್ಮ, ಧೂಪ, ದೀಪ, ಗಂಧ ಮುಂತಾದವುಗಳಿಂದ ಅಷ್ಟವಿಧಾನರ್ಚನೆಯ ಮಾಡಿ, ನಿನ್ನನ್ನು ಒಲಿಸಿಕೊಳ್ಳೋಣವೆಂದರೆ, ನಿನಗೆ ಬಹಿರಂಗ ರೀತಿಯ ಪೂಜೆ ಹಿಡಿಸುವುದಿಲ್ಲ. ಹಾಗೆಂದು ಅಂತರಂಗದಲ್ಲೇ ಧ್ಯಾನ ಮಾಡಿ ಮೌನಪೂಜೆಯಿಂದ ಒಲಿಸಿಕೊಳ್ಳೋಣವೆಂದರೆ ನೀನು ಮಾತು ಮತ್ತು ಮನಸ್ಸಿನ ಹಿಡಿತಕ್ಕೆ ಸಿಕ್ಕಲಾರದವನು. ಜಪ, ಸ್ತೋತ್ರ ಮುಂತಾದವುಗಳ ಮೂಲಕ ಒಲಿಸಲು ಪ್ರಯತ್ನಿಸೋಣವೆಂದರೆ ನೀನು ಸಂಗೀತವನ್ನೂ ದಾಟಿ ನಿಂತವನು. ಭಾವನೆಯಲ್ಲಿ ನಿನ್ನನ್ನು ನೆಲಸಿಕೊಂಡು ಪ್ರಾರ್ಥನೆಯನ್ನು ಮಾಡಿ ನಿನ್ನ ಮೆಚ್ಚುಗೆ ಪಡೆಯೋಣವೆ ಎಂದರೆ ನೀನು ಬುದ್ಧಿಗೆ ನಿಲುಕದವನು. ನನ್ನ ಹೃದಯಕಮಲದಲ್ಲಿ ಇಟ್ಟುಕೊಳ್ಳೋಣವೇ ಎಂದರೆ ನೀನು ಸರ್ವಾಂಗ ಪರಿಪೂರ್ಣನು. ಹೃದಯದಲ್ಲಿ ಹಿಡಿದಿಡಲು ಸಾಧ್ಯವಿಲ್ಲದವನು. ನಿನ್ನನ್ನು

ಹೇಗೆ ಒಲಿಸಬೇಕೆಂಬುದೇ ನನಗೆ ತಿಳಿಯುತ್ತಿಲ್ಲ. ಹೀಗೆಲ್ಲಾ ನಾನಾ ರೀತಿಯಿಂದ ಪ್ರಯತ್ನಿಸಿ ನಿರಾಶಳಾಗುವುದಕ್ಕಿಂತ ನೀನು ಯಾವಾಗ ಒಲಿಯುವೆಯೋ ಒಲಿ, ಯಾವುದಕ್ಕೆ ಒಲಿಯುತ್ತೀಯೋ ಒಲಿ ಎಂದು ನನ್ನ ಪಾಡಿಗೆ ನಾನಿದ್ದು ಬಿಡುವುದೇ ಸರಿ ಎಂದು ಬಿಟ್ಟಿದ್ದಾಳೆ ಕಡೆಗೆ.

ನಿನ್ನನ್ನು ಒಲಿಸಿಕೊಳ್ಳುವ ಈ ಎಲ್ಲ ಮಾರ್ಗಗಳು ನಿನ್ನನ್ನು ಒಲಿಸಿಕೊಳ್ಳುವುದರಲ್ಲಿ ಸೋತುಹೋಗಿವೆ. ನಿನ್ನನ್ನು ಒಲಿಸಿಕೊಳ್ಳುವುದು ನನಗೆ ಸಾಧ್ಯವಿಲ್ಲ. ಆದರೆ ನೀನೊಲಿಯದೆ ನನಗೆ ಇರಲೂ ಸಾಧ್ಯವಿಲ್ಲ. ಆದುದರಿಂದ ನೀನೇ ಒಲಿದು ಬರಬೇಕು ಎಂದು ಚನ್ನಮಲ್ಲಿಕಾರ್ಜುನನ್ನು ಅನನ್ಯ ಭಕ್ತಿಯಿಂದ ಬೇಡಿಕೊಂಡಿದ್ದಾಳೆ.

■

## ೧೦

ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ
ಸಕಲ ವೇದಶಾಸ್ತ್ರವೆಂಬ ನೇಣಕಟ್ಟಿ, ಹಿಡಿದು ತೂಗಿ,
ಜೋಗುಳವಾಡುತ್ತಿದ್ದಾಳೆ ಭ್ರಾಂತಿ ಎಂಬ ತಾಯಿ.
ತೊಟ್ಟಿಲು ಮುರಿದು ನೇಣು ಹರಿದು
ಜೋಗುಳ ನಿಂದಲ್ಲದೆ, ಗುಹೇಶ್ವರನೆಂಬ ಲಿಂಗ ಕಾಣಬಾರದು

—ಅಲ್ಲಮಪ್ರಭು

ಜನರಿಗೆ, ಜ್ಞಾನವನ್ನು ಪಡೆಯಬೇಕು, ಪರಶಿವನನ್ನು ಕಾಣಬೇಕೆಂಬ ಆಸಕ್ತಿ ಇದೆ. ಆದರೆ ಅವರಿಗೆ ಅದನ್ನು ಪಡೆಯುವ ಸರಿಯಾದ ಮಾರ್ಗ ಗೊತ್ತಿಲ್ಲ. ಅವರು ಜ್ಞಾನವನ್ನು ಪಡೆಯಲು ಪರಶಿವನನ್ನು ಕಾಣಲು ವೇದ ಶಾಸ್ತ್ರಗಳು ಸಹಾಯಕವೆಂಬ ಅಜ್ಞಾನದಿಂದ ಅವುಗಳ ಮೂಲಕ ಕಾಣಬಹುದೆಂಬ ಪ್ರಯತ್ನ, ಕೇವಲ ಭ್ರಾಂತಿ. ಯಾವಾಗ ಅವರು ಈ ಭ್ರಾಂತನ್ನು ಬಿಡುತ್ತಾರೆಯೋ ಎಂದರೆ ವೇದ ಶಾಸ್ತ್ರಗಳ ಆಧಾರವನ್ನು ತ್ಯಜಿಸುತ್ತಾರೆಯೋ, ಪರಿಶುದ್ಧ ಮನಸ್ಸಿನ ಭಕ್ತಿಮಾರ್ಗದಲ್ಲಿ ಹೋಗುತ್ತಾರೆಯೋ ಆಗ ಅಜ್ಞಾನವೂ ನಾಶವಾಗಿ ಪರಶಿವನ ದರ್ಶನವಾಗುತ್ತದೆ ಎಂಬ ಮಾತನ್ನು ಅಲ್ಲಮಪ್ರಭು ಅತ್ಯಂತ ಸುಂದರವಾದ ಹೋಲಿಕೆಯ ಮೂಲಕ ವಿವರಿಸಿದ್ದಾರೆ. ಜ್ಞಾನವನ್ನು ಶಿಶುವಿಗೆ, ಅಜ್ಞಾನವನ್ನು ಆ ಶಿಶುವನ್ನಿಟ್ಟ ತೊಟ್ಟಿಲಿಗೂ, ವೇದಶಾಸ್ತ್ರಗಳನ್ನು ತೊಟ್ಟಿಲು ತೂಗಲು ಉಪಯೋಗಿಸುವ ಸರಪಳಿಗೂ, ಜೋಗುಳವನ್ನು ವೇದ ಮಂತ್ರಗಳಿಗೂ, ಇದರಿಂದ ದೇವರು

ಸಿಕ್ಕುತ್ತಾನೆಂಬ ಭ್ರಾಂತಿಯನ್ನು ತಾಯಿಗೂ ಹೋಲಿಸಿದ್ದಾರೆ. ಗುಹೇಶ್ವರನೆಂಬ ಲಿಂಗವಸ್ತು ಕಾಣಲು ಎಂದರೆ ತೊಟ್ಟಿಲಲ್ಲಿರುವ ಶಿಶುವನ್ನು ಅರ್ಥಾತ್ ಜ್ಞಾನವನ್ನು ಪಡೆಯಲು ಅಜ್ಞಾನವೆಂಬ ತೊಟ್ಟಿಲು ಮುರಿಯಬೇಕು ಎಂದರೆ ಅಜ್ಞಾನ ತೊಲಗಬೇಕು. ನೇಣುಹರಿಯುಬೇಕು ಎಂದರೆ ವೇದ ಶಾಸ್ತ್ರಗಳ ಆಧಾರವಿಲ್ಲವಾಗಬೇಕು. ವೇದ ಮಂತ್ರಘೋಷಗಳ ಜೋಗು ನಿಲ್ಲಬೇಕು. ಭಕ್ತಿ ಇಲ್ಲದೆ, ಕೇವಲ ವೇದ ಶಾಸ್ತ್ರಗಳ ಮೂಲಕ ಜ್ಞಾನ ದೊರೆಯುತ್ತದೆಂಬ ಭ್ರಾಂತು ತೊಲಗಬೇಕು. ಭಕ್ತಿಯಿಂದ ಧ್ಯಾನಿಸಬೇಕು. ಆಗ ದೇವರು ಕಾಣುತ್ತಾನೆ ಎಂದು ಸ್ವಾನುಭವದ ಅಷ್ಟೇ ಕ್ರಾಂತಿಕಾರಿ ವಿಚಾರವನ್ನು ವ್ಯಕ್ತಮಾಡಿದ್ದಾರೆ ಅಲ್ಲಮಪ್ರಭು.

ಸಾಮಾನ್ಯವಾಗಿ ಜನರು, ವೇದ ಶಾಸ್ತ್ರಗಳ ಆಧಾರದಿಂದ, ವ್ರತ ಉಪವಾಸಗಳ ಮೂಲಕ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂದು ನಂಬುತ್ತಾರೆ. ಇದೊಂದು ಅಜ್ಞಾನದಿಂದ ಆವರಿಸಲ್ಪಟ್ಟ ಭ್ರಾಂತಿ. ಪರಂಪರೆಯಿಂದ ನಡೆದುಕೊಂಡು ಬಂದ ಪರಿಪಾಠ. ಆದರೆ ನಿಜವಾಗಿ ದೇವರನ್ನು ಕಾಣಬೇಕಾದರೆ, ಈ ಅಜ್ಞಾನ ತೊಲಗಬೇಕು. ಭಕ್ತಿಯಿಲ್ಲದೆ ಕೇವಲ ವೇದ ಮಂತ್ರಗಳ ಘೋಷಣೆ ನಿರರ್ಥಕ. ಆದ್ದರಿಂದ ಈ ಮಾರ್ಗವನ್ನು ತ್ಯಜಿಸಿ ಸರಳವಾದ ಭಕ್ತಿಮಾರ್ಗದಿಂದ, ಪರಿಶುದ್ಧ ಜೀವನದಿಂದ ದೇವರನ್ನು ಭಜಿಸಿದರೆ ದೇವರ ಸಾಕ್ಷಾತ್ಕಾರ ಸಾಧ್ಯ ಎಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ. ಶಿವಶರಣರ ಪರಿಶುದ್ಧ ಭಕ್ತಿಮಾರ್ಗವೇ ಪರಿಪೂರ್ಣ ಜ್ಞಾನ ಪಡೆಯುವ ನೇರವಾದ ಮಾರ್ಗ ಇದು ಅಲ್ಲಮ ಪ್ರಭುಗಳ ಸ್ವಾನುಭಾವ ಸೂಕ್ತಿ.

■

## ೧೧

ಅಂಜಿದಡಾಗದು, ಅಳುಕಿದಡಾಗದು,
ವಜ್ರಪಂಜರದೊಳೊಗಿದ್ದಡಾಗದು
ತಪ್ಪದುವೋ! ಲಲಾಟಲಿಖಿತ.
ಕಕ್ಕುಲತೆಗೆ ಬಂದಡಾಗದು, ನೋಡಾ.
ಧೃತಿಗೆಟ್ಟಡೆ ಮನ, ಧಾತುಗೆಟ್ಟಡೆ ಬಪ್ಪುದು ತಪ್ಪದು,
ಕೂಡಲಸಂಗಮದೇವಾ

–ಬಸವಣ್ಣ

ಕೆಲವು ಸಾರಿ ಜೀವನದಲ್ಲಿ ಎಷ್ಟೇ ಭಕ್ತಿಯಿಂದ ನಡೆದುಕೊಂಡರೂ, ನಿಷ್ಠರಾಗಿ ಬದುಕಿದರೂ ಕಷ್ಟಗಳು ತಪ್ಪುವುದೇ ಇಲ್ಲ. ಹಾಗೆ ಯಾರಾದರೊಬ್ಬ ಶರಣರಿಗೆ

ಆಗಿರಬೇಕು. ಆಗ ಅವರನ್ನು ಸಂತೈಸಲೋಸುಗ ಬಸವಣ್ಣನವರು ಹೇಳಿದ ವಚನವಿದೆಂದು ಕಾಣುತ್ತದೆ.

ಮನುಷ್ಯ ಧೈರ್ಯ ಕಳೆದುಕೊಂಡರೆ, ದೇವರ ನಂಬುಗೆ ಬಿಟ್ಟರೆ ಎಷ್ಟೋ ಸಂದರ್ಭಗಳಲ್ಲಿ ಜೀವನವನ್ನು ಎದುರಿಸುವುದು ಕಷ್ಟವಾಗುತ್ತದೆ. ಏನೇ ಮಾಡಿದರೂ ಕಷ್ಟಗಳು ತಪ್ಪದಿದ್ದಾಗ ಮನಸ್ಸು ಅಧೈರ್ಯಗೊಳ್ಳಬಹುದು, ಶಕ್ತಿಹೀನವಾಗಬಹುದು. ಅಂತಹ ಪರಿಸ್ಥಿತಿ ಅನುಭವಿಸಲು ಬಲುಕಷ್ಟ, ಇದು ನಮ್ಮ ಹಣೆಯಬರಹ, ಅಗೋದು ಆಗೇ ಆಗುತ್ತೆ, ಹುಟ್ಟಿದ ಮೇಲೆ ಇದನ್ನೆಲ್ಲಾ ಅನುಭವಿಸಲೇಬೇಕು 'ವಿಧಿ ಬರೆದಿಟ್ಟುದನು ಮೀರುವ ಸಮರ್ಥರದಾರು ತ್ರಿಜಗದಲಿ' ಎಂಬ ಮಾತಿನಲ್ಲಿ ನಂಬುಗೆ ಇಟ್ಟು, ಮನಸ್ಸಿಗೆ ಧೈರ್ಯತಂದುಕೊಂಡರೆ, ಪರಿಸ್ಥಿತಿಯನ್ನು ಸಹಿಸಿಕೊಳ್ಳುವುದು ಕಷ್ಟವಾಗುವುದಿಲ್ಲ. ಆದುದರಿಂದಲೋ ಏನೋ ಬಸವಣ್ಣನವರು, 'ಹೆದರಿದರೆ ಆಗುವುದಿಲ್ಲ, ಅಳುಕಿದರೂ ಪ್ರಯೋಜನವಿಲ್ಲ. ಏನಾದರೂ ಕೆಡುಕು ಬಂದೀತೆಂದು, ವಜ್ರಪಂಜರದೊಳಗಿದ್ದರೂ ಆಗಬೇಕಾದುದು ಆಗಿಯೇ ತೀರುತ್ತದೆ. ಹಣೆಯಲ್ಲಿ ಬರೆದುದನ್ನು ಪ್ರತಿಯೊಬ್ಬರೂ ಅನುಭವಿಸಿಯೇ ತೀರಬೇಕು. ಇದು ಹೀಗಾಯ್ತಲ್ಲಾ, ಹೀಗಾಗುತ್ತಲ್ಲಾ ಎಂದು ಕಕ್ಕುಲತೆಗೆ ಒಳಗಾದರೂ ಪ್ರಯೋಜನವಿಲ್ಲ. ಧೈರ್ಯ ಕಳೆದುಕೊಂಡರೆ, ಮನಸ್ಸು ದುರ್ಬಲವಾದರೆ, ಬರುವುದು ತಪ್ಪುವುದಿಲ್ಲ. ಆಗಬೇಕಾದುದು ಆಗಿಯೇ ತೀರುತ್ತದಾದುದರಿಂದ ಬಂದುದನ್ನು ಧೈರ್ಯದಿಂದ ಎದುರಿಸಿ ಸರಿಪಡಿಸಿಕೊಳ್ಳಲು ಪ್ರಯತ್ನಿಸಬೇಕು ಅಥವಾ ದಿಟ್ಟತನದಿಂದ ಅನುಭವಿಸಬೇಕು. ಹೆದರಬಾರದು, ಹಿಂಜರಿಯಬಾರದು' ಎಂದಿದ್ದಾರೆ. ಇದು ಬಸವಣ್ಣನವರ ಸಾಧಕ ಜೀವನದ ಒಂದು ಹಂತದಲ್ಲಿ ಮೂಡಿರಬಹುದಾದ ಅನಿಸಿಕೆ. ಎಲ್ಲ ಸಾಧಕರಿಗೂ ಸಾಧನೆಯಲ್ಲಿ ಅಡೆ-ತಡೆ ಉಂಟಾಗಿ ಧೈರ್ಯ ಕುಂದಿದಾಗ, ಮಾರ್ಗದರ್ಶನವಾಗಬಲ್ಲ ನುಡಿಗಳು ಈ ವಚನದಲ್ಲಿವೆ.

■

## ೧೨

ಅಂಗವ ಮರೆದವಂಗೆ ಅಂಗದ ಹಂಗೇಕೋ?
ಅರಿವ ಕಂಡವಂಗೆ ಕುರುಹಿನ ಹಂಗೇಕೋ?
ತಾನು ತಾನಾದವಂಗೆ ಧ್ಯಾನದ ಹಂಗೇಕೋ?
ಮನ ಮುಗ್ಧವಾದವಂಗೆ ಮಾನವರ ಹಂಗೇಕೋ
ಆಸೆಯನಳಿದವಂಗೆ ರೋಷದ ಹಂಗೇಕೋ?

ಕಾಮನ ಸುಟ್ಟವಂಗೆ ಕಳವಳದ ಹಂಗೇಕೋ?
ನಡೆಗೆಟ್ಟವಂಗೆ ನುಡಿಯ ಹಂಗೇಕೋ?
ನಿಶ್ಚಿಂತನಾದವಂಗೆ ಉಚ್ಚರಣೆಯ ಹಂಗೇಕೋ?
ಬಯಲು ಬಯಲಾದವಂಗೆ ಭಾವದ ಹಂಗೇಕೋ?
ತನ್ನ ಮರೆದು ನಿಮ್ಮನರಿದ ಶರಣಂಗೆ ಅಲ್ಲಿಯೆ ಐಕ್ಯ ಕಂಡೆಯಾ?
ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

–ಲಿಂಗಮ್ಮ

**ಹ**ಡಪದ ಅಪ್ಪಣ್ಣನವರ ಪತ್ನಿ ಲಿಂಗಮ್ಮನು ಅದೇಕೆ, ಇದೇಕೆ ಎಂದು ಕೇಳುತ್ತಾ ಐಕ್ಯವನ್ನು ಕಾಣುವ ಮಾರ್ಗ ಬೋಧಿಸಿದ್ದಾಳೆ. ಭಕ್ತನು ಐಕ್ಯಸ್ಥಲವನ್ನೇರಲು ಹಂತ ಹಂತವಾಗಿ ಪ್ರಯತ್ನಿಸಬೇಕು. ಭಕ್ತಸ್ಥಲದಲ್ಲಿದ್ದಾಗಲೇ, ಮಹೇಶಸ್ಥಲದ ಮಾರ್ಗದಲ್ಲಿ ಮುನ್ನಡೆಯಬೇಕು. ಭಕ್ತ ಮಾಹೇಶಸ್ಥಲದಲ್ಲಿ ಮುಂದುವರಿದು ಪ್ರಸಾದಿ ಸ್ಥಲದ ಮಾರ್ಗ ಕ್ರಮಿಸಬೇಕು. ಅಲ್ಲಿಂದ ಪ್ರಾಣಲಿಂಗಿಯಾಗಿ, ಶರಣತ್ವದ ದಾರಿಯಲ್ಲಿ ಮುಂದುವರಿಯಬೇಕು. ಈ ಹಂತದಲ್ಲಿ ಭಕ್ತನಿಗೆ ತನ್ನ ಅಂಗದ ವ್ಯಾಮೋಹವಿರುವುದಿಲ್ಲ. ಅರಿವೇ ಗುರುವಾಗುತ್ತದೆ. ಆಗು ಗುರು-ಲಿಂಗ-ಜಂಗಮದ ಅವಶ್ಯಕತೆ ಇರುವುದಿಲ್ಲ. ತಾನೇ ಗುರುವಾಗಿರುತ್ತಾನೆ. ತಾನೇ ಲಿಂಗವಾಗಿರುತ್ತಾನೆ. ತಾನೇ ಜಂಗಮನಾಗಿರುತ್ತಾನೆ. ಅವನ ಮನಸ್ಸು ಮಗುವಿನ ಮನಸ್ಸಿನಂತೆ ಮುಗ್ಧವಾಗುತ್ತದೆ. ಕಪಟ, ವಂಚನೆ, ಮೋಸಗಳ ಸುಳಿವೂ ಅವನಲ್ಲಿರುವುದಿಲ್ಲ. ಆಸೆಯು ಅಳಿದಿರುತ್ತದೆ. ರೋಷಕ್ಕೆ ಎಡೆ ಇರುವುದಿಲ್ಲ. ಕಾಮನನ್ನು ಗೆಲಿದು ಮೋಹ, ಭ್ರಮೆಗಳಿಂದ ದೂರವಾಗಿರುವುದರಿಂದ ಅವನಿಗೆ ಕಳವಳವಿರುವುದಿಲ್ಲ. ಕಾತರಿಕೆ ಇರುವುದಿಲ್ಲ. ನಿಶ್ಚಿಂತ ಮನೋಭಾವ ಬಂದುಬಿಟ್ಟಿರುತ್ತದೆ. ಯಾವ ಮಂತ್ರ, ಜಪಗಳನ್ನು ಹೇಳುವ, ಮಾಡುವ ಅವಶ್ಯಕತೆ ಇರುವುದಿಲ್ಲ. ದೇವತ್ವವನ್ನು ಪಡೆದು ತನ್ನ ಆಧ್ಯಾತ್ಮಸಾಧನೆಗಳಿಂದ ತಾನೇ ದೇವರಾದವನಿಗೆ ಭಾವಗಳ ಹಂಗೂ ಅವಶ್ಯಕವಿಲ್ಲ. ಹೀಗೆ ಅವನು ಹಿಂದೆ ತಾನಿದ್ದ ರೀತಿಯನ್ನು ಮರೆತು, ದೇವರು ಯಾರೆಂಬುದನ್ನು ಖಚಿತವಾಗಿ, ಸರಿಯಾಗಿ ತಿಳಿದ ಬಳಿದ ಆ ಶರಣ, ದೇವರಲ್ಲಿ ಒಂದಾಗಿ ಉಳಿಯುವುದಿಲ್ಲ. ಐಕ್ಯಸ್ಥಲ ಮುಟ್ಟಿ ತಾನೇ ದೇವರ ಮಟ್ಟಕ್ಕೆ ಏರಿ, ಈ ಭವದ ಜಂಜಡಗಳಿಂದ ದೂರಾಗಿ, ಭವದ ಜನರ ಉದ್ಧಾರ ಮಾಡಬಲ್ಲ ಲೋಕೋದ್ಧಾರಕನಾಗುತ್ತಾನೆ ಎಂದು ಲಿಂಗಮ್ಮ ಐಕ್ಯಮಾರ್ಗ ತಿಳಿಸಿದ್ದಾಳೆ.

ಐಕ್ಯಸ್ಥಲವನ್ನು ಮುಟ್ಟಿದ ಶರಣನಿಗೆ ದೇಹ ಅಥವಾ ಲಿಂಗದ ಹಂಗು ಇರುವುದಿಲ್ಲ. ಜನರು ಏನಾದರೂ ಭಾವಿಸಿಯಾರು ಎಂಬ ಸಂಕೋಚವನ್ನು

ದಾಟಿರುತ್ತಾನೆ. ಆಸೆ ಮತ್ತು ರೋಷಗಳನ್ನು ಗೆದ್ದಿರುತ್ತಾನೆ. ಅವನಿಗೆ ಯಾರ ಹಂಗೂ ಇರುವುದಿಲ್ಲ. ಯಾವ ಕಳವಳ ತಳಮಳಗಳೂ ಅವನನ್ನು ಬಾಧಿಸುವುದಿಲ್ಲ. ಇವುಗಳೆಲ್ಲವನ್ನೂ ದಾಟಿ ಮೇಲೇರಿದ ಮುಕ್ತಾತ್ಮನಾಗಿರುತ್ತಾನೆ. ಹೀಗೆ ಲಿಂಗಮ್ಮ ಐಕ್ಯಸ್ಥಳವನ್ನೇರಿದ ಶರಣನ ಸ್ಥಿತಿಯನ್ನು ವಿವರಿಸಿದ್ದಾಳೆ.

■

೧೩

ಅಂದಣವನೇರಿದ ಸೊಣಗನಂತೆ
ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು.
ಸುಡು ಸುಡು, ಮನವಿದು ವಿಷಯಕ್ಕೆ ಹರಿವುದು.
ಮೃಡ ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ ಕೂಡಲಸಂಗಮದೇವಾ,
ನಿಮ್ಮ ಚರಣವ ನೆನೆವಂತೆ ಕರುಣಿಸು
ಸೆರಗೊಡ್ಡಿ ಬೇಡುವೆ, ನಿಮ್ಮ ಧರ್ಮ.

–ಬಸವಣ್ಣ

ಯೋಗ್ಯತೆ ಇಲ್ಲದವರನ್ನು ಎಷ್ಟು ಮೇಲಕ್ಕೆ ಏರಿಸಿದರೂ ಅವರು ತಮ್ಮ ಚಾಳಿ ತಾವು ಬಿಡುವುದಿಲ್ಲ. ಎಷ್ಟು ಸ್ಥಾನ ಮಾನ ಕೊಟ್ಟಾಗ್ಯೂ ತಮ್ಮ ಸಣ್ಣ ಬುದ್ಧಿಗೆ ಬೇಕಾದುದು ಕಂಡ ತಕ್ಷಣ, ತಮ್ಮ ಮೊದಲಿನ ಗುಣಕ್ಕನುಗುಣವಾಗಿ ಅದಕ್ಕೆ ಆಶಿಸಿ, ದುಷ್ಟತನವನ್ನು ತೋರಿಸಿಬಿಡುತ್ತಾರೆ. ವಿಷಯಕ್ಕೆ ಎಳೆಯುವ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಅವರಿಂದಾಗುವುದಿಲ್ಲ. ಆ ವಿಷಯಾಸಕ್ತವಾದ ಮನಸ್ಸು ಭಗವಂತನನ್ನು ಸ್ಮರಿಸಲು ಬಿಡುವುದಿಲ್ಲ. ಆದುದರಿಂದ ಆ ಮನಸ್ಸು ದೇವರನ್ನು ನೆನೆವಂತೆ ಮಾಡು ಎಂದು ಬಸವಣ್ಣ ಕೂಡಲಸಂಗಮನನ್ನು ಪ್ರಾರ್ಥಿಸಿದ್ದಾರೆ.

ಪಲ್ಲಕ್ಕಿಯ ಮೇಲೆ ಕುಳ್ಳಿರಿಸಿದರೂ ಹೇಸಿಗೆಯನ್ನು ಕಂಡ ತಕ್ಷಣ ತನ್ನ ಮೊದಲ ಸ್ವಭಾವವನ್ನು ಬಿಡದೆ ಹೇಸಿಗೆಗೆ ಆಸೆಪಟ್ಟು ಅಂದಣದಿಂದ ಕೆಳಗೆ ಹಾರುವ ನಾಯಿಯಂತೆ, ವಿಷಯಾಸ್ತಕವಾದ ಮನಸ್ಸು, ತಾನೆಷ್ಟೇ ಉನ್ನತ ಸ್ಥಾನದಲ್ಲಿದ್ದರೂ ವಿಷಯಕ್ಕೆ ಸಂಬಂಧಿಸಿದ ವಿಷಯಗಳನ್ನು ಕಂಡರೆ, ಆ ಕಡೆಗೆ ಜೋಲುಬೀಳುತ್ತದೆ. ದೇವರನ್ನು ಮರೆಯುವಂತೆ, ಸ್ಮರಿಸದಂತೆ ಮಾಡುತ್ತದೆ. ಆದುದರಿಂದ 'ನನ್ನ ಮನಸ್ಸು ಕ್ಷುದ್ರ ವಿಷಯಗಳಿಗೆ ಆಸೆ ಪಡದೆ ನಿಮ್ಮ ಚರಣವನ್ನು

ನೆನೆಯುವಂತೆ ಮಾಡು ಎಂದು ಸೆರಗೊಡ್ಡಿ ಬೇಡಿಕೊಳ್ಳುವೆ' ಎಂದು ಆರ್ತವಾಗಿ ಭಗವಂತನನ್ನು ಬೇಡಿ ಕೊಂಡಿದ್ದಾರೆ ಬಸವಣ್ಣ. ಉತ್ತಮ ಸಂಸ್ಕಾರದವಿಲ್ಲದ ವ್ಯಕ್ತಿ ಎಷ್ಟೇ ದೊಡ್ಡ ಸ್ಥಾನಗಳಿಗೆ ಹೋದರೂ, ಅವಕಾಶ ಸಿಕ್ಕಾಗ ಸಣ್ಣತನಕ್ಕೇ ಇಳಿದು ನಾಯಿಯಂತೆ ವರ್ತಿಸುತ್ತಾನೆ. ಹಾಗಾದರೆ ಸ್ಥಾನಕ್ಕೆ ತಕ್ಕ ಹಿರಿಮೆಯನ್ನು ಸಾಧಿಸಿಕೊಳ್ಳುವುದು ಅವಶ್ಯಕ, ಮನುಷ್ಯ ಶುನಕನಾಗದೆ ಶಿವನಾಗಬೇಕು.

■

## ೧೪

ಅಂಗದ ಮೇಲೆ ಲಿಂಗವುಳ್ಳುದೆಲ್ಲಾ ಸಂಗಮನಾಥನೆಂಬ ಭಾವ
ಬಸವಣ್ಣಂಗಾಯಿತಲ್ಲದೆ, ಎನಗೆ ಆ ಭಾವವಿಲ್ಲ ನೋಡಾ.
ಲಿಂಗೈಕ್ಯ ಶರಣರ ಕಂಡಡೆ ನಂಬಿ ನಚ್ಚಿ
ಅವರ ಪಾದಕ್ಕೆರಗುವುದೆನ್ನ ಮನವು.
ಅವರ ಕಂಡಡೆ ಕರುಣಾಮೃತ ಸುರಿವುದೆನಗೆ.
ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವುದೆನ್ನ ಮನವು ಕೂಡಲಚನ್ನಸಂಗಮದೇವಾ

–ಚನ್ನಬಸವಣ್ಣ

'ಲಾಂಛನಕ್ಕೆ ಶರಣೆಂಬೆ' ಎಂಬ ಮುಗ್ಧ ಭಕ್ತಿಯಿಂದ ಬಸವೇಶ್ವರರು, ಜನರು ಕಪಟಿಗಳಾಗಿರಲಿ, ಮೋಸಗಾರರಾಗಿರಲಿ, ಧೂರ್ತರಾಗಿರಲಿ ಅಂಗದ ಮಲೆ ಲಿಂಗವನ್ನು ಧರಿಸಿದವರನ್ನು ಸಾಕ್ಷಾತ್ ಪರಶಿವನೇ ಎಂದು ನಮಸ್ಕರಿಸಿ ಸತ್ಕರಿಸುತ್ತಿದ್ದರು. ಆದರೆ ಚನ್ನಬಸವಣ್ಣ ಹಾಗಲ್ಲ. ಮೋಸಗಾರರ ಆಟ ಈತನ ಮುಂದೆ ನಡೆಯುತ್ತಿರಲಿಲ್ಲ. ಪ್ರತಿಯೊಬ್ಬರನ್ನೂ ಒರೆಗೆ ಹಚ್ಚಿ ಅವರು ನಿಜವಾಗಿಯೂ ಶರಣರು, ಶರಣತತ್ವವನ್ನು ಬಾಳುತ್ತಿರುವವರು ಎಂದು ಖಚಿತವಾದರೆ ಮಾತ್ರ ಅವರಿಗೆ ಶಿರ ಬಾಗುತ್ತಿದ್ದ.

ಅಂತಹ 'ವಿಚಾರ ಭಕ್ತ'ನಾದ ಚನ್ನಬಸವಣ್ಣನು 'ಅಂಗದ ಮೇಲೆ ಲಿಂಗ ಉಳ್ಳದೆಲ್ಲಾ ಸಂಗಮನಾಥನೆಂಬ ಭಾವ ಬಸವಣ್ಣಂಗಾಯಿತಲ್ಲದೆ, ಎನಗೆ ಆ ಭಾವವಿಲ್ಲ ನೋಡಾ' ಎಂದಿದ್ದಾನೆ. 'ಲಿಂಗದಲ್ಲಿ ಒಂದಾಗಿ ನಿಜವಾದ ಶರಣತತ್ವದಂತೆ ಬದುಕುತ್ತಿರುವವರನ್ನು ಕಂಡರೆ ಮಾತ್ರ ಅವರನ್ನು ನಂಬಿ, ನೆಚ್ಚಿ ಅವರ ಪಾದಕ್ಕೆ ನಮಸ್ಕರಿಸುತ್ತೇನೆ. ಅಂಥವರು ಕಂಡರೆ ನನಗೆ ಅವರ ಕೃಪೆಯಾಯಿತಲ್ಲ, ದರುಶನ

ದೊರೆಯಿತಲ್ಲಾ ಎಂದು ಹಿಗ್ಗುತ್ತೇನೆ. ಅವರ ಶ್ರೀಪಾದಗಳಿಗೆ ಅಷ್ಟವಿಧಾರ್ಚನೆಯನ್ನು, ಷೋಡಶೋಪಚಾರವನ್ನು ಮಾಡಲು ನನ್ನ ಮನಸ್ಸು ಎಳಸುತ್ತದೆ. ಹಾಗಿಲ್ಲದೆ ಡೋಂಗಿ ಶಿವಭಕ್ತರನ್ನು ನಾನೆಂದೂ ಒಪ್ಪುವುದಿಲ್ಲ' ಎಂದಿದ್ದಾನೆ ಚನ್ನಬಸವಣ್ಣ.

ಬಸವಣ್ಣ ಚನ್ನಬಸವಣ್ಣನವರು ಪರಸ್ಪರ ಮೆಚ್ಚುಗೆಯುಳ್ಳವರು. ಇಬ್ಬರ ಗುರಿಯೂ ಒಂದೇ. ಆದರೆ ಕೆಲವೊಂದು ಅಂಶಗಳಲ್ಲಿ ಅಭಿಪ್ರಾಯ ಭೇದವಿರುತ್ತಿತ್ತು. ಆದರೂ ಅದು ಅವರ ಪ್ರೀತಿಗೆ ಕುಂದು ತರಲಿಲ್ಲ. ತಮ್ಮ ತಮ್ಮ ಮಾರ್ಗಗಳ, ನಂಬಿಕೆಗಳ ಮೂಲಕ ಇಬ್ಬರೂ ಒಂದೇ ಗುರಿಯ ಕಡೆಗೆ ಸಾಗುತ್ತಿದ್ದರು.

■

## ೧೫

ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು, ಹೆಣ್ಣು, ಮಣ್ಣಿಗೆ ಸತ್ತುದು ಕೋಟಿ
ಗುಹೇಶ್ವರ, ನಿಮಗಾಗಿ ಸತ್ತವರಾರನೂ ಕಾಣೆ.

–ಅಲ್ಲಮಪ್ರಭು

ಲೋಕದಲ್ಲಿ ಜನರು ಆಸೆ–ಆಮಿಷಗಳ ಬೆನ್ನುಹತ್ತಿ, ತಮ್ಮ ಆಸೆಗಳನ್ನು ಈಡೇರಿಸಕೊಳ್ಳಲು, ಬೇಕಾದಷ್ಟು ಕಷ್ಟಪಡುತ್ತಾರೆ. ಬೆಂದು ಬಸವಳಿದು ದುಡಿಯುತ್ತಾರೆ. ಆದರೆ ಇವೆಲ್ಲಕ್ಕಿಂತ ಮಿಗಿಲಾದ ಪರಮಾತ್ಮನ ಸಲುವಾಗಿ ಯಾರೂ ದಣಿವು ಮಾಡಿಕೊಳ್ಳುವುದಿಲ್ಲ, ಸಾಯುವುದಿಲ್ಲ ಎಂಬ ಮಾತನ್ನಿಲ್ಲಿ ಅಲ್ಲಮಪ್ರಭು ತಿಳಿಸಿದ್ದಾರೆ.

ಜಗತ್ತಿನ ಇತಿಹಾಸವನ್ನು ನೋಡಿದರೆ, ಶತಮಾನಗಳಿಂದಲೂ ಕೋಟ್ಯಂತರ ಜನ ಆಸೆ–ಆಮಿಷಗಳಿಗೆ ಬಲಿಯಾಗಿ ತೊಳಲಾಟಕ್ಕೆ ಒಳಗಾಗಿದ್ದಾರೆ. ಕೋಟಿ, ಕೋಟಿ ಮಾನವರು ನಾಶವಾಗಿದ್ದಾರೆ. ಹೊನ್ನು ಪಡೆಯಲೆಂದು ಸತ್ತವರೆಷ್ಟೋ ಮಂದಿ. ಹೆಣ್ಣಿನ ಮೋಹದಲ್ಲಿ ರಾಜ್ಯ, ರಾಜ್ಯಗಳಿಗೆ, ದೇಶ–ದೇಶಗಳಿಗೆ ಯುದ್ಧವಾಗಿ ಮಡಿದವರಿಗೆ ಲೆಕ್ಕವಿಲ್ಲ. ರಾಜ್ಯ ವಿಸ್ತರಿಸಲೆಂದು, ತಮ್ಮ ಆಸ್ತಿ ಹೆಚ್ಚಿಸಿಕೊಳ್ಳಲೆಂದು ನಡೆದಿರುವ ಬಡಿದಾಟಗಳಿಗೆ ಮಿತಿಯಿಲ್ಲ. ಆ ಬಡಿದಾಟದಲ್ಲಿ ಕೋಟಿ, ಕೋಟಿ ಜನ ಪ್ರಾಣ ಕಳೆದುಕೊಂಡಿದ್ದಾರೆ. ಇದನ್ನು ನೋಡಿದ ಪ್ರಭುದೇವರು, ನಶ್ವರವಾದ ಈ ಹೊನ್ನು, ಹೆಣ್ಣು, ಮಣ್ಣಿಗೆ ಮನುಷ್ಯ ವ್ಯರ್ಥವಾಗಿ ಜೀವ ತೆರುತ್ತಾನೆ. ಆದರೆ ಶಾಶ್ವತವಾದ ಪರಮಸುಖವನ್ನು ಕೊಡುವ ಪರಮಾತ್ಮನ ಬಗೆಗೆ ಮಾನವನ ಆಸೆ

ಇಲ್ಲವಲ್ಲ ಎಂದು ದುಃಖಿಸಿದ್ದಾರೆ. ಹೊನ್ನು, ಹೆಣ್ಣು, ಮಣ್ಣಿಗಾಗಿ ಬಡಿದಾಡುತ್ತಾ ಜೀವ ಕಳೆದುಕೊಳ್ಳುವ ಬದಲು, ಆನಂದಮಯನಾದ ಭಗವಂತನ ಕಡೆಗೆ ಆಸೆಯನಿರಿಸಿಕೊಂಡು, ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳ ಬೇಕೆಂಬುದು ಪ್ರಭುದೇವರ ಅಭಿಲಾಷೆ.

ಹೊನ್ನು ಹೆಣ್ಣು ಮಣ್ಣನ್ನು ಶರಣರು ಸಂಪೂರ್ಣ ತ್ಯಾಜ್ಯ ಮಾಡಿ ಜೀವನ ಸಾಗಿಸಬೇಕೆಂದು ಎಲ್ಲರಿಗೂ ಪ್ರತಿಪಾದಿಸುವುದಿಲ್ಲ. ಅವುಗಳನ್ನು ಸಹ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಬಳಸಿಕೊಳ್ಳಿರೆಂದು ಹೇಳುತ್ತಾರೆ. ಸಂಪೂರ್ಣ ತ್ಯಾಜ್ಯಮಾಡಿದ ಪ್ರಭುದೇವ, ಅಕ್ಕಮಹಾದೇವಿ, ಬೊಂತಾದೇವಿಯಂತಹವರೂ ಶರಣರಲ್ಲಿ ಇದ್ದಾರೆ. ಆದರೆ ಇಂತಹ ಸಾಧನೆ ಎಲ್ಲರಿಗೂ ಸಾಧ್ಯವಿಲ್ಲ. ಆದುದರಿಂದ ಅವುಗಳನ್ನೂ ಸಹ ಭಗವಂತನ ಒಲುಮೆ ಪಡೆಯಲು ಉಪಯೋಗಿಸಿಕೊಳ್ಳಬೇಕು. ಸತ್ಯಶುದ್ಧ ಜೀವನ ಬಾಳಬೇಕೆಂಬುದು ಸಾಮಾನ್ಯರಿಗೆ ಶರಣ ಸಂದೇಶ.

■

## ೧೬

ಆಡಿದಡೇನು, ಹಾಡಿದಡೇನು, ಓದಿದಡೇನು,
ತ್ರಿವಿಧ ದಾಸೋಹವಿಲ್ಲದನ್ನಕ್ಕ?
ಆಡದೆ ನವಿಲು, ಹಾಡದೆ ತಂತಿ? ಓದದೆ ಗಿಳಿ?
ಭಕ್ತಿ ಇಲ್ಲದವರನೊಲ್ಲ ಕೂಡಲಸಂಗಮದೇವಾ.

–ಬಸವಣ್ಣ

ಭಕ್ತಿ, ಜ್ಞಾನ, ವೈರಾಗ್ಯಗಳಿಲ್ಲದೆ ದೇವರ ಕೀರ್ತನೆ ಹಾಡಿದರೇನು, ಸಹಸ್ರನಾಮ ಓದಿದರೇನು? ಭಜನೆ ಮಾಡುತ್ತಾ ಕುಣಿದಾಡಿದರೆ ಏನು? ಆಡಿದರೇನು, ಹಾಡಿದರೇನು, ಓದಿದರೇನು? ಪಕ್ಷಿಯಾದ ನವಿಲೂ ಕುಣಿಯುತ್ತದೆ (ಆಡುತ್ತದೆ). ಸಂಗೀತ ವಾದ್ಯಗಳಿಗೆ ಜೋಡಿಸಿರುವ ತಂತಿಯೂ ಹಾಡುತ್ತದೆ. ಗಿಳಿಯು ನಾವು ಹೇಳಿದ ಪಾಠವನ್ನು ಒಪ್ಪಿಸುತ್ತದೆ. ಅಂದ ಮಾತ್ರಕ್ಕೆ ಅದು ದೇವರನ್ನು ಭಕ್ತಿಯಿಂದ ನುತಿಸುವ ನರ್ತನವಾದೀತೆ? ಭಕ್ತಿಯಲ್ಲಿ ತಲ್ಲೀನವಾಗಿ ಮಮರೆತು ಹಾಡುವ ನಾಮಪಠನವಾದೀತೆ? ಈ ಆಡು, ಹಾಡು ಓದುಗಳು ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿ ಭಗವಂತನ ಧ್ಯಾನದಲ್ಲಿ ತನ್ನನ್ನೇ ತಾನು ಮರೆತು ಹೊಮ್ಮಿದ ನರ್ತನ, ಸಂಗೀತ, ಜಪಗಳಾದಾಗ ಮಾತ್ರ ಅವು ದೇವರನ್ನು ಮುಟ್ಟಬಲ್ಲವು. ಇಲ್ಲದಿದ್ದಲ್ಲಿ ನವಿಲಿನ ನರ್ತನದಂತೆ, ತಂತಿಯ ಹಾಡಿನಂತೆ, ಗಿಳಿಯ ಓದಿನಂತೆ ಅಷ್ಟಷ್ಟಕ್ಕೇ

ಸೀಮಿತ, ಯಾಂತ್ರಿಕ, ದೇವರ ತನಕ ಮುಟ್ಟಲಾರವು. ಏಕೆಂದರೆ, ಭಕ್ತಿ ಇಲ್ಲದವರನ್ನು ಕೂಡಲಸಂಗಮದೇವನು ಒಲ್ಲ. ಅವನಿಗೆ ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕೂಡಿದ ಪ್ರಾರ್ಥನೆ, ಪೂಜೆ, ಭಜನೆ ಬೇಕೇ ಹೊರತು ಬಾಹ್ಯದ ಆಡಂಬರದ, ನಟನೆಯ ಪೂಜೆಗಳಲ್ಲ, ಪ್ರಾರ್ಥನೆಗಳಲ್ಲ, ಮಂತ್ರಪಠನವಲ್ಲ ಎಂಬ ಅಂಶವನ್ನು ಬಸವಣ್ಣ ಹೃದಯಗಮ್ಯವಾಗುವಂತೆ ಈ ವಚನದಲ್ಲಿ ಚಿತ್ರಿಸಿದ್ದಾರೆ.

■

## ೧೭

ಆವ ಕಾಯಕವ ಮಾಡಿದಡೂ ಒಂದೇ ಕಾಯಕವಯ್ಯಾ
ಆವ ವ್ರತವಾದರೂ ಒಂದೇ ವ್ರತವಯ್ಯಾ
ವ್ರತ ತಪ್ಪಿದಡೆ ಕೂಡಲಿಲ್ಲ
ಕಾಕಪಿಕದಂತೆ ಕೂಡಲು ನಾಕ ನರಕ
ಗಂಗೇಶ್ವರ ಲಿಂಗದಲ್ಲಿ.

–ಗಂಗಮ್ಮ

ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರನ ಬೋಧೆಯ ಪ್ರಭಾವಕ್ಕೆ ಸಮಾಜದ ಎಲ್ಲ ಸ್ಥರದ, ಎಲ್ಲ ರೀತಿಯ ಜನರೂ ಒಳಗಾದರು. ಅದರಂತೆಯ ಹಾದರದವೃತ್ತಿಯನ್ನು ಮಾಡಿಕೊಂಡು ಬದುಕುತ್ತಿದ್ದ ಜನರು ಈಗಿನಂತೆ ಆಗಲೂ ಇದ್ದಿರಬಹುದು. ಎಲ್ಲಾ ಮನುಷ್ಯರಿಗೂ ಪ್ರಾಣಿತನದಿಂದ ಮೇಲೇರುವುದು ಸುಲಭವಲ್ಲ. ಹಾಗಾಗಿ ಅಂದಿನಂದ ಇಂದಿನವರೆಗೂ, ಬೇಕಾದಷ್ಟು ಮಹಿಮಾಪುರುಷರು ಬೋಧನೆ ಮಾಡಿದರೂ, ಸಾಕಷ್ಟು ಶಿಕ್ಷಣ ಕೊಟ್ಟರೂ, ಅವೆಲ್ಲಾ ಇಡೀ ಸಮಾಜವನ್ನು ಎಚ್ಚರಿಸಲು ಇಂದಿನವರೆಗೂ ಸಾಧ್ಯವಾಗಿಲ್ಲ. ಹಾಗಾಗಿ ಇಂದೂ ಅಂದೂ ಎಲ್ಲ ತರಹೆ ಜನರು ಇದ್ದಾರೆ, ಇದ್ದರು ಎಂಬುದನ್ನು ನಾವು ಮರೆಯಲಾಗದು. ತಿಳಿವಳಿಕೆಯ ಮಟ್ಟದಲ್ಲಿ ಬದುಕಿನ ರೀತಿಯಲ್ಲಿ, ಸಂಸ್ಕಾರದಲ್ಲಿ ಅತ್ಯಂತ ಕೆಳಗಿರುವವರನ್ನು ಭಕ್ತ ಅಥವಾ ಶರಣಮಟ್ಟಕ್ಕೆ ಏರಿಸುವುದು ಅಷ್ಟು ಸುಲಭದ ಮಾತಲ್ಲ. ಅವರ ಕೃತ್ಯಗಳನ್ನು ಹೀಯಾಳಿಸಿ ಅಂಥವರನ್ನು ತಿದ್ದಲು ಸಾಧ್ಯವಿಲ್ಲ. ಹಾಗಾಗಿ ಬಸವೇಶ್ವರರು ಅವರಿದ್ದ ಸ್ಥಿತಿಯಲ್ಲಿಯೇ ಅವರನ್ನು ಒಪ್ಪಿಕೊಂಡಿದ್ದಾರೆ. ಆದರೆ ಕೆಲವೊಂದು ನಿಯಮಗಳಿಗೆ ಅನುಸರಿಸಿ ನಡೆಯಬೇಕು. ಕಾಯಕವು ಸತ್ಯ–ಶುದ್ಧವಾಗಿರಬೇಕು. ಆವ ಕಾಯಕವಾದರೂ ಸರಿ ಎಂಬ ಬೋಧನೆಯಿಂದ, ಯಾವುದೇ ಕಾಯಕ ಹಿಡಿದಿದ್ದರೂ ಅವರು ತಮ್ಮಷ್ಟಕ್ಕೇ ತಾವೇ

ಯೋಚಿಸಿ ಅರಿತು ತಿದ್ದಿಕೊಳ್ಳುವಂತೆ ಮಾಡಿದರು. ಹಾಗಾಗಿ ಹಾದರದ ಕಾಯಕದ ಗಂಗಮ್ಮನೂ ಬಸವ ಪ್ರಭಾವಕ್ಕೆ ಒಳಗಾಗಿ ತನ್ನನ್ನು ತಾನೆ ತಿದ್ದಿಕೊಂಡಿದ್ದಾಳೆಂಬುದು ಈ ವಚನದಿಂದ ತಿಳಿಯುತ್ತದೆ. ಸಿಕ್ಕ ಸಿಕ್ಕವರೊಡನೆ ಸಂಬಂಧ ನರಕ ಸದೃಶ. ತನ್ನಂತೆಯೇ ವ್ರತನಿಷ್ಠನಾದ ಶರಣನಾದವನ ಕೂಡ ಸಂಬಂಧಮಾಡಬೇಕೇ ಹೊರತಾಗಿ, ವ್ರತ ತಪ್ಪಿ, ಬೇಜವಾಬ್ದಾರಿಯ ಕ್ಷುಲ್ಲಕ ಜನರ ಸಹವಾಸ ಮಾಡಿದರೆ ಅದು ಕಾಗೆ–ಕೋಗಿಲೆಯ ಸಂಬಂಧವಾದಂತೆ ಎಂದು ಹೇಳಿದ್ದಾಳೆ. ಇಂತಹ ತಿಳಿವಳಿಕೆಯನ್ನು ಒಬ್ಬ ಹಾದರ ಕಾಯಕದ ಶರಣೆ ಪಡೆದು, ತನ್ನನ್ನು ತಾನು ನಿಯಂತ್ರಿಸಿಕೊಳ್ಳುವಂತಹ ತಿಳಿವಳಿಕೆ ಮೂಡಿಸಿದ್ದೊಂದು ಬಸವ ಪವಾಡವೇ ಸರಿ. ■

## ೧೮

ಆಸೆಯೆಂಬುದು ಅರಸಿಂಗಲ್ಲದೆ,
ಶಿವಭಕ್ತರಿಗುಂಟೆ ಅಯ್ಯಾ?
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ?
ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ
ಮಾರಯ್ಯಪ್ರಿಯ ಲಿಂಗಕ್ಕೆ ದೂರ ಮಾರಯ್ಯಾ.

–ಆಯ್ದಕ್ಕಿ ಲಕ್ಕಮ್ಮ

ಆಯ್ದಕ್ಕಿ ಮಾರಯ್ಯ ಮತ್ತು ಲಕ್ಕಮ್ಮ ಶರಣ ದಂಪತಿಗಳು. ಮಾರಯ್ಯನವರು ಬೆಳಿಗ್ಗೆ ತಮ್ಮ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ದಿನವೂ ಒಂದೊಂದು ಓಣಿಗೆ ಹೋಗಿ, ಓಣಿಯ ಜನರು ಬಿಸಾಡಿರಬಹುದಾದ ಧಾನ್ಯವನ್ನು ವ್ಯರ್ಥವಾಗಲು ಬಿಡದೆ ಒಂದೊಂದನ್ನೇ ಆರಿಸಿ, ಅಂದು ಎಷ್ಟು ಸಿಕ್ಕುತ್ತ ಅಷ್ಟನ್ನೂ ತರಬೇಕು. ಆಮೇಲೆ ಲಕ್ಕಮ್ಮ ಅದನ್ನು ಅಡಿಗೆ ಮಾಡಿ ಅಮರೇಶ್ವರ ಲಿಂಗಕ್ಕೆ ನೈವೇದ್ಯ ಮಾಡಬೇಕು. ನಂತರ ಆ ಪ್ರಸಾದವನ್ನು ಜಂಗಮಕ್ಕರ್ಪಿಸಿ ತಾವಿಬ್ಬರೂ ಸೇವಿಸಬೇಕು. ಇದು ಅವರ ಕಾಯಕ. ಎಂದಿನಂತೆ ಒಂದು ದಿನ ಬಸವಣ್ಣನವರ ಓಣಿಗೆ ತಮ್ಮ ಕಾಯಕದ ನಿಮಿತ್ತ ಹೋಗುತ್ತಾರೆ ಮಾರಯ್ಯ. ಬಸವಣ್ಣ ಪರೀಕ್ಷಿಸಲೆಂದೋ, ಅವರಿಗೆ ಅನುಕೂಲವಾಗಲಿ ಎಂದೋ ಬೇಕಂತಲೇ ಹೆಚ್ಚಾಗಿ ಅಕ್ಕಿಯನ್ನು ತಮ್ಮ ಅಂಗಳದಲ್ಲಿ ಚೆಲ್ಲಿಸಿರುತ್ತಾರೆ. ಬೇಕಾದಷ್ಟು ಚೆಲ್ಲಿದ ಅಕ್ಕಿಯನ್ನು ನೋಡಿ ದೊಡ್ಡ ಗಂಟಿನಷ್ಟು ಅಕ್ಕಿಯನ್ನು ತರುತ್ತಾರೆ ಮಾರಯ್ಯ. ದೂರದಿಂದಲೇ ಬಾಗಿಲಲ್ಲಿ ನಿಂತಿದ್ದ ಲಕ್ಕಮ್ಮ ಇಷ್ಟೊಂದು ಅಕ್ಕಿ ಏಕೆ ತಂದಿರಿ; ಎಲ್ಲಿಂದ ತಂದಿರಿ, ಎಂದು ಪ್ರಶ್ನಿಸುತ್ತಾಳೆ.

ಆಗ ಮಾರಯ್ಯ ಇದ್ದ ವಿಚಾರ ತಿಳಿಸಿ, ದಾಸೋಹ ಮಾಡಿದರಾಯ್ತು, ಶರಣರನ್ನೆಲ್ಲ ಊಟಕ್ಕೆ ಕರೆದರೆ ಆಯ್ತು ಎಂದು ಹೇಳಿದಾಗ, ಲಕ್ಕಮ್ಮ ನಮಗೆ ಅದೆಲ್ಲಾ ಬೇಡ, ನಮಗೆ ದಿನವೂ ತರುತ್ತಿದ್ದಷ್ಟೇ ಸಾಕು ಉಳಿದುದನ್ನು ಹಿಂತಿರುಗಿ ಅಲ್ಲೇ ಚೆಲ್ಲಿ ಬನ್ನಿ ಎನ್ನುತ್ತಾಳೆ. ಆಗ ಮಾರಯ್ಯನವರಿಗೆ ಸಿಟ್ಟು ಬರುತ್ತದೆ. 'ಏನೋ ಒಂದು ಸಾರಿ ಶರಣರನ್ನೆಲ್ಲಾ ಊಟಕ್ಕೆ ಕರೆಯಬೇಕೆಂಬ ಆಸೆಯಿಂದ ಸ್ವಲ್ಪ ಅಕ್ಕಿ ಹೆಚ್ಚು ತಂದುದಕ್ಕೆ ಇಷ್ಟು ರಾದ್ಧಾಂತವೆ? ನನಗೆ ಬುದ್ಧಿ ಹೇಳಲು ಬರುವೆಯಾ' ಎಂದು ಸಿಟ್ಟಿಗೇಳುತ್ತಾರೆ. ಶಿವಶರಣನಾದ ಮಾರಯ್ಯ, ಶರಣರಿಗೆ ಅನುಗುಣವಾದ ನಡೆ-ನುಡಿಯನ್ನು ಬಿಟ್ಟು ಸಾಮಾನ್ಯನಂತೆ ವರ್ತಿಸುವುದನ್ನು ನೋಡಿ, ಈ ವಚನವನ್ನು ಲಕ್ಕಮ್ಮ ಹೇಳಿದಂತೆ ತರುತ್ತದೆ. 'ಆಸೆಯೆಂಬುದು ಅರಸರಿಗೆ ಇದ್ದರೆ ಅಡ್ಡಿ ಇಲ್ಲ, ಶಿವಶರಣರಿಗೆ ಇರಬಾರದು. ಸಿಟ್ಟು ಮಾಡುವವನು ಯಮದೂತ. ಅಂತಹುದರಲ್ಲಿ ನೀವು ಯಮದೂತರಂತೆ ಸಿಟ್ಟುಗೊಳ್ಳಬಹುದೆ? ನಾಲ್ಕು ಕಾಳು ಅಕ್ಕಿಗೆ ಆಸೆಮಾಡಿ ನಿಮ್ಮ ಶರಣ ಜೀವನಕ್ಕೆ ಅವಮಾನ ಮಾಡಿಕೊಳ್ಳುತ್ತಿದ್ದೀರಲ್ಲ. ಈಸಕ್ಕಿಗೆ ಆಸೆಪಡುವ ಕೆಳಮಟ್ಟಕ್ಕೆ ಏಕೆ ಹೋದಿರಿ? ದೇವರು ಇಂತಹ ಕಾರ್ಯವನ್ನು ಮೆಚ್ಚುವುದಿಲ್ಲ. ಈ ರೀತಿ ಆಸೆಯಿಂದ ತಂದು ಮಾಡಿದ ನೈವೇದ್ಯವನ್ನು ದೇವರು ಸ್ವೀಕರಿಸುವುದಿಲ್ಲ' ಎಂದು ಹೇಳುತ್ತಾಳೆ. ಈ ಮಾತುಗಳನ್ನು ಲಕ್ಕಮ್ಮನು ಮಾರಯ್ಯನವರಿಗೆ ಹೇಳಿದ್ದರೂ, ಇಲ್ಲಿಯ ಬೋಧೆಯ ಅಂಶಗಳು (ಎಂದರೆ, ಶಿವಶರಣರಿಗೆ ಅರಸು ಮತ್ತು ಯಮದೂತರ ಲಕ್ಷಣವಾದ ಆಸೆ, ಸಿಟ್ಟುಗಳು ಇರಬಾರದು ಮತ್ತು ಇವು ಕಾಯಕ ತತ್ವಕ್ಕೆ ವಿರೋಧ) ಎಂದು ಶರಣಮಾರ್ಗದಲ್ಲಿ ಹೋಗುವವರೆಲ್ಲರಿಗೂ ದಾರಿದೀಪವಾಗಿವೆ.

■

## ೧೯

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಸೂಸುವ ವಾಯು ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬ ಹೇಳಾ ರಾಮನಾಥ.

–ಜೇಡರ ದಾಸಿಮಯ್ಯ

ಮನುಷ್ಯನು ಬದುಕಲು ಭೂಮಿ, ಆಹಾರ, ಗಾಳಿ, ನೀರು ಮೂಲಭೂತ ಅವಶ್ಯಕಗಳು. ಅವನು ಜೀವಂತ ಬದುಕಬೇಕಾದರೆ ವಾಸಿಸಲು ಮನೆ (ಭೂಮಿ) ಬೇಕು. ತಿನ್ನಲು ಆಹಾರ (ಬೆಳೆ) ಬೇಕು. ಸೇವಿಸಲು ಗಾಳಿ (ವಾಯು) ಬೇಕು.

ಎಲ್ಲವನ್ನು ದೇವರು ಜೀವಿಗಳಿಗಾಗಿ ದಾನವಾಗಿ ಕರುಣಿಸಿದ್ದಾನೆ. ಭೂಮಿಯ ಮೇಲೆ ಬೆಳೆದ ಆಹಾರವನ್ನು ಸೇವಿಸುತ್ತಾ, ಪ್ರಾಣವಾಯುವನ್ನು ಉಸಿರಾಟಕ್ಕೆ ಬಳಸಿಕೊಳ್ಳುತ್ತಾ, ಜೀವಜಲವನ್ನು ಕುಡಿಯುತ್ತಾ ಮನುಷ್ಯ ಬದುಕುತ್ತಿದ್ದಾನೆ. ಇವುಗಳನ್ನು ದೇವರು ದಯಪಾಲಿಸದಿದ್ದರೆ, ಭೂಮಿಯ ಮೇಲೆ ಮನುಷ್ಯನ ಇರುವಿಕೆಯೇ ಸಾಧ್ಯವಾಗುತ್ತಿರಲಿಲ್ಲ.

ಜೀವನಾವಶ್ಯಕ ವಸ್ತುಗಳನ್ನು ವರವಾಗಿ ಇತ್ತಿರುವ ದೇವರಿಗೆ ಮನುಷ್ಯ ಕೃತಜ್ಞನಾಗಿರಬೇಕು. ಆದರೆ ಜನಸಾಮಾನ್ಯರಿಗೆ ಇದರ ಪರಿವೆಯೇ ಇಲ್ಲ. ತನ್ನಂತಿರುವ ಮನುಜರು ನಾಲ್ಕು ಕಾಸನ್ನೋ ಬಿರುದು ಬಾವಲಿಗಳನ್ನೋ, ಸ್ಥಾನ ಮಾನವನ್ನೋ ಕೊಟ್ಟುಬಿಟ್ಟರೆ ಸಾಕು. ಅವನನ್ನು ಈ ಜನರು ನಾನಾ ವಿಧವಾಗಿ ಬಣ್ಣಿಸುತ್ತಾರೆ, ಹೊಗಳುತ್ತಾರೆ, ಕೃತಜ್ಞತೆ ತೋರಿಸುತ್ತಾರೆ. ಇಂತಹ ಅವಿವೇಕದ ಮಾನವರನ್ನು ನೋಡಿ ಜೇಡರ ದಾಸಿಮಯ್ಯನಿಗೆ ಸಿಟ್ಟು ಬರುತ್ತದೆ. ಆ ಸಿಟ್ಟಿನಲ್ಲಿ ದೇವರಿಗೆ ಕೃತಜ್ಞತೆ ತೋರಿಸಿದ ಕೃತಘ್ನರನ್ನು 'ಕುನ್ನಿ'ಗಳೆಂದು ಕರೆದಿದ್ದಾನೆ. ದೇವರನ್ನು ಕೊಂಡಾಡುವ ಬದಲು, ದೇವರ ಕೃಪೆಯಿಂದ ತನ್ನಂತೆ ಬದುಕುವ ಒಬ್ಬ ಸಾಮಾನ್ಯ ಮನುಷ್ಯನನ್ನು ಹೊಗಳುವ, ನಾಯಿ ಮರಿಯಂತಿರುವ ಕ್ಷುಲ್ಲಕರಿಗೆ ಏನು ಹೇಳಬೇಕೆಂದು ಸಿಟ್ಟಿಗೆದ್ದಿದ್ದಾನೆ.

ಒಟ್ಟಿನಲ್ಲಿ, ನಮ್ಮ ಬದುಕಿಗೆ ಅಗತ್ಯವಾದುದು ಯಾರ ಹಂಗಿಲ್ಲದೆ ತಾನೇ ತಾನಾಗಿ ದೊರೆಯುವಂತೆ ಮಾಡಿರುವ ಭಗವಂತನಿಗೆ ನಾವು ಕೃತಜ್ಞತೆ ತೋರಬೇಕು ಎಂಬುದು ದಾಸಿಮಯ್ಯನ ಅಪೇಕ್ಷೆ.

ನಮ್ಮ ಹಿರಿಯರಲ್ಲಿ ಭೂಮಿ, ಮರ, ನೀರು, (ಬಾವಿ, ನದಿ) ಬೆಳೆ ಇವುಗಳನ್ನು ಪೂಜೆಮಾಡುವ ಸಂಪ್ರದಾಯವಿತ್ತು. ಬಹುಶಃ ಅದು ಅವರು ಕೃತಜ್ಞತೆ ತೋರುವ ರೀತಿ. ಆದರೆ ಮನುಷ್ಯ ಅವನ್ನೇ ಪೂಜಿಸುವುದಕ್ಕಿಂತ ಅವನ್ನೆಲ್ಲಾ ಕರುಣಿಸಿದ ಭಗವಂತನನ್ನು ಪೂಜಿಸಬೇಕು ಎಂಬುದು ಮುಖ್ಯ.

■

## ೨೦

ಇದನರಿದು ಗುರು ಕೊಟ್ಟ ಲಿಂಗದಲ್ಲಿಯೆ ಎಲ್ಲಾ ತೀರ್ಥಂಗಳೂ
ಎಲ್ಲಾ ಕ್ಷೇತ್ರಂಗಳೂ ಇದ್ದಾವೆಂದು ಭಾವಿಸಿ ಮುಕ್ತರಪ್ಪುದಯ್ಯಾ.
ಇಂತಲ್ಲದೆ ಗುರುಕೊಟ್ಟ ಲಿಂಗವ ಕಿರಿದುಮಾಡಿ

ತೀರ್ಥಲಿಂಗವ ಹಿರಿದುಮಾಡಿ ಹೋದಾತಂಗೆ
ಅಘೋರ ನರಕ ತಪ್ಪದು ಕಾಣಾ, ಚನ್ನಮಲ್ಲಿಕಾರ್ಜುನಾ.

–ಅಕ್ಕಮಹಾದೇವಿ

ದೇವರ ದರ್ಶನಕ್ಕಾಗಿ ಜನರು ತೀರ್ಥಕ್ಷೇತ್ರಗಳಿಗೆ ಹೋಗುವ ವಾಡಿಕೆ ಇದೆ. ಬೇರೆಲ್ಲೋ ದೇವರನ್ನು ಹುಡುಕಿಕೊಂಡು ಹೋಗುವುದಾದರೆ ಕೈಲಿರುವ ಲಿಂಗವಿರುವುದೇತಕ್ಕೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹಾಗಾದರೆ ಇಷ್ಟಲಿಂಗಕ್ಕೆ ಕರುಣಿಸುವ ಶಕ್ತಿ ಇಲ್ಲವೆ? ಅದನ್ನು ಪಡೆಯಲು ಬೇರೆಲ್ಲಿಗಾದರೂ ಹೋಗಬೇಕಾದರೆ ಇಷ್ಟಲಿಂಗ ಪೂಜಿಸಲೇತಕ್ಕೆ ಎಂಬ ಭಾವನೆ ಉದಯವಾಗುವುದು ಸಹಜ.

ಅದಕ್ಕೆ ಉತ್ತರವೆಂಬಂತೆ ಅಕ್ಕಮಹಾದೇವಿಯು, ಗುರುಕರುಣಿಸಿದ ಇಷ್ಟಲಿಂಗದಲ್ಲಿಯೇ ಎಲ್ಲಾ ತೀರ್ಥಕ್ಷೇತ್ರಗಳು ಇವೆಯೆಂದು ಭಾವಿಸಿ, ಪೂಜಿಸಿ, ಧ್ಯಾನಿಸಿ ಮುಕ್ತಿಯನ್ನು ಪಡೆಯಿರಿ. ಅದು ಬಿಟ್ಟು ಇಷ್ಟಲಿಂಗವನ್ನು ಸಣ್ಣದು ಮಾಡಿ, ತೀರ್ಥಕ್ಷೇತ್ರದಲ್ಲಿರುವ ಲಿಂಗವೇ ದೊಡ್ಡದೆಂದು ಗ್ರಹಿಸಿ, ಹೋಗುವವನು ಪರಮ ಪಾತಕಿ, ಅವನಿಗೆ ಘೋರವಾದ ನರಕ, ತಪ್ಪಿದ್ದಲ್ಲವೆಂದು ಹೇಳಿದ್ದಾಳೆ. ಆದುದರಿಂದ ಬೇರೆ ಕ್ಷೇತ್ರಕ್ಕೆ ಮುಕ್ತಿಪಡೆಯುವ ಉದ್ದೇಶದಿಂದ ಹೋಗಬೇಕಾಗಿಲ್ಲ. ಮನೆಯಲ್ಲೇ ಇಷ್ಟಲಿಂಗವನ್ನು ನಿಶ್ಚಲ ಮನಸ್ಸಿನಿಂದ ಅರ್ಚಿಸಿ, ಮುಕ್ತಿ ಪಡೆಯಲು ಸಾಧ್ಯ ಎಂಬ ಅಂಶವನ್ನು ಅಕ್ಕಮಹಾದೇವಿ ನಮಗೆಲ್ಲಾ ಈ ವಚನದ ಮೂಲಕ ತಿಳಿಸಿದ್ದಾಳೆ.

■

## ೨೧

ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವವು ದೋಷಂಗಳು,
ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು.
ಸತಿಪತಿ ರತಿಸುಖವ ಬಿಟ್ಟರೆ ಸರಿಯಾಳ ಚಂಗಳೆಯರು?
ಸತಿಪತಿ ರತಿಸುಖೋಪಭೋಗೋಪಭೋಗ ವಿಳಾಸವನು
ಬಿಟ್ಟನೆ ಸಿಂಧು ಬಲ್ಲಾಳನು.
ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದರೆ
ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ

–ಬಸವಣ್ಣ

ದೇವರ ಸಾಕ್ಷಾತ್ಕಾರದ ಇಚ್ಛೆ ಇದ್ದವರು ಇಂದ್ರಿಯಗಳನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಅವುಗಳ ಅಂಕಿತಕ್ಕೆ ತಾನು ಒಳಗಾಗುವಂತಹ ಮನೋಭಾವವಿರಬಾರದು. ಪಂಚೇಂದ್ರಿಯಗಳನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುವುದು ಅಷ್ಟು ಸುಲಭವಲ್ಲ. ಅಲ್ಲಮ, ಬಸವಣ್ಣ, ಚನ್ನಬಸವಣ್ಣ, ಅಕ್ಕಮಹಾದೇವಿಯಂತಹ ಶರಣರಿಗೆ ಸುಲಭ ಸಾಧ್ಯವಾದರೂ, ಸಾಮಾನ್ಯರಿಗೆ ಸುಲಭವಲ್ಲ. ಸತತ ಪ್ರಯತ್ನದಿಂದ ಕಾಲಾನುಕ್ರಮವಾಗಿ ಇಂದ್ರಿಯಗಳನ್ನು ಉದಾತ್ತೀಕರಿಸಿದರೆ, ಅಡ್ಡದಾರಿಗೆ ಹೋಗಲು ಪ್ರೇರೇಪಿಸುವ ಇಂದ್ರಿಯಗಳೇ, ಉತ್ತಮವಾಗಿ ಬದುಕಲು ಸತ್ಕಾರ್ಯಮಾಡಲು ಸಹಾಯಕವಾಗುವುದು. ಆದರೆ ಆ ಇಂದ್ರಿಯಗಳನ್ನು ಉದಾತ್ತೀಕರಿಸದೆ, ಬಲವಂತವಾಗಿ ಹತ್ತಿಕ್ಕಲು ಹೋದರೆ, ಅವು ಇನ್ನೂ ವಿಕೃತರೂಪ ತಾಳಿ, ಎಡಬಿಡದೆ ತಮ್ಮ ಆಸೆ ಪೂರೈಸಿಕೊಳ್ಳಲು ತೊಂದರೆಕೊಡುತ್ತವೆ. ಅನೇಕ ಸಾರಿ ತಪ್ಪುದಾರಿಗೂ ಎಳೆಯುತ್ತವೆ. ಅಂತಹವರು ಪರಸ್ತ್ರೀ, ಪರಧನವನ್ನು ಆಸೆಮಾಡುತ್ತಾರೆ. ಅದಕ್ಕಾಗಿ ಕೊಲೆ, ಸುಲಿಗೆ, ಹಿಂಸೆಗಳನ್ನು ಮಾಡಲೂ, ವಂಚನೆ, ಮೋಸಗೈಯ್ಯಲೂ ಹಿಂಜರಿಯುವುದಿಲ್ಲ. ಆದುದರಿಂದ ಇಂದ್ರಿಯಗಳನ್ನು ಬಲವಂತವಾಗಿ ನಿಗ್ರಹಿಸಲು ಹೋಗಬಾರದು. ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡು ಸ್ವಾತಿಕ ರೀತಿಯಲ್ಲಿ ಸಮಾಜ ಮತ್ತು ಆತ್ಮ ಮೆಚ್ಚುವ, ಒಪ್ಪುವ ರೀತಿಯಲ್ಲಿ ಇಂದ್ರಿಯ ಸುಖಗಳನ್ನು ಅನುಭವಿಸುತ್ತಾ, ಸತ್ಕಾರ್ಯಗಳನ್ನು ಮಾಡುತ್ತಾ, ಸತ್ಸಂಗ, ಸದ್ವಿಚಾರಗಳಲ್ಲಿ ಮನಸ್ಸನ್ನು ಇಟ್ಟುಕೊಂಡಿದ್ದರೆ ತಪ್ಪೇನಲ್ಲ. ಸಿಂಧುಬಲ್ಲಾಳರು, ಸಿರಿಯಾಳ – ಚಂಗಳೆಯರು ಗಂಡ ಹೆಂಡಿರಾಗಿ ದಾಂಪತ್ಯ ಜೀವನವನ್ನು ನಡೆಸುತ್ತಾ ರಾಜಭೋಗಗಳನ್ನು ಅನುಭವಿಸುತ್ತಲಿದ್ದರೂ ಶರಣಜೀವನವನ್ನು ಬಾಳಿದರು. ಭಗವಂತನ ಕೃಪೆಗೆ ಪಾತ್ರರಾಗಿ ಬದುಕಿದರು. ಆದರೆ, ಭಗವಂತನ ಕೃಪೆಯನ್ನು ಬಯಸಿ, ಪರಧನ, ಪರಸ್ತ್ರೀಯನ್ನು ಆಶಿಸಿದರೆ ಪರಮಾತ್ಮನೆಂದೂ ದೊರೆಯಲಾರ. ಅಂತಹ ಜನರಿಂದ ದೇವರು ಯಾವಾಗಲೂ ಬಲುದೂರ ಎಂಬ ಮಾತನ್ನು ಬಸವಣ್ಣನವರು ಸಂಸಾರ ಸುಖದಲ್ಲಿದ್ದು ಶರಣಜೀವನ ಬದುಕಿ, ಭಗವಂತನ ಕೃಪೆಗೆ ಪಾತ್ರರಾದ ಸಿಂಧುಬಲ್ಲಾಳ, ಸಿರಿಯಾಳ–ಚೆಂಗಳೆಯರ ಉದಾಹರಣೆಯ ಮೂಲಕ ತಿಳಿಹೇಳಿದ್ದಾರೆ. ಇಲ್ಲಿ ಶರಣ ಜೀವನಕ್ಕೆ ಸಂಸಾರ ತ್ಯಾಜ್ಯವಲ್ಲ ಎಂಬ ಶರಣ ಸಂದೇಶ ವ್ಯಕ್ತವಾಗಿದೆ.

■

## ೨೨

ಇಷ್ಟಲಿಂಗಕೆ ತೋರಿ ಮೃಷ್ಟಾನ್ನವ ಹೊಡೆವವರಿಗೆ
ನಿಮಗೆಲ್ಲಿಯದೋ ಇಷ್ಟಾರ್ಥ ಸಿದ್ಧಿ? ಅದೆಲ್ಲಿಹದೋ ಲಿಂಗ

ಅದೆಲ್ಲಿಹದೋ ಜಂಗಮ, ಅದೆಲ್ಲಿಹದೋ ಪ್ರಸಾದ–ಪಾದೋದಕ?
ಅಲ್ಲದ ಆಟವ ಮಾಡಿ, ಎಲ್ಲರೂ ಮುಂದುಗೆಟ್ಟರು ಗುಹೇಶ್ವರಾ.

–ಅಲ್ಲಮಪ್ರಭು

ನಮ್ಮಲ್ಲಿರುವ ಧನ, ಕನಕ, ವಸ್ತು, ವಾಹನ ಸಂಪತ್ತೆಲ್ಲವೂ ದೇವರ ಕೊಡುಗೆ. ಅವನ ಕೃಪೆಯಿಂದ ನಾವು ಪಡೆದಿರುತ್ತೇವೆ. ಆದುದರಿಂದ ನಾವು ಅದನ್ನು ಅನುಭವಿಸುವ ಅಥವಾ ಸೇವಿಸುವ ಮೊದಲು ಆ ದಯಾಮಯನಾದ ಭಗವಂತನಿಗೆ ಸಮರ್ಪಿಸಬೇಕು. ಈ ರೀತಿ ಭಕ್ತಿಭಾವದಿಂದ ಅರ್ಪಿಸಿ ಅನುಭವಿಸಿದರೆ ದೇವರಿಗೆ ತೃಪ್ತಿಯಾಗುತ್ತದೆ. ಆನಂದವಾಗುತ್ತದೆ. ಆಗ ಆ ದಯಾಮಯನು ನಾವು ಬೇಡಿದುದನ್ನು ನೀಡುತ್ತಾನೆ. ನಮ್ಮ ಇಷ್ಟಾರ್ಥಗಳು ಸಿದ್ಧಿಸುತ್ತವೆ. ಅಲ್ಲದೆ ನಾವು ಭಗವಂತನಿಗೆ ಅರ್ಪಿಸಿದ ಭಕ್ಷ್ಯ ಪ್ರಸಾದವಾಗುತ್ತದೆ; ಜಂಗಮನ ಪಾದವನ್ನು ತೊಳೆದ ಜಲ 'ಪಾದೋದಕ'ವಾಗುತ್ತದೆ ಎಂಬ ಧಾರ್ಮಿಕ ನಂಬುಗೆ ಇದೆ. ಆದರೆ ಸಾಮಾನ್ಯ ಜನರು, ತಾವು ನಿಜವಾದ ಅರ್ಥದಲ್ಲಿ ಭಕ್ತರಲ್ಲದಿದ್ದರೂ, ಸಮರ್ಪಣಾಭಾವವಿಲ್ಲದೆ, ಯಾಂತ್ರಿಕ ರೀತಿಯಲ್ಲಿ ಪರಂಪರೆಯ ನಂಬಿಕೆಯಂತೆ ನಡೆದುಕೊಳ್ಳುತ್ತಾರೆ. ದೇವರ ಹೆಸರಿನಲ್ಲಿ ತಮಗೆ ಬೇಕು ಬೇಕಾದ ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ, ತುಂಬುಮನದಿಂದ ಅದನ್ನು ದೇವರಿಗೆ ನೈವೇದ್ಯಮಾಡದೆ, ದೇವರ ಕಡೆಗೆ ಅದನ್ನು ತೋರಿಸಿ, (ತೋರಿಸಿದ ಮೇಲೆಯೇ ತಾವು ಊಟ ಮಾಡಬೇಕೆಂಬ ಪದ್ಧತಿಗನುಗುಣವಾಗಿ) ತಕ್ಷಣವೇ ಭಕ್ಷ್ಯಗಳನ್ನು ಚಪ್ಪರಿಸಿ ಹೊಡೆಯುತ್ತಾರೆ. ಅಲ್ಲಿ ಅವರಿಗೆ ಸಮರ್ಪಣಾ ಭಾವವಿರುವುದಿಲ್ಲ. ಆದುದರಿಂದ ಅಂತಹವರಿಗೆ ಇಷ್ಟಾರ್ಥ ಸಿದ್ಧಿಯಾಗುವುದಿರಲಿ, ಭಕ್ಷ್ಯ ಪ್ರಸಾದವಾಗುವುದಿಲ್ಲ. ಲಿಂಗಕ್ಕೂ ತೃಪ್ತಿಯಾಗುವುದಿಲ್ಲ. ಜಂಗಮಕ್ಕೂ ಸಂತೃಪ್ತಿ ಎನಿಸುವುದಿಲ್ಲ. ಗುರುವಿನ ಪಾದ ತೊಳೆದ ಜಲವು ಪಾದೋದಕವೂ ಆಗುವುದಿಲ್ಲ. ಈ ಉಂಡಾಡಿ ಜನರು ಪ್ರಸಾದ, ನೈವೇದ್ಯ, ಪಾದೋದಕಗಳ ಅರ್ಥವನ್ನು ತಮಗೆ ತಿಳಿದಂತೆ ಮಾಡಿಕೊಂಡು ಸರಿಯಲ್ಲದ ರೀತಿಯಲ್ಲಿ ಆಚರಣೆ ಮಾಡಿ, ದಾರಿ ತಪ್ಪಿ ಹೋಗುತ್ತಿದ್ದಾರೆ. ಅಂಥವರಿಗೆ ದೇವರ ಕೃಪೆ ಸಾಧ್ಯವೇ ಇಲ್ಲ ಎಂದು ಹೇಳಿದ್ದಾರೆ. ಹೀಗೆ ಯಾಂತ್ರಿಕವಾದ ನಡೆನುಡಿಗಳಿಂದ, ಎಲ್ಲರೂ ದಾರಿತಪ್ಪಿದ್ದಾರೆ. ಅಂತಹ ನಡೆ–ನುಡಿಗಳಿಂದ ಯಾವ ಪುರುಷಾರ್ಥವೂ ಇಲ್ಲ ಎಂದು ಅಲ್ಲಮಪ್ರಭುಗಳು ಅಸಮಾಧಾನ ವ್ಯಕ್ತಪಡಿಸಿದ್ದಾರೆ.

■

೨೩

ಈಳೆ-ನಿಂಬೆ-ಮಾವು-ಮಾದಲಕ್ಕೆ
ಹುಳಿನೀರನೆರೆದವರಾರಯ್ಯ!
ಕಬ್ಬು-ಬಾಳೆ-ನಾರಿವಾಳಕ್ಕೆ ಸಿಹಿ ನೀರನೆರೆದವರಾರಯ್ಯ?!
ಕಳವೆ-ಶಾಲಿಗೆ_ಓಗರದ ಉದಕವನೆರೆದವರಾರಯ್ಯ?!
ಮರುಗ-ಮಲ್ಲಿಗೆ-ಪಚ್ಚೆ-ಮುಡಿವಾಳಕ್ಕೆ
ಪರಿಮಳದುದಕವನೆರೆದವರಾರಯ್ಯ?!
ಇಂತೀ ಜಲ ಒಂದೆ, ಆಕಾಶ ಒಂದೆ!
ಒಂದೇ ಜಲವು ಹಲವು ದ್ರವ್ಯಂಗಳ ಕೂಡಿ
ತನ್ನ ಪರಿ ಬೇರಾಗಿಹ ಹಾಗೆ
ಎನ್ನದೇವ ಚನ್ನಮಲ್ಲಿಕಾರ್ಜುನಯ್ಯನು
ಹಲವು ಜನಂಗಳ ಕೂಡಿಕೊಂಡಿದ್ದರೇನು? ತನ್ನ ಪರಿ ಬೇರೆ!

– ಅಕ್ಕಮಹಾದೇವಿ

ಕಿತ್ತಳೆ, ನಿಂಬೆ, ಮಾವು, ಮಾದಲ ಹಣ್ಣುಗಳು ಹುಳಿರುಚಿಯನ್ನು ಕೊಡುತ್ತವೆ. ಆದರೆ ಗಿಡವನ್ನು ಬೆಳೆಸುವಾಗ ಹುಳಿ ನೀರನ್ನೇನೂ ಎರೆಯುವುದಿಲ್ಲ. ಆದರೆ ಈ ಹಣ್ಣುಗಳು ಹುಳಿಯಾಗಿರುತ್ತವೆ. ಕಬ್ಬು, ಬಾಳೆ, ತೆಂಗಿನ ಗಿಡಕ್ಕೆ ನಿಂಬೆ, ಮಾವು, ಮಾದಲ, ಕಿತ್ತಳೆಗೆ ಎರೆದ ನೀರನ್ನೇ ಎರೆಯುತ್ತೇವೆ. ಆದರೆ ಇವು ಸಿಹಿ ರುಚಿಯನ್ನು ಕೊಡುತ್ತವೆ. ಭತ್ತಕ್ಕೂ ಅದೇ ನೀರನ್ನೇ ಹಾಕಿದರೂ ಅದು ಊಟದ ಆಹಾರ ತಯಾರಿಸುವ ಧಾನ್ಯವಾಗುತ್ತದೆ. ಮರುಗ, ಮಲ್ಲಿಗೆ, ಪಚ್ಚೆ ತೆನೆ, ಮಡಿವಾಳಪತ್ರೆ ಇವು ಸುಗಂಧಿತವಾಗಿರುತ್ತವೆ. ಈ ಗಿಡಗಳಿಗೂ ಸಹ ಅದೇ ನೀರನ್ನೆರೆಯುತ್ತೇವೆ. ಸುವಾಸನೆಯುಳ್ಳ ನೀರನ್ನೇನೂ ಹಾಕುವುದಿಲ್ಲ. ಈ ನೀರು ಅದೇ ಆಕಾಶದಿಂದ ಸುರಿದದ್ದು. ಒಂದೇ ತೆರನಾದ ಜಲವನ್ನು ಬೇರೆ, ಬೇರೆ ಗಿಡಗಳಿಗೆ ಹಾಕಿದಾಗ ಕೆಲವು ಸಿಹಿಯಾಗಿಯೂ, ಕೆಲವು ಹುಳಿಯಾಗಿಯೂ, ಮತ್ತೆ ಕೆಲವು ಪರಿಮಳವನ್ನು ಕೊಡುವಂತಹುಗಳಾಗಿಯೂ, ಇನ್ನು ಕೆಲವು ಆಹಾರ ಮಾಡಿ, ಊಟಮಾಡಲು ಸಹಾಯವಾಗಿಯೂ ಇರುವುವು. ಇದೆಲ್ಲಾ ದೇವರ ಸೃಷ್ಟಿ. ಇದು ಮಾನವನು ಮಾಡಲಸಾಧ್ಯವಾದದ್ದು. ಒಂದೆ ನೀರು ಬೇರೆ ಬೇರೆ ಗಿಡಗಳಲ್ಲಿ ಬೇರೆ ಬೇರೆ ರುಚಿಯನ್ನು ಕೊಡುವಂತೆ ಚನ್ನಮಲ್ಲಿಕಾರ್ಜುನನು ಸರ್ವವ್ಯಾಪಿಯಾಗಿದ್ದರೂ, ಬೇರೆ ಬೇರೆಯವರಿಗೆ ಬೇರೆ ಬೇರೆ ರೂಪದಲ್ಲಿ ಕಂಡರೂ ಸರ್ವಾಂತರ್ಯಾಮಿಯಾದ ಅವನು ಒಬ್ಬನೇ ಎಂದು ಅಕ್ಕಮಹಾದೇವಿಯು ಚನ್ನಮಲ್ಲಿಕಾರ್ಜುನನ ಬಗ್ಗೆ ಹೇಳಿದ್ದಾಳೆ.

■

೨೪

ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ
ಆಯುಷ್ಯವೆಂಬ ರಾಸಿ ಅಳೆದು ತೀರದ ಮುನ್ನ
ಶಿವನ ನೆನೆಯಿರೆ, ಶಿವನೆ ನೆನೆಯಿರಿ. ಈ ಜನ್ಮ ಬಳಿಕಿಲ್ಲ.
ಚನ್ನಮಲ್ಲಿಕಾರ್ಜುನ ದೇವರ ದೇವನ ನೆನೆದು
ಪಂಚಮಹಾಪಾತಕರೆಲ್ಲರು ಮುಕ್ತಿಪಡೆದರಂದು.

– ಅಕ್ಕಮಹಾದೇವಿ

ನಾವು ವಾರ, ತಿಂಗಳು, ವರ್ಷ ಹೀಗೆ ಕಾಲವನ್ನು ಅಳೆಯುತ್ತೇವೆ. ಅಳೆಯುವ ಸಾಧನೆಗಳೆಂದರೆ ಸೂರ್ಯನ ಉದಯ ಹಾಗೂ ಅಸ್ತವಾಗುವಿಕೆ. ಒಂದು ಸಾರಿ ಉದಯನಾದ ಸೂರ್ಯ ಅಸ್ತನಾಗಿ ಮತ್ತೆ ಉದಯನಾಗುವ ಅವಧಿಯನ್ನು ದಿನವೆಂದೂ, ಏಳುದಿನಗಳಿಗೆ ಒಂದು ವಾರವೆಂದು, ನಾಲ್ಕು ವಾರಗಳಿಗೆ ಒಂದು ತಿಂಗಳೆಂದೂ, ಹನ್ನೆರಡು ತಿಂಗಳಿಗೆ ಒಂದು ವರ್ಷವೆಂದೂ ಲೆಕ್ಕವನ್ನು ಉದಯ ಅಸ್ತಗಳೆಂಬ ಕೊಳಗದಿಂದ ಅಳೆದು ಒಬ್ಬ ವ್ಯಕ್ತಿಯ ವಯಸ್ಸನ್ನು ನಿರ್ಧರಿಸುತ್ತೇವೆ. ಒಬ್ಬ ಮನುಷ್ಯ ಕೆಲವು ವರ್ಷ ಬದುಕಿ ನಂತರ ಸಾಯುತ್ತಾನೆ. ಬೇರೆ ಯಾವ ಕಾರಣದಿಂದಲೂ ಮೊದಲೆ ಸಾಯದಿದ್ದರೂ, ವಯಸ್ಸು ಕಳೆದು ಮುಪ್ಪು ಆವರಿಸಿ ಒಂದಲ್ಲ ಒಂದು ದಿನ ಪ್ರತಿಯೊಬ್ಬರೂ ಸಾಯಲೇಬೇಕು. ಅದಕ್ಕೇ ಅಕ್ಕಮಹಾದೇವಿಯು, ಆಯುಷ್ಯವೆಂಬ ರಾಶಿಯನ್ನು ಅಳೆಯುತ್ತಾ ಅದು ಅಳಿದು ಮುಗಿಯುವ ಮೊದಲೇ ಶಿವನನ್ನು ನೆನೆಯಿರಿ. ಈ ಮನುಷ್ಯ ಜನ್ಮದಲ್ಲಿಯೇ ಶಿವನನ್ನು ನೆನೆಯಲು ಅವಕಾಶ. ಪಶು–ಪಕ್ಷಿ, ಕ್ರಿಮಿ–ಕೀಟಗಳಿಗೆ ಆ ಭಾಗ್ಯವಿಲ್ಲ, ಆದುದರಿಂದ ಜೀವನವನ್ನು ಬೇರೆ ಯಾವ ಯಾವ ಸಂಗತಿಗಳಲ್ಲೋ ಕಳೆದು ವ್ಯರ್ಥ ಮಾಡಬೇಡಿ. ಕೊನೆಗೆ ಆಯುಸ್ಸು ಮುಗಿಯುವುದರೊಳಗೆ, ಈ ಜನ್ಮದಲ್ಲೆ ಶಿವನನ್ನು ನೆನೆಯಿರಿ. ಚನ್ನಮಲ್ಲಿಕಾರ್ಜುನನ್ನು ನೆನೆದರೆ, ನಾವು ಪಂಚೇಂದ್ರಿಯಗಳ ಕಾರಣ ಮಾಡಿದ ಪಂಚಮಹಾಪಾತಕಗಳೆಲ್ಲವೂ ಪರಿಹಾರವಾಗಿ ಮುಕ್ತಿಯು ದೊರೆಯುವುದು. ಈ ಮಾನವ ಜನ್ಮ ಪುನಃ ದೊರೆಯುವುದು ಕಷ್ಟ. ದೊರೆತಾಗ ದೇವರನ್ನು ನೆನೆದು ಪುಣ್ಯವಂತರಾಗಿ, ಇಂತಹ ಅವಕಾಶವನ್ನು ಕಳೆದುಕೊಳ್ಳಬೇಡಿ ಎಂದು ಎಚ್ಚರಿಸಿದ್ದಾಳೆ ಅಕ್ಕಮಹಾದೇವಿ.

■

ಉಳ್ಳವರು ಶಿವಾಲಯವ ಮಾಡುವರು
ಬಡವನಯ್ಯ ನಾನೇನ ಮಾಡುವೆನಯ್ಯಾ!
ಎನ್ನ ಕಾಲೇ ಕಂಭ, ಎನ್ನ ದೇಹವೇ ದೇಗುಲ
ಎನ್ನ ಶಿರವೇ ಹೊನ್ನಕಳಸವಯ್ಯಾ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ
ಕೂಡಲಸಂಗಮದೇವಾ

–ಬಸವಣ್ಣ

ಬಸವಣ್ಣನವರ ಭಕ್ತಿಭಾವ ನಾನಾರೂಪದಲ್ಲಿ ವ್ಯಯಕ್ತವಾಗಿದೆ. ಅವರು ತಮ್ಮದಾದ ಎಲ್ಲವನ್ನೂ, ದೇಹ, ಮನಸ್ಸು, ಧನ, ಪ್ರತಿಯೊಂದನ್ನೂ ಶಿವಾರ್ಪಣವೆಂದು ಬದುಕಿದವರು. ಕೆಲವರು ದೇವರಿಗೆ ಗುಡಿಗಳನ್ನು ಕಟ್ಟಿಸಿದುದನ್ನು ನೋಡಿದಾಗ, ಕಲ್ಲು ಮಣ್ಣಿನ ಗುಡಿ ತಾವು ಕಟ್ಟಿಸಲಿಲ್ಲ ಎನ್ನಿಸಿದಾಗ ಅವರಿಗೆ ಅನಿಸಿದ ಭಾವನೆಗಳನ್ನು ಈ ವಚನದಲ್ಲಿ ವ್ಯಕ್ತಗೊಳಿಸಿದ್ದಾರೆ.

ಇದ್ದವರು ಎಂದರೆ ಐಶ್ವರ್ಯವಂತರು ಶಿವಾಲಯವನ್ನು ಕಟ್ಟಿಸುತ್ತಾರೆ. ಆದರೆ ಬಡವನಾದ ನಾನು ಅಂಥ ದೇವಾಲಯ ಕಟ್ಟಿಸಲಾರೆ. ಆದರೆ ನಾನು ಕಟ್ಟಿರುವ ದೇವಾಲಯ ಬೇರೆ ರೀತಿಯದು. ಅದು ಅವಿನಾಶಿಯಾದುದು. ಈ ದೇವಸ್ಥಾನಕ್ಕೆ ನನ್ನ ಕಾಲುಗಳೇ ಕಂಬಗಳು, ನನ್ನ ದೇಹವೇ ಗರ್ಭಗುಡಿ, ನನ್ನ ಶಿರ ದೇವಸ್ಥಾನದ ಭಂಗಾರದ ಕಳಸ. ಇಂತಹ ದೇವಸ್ಥಾನದಲ್ಲಿ ನನ್ನ ಹೃದಯವೆಂಬ ಸಿಂಹಾಸನದಲ್ಲಿ ಶಿವನನ್ನು ಕೂರಿಸುತ್ತೇನೆ. ಭಕ್ತನ ಹೃದಯವೇ ಶಾಶ್ವತವಾದ ದೇವರ ಸ್ಥಾನ. ಇತರರು ಕಟ್ಟಿಸಿದ ದೇವಾಲಯಗಳು ಸ್ಥಾವರ. ಯಾವಾಗಲೂ ಸ್ಥಾವರವಾದುದು ಒಂದಲ್ಲ ಒಂದು ಕಾರಣಕ್ಕೆ ಅಳಿಯುತ್ತದೆ. ಆದರೆ ನಡೆದಾಡುವ ಈ ದೇವಾಲಯಕ್ಕೆ ಅಳಿವಿಲ್ಲ. ಹಾಗಾಗಿ 'ನಾನು ಕಟ್ಟಿರುವ ಗುಡಿಯೇ ಶಾಶ್ವತ' ಎಂದು ಕೂಡಲಸಂಗಮನಿಗೆ ಬಸವಣ್ಣನವರು ಹೇಳಿದ್ದಾರೆ.

■

## ೨೬

ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ.
ಭಾಂಡ ಒಂದೆ, ಭಾಜನ ಒಂದೆ, ಬೆಳಗೆ ಕನ್ನಡಿ ಎನ್ನಿಸಿತ್ತಯ್ಯಾ.
ಅರಿದರೆ ಶರಣ, ಮರೆದರೆ ಮಾನವ ಮರೆಯದೆ ಪೂಜಿಸು,
ಕೂಡಲಸಂಗಮಯ್ಯನ.

–ಬಸವಣ್ಣ

ಒಂದೇ ವಸ್ತುವು ಸಾಧನೆಯಿಂದ, ಸಂಸ್ಕಾರದಿಂದ, ಕಾಲಾನುಕ್ರಮದಲ್ಲಿ ಉತ್ತಮಸ್ಥಿತಿಯನ್ನು ಪಡೆಯುತ್ತದೆ; ಇಲ್ಲದಿದ್ದಲ್ಲಿ ಹಾಗೆಯೇ ಉಳಿಯುತ್ತದೆ. ವಿದ್ಯೆ, ಬುದ್ಧಿ ಕಲಿತ ಮಾನವ ಸುಸಂಸ್ಕೃತನಾಗುತ್ತಾನೆ. ಇಲ್ಲದಿದ್ದರೆ ಪ್ರಾಣಿಯೋಪಾದಿಯಲ್ಲಿ ಬದುಕುತ್ತಾನೆ. ಗಣಿಯಲ್ಲಿ ಚಿನ್ನವು ಅದುರಿನ ರೂಪದಲ್ಲಿ ಕೊಳೆಯ ಮಧ್ಯೆ ಹುದುಗಿರುತ್ತದೆ. ಆ ಅದುರನ್ನು ಶುದ್ಧಮಾಡಿ ಚಿನ್ನವನ್ನು ಬಿಟ್ಟು ಉಳಿದೆಲ್ಲವನ್ನೂ ಬೇರ್ಪಡಿಸಿ, ಚಿನ್ನವಿರುವ ಭಾಗವನ್ನು ಚೆನ್ನಾಗಿ ಕಾಯಿಸಿ ಸೋಸಿದರೆ, ಪರಿಶುದ್ಧವಾದ, ಬೆಲೆಬಾಳುವ ಚಿನ್ನವಾಗುತ್ತದೆ. ಹಾಗೆಯೇ ಬಿಟ್ಟರೆ ನೆಲದಲ್ಲಿ ಇತರೆ ನಿರುಪಯೋಗಿ ವಸ್ತುಗಳೊಡನೆ ಬಿದ್ದಿರುತ್ತದೆ. ಎಂದರೆ ಒಂದು ವಸ್ತುವನ್ನು ಚೆನ್ನಾಗಿ ಶುದ್ಧಮಾಡಿದರೆ ಅದು ಬೆಲೆಬಾಳುವಂತಾಗುತ್ತದೆ. ಇಲ್ಲದಿದ್ದಲ್ಲಿ ಅದು ಮಣ್ಣಿಗೆ ಸಮವೆನ್ನಿಸುತ್ತದೆ. ಈ ಮಾತನ್ನು ಬಸವಣ್ಣನವರು ಅರ್ಥಪೂರ್ಣವಾದ ಉಪಮೆಯಿಂದ ವಿವರಿಸಿದ್ದಾರೆ.

ಸ್ಟೀಲು ಬರುವುದಕ್ಕೆ ಮೊದಲು ಸಾಮಾನ್ಯವಾಗಿ ಜನರು ಊಟಕ್ಕೆ ಕಂಚಿನ ತಟ್ಟೆಗಳನ್ನು ಬಳಸುತ್ತಿದ್ದರು. ಪೂಜಿಸುವಾಗ ಉಪಯೋಗಿಸಲು ಚೆನ್ನಾಗಿ ಉಜ್ಜಿದ ತೊಳೆದ ಕಂಚಿನ ತಟ್ಟೆಯನ್ನು ದರ್ಪಣವಾಗಿ ಉಪಯೋಗಿಸುತ್ತಿದ್ದರು. ಅದಕ್ಕಾಗಿ ಬಸವಣ್ಣನವರು ಊಟದ ತಟ್ಟೆಗೆ ಉಪಯೋಗಿಸುವ ಕಂಚು ಬೇರೆ ಅಲ್ಲ, ದರ್ಪಣಕ್ಕೆ ಉಪಯೋಗಿಸುವು ಕಂಚು ಬೇರೆ ಅಲ್ಲ. ಎರಡೂ ಒಂದೇ ವಸ್ತುಗಳು ಒಂದೇ ಲೋಹ. ಆದರೆ ಬೆಳಗಿದರೆ ಫಳಫಳನೆ ಹೊಳೆಯುತ್ತಾ ಪ್ರತಿಬಿಂಬವನ್ನು ತೋರಿಸುವ ಕನ್ನಡಿಯಾಗುತ್ತದೆ. ಹಾಗೆ ಬೆಳಗದಿದ್ದರೆ ಊಟದ ತಟ್ಟೆಯಾಗುತ್ತದೆ ಎಂದು ಹೇಳಿ, ಹಾಗೆಯೇ ಮನುಷ್ಯ ತಿಳಿವಳಿಕೆಯಿಂದ ದೂರನಾಗಿ ಅಜ್ಞಾನಿಯಾಗಿ, ಮಾಯೆಯಿಂದ ಆವೃತನಾಗಿ ಶಾಶ್ವತ ಜ್ಞಾನದ ಕಡೆಗೆ ಲಕ್ಷ್ಯವಿಲ್ಲದವನಾಗಿದ್ದರೆ ಮಾನವನಾಗಿಯೇ ಉಳಿಯುತ್ತಾನೆ. ಒಂದು ಮೆಟ್ಟಿಲೂ ಮೇಲೇರುವುದಿಲ್ಲ. ಅದಿಲ್ಲದೆ ದೇವರ ಬಗ್ಗೆ ಭಕ್ತಿಯುಕ್ತನಾಗಿ, ದಿವ್ಯಜ್ಞಾನವನ್ನು ಪಡೆದು, ಅರಿವು ಪಡೆದರೆ ಶರಣನಾಗುತ್ತಾನೆ. ಹೀಗೆ ಅದೇ ಮಾವನ ಆಧ್ಯಾತ್ಮ ಸಾಧನೆ ಮಾಡಿದರೆ ಶರಣನಾಗುತ್ತಾನೆ. ಇಲ್ಲದಿದ್ದರೆ

ಮಾಯಾಮೋಹಕ್ಕೆ ಒಳಗಾದ ಮಾನವನಾಗಿಯೇ ಉಳಿಯುತ್ತಾನೆ. ಆದುದರಿಂದ ದೇವರನ್ನು ಪೂಜಿಸಿ ಉತ್ತಮರಾಗಿ ಎಂದಿದಾರೆ ಬಸವಣ್ಣನವರು. ಅರಿದು ಬದುಕಿದರೆ ಮಾನವ ಶರಣನಾಗುತ್ತಾನೆ. ಮಾಯೆಯಿಂದಾವೃತನಾಗಿ ದೇವರನ್ನು ಮರೆತನಾದರೆ ಮಾನವನಾಗಿಯೇ ಉಳಿಯುತ್ತಾನೆ. ■

## ೨೭

ಊರ್ವಶಿ ಕರ್ಪೂರವ ತಿಂದು ಎಲ್ಲರಿಗೆ ಮುತ್ತಕೊಟ್ಟಡೆ ಮುಚ್ಚುವರಲ್ಲದೆ
ಹಂದಿ ಕರ್ಪುರವ ತಿಂದು ಮುತ್ತಕೊಟ್ಟಡೆ ಮುಚ್ಚುವರೆ,
ಹುಡುಹುಡು ಎಂದಟ್ಟುವರಲ್ಲದೆ?
ನಡೆನುಡಿ ಶುದ್ಧುಳ್ಳವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮುಚ್ಚುವರಲ್ಲದೆ
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರೆ?
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನದ ಓದಿದಡೆ
ಆ ಹಂದಿಗಿಂತ ಕರಕಷ್ಟ.

–ಮೋಳಿಗೆ ಮಹಾದೇವಿ

ಶಿಕ್ಷಕನು ಮಕ್ಕಳಿಗೆ ನೀತಿಯ ಮಾತನ್ನು ಹೇಳುತ್ತಾನೆ. ಆದರೆ ನೀತಿಯನ್ನು ಬೋಧಿಸುವ ವ್ಯಕ್ತಿ ನೀತಿವಂತನಾಗಿದ್ದರೆ ಮಾತ್ರ ಅವನ ಮಾತಿಗೆ ವಿದ್ಯಾರ್ಥಿಗಳು ಬೆಲೆ ಕೊಡುತ್ತಾರೆ. ತಾನು ಅನೀತಿವಂತನಾಗಿ, ಮಕ್ಕಳಿಗೆ ನೀತಿ ಬೋಧಿಸ ಹೋದರೆ ವಿದ್ಯಾರ್ಥಿಗಳು ಅವನನ್ನು ಗೇಲಿಮಾಡುತ್ತಾರೆ. 'ಮೊದಲು ತಾನು ಸರಿಯಾಗಲಿ, ಆ ಮೇಲೆ ನಮಗೆ ಹೇಳಲಿ, ಎಂದು ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳುತ್ತಾರೆ, ಹೀಯಾಳಿಸುತ್ತಾರೆ ಕೂಡ. ತಂದೆಯಾದವನೂ ಅಷ್ಟೇ. ತಾನು ಸರಿಯಾಗಿದ್ದು ಮಕ್ಕಳಿಗೆ ಹೀಗೆ ಮಾಡು ಹಾಗೆ ಮಾಡು ಎಂದು ಹೇಳಿದಾಗ ವಿಧೇಯತೆಯಿಂದ ಕೇಳುತ್ತಾರೆ. ಇಲ್ಲದೆ ತಾನು ದುರ್ವ್ಯಸನಿಯಾಗಿ ಅಥವಾ ದುಷ್ಟನಡತೆಯುಳ್ಳವನಾಗಿ, ಮಕ್ಕಳಿಗೆ ಬುದ್ಧಿಯ ಮಾತನ್ನು ಹೇಳಿದರೆ, ಲಕ್ಷಿಸುವುದಿಲ್ಲ. ಕೆಲವೊಂದು ಸಾರಿ ಅವಮಾನವಾಗುವಂತೆ ತಿರುಗಿ ಮಾತನಾಡಲೂ ಬಹುದು. ಇದು ನಾವು ಸಮಾಜದಲ್ಲಿ ನೋಡುವ ಪರಿಸ್ಥಿತಿ.

ಇಂತಹುದೇ ಒಂದು ಅರ್ಥ ಬರುವಂತೆ ಶರಣೆ ಮೋಳಿಗೆ ಮಹಾದೇವಿಯು

ಮೇಲಿನ ವಚನ ಹೇಳಿದ್ದಾಳೆ. ಸುಂದರಿಯಾದ ಹೆಣ್ಣು ಸುಗಂಧಪೂರಿತ ತಾಂಬೂಲ ಹಾಕಿಕೊಂಡು ಮುತ್ತ ಕೊಟ್ಟರೆ, ಪುರುಷ ಮೆಚ್ಚುತ್ತಾನೆ, ಸಂತೋಷ ಪಡುತ್ತಾನೆ. ಅದೇ ಹಂದಿಯಂತೆ ಅವಲಕ್ಷಣದಿಂದ ಕೂಡಿದ ಹೆಣ್ಣು ಮುತ್ತು ಕೊಡಲು ಬಂದರೆ ಮೆಚ್ಚುವುದಿರಲಿ, ಸಂತೋಷಪಡುವುದಿರಲಿ, ಹೋಗಾಚೆ ಎಂದು ನೂಕಿ ಓಡಿಸುತ್ತಾನೆ. ಅದೇ ರೀತಿ ನೀತಿ ಪೂರ್ಣವಾದ ಧಾರ್ಮಿಕ ಅಂಶಗಳನ್ನು ಒಳಗೊಂಡ, ಆಧ್ಯಾತ್ಮ ಅಂಶಗಳಿಂದ ಕೂಡಿದ ಪುರಾತನರ ವಚನಗಳನ್ನು ನಡೆ ನುಡಿ ಶುದ್ಧವಿದ್ದವರು ಓದಿದರೆ ಉಳಿದವರು ಆಸ್ಥೆಯಿಂದ, ಶ್ರದ್ಧೆಯಿಂದ ಕೇಳುತ್ತಾರೆ. ಅದನ್ನು ಮೆಚ್ಚಿ ಅನುಸರಿಸಲೂ ಬಹುದು. ಆದರೆ, ನಡೆ–ನುಡಿ ಶುದ್ಧವಿಲ್ಲದ ಅನೀತಿವಂತರು ಓದಿದರೆ, ಅನುಭಾವ ಬೋಧಿಸಿದರೆ, ಮೆಚ್ಚುವುದಿಲ್ಲ. ಅಷ್ಟೇ ಅಲ್ಲ, ಹಂದಿಗಿಂತ ಹೀನವಾಗಿ ಕಂಡು ಅಲ್ಲಿ ನಿಲ್ಲದಂತೆ ಮಾಡುತ್ತಾರೆ ಎಂದು ಈ ವಚನದಲ್ಲಿ ತಿಳಿಸಲಾಗಿದೆ. ಆದುದರಿಂದ ಇನ್ನೊಬ್ಬರಿಗೆ ಬೋಧಿಸುವವರು ಮೊದಲು ತಾವು ಆ ಬೋಧನೆಯಂತೆ ಬದುಕಬೇಕು, ಆಗ ಮಾತ್ರ ಅವರ ಮಾತಿಗೆ ಗೌರವ ದೊರೆಯುತ್ತದೆ. ಇಲ್ಲದಿದ್ದರೆ ಯಾರೂ ಮೆಚ್ಚುವುದೂ ಇಲ್ಲ; ಬೆಲೆ ಕೊಡುವುದೂ ಇಲ್ಲ. ಅಂತಹವರನ್ನು ಅಂತಹವರ ಬೋಧನೆಯನ್ನು ತಿರಸ್ಕಾರದಿಂದ ಕಾಣುತ್ತಾರೆ ಎಂಬುದು ಈ ವಚನದ ಸಾರ.

■

## ೨೮

ಊರ ಒಳಗಣ ಬಯಲು, ಊರ ಹೊರಗಣ ಬಯಲೆಂದುಂಟೆ?
ಊರೊಳಗೆ ಬ್ರಾಹ್ಮಣ ಬಯಲು, ಊರ ಹೊಳಗೆ ಹೊಲೆ ಬಯಲೆಂದುಂಟೆ?
ಎಲ್ಲಿ ನೋಡಿದಡೆ ಬಯಲೊಂದೆ
ಭಿತ್ತಿಯಿಂದ ಒಳ ಹೊರಗೆಂಬ ನಾಮವ್ಯೆಸೆ!
ಎಲ್ಲಿ ನೋಡಿದಡೆ ಓ ಎಂಬಾತನೆ ಬಿಡಾದಿ

– ಬೊಂತಾದೇವಿ

ಬೊಂತಾದೇವಿಯ ಅಕ್ಕಮಹಾದೇವಿಗೆ ಸಮನಾದ ಶಿವಶರಣೆ. ಈಕೆಯೂ ಸಹ ಅಕ್ಕನಂತೆ ಯೌವನದಲ್ಲಿಯೇ ದೇಹಮೋಹವನ್ನು ಕಳೆದುಕೊಂಡು ಮನೆಮಠವನ್ನು ತೊರೆದು, ವಿರಾಗಿಣಿಯಾಗಿ ಬತ್ತಲೆಗೊಂಡು ಭಗವಂತನನ್ನು ಅರಸುತ್ತಾ ಹೊರಟವಳು. ಯಾರೋ ಅವಳನ್ನು ಬತ್ತಲೆಯಾಗಿ ನೋಡಿ, ಒಂದು ಬೊಂತೆಯನ್ನು ಹೊದ್ದಿಸಿದರಂತೆ. ಕೊಟ್ಟ ಕೊಡುಗೆಯನ್ನು ಬಿಸುಡದೆ

ಬೊಂತೆಯನ್ನೇ ಉಟ್ಟು ಹೊರಟ ಆಕೆ ಯಾರೆಂದು ಅರಿಯದೆ ಬೊಂತಾದೇವಿ ಎಂದೇ ಜನ ಕರೆದರು. ಆಕೆಯ ಐದು ವಚನಗಳು ದೊರೆತಿವೆ. ಅವಳು ತನ್ನ ವಚನಕ್ಕೆ 'ಬಿಡಾಡಿ' ಎಂಬ ಅಂಕಿತವನ್ನಿಟ್ಟುಕೊಂಡಿದ್ದಾಳೆ. ಎಲ್ಲ ಶರಣರು ತಮ್ಮ ಆರಾಧ್ಯ ದೈವವನ್ನು ತಾವು ಬರೆದ ವಚನಕ್ಕೆ ಅಂಕಿತವನ್ನಾಗಿಟ್ಟುಕೊಂಡರೆ, ಈಕೆ, ಯಾವ ಪ್ರತ್ಯೇಕ ದೇವರನ್ನೂ ಗುರುತಿಸದೆ, ಸರ್ವಾಂತರ್ಯಾಮಿಯಾದ ಭಗವಂತನನ್ನು 'ಬಿಡಾಡಿ' ಎಂದು ಕರೆದಿದ್ದಾಳೆ. ಅದನ್ನೇ ವಚನಾಕಿಂತವನ್ನಾಗಿ ತೆಗೆದುಕೊಂಡಿದ್ದಾಳೆ.

ಶರಣರು ಜಾತಿಸೂತಕವನ್ನು ಒಪ್ಪದವರು. ಮಾನವರನ್ನು ಮೇಲು ಜಾತಿ, ಕೀಳು ಜಾತಿ ಎಂಬ ಭೇದ ಮಾಡುವುದನ್ನು ಅವರು ಮನ್ನಿಸುವುದಿಲ್ಲ. ಮನುಷ್ಯನ ಆಚರಣೆಯಿಂದ ಮೇಲು-ಕೀಳೆಂದು ಗಣಿಸಬೇಕಲ್ಲದೆ, ಹುಟ್ಟಿನಿಂದ ಅಲ್ಲ ಎಂಬುದು ಅವರ ಅಭಿಪ್ರಾಯ. ಅನೇಕ ಶರಣ ಶರಣೆಯರು ಇದೇ ಆಭಿಪ್ರಾಯವನ್ನು ವಿವಿಧ ರೀತಿಯಿಂದ ಪ್ರಕಟಿಸಿದ್ದಾರೆ. ಬೊಂತಾದೇವಿಯೂ ಅದೇ ಮಾತನ್ನೇ ಈ ವಚನದಲ್ಲಿ ತಿಳಿಯಪಡಿಸಿದ್ದಾಳೆ.

ಭೂಮಿ, ಪ್ರಕೃತಿಯ ಒಂದು ಅಂಗ, ಅದು ಮಾನವನಿಗೆ ದೇವರ ದೇಣಿಗೆ. ಅದು ವಿಶಾಲವಾದ ಒಂದೇ ಬಯಲು. ಅದರಲ್ಲಿ ಒಳ-ಹೊರಗಿಲ್ಲ. ಮನೆ ಕಟ್ಟಿದಾಗ ಗೋಡೆಯನ್ನು ಕಟ್ಟಿ ಒಂದು ಆವರಣವನ್ನು ನಿರ್ಮಿಸುತ್ತೇವೆ. ಗೋಡೆಯ ಒಳಭಾಗವನ್ನು ಮನೆಯ ಒಳಗೆ ಎಂದೂ, ಹೊರಭಾಗವನ್ನು ಮನೆಯ ಹೊರಗೆಂದೂ ಹೇಳುತ್ತೇವೆ. ಗೋಡೆಯನ್ನು ಕಟ್ಟುವುದರ ಮೂಲಕ ಬಯಲನ್ನು ಒಳಗೆ – ಹೊರಗೆ ಎಂದು ಮಾಡಿಕೊಂಡಿದ್ದೇವೆ. ಅದೇ ರೀತಿ ಬಯಲಿನಲ್ಲಿ ಊರನ್ನು ಕಟ್ಟಿಕೊಂಡು ಒಂದು ಆವರಣ ನಿರ್ಮಿಸಿಕೊಳ್ಳುತ್ತೇವೆ. ಅದನ್ನು ಊರೆಂದು ಕರೆಯುತ್ತೇವೆ. ಅದು ಹೊರತಾದ ಭಾಗವನ್ನು ಊರ-ಹೊರಗೆಂದು ಕರೆಯುತ್ತೇವೆ. ಜಾತಿಯಲ್ಲಿ ಮೇಲು ಕೀಳೆಂಬ ಭಾವನೆ ಇದ್ದ ಕಾಲದಲ್ಲಿ ಕೀಳಾದ ಜಾತಿಯವರೆಂದು ಪರಿಗಣಿಸಲ್ಪಟ್ಟವರನ್ನು ಊರ ಒಳಗೆ ವಾಸಿಸಲು ಕೊಡುತ್ತಿರಲಿಲ್ಲ. ಅವರು 'ಊರ ಹೊರಗೆ' ಗುಡಿಸಲೆಂಬ ಮನೆಯಲ್ಲಿ ವಾಸಿಸಬೇಕಾಗುತ್ತಿತ್ತು. ಹೀಗೆ, ಮನುಷ್ಯರನ್ನೇ ಮನುಷ್ಯರು ಕೀಳಾಗಿ ಕಾಣುವುದನ್ನು ಶರಣರು ಒಪ್ಪುತ್ತಿರಲಿಲ್ಲ. ಇದನ್ನು ಬಸವಣ್ಣ ಮೊದಲಾಗಿ ಅನೇಕ ಶರಣರು, ಖಂಡಿಸಿದ್ದಾರೆ, ನಾನಾ ವಿಧವಾಗಿ ಇದು ಸರಿಯಲ್ಲ ಎಂದು ಪ್ರತಿಪಾದಿಸಿದ್ದಾರೆ.

ಅದೇ ರೀತಿ ಬೊಂತಾದೇವಿಯೂ ಸಹ ದೇವರು, ಈ ಲೋಕಯನ್ನು ಒಳಗಣ ಬಯಲು-ಹೊರಗಣ ಬಯಲೆಂದೇನೂ ವಿಂಗಡಿಸಿಲ್ಲ. ಊರೊಳಗೆ ಬ್ರಾಹ್ಮಣ ಬಯಲನ್ನು ಊರ ಹೊರಗೆ ಹೊಲೆಯರಿಗಾಗಿ ಎಂದು ಪ್ರತ್ಯೇಕ ಬಯಲನ್ನು ನಿರ್ಮಾಣಮಾಡಿಲ್ಲ. ದೇವರು ಸೃಷ್ಟಿಸಿರುವುದು ಒಂದೇ ಬಯಲನ್ನು,

ಗೋಡೆ ನಿರ್ಮಿಸಿಕೊಂಡು ಒಳಹೊರಗೆಂಬ ಹೆಸರಿಟ್ಟಂತೆ, ಹೊಲೆಯರು ಬ್ರಾಹ್ಮಣರು ಎಂಬ ಜಾತಿಯ ಗೋಡೆಯನ್ನು ಮಾನವನು ನಿರ್ಮಿಸಿಕೊಂಡು ಬೇರೆ, ಬೇರೆಯೆಂದು ಮನುಷ್ಯರನ್ನು ವಿಭಾಗಿಸಿದ್ದಾನೆ. ಆದರೆ, ದೇವರಿಗೆ ಈ ಭೇದಭಾವವಿಲ್ಲ. ಯಾರು, ಎಲ್ಲಿ ಭಕ್ತಿಯಿಂದ ಕರೆದರೂ ದೇವರು 'ಓ' ಎನ್ನುತ್ತಾನೆ. ಅವನು ಮನುಷ್ಯ ಮನುಷ್ಯರನ್ನು ಮೇಲೆ ಕೀಳೆಂಬ ಭಾವನೆಯಿಂದ ನೋಡುವುದಿಲ್ಲ ಎಂದು ಬರೆಯುತ್ತಾ ಈ ಜಾತಿ ಪದ್ಧತಿಯನ್ನು ಶಿವಶರಣೆ ಬೊಂತಾದೇವಿ ಟೀಕಿಸಿ ಇಂದಿನ ಸಮಾಜಕ್ಕೆ ಜಾತೀಯತೆಯ ಗೋಡೆ ಕಟ್ಟಬಾರದೆಂಬ ನೀತಿ ಬೋಧಿಸಿದ್ದಾಳೆ.

■

## ೨೯

ಎನಿಸುಕಾಲ ಕಲ್ಲು ನೀರೊಳಗಿದ್ದರೇನು;
ನೆನೆದು ಮೃದುವಾಗಬಲ್ಲುದೆ!
ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ?
ನಿಧಾನವ ಕಾಯ್ದಿರ್ದ ಚಿಂತರನಂತೆ!
ಅವರ ವಿಧಿ ಎನಗಾಯಿತ್ತು ಕೂಡಲಸಂಗಮದೇವಾ!

– ಬಸವಣ್ಣ

**ಯಾ**ವ ವಸ್ತುವನ್ನಾದರೂ ಮೃದುವಾಗಿ ಮಾಡಬೇಕಾದರೆ ನೀರಲ್ಲಿ ನೆನೆಯಿಸಿಡುತ್ತಾರೆ. ಆದರೆ ಕಲ್ಲನ್ನು ಎಷ್ಟು ಕಾಲ ನೀರಲ್ಲಿಟ್ಟರೂ ಅದು ನೆನೆದು ಮೃದುವಾಗುವುದೇ ಇಲ್ಲ. ಹಾಗೆಯೇ ದೃಢಮನಸ್ಸಿಲ್ಲದವನು ಕಲ್ಲಿದ್ದಂತೆ. ಎಷ್ಟು ವರ್ಷಗಳು ಅವನು ದೇವರ ಪೂಜೆಮಾಡುತ್ತಿದ್ದರೂ ಪ್ರಯೋಜನವಿಲ್ಲ. ಚಂಚಲತೆಯಿಲ್ಲದ ದೃಢಮನಸ್ಸಿನಿಂದ ಮಾತ್ರ ದೇವರನ್ನು ಒಲಿಸಿಕೊಳ್ಳಲು ಸಾಧ್ಯ. ಮನಸ್ಸಿನಲ್ಲಿ ಸ್ಥಿರತೆ ಇಲ್ಲದೆ, ಪರಮನಲ್ಲಿ ಅಚಲವಾದ ವಿಶ್ವಾಸವಿಲ್ಲದೆ ಬರಿಯ ಪೂಜೆ ವ್ಯರ್ಥ ಎನ್ನುತ್ತಾರೆ ಬಸವಣ್ಣ. ಈ ಮಾತನ್ನು ಬೇರೆಯವರಿಗೆ ಹೇಳಿಲ್ಲ. ಬಸವಣ್ಣನವರು ತಮಗೆ ತಾವೇ ಹೇಳಿಕೊಂಡಿದ್ದಾರೆ. ತಾವು ಇಷ್ಟು ದಿನ ಮಾಡಿದ ಪೂಜೆ, ದೇವನನ್ನು ಒಲಿಸಿಲ್ಲ ಎಂದರೆ ನಾನು ಶ್ರದ್ಧೆಯಿಂದ ಪೂಜೆ ಮಾಡಿಲ್ಲ. ಇಷ್ಟು ದಿನದ ಭಕ್ತಿ, ಸಂಪತ್ತನ್ನು ಕಾಯುತ್ತಾ ಕುಳಿತ ಪಿಶಾಚಿಯಂತೆ ಆಗಿದೆ ಅಷ್ಟೆ. ಅದನ್ನು ಪಡೆಯಲಾಗಲಿಲ್ಲ ಎಂದು ವಿಷಾದ ಪಟ್ಟುಕೊಂಡಿದ್ದಾರೆ. ಹಣವನ್ನು ಹೂತಿಟ್ಟಾಗ ಅದನ್ನು ಕಾಯಲು ಪಿಶಾಚಿ ಸೇರಿಕೊಳ್ಳುತ್ತದೆ. ಅದು ಅನೇಕ ವರ್ಷಗಳಿಂದ ಕಾಯುತ್ತಿದ್ದರೂ, ಅದನ್ನು ಅನುಭವಿಸಲು, ಆ ನಿಧಿಯ ಸುಖ

ಪಡೆಯಲು ಅದಕ್ಕೆ ಸಾಧ್ಯವಿಲ್ಲ. ಹಾಗೆಯೇ, ದೃಢಮನಸ್ಸಿಲ್ಲದೆ ಪೂಜಿಸಿದರೆ ಫಲ ದೊರೆಯುವುದಿಲ್ಲ. ಅಂತಹ ಪೂಜೆ ಮಾಡಿದವನ ಸ್ಥಿತಿ ಫಲವಿಲ್ಲದೆ ನಿಧಿಯನ್ನು ಕಾಯುವ ಪಿಶಾಚಿಗೆ ಸಮನಾಗುತ್ತದೆ. ಅಂತಹ ಸ್ಥಿತಿ ನನಗೂ ಆಗಿದೆಯೆಂದು ಬಸವಣ್ಣನವರಂಥವರೂ ಸಹ ತಮ್ಮ ಮನಸ್ಸು ದೃಢಗೊಂಡಿಲ್ಲವೇನೋ ಎಂದುಕೊಂಡು, ಈ ಭಾವನೆ ವ್ಯಕ್ತಪಡಿಸಿದ್ದಾರೆ. ■

## ೩೦

ಏನ ಬಂದಿರಿ, ಹದುಳವಿದ್ದಿರಿ ಎಂದಡೆ
ನಿಮ್ಮ ಮೈಸಿರಿ ಹಾರಿಹೋಹುದೆ?
"ಕುಳ್ಳಿರೆ"ಂದಡೆ ನೆಲ ಕುಳಿಹೋಹುದೆ?
ಒಡನೆ ನುಡಿದಡೆ ಸಿರ ಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದೊಡೊಂದು, ಗುಣವಿಲ್ಲದಿದ್ದಡೆ
ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವಾ.

– ಬಸವಣ್ಣ

ಬಸವಣ್ಣ ನಡೆಗಲಿಸಿದ, ನುಡಿಗಲಿಸಿದ, ಉಣಗಲಿಸಿದ, ಉಡಗಲಿಸಿದ ಎಂಬ ಮಾತು ಸುಪ್ರಸಿದ್ಧವಾಗಿದೆ. ಅವನು ಕೇವಲ ಆಧ್ಯಾತ್ಮ ಸಾಧನೆಯನ್ನಷ್ಟೇ ಬೋಧಿಸಲಿಲ್ಲ, ದಿನನಿತ್ಯದ ಜೀವನದ ರೀತಿನೀತಿಗಳನ್ನು ತಿಳಿಯ ಹೇಳಿದ್ದಾನೆ. ಬದುಕಿ ತೋರಿಸಿದ್ದಾರೆ. ಬಹಳಷ್ಟು ಜನರು ತಮ್ಮಲ್ಲಿಗೆ ಬಂದವರನ್ನು ವಿಶ್ವಾಸದಿಂದ, ಸ್ನೇಹದಿಂದ ಮಾತನಾಡಿಸದೆ ಅಹಂಕಾರದಿಂದ ವರ್ತಿಸುತ್ತಾರೆ. ಇಂತಹ ವರ್ತನೆಯಿಂದ ಬಂದವರ ಮನಸ್ಸಿಗೆ ನೋವೂ ಅಪಮಾನವೂ ಉಂಟಾಗುತ್ತದೆ. ಅದಕ್ಕಾಗಿ ಬಸವಣ್ಣ ತಮ್ಮ ಮನೆಗೆ ಯಾರೇ ಬರಲಿ ಅವರನ್ನು ಅಲಕ್ಷಿಸದೆ, 'ಏನು, ಯಾವಾಗ ಬಂದಿರಿ? ಚೆನ್ನಾಗಿದ್ದೀರಾ? ಎಂದು ಸ್ನೇಹದಿಂದ ವಿಚಾರಿಸುವ ಸೌಜನ್ಯ ತೋರಿಸಬೇಕು. ಅಷ್ಟರಿಂದ ನಮ್ಮ ಸಂಪತ್ತೇನೂ ಹಾಳಾಗುವುದಿಲ್ಲ. ಘನತೆಗೆ ಕುಂದುಂಟಾಗುವದಿಲ್ಲ ಎಂದು ಹಿತವಚನ ನುಡಿದಿದ್ದಾನೆ. ಅಲ್ಲದೆ ಬಂದವರನ್ನು 'ಕುಳಿತುಕೊಳ್ಳಿರಿ' ಎಂದು ಆತ್ಮೀಯತೆಯಿಂದ ಕರೆದು ಕುಳ್ಳಿರಿಸಿದರೆ, ನಿಮ್ಮ ನೆಲವೇನು ಅವರು ಕುಳಿತುಕೊಳ್ಳುವುದರಿಂದ ಕುಳಿಬಿದ್ದು ಹೋಗುವುದಿಲ್ಲ. ಅಲ್ಲದೆ ಇದು ನಿಮ್ಮ ಉತ್ತಮ ಸಂಸ್ಕೃತಿಯನ್ನು ತೋರಿಸುತ್ತದೆ, ಬಂದವರಿಗೂ ಹಿತವೆನ್ನಿಸುತ್ತದೆ. ಹೀಗೆ ಬಂದವರನ್ನು ಒಳ್ಳೆ ಮಾತುಗಳಿಂದ ಕೂಡಲೇ ಮಾತನಾಡಿಸುವುದರಿಂದ ಮಾತನಾಡಿಸಿದವರ ತಲೆಯೂ ಸಿಡಿಯುವುದಿಲ್ಲ.

ಹೊಟ್ಟೆಯೂ ಒಡೆಯುವುದಿಲ್ಲ. ಆದರೆ ಬಂದವರಿಗೆ ಹಿತವೆನ್ನಿಸುತ್ತದೆ. ಹೀಗೆ ನಿಮ್ಮ ಆಶ್ರಯ ಬೇಡಿ ಬಂದವರಿಗೆ ಕೊಡದಿದ್ದರೂ ಚಿಂತೆಯಿಲ್ಲ, ಗುಣಭರಿತವಾದ ರೀತಿಯಲ್ಲಿ ನಡೆಯುವುದು ಅವಶ್ಯಕ. ಅದಕ್ಕಾಗಿ ಕಳೆದುಕೊಳ್ಳಬೇಕಾದುದೇನೂ ಇಲ್ಲ. ಹಾಗಿಲ್ಲದೆ, ಒಳಿತಾದ ನಡೆ ತೋರದೆ ಅಹಂಕಾರದಿಂದ ವರ್ತಿಸಿದರೆ ಕೂಡಲ ಸಂಗಮದೇವನು, ಅಂತಹವರನ್ನು ನೆಲಕ್ಕೆ ಬೀಳಿಸಿ ಅಹಂಕಾರವಡಗುವಂತೆ ಮೂಗಕೊಯ್ದು ಅಪಮಾನಕ್ಕೆ ಗುರಿಯಾಗಿಸದೆ ಬಿಡುವುದಿಲ್ಲ ಎಂದು ಎಚ್ಚರಿಕೆ ಕೊಟ್ಟಿದ್ದಾನೆ ಬಸವಣ್ಣ.

■

೩೧

ಏತ ತಲೆವಾಗಿದರೇನು ಗುರುಭಕ್ತನಾಗಬಲ್ಲುವೆ?
ಇಕ್ಕಳ ಕೈಮುಗಿದರೇನು ಭೃತ್ಯಾಚಾರಿಯಾಗಬಲ್ಲುದೆ?
ಗಿಳಿಯೋದಿದರೇನು ಲಿಂಗವೇದಿಯಾಗಬಲ್ಲುದೆ?
ಕೂಡಲಸಂಗನ ಶರಣರು ಬಂದ ಬರವ ನಿಂದ ನಿಲವ
ಅನಂಗಸಂಗಿಗಳೆತ್ತ ಬಲ್ಲರು?

– ಬಸವಣ್ಣ

ಮನುಷ್ಯ, ಜೀವನದಲ್ಲಿ ಬಹಳ ಸಾರಿ ಆಗಿನ ಪರಿಸ್ಥಿತಿಗೆ ಅನುಗುಣವಾಗಿ ವರ್ತಿಸುತ್ತಾನೆ. ಬಹಳವಾಗಿ ಆ ವರ್ತನೆಯನ್ನು ಮನಸ್ಸಿನಿಂದ ಮಾಡಿರುತ್ತಾನೆಂದು ಹೇಳಲು ಬರುವುದಿಲ್ಲ. ಪ್ರಸಂಗದಲ್ಲಿ ಕೈಮುಗಿಯಬೇಕು, ಮುಗಿಯುತ್ತಾನೆ. ತಲೆಬಾಗಬೇಕು, ತಲೆಬಾಗುತ್ತಾನೆ. ಆ ನಡೆಗಳು ಹೃದಯದಿಂದ ಬಂದುವುಗಳಲ್ಲ. ಪರಿಸ್ಥಿತಿಯಲ್ಲಿ ಮಾಡಬೇಕಾದುದರಿಂದ ಮಾಡಿದ ಅಂತಹ ಭಕ್ತಿ ಆಚರಣೆಗಳು ಸೌಜನ್ಯದ ನಡತೆಗಳು ನಿರುಪಯೋಗ ಎಂಬ ತತ್ವವನ್ನು ತಿಳಿಸುವುದು ಈ ವಚನದ ಉದ್ದೇಶ.

ಏತದಿಂದ ಹೊಲಕ್ಕೆ ನೀರನ್ನು ಉಣ್ಣಿಸುವಾಗ ನೀರು ತುಂಬಿ ಏತವನ್ನು ಬಾಗಿಸಬೇಕಾಗುತ್ತದೆ. ಹಾಗೆಂದ ಮಾತ್ರಕ್ಕೆ ಏತ ಗುರುಭಕ್ತಿಯಿಂದ ತಲೆಬಾಗಿತು ಎಂದರ್ಥವಲ್ಲ. ಸಾಮಾನನ್ನು ಹಿಡಿಯಲು ಇಕ್ಕುಳದ ಎರಡು ಕೈಗಳನ್ನು ಕೂಡಿಸುತ್ತೇವೆ. ಆಗ ಇಕ್ಕಳ ಸ್ವಾಮಿನಿಷ್ಠೆಯ ಭೃತ್ಯನಾಗಿ ಕೈಮುಗಿಯಿತೆಂದೇನೂ ಅರ್ಥವಲ್ಲ. ಹಾಗೆಯೇ ಮಾನವನ ಭಕ್ತಿ ಇಲ್ಲದೆ ತಲೆಬಾಗಿಸಿದರೆ ಏತ ತಲೆಬಾಗಿಸಿದಂತೆ,

ಸ್ವಾಮಿನಿಷ್ಠೆ ಇಲ್ಲದೆ ಕೈಮುಗಿದರೆ, ಇಕ್ಕಳ ಕೈಮುಗಿದಂತೆ, ಇದಕ್ಕೇನೂ ಅರ್ಥವಿಲ್ಲ. ಗಿಳಿಯು, ಹೇಳಿದ್ದನ್ನು ಯಾಂತ್ರಿಕವಾಗಿ ಪುನರುಚ್ಚರಿಸುತ್ತದೆಯೆಂದ ಮಾತ್ರಕ್ಕೆ ಅದು ಹೇಳಿದ ಮಾತನ್ನು ಅರ್ಥಮಾಡಿಕೊಂಡು ಹೇಳಿತೆಂದೇನೂ ಅಲ್ಲ. ಅದೇ ರೀತಿ ಮಾನವನು ಯಾಂತ್ರಿಕವಾಗಿ ವೇದ ಮಂತ್ರಗಳನ್ನು ಪಠಿಸಿದನೆಂದ ಮಾತ್ರಕ್ಕೆ ಅವನು ಶಿವನ ಭಜಕನೆಂದೇನೂ ಅರ್ಥವಲ್ಲ. ಶರಣರು ಬಂದಾಗ, ವಿಷಯಾಸಕ್ತರಾದ ಜನರು ಯಾಂತ್ರಿಕವಾಗಿ ಭಕ್ತಿ ತೋರಿಸಿದರೆ ಅದು ಅವರ ಅಜ್ಞಾನವನ್ನು ತೋರಿಸುತ್ತದೆ. ಆ ಶರಣರು ಎಂಥವರು, ಅವರ ನಿಲುವೇನು ಎಂಬುದನ್ನು ಅರಿಯಲು ಅಶಕ್ತರಾದ ಅವಿವೇಕಿಗಳಿಗೆ, ಕಾಮುಕರಿಗೆ ಮೂಢರಿಗೆ ಅರ್ಥವಾಗುವುದಿಲ್ಲ ಎಂದಿದ್ದಾರೆ ಬಸವಣ್ಣನವರು.

ಬಹುಶಃ ಬಸವಣ್ಣನವರು ಈ ವಚನವನ್ನು ಶರಣರು ಬಂದಾಗ ಸಾಮಾನ್ಯ ಜನತೆ ಅವರ ಮಹಿಮೆಯನ್ನು ಗುರುತಿಸದೆ ಬೇಕೋ ಬೇಡವೋ ಎನ್ನುವ ಹಾಗೆ ತಲೆಬಾಗಿಸಿರಬಹುದು, ಕೈಮುಗಿವ ನಟನೆಮಾಡಿರಬಹುದು. ಅವರು ಮನವಿಲ್ಲದೆ ಮಾಡಿದ ಪರಿಯನ್ನು ನೋಡಿ ಅನ್ನಿಸಿದ ಭಾವನೆಯನ್ನು ಈ ವಚನದಲ್ಲಿ ವ್ಯಕ್ತ ಪಡಿಸಿದರಂತೆ ಕಾಣುತ್ತದೆ.

■

## ೩೨

ಏಳಿ ಮನುಜರಿರಾ ಶಿವಲಿಂಗಪೂಜೆಯ ಮಾಳ್ಪ
ವೇಳೆಯಾಯಿತು. ಮೋಹನಿದ್ರೆಯದು ಸಾಕಿನ್ನು
ಕಾಲಹರನಂ ಭಜಿಸಲಿಷ್ಟಾರ್ಥ ಸಿದ್ಧಿ ನಿಮಗಹುದು ಸದ್ಭಕ್ತಿಯಿಂದ
ಶಿವಲಿಂಗ ಪೂಜೆಯ ಮಾಳ್ಪರಿಗೆ ಭವಭಯವಿಲ್ಲ
ಶಿವಲಿಂಗ ಪೂಜೆ ಮಾಳ್ಪರಿಗೆ ಮೃತ್ಯುಗಳಿಲ್ಲ.
ಶಿವಲಿಂಗಪೂಜೆ ಮಾಳ್ಪವ ಶ್ವಪಚನಾದೊಡಂ-
ತವನೆ ಮುನಿ ಮುಖ್ಯ. ಶಿವಲಿಂಗ ಪೂಜೆ
ಮಾಡದವನೆ ಭವಿ. ಚಾಂಡಾಲ.

–ಘನಮಠಶಿವಯೋಗಿ

ಘನಮಠ ಶಿವಯೋಗಿಗಳು, ಭಗವಂತನಲ್ಲಿ ಅತ್ಯಂತ ನಿಷ್ಠೆಯ ಶರಣರು. ನಡೆ–ನುಡಿ ಒಂದಾಗಿ, ದೇವರಲ್ಲಿ ನಂಬಿಕೆ, ಶ್ರದ್ಧೆಗಳಿಂದ ಆಧ್ಯಾತ್ಮ ಜೀವನವನ್ನು ಬದುಕಿದವರು. ತಮ್ಮ ಬದುಕಿನಲ್ಲಿ ಪರಮಾತ್ಮನ ಕೃಪೆಗೆ ಪಾತ್ರರಾಗಿ ಆಧ್ಯಾತ್ಮ

ಸುಖವನ್ನು ಅನುಭವಿಸಿದವರು. ತಾವು ಉಂಡು, ಕಂಡುಕೊಂಡ ಸತ್ಯದ ಮೂಲಕ ಜನರನ್ನು ಎಚ್ಚರಿಸಿ ಅವರೂ ದೇವರ ಕೃಪೆಗೆ ಪಾತ್ರರಾಗಿ, ಈ ಜಗತ್ತಿನ ಮಾಯಾ ಬಂಧನದಿಂದ, ಬದುಕು-ಸಾವುಗಳಿಂದ ಮುಕ್ತರಾಗಿ, ಶಾಶ್ವತ ಸುಖವನ್ನು ಪಡೆಯಲೆಂದಾಶಿಸಿ, ನುಡಿದ ವಚನವಿದು. ಇದರಲ್ಲಿ ಮೋಹನಿದ್ರೆಯಿಂದ ಎದ್ದು ನಿಜವಾದ ಸುಖವನ್ನು ಅನುಭವಿಸುವ ಮಾರ್ಗವನ್ನು ಬೋಧಿಸಿದ್ದಾರೆ.

ಜನರನ್ನು ಕುರಿತು, ಎಲೈ ಮಾನವರೇ ಶಿವಲಿಂಗಪೂಜೆಯನ್ನು ಮಾಡುವ ವೇಳೆಯಾಯಿತು. ಈ ಮಾನವ ಜನ್ಮಕ್ಕೆ ಬಂದು ಮೋಹವೆಂಬ ನಿದ್ರೆಯಲ್ಲಿ ಮುಳುಗಿ ಭವದ ಕಷ್ಟಗಳನ್ನು ಅನುಭವಿಸುತ್ತಿದ್ದೀರಿ. ಅದು ಸಾಕು. ನೀವು ಭಗವಂತನನ್ನು ಭಕ್ತಿಯಿಂದ ಭಜಿಸಿದರೆ, ಎಂದರೆ, ಶಿವಲಿಂಗಪೂಜೆಯನ್ನು ಸದ್ಭಕ್ತಿಯಿಂದ ಮಾಡಿದರೆ ನಿಮಗೆ ಇಷ್ಟಾರ್ಥ ಸಿದ್ಧಿಯಾಗುತ್ತದೆ. ಶಿವಲಿಂಗ ಪೂಜೆ ಮಾಡಿದರೆ ಮೃತ್ಯಗಳಿಲ್ಲ. ಎಂದರೆ, ಮೃತ್ಯುವಿಗೆ ಸಮಾನವಾದ ಸಂಕಷ್ಟಗಳಿಗೆ ಒಳಗಾಗುವುದಿಲ್ಲ; ಹುಟ್ಟು ಸಾವುಗಳ ಭಯದಿಂದ ಬಿಡುಗಡೆಯಾಗುತ್ತೀರಿ. ಭಗವಂತನ ಬಳಿ ಇದ್ದು ಶಾಶ್ವತ ಸುಖಪಡೆಯುತ್ತೀರಿ ಎನ್ನುತ್ತಾರೆ. ಭಕ್ತಿಯಿಂದ ಶಿವಪೂಜೆ ಮಾಡುವವನು ಶ್ವಪಚನಾದರೂ ಅವನು ಭವಿಯಲ್ಲ, ಶ್ರೇಷ್ಠ ಋಷಿ ಸಮಾನ. ಶಿವಲಿಂಗಪೂಜೆಯ ಮಾಡದವನು, ಯಾವಕುಲದಲ್ಲೇ ಹುಟ್ಟಿದ್ದರೂ ಅವನು ಭವಿ, ಚಾಂಡಾಲ ಎಂದು ಸಾರಿದ್ದಾರೆ.

ಇಲ್ಲಿ ನಾವು ಶಿವಲಿಂಗಪೂಜೆ ಎಂದಾಕ್ಷಣ, ಕೇವಲ ಲಿಂಗಕ್ಕೆ ಅರ್ಘ್ಯ ಕೊಟ್ಟು ಪತ್ರೆ ಗಂಧ ಪುಷ್ಪಗಳಿಟ್ಟು ಯಾಂತ್ರಿಕ ಪೂಜೆಮಾಡುವುದೆಂದು ಅರ್ಥವಲ್ಲ. ತನ್ನನ್ನು ತಾನೇ ಶಿವನಿಗೆ ಅರ್ಪಿಸಿಕೊಂಡು, ಕಾಯಾ ವಾಚಾ ಮನಸಾ ಭಗವಂತನಲ್ಲಿ ಒಂದಾಗಿ ಧ್ಯಾನಗ್ರೈಯ್ಯುವುದು, ತಾನು ಭಗವಂತನ ಅಂಶ ಎಂದರಿಯುವುದು ಎನ್ನುವುದು ಮುಖ್ಯ, ಗಮನಾರ್ಹ.

■

## ೩೩

ಒಡಲೊಳಗೆ ಕಿಚ್ಚು ಸುಡದ ಭೇದವನು
ಕುಡಿದುದಕದಲ್ಲಿ ಆ ಕಿಚ್ಚು ನಂದದ ಭೇದವನು
ಮೃಡನೇ, ಪ್ರಾಣಪ್ರಕೃತಿಯೊಳಗೆ ನೀನಡಗಿಹ ಭೇದವನು
ಲೋಕದ ಜಡಜೀವಿಗಳೆತ್ತ ಬಲ್ಲರೈ ರಾಮನಾಥ

–ಜೇಡರ ದಾಸಿಮಯ್ಯ

ಮಾನವ ದೇಹವು ಪಂಚಧಾತುಗಳಾದ ವಾಯು, ಆಕಾಶ, ಅಪ್ಪು, ತೇಜಸ್ಸು (ಅಗ್ನಿ) ಮತ್ತು ಪೃಥ್ವಿಯಿಂದ ರೂಪಿತವಾಗಿದೆ. ಹಾಗಾಗಿ ಅಗ್ನಿ ದೇಹದಲ್ಲಿದೆ. ಅಗ್ನಿಯ ಗುಣ ಸುಟ್ಟು ಭಸ್ಮಮಾಡುವುದು. ಆದರೆ ನಮ್ಮ ದೇಹದಲ್ಲಿರುವ ಅಗ್ನಿಯು ದೇಹವನ್ನು ಸುಟ್ಟು ಹಾಕದೆ, ಅದು ದೇಹ ರಕ್ಷಣೆಗೆ ಸಹಾಯಕವಾಗಿದೆ. ಈ ಗುಣ ಅಗ್ನಿಗೆ ಉಂಟುಮಾಡಿದವರಾರು? ಕಿಚ್ಚಿಗೆ ನೀರನ್ನು ಹಾಕಿದರೆ ಅದು ನಂದಿಹೋಗುತ್ತದೆ, ನಂದಬೇಕು. ಆದರೆ ನಮ್ಮ ದೇಹದೊಳಗೆ ಕಿಚ್ಚು ಇದ್ದರೂ ನಾವು ಕುಡಿದ ನೀರು ದೇಹದೊಳಕ್ಕೆ ಹೋದರೂ ಅಲ್ಲಿರುವ ಅಗ್ನಿಯನ್ನು ಈ ನೀರು ನಂದಿಸುವುದಿಲ್ಲ. ಇಂತಹ ಅದ್ಭುತ ಯಾರಿಂದ ಆಗುತ್ತದೆ. ಈ ನಮ್ಮ ಪ್ರಾಣದಲ್ಲಿ ದೇವನಿದ್ದಾನೆ. ಈ ಪ್ರಕೃತಿಯಲ್ಲಿ ದೇವನಡಗಿದ್ದಾನೆ. ಈ ದೇವರ ಪ್ರಭಾವದಿಂದಲೇ ಕಿಚ್ಚು ದೇಹವನ್ನು ಸುಡುತ್ತಿಲ್ಲ. ಕುಡಿದ ನೀರು ದೇಹದಲ್ಲಿರುವ ಅಗ್ನಿಯನ್ನು ನಂದಿಸಲಾರದು. ಈ ಅಂಶವನ್ನು ಜಡಜೀವಿಗಳಾದ ಮಾನವರು ತಿಳಿದಿಲ್ಲ, ತಿಳಿಯಲು ಪ್ರಯತ್ನಿಸುತ್ತಿಲ್ಲ ಎಂದು ಶರಣ ದಾಸಿಮಯ್ಯ ಜನರ ಅಜ್ಞಾನವನ್ನು, ಭಗವಂತನ ಶಕ್ತಿಯನ್ನು ಈ ವಚನದಲ್ಲಿ ಅದ್ಭುತ ರೀತಿಯಲ್ಲಿ ಅರಿವು ಮಾಡಿಕೊಟ್ಟಿದ್ದಾನೆ.

ಮನುಷ್ಯರು ಅಹಂಕಾರದಿಂದ ಮೆರೆಯುತ್ತಾರೆ. ಏನನ್ನು ಬೇಕಾದರೂ ತಾವು ಮಾಡಬಹುದೆಂದುಕೊಳ್ಳುತ್ತಾರೆ. ಆದರೆ ಅಘಟಿತ ಘಟನೆಗಳು ಘಟಿಸುವಂತೆ ಮಾಡುವವನು ಆ ಸರ್ವಶಕ್ತನಾದ ಭಗವಂತನೆಂಬುದನ್ನು ಮರೆಯುತ್ತಾರೆ. ತಮ್ಮ ಕಣ್ಣೆದುರಿಗೇ ತಮ್ಮ ದೇಹದಲ್ಲೇ ನಡೆಯುವ ಈ ಆಶ್ಚರ್ಯವನ್ನು ಅರಿಯದ ಜಡಮಾನವರು ಭಗವಂತನ ಶಕ್ತಿ ಎಷ್ಟು ಮಹತ್ತರವೆಂಬುದನ್ನು ಅರಿಯಲು ಸಾಧ್ಯವಿಲ್ಲ. ಆದುದರಿಂದ ಮೊದಲು ಭಗವಂತನ ಶಕ್ತಿ ಏನು ಎಂದು ಅರ್ಥಮಾಡಿಕೊಂಡರೆ, ನಮ್ಮ ಶಕ್ತಿ ಎಷ್ಟರ ಮಟ್ಟಿನದು ಎಂಬುದು ತಿಳಿಯುತ್ತದೆ ಎಂಬ ಅರ್ಥವನ್ನು ಈ ವಚನ ತಿಳಿಸುತ್ತದೆ.

■

೩೪

ಕಲ್ಲನಾಗರ ಕಂಡರೆ ಹಾಲನೆರೆಯುವರು,
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ!
ಉಂಬ ಜಂಗಮ ಬಂದರೆ ನಡೆಯೆಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ!

ನಮ್ಮ ಕೂಡಲ ಸಂಗನ ಶರಣರ ಕಂಡುದಾಸೀನವ ಮಾಡಿದ್ಧರೆ.
ಕಲ್ಲು ತಾಗಿದ ಮಿಟ್ಟೆಯಂತಪ್ಪರಯ್ಯಾ.

–ಬಸವಣ್ಣ

ನಮ್ಮ ಜನರಲ್ಲಿರುವ ಆಚಾರಕ್ಕೂ ವಿಚಾರಕ್ಕೂ ಇರುವ ಅಂತರವನ್ನು ಢೋಂಗಿತನವನ್ನು ಈ ವಚನದಲ್ಲಿ ಬಸವಣ್ಣನವರು ವಿಡಂಬನ ಮಾಡಿ ವಿಶ್ಲೇಷಿಸಿದ್ದಾರೆ.

ಜನರು ನಾಗರಹಬ್ಬವನ್ನು ಆಚರಿಸುತ್ತಾರೆ. ಆ ದಿನ ಕಲ್ಲಿನ ನಾಗರಪ್ರತಿಮೆಗೆ ಹಾಲೆರೆದು ಪೂಜಿಸುತ್ತಾರೆ. ಆದರೆ ನಿಜವಾದ ಹಾವು ಬಂದರೆ ಅದನ್ನು ಕೊಲ್ಲುತ್ತಾರೆ. ಇಲ್ಲಿ ಅವರ ಆಚರಣೆಗೂ, ನಂಬಿಕೆಗೂ ಸ್ವಲ್ಪವೂ ಸಂಬಂಧವಿಲ್ಲ. ಹಾವನ್ನು ಪೂಜಿಸುವಷ್ಟು ಭಕ್ತಿ ಇದ್ದರೆ, ನಿಜವಾದ ಹಾವು ಬಂದಾಗ ಕೊಲ್ಲಬೇಕೇಕೆ? ಹಾವು ವಿಷಜಂತು ಅದನ್ನು ಇರಗೊಡಬಾರದು ಎಂಬ ಅಭಿಪ್ರಾಯವಿದ್ದರೆ, ಅದನ್ನು ಪೂಜಿಸಬೇಕೇಕೆ? ಇಂತಹ ಆತ್ಮವಂಚನೆಯನ್ನು ದೇವರು ಸಹಿಸುವುದಿಲ್ಲ. ಇದೇ ಜನರು ಊಟಮಾಡದಿರುವ ಲಿಂಗಕ್ಕೆ ಬಗೆಬಗೆಯ ಭಕ್ಷ್ಯ ಭೋಜ್ಯಗಳನ್ನು ಮಾಡಿ, ಎಡೆ ಹಿಡಿಯುತ್ತಾರೆ. ಆದರೆ ದೇವರ ಪ್ರತಿರೂಪವಾದ ಜಂಗಮ ಹಸಿದು ಬಂದರೆ ಊಟಕ್ಕಿಡದೆ ಓಡಿಸುತ್ತಾರೆ. ಇಂತಹ ಅರ್ಥವಿಲ್ಲದ ಆಚರಣೆ ಮಾಡುವ, ಆದರೆ ಕೂಡಲಸಂಗಮನ ಶರಣರನ್ನು ಅಲಕ್ಷಿಸುವ ಜನರನ್ನು ದೇವರು ಸಹಿಸುವುದಿಲ್ಲ. ಅಂತಹ ಜನರನ್ನು ಕಲ್ಲಿನಿಂದ ಹೊಡೆದ ಮಣ್ಣಿನ ಹೆಂಟೆಯಂತೆ, ಸೊಕ್ಕು ಮುರಿದು ಪುಡಿಪುಡಿ ಮಾಡಿಬಿಡುತ್ತಾನೆ ಎನ್ನುವ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ.

■

೩೫

ಕರಿಯಂಜುವುದು ಅಂಕುಶಕ್ಕಯ್ಯಾ
ಗಿರಿಯಂಜುವುದು ಕುಲಿಶಕ್ಕಯ್ಯಾ
ತಮಂಧವಂಜುವದು ಜ್ಯೋತಿಗಯ್ಯಾ
ಕಾನನವಂಜುವುದು ಬೇಗೆಗಯ್ಯಾ
ಪಂಚಮಹಾಪಾತಕವಂಜುವುದು
ಕೂಡಲಸಂಗನ ನಾಮಕ್ಕಯ್ಯ

–ಬಸವಣ್ಣ

ಪ್ರತಿಯೊಂದಕ್ಕೂ ಅದೆಷ್ಟೇ ದೊಡ್ಡದಾಗಿದ್ದರೂ ಅದಕ್ಕೊಂದು ನಿಯಂತ್ರಣವಿದ್ದೇ ಇರುತ್ತದೆ, ಇರಬೇಕು ಸಹ. ಇದು ಪ್ರಕೃತಿ ನಿಯಮ. ಪ್ರತಿಯೊಂದಕ್ಕೂ ಒಂದಲ್ಲ ಒಂದರ ಭಯವಿದ್ದೇ ಇರುತ್ತದೆ. ಇಲ್ಲದಿದ್ದಲ್ಲಿ ಅದನ್ನು ಹತೋಟಿಗೆ ತರುವುದು ಕಷ್ಟವಾಗಬಹುದು. ಹಾಗಾಗಿ ಅದರಿಂದ ತೊಂದರೆಯಾಗಲೂ ಬಹುದು. ಹಾಗೆ ತೊಂದರೆಯಾಗುವ ಸಂದರ್ಭ ಬಂದರೆ ಅಥವಾ ಅದರಿಂದ ಪ್ರಯೋಜನ ಪಡೆದುಕೊಳ್ಳಬೇಕಾದಾಗ ಅದನ್ನು ಹತೋಟಿಯಲ್ಲಿ ತಂದುಕೊಳ್ಳಬೇಕಾಗುತ್ತದೆ. ಆನೆಯು ಅತಿ ಬಲಶಾಲಿಯಾದ ಪ್ರಾಣಿಯಾದರೂ ಅಂಕುಶಕ್ಕೆ ಹೆದರುತ್ತದೆ. ಆದುದರಿಂದ ಅವಶ್ಯವಿದ್ದಾಗ ಅಂಕುಶವನ್ನುಪಯೋಗಿಸಿ ಆನೆಯನ್ನು ಹಿಡಿತದಲ್ಲಿ ಇಟ್ಟು ಕೊಳ್ಳಲು ಬರುತ್ತದೆ. ಪರ್ವತ ಅತ್ಯಂತ ದೊಡ್ಡದಾಗಿದ್ದರೂ ಅದು ಉಳಿಯ ಮೊನೆಗೆ ಹೆದರುತ್ತದೆ. ಏಕೆಂದರೆ ಅತೀ ಸಣ್ಣದಾದ ಉಳಿಯ ಮೊನೆಯಿಂದ ಎಂತಹ ದೊಡ್ಡ ಪರ್ವತವನ್ನಾದರೂ ಪುಡಿಮಾಡಿ ಹಾಕಬಹುದು. ದಟ್ಟವಾದ ವಿಶಾಲವಾದ ಅಂಧಕಾರವು ಚಿಕ್ಕದಾದ ಜ್ಯೋತಿಗೆ ಅಂಜಿ ಓಡಿಹೋಗುತ್ತದೆ. ಕತ್ತಲೆಯಲ್ಲಿ ಸಣ್ಣ ಜ್ಯೋತಿಯನ್ನಯ ಹತ್ತಿಸಿದ ಕೂಡಲೇ ಕತ್ತಲೆ ಒಂದು ಕ್ಷಣ ಸಹ ಅಲ್ಲಿ ಉಳಿಯುವುದಿಲ್ಲ. ಅದೇ ರೀತಿ ಅಷ್ಟು ದೊಡ್ಡದಾದ ಅನೇಕ ದೊಡ್ಡ ಗಿಡ ಮರಗಳು ಪ್ರಾಣಿಗಳೂ ತುಂಬಿರುವ ಕಾಡು ಬೇಗೆಗೆ ಅಂಜುತ್ತದೆ. ಏಕೆಂದರೆ ಅದು ಕಾಡನ್ನು ಸಂಪೂರ್ಣವಾಗಿ ಸುಟ್ಟು ಭಸ್ಮ ಮಾಡಿಬಿಡುತ್ತದೆ. ಏನು ಮಾಡಿದರೂ ಕಾಡಿಗೆ ಬೇಗೆಯನ್ನು ತಡೆಗಟ್ಟಲಾಗುವುದಿಲ್ಲ. ಪಂಚಮಹಾಪಾತಕಗಳು ಕೂಡಲ ಸಂಗನ ನಾಮಸ್ಮರಣೆಯಿಂದಲೇ ಹೇಳಹೆಸರಿಲ್ಲದೆ ನಾಶವಾಗಿ ಹೋಗುತ್ತದೆ. ಗೋಹತ್ಯೆ, ಸ್ತ್ರೀಹತ್ಯೆ, ಶಿಶುಹತ್ಯೆ ಮಾಡುವ ಪಂಚಮಹಾಪಾತಕಿಗಳಿಗೆ ಭಗವಂತನ ನಾಮಸ್ಮರಣೆ ಕೇಳಿದರೆ ಪಾತಕ ಮಾಡುವ ಧೈರ್ಯವಾಗುವುದಿಲ್ಲ. ಅಲ್ಲದೆ ಪಾತಕಿಗಳೂ ಸಹ ದೇವರ ನಾಮಸ್ಮರಣೆಯಿಂದ ಮುಕ್ತಿ ಪಡೆಯಬಹುದಾಗಿದೆ. ಎಷ್ಟೇ ದೊಡ್ಡ ಪಾಪವನ್ನಾದರೂ ಭಗವಂತನ ನಾಮಸ್ಮರಣೆ ತೊಡೆದುಹಾಕಬಲ್ಲದು.

■

೩೬

ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದ ಮಾಬುದೇ?
ಕಡೆಗೀಲು ಬಂಡಿಗಾಧಾರ
ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ

–ಜೇಡರ ದಾಸಿಮಯ್ಯ

ಬಂಡಿಯು ಗಾಲಿಗಳ ಸಹಾಯದಿಂದ ಉರುಳುತ್ತಿದೆ. ಗಾಲಿಗಳು ಕೆಳಗುರುಳದಂತೆ ಗಾಡಿಗೆ ಹತ್ತಿ ಇರಬೇಕಾದರೆ, ಅದಕ್ಕೆ ಕಡೆಗೀಲು ಹಾಕಬೇಕಾಗುತ್ತದೆ. ಆ ಕೀಲು ಗಾಲಿಗಾಧಾರವಾಗಿ ಇದ್ದು ಗಾಲಿ ಬೀಳದಂತೆ, ಬಂಡಿ ಉರುಳದಂತೆ ತಡೆಯಲು ಶಕ್ತವಾಗುತ್ತದೆ. ಅದು ಇಲ್ಲದಿದ್ದರೆ ಬಂಡಿ ಕೆಳಗುರುಳಿ ಬಿದ್ದುಹೋಗುತ್ತದೆ. ಹಾಗೆಯೇ ಕಡುದರ್ಪದಿಂದ ಅಹಂಕಾರಿಯಾದ ಮನುಷ್ಯನ ಶರೀರವೆಂಬ ಬಂಡಿಗೆ, ಶಿವಶರಣರ ವಚನಾಮೃತಗಳು, ತತ್ವದ ಮಾತುಗಳು, ಬೋಧೆಯ ನುಡಿಗಳು. ಆಧ್ಯಾತ್ಮಾನುಭವದ ನುಡಿಗಳೇ ಕಡೆಗೀಲಿದ್ದಂತೆ. ಆ ದರ್ಪದ ಜನರು ಸೊಕ್ಕಿ ನಡೆವಾಗ ಶಿವಶರಣರ ಮಾರ್ಗದರ್ಶನಪೂರ್ಣವಾದ, ವಿವೇಕವಾದ ವಚನಗಳು ಕಿವಿಗೆ ಬಿದ್ದರೆ, ಅವರನ್ನು ವಿಚಾರಕ್ಕೆ ಹಚ್ಚುತ್ತವೆ. ತಾವು ನಡೆಯುತ್ತಿರುವ ರೀತಿ ತಪ್ಪೆ-ಸರಿಯೆ ಎಂದು ಯೋಚಿಸುವಂತೆ ಮಾಡುತ್ತವೆ. ತಪ್ಪುದಾರಿ ಬಿಟ್ಟು ನೇರಮಾರ್ಗದಲ್ಲಿ ಹೋಗುವಂತೆ ಮಾಡಿ, ಯಾವ ನಿಯಂತ್ರಣ ಇಲ್ಲದ ಅವರ ಜೀವನಕ್ಕೆ ಒಂದು ತಡೆಯಾಗುತ್ತದೆ. ಹಾಳಾಗುವ ಅವರ ಜೀವನಕ್ಕೆ ಶಿವಶರಣರ ನುಡಿಗಳು ಕಡೆಗೀಲಿನಂತೆ ತಡೆದು ಹಾಳಾಗದೆ ಉಳಿಯಲು ಸಹಾಯಕವಾಗುತ್ತಧೆ ಎಂದು ಹಿರಿಯ ಶರಣ ಜೇಡರ ದಾಸಿಮಯ್ಯನವರು ಈ ದೇಹವನ್ನು ಬಂಡಿಗೂ, ಶರಣರ ನುಡಿಮುತ್ತುಗಳನ್ನು ಕಡೆಗೀಲಿಗೂ ಹೋಲಿಸಿ, ಅರ್ಥವನ್ನು ಬಹಳ ಸುಂದರವಾಗಿ ತಿಳಿಸಿದ್ದಾರೆ.

■

## ೩೭

ಕಲ್ಲ ತಾಗಿದ ಮಿಟ್ಟೆ ಕೆಲಕ್ಕೆ ಸಾರುವಂತೆ
ಅನು ಬಲ್ಲೆನೆಂಬ ನುಡಿಸಲ್ಲದು.
ಲಿಂಗದಲ್ಲಿ ಮರೆದು ಮಚ್ಚಿರ್ದು ಮನವು ಹೊರಗೆ ಬೀಸರವೋಗದೆ?
ಉರಿ ತಾಗಿದ ಕೋಲು ಗರಿತೋರುವುದೆ?
ಮರೆದು ಬೀಸುವ ಗಾಳಿ ಪರಿಮಳವನುಂಡಂತೆ ಬೆರೆಸಬೇಕು
ಚನ್ನಮಲ್ಲಿಕಾರ್ಜುನಯ್ಯನ

–ಅಕ್ಕಮಹಾದೇವಿ

ಅಹಂಕಾರ ಬಹುಕೆಟ್ಟದು. ಅಹಂಕಾರವಳಿಯದ ಮುನ್ನ ಆಧ್ಯಾತ್ಮಮಾರ್ಗದಲ್ಲಿ ಮುಂದುವರಿಯಲು ಸಾಧ್ಯವೇ ಇಲ್ಲ. ಅಹಂಕಾರವಿದ್ದ ಮನುಷ್ಯ ಎಲ್ಲದಕ್ಕೂ ತಾನು, ತನಗಾಗಿ, ತನ್ನಿಂದ ಎಂದು ಮೆರೆಯುತ್ತಾನೆ. ಇಂತಹವರ ಬಳಿ ಶಿವ

ಸುಳಿಯುವುದೂ ಸಹ ಇಲ್ಲ. ಆದ್ದರಿಂದ ನನಗಿದು ಗೊತ್ತು, ನಾನೇ ಸರ್ವಜ್ಞ ಎಂಬ ಮಾತು ಸರಿಯಲ್ಲ ಎಂಬ ಅಂಶ ಈ ವಚನದ ಮುಖ್ಯ ಸಾರ.

ಮಣ್ಣು ಹೆಂಟೆ ಗಟ್ಟಿಯಲ್ಲ. ಅದಕ್ಕೆ ಕಲ್ಲು ತಾಗಿದರೆ ಪುಡಿಯಾಗಿ ಕೆಳಕ್ಕೆ ಬಿದ್ದು ಹೋಗುತ್ತದೆ. ಹಾಗೆ ಅಹಂಕಾರ ಮಣ್ಣಿನ ಹೆಂಟೆಯಂತೆ ಸತ್ವಹೀನ. ಕಲ್ಲಿನಂತಹ ಶಕ್ತಿಯುಳ್ಳ ಶಿವಶಕ್ತಿಯು ಅದಕ್ಕೆ ತಾಗಿದರೆ ಸಾಕು ಅಹಂಕಾರ ಪುಡಿಪುಡಿಯಾಗಿ ನುಚ್ಚು ನೂರಾಗುತ್ತದೆ. ಆದುದರಿಂದ ಈ ಅಹಂಕಾರವನ್ನು ನಾಶಮಾಡಿಕೊಳ್ಳಲು ಲಿಂಗದಲ್ಲಿ ಮನಸ್ಸಿಟ್ಟು, ಅದು ಚಂಚಲವಾಗದಂತೆ ಎಚ್ಚರಿಕೆವಹಿಸಿ, ತದೇಕಧ್ಯಾನದಿಂದ ತನ್ಮಯನಾಗಬೇಕು. ಆಗ ದೇವನ ಕೃಪಾಕಟಾಕ್ಷದಿಂದ ಕೆಟ್ಟುದೆಲ್ಲವೂ ಭಸ್ಮವಾಗುತ್ತದೆ. ಆದುದರಿಂದ ಭಗವಂತನದಲ್ಲಿ ಹೇಗೆ ಬೆರೆಯಬೇಕೆಂದರೆ ಪರಿಮಳವು, ಬೀಸುವ ಗಾಳಿಯಲ್ಲಿ ಒಂದಾಗಿ ಒಡಬೆರೆತು, ಗಾಳಿಯೇ ಪರಿಮಳದ ಗಾಳಿಯಾಗುವಂತೆ ಮನಸ್ಸು ದೇವರಲ್ಲಿ ತನ್ಮಯವಾಗಿ ದೇವರಲ್ಲಿ ಒಂದಾಗಬೇಕು. ಆಗ ಮನುಷ್ಯನ ಅಹಂಕಾರ ನಾಶವಾಗಿ ಅವನು ಭಕ್ತನಾಗುತ್ತಾನೆ ಎಂಬ ಮಾತಿನ್ನಲ್ಲಿ ಅಕ್ಕಮಹಾದೇವಿ ಹೇಳಿದ್ದಾಳೆ.

■

## ೩೮

ಕಲ್ಲುಗುಂಡಿನ ಮೇಲೆ ಮಲ್ಲಿಗೆ ಅರಳಿಕ್ಕಿ
ನಿಲ್ಲದೆ ಹಣೆಯ ಬಡಿವರ್ಗೆ
ಬುಗುಟಲ್ಲದಿಲ್ಲ ಕಾಣಯ್ಯ ಸರ್ವಜ್ಞ

–ಬಸವಣ್ಣ

ಇಲ್ಲಿ ವಿಡಂಬನೆಯನ್ನು ಕಾಣಬಹುದು. ಅನೇಕ ಜನರು ಭಕ್ತಿ ಭಾವನೆಯೇ ಇಲ್ಲದೆ ಯಾಂತ್ರಿಕವಾಗಿ ಗುಡಿಗೆ ಹೋಗುತ್ತಾರೆ. ಯಾಂತ್ರಿಕವಾಗಿ ದೇವರನ್ನು ಮಲ್ಲಿಗೆ ಹೂವಿನಿಂದ ಪೂಜಿಸುತ್ತಾರೆ. ದೇವರ ಮುಂದಿನ ಹೊಸ್ತಿಲ ಕಲ್ಲಿಗೆ ಹಣೆ ತಾಗಿಸುತ್ತಾರೆ. ಅದು ಯಾಂತ್ರಿಕವಾಗಿ ಅರ್ಪಿಸುವ ನಮಸ್ಕಾರ. ಮೊದಲಿನಿಂದ ರೂಢಿಯಾಗಿ ಬಂದಿರುವ ಆಚರಣೆಯೇ ಹೊರತು, ಅವರ ಮನಸ್ಸಿನಲ್ಲಿ ಭಕ್ತಿಭಾವವಾಗಲೀ, ದೇವರ ಬಗ್ಗೆ ಪೂಜ್ಯ ಭಾವನೆಯಾಗಲೀ ಇರುವುದಿಲ್ಲ. ಇಂತಹವರನ್ನು ಗಮನಿಸಿದ ಸರ್ವಜ್ಞ ಈ ಜನರು ಹೊಸ್ತಿಲ ಕಲ್ಲಿಗೆ ಹಣೆಯನ್ನು ಗಟ್ಟಿಸಿಕೊಂಡುದಕ್ಕೆ ಸಿಗುವ ಫಲವೆಂದರೆ, ಹಣೆಯ ಮೇಲೆ ಬುಗುಟೇ ಹೊರತು ಪರಮಾತ್ಮ ಆಶೀರ್ವಾದವಲ್ಲ ಎಂದು ವಿಡಂಬನಾತ್ಮಕವಾಗಿ ನುಡಿದಿದ್ದಾನೆ.

■

೩೯

> ಕಬ್ಬುನದ ಶುನಕನ ತಂದು ಪರುಷವ ಮುಟ್ಟಿಸಲೊಡನೆ
> ಹೊನ್ನ ಶುನಕವಪ್ಪುದಲ್ಲದೆ ಪರುಷವಾಗಲರಿಯದು ನೋಡಾ.
> ಲೋಕದ ಮಾನವನ ತಂದು ಭಕ್ತನ ಮಾಡಿದೊಡೆ
> ವೇಷಲಾಂಛನಿಯಹನಲ್ಲದೆ ಭಕ್ತನಾಗಲರಿಯ ನೋಡಾ
> ಇದು ಕಾರಣ ಕೂಡಲಸಂಗಮದೇವಯ್ಯ
> ಮಜ್ಜನಕ್ಕೆರೆವ ಭವಿಗಳನೆಂತು ಭಕ್ತರೆಂಬೆನಯ್ಯಾ.

–ಬಸವಣ್ಣ

ಪರುಷವು ತಾನು ಮುಟ್ಟಿದುದನೆಲ್ಲವನ್ನು ಸುವರ್ಣವಾಗಿ ಮಾಡುತ್ತದೆ. ಆದುದರಿಂದ ಒಂದು ಕಬ್ಬಿಣದ ನಾಯಿಯನ್ನು ತಂದು ಅದಕ್ಕೆ ಪರುಷವನ್ನು ಮುಟ್ಟಿಸಿದರೆ ಅದು ಬಂಗಾರದ ನಾಯಿಯಾಗಬಲ್ಲುದೇ ಹೊರತು ಪರುಷದ ಗುಣವನ್ನು ಪಡೆಯಲು ಶಕ್ತವಾಗುವುದಿಲ್ಲ. ಹಾಗೆಯೇ ದೇವರ ಬಗ್ಗೆ ಆಸಕ್ತಿ ಇಲ್ಲದ, ಆಧ್ಯಾತ್ಮದ ಹಸಿವಿಲ್ಲದ ಮಾನವನನ್ನು ಒತ್ತಾಯದಿಂದ ಭಕ್ತನನ್ನಾಗಿ ಮಾಡಿದರೆ, ಭಕ್ತನ ವೇಷಗಳನ್ನು, ಗುರುತನ್ನು ಹಾಕಿಕೊಳ್ಳಬಲ್ಲನೇ ಹೊರತು ಮನಸ್ಸಿನಿಂದ ನಿಜವಾದ ಭಕ್ತನಾಗಲಾರ. ಅಂದರೆ ಭಕ್ತನಲ್ಲಿರಬೇಕಾದ ಗುಣಗಳು ಅವನಲ್ಲಿ ಕಾಣುವುದಿಲ್ಲ. ನೋಡಲಷ್ಟೇ ಭಕ್ತನಂತೆ ಕಾಣುತ್ತಾನೆ. ಆದುದರಿಂದ ಕೇವಲ ಲಿಂಗವನ್ನು ಕಟ್ಟಿಕೊಂಡು ಮಜ್ಜನ ಮಾಡಿ, ಪೂಜೆಮಾಡುವವರನ್ನು ಭವಿಗಳಲ್ಲವೆಂದೂ ಅಥವಾ ಭಕ್ತರೆಂದು ಹೇಳಲು ಬರುವುದಿಲ್ಲವೆಂದು ಬಸವಣ್ಣನವರು ತಿಳಿಸಿದ್ದಾರೆ.

ಬಾಯಾರಿಕೆ ಇಲ್ಲದ ಕುದುರೆಯನ್ನು ನೀರಿಗೆ ತೆಗೆದುಕೊಂಡು ಹೋಗಬಹುದು. ಆದರೆ ನೀರನ್ನು ಕುಡಿಸಲು ಸಾಧ್ಯವಿಲ್ಲ. ಹಾಗೆಯೇ ಭಕ್ತಿ ಗುಣಗಳನ್ನು ಪಡೆದು, ಭಕ್ತನಾಗಿ ಬದುಕಬೇಕೆಂಬ ಆಸೆ ಇಲ್ಲದಿದ್ದಲ್ಲಿ ಅವನಿಗೆ ದೀಕ್ಷೆಕೊಟ್ಟರೂ ಪ್ರಯೋಜನವಿಲ್ಲ. ಅವನು ಲಾಂಛನಗಳಿಂದ, ಉಡುಗೆತೊಡುಗೆಗಳಿಂದ ಭಕ್ತನಂತೆ ಕಾಣಬಹುದೇ ಹೊರತು ನಿಜವಾದ ಭಕ್ತಗುಣಗಳು, ಆಚರಣೆಗಳು ಅವನಲ್ಲಿರುವುದಿಲ್ಲ. ಪರುಷಮಣಿಯಂತಹ ಗುರುವು ಸ್ಪರ್ಷಿಸಿದರೆ ಭಕ್ತನಾದವನು ಗುರುವಿನಂತೆಯೆ ಪರುಷಮಣಿಯಾಗುತ್ತಾನೆ. ಅಂತಹ ಯೋಗ್ಯತೆಯಿಲ್ಲದವನು ಗುರುವಿನಿಂದ ದೀಕ್ಷೆಪಡೆದರೂ ಒಳಗೆ ಏನೂ ಬದಲಾವಣೆಯಾಗುವುದಿಲ್ಲ. ಹೊರಗಷ್ಟೇ ಬದಲಾವಣೆ ಕಾಣಬಹುದು ಅವರು ಲಾಂಛನದಿಂದ ಭಕ್ತರು ಅಷ್ಟೆ, ಆದರೆ ಸ್ವಭಾವದಿಂದ ಭವಿಗಳಾಗಿಯೇ ಉಳಿಯುತ್ತಾರೆ.

■

## ೪೦

ಕನಕ ಕಾಮಿನಿ ಭೂಮಿಗಾಗಿ ಹೊಡೆದಾಡೀ ಕೆಟ್ಟಿತೀ ಜಗವೆಲ್ಲ
ಇದಕಂಡು ಕೇಳಿ ನೀನೇತಕೆ ಇಚ್ಛೈಸುವೆ ಎಲೆ ಹುಚ್ಚುಮನವೆ?
ಹಗಲುಕಂಡ ಕಮರಿಯ ಇರುಳು ಬೀಳುವರೆ ಎಲೆ ಮರುಳುಮನವೆ?
ಕೆಡಬೇಡ ಕೆಥಬೇಡ ನಿನಗೊಂದು ಉಪಾಯವ ಹೇಳುವೆ ಕೇಳು ಎಲೆ
ಮರುಳುಮನವೆ
ಜಗದ ಆಗು ಹೋಗನರಿತು, ಜಗದೀಶ ಅಖಂಡೇಶ್ವರನ ನಂಬಿಯಾದಡೆ
ನಿನಗೆ ಜನನ ಮರಣಂಗಳು ವಿರಹಿತವಾಗಿ ಪರಮಪದವು
ದೊರಕೊಂಬುದು ನೋಡಾ!

– ಷಣ್ಮುಖಸ್ವಾಮಿ

ಈ ಜಗತ್ತಿನ ಜನವೆಲ್ಲಾ ಹೊನ್ನು, ಹೆಣ್ಣು, ಮಣ್ಣಿಗಾಗಿ ಹೊರಾಡುತ್ತದೆ, ಜಗಳಾಡುತ್ತದೆ. ಜಗತ್ತಿನ ಹೋರಾಟವೆಲ್ಲಾ ಇವುಗಳನ್ನು ಪಡೆಯುವುದಕ್ಕಾಗಿಯೇ. ಇದನ್ನು ಪಡೆಯುವ ಪ್ರಯತ್ನದಲ್ಲಿ ಮಾನವ ಯಾವ ಕ್ಷುದ್ರತನಕ್ಕೂ ಇಳಿಯಬಲ್ಲ, ಅತಿಯಾದ ಹೇಸಿಗೆ ಬರುವ ಕೆಲಸವನ್ನಾದರೂ ಮಾಡುತ್ತಾನೆ. ಹೀಗೆ ಅವುಗಳನ್ನು ಹೊಂದುವ ಆಸೆಗಾಗಿ ದೂರದೃಷ್ಟಿ ಇಲ್ಲದೆ, ಅವುಗಳನ್ನು ಪಡೆಯುವುದೊಂದನ್ನೇ ಗುರಿಯಾಗಿಟ್ಟುಕೊಂಡು ಮಾಡಬಾರದ ಕೆಲಸ ಮಾಡುತ್ತಾನೆ. ನಂತರ ಪಡಬಾರದ ಕಷ್ಟಗಳಿಗೆ ಒಳಗಾಗುತ್ತಾನೆ. ಇದನ್ನೆಲ್ಲಾ ನೋಡಿದ ಶರಣ ಷಣ್ಮುಖಸ್ವಾಮಿಯು, ಅದಕ್ಕಾಗಿ ಆಸೆಪಡುವ ತನ್ನ ಮನವನ್ನು ಕುರಿತು 'ಎಲೈ ಹುಚ್ಚು ಮನಸ್ಸೇ, ಕಾಮಿನಿ, ಕಾಂಚನ, ಭೂಮಿಯ ಆಸೆಗಾಗಿ ಮಾಡಬಾರದ್ದನ್ನು ಮಾಡುವವರನ್ನು ಅವರ ತೊಳಲಾಟವನ್ನು ನೋಡಿಯೂ, ಅದನ್ನೇಕೆ ಇಚ್ಛೈಸುತ್ತಿ. ಅವುಗಳ ಬೆನ್ನು ಹತ್ತಿದವರ ಪಾಡು ನಾಯಿಗಿಂತಲೂ ಕಡೆ. ಅವರಿಗೆ ನೆಮ್ಮದಿಯಿಲ್ಲ, ನಿದ್ರೆ ನೀರಡಿಕೆಗಳಿಲ್ಲ, ಸಮಾಧಾನವಿಲ್ಲ. ಹಾಗೆ ಗೋಳಾಡುವುದನ್ನು ನೋಡಿಯೂ ನೀನದಕ್ಕೆ ಆಸೆಪಟ್ಟೆಯಾದರೆ ರಾತ್ರಿ ಕಂಡ ಕಮರಿಗೆ (ಕಣ್ಣಿವೆಗೆ–ತಗ್ಗಿಗೆ) ಹಗಲು ಬಿದ್ದಂತಹ ಮೂರ್ಖತನವಾಗುತ್ತದೆ. ಆದ್ದರಿಂದ ಏ ಹುಚ್ಚು ಮನಸ್ಸೇ, ಈ ಗೋಳಾಟಕ್ಕೆ ಸಿಕ್ಕದೆ, ಸುಖವಾಗಿರುವ ಒಂದು ಉಪಾಯವನ್ನು ಹೇಳುತ್ತೇನೆ ಕೇಳು, ಕೆಟ್ಟು ಹೋಗಬೇಡ. ಈ ಜಗತ್ತಿನಲ್ಲಿ ಏನೇನು ನಡೆಯುತ್ತಿದೆ ಗಮನಿಸು. ಇದಕ್ಕಾಗಿ ಪಾಡುಪಟ್ಟವರ ಸ್ಥಿತಿನೊಡಿ ಪಾಠಕಲಿತುಕೋ. ಅವುಗಳ ಆಸೆಯನ್ನು ಬಿಟ್ಟು ಅಖಂಡೇಶ್ವರನನ್ನು ನಂಬು. ಆಗ ನಿನಗೆ ಜನನ–ಮರಣ ಚಕ್ರದಿಂದ ಹೊರತಾದ

ಶಾಶ್ವತ, ಸುಖವು, ಪರಮ ಪದವು ದೊರೆಯುತ್ತದೆ. ಅಂತಹ ಪರಮ ಪದದ ಕಡೆಗೆ ಗುರಿ ಇಟ್ಟು ಬದುಕು. ಈ ಹೊನ್ನು, ಹೆಣ್ಣು, ಮಣ್ಣಿನ ಗೊಡವೆ ಬೇಡ. ಅವು ನಿನ್ನನ್ನು ಪಾತಾಳಕ್ಕೆ ನೂಕಿ ಮೇಲೇಳದಂತೆ ಮಾಡುತ್ತದೆ ಎಂದು ಲೌಕಿಕ ಜೀವನವನ್ನು ಆಶಿಸಿರಬಹುದಾದ ತಮ್ಮ ಮನಸ್ಸಿಗೆ ಹೇಳಿಕೊಂಡು ಅದನ್ನು ಹತೋಟಿಯಲ್ಲಿ ಇಟ್ಟುಕೊಂಡಿದ್ದಾರೆ. ಅವರು ತಮಗಾಗಿ ಹೇಳಿಕೊಂಡ ಈ ಹಿತವಚನವು, ಮಾರ್ಗದರ್ಶನವು ಪ್ರತಿಯೊಬ್ಬ ಮಾನವರಿಗೂ ದಾರಿ ದೀವಿಗೆಯಾಗಿದೆ.

■

## ೪೧

ಕಳಬೇಡ, ಕೊಳಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡ ಸಂಗಮದೇವನ ಒಲಿಸುವ ಪರಿ.

– ಬಸವಣ್ಣ

ದೈವ ಕೃಪೆ ಯಾರಿಗೆ ಬೇಡ, ಆದರೆ ಅದನ್ನು ಪಡೆಯುವ ಸರಿಯಾದ ಮಾರ್ಗ ಬಹಳ ಜನರಿಗೆ ಗೊತ್ತಿಲ್ಲವಾಗಿ ಲೌಕಿಕ ಜೀವನವನ್ನು ತಮಗೆ ಹೇಗೆ ಬೇಕೆಂದರೆ ಹಾಗೆ ಬಾಳುತ್ತಾ, ಪೂಜೆ ಮಾಡುವುದರ ಮೂಲಕ, ದೇವಸ್ಥಾನಕ್ಕೆ ಹೋಗುವ ಮೂಲಕ, ಉಪವಾಸ ಮಾಡುವುದರ ಮೂಲಕ, ಕಾಯಿ ಒಡೆಸುವುದರ ಮೂಲಕ ನಾನಾ ರೀತಿಯಲ್ಲಿ ಪ್ರಯತ್ನಿಸುತ್ತಾರೆ. ದೇವರು ಒಲಿಯದಿದ್ದರೆ ದೇವರೇ ಇಲ್ಲ ಎನ್ನುತ್ತಾರೆ. ಅಥವಾ ದೇವರನ್ನೇ ದೂಷಿಸುತ್ತಾರೆ. ಆದರೆ ದೇವರನ್ನು ಒಲಿಸುವ ಮಾರ್ಗವೇ ಬೇರೆ ಇದೆ. ಅದನ್ನು ಈ ವಚನದಲ್ಲಿ ಬಸವಣ್ಣನವರು ತಿಳಿಯಪಡಿಸಿದ್ದಾರೆ.

ಸಾಮಾನ್ಯ ಜನರು ಲೌಕಿಕ ಜೀವನದಲ್ಲಿ ತಮ್ಮ ಸ್ವಾರ್ಥ ಸಾಧನೆಗಾಗಿ ಸುಳ್ಳು, ಮೋಸ, ವಂಚನೆ ಗೈಯುತ್ತಾ ಕೊಲೆಸುಲಿಗೆಗಳನ್ನು ಮಾಡುತ್ತಾ ಧಾರ್ಮಿಕ ಜೀವನದಲ್ಲಿ ಪೂಜೆ ಪುರಸ್ಕಾರಗಳನ್ನು, ವ್ರತೋಪಚಾರಗಳನ್ನು ಮಾಡುತ್ತಾ ಇಬ್ಬಗೆಯ ಬದುಕು ಬದುಕುತ್ತಾರೆ. ದೇವರ ಮನೆಯಲ್ಲಿದ್ದಾಗ ಒಂದು ಮನಸ್ಸು ಹೊರಗಡೆ ಇದ್ದಾಗ ಇನ್ನೊಂದು. ಅಂತರಂಗದಲ್ಲಿ ಒಂದು, ಬಾಹ್ಯದಲ್ಲಿ ಇನ್ನೊಂದು. ಇಂತಹ

ಜೀವನ ದೇವರಿಗೆ ಒಪ್ಪಿತವಲ್ಲ ದೇವರಿಗೆ ಸಂತೋಷವಾಗಬೇಕಾದರೆ ಕಳ್ಳತನ ಮಾಡಬಾರದು, ಸುಳ್ಳು ಹೇಳಬಾರದು, ಕೊಲೆಗಡುಕತನವಿರಬಾರದು. ಸಿಟ್ಟಿನ ಸ್ವಭಾವವಿರಬಾರದು. ಬೇರೆಯವರು ಯಾರೇ ಇರಲಿ ಅವರಿಗೆ ಅಸಹ್ಯ ಪಟ್ಟುಕೊಳ್ಳಬಾರದು. ತನ್ನ ಬಗ್ಗೆ ಜಂಬಕೊಚ್ಚಿಕೊಳ್ಳಬಾರದು. ಬೇರೆಯವರನ್ನು ಅವರ ಮುಖದೆದುರಿಗೇ ಮನನೋಯುವಂತಹ ಮಾತು ಕೃತಿಗಳಿಂದ ದುಃಖಕ್ಕೆ ಈಡುಮಾಡಬಾರದು. ಇಂತಹ ಗುಣಸ್ವಭಾವ ಹೊಂದಿ, ಒಳಹೊರಗೆ ಒಂದಾಗಿ, ಕಪಟ ಸ್ವಭಾವವಿಲ್ಲದಿರಬೇಕು. ಹೀಗಿದ್ದಾಗ ದೇವರಿಗೆ ಪ್ರೀತಿಯಾಗುತ್ತದೆ, ಸಂತೋಷವಾಗುತ್ತದೆ. ಅವನು ಒಲಿಯುತ್ತಾನೆ ಎಂದು ಬಸವಣ್ಣನವರು ದೇವರನ್ನೊಲಿಸುವ ಸರಳಮಾರ್ಗವನ್ನು ಈ ವಚನದಲ್ಲಿ ಬೋಧಿಸಿದ್ದಾರೆ.

ಮೇಲಿನ ನಿಯಮಗಳು ನೋಡಲಿಕ್ಕೆ ಸರಳವೆನ್ನಿಸಿದರೂ ಈ ಪ್ರಲೋಭನೆಯ ಜಗತ್ತಿನಲ್ಲಿ ಪಾಲಿಸಲು ಕಷ್ಟ. ಆದರೂ ಇದರಂತೆ ಬದುಕಲು ಅಸಾಧ್ಯವೇನಲ್ಲ. ದೃಢ ಸಂಕಲ್ಪದಿಂದ, ಒಳ್ಳೆಯ ಮನಸ್ಸಿನಿಂದ ಪಾಲಿಸುವ ರೂಢಿಮಾಡಿಕೊಂಡರೆ, ಬರು–ಬರುತ್ತಾ ಅದೇ ಸ್ವಭಾವವಾಗಿ ಅಂತಹ ಸಾತ್ವಿಕ ಬದುಕನ್ನು ಬದುಕುವುದೇನೂ ಕಷ್ಟವಾಗುವುದಿಲ್ಲ. ಇಂತಹ ಜನರು, ದುಷ್ಟಗುಣಗಳಿದ್ದವರು ಇರುವುದಕ್ಕಿಂತ ಹೆಚ್ಚು ಶಾಂತಿ, ಸಮಾಧಾನಗಳಿಂದ ಬದುಕಬಹುದು.

■

## ೪೨

ಕಾಯದಿಂದ ಗುರುವ ಕಂಡೆ,
ಕಾಯದಿಂದ ಲಿಂಗವ ಕಂಡೆ
ಕಾಯದಿಂದ ಜಂಗಮನ ಕಂಡೆ
ಕಾಯದಿಂದ ಸಕಳೇಶ್ವರ ದೇವರ ಪೂಜಿಸುವಲ್ಲಿ
ಉತ್ತರ ಸಾಧಕನಾದೆಯಲ್ಲಾ ಎಲೆಕಾಯವೆ.

– ಸಕಲೇಶ ಮಾದರಸ

ಹಿಂದೂ ಧರ್ಮದಲ್ಲಿ ದೇವರನ್ನು ಒಲಿಸಿಕೊಳ್ಳಲು ನಾನಾ ಮಾರ್ಗಗಳನ್ನು ತಿಳಿಸಿದ್ದಾರೆ. ಅದರಲ್ಲಿ ದೇಹವನ್ನು ಉಪವಾಸಾದಿ ವ್ರತಗಳಿಂದ, ಬರೀ ನೀರನ್ನೇ ಕುಡಿದು ಹಸಿವಿನಿಂದ ಬಳಲುತ್ತಾ, ದೇಹಕ್ಕೆ ಶಿಕ್ಷೆಯನ್ನು ಅನೇಕ ಮಾರ್ಗಗಳಿಂದ ಕೊಡುತ್ತಾ ಎಂದರೆ ನಾಲಿಗೆಗೆ, ಕೆನ್ನೆಗೆ ದಬ್ಬಳಗಳನ್ನು ಚುಚ್ಚಿಕೊಳ್ಳುವ ಮೂಲಕ

ಕೂಡ ಪ್ರಾರ್ಥನೆ ಸಲ್ಲಿಸುವುದುಂಟು. ಇಲ್ಲಿ ದೇಹಕ್ಕೆ ಬೆಲೆಯಿಲ್ಲ. ದೇಹ ನಶ್ವರ. ಆತ್ಮನು ಕೆಲ ಕಾಲ ದೇಹದಲ್ಲಿದ್ದು ಅದನ್ನು ನಾವು ಹಳೆಯದಾದ ಬಟ್ಟೆಯನ್ನು ಕಿತ್ತೊಗೆಯುವಂತೆ ಕಿತ್ತೊಗೆದು ಹೋಗುತ್ತಾನೆ ಎಂಬುದು ಇಲ್ಲಿನ ಅಭಿಪ್ರಾಯ. ಇದು ನಿಜವಾದರೂ ಸಹ ಏನೇ ಕರ್ಮ ಮಾಡಬೇಕಾದರ ಆತ್ಮನಿಗೆ ದೇಹ ಒಂದು ಸಾಧನ. ಆತ್ಮನು ಎಂತಹ ಮಹತ್ಕಾರ್ಯಗಳನ್ನು ಸಾಧಿಸಲು ಶಕ್ತನಿದ್ದರೂ, ಅವನು ದೇಹವನ್ನು ಧರಿಸದಿದ್ದರೆ ಏನೂ ಮಾಡುವುದಕ್ಕಾಗುವುದಿಲ್ಲ. ಆದುದರಿಂದ ಈ ನಶ್ವರವಾದ ದೇಹವೂ ಸತ್ಕಾರ್ಯ ಮಾಡುವಲ್ಲಿ ಸಹಾಯಕ. ಕೆಟ್ಟಕೆಲಸವನ್ನು ದೇಹಧರಿಸಿದಾಗಲೇ ಮಾಡುತ್ತಾರೆ. ಆದರೆ ಸುಸಂಸ್ಕಾರವುಳ್ಳ ಆತ್ಮನು ದೇಹವನ್ನು ಒಂದು ಸಾಧನವನ್ನಾಗಿ ಉಪಯೋಗಿಸಿಕೊಂಡು ಮಾನವತೆಗೆ ಒಳಿತನ್ನು ಮಾಡುತ್ತಾನೆ. ಆಧ್ಯಾತ್ಮ ಸಾಧನೆಯನ್ನು ಮಾಡಿಕೊಂಡು ತನ್ನನ್ನು ಮತ್ತಷ್ಟು ಉದಾತ್ತೀಕರಿಸಿಕೊಳ್ಳುತ್ತಾನೆ. ಈ ಮಾತನ್ನು ಸಕಲೇಶ ಮಾದರಸನು ಮೇಲಿನ ವಚನದಲ್ಲಿ ಕಾಯದಿಂದ ಗುರುವ ಕಂಡೆನು, ಕಾಯದಿಂದ ಲಿಂಗವ ಕಂಡೆ ಕಾಯದಿಂದ ಜಂಗಮನ ಕಂಡೆ, ಕಾಯದ ಮೂಲಕವೇ ಸಕಲೇಶ ದೇವರನ್ನು ಪೂಜಿಸಲು ಸಾಧ್ಯವಾಯಿತು ಎಂದು ಹೇಳಿ, ದೇಹ ತ್ಯಾಜ್ಯವಲ್ಲ. ಅದೂ ಕೂಡ ಅವಶ್ಯಕ ಎಂದು ದೇಹದ ಮಹತ್ತನ್ನು ವಿವರಿಸಿದ್ದಾನೆ. ಇಲ್ಲಿ ತಿಳಿದುಕೊಳ್ಳಬೇಕಾದ ಮುಖ್ಯ ಅಂಶವೆಂದರೆ, ದೇಹವನ್ನು ಸತ್ಕಾರ್ಯವನ್ನು ಮಾಡಲು ಉಪಯೋಗಿಸಿಕೊಳ್ಳಬೇಕು. ಅದನ್ನು ದುರುಪಯೋಗ ಪಡಿಸಿಕೊಳ್ಳಬಾರದು ಅದಕ್ಕೆ ಶಿಕ್ಷೆಕೊಟ್ಟು ಹಿಂಸಿಸಲೂ ಬಾರದು. ಅದನ್ನು ಆರೋಗ್ಯಕರವಾಗಿರುವಂತೆ ಕಾಪಾಡಿಕೊಂಡು, ನಮ್ಮ ಜೀವನಕಾಲವನ್ನು ವೃದ್ಧಿಸಿಕೊಂಡು ಸಾಕಷ್ಟು ಒಳ್ಳೆಯ ಕಾರ್ಯಗಳನ್ನು ಮಾಡಬೇಕು ಎಂಬ ಅಂಶ ಇಲ್ಲಿ ವ್ಯಕ್ತವಾಗಿದೆ.

■

೪೩

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ
ಇದುಕಾರಣ ಕೂಡಲಸಂಗಮದೇವ
ಲಿಂಗ ಸಂಗವನರಿದಾತನೇ ಕುಲಜನು.

– ಬಸವಣ್ಣ

ಈ ವಚನದಿಂದ, ಆಗಿನ ಕಾಲದಲ್ಲಿ ಜನರನ್ನು ಅವರು ಮಾಡುತ್ತಿದ್ದ ವೃತ್ತಿಯನ್ನು ಆಧರಿಸಿ ಗುರುತಿಸುತ್ತಿದ್ದರು ಎಂಬ ಅಂಶ ವ್ಯಕ್ತವಾಗುತ್ತದೆ. ಅವರವರ ಕಾಯಕದಿಂದ ಅವರ ಜಾತಿಯನ್ನು ಗುರುತಿಸುತ್ತಿದ್ದರು. ಈಗ ಶಿಕ್ಷಕ ವೃತ್ತಿ ಮಾಡುವವರನ್ನು ಶಿಕ್ಷಕರೆಂದೂ, ಟೈಪ್ (ಬೆರಳಚ್ಚು) ಮಾಡುವವರನ್ನು ಟೈಪಿಸ್ಟ್ (ಬೆರಳಚ್ಚುಗಾರ) ಎಂದೂ, ಮಡಕೆ ಮಾಡುವವನನ್ನು ಕುಂಬಾರನೆಂದೂ, ಬಳೆಮಾರುವವನನ್ನು ಬಳೆಗಾರನೆಂದೂ ಕರೆಯುವಂತೆ ಆಗಿನ ಕಾಲದಲ್ಲಿ ಕಬ್ಬಿಣ ಕಾಸಿ ಸಾಮಾನು ತಯಾರಿಸುವವನನ್ನು ಕಮ್ಮಾರನೆಂದೂ, ಬಟ್ಟೆ ಒಗೆಯುವವನನ್ನು ಮಡಿವಾಳನೆಂದೂ, ಮಗ್ಗಹಾಸಿ ನೇಯುವವನನ್ನು ಸಾಲಿಗ ಅಥವಾ ನೇಕಾರನೆಂದೂ, ವೇದಾಗಮಗಳನ್ನು ಓದಿ ತಿಳಿದುಕೊಂಡವನನ್ನು ಹಾರುವನೆಂದೂ ಗುರುತಿಸುತ್ತಿದ್ದರು. ಆಗಿನ ಕಾಲದಲ್ಲಿ ಅವರವರು ಮಾಡುತ್ತಿದ್ದ ಕಾಯಕದ ಪ್ರಕಾರ ಗುರುತಿಸಿ ಕರೆಯುತ್ತಿದ್ದರು. ಆದರೆ ಬರಬರುತ್ತ ಆ ಕಾಯಕ ಮಾಡುತ್ತಿದ್ದ ವಂಶದವರಿಗೆ, ಆ ಕಾಯಕ ಮಾಡಲಿ, ಮಾಡದಿರಲಿ ಆ ಜಾತಿ ಎಂದು ಗುರುತಿಸಲು ಪ್ರಾರಂಭಿಸಿದರು. ನೇಯ್ಗೆಕೆಲಸ ಮಾಡುವವರನ್ನು ನೇಕಾರ ಜಾತಿ ಎಂದು, ಬಟ್ಟೆ ಒಗೆಯುವವರನ್ನು ಮಡಿವಾಳ ಜಾತಿಯವರೆಂದೂ, ಕುರಿಕಾಯುವವರನ್ನು ಕುರುಬರೆಂದೂ, ಕರೆದು ಅವರ ವೃತ್ತಿಗೆ ಅನುಗುಣವಾಗಿ ಮೇಲ್ಜಾತಿ, ಕೀಳ್ಜಾತಿ ಎಂದು ಗುರುತಿಸಹತ್ತಿದರು. ನಿಜವಾಗಿ ಹೇಳುವುದಾದರೆ ಸಮಾಜ ಜೀವನದಲ್ಲಿ ಎಲ್ಲಾ ರೀತಿಯ ಕೆಲಸಗಳೂ ಪ್ರತಿಯೊಬ್ಬರಿಗೂ ಅವಶ್ಯಕ. ತಮಗೆ ಬೇಕಾದ ಎಲ್ಲಾ ಕೆಲಸಗಳನ್ನು ಒಬ್ಬರೇ ಮಾಡಿಕೊಳ್ಳಲಾಗುವುದಿಲ್ಲ. ಆದುದರಿಂದ ಒಬ್ಬೊಬ್ಬರು ಒಂದೊಂದು ಕೆಲಸವನ್ನು ಅಗತ್ಯವನ್ನು ಅನುಸರಿಸಿ ವಹಿಸಿಕೊಂಡರು. ಈ ಅಗತ್ಯ ಕೆಲಸಗಳೂ ಯಾವುವೂ ಮೇಲಲ್ಲ ಯಾವುದು ಕೀಳಲ್ಲ. ಆದ್ದರಿಂದ ಅವರ ವೃತ್ತಿಯನ್ನು ಅನುಸರಿಸಿ ಜನರ ಜಾತಿಯನ್ನು ಗುರುತಿಸಿ, ಅವರನ್ನು ಮೇಲು-ಕೀಳು ಎಂದು ನಿರ್ಧರಿಸುವ ರೀತಿ ತಪ್ಪು. ಮನುಷ್ಯರ ನಡೆ-ನುಡಿ ಮುಖ್ಯ. ಯಾರು ಭಗವಂತನನ್ನು ಅರ್ಥಮಾಡಿಕೊಂಡು ಸರಿಯಾದ ಮಾರ್ಗದಲ್ಲಿ ನಡೆಯುತ್ತಾರೋ ಅವರು ಯಾವುದೇ ವೃತ್ತಿ ಮಾಡುತ್ತಿದ್ದರೂ, ಅವರೇ ಉತ್ತಮ ಕುಲಜರು ಎಂಬ ಮಾತನ್ನು ಬಸವಣ್ಣನವರು ಈ ವಚನದಲ್ಲಿ ತಿಳಿಸಿದ್ದಾರೆ.

■

೪೪

ಕಾಯದ ಕಳವಳವ ಕೆಡಿಸಿ, ಮನದ ಮಾಯೆಯ ಮಾಣಿಸಿ
ಎನ್ನ ಹರಣವ ಮೇಲೆತ್ತಿ ಸಲಹಿದೆಯಯ್ಯಾ.
ಶಿವ, ಶಿವಾ, ಎನ್ನ ಭವಬಂಧನವ ಬಿಡಿಸಿ,
ನಿಮ್ಮತ್ತ ತೋರಿದ ಘನವನುಪಮಿಸಬಾರದಯ್ಯಾ.
ಇರುಳೋಸರಿಸಿದ ಜಕ್ಕವಕ್ಕಿಯಂತೆ
ನಾನಿಂದು ನಿಮ್ಮ ಶ್ರೀಪಾದವನಿಂಬುಗೊಂಡು
ಸುಖದೊಳೋಲಾಡುವೆನಯ್ಯಾ ಚನ್ನಮಲ್ಲಿಕಾರ್ಜುನಾ.

– ಅಕ್ಕಮಹಾದೇವಿ

ಈ ವಚನದಲ್ಲಿ ಅಕ್ಕಮಹಾದೇವಿಯು ಕಾಯದ ಮೂಲಗುಣಗಳಿಂದ ತುಂಬಿದ ತನ್ನನ್ನು ಈ ಭವದ ವ್ಯಾಮೋಹಗಳಿಂದ ಬಿಡಿಸಿಕೊಂಡು ಆಧ್ಯಾತ್ಮದಲ್ಲಿ ವಿಹರಿಸುವಂತೆ ಮಾಡಿ ಕಾಪಾಡಿದುದಕ್ಕೆ ಭಗವಂತನನ್ನು ಕೊಂಡಾಡಿದ್ದಾಳೆ. ಅದಕ್ಕೂ ಮೊದಲು ತನಗೆ ಶಿವನತ್ತ ಹಾದಿ ತೋರಿದ, ಆ ಕಡೆಗೆ ತನ್ನ ಮನವು ತಿರುಗುವಂತೆ ಮಾಡಿದ ಗುರುವನ್ನು ಭಕ್ತಿಯಿಂದ ಸ್ಮರಿಸಿದ್ದಾಳೆ. ಚನ್ನಮಲ್ಲಿಕಾರ್ಜುನನ ಪಾದದಲ್ಲಿ ಇಂಬುಗೊಂಡು ಸುಖದಲ್ಲಿ ಓಲಾಡುವಂತೆ ಮಾಡಿದ್ದು ಗುರುವಲ್ಲದೆ ಬೇರಲ್ಲ. ಆ ಗುರುವಿನ ಅನುಗ್ರಹದಿಂದ ಶಿವನ ಸಾಕ್ಷಾತ್ಕಾರಕ್ಕಾಗಿ ಏಕಮನಸ್ಕಳಾಗಿ, ಸ್ಥಿರಬುದ್ಧಿಯಿಂದ ಭಗವಂತನ ದರ್ಶನಾಕಾಂಕ್ಷಿಯಾಗಿ ಬದುಕಿದೆ. ಅದರ ಸತ್ಫಲವನ್ನು ಪಡೆದಿದ್ದೇನೆ ಎಂದು ಹರ್ಷಪುಲಕಿತಳಾಗಿ ಹಾಡಿದ ವಚನವಿದು.

ದೇಹಕ್ಕೆ ಉಂಟಾಗಬಹುದಾದ ಕಸಿವಿಸಿ ಕಳವಳವನ್ನು ಹೋಗಲಾಡಿಸಿ, ಮನಸ್ಸನ್ನು ಅವರಿಸುವ ಆಸೆ, ಮೋಹ ಮುಂತಾದ ಇಂದ್ರಿಯಮೂಲ ಭಾವನೆಗಳ ಮಾಯೆಯನ್ನು ಇಲ್ಲವಾಗಿಸಿ, ನನ್ನ ಜೀವನವನ್ನು ಸಫಲಗೊಳಿಸಿದೆಯಯ್ಯಾ ಎಂದು ಭಗವಂತನನ್ನು ಅಕ್ಕಮಹಾದೇವಿ ಕೊಂಡಾಡಿದ್ದಾಳೆ. ನಾನು ನಿಮ್ಮ ಕಡೆಗೆ ಮನಸ್ಸು ಮಾಡುವಂತೆ ಮಾಡಿದ, ಈ ಭವಬಂಧನದ ಬಲೆಗೆ ಸಿಲುಕದಂತೆ ನನಗೆ ಮಾರ್ಗ ದರ್ಶನವಿತ್ತ ಗುರುವನ್ನು ಎಷ್ಟು ಕೊಂಡಾಡಿದರೂ ಸಾಲದು. ಅವರ ಘನಮಹಿಮೆ ಎಷ್ಟು ಎಂಬುದನ್ನು ಯಾವ ವಸ್ತುವಿಗೂ ಹೋಲಿಸಿ ವಿಷಯ ಸ್ಪಷ್ಟಪಡಿಸಲು ಸಾಧ್ಯವಿಲ್ಲ. ಗುರುವಿನ ಮಾರ್ಗದರ್ಶನದಿಂದ ಇಡೀ ಜೀವನವೆಲ್ಲಾ ನಿಮ್ಮ ದರುಶನಕ್ಕಾಗಿ ತೊಳಲಾಡಿದೆ, ಪ್ರಾರ್ಥಿಸಿದೆ. ಚಕ್ರವಾಕಪಕ್ಷಿ ಮರುದಿನ ತನ್ನಿಯನ ಕೂಡುವಿಕೆಗೆ ಇರುಳೆಲ್ಲಾ ಪರಿತಪಿಸುವಂತೆ ಪರಿತಪಿಸಿದೆ. ಆ ಪರಿತಾಪಕ್ಕೆ ಫಲವಾಗಿ

ಜಕ್ಕವಕ್ಕಿ ಮರುದಿನ ತನ್ನ ಇನಿಯನ ಸಾಮಿಪ್ಯ ಪಡೆದು ಸುಖಿಸುತ್ತದೆ. ಹಾಗೆ ನಾನು ಜೀವನವಿಡೀ ನಿಮಗಾಗಿ ಪರಿತಪಿಸಿದ ಫಲವಾಗಿ ಈಗ ನಿಮ್ಮ ಪಾದದಲ್ಲಿ ಸ್ಥಾನ ಪಡೆದೆ. ಹೀಗೆ ನನ್ನ ಬಯಕೆ ಕೈಗೂಡಿ ಸಂತೋಷದಿಂದ ಓಲಾಡುತ್ತಿದ್ದೇನೆ ಎಂದು ಅತ್ಯಂತ ಸಂತೋಷದಿಂದ ಹೇಳಿದ್ದಾಳೆ.

ಅಕ್ಕಮಹಾದೇವಿಯ ಹೆಚ್ಚು ವಚನಗಳು ಚನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರಕ್ಕಾಗಿ ಅವಳ ಹಂಬಲ, ಪ್ರಾರ್ಥನೆ, ವಿರಹ, ಕೂಡುವ ಆಸೆ ಇವುಗಳನ್ನೇ ಸೂಚಿಸುತ್ತವೆ. ಆದರೆ ಅಪರೂಪವಾಗಿ ಈ ವಚನದಲ್ಲಿ ಆಕೆ ಪರಮಾತ್ಮನ ಪಾದದಲ್ಲಿ ಇಂಬುಗೊಂಡ ಸಂತೋಷವನ್ನು ವ್ಯಕ್ತಪಡಿಸಿದ್ದಾಳೆ. ಇದು ಬಹುಶಃ ಅವಳಿಗೆ ಶಿವನ ಸಾಕ್ಷಾತ್ಕಾರವಾದ ನಂತರ ಬರೆದಿರಬಹುದಾದ ವಚನವೆನ್ನಿಸುತ್ತದೆ.

■

೪೫

ಕಾಮ ಒಂದನೆಯ ಭವಿ, ಕ್ರೋಧ ಎರಡನೆಯ ಭವಿ,
ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ,
ಮದ ಐದನೆಯ ಭವಿ, ಮತ್ಸರ ಆರನೆಯ ಭವಿ, ಆಮಿಷ ಏಳನೆಯ ಭವಿ,
ಇಂತೀ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು
ಲಿಂಗವಿಲ್ಲದವರ ಭವಿ, ಭವಿ ಎಂಬರು
ತಮ್ಮಂತರಂಗದಲ್ಲಿದ್ದ ಲಿಂಗಾಂಗಸುದ್ದಿಯನರಿಯದೆ
ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳೆಂದು
ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ
ಹಗಲುಗಳ್ಳರ ಮೆಚ್ಚುವನೇ ಚನ್ನಮಲ್ಲಿಕಾರ್ಜುನಾ?

– ಅಕ್ಕಮಹಾದೇವಿ

ವೀರಶೈವರು ಲಿಂಗವಿಲ್ಲದವರನ್ನು 'ಭವಿ' ಎನ್ನುತ್ತಾರೆ. ಅಬ್ರಾಹ್ಮಣರನ್ನು ಬ್ರಾಹ್ಮಣರು 'ಶೂದ್ರ'ರೆಂದು ಕರೆಯುತ್ತಿದ್ದ ಹಾಗೆ. ನಿಜವಾದ ವೀರಶೈವ ತತ್ವಾನುಯಾಯಿಯು ಕೇವಲ ಲಿಂಗವನ್ನು ಧರಿಸಿದರೆ, 'ಭವಿ' ಯಲ್ಲದವನಾಗುವುದಿಲ್ಲ. ಲಿಂಗಧರಿಸದಿದ್ದ ಮಾತ್ರಕ್ಕೆ ಯಾರೂ ಭವಿಯಾಗುವುದಿಲ್ಲ. 'ಭವಿ' ಎಂಬ ಶಬ್ದಕ್ಕೆ ಅಥವಾ 'ವೀರಶೈವ' ಎಂಬ ಶಬ್ದಕ್ಕೆ ವಿಶೇಷಾರ್ಥವುಂಟು. ಆದರೆ ಬಳಕೆಯಲ್ಲಿ ಜನ ಭವಿ ಎಂದರೆ, ಲಿಂಗವನ್ನು ಧರಿಸದವನೆಂದೂ, ಧರಿಸಿದವನನ್ನು

ವೀರಶೈವನೆಂದೂ ತಪ್ಪಾಗಿ ಭಾವಿಸಲು ಪ್ರಾರಂಭಿಸಿದ್ದಾರೆ. ಈಗಲೂ ಅಂತಹ ತಪ್ಪು ಅಭಿಪ್ರಾಯ ಬಳಕೆಯಲ್ಲಿದೆ. ಆದುದರಿಂದ ಅಕ್ಕಮಹಾದೇವಿ ಭವಿ ಯಾರು, ಯಾರೂ ಅಲ್ಲ ಎಂಬ ಅಂಶವನ್ನು ವಿಶದವಾಗಿ ವಿವರಿಸಿದ್ದಾಳೆ. ಶಿವಭಕ್ತನು (ವೀರಶೈವನು) ಲಿಂಗಾಂಗಿಯಾಗಿರುವುದರ ಜೊತೆಗೆ ಶಿವಭಕ್ತನಿಗೆ ಭೂಷಣವಲ್ಲದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಆಮಿಷ ಎಂಬ ಏಳು ಗುಣಗಳು ಇಲ್ಲದವನಾಗಿರಬೇಕು. ನಿಜವಾದ ಶಿವಭಕ್ತನಿಗೆ ಈ ದುಷ್ಟಗುಣಗಳು ಅಸ್ಪೃಶ್ಯ. ಇವುಗಳು ತನ್ನ ಬಳಿ ಸೇರದಂತೆ, ತನ್ನ ಸುತ್ತ ಸುಳಿಯದಂತೆ ವೀರಶೈವ ಬದುಕಬೇಕು. ಅದಿಲ್ಲದೆ ಭವಿಗಳಾದ ಈ ಏಳು ದುಷ್ಟರನ್ನು ತಮ್ಮಲ್ಲಿ ಸೇರಿಸಿಕೊಂಡು, ಲಿಂಗಕಟ್ಟಿದ ಮಾತ್ರಕ್ಕೆ ತಾವು ಭವಿಗಳಲ್ಲ ಎಂದು ತಿಳಿದುಕೊಂಡು ಈ ದುಷ್ಟಗುಳಗಳಿಲ್ಲದವರನ್ನು ಕೇವಲ ಲಿಂಗಕಟ್ಟದಿದ್ದ ಮಾತ್ರಕ್ಕೆ 'ಭವಿ' ಎಂದು ತಿಳಿದುಕೊಳ್ಳುವುದು ಸಮಂಜಸವಲ್ಲ ಎಂಬ ಮಾತನ್ನು ಈ ವಚನದಿಂದ ಅಕ್ಕಮಹಾದೇವಿ ತಿಳಿಸಿದ್ದಾಳೆ. ಈ ಜನರು ಲಿಂಗವನ್ನು ಕಟ್ಟಿಕೊಂಡು, ತಮ್ಮ ಪ್ರಾಣಲಿಂಗದೊಂದಿಗೇ ಇರುವ ಆತ್ಮಲಿಂಗವನ್ನು ಕಾಣದೆ, ಆತ್ಮಲಿಂಗವನ್ನು ಕಾಣಲು ಸಾಧನವಾಗಿ ಧರಿಸಿರತಕ್ಕ ಇಷ್ಟಲಿಂಗವನ್ನು ಯಾಂತ್ರಿಕವಾಗಿ ಕಟ್ಟಿಕೊಂಡು ಅಚ್ಚ ಪ್ರಸಾದಿಯೋ, ನಿಚ್ಚಪ್ರಸಾದಿಯೋ, ಸಮಯಪ್ರಸಾದಿಯೋ ಆಗಿ (ಎಂದರೆ ಇಷ್ಟಲಿಂಗಕ್ಕೆ ನೈವೇದ್ಯ ಮಾಡಿದುದನ್ನು ಮಾತ್ರ ಪ್ರಸಾದವಾಗಿ ಸೇವಿಸುತ್ತಾ, ದಿನಕ್ಕೊಂದು ಸಾರಿ ಮಾತ್ರ ಪ್ರಸಾದ ಸೇವಿಸುತ್ತಾ ಅಚ್ಚ ಪ್ರಸಾದಿಯಾಗಿ ಬೆಳಗ್ಗೆ, ಸಂಜೆ ನಿಚ್ಚ ಪ್ರಸಾದಿಯಾಗಿ ಪೂಜೆಯ ಸಮಯದಲ್ಲಿ ಪ್ರಸಾದ ಸೇವಿಸುತ್ತಾ ಸಮಯ ಪ್ರಸಾದಿಯಾಗಿ, ಉಳಿದಂತೆ ನೀರೂ ಸಹ ಕುಡಿಯದಂತಹ ವ್ರತಯಾಂತ್ರಿಕವಾಗಿ ಈ ಪದ್ಧತಿಗಳನ್ನು ಆಚರಿಸುತ್ತಾ, ಲಿಂಗಕ್ಕೆ ಮಡಿ ನೀರು ತಂದು ಮಜ್ಜನಮಾಡಿಸಿ, ಕಾಮಕ್ರೋಧಾದಿಗಳ ವಶರಾಗಿ ಬದುಕುವ ಜನರನ್ನು ದೇವರೆಂದಿಗೂ ಮೆಚ್ಚುವುದಿಲ್ಲ. ಅವರು ಶರಣರಲ್ಲ. ಅಲ್ಲದೆ ಲಿಂಗವಿಲ್ಲದಿದ್ದರೂ ಈ ಏಳು ದುಷ್ಟಗುಣಗಳಿಲ್ಲದಿದ್ದರೆ, ಅವರನ್ನು ಭವಿ ಎಂದು ಕರೆಯಲಾಗುದು. ಲಿಂಗಾಂಗಿಗಳಾಗಿದ್ದರೂ ಈ ಏಳು ಭವಿಗಳುಳ್ಳವರು ನಿಜವಾದ 'ಭವಿ'ಗಳು ಎಂಬುದನ್ನು ನಾವು ಈ ವಚನದಿಂದ ಅರಿಯಬೇಕು.

■

೩೭

కాయకదల్లి నిరతనాదొడె
గురుదర్శనవాదడూ మరెయబేకు
లింగపూజెయాదడూ మరెయబేకు
జంగమ ముందిద్దడూ హంగు హరియబేకు
కాయకవే కైలాసవాద కారణ.
అమరేశ్వర లింగవాయిత్తాదరూ కాయకదొళగు

– ఆయ్దక్కి మారయ్య

**ಈ** ವಚನವನ್ನು ಆಯ್ದಕ್ಕಿ ಕಾಯಕದ ಮಾರಯ್ಯನವರು ಹೇಳಿದ್ದಾರೆ. ಕಾಯಕದ ಕಲ್ಪನೆ ಶರಣರ ಬಹು ದೊಡ್ಡ ಕೊಡುಗೆ. ಅನೇಕ ಧರ್ಮದ ಆಚರಣೆಗಳನ್ನು, ಸಂಪ್ರದಾಯಗಳನ್ನು ರೂಢಿಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಹಿಂದೂ ಧರ್ಮ ಬಹು ವ್ಯಾಪಕವೂ, ಸಂಕೀರ್ಣವೂ, ಆಚರಣೆಗೆ ಕಷ್ಟವೂ ಆಗಿ ರೂಪುಗೊಂಡಿತು. ಹೀಗಾಗಿ ಆಧ್ಯಾತ್ಮದ ಹಾದಿ ಬಹು ದುಸ್ತರವಾಗಿತ್ತು. ಆದುದರಿಂದ ಬಹಳಷ್ಟು ಜನ ದೇವರು ಎಂದರೆ ಒಂದು ರೀತಿಯ ಮೂಢನಂಬಿಕೆ ಬೆಳೆಸಿಕೊಂಡು, ಅಜ್ಞರಾಗಿ, ಯಾಂತ್ರಿಕವಾಗಿ ಕೆಲವೊಂದು ವ್ರತಾಚರಣೆ ಮಾಡುವುದೇ ದೇವರ ಪೂಜೆ ಎಂಬ ಭಾವನೆ ಬೆಳೆಸಿಕೊಂಡರು. ಇದು ಬರುಬರುತ್ತಾ ಪುರೋಹಿತಶಾಹೀ ವರ್ಗ ಉದಯವಾಗಿ ಅಜ್ಞ ಜನರನ್ನು ಶೋಷಿಸುವುದಕ್ಕೆ ಸಹಾಯಕವಾಯ್ತು. ಹೀಗೆ ಒಂದು ರೀತಿಯ ಕೆಟ್ಟ ಬೆಳವಣಿಗೆಗೆ ಎಡೆಕೊಟ್ಟಿತು. ಪೂಜೆಗೆ, ಇನ್ನೊಂದು ರೀತಿಯ ಬೆಳವಣಿಗೆ ಎಂದರೆ, ಬಹು ವೇಳೆಯನ್ನು ಉಪಯೋಗಿಸಿ, ಉಳಿದ ತಮ್ಮ ಕರ್ತವ್ಯಗಳನ್ನು ನಿರ್ಲಕ್ಷಿಸಿ, ಆಧ್ಯಾತ್ಮದ ಕಡೆಗೆ ಒಲವಿದ್ದವನು ಸಾಮಾನ್ಯ ಜೀವನವನ್ನು ತಿರಸ್ಕರಿಸಬೇಕು ಎಂಬುವಂತಹ ರೀತಿಯಲ್ಲಿ ಬದುಕುವ ಒಂದು ರೀತಿಯ ದುಷ್ಪರಿಣಾಮ ಉಂಟುಮಾಡಿತು. ಇದರ ಫಲವಾಗಿ ಜನಸಾಮಾನ್ಯರು ಜೀವನ ಮಾಡಿಕೊಂಡು ದೇವರ, ಗುರುಗಳ, ಪೂಜೆ ಸಾಧ್ಯವಿಲ್ಲ. ದೇವರು ಬೇಕೆಂದರೆ ಜೀವನವನ್ನೇ ಬಿಟ್ಟು ಹೋಗಬೇಕು. ಸಂಸಾರ ಪ್ರಪಂಚದಲ್ಲಿದ್ದುಕೊಂಡು ಆಧ್ಯಾತ್ಮ ಮಾರ್ಗದಲ್ಲಿ ಹೋಗಲಾಗುವುದಿಲ್ಲ ಎಂಬ ನಂಬುಗೆಗೆ ಇಂಬುಗೊಟ್ಟಿತು. ಅದಕ್ಕಾಗಿ ದುಡಿದುಣ್ಣುವ ಬಡಜನ ಆ ಮಾರ್ಗ ನಮಗಲ್ಲ ಎಂದು ಭಾವಿಸುವಂತಾಯ್ತು. ಆ ಮಾರ್ಗ ಬೇಕೆಂದವರು ಜೀವನವನ್ನು ಕಡೆಗಣಿಸಿದರು.

ಆದರೆ ಶರಣರು ಒಂದು ಹೊಸ ವಿಚಾರ ಹೇಳಿದರು. ದೇವರನ್ನು ಕಾಣಲು, ಕೈಲಾಸ ಬೇಕಾದವರು, ಸಂಸಾರವನ್ನು ತ್ಯಜಿಸಬೇಕಿಲ್ಲ; ಉದ್ಯೋಗ ಬಿಡಬೇಕಿಲ್ಲ; ಸತ್ಯವಾದ, ಶುದ್ಧವಾದ ಕಾಯಕವನ್ನು (ತನ್ನ ಉದ್ಯೋಗವನ್ನು) ಸತ್ಯಮಾರ್ಗದಲ್ಲಿ ಶುದ್ಧವಾದ ಬದುಕಿನಿಂದ ಇದೆಲ್ಲಾ ಭಗವಂತನಿಗೆ ಅರ್ಪಿತ; ಇದು ನನಗೆ ಅವನು ಒಪ್ಪಿಸಿದ ಉದ್ಯೋಗ; ಅದನ್ನು ನಿಷ್ಠೆಯಿಂದ ಮಾಡಬೇಕು; ಮಾಡುವುದು ನನ್ನ ಜವಾಬ್ದಾರಿ; ಫಲ ಭಗವಂತನಿಗೆ ಸೇರಿದ್ದು ಎಂಬ ಭಾವನೆಯಿಂದ ತನ್ನ ಕೆಲಸವನ್ನು ತಾನು ಭಕ್ತಿಯಿಂದ ಮಾಡಿದರೆ ಅದೇ ದೇವರ ಪೂಜೆ, ಅದೇ ಕೈಲಾಸ. ಅದಕ್ಕಾಗಿ ಬೇರೆ ಸಮಯಬೇಕಿಲ್ಲ. ಬೇರೆಲ್ಲೂ ದೇವರನ್ನು ಹುಡುಕಿಕೊಂಡು ಹೋಗಬೇಕಿಲ್ಲ. ಅದಕ್ಕಾಗಿ ಖರ್ಚು ಮಾಡಬೇಕಿಲ್ಲ. ನಿಮ್ಮ ಉದ್ಯೋಗ, ಕರ್ತವ್ಯವೇ ಮಹತ್ವದ್ದು. ಅದನ್ನು ಕಡೆಗಣಿಸಿ ಏನೂ ಮಾಡಬಾರದು ಎಂಬ ಮಾತನ್ನು ಕಾಯಕದಲ್ಲಿ ನಿರತನಾಗಿದ್ದಾಗ ಮೊದಲು ತನ್ನ ಕರ್ತವ್ಯಕ್ಕೆ ಮಹತ್ವ ಕೊಡಬೇಕು. ಆ ಸಮಯದಲ್ಲಿ ಗುರು ಬರಲಿ, ಜಂಗಮ ಬರಲಿ, ಲಿಂಗಪೂಜೆ ಇರಲಿ, ಅದೆಲ್ಲವನ್ನೂ ಮರೆತು, ತನ್ನ ಕರ್ತವ್ಯದ ಕಡೆ ಗಮನ ಕೊಡಬೇಕು. ಅದರಿಂದಲೇ ದೇವರ ಸಾಕ್ಷಾತ್ಕಾರ ಎಂಬ ಶರಣರ ನುಡಿ, ಸಾಮಾನ್ಯ ಜನಕ್ಕೆ ಒಂದು ವರವಾಯಿತು. ಜೀವನಕ್ಕಾಗಿ ಹಗಲಿರುಳೂ ಕಷ್ಟಪಡಬೇಕಾದ ಅವರು ಗುರು-ಲಿಂಗ-ಜಂಗಮ ಪೂಜೆಗಾಗಿ ಬೇರೆ ಸಮಯವನ್ನು ಉಪಯೋಗಿಸಿ ಮಾಡುವುದಿದ್ದಲ್ಲಿ ಅವರಿಗೆ ಅದು ಅಸಾಧ್ಯವಾಗುತ್ತಿತ್ತು. ಈಗ ಈ ಮಾರ್ಗದಿಂದ, ತಾವು ಮಾಡುವ ಕೆಲಸದ ಸಮಯದಲ್ಲೇ, ಕೆಲಸಮಾಡುತ್ತಲೇ ಭಗವಂತನ ಕಡೆ ಧ್ಯಾನಮಾಡುತ್ತಾ ನಿಷ್ಠೆಯಿಂದ ಕರ್ತವ್ಯ ಮಾಡಿದರೆ ದೇವರ ಪೂಜೆ ಮಾಡಿದಂತೆ ಎಂಬ ಮಾತು ಅವರಿಗೆ ಆನಂದ ತಂದಿತು. ಶ್ರೀಸಾಮಾನ್ಯರೂ ತಮ್ಮ ದಿನನಿತ್ಯದ ಕಾರ್ಯ ನಿರ್ವಹಿಸುತ್ತಲೇ ಭಗವಂತನನ್ನು ಕಾಣುವ ಮಾರ್ಗದಲ್ಲಿ ಹೋಗಬಹುದೆನ್ನಿಸಿತು. ಈ ಮಾರ್ಗ ಎಲ್ಲರಿಗೂ ಗಮ್ಯವಾಯ್ತು. ಹಣವನ್ನಾಗಲೀ, ಸಮಯವನ್ನಾಗಲೀ ಅದಕ್ಕಾಗಿಯೇ ಖರ್ಚುಮಾಡದೇ ಕೈಲಾಸ ಕಾಣಬಹುದೆಂಬ ನಂಬುಗೆ ತುಂಬಾ ಸಂತೋಷ ತಂದಿತು. ಈಗ ಅನೇಕ ಶ್ರೀಸಾಮಾನ್ಯರು ಬಹುಸಂಖ್ಯೆಯಲ್ಲಿ ಸತ್ಯ ಶುದ್ಧ ಕಾಯಕದ ಮೂಲಕ ಕೈಲಾಸವನ್ನು ಕಾಣುವ ಮಾರ್ಗ ಹಿಡಿದರು. ಕಾಯಕವಿದ್ದರೆ ಇಷ್ಟಲಿಂಗ ಪೂಜೆಯಾಗಲೀ, ಗುರುದರ್ಶನವಾಗಲೀ, ಜಂಗಮವೇ ಬರಲಿ ಕಾಯಕವನ್ನು ಮಾಡಬೇಕೇ ಹೊರತು ಅದನ್ನು ಬಿಡಬಾರದು ಎಂದು ಹೇಳಿರುವ ಶರಣರ ಮಾತು ಪ್ರತಿಯೊಬ್ಬರೂ ಕಾಯಕದ ಮೂಲಕ ಶಿವಪೂಜೆ ಮಾಡಲು ಸಾಧ್ಯವಾಯಿತು. ಕಾಯಕವೇ ಕೈಲಾಸ, ಅದೇ ಶಿವಪೂಜೆ, ಜಂಗಮ ಸೇವೆ.

■

೪೭

ಕಿವಿಯ ಸೂತಕ ಹೋಯಿತ್ತು ಸದ್ಗುರುವಿನ ವಚನದಿಂದೆ,
ಕರಿಗಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ,
ಕಾಯಕ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ
ಬಾಯ ಸೂತಕ ಹೋಯಿತ್ತು ನಿಮ್ಮ ಒಕ್ಕುದ ಕೊಂಡೆನಾಗಿ,
ನಾನಾ ಸೂತಕ ಹೋಯಿತ್ತು ನಿಮ್ಮ ಶರಣರನುಭಾವಿಯಾಗಿ,
ಕೂಡಲಸಂಗಮದೇವ ಕೇಳಯ್ಯಾ,
ಎನ್ನ ಮನದ ಸೂತಕ ಹೋಯಿತ್ತು ನೀವಲ್ಲದಿಲ್ಲೆಂದರಿದೆನಾಗಿ

– ಬಸವಣ್ಣ

ಬಸವಣ್ಣನು ಅವಿರಳ ಭಕ್ತ. ದೇವರಿಗೆ ತನ್ನನ್ನು ತಾನೇ ಸಂಪೂರ್ಣವಾಗಿ ಅರ್ಪಿಸಿಕೊಂಡ ಶರಣ. ಅವನ ಮಾತು, ಕೃತಿ, ಚಲನವಲನವೆಲ್ಲವೂ ಶಿವನಿಗೆ ಅರ್ಪಿತ. ತನ್ನ ಇರುವಿಕೆಯೆಲ್ಲವೂ ಭಗವಂತನಿಗೆ ಅರ್ಪಣ ಎಂಬ ಭಾವದಲ್ಲಿ ಬದುಕಿದ ಮಹಾಭಕ್ತನವನು. ಈ ವಚನದಲ್ಲಿಯೂ ತನ್ನ ದೇಹದ ಒಂದೊಂದು ಭಾಗವೂ ಹೇಗೆ ದೇವರ ಸೇವೆಯಿಂದ ಪವಿತ್ರವಾಯಿತು ಎಂದು ವಿವರಿಸಿದ್ದಾನೆ.

ಪಂಚೇಂದ್ರಿಯಗಳು ಮನುಷ್ಯನನ್ನು ನಾನಾ ದುಷ್ಟ ಕಾರ್ಯಗಳಿಗೆ ಪ್ರೇರೇಪಣೆ ಮಾಡುತ್ತವೆ. ಅವುಗಳ ಪ್ರಭಾವದಿಂದಲೇ ಮಾನವ ದಾನವನಾಗುತ್ತಾನೆ. ಆಸೆ ಆಮಿಷಗಳಿಗೆ ಬಲಿಯಾಗಿ, ಲೋಭ ಮೋಹಗಳಿಗೆ ಒಳಗಾಗಿ, ಕೋಪ, ದ್ವೇಷಗಳ ಹಿಡಿತಕ್ಕೆ ಸಿಕ್ಕಿ, ಅನಪೇಕ್ಷಣೀಯವಾದ ರೀತಿಯಲ್ಲಿ ನಡೆಯುವಂತೆ ಮಾಡುತ್ತವೆ. ಆದುದರಿಂದ ಪಂಚೇಂದ್ರಿಯಗಳಾದ ಕಿವಿ, ಮೂಗು, ಬಾಯಿ, ಕಣ್ಣು ಮತ್ತು ಚರ್ಮ (ಸ್ಪರ್ಶೇಂದಿಯ)ಗಳನ್ನು ಉದಾತ್ತೀಕರಿಸಿ, ಈ ಪಂಚೇಂದ್ರಿಯಗಳನ್ನು ಸದುಪಯೋಗ ಮಾಡಿಕೊಂಡರೆ, ಪರಮಾತ್ಮನ ಸಮೀಪ ಹೋಗಬಹುದೆಂಬುದು ಶರಣವಾಣಿ. ಅದರಂತೆ ಬಸವಣ್ಣನು ಸದ್ಗುರುವಿನ ಉಪದೇಶಾಮೃತವನ್ನು ಕೇಳಿ ಕಿವಿ ಪಾವನವಾಯ್ತು (ಸೂತಕ ಕಳೆಯಿತು). ಅದರ ಮೂಲ ದುಷ್ಟಗುಣ ನಷ್ಟವಾಯಿತು. ಸದ್ಭಕ್ತರ ದರುಶನ ಮಾಡಿದುದರಿಂದ ಕಣ್ಣಿನ ಹುಟ್ಟು ದೋಷ ನಿವಾರಣೆಯಾಗಿ ಕಣ್ಣುಗಳು ಪವಿತ್ರವಾದವು. ಮತ್ತು ಕೂಡಲಸಂಗಮನ ಚರಣಸ್ಪರ್ಶದಿಂದ ದೇಹದ ದೋಷ ಕಳೆದುಕೊಂಡು ಪವಿತ್ರವಾಯಿತು. ಮತ್ತು ನಿಮ್ಮ ಪ್ರಸಾದವನ್ನು ಸೇವಿಸಿದುದರಿಂದ ಬಾಯಿಯು ತನ್ನಲ್ಲಿಯ ದುಷ್ಟ ಗುಣವನ್ನು ಕಳೆದುಕೊಂಡು ಪರಿಶುದ್ಧವಾಯಿತು. ಹೀಗೆ ನಿಮ್ಮ ಶರಣರ ಸಂಗಮಾಡಿ, ಅವರ ಅನುಗ್ರಹ ಪಡೆದು ಅನುಭಾವಿಯಾದುದರಿಂದ ಮನುಷ್ಯನನ್ನು ಆವರಿಸುವ ನಾನಾ

ರೀತಿಯ ಸೂತಕಗಳಿಂದ ಪಾರಾದೆ. ದೇವರಲ್ಲದೆ ಮತ್ತು ತಮ್ಮನ್ನು ರಕ್ಷಿಸುವವರು ಬೇರೆ ಯಾರೂ ಇಲ್ಲ ಎಂಬ ತಿಳಿವನ್ನು ಪಡೆದು, ನನ್ನ ಮನವೂ ಸಹ ನಿರ್ಮಲವಾಯಿತು. ಪರಿಶುದ್ಧವಾಗಿ ಪರಮಾತ್ಮನಿಗೆ ಅರ್ಪಿಸಲು ಯೋಗ್ಯವಾಯಿತು. ನೀವಲ್ಲದೆ ಬೇರೆ ಯಾರೂ ನನ್ನ ರಕ್ಷಕರಲ್ಲ ಎಂಬುದನ್ನು ಅರಿತೆನು ಎಂದು ವಿನೀತನಾಗಿ ನುಡಿದಿದ್ದಾನೆ ಬಸವಣ್ಣ.

■

## ೪೮

ಕುರೂಪಿ ಸುರೂಪಿಯ ನೆನೆದಡೆ ಸುರೂಪಿಯಪ್ಪನೆ?
ಆ ಸುರೂಪಿ ಕುರುಪಿಯ ನೆನೆದಡೆ ಕುರೂಪಿಯಪ್ಪನೆ?
ಧನವುಳ್ಳವನ ನೆನೆದಡೆ ದರಿದ್ರ ಹೋಹುದೆ?
ಪುರಾತರ ನೆನೆದು ಕೃತಾರ್ಥವಾದೆವೆಂಬರು
ತಮ್ಮಲ್ಲಿ ಭಕ್ತಿ ನಿಷ್ಠೆ ಇಲ್ಲದವರ ಕಂಡಡೆ ಮೆಚ್ಚನು ಗುಹೇಶ್ವರನು

– ಅಲ್ಲಮಪ್ರಭು

ದೇವರ ಮೆಚ್ಚುಗೆಗೆ ಪಾತ್ರರಾಗಬೇಕಾದರೆ ಕೇವಲ ದೇವರನ್ನು ನೆನೆದುಬಿಟ್ಟರೆ, ದೇವರ ಹೆಸರು ಉಚ್ಚರಿಸಿದರೆ ಸಾಲದು. ಕೆಲವರು ಮಕ್ಕಳು ಮಗ್ಗಿ ಹೇಳಿದಂತೆ ದೇವರ ಮಂತ್ರಗಳನ್ನು ಪಟಪಟನೆ ಉಚ್ಚರಿಸುತ್ತಾರೆ. ಅದರಿಂದ ದೇವರನ್ನು ಮೆಚ್ಚಿಸಬಹುದೆಂದು ತಿಳಿಯುತ್ತಾರೆ. ಆದರೆ ಇಂತಹ ಯಾಂತ್ರಿಕ ಧ್ಯಾನ, ಜಪಗಳಿಂದ ದೇವರ ಒಲುಮೆ ಪಡೆಯಲಾಗದು. ದೇವರ ಒಲುಮೆಗೆ, ಮೆಚ್ಚುಗೆಗೆ, ತದೇಕಚಿತ್ತದಿಂದ ಧ್ಯಾನಿಸಬೇಕು. ಭಕ್ತಿ ನಿಷ್ಠೆಯಿಂದ ಪೂಜಿಸಬೇಕು. ಮನಸ್ಸನ್ನು ಎಲ್ಲಿಯೋ ಇಟ್ಟುಕೊಂಡು ಕೇವಲ ಜಪಮಾಡಿದರೆ ಸಾಧ್ಯವಿಲ್ಲ. ಕುರೂಪಿಯಾದವರು ಸುರೂಪಿಯಾದವರನ್ನು ನೆನೆದ ಮಾತ್ರಕ್ಕೆ ಅವನ ಕುರೂಪ ಹೋಗಿ ಸುರೂಪ ಬರಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ದರಿದ್ರನಾದವನು ಎಂದರೆ ಬಡವನು ಐಶ್ವರ್ಯವಂತನನ್ನು ನೆನೆದ ಮಾತ್ರಕ್ಕೆ ಬಡತನ ನೀಗಿ ಧನಿಕನಾಗುವುದಿಲ್ಲ. ಹಾಗೆ ಕೆಲವರು ಪುರಾತನ ಶರಣರನ್ನು ಧ್ಯಾನಿಸಿ ಕೃತಾರ್ಥರಾದೆವೆಂದು ಬಗೆಯುತ್ತಾರೆ. ಅದೂ ಸಾಧ್ಯವಿಲ್ಲ. ಹೇಗೆ ಬಡವನು ಶ್ರೀಮಂತನಾಗಲು ಪ್ರಯತ್ನಪಡಬೇಕೋ, ಶ್ರದ್ಧೆ, ನಿಷ್ಠೆಗಳಿಂದ ದುಡಿಯಬೇಕೋ ಹಾಗೆ, ಪರಮಾತ್ಮನ ಒಲುಮೆಗೆ ಆಸೆಪಡುವ ಮನುಷ್ಯ ಭಕ್ತಿ, ನಿಷ್ಠೆ, ಪ್ರಾಮಾಣಿಕತೆಯಿಂದ, ನಿರ್ಮಲ ಮನಸ್ಸಿನಿಂದ, ಅಚಲವಾದ ನಿಷ್ಠೆಯಿಂದ ಧ್ಯಾನಿಸಬೇಕು. ಕೇವಲ ಮಂತ್ರಗಳನ್ನು, ವಚನಗಳನ್ನು ಪಟಪಟನೆ

ಉಚ್ಚರಿಸುವುದರಿಂದ ಸಾರ್ಥಕವಾಗದು. ಅಂಥವರನ್ನು ಗುಹೇಶ್ವರನು ಮೆಚ್ಚುವುದಿಲ್ಲ ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ.

ಒಟ್ಟಿನಲ್ಲಿ ಶರಣರು ನಿರ್ಮಲ ಭಕ್ತಿ, ಶ್ರದ್ಧೆ, ನಿಷ್ಠೆಯಿಂದ ಮಾಡಿದ ಪ್ರಾರ್ಥನೆ ದೇವರಿಗೆ ಮೆಚ್ಚುಗೆ. ಅದಿಲ್ಲದೆ, ಬೇಕಾದಷ್ಟು ಪೂಜೆ ಮಾಡಿದರೂ ಮಂತ್ರೋಚ್ಚಾರಣೆ ಮಾಡಿದರೂ ಪ್ರಯೋಜನವಿಲ್ಲವೆಂಬ ಮಾತನ್ನು ನಾನಾ ರೀತಿಯಿಂದ ತಿಳಿಯಪಡಿಸಿದ್ದಾರೆ.

■

## ೪೯

ಕುರಿಹಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತೆರನನರಿಯದೆ ತನಿರಸದ
ಹೊರಗಣೆಲೆಯನೆ ಮೇದವು!
ನಿಮ್ಮರವ ಮದಕರಿಯಲ್ಲದೆ ಕುರಿ ಬಲ್ಲುದೆ, ಕೂಡಲಸಂಗಮದೇವಾ?

– ಬಸವಣ್ಣ

ಕುರಿಯ ಹಿಂಡು ರಸ ತುಂಬಿದ ಕಬ್ಬಿನ ತೋಟದೊಳಗೆ ಹೊಕ್ಕರೂ ಅದು ಕಬ್ಬಿನಲ್ಲಿರುವ ತನಿರಸದ ರುಚಿ ಗೊತ್ತಿಲ್ಲದೆ ಕಬ್ಬಿನ ಜಲ್ಲೆಯ ಹೊರಭಾಗದ ಗಣಿಲೆಯನ್ನಷ್ಟೆ ತಿನ್ನುತ್ತದೆ. ತನ್ನ ಸಮೀಪವೇ ಇರುವ, ತನಗೆ ಬೇಕೆನ್ನಿಸಿದರೆ ತಿನ್ನಲು, ರಸವನ್ನು ಹೀರಲು ಸಾಧ್ಯವಾಗಿರುವ ಕಬ್ಬನ್ನು ಕುರಿಯು, ಹಸುವಿನ ಕೆಚ್ಚಲಿಗೇ ಕಚ್ಚಿಕೊಂಡಿದ್ದರೂ ಅಲ್ಲಿರುವ ಅಮೃತವನ್ನು ಹೀರಲಾರದ ರಕ್ತವನ್ನು ಹೀರುವ ಉಣ್ಣೆಯಂತೆ ಕಬ್ಬಿನ ರಸವನ್ನು ಕುಡಿಯದೆ ಹೊರಗಿನ ಒಣ ಸಿಪ್ಪೆಯನ್ನಷ್ಟೆ ತಿನ್ನುತ್ತದೆ. ಆದರೆ ಆನೆಯು ಕಬ್ಬಿನ ತೋಟಕ್ಕೆ ಹೋದರೆ ಕಬ್ಬಿನಲ್ಲಿರುವ ರಸವನ್ನು ಹೀರಿ ಕುಡಿಯುತ್ತದೆ. ಗಜರಾಜನಿಗೆ ಯಾವುದು ಮಹತ್ವ ಎನ್ನುವುದು ಗೊತ್ತಿದ್ದಂತೆ ಸಾಮಾನ್ಯ ಕುರಿಗೆ ಗೊತ್ತಿಲ್ಲ. ಅದೇ ರೀತಿ ಜ್ಞಾನದಲ್ಲಿ ಪರಿಣತನಾದವನೂ, ಆಧ್ಯಾತ್ಮದಲ್ಲಿ ಉನ್ನತ ಸಾಧನೆಗೈದವನೂ, ಸಾಧನೆಯಲ್ಲಿ ಹಿರಿಯನೂ ಭಕ್ತಿಯಲ್ಲಿ ಭವ್ಯತೆಯನ್ನು ಪಡೆದ ಮದಕರಿಗೆ ಸಮಾನನಾದ ಭಕ್ತನಿಗೆ ಭಗವಂತನನ್ನು ಅರಿವ ಶಕ್ತಿ ಇದೆಯೇ ಹೊರತು ದೇವರ ಮಹಾತ್ಮೆಯನ್ನು ಅರಿಯದ, ಆಧ್ಯಾತ್ಮದ ಬೆಲೆ ಗೊತ್ತಿಲ್ಲದ, ಭಕ್ತಿಯ ಶಕ್ತಿಯ ಪರಿಚಯವೇ ಇಲ್ಲದ ಕುರಿಗೆ ಸಮಾನನಾದ ಹುಲುಮಾನವನು, ದೇವರನ್ನು ಅರಿಯಲಾರ. ಅರಿಯುವುದು ಸಾಧ್ಯವಿಲ್ಲವೆಂದು ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ.

■

## ೫೦

**ಕು**ದುರೆ ಸತ್ತಿಗೆಯವರ ಕಂಡರೆ ಹೊರಳಿಬಿದ್ದು ಕಾಲ ಹಿಡಿವರು:
ಬಡಭಕ್ತರು ಬಂದರೆ "ಎಡೆ ಇಲ್ಲ ಅತ್ತ ಸನ್ನಿ" ಎಂಬರು
ಎನ್ನೊಡೆಯ ಕೂಡಲ ಸಂಗಯ್ಯನವರ
ತಡಗೆಡಹಿ ಮೂಗ ಕೊಯ್ಯದೆ ಮಾಣ್ಬನೆ?

– ಬಸವಣ್ಣ

**ಸಾ**ಮಾನ್ಯವಾಗಿ ಜನರು, ಅಧಿಕಾರದಲ್ಲಿರುವವರನ್ನು, ಐಶ್ವರ್ಯವಂತರನ್ನು ಕಂಡರೆ ಅವರು ದುಷ್ಟರಾಗಿದ್ದರೂ ಕೈಮುಗಿದು ಗೌರವದಿಂದ ಕಾಣುತ್ತಾರೆ. ಅದೇ ಯಾರಾದರೂ ಬಡವರು ಬಂದರೆ ಅವರು ಒಳ್ಳೆಯವರಿದ್ದರೂ ಅವರನ್ನು ಗೌರವಿಸುವುದಿರಲಿ, ನಡೆಯಿರಿ, ನಡೆಯಿರಿ, ಇಲ್ಲಿ ಜಾಗವಿಲ್ಲ ಎಂದು ಓಡಿಸಿಬಿಡುತ್ತಾರೆ. ಇಂತಹ ದೃಶ್ಯವನ್ನು ದೊಡ್ಡ ದೊಡ್ಡ ಸಮಾರಂಭಗಳಲ್ಲಿ ನಾವು ಇಂದೂ ಕಾಣಬಹುದು. ಮಂತ್ರಿಗಳು, ಸಾಹುಕಾರರು ಬಂದರೆ, ಅಲ್ಲಿದ್ದ ಕಾರ್ಯಕರ್ತರೆಲ್ಲಾ ಓಡಿಹೋಗಿ ಕಾರಿನಿಂದ ಇಳಿಸಿಕೊಂಡು ಬಂದು ಹಾರ ತುರಾಯಿಗಳನ್ನು ಅರ್ಪಿಸಿ, ವೇದಿಕೆಗೆ ಕರೆದೊಯ್ಯುತ್ತಾರೆ. ಸಮಯ ಸಾಧಕರು ಅವರ ಕಾಲಿಗೂ ಬೀಳುತ್ತಾರೆ. ಆದರೆ ಯಾವನಾದರೊಬ್ಬ ಬಡ ದೇಶಭಕ್ತನಾಗಲೀ, ಸಾಧು ಸಜ್ಜನನಾಗಲೀ ಬಂದರೆ 'ಇಲ್ಲೇಕೆ ಬಂದೆ, ಅತ್ತ ಸರಿ, ಜಾಗವಿಲ್ಲ' ಎಂದು ಅವನನ್ನು ನೂಕಿ ಹೊರ ಕಳಿಸುತ್ತಾರೆ. ಇಂತಹ ಜನರು, ಈ ಪರಿಸ್ಥಿತಿ, ಬಸವಣ್ಣನವರ ಕಾಲದಲ್ಲೂ ಇತ್ತೆಂದು ಕಾಣಿಸುತ್ತದೆ. ಅದನ್ನು ನೋಡಿದ ಬಸವಣ್ಣನವರು ಹೀಗೆ ಅಧಿಕಾರ ಐಶ್ವರ್ಯಗಳಿಗೆ ತಲೆಬಾಗಿ ಸಜ್ಜನರನ್ನು ಸದ್ಭಕ್ತರನ್ನು ಅಲಕ್ಷಿಸುವ ಜನರನ್ನು ದೇವರು ಕೆಳಗುರುಳಿಸಿ ಅವರ ಸೊಕ್ಕನ್ನು ಮುರಿದೇ ಮುರಿಯುತ್ತಾನೆ, ಬಿಡುವುದಿಲ್ಲ ಎಂದು ಸಿಟ್ಟಿಗೆದ್ದು ನುಡಿದಿದ್ದಾರೆ.

■

## ೫೧

**ಕೂ**ಟಕ್ಕೆ ಕುರುವಾದುದನರಿಯದೆ ಆತ್ಮಕ್ಕೆ
ಅರಿದಾದುದನರಿಯದೆ, ಕೈಲಾಸವೆಂಬ
ಸೂತ್ರದ ಒಳಗಿಗೆ ಮನಸೋತಿರಲ್ಲಾ
ಅಂಧಕನ ಕೈಯ್ಯ ರತ್ನದಂತೆ ಆದಿರಲ್ಲಾ

ಪಂಗುಳನ ಕರದ ಶಸ್ತ್ರದಂತೆ ಆದಿರಲ್ಲಾ
ಈ ನಿರಂಗವ ತಿಳಿದು ನಿಂದಲ್ಲಿ ಬೇರೆ ಲಿಂಗ-
ವಡಗುವುದಕ್ಕೆ ಉಭಯ ಉಂಟೆಂಬ
ದಂದುಗ ಬೇಡ. ತಾನಿಂದಲ್ಲಿಯೇ
ನಿಜಕೂಟ, ತಿಳಿದಲ್ಲಿಯೇ ನಿರಂಗವೆಂಬುದು
ಉಭಯವಿಲ್ಲ ಎನ್ನಯ ಪ್ರಿಯ ನಿಃಕಳಂಕಮಲ್ಲಿಕಾರ್ಜುನಾ.

-ಮೋಳಿಗೆ ಮಹಾದೇವಿ

**ಮೋ**ಳಿಗೆ ಮಾರಯ್ಯನವರದು ಕಟ್ಟಿಗೆ ಕಾಯಕ. ದಿನವೂ ಕಾಡಿಗೆ ಹೋಗಿ ಕಟ್ಟಿಗೆ ತಂದು ಅದನ್ನು ಮಾರಿ ಬಂದ ಹಣದಿಂದ ಅಂದಿನ ಪ್ರಸಾದಕ್ಕೆ ಬೇಕಾದುದನ್ನು ಕೊಂಡು ತರುವುದು, ಅದನ್ನು ಅವರ ಪತ್ನಿ ಮಹಾದೇವಿ ಪ್ರಸಾದ ತಯಾರಿಸಿ ಜಂಗಮಕ್ಕೆ ಉಣಬಿಡಿಸಿ, ತಾವಿಬ್ಬರೂ ಪ್ರಸಾದ ತೆಗೆದುಕೊಳ್ಳುವುದು ರೂಢಿ. ಮಹಾದೇವಿ ಪತಿಯನ್ನು ಮೀರಿಸಿದ ಶರಣ ತತ್ವವನರಿತ ಶರಣೆ. ಚಾಚೂ ತಪ್ಪದೆ ಶರಣಜೀವನವನ್ನು ಬದುಕುತ್ತಾ ಅನೇಕ ವರ್ಷಗಳಿಂದಲೂ ಕಟ್ಟಿಗೆ ಕಾಯಕದಿಂದ ಜೀವಿಸುತ್ತಿದ್ದ ದಂಪತಿಗಳು. ಅವರಿಬ್ಬರ ದಾಂಪತ್ಯ ಸಿದ್ದಯ್ಯ ಪುರಾಣಿಕರು ಬರೆದಂತೆ, 'ಶುಭಕ್ಕೆ ಶೋಭೆ ಸೇರಿದಂತೆ, ಶಿವಕ್ಕೆ ಶಕ್ತಿ ಸಮ್ಮಿಲಿತವಾದಂತೆ, ಪ್ರಕಾಶಕ್ಕೆ ಮಾಧುರ್ಯ ಬೆರೆತಂತೆ' ಇತ್ತು. ಆದರೆ ಕಲ್ಯಾಣದಲ್ಲಿ ಶರಣ ಕ್ರಾಂತಿಯಾಗಲು ಶರಣರನ್ನು ರಾಜನ ಕಡೆಯವರು ಸದೆಬಡಿಯತೊಡಗಿದರು. ಆಗ ಬಸವಣ್ಣ ಸಂಗಮಕ್ಕೆ ಚನ್ನಬಸವಣ್ಣ ಉಳುವಿಗೆ, ಪ್ರಭು ಕದಳಿಗೆ, ಮಿಕ್ಕಾದ ಪ್ರಮಥರೆಲ್ಲ ತಮ್ಮ ಇಷ್ಟ ಬಂದೆಡೆಗೆ ಸಾರಿದರು. ಆಗ ಮಾರಯ್ಯನವರು, 'ನನಗೆ ಮರ್ತ್ಯದ ಮಣಿಹವಿನ್ನೆಷ್ಟು ಪರಿಯಂತರ? ಎನಗೆ ಕಟ್ಟಾ ಗುತ್ತಿಗೆಯೆ? ಈ ಜೀವನ ಇನ್ನೆಷ್ಟು ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ, ಎಂದು ಕೇಳುತ್ತಾರೆ. ಅಷ್ಟಕ್ಕೂ ಬಿಡದೆ 'ಮರ್ತ್ಯವೆಂಬುದು ನಾ ಬಲ್ಲನ್ನಕ್ಕ ಕರ್ಕಶದ ಜಗ. ಇದು ಕಾರಣ ಕೈಲಾಸದ ಬಟ್ಟೆಯನ್ನರಸಬೇಕು ಎನ್ನ ಎನ್ನ ಸತ್ಯಕ್ಕೆ, ಎನ್ನ ಭಕ್ತಿಗೆ, ಎನ್ನ ಮನಕ್ಕೆ, ಎನ್ನ ನಿಶ್ಚಯಕ್ಕೆ ಒಂದು ಗೊತ್ತು ಹೇಳಾ ಎನ್ನ ಮುಕ್ತ್ಯಂಗನೆ, ನಿಃಕಳಂಕ ಮಲ್ಲಿಕಾರ್ಜುನನೆಲ್ಲಿಹನು ಹೇಳಾ! ಎಂದು ಕೇಳಿದಾಗ ಮಹಾದೇವಿಗೆ ಮಾರಯ್ಯನವರ ಈ ಮಾತುಗಳು ಮಹದಾಶ್ಚರ್ಯವನ್ನುಂಟು ಮಾಡುತ್ತವೆ. ಇಷ್ಟು ವರ್ಷ ಶರಣ ಜೀವನ ಬದುಕಿ ಮರ್ತ್ಯ ಬೇರೆ, ಸ್ವರ್ಗ ಬೇರೆ, ತಾನು ಬೇರೆ, ಲಿಂಗ ಬೇರೆ, ಬದುಕು ಬೇರೆ, ಸಾವು ಬೇರೆ ಎಂದು ಸಾಮಾನ್ಯ ಜನರು ಪ್ರಶ್ನಿಸಿದಂತೆ ಕೇಳುತ್ತಾರಲ್ಲಾ ಎಂದು ದಿಗ್ಭ್ರಮೆಗೊಳ್ಳುತ್ತಾಳೆ. ಶರಣ ಮಾರ್ಗವನ್ನು ಪುನಃ ಪತಿಗೆ ಜ್ಞಾಪಿಸಿ ಎಚ್ಚರಿಸುತ್ತಾಳೆ. ಸ್ವರ್ಗಕ್ಕೆ ಬೇರೆ ದಾರಿ ಇದೆಯೇ? ಸ್ವರ್ಗವೆಂಬುದು ಬೇರೆ ಇದೆಯೆ, ನೀವು ಐಕ್ಯವಾಗುವುದಕ್ಕೆ ಬೇರೆಡೆ ಹೋಗಬೇಕೆ? ನಿಮ್ಮ ಮನಸ್ಸು ಭಗವಂತನಲ್ಲಿ

ಲೀನವಾಗುವುದಕ್ಕೆಂದೇ ನಿಮ್ಮ ಕರಸ್ಥಲದಲ್ಲಿ ಇಷ್ಟಲಿಂಗವು ಕುರುಹಾಗಿ ಇದೆ. ಅದನ್ನು ನೀವು ಅತ್ಮದಲ್ಲಿ ಅರಿವು ಮಾಡಿಕೊಂಡು, ಭಗವಂತನಲ್ಲಿ ಒಂದಾಗಬೇಕು. ಅದೇ ಅದ್ವೈತ ಸಾಧನೆ. ಅದೇ ಶರಣರ ಗುರಿ ಅದನ್ನು ಬಿಟ್ಟು 'ಕೈಲಾಸ ಬೇರೆ ಇದೆ. ನಾನು ಮರ್ತ್ಯದಲ್ಲಿ ಇದ್ದೇನೆ. ಇಲ್ಲಿ ದೇವರ ಹೆಸರಲ್ಲಿ ಸೇವೆಮಾಡುವುದರಿಂದ ಈ ದೇಹ ಬಿಟ್ಟು ಈ ಮರ್ತ್ಯದಿಂದ ಪಾರಾಗಿ, ಸ್ವರ್ಗದಲ್ಲಿ ಸುಖವಾಗಿ ಇರಬಹುದು. ಅಲ್ಲಿ ದೇವರನ್ನು ಸೇರಬಹುದು' ಎಂಬ ಅರ್ಥದಲ್ಲಿ ಮಾತನಾಡಿದ ಪತಿಗೆ, ನಿಮ್ಮ ಕರಸ್ಥಲದಲ್ಲೇ ಇರುವ ಇಷ್ಟಲಿಂಗವನ್ನು ಮರೆತು ಬೇರೆ ಲೋಕಕ್ಕೆ ಹೋಗಬೇಕೆನ್ನುತ್ತೀರಲ್ಲಾ, ಕೈಲಾಸ ಬೇರೆ ಇದೆ ಎಂದು ತಿಳಿದಿದ್ದೀರಲ್ಲಾ ಇದೆಂತಹ ಅಜ್ಞಾನ. ನಿಮ್ಮ ಕೈಲಿ ಇಷ್ಟಲಿಂಗವಿದ್ದೂ ಅರ್ಥಮಾಡಿಕೊಳ್ಳದಿರುವುದು ಕುರುಡನ ಕೈಲಿ ರತ್ನವಿದ್ದಂತಾಗಿದೆ, ಕುಂಟನ ಕೈಲಿ ಶಸ್ತ್ರ ಕೊಟ್ಟಂತಾಗಿದೆ. ನೀವು ಈ ಶರೀರ ಅಶಾಶ್ವತವೆಂಬುದನ್ನು ಅರ್ಥಮಾಡಿಕೊಂಡರೆ, ಆಗ ಆತ್ಮ ತನ್ನಷ್ಟಕ್ಕೆ ತಾನೆ ಲಿಂಗದೊಳಗಾಗಿ ಲಿಂಗವೇ ಆಗುತ್ತದೆ ಎಂಬ ಅಂಶದ ಅರಿವಾಗುತ್ತದೆ. ನಾನು ಲಿಂಗದಲ್ಲಿ ಅಡಗುತ್ತೇನೆಂದು ಹೇಳಿದರೆ, ಶರಣ ಧರ್ಮದ ತಿರುಳನ್ನೇ ತಿಳಿದಿಲ್ಲವೆಂದು ಅರ್ಥ. ನಾನು ಬೇರೆ ಲಿಂಗ ಬೇರೆ ಎಂದು ತಿಳಿಯುವುದು ಅಜ್ಞಾನ. ಇಲ್ಲಿ ಎರಡೆಂಬುದಿಲ್ಲ. ಅರಿತು ನೋಡಿದರೆ, 'ಅಹಂ ಶಿವೋಸ್ಮಿ' ಎಂಬುದು ಅರ್ಥವಾಗುತ್ತದೆ. ಹೀಗೆ ತಿಳಿವಳಿಕೆ ಇಲ್ಲದವರಂತೆ, ನಾನು ಬೇರೆ, ದೇವರು ಬೇರೆ, ಸ್ವರ್ಗ ಬೇರೆ, ಮರ್ತ್ಯ ಬೇರೆ, ಸ್ವರ್ಗಕ್ಕೆ ಹೋಗಿ ದೇವರಲ್ಲಿ ಒಂದಾಗಬೇಕೆಂಬ ಎರಡು ಭಾವಗಳ ವಿಚಾರ ಸರಿಯಲ್ಲ ತಾನಿದ್ದಲ್ಲಿಯೇ, ನಿರಂಗವಾದೊಡನೆ ಆತ್ಮ ಶಿವವಾಗುತ್ತದೆ. ಶಿವ ಬೇರೆ ಇಲ್ಲ. ಈ ವಿಚಾರವನ್ನು ಸರಿಯಾಗಿ ತಿಳಿಯಿರಿ ಎಂದು ಜ್ಞಾಪಿಸುತ್ತಾಳೆ ಮಹಾದೇವಿ. ಎಂಥ ಅದ್ಭುತ ಸಜ್ಜನ ಶರಣೆ ಆಕೆ!

■

## ೫೧

ಕೊಲ್ಲುವನೇ ಮಾದಿಗ, ಹೊಲಸ ತಿಂಬುವನೇ ಹೊಲೆಯ
ಕುಲವೇನೋ ಆವಂದಿರ ಕುಲವೇನೋ
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು

–ಬಸವಣ್ಣ

ಜಾತಿಯ ಬಗೆಗೆ ಮೇಲು ಕೀಳೆಂಬ ಭಾವನೆ ನಮ್ಮ ಸಮಾಜದಲ್ಲಿ ಶತ ಶತಮಾನಗಳಿಂದ ಬೆಳೆದು ಬಂದಿದೆ. ಇದರ ವಿರುದ್ಧ ಅನೇಕ ವಿಚಾರವಂತರು

ಹೋರಾಡಿದರೂ ಇಂದಿನವರೆಗೂ ಆ ಅಂತರವನ್ನು ಸಂಪೂರ್ಣವಾಗಿ ತೊಡೆದು ಹಾಕಲು ಸಾಧ್ಯವಾಗಿಲ್ಲ. ಹೀಗಿರುವಾಗ ಈ ಜಾತೀಯತೆಯ ಪಿಡುಗು ಹನ್ನೆರಡನೆಯ ಶತಮಾನದಲ್ಲಿ, ಎಂದರೆ ಎಂಟುನೂರು ಎಂಟುನೂರು ವರ್ಷಗಳ ಹಿಂದೆ ಬಲು ಉಗ್ರವಾಗಿತ್ತೆಂದು ಸುಲಭವಾಗಿ ಊಹಿಸಬಹುದು.

ಬ್ರಾಹ್ಮಣ, ವೈಶ್ಯ ಮುಂತಾದವರು ತಾವು ಉಚ್ಚಕುಲದವರೆಂದೂ, ಹೊಲೆಯ, ಮಾದಿಗ ಮುಂತಾದವರು ಬಹಳ ಕೆಳಮಟ್ಟದವರೆಂದೂ ತಿಳಿದು ಅವರನ್ನು ಹೀನಾಯವಾಗಿ ಕಾಣುತ್ತಿದ್ದರು. ಅವರಿಗೆ ಊರೊಳಗೆ ವಾಸಿಸಲು ಅವಕಾಶ ಕೊಡುತ್ತಿರಲಿಲ್ಲ. ಮುಟ್ಟಿದರೆ ಮೈಲಿಗೆಯಾಗುತ್ತದೆಯೆಂದು ತಿಳಿಯುತ್ತಿದ್ದರು. ಸಾರ್ವಜನಿಕ ಬಾವಿ ಅಥವಾ ಕೆರೆ, ಆಸ್ಪತ್ರೆ, ಕ್ಷೌರಿಕನ ಅಂಗಡಿ, ಶಾಲೆ ಇವುಗಳಿಗೆ ಅವರಿಗೆ ಪ್ರವೇಶವಿರಲಿಲ್ಲ. ಅವರಲ್ಲಿ ಒಳ್ಳೆಯವರಿದ್ದರೂ, ಪರಿಶುದ್ಧ ಜೀವನ ನಡೆಸುತ್ತಿದ್ದರೂ ಅದನ್ನಾವುದನ್ನೂ ಗಣನೆಗೆ ತೆಗೆದುಕೊಳ್ಳದೆ, ಅವನು ಹುಟ್ಟಿನಿಂದ ಹೊಲೆಯನಾದುದರಿಂದ ಅವನನ್ನು ಕಡೆಗಣಿಸುತ್ತಿದ್ದರು. ಆದರೆ ಉಚ್ಚಕುಲದಲ್ಲಿದ್ದು ನೀಚಕೃತ್ಯಮಾಡುತ್ತಿದ್ದರೂ ಅವರಿಗೆ ಸಮಾಜದಲ್ಲಿ ಗೌರವಾದರಗಳು ದೊರೆಯುತ್ತಿದ್ದವು. ಅದನ್ನು ನೋಡುತ್ತಿದ್ದ ಬಸವಣ್ಣನು ಹುಟ್ಟಿನಿಂದ ಉತ್ತಮರು, ಕೆಳವರ್ಗದವರು ಎಂದು ತಿಳಿಯಬಾರದು; ಅವರ ಆಚರಣೆ ನಡೆನುಡಿಗಳಿಂದ ಅವರು ಮೇಲ್ಜಾತಿಯವರು, ಕೆಳಜಾತಿಯವರು ಎಂದು ಗುರುತಿಸಬೇಕು ಎಂದರು. ಈ ಕ್ರಾಂತಿಕಾರಕ ವಿಚಾರವನ್ನು ಸಮಾಜದಲ್ಲಿ ಬಿತ್ತಿದರು. ಉತ್ತಮ ಗುಣವುಳ್ಳವರು ಸರ್ವರಿಗೂ ಒಳಿತನ್ನು ಬಯಸುವ ಸಜ್ಜನರು. ಅವರು ಎಲ್ಲಿಯೇ ಹುಟ್ಟಿರಲಿ. ಅವರು ಉತ್ತಮ ಕುಲಜರು ಎಂಬ ಮಾತನ್ನು, ಕೊಲ್ಲುವವನು, ಹೊಲಸ ತಿಂಬುವವನು ಮಾದಿಗ ಅಥವಾ ಹೊಲೆಯ ಅವನು ಯಾವ ಜಾತಿಯಲ್ಲಿ ಹುಟ್ಟಿದ್ದರೂ, ಈ ಕೃತ್ಯಮಾಡಿದರೆ ಅವನೇ ಅಂತ್ಯಜನು. ಆದರೆ ಸಕಲ ಪ್ರಾಣಿಗಳಿಗೂ ಕ್ಷೇಮವನ್ನು ಬಯಸಿ ಸಹಾಯಮಾಡುವವರು ಯಾರೇ ಆಗಿರಲಿ ಎಲ್ಲಿಯೇ ಹುಟ್ಟಿರಲಿ ಅವರೆಲ್ಲಾ ಶರಣರು. ಶರಣರೆಲ್ಲಾ ಕುಲಜರು ಎಂಬ ಮಾತನ್ನು ಈ ವಚನದಲ್ಲಿ ಸ್ಪಷ್ಟೀಕರಿಸಿದ್ದಾರೆ. ಈ ಅಭಿಪ್ರಾಯಕ್ಕೆ ಪೂರಕವಾಗಿ,

ಸೆಟ್ಟಿಯೆಂಬೆನೆ ಸಿರಿಯಾಳನ
ಮಡಿವಾಳನೆಂಬೆನೆ ಮಾಚಯ್ಯನ,
ಡೋಹಾರನೆಂಬೆನೆ ಕಕ್ಕಯ್ಯನ
ಮಾದಾರನೆಂಬೆನೆ ಚನ್ನಯ್ಯನ
ಅನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ

ಎಂಬ ವಚನದ ಮೂಲಕ ಸಿರಿಯಾಳ, ಮಾಚಯ್ಯ, ಕಕ್ಕಯ್ಯ, ಚನ್ನಯ್ಯ ಮತ್ತು ತಾನು ಎಲ್ಲರೂ ಒಂದೇ ಜಾತಿಗೆ ಸೇರಿದವರು ಯಾರೂ ಮೇಲಲ್ಲ ಕೀಳಲ್ಲ ಎಂದು ಪ್ರತಿಪಾದಿಸಿದ್ದಾರೆ.

■

## ೫೩

ಕೊಟ್ಟದ್ದು ತನಗೆ, ಬೈಚಿಟ್ಟದ್ದು ಪರರಿಗೆ
ಕೊಟ್ಟದ್ದು ಕೆಟ್ಟಿತೆನಬೇಡ,
ಅದು ಮುಂದೆ ಕಟ್ಟಹುದು ಬುತ್ತಿ ಸರ್ವಜ್ಞ

–ಸರ್ವಜ್ಞ

ಸರ್ವಜ್ಞನ ಈ ವಚನವನ್ನು ನೋಡಿದರೆ ವಿಚಿತ್ರವೆನ್ನಿಸಬಹುದು. ಏಕೆಂದರೆ, ಬೇರೆಯವರಿಗೆ ಕೊಟ್ಟದ್ದು ನನಗೆ ಸಿಕ್ಕಲು ಹೇಗೆ ಸಾಧ್ಯ? ನನಗಾಗಿ ಬಚ್ಚಿಟ್ಟದ್ದು ಪರರಿಗೆ ಹೇಗೆ ಹೋಗಲು ಸಾದ್ಯ ಎನ್ನಿಸುವುದು ಸಹಜ. ಆದರೆ ಆಳವಾಗಿ ವಿಚಾರ ಮಾಡಿದರೆ ಸರ್ವಜ್ಞನ ಅನುಭವದ ನುಡಿ ಸುಳ್ಳಾಗುವುದು ಸಾಧ್ಯವಿಲ್ಲ ಎನ್ನಿಸುತ್ತದೆ.

ನಾವು ಬೇರೆಯವರ ಕಷ್ಟಕ್ಕಾಗಿ ಹಣ ಸಹಾಯಮಾಡಿದೆವೆಂದು ತಿಳಿದುಕೊಳ್ಳೋಣ. ಅವರು ಅದರಿಂದ ಅನುಕೂಲ ಹೊಂದಿ ಚೆನ್ನಾಗಿ ಆಗುತ್ತಾರೆ ಎಂದೂ ತಿಳಿಯೋಣ. ಅವರೆಲ್ಲೋ ಹೋಗುತ್ತಾರೆ. ಎಷ್ಟೋ ವರ್ಷಗಳ ನಂತರ ನಾವು ಎಲ್ಲೋ ಹೋದ ಸಂದರ್ಭದಲ್ಲಿ ತೊಂದರೆಗೆ ಗುರಿಯಾದಾಗ ಅಕಸ್ಮಾತ್ತಾಗಿ ಅವರೇ ಬಂದು ಸಹಾಯಮಾಡಬಹುದು ಅಥವಾ ನಾವೂ ಪರೋಪಕಾರಿಗಳು ಎಂಬ ವಿಷಯ ತಿಳಿದಿದದಾ ಮತ್ತೊಬ್ಬರು ಬಂದು ಸಹಾಯಕರಾಗಿರುವ ಎಷ್ಟೋ ಉದಾಹರಣೆಗಳನ್ನು ಜೀವನದಲ್ಲಿ ಕಾಣುತ್ತೇವೆ. ಆಗ ನಾವು ಬೇರೆಯವರಿಗೆ ಕೊಟ್ಟದ್ದು ನಮಗೆ ಬಂದಂತಾಯಿತು. ಉಪಕಾರ ಮಾಡುವುದನ್ನು ಬಿಟ್ಟು, ನಮ್ಮ ಹಣವನ್ನು ಮುಂದೆ ನಮಗೆ ಸಮಯ ಬರುತ್ತದೆ ಎಂದು ಮುಚ್ಚಿಟ್ಟಿರುತ್ತೇವೆ ಎನ್ನೋಣ. ಆಗ ಯಾರಾದರೂ ಕಳ್ಳರು ಅದನ್ನು ಅಪಹರಿಸಿಕೊಂಡು ಹೋದರೆ ಅಥವಾ ಯಾರಾದರೂ ಬಂಧುಗಳು ಬಂದು ಉಪಾಯಮಾಡಿ ಕಿತ್ತುಕೊಂಡು ಹೋಗಿ ಹಿಂತಿರುಗಿಸದೆ ಮೋಸಮಾಡಿದರೆ ಬೈಚಿಟ್ಟದ್ದು ಪರರಿಗಾದಂತೆ ಆಗುತ್ತದೆಯಲ್ಲವೆ?

ಆದುದರಿಂದ ಕೊಟ್ಟಿದ್ದು, ಹುಚ್ಚುತನ ಮಾಡಿದ ಹಾಗಾಯ್ತು, ತಪ್ಪಾಯ್ತು, ಎಂದು ಪಶ್ಚಾತ್ತಪ ಪಟ್ಟುಕೊಳ್ಳಬಾರದು. ಮುಂದೆ ಒಂದಲ್ಲ ಒಂದುದಿನ ಅದರ ಫಲ ದೊರೆತೇ ದೊರೆಯುತ್ತದೆ ಎಂದು ಸರ್ವಜ್ಞ ಕವಿ ಈ ವಚನದಲ್ಲಿ ತಿಳಿಸಿದ್ದಾನೆ. ಭಾರತೀಯ ಆದರ್ಶ ಜೀವನದ ಮೌಲ್ಯಗಳಾದ ದಾನ, ಧರ್ಮ, ಪರೋಪಕಾರ, ಸೇವೆ–ಇವುಗಳನ್ನು ನಾವು ಅಳವಡಿಸಿಕೊಂಡರೆ ನಮಗೂ ಲಾಭ, ಪರರಿಗೂ ಸಹಾಯ, ಸಮಾಜಕ್ಕೂ ಕ್ಷೇಮ ಎಂಬುದನ್ನು ನಾವು ಈ ವಚನದಿಂದ ತಿಳಿದುಕೊಳ್ಳಬೇಕು. ■

## ೫೪

ಕೋತಿಗೆ ಕೊಂಬು ಹುಟ್ಟುಬಲ್ಲುದೆ?
ನುಚ್ಚಕ್ಕಿ ಮೊಳೆಯಬಲ್ಲುದೆ?
ಸತ್ತ ಮರ ಎಳಕಬಲ್ಲುದೆ?
ಅರೆಯಮೇಲೆ ತಾವರೆ ಬೆಳೆಯಬಲ್ಲುದೆ, ಅಯ್ಯಾ?
ದುರ್ಬುದ್ಧಿ ಮಾನವರ ಭಾವದಲ್ಲಿ
ಶಿವಜ್ಞಾನ ಕರಿಗೊಳ್ಳಬಲ್ಲುದೆ, ಅಯ್ಯಾ
ಶಿವಜ್ಞಾನವಿಲ್ಲದವಂಗೆ ಶಿವಕೃಪೆ ಎಲ್ಲಿಯದೋ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ?

–ತೋಂಟದ ಸಿದ್ದಲಿಂಗಯತಿ

**ಈ** ವಚನದಲ್ಲಿ ತೋಂಟದ ಸಿದ್ಧಲಿಂಗಯತಿಗಳು ಅಸಾಧ್ಯಗಳನ್ನು ವಿವರಿಸುತ್ತಾ, ಕೊನೆಗೆ ಅದೇ ರೀತಿ ದುರ್ಬುದ್ಧಿಯುಳ್ಳ ಮಾನವನಿಗೆ ಶಿವಕೃಪೆಯಾಗುವುದು ಅಸಾಧ್ಯ. ಆಗುವುದಿಲ್ಲ ಎಂಬ ಅಂಶವನ್ನು ತುಂಬಾ ಅರ್ಥಪೂರ್ಣವಾದ ಉದಾಹರಣೆಗಳ ಮೂಲಕ ತಿಳಿಯಪಡಿಸಿದ್ದಾರೆ.

ಕೋತಿಗೆ ಕೊಂಬು ಹುಟ್ಟುವುದು ಸಾಧ್ಯವೆ ಎಂದರೆ 'ಇಲ್ಲವೇ ಇಲ್ಲ' ಎಂದು ಹೇಳಬೇಕಾಗುತ್ತದೆ. ಹಾಗೇಯೇ ನುಚ್ಚಕ್ಕಿಯೂ ಮೊಳಕೆಯೊಡೆಯುವುದು ಕನಸಿನಲ್ಲಿಯೂ ಅಸಾಧ್ಯವಾದ ಮಾತು. ಅದೇ ರೀತಿ ಒಣಗಿದ ಮರ ಚಿಗಿಯುವುದೂ ಕೂಡ ಅಸಾಧ್ಯವೇ. ತಾವರೆಯು ಭೂಮಿಯ ಮೇಲೆ ಸಹ ಬೆಳೆಯದು. ಅದು ಬೆಳೆಯುವುದು ಕೇವಲ ನೀರಿನಲ್ಲಿ. ಅಂತಹ ತಾವರೆ ಬಂಡೆಯ ಮೇಲೆ ಬೆಳೆಯುವುದಂತೂ ಊಹೆಗೂ ಮೀರಿದ ಮಾತು. ಹೇಗೆ ಇವುಗಳೆಲ್ಲಾ ಅಸಾಧ್ಯವೋ

ಹಾಗೆ ದುರ್ಬುದ್ಧಿಯಿಂದ ಕೂಡಿದ ಮನುಷ್ಯನು ಏನೇ ಪ್ರಯತ್ನ ಮಾಡಿದರೂ, ದುಷ್ಟಗುಣಗಳನ್ನು ಬಿಡದಿದ್ದರೆ, ಅವನಿಗೆ ಶಿವನ ಜ್ಞಾನವನ್ನು ಪಡೆಯುವುದು ಸಾಧ್ಯವಾಗುವುದಿಲ್ಲ. ಶಿವಜ್ಞಾನವಿಲ್ಲದವನಿಗೆ ಶಿವನ ಕರುಣೆ ಸಿಕ್ಕುವುದು ಕಲ್ಪನೆಗೂ ಸಾಧ್ಯವಿಲ್ಲ. ಆದ್ದರಿಂದ ಶಿವ ದಯೆ ಬೇಕಾದವರು ಮೊದಲು ತಮ್ಮಲ್ಲಿರುವ ದುರ್ಬುದ್ಧಿಯನ್ನು ಬಿಡಬೇಕು. ಸಜ್ಜನಿಕೆಯನ್ನು ಮೈಗೂಡಿಸಕೊಳ್ಳಬೇಕು. ನಂತರ ಶಿವಜ್ಞಾನ ಪಡೆಯಬೇಕು. ಆಗ ಅವರು ದೇವರ ದಯೆಗೆ ಪಾತ್ರರಾಗಲು ಅರ್ಹರಾಗುತ್ತಾರೆ ಎಂಬ ಅಂಶವನ್ನು ತೋಂಟದ ಸಿದ್ಧಲಿಂಗಯತಿಗಳು ಅಪ್ಪಣೆ ಕೊಡಿಸಿದ್ದಾರೆ.

■

೩೫

ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆ ಎನಲೇತಕ್ಕೆ?
ಪರುಷರಸ ಕೈಯಲ್ಲಿದ್ದು ಕೂಲಿಯ ಮಾಡಲೇತಕ್ಕೆ?
ಕ್ಷುತ್ತು ನಿವೃತ್ತಿಯಾದವಂಗೆ ಕಟ್ಟೋಗರದ ಹೊರೆಯ ಹೊರೆಯಲೇತಕ್ಕೆ?
ನಿತ್ಯ ಅನಿತ್ಯವ ತಿಳಿದು, ಮರ್ತ್ಯ ಕೈಲಾಸವೆಂಬುದು ಭಕ್ತರಿಗೆ ಯುಕ್ತಿಯಲ್ಲ.
ನಿಶ್ಚಯವ ತಾನರಿತು, ಅತ್ತಣ ಇತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ
ಆ ಬಚ್ಚಬಯಲ ಬೆಳಗ, ನಿನ್ನ ನೀನೆ ನೋಡಿಕೊ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನಲ್ಲಿ.

–ಆಯ್ದಕ್ಕಿ ಲಕ್ಕಮ್ಮ

ಕತ್ತಲೆಯಾದಾಗ ಜ್ಯೋತಿಯನ್ನು ಬೆಳಗಿಸಿದರೆ ಕತ್ತಲೆ ಇಲ್ಲವಾಗುತ್ತದೆ. ಹಾಗಿರುವಾಗ ಕೈಯಲ್ಲಿ ಜ್ಯೋತಿಯನ್ನು ಹಿಡಿದಾಗ ಕತ್ತಲೆಯ ಪ್ರಶ್ನೆಯೇ ಬರುವುದಿಲ್ಲ. ಕತ್ತಲೆ ಎಂದು ಭಯಪಡುವ ಕಾರಣವಿಲ್ಲ. ಹಾಗೆಯೇ ಪರುಷಮಣಿ ಕೈಯಲ್ಲಿದ್ದರೆ ಹಣದ ಬಗ್ಗೆ ಚಿಂತೆಯ ಅವಶ್ಯಕವಿಲ್ಲ. ಏಕೆಂದರೆ ಪರುಷಮಣಿಯಿಂದ ಮುಟ್ಟಿದುದೆಲ್ಲವೂ ಚಿನ್ನವಾಗುವಾಗ, ಹಣ ಗಳಿಸಲು ಬೇರೆ ಪ್ರಯತ್ನಮಾಡುವ ಅವಶ್ಯಕವಿಲ್ಲ. ಕೂಲಿಮಾಡಿ ಜೀವಿಸುವಷ್ಟು ಬಡತನವಿದ್ದರೂ ಕೈಲಿ ಪರುಷಮಣಿ ಇದ್ದರೆ, ಬಡತನದ ಬವಣೆ ನಿವಾರಣೆಯಾದಂತೆಯೇ ಸರಿ. ಕೂಲಿಮಾಡಿ ದುಡಿಯುವ ಅಗತ್ಯವಿರುವುದಿಲ್ಲ. ಹಸಿವೆಯಾದರೆ ಕಟ್ಟೋಗರ ಬೇಕಾಗುತ್ತದೆ. ಹಸಿವೆಯೇ ಇಲ್ಲದವನು ಊಟಕ್ಕೆ ಎಂದು ಊಟದ ಅಡಿಗೆಯನ್ನು ಕಟ್ಟಿಕೊಂಡು ಹೋಗುವುದು ಬೇಕಾಗುವುದಿಲ್ಲ. ಅಗತ್ಯವಿಲ್ಲದೆ ಕಟ್ಟಿಕೊಂಡು ಹೋದರೆ ಹೊರೆಯಾಗುತ್ತದೆಯೇ

ಹೊರತು ಉಪಯೋಗಕ್ಕೆ ಬರುವುದಿಲ್ಲ. ಹಾಗೆಯೇ ಭಕ್ತವತ್ಸಲನಾದ, ಎಲ್ಲಾ ಇಷ್ಟಾರ್ಥಗಳನ್ನೂ ಈಡೇರಿಸಲು ಸಮರ್ಥನಾದ ಪರಮಾತ್ಮನು ಇಷ್ಟಲಿಂಗದ ರೂಪದಲ್ಲಿ ಕೈಯಲ್ಲೇ ಇರುವಾಗ, ಆ ಮೂಲಕ ದಿವ್ಯಜ್ಞಾನವನ್ನು ಪಡೆದು ಮನದ ಕತ್ತಲೆಯನ್ನು ಕಳೆದುಕೊಳ್ಳಲು ಸಾಧ್ಯ. ಜ್ಞಾನವೆಂಬ ಬೆಳಕಿಗಾಗಿ ಮತ್ತೆಲ್ಲೋ ಅರಸಿಕೊಂಡು ಹೋಗುವುದು ಅಜ್ಞಾನ ಅಷ್ಟೆ. ಆತ್ಮಜ್ಞಾನಿಗೆ ಬೇಕಾದ ಮುಕ್ತಿಯನ್ನು ಕೊಡಲು ಎಲ್ಲವನ್ನೂ ಕೊಡುವ ಪರುಷಮಣಿಯಂತಿರುವ ಇಷ್ಟಲಿಂಗವಿರುವಾಗ, ಕೈಲಾಸ ಕಾಣಬೇಕೆಂದ ಆಸೆಯನ್ನಿಟ್ಟುಕೊಂಡು ಇಲ್ಲಿಯ ಕರ್ತವ್ಯಗಳನ್ನು, ಕೈಯ್ಯಲ್ಲಿರುವ ಇಷ್ಟಲಿಂಗವನ್ನು ಮರೆತು, ದೇವರು ಬೇರೆಲ್ಲೋ ಕೈಲಾಸದಲ್ಲಿದ್ದಾನೆಂದು ಬಗೆದು ಹುಡುಕಾಡುವ ಪ್ರಯತ್ನ ಕೈಯ್ಯಲ್ಲಿ ಪರುಷಮಣಿಯನ್ನಿಟ್ಟುಕೊಂಡು, ಕೂಲಿ ಮಾಡಿ ಹಣಗಳಿಸಲು ಹೊರಟಂತೆ ಹಾಸ್ಯಾಸ್ಪದ. ಅದೇ ರೀತಿ ಹಸಿವು ಅಡಗಿದ ಮೇಲೆ, ಊಟಕ್ಕೆ ಬೇಕಾಗುತ್ತಿದೆಯೆಂದು ಭಕ್ಷ್ಯಭೋಜ್ಯಗಳ ಹೊರೆಯನ್ನು ವ್ಯರ್ಥವಾಗಿ ಹೊತ್ತುಕೊಂಡು ಹೋದಂತೆ, ಈ ಜಗತ್ತಿನ ಐಹಿಕ ಸುಖಗಳು ನಶ್ವರ ಎಂಬ ಜ್ಞಾನ ಪ್ರಾಪ್ತಿಯಾದ ಮೇಲೆ, ಅದು ಬೇಕು, ಇದು ಬೇಕೆಂಬ ಐಹಿಕ ಸುಖದ ಆಸೆಗಳನ್ನು ಇಟ್ಟುಕೊಳ್ಳಬಾರದು. ಯಾವುದು ಶಾಶ್ವತ ಯಾವುದು ಅಶಾಶ್ವತ ಎಂಬುದು ಗೊತ್ತಿದ್ದೂ, ಭೂಲೋಕ, ಕೈಲಾಸ ಎಂಬ ತಾರತಮ್ಯಮಾಡಿ ಕೈಲಾಸಬೇಕೆಂದು ಹಂಬಲಿಸುವುದು ಸರಿಯಲ್ಲ. ಮರ್ತ್ಯ ಮತ್ತು ಕೈಲಾಸದ ಅರ್ಥವನ್ನು ಸರಿಯಾಗಿ ತಿಳಿದುಕೊಂಡರೆ, ಆ ಬೆಳಗು ನನ್ನಲ್ಲಿಯೇ ಇದೆ ಎಂಬುದನ್ನು ಕಂಡುಕೊಳ್ಳಬಹುದೆಂದು, ಆಯ್ದಕ್ಕಿ ಲಕ್ಕಮ್ಮ ತನ್ನ ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾಳೆ.

■

೫೬.

ಕಂಡ ಭಕ್ತರಿಗೆ ಕೈಮುಗಿವಾತನೆ ಭಕ್ತ
ಮೃದುವಚನವೇ ಸಕಲ ಜಪಂಗಳಯ್ಯಾ
ಮೃದುವಚನವೇ ಸಕಲ ತಪಂಗಳಯ್ಯಾ
ಸದುವಿನಯವೇ ಸದಾಶಿವನ ಒಲುಮೆಯಯ್ಯಾ
ಕೂಡಲಸಂಗಯ್ಯನು ಅಂತಲ್ಲದೊಲ್ಲನಯ್ಯಾ

–ಬಸವಣ್ಣ

ಭಕ್ತ ಭಂಡಾರಿ ಬಸವಣ್ಣನವರು ತಾವೇ ದೊಡ್ಡ ಶರಣರಾಗಿದ್ದರೂ, ಭಕ್ತರು ಕಂಡ ತಕ್ಷಣವೇ ಯಾವ ಭೇದಭಾವವಿಲ್ಲದೆ ಎಲ್ಲರಿಗೂ ಶರಣೆನ್ನುತ್ತಿದ್ದರು. ನಿಜವಾದ

ಭಕ್ತನು, ಇನ್ನೊಬ್ಬ ಭಕ್ತನನ್ನು ಗೌರವದಿಂದ ಕಾಣುತ್ತಾನೆ. ಅವನ ದೊಡ್ಡಸ್ತಿಕೆಯನ್ನು ಗೌರವಿಸುತ್ತಾನೆ. ವಿನಯಪೂರ್ವಕ ನಡೆದುಕೊಳ್ಳುತ್ತಾನೆ. ಈ ವಿನಯದ ನಡತೆಯೂ ದೇವರ ಒಲುಮೆಗೆ ಮುಖ್ಯಮಾರ್ಗ. ಅದಕ್ಕಾಗಿ ಸದಾಶಿವನ ಒಲುಮೆಗೆ ಪಾತ್ರರಾಗಬೇಕೆನ್ನುವವರು ಇನ್ನೊಬ್ಬರನ್ನು ಗೌರವಿಸುವುದನ್ನೂ ಕಲಿತುಕೊಂಡಿರಬೇಕು. ಏಕೆಂದರೆ ಮೃದುವಾದ ಪ್ರೀತಿಯ ಮಾತೇ ದೇವರ ಜಪ, ಮತ್ತು ತಪ. ವಿನಯದಿಂದ ಕೂಡಿದ ನಡತೆಯೇ ಸದಾಶಿವನ ಒಲುಮೆಯ ದಾರಿ. ಇನ್ನೊಬ್ಬರನ್ನು ಗೌರವದಿಂದ ಕಾಣುವ ಮನೋಭಾವ ಹಾಗೂ ಇತರರೊಡನೆ ಮೃದು ರೀತಿಯ ವರ್ತನೆ, ವಿನಯದಿಂದೊಡಗೂಡಿದ ನಡೆಯೇ ಪರಮಾತ್ಮನಿಗೆ ಪ್ರಿಯವಾದವು. ಇವೇ ಅವನನ್ನು ಒಲಿಸಲು ಬೇಕಾದ ಜಪ–ತಪಗಳು. ದೇವರಿಗೆ ಮಣಿಯನೆಣಿಸುವ, ಮಂತ್ರೋಚ್ಚಾರಣೆ ಮಾಡುವ ಜಪ ತಪಗಳಿಗಿಂತ ಸನ್ನಡತೆ, ಸದಾಚಾರಗಳೇ ಹೆಚ್ಚು ಪ್ರಿಯ. ಅವನ್ನು ಹೊಂದಿರುವವನನ್ನೇ ದೇವರು ಪ್ರೀತಿಸುತ್ತಾನೆ. ಅಲ್ಲದವರನ್ನು ಅವನು ಒಲ್ಲ ಎಂದು ಬಸವಣ್ಣನವರು ನುಡಿದಿದ್ದಾರೆ.

■

## ೫೭

ಕಂಗಳ ಮುಂದೆ ಮಾಣಿಕವಿದ್ದು ಕಾಣಲೇಕರಿಯರಯ್ಯಾ?
ಬಾಗಿಲ ಮುಂದೆ ಹಾಲ ಸಾಗರವಿದ್ದು ಒರತೆಯ ನೀರಿಗೆ ಹಾರುವಂತೆ
ಕಂಗಳ ಮುಂದೆ ಮಹಾಶರಣನಿದ್ದಲ್ಲಿ ಕತ್ತಲೆ ಎನಲೇಕೆ?
ಇನ್ನು ಬೇರೆ ಲಿಂಗವನರಸಹೆನೆನಲೇಕೆ?
ಆ ಮಹಾಶರಣ ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ

–ಲಿಂಗಮ್ಮ

ಶರಣೆ ಲಿಂಗಮ್ಮ ಆಧ್ಯಾತ್ಮ ಜೀವನದಲ್ಲಿ ಮಿಂದವಳು. ಅದರಲ್ಲಿ ಬಹುದೂರ ಸಾಗಿ ಅದರ ಸುಖವನ್ನು ಕಂಡವಳು. ಆದುದರಿಂದ ಅನೇಕ ರೀತಿಯಲ್ಲಿ ಜನರಿಗೆ ಮಾರ್ಗದರ್ಶನ ಮಾಡುವ ತಿಳಿವಳಿಕೆಯೂ ಅವಳಲ್ಲಿ ಮೂಡಿದೆ. ತಾನರಿದ ಜ್ಞಾನವನ್ನು ವಚನಗಳ ರೂಪದಲ್ಲಿ ಬರೆದು ಜನರಿಗೆ ಮಾರ್ಗದರ್ಶನ ಮಾಡಿದ್ದಾಳೆ. ಜನರು ತಪ್ಪಿದಾಗ ಕ್ರಮಿಸಬೇಕಾದ ದಾರಿ ಅದಲ್ಲ ಇದು ಎಂದು ತೋರಿಸಿಕೊಟ್ಟಿದ್ದಾಳೆ.

ಜನರು ದೇವರನ್ನು ಹುಡುಕಿಕೊಂಡು ಗುಡಿ ಗುಂಡಾರಗಳಿಗೆ, ತೀರ್ಥ ಕ್ಷೇತ್ರಗಳಿಗೆ ಹೋಗುವುದನ್ನು, ಆಧ್ಯಾತ್ಮ ವಿಷಯಗಳನ್ನು ತಿಳಿಯಲು ಬೇರೆಬೇರೆ

ಕಡೆಗೆ ಹೋಗುವುದನ್ನೂ ಗುಮನಿಸಿದಳು. ಅವಿರಳ ಜ್ಞಾನಿಯೂ ಆಧ್ಯಾತ್ಮ ಕ್ಷೇತ್ರದಲ್ಲಿ ಮಹತ್ಸಾಧನೆಯನ್ನು ಮಾಡಿದವನೂ, ಮಾರ್ಗದರ್ಶನ ಮಾಡಬಲ್ಲವನೂ, ಪ್ರಕಾಂಡಪಂಡಿತನೂ ಆದಂತಹ ಚನ್ನಬಸವಣ್ಣನು ಅವರೆಲ್ಲರ ಮಧ್ಯದಲ್ಲಿಯೇ ಇದ್ದನು. ಯಾರಿಗೆ ಯಾವ ವಿಚಾರದಲ್ಲಿ ಸಂದೇಹ ಉಂಟಾದರೂ ಅದನ್ನು ಪರಿಹರಿಸಬಲ್ಲ ಮಹಾಜ್ಞಾನಿ ತಮ್ಮ ಸಮೀಪದಲ್ಲೇ ಇದ್ದರೂ ಅನೇಕರು, ಅಲ್ಲಿಗಿಲ್ಲಿಗೆ ಅಲೆದಾಡುವುದನ್ನು ನೋಡಿದ ಲಿಂಗಮ್ಮ ನಿಮ್ಮ ಕಣ್ಣೆದುರಿಗೇ ಮಾಣಿಕ್ಯವಿದ್ದರೂ, ಅದನ್ನು ನೀವು ಕಾಣಲಾರಿರಲ್ಲಾ. ಮನೆಯ ಬಾಗಿಲಲ್ಲೇ ಹಾಲಿನ ತೊರೆಯಿದ್ದರೂ, ಒರತೆಯ ನೀರನ್ನು ಹುಡುಕಿಕೊಂಡು ಬೇರೆಲ್ಲಿಯೋ ಹೋಗುವ ಮೂಢರಂತೆ ಚನ್ನಬಸವಣ್ಣನಿಂದ ಜ್ಞಾನದ, ಆಧ್ಯಾತ್ಮದ ಪ್ರಯೋಜನ ಪಡೆದುಕೊಳ್ಳದಿರುವಿರಲ್ಲ. ಮಹಾಜ್ಞಾನಿಯಾದ ಶರಣ ಜೊತೆಯಲ್ಲೇ ಇದ್ದರೂ, ಅವನಿಂದ ತಿಳಿದು ನಿಮ್ಮ ಅಜ್ಞಾನವನ್ನು ಹೋಗಲಾಡಿಸಿಕೊಳ್ಳುವುದನ್ನು ಬಿಟ್ಟು ಇದಕ್ಕೆ ಪರಿಹಾರವಿಲ್ಲವೆ ಎಂದು ಏಕೆ ತಡಕಾಡುತ್ತೀರಿ. ಮತ್ತೆ ಬೇರೆಯ ಜ್ಞಾನಿಯನ್ನು ಹುಡುಕಬೇಕು ಎಂದು ಯೋಚಿಸುತ್ತೀರೇಕೆ? ನಿಮ್ಮೆಲ್ಲ ಸಂದೇಹಗಳನ್ನು ನಿವಾರಿಸಬಲ್ಲ ಜ್ಞಾನಿ ಅಪ್ಪಣ್ಣಪ್ರಿಯ ಚನ್ನಬಸವಣ್ಣನಿದ್ದಾನೆ ಎಂದು ಹೇಳಿದ್ದಾಳೆ, ಅಸಮಾನ್ಯ ಶರಣೆ ಲಿಂಗಮ್ಮ.

■

## ೩೮

ಕುಂಬಳಕಾಯಿಗೆ ಕಬ್ಬುನದ ಕಟ್ಟ ಕೊಟ್ಟಡೆ
ಕೊಳೆವುದಲ್ಲದೆ ಬಲುಹಾಗಬಲ್ಲುದೆ?
ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟಡೆ
ಭಕ್ತಿ ಎಂತಹುದು! ಮುನ್ನಿನಂತೆ!
ಕೂಡಲಸಂಗಯ್ಯಾ, ಮನಹೀನನು ಮೀಸಲು
ಕಾಯ್ದಿರಿಸಿದಂತೆ ಕೂಡಲಸಂಗಮದೇವಾ.

–ಬಸವಣ್ಣ

ಬಹಶಃ ಶಿವದೀಕ್ಷೆಯನ್ನು ಸಿಕ್ಕ ಸಿಕ್ಕವರಿಗೆ ಕೊಟ್ಟಾಗ, ಶಿವದೀಕ್ಷೆಯನ್ನು ಪಡೆದ ಮೇಲೂ ಆ ದುರ್ಬಲ ಮನಸ್ಸಿನ ದುಷ್ಟ ಜನರು, ತಮ್ಮ ದುರ್ಗುಣಗಳನ್ನು ಬಿಡದೆ, ಅವಿವೇಕದ, ಅನಾಚಾರದ ರೀತಿಯಲ್ಲಿ ಮೊದಲಿನಂತೆಯೇ ನಡೆಯುತ್ತಿದ್ದುದನ್ನು ಬಸವಣ್ಣ ಗಮನಿಸಿದಂತೆ ತೋರುತ್ತದೆ. ಅದನ್ನು ನೋಡಿ ಆತನಿಗೆ ಬೇಸರವಾಗಿ, ಇಂತಹವರಿಗೆಲ್ಲಾ ವ್ಯರ್ಥವಾಗಿ ಶಿವದೀಕ್ಷೆಯನ್ನೇಕೆ ಕೊಟ್ಟು

ಅದರ ದುರುಪಯೋಗ ಮಾಡುತ್ತಾರೆಂದು ನೋವು ಆಗಿದೆ. ಕುಂಬಳಕಾಯಿ, ಕಬ್ಬಿಣದಂತೆ ಗಟ್ಟಿಯಾಗಿರುವಂತಹದ್ದಲ್ಲ. ನಾಲ್ಕಾರು ದಿನಗಳ ಮೇಲೆ ಕೊಳೆತು ಹಾಳಾಗಿ ಹೋಗುವಂತಹುದು. ಅಂತಹದನ್ನು ಗಟ್ಟಿಗೊಳಿಸಬೇಕೆಂದು, ಕಬ್ಬಿಣದ ಕಟ್ಟುಗಳಿಂದ ಬಿಗಿದಿಟ್ಟರೂ ಅದು ಕೊಳೆತೇ ಹೋಗುತ್ತದೆ. ಕಬ್ಬಿಣದ ಕಟ್ಟುಗಳಿಂದ ಬಿಗಿದಿಲ್ಲದೆ ಅದು ಕೊಳತೇ ಹೋಗುತ್ತದೆ ಕಬ್ಬಿಣದ ಹಾಕಿದ ಕಾರಣಕ್ಕಾಗಿ ಅದೇನೂ ಗಟ್ಟಿಯಾಗಿ ಉಳಿಯುವುದಿಲ್ಲ. ಅದೇ ರೀತಿ, ತನ್ನ ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲಾರದ, ದೃಢಮನಸ್ಸಿಲ್ಲದವನಿಗೆ ಶಿವದೀಕ್ಷೆಯನ್ನು ಕೊಟ್ಟರೆ, ಅವನಲ್ಲಿ ಭಕ್ತಗುಣಗಳು ಅಂಕುರವಾಗುವುದಿಲ್ಲ. ಅದಕ್ಕೆ ಯೋಗ್ಯನಲ್ಲದ ಅವನು ಶಿವದೀಕ್ಷೆ ಪಡೆದಮೇಲೂ, ಮೊದಲಿನಂತೆಯೇ, ದುಷ್ಟಗುಣಗಳಿಗೆ ಅಧೀನನಾಗಿ ಶಿವದೀಕ್ಷಾಬದ್ಧನಿಗೆ ಸಲ್ಲದ ರೀತಿಯಲ್ಲಿ ಬದುಕುತ್ತಾನೆ. ಅಂತಹವನಿಗೆ ದೀಕ್ಷೆಕೊಡುವುದು, ಮನಸ್ಸಿಲ್ಲದವನನ್ನು, ಸ್ವಾಮಿಸೇವೆಗೆ ಭಕ್ತಜೀವನಕ್ಕೆ ಮೀಸಲಾಗಿರಿಸುವ ಪ್ರಯತ್ನ ಮಾಡಿದಂತಾಗುತ್ತದೆ ಎಂದು ಬಸವಣ್ಣನವರು ಹೇಳಿದ್ದಾರೆ.

■

## ೫೯

ಗಗನದ ಗುಂಪ ಚಂದ್ರಮ ಬಲ್ಲುದಲ್ಲದೆ,
ಕಡೆಯಲಿದ್ದಾಡುವ ಹದ್ದು ಬಲ್ಲುದೆ ಅಯ್ಯಾ?
ನದಿಯ ಗುಂಪ ತಾವರೆ ಬಲ್ಲುದಲ್ಲದೆ,
ಕಡೆಯಲ್ಲಿದ್ದ ಹೊನ್ನಾವರಿಕೆಬಲ್ಲುದೆ ಅಯ್ಯಾ?
ಪುಷ್ಪದ ಪರಿಮಳವ ತುಂಬಿ ಬಲ್ಲುದಲ್ಲದೆ
ಕಡೆಯಲ್ಲಿದ್ದಾಡುವ ನೊರಜು ಬಲ್ಲುದೆ ಅಯ್ಯಾ?
ಚನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣರ ನಿಲವ ನೀವೇ ಬಲ್ಲಿರಲ್ಲದೆ
ಈ ಕೋಣನ ಮೈಮೇಲಣ ಸೊಳ್ಳೆಗಳೆತ್ತ ಬಲ್ಲವಯ್ಯಾ?

–ಅಕ್ಕಮಹಾದೇವಿ

ಯಾವುದೊಂದು ವಿಚಾರವೂ ಅದರ ಸಮೀಪವಿರುವವರಿಗೆ ಅಥವಾ ಸಮೀಪ ಸಂಪರ್ಕವಿಟ್ಟುಕೊಂಡವರಿಗೆ ಗೊತ್ತಿರುತ್ತದೆ. ಕೇವಲ ಯಾವಾಗಲಾದರೂ ಸುಮ್ಮನೆ ಸಮೀಪ ಹೋಗಿ ಬರುವವರಿಗೆ ತಿಳಿಯುವುದಿಲ್ಲ. ಅಲ್ಲದೆ ಸಮೀಪವರ್ತಿಗಳಾಗಿ ಎಲ್ಲವನ್ನೂ ತಿಳಿದುಕೊಳ್ಳಲು ಆ ವಸ್ತುವಿಗೆ ಸರಿಹೊಂದುವ

ವ್ಯಕ್ತಿಯಲ್ಲದೆ ಬೇರೆಯವರು ಸಮೀಪವರ್ತಿಗಳಾಗುವುದಿಲ್ಲ. ಅದೇ ರೀತಿ ದೇವರ ಸಾನ್ನಿಧ್ಯಕ್ಕೆ ಹೋಗಿರುವ ಶರಣರು ಎಷ್ಟು ದೊಡ್ಡವರು, ಎಷ್ಟು ಮಹಿಮರು ಎಂಬುದು, ಅವರ ನಿಲುವು ಏನು ಎಂಬುದು ಮಲ್ಲಿಕಾರ್ಜುನನಿಗೇ ಗೊತ್ತಲ್ಲದೆ, ಕ್ಷುಲ್ಲಕರಾದ ಇತರರಿಗೆ ಗೊತ್ತಾಗಲು ಸಾಧ್ಯವಿಲ್ಲ ಎನ್ನುತ್ತಾಳೆ ಅಕ್ಕಮಹಾದೇವಿ. ತನ್ನ ಮಾತನ್ನು ಪುಷ್ಟೀಕರಿಸಲು ಕೆಲವೊಂದು ಹೋಲಿಕೆಗಳನ್ನು ಈ ವಚನದಲ್ಲಿ ಸುಂದರವಾಗಿ ಕೊಡಲಾಗಿದೆ.

ಆಕಾಶದಲ್ಲಿಯೇ ಇರುವ ಚಂದ್ರನಿಗೆ ಆಕಾಶದ ವಿಶಾಲತೆ ಗೊತ್ತಿಲ್ಲದೆ ಆಕಾಶದ ಸಮೀಪ ಹಾರಾಡುವ ಹದ್ದಿಗೆ ತಿಳಿಯಲಾರದು. ನದಿಯ ಆಳವನ್ನು ನದಿಯಲ್ಲೇ ಹುಟ್ಟಿ, ನದಿಯಲ್ಲೇ ಸತತ ವಾಸಿಸುವ ತಾವರೆಗೆ ಗೊತ್ತೇ ಹೊರತಾಗಿ ನದಿಯ ಬದಿಯಲ್ಲಿ ಬೆಳೆಯುವ ಹೊನ್ನಾವರಿಕೆ ಗಿಡಕ್ಕೆ ಗೊತ್ತಾಗಲು ಸಾಧ್ಯವಿಲ್ಲ. ಅದೇ ರೀತಿ ಹೂವಿನ ವಾಸನೆ ಎಂಥದೆಂಬುದನ್ನು ಹೂವಿನಲ್ಲಿ ಕುಳಿತು ಅದರ ಬಂಡನ್ನು ಸವಿಯುವ ದುಂಬಿಗೆ ಗೊತ್ತಲ್ಲದೆ ಆ ಹೂವಿನ ಸಮೀಪದಲ್ಲೇ ಹಾರಾಡುವ ನೊರಜುಗಳು ತಿಳಿಯಲಾರವು. ಅದರಂತೆ ತನ್ನ ಬಳಿಯೇ ಸುಳಿದಾಡುವ ಶರಣರ ಮಹಿಮೆಯನ್ನು ದೇವ ದೇವನಾದ ಭಗವಂತನು ಅರಿಯಬಲ್ಲನಲ್ಲದೆ, ಈ ಮರ್ತ್ಯದ ಮಾಯಾಜಾಲದಲ್ಲಿ ಸಿಕ್ಕು ಸಾವು ನೋವುಗಳನ್ನು ಅನುಭವಿಸುವ ಸೊಳ್ಳೆಗೆ ಸಮಾನರಾದ ಕ್ಷುಲ್ಲಕ ಮಾನವರುಗಳಿಗೆ ಅರ್ಥವಾಗುವುದು ಸಾಧ್ಯವೇ ಇಲ್ಲ ಎಂಬ ಮಾತನ್ನು ಈ ವಚನದಲ್ಲಿ ಅಕ್ಕಮಹಾದೇವಿ ತಿಳಿಸಿದ್ದಾರೆ.

ಒಳಿತು ಕೆಡುಕುಗಳನ್ನು ಒಳ್ಳೆಯದು ಕೆಟ್ಟದೆಂಬುದನ್ನು ಸರಿಯಾಗಿ ಗ್ರಹಿಸಲೂ ಸಹ ಒಂದು ರೀತಿಯ ಘನ ವ್ಯಕ್ತಿತ್ವಬೇಕು. ಅರಿವಿನ ಸಾಧನೆ ಬೇಕು. ಹಾಗಲ್ಲದೆ ಮೂಢಮತಿಗಳಿಗೆ ಅದು ಸಾಧ್ಯವಿಲ್ಲವಾದುದರಿಂದ ಪ್ರತಿಯೊಬ್ಬರೂ ತಮ್ಮ ಘನತೆಯನ್ನು ಎತ್ತರಿಸಿಕೊಳ್ಳುವ ಪ್ರಯತ್ನ ಮಾಡುವುದು ಒಳ್ಳೆಯದು.

■

## ೬೦

ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆ ಇಲ್ಲದ ಭಕ್ತ
ಇದ್ದಡೇನೋ ಶಿವ ಶಿವಾ ಹೋದಡೇನೋ?
ಕೂಡಲಸಂಗಮದೇವಯ್ಯಾ,
ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.

–ಬಸವಣ್ಣ

ಸಂಸಾರ ಜೀವನದಲ್ಲಿ ಗಂಡಹೆಂಡರಲ್ಲಿ ಸಾಮರಸ್ಯ ಭಾವವಿರಬೇಕು. ಒಬ್ಬರಲ್ಲೊಬ್ಬರಿಗೆ ಸ್ನೇಹಭಾವವಿರಬೇಕು. ಆಗ ಅವರ ಸಂಸಾರದಲ್ಲಿ ಶಾಂತಿ, ಸುಖ, ನೆಮ್ಮದಿ ಕಾಣುತ್ತದೆ. ಅದಿಲ್ಲದ ಸಂಸಾರ, ನರಕ ಸದೃಶ. ಅದೇ ರೀತಿ ಲಿಂಗವನ್ನು ಕೇವಲ ಮೈಮೇಲೆ ಧರಿಸಿದರೆ ಸಾಲದು. ಲಿಂಗದ ಬಗ್ಗೆ ಭಕ್ತಿ, ಶ್ರದ್ಧೆ, ನಿಷ್ಠೆ ಇದ್ದರೆ ಮಾತ್ರ ಕಟ್ಟಿಕೊಂಡದ್ದಕ್ಕೂ ಸಾರ್ಥಕ. ಆದರೆ ಕಟ್ಟಿಕೊಂಡ ಹೆಂಡತಿಗೆ ಗಂಡನ ಬಗ್ಗೆ ಸ್ನೇಹ ಪ್ರೀತಿಗಳಿಲ್ಲದಿದ್ದರೆ ಅಂತಹ ಸಂಸಾರ ನರಕಕ್ಕೆ ಸಮಾನ. ಮೈಮೇಲೆ ಧರಿಸಿಕೊಂಡ ಲಿಂಗದ ಬಗೆಗೆ, ಭಕ್ತನಿಗೆ ನಿಷ್ಠೆ, ಭಕ್ತಿಗಳಿಲ್ಲದಿದ್ದರೆ ಅವನ ಭಕ್ತಿ ಡೋಂಗಿ. ಅದು ಮಹತ್ವದ್ದಲ್ಲ. ಅಂಥ ಹೆಂಡತಿ, ಅಂತಹ ಭಕ್ತ ಇದ್ದರೂ ಒಂದೆ, ಸತ್ತರೂ ಒಂದೆ. ಏಕೆಂದರೆ ಹೆಂಡತಿಗೆ ನಿಜವಾದ ಪ್ರೀತಿ ಗಂಡನ ಮೇಲೆ ಇಲ್ಲದಿದ್ದರೆ ಅವರ ಸಂಸಾರ ವ್ಯರ್ಥ. ಹಾಗೆಯೇ ಮಾನವನಿಗೆ ತಾನು ಧರಿಸಿಕೊಂಡ ಲಿಂಗದ ಬಗೆಗೆ ಭಕ್ತಿ ಇಲ್ಲದಿದ್ದರೆ, ಅದನ್ನು ಒತ್ತಾಯದಿಂದ ಉಂಟುಮಾಡಲಾಗುವುದಿಲ್ಲ. ಆ ಭಕ್ತ ಭಕ್ತಿ ಎರಡೂ ನಿರರ್ಥಕ ಬೇರೆಯವರ ಒತ್ತಡಕ್ಕೆ ಪ್ರೀತಿಯಾಗಲೀ, ಭಕ್ತಿಯಾಗಲೀ ಹುಟ್ಟಲು ಸಾಧ್ಯವಿಲ್ಲ. ಹಾಗೆ ಒತ್ತಾಯಮಾಡಿದರೆ, ಹಾಲು ಕುಡಿಸಲು ಇಚ್ಛೆ ಇಲ್ಲದ ಹಸುವಿನ ಬಳಿಗೆ ಹಾಲು ಕುಡಿಯಲು ಕರುವನ್ನು ಬಿಟ್ಟಂತೆ ಆಗುತ್ತದೆ. ಆಗ ಹಸುವೂ ಕುಡಿಸುವುದಿಲ್ಲ, ಕರುವೂ ಕುಡಿಯುವುದಿಲ್ಲ. ಅದೇ ರೀತಿ ಹೆಂಡತಿ ಪ್ರೀತಿಸುವುದಿಲ್ಲ, ಗಂಡನು ಮಮತೆ ತೋರಿಸುವುದಿಲ್ಲ. ಅದೇ ರೀತಿ ಭಕ್ತನೂ ಭಕ್ತಿಯಿಂದ ನಡೆಯುವುದಿಲ್ಲ, ದೇವರೂ ಒಲಿಯುವುದಿಲ್ಲ ಎಂದು ಬಹು ಸುಂದರವಾದ ಹೋಲಿಕೆಯ ಮೂಲಕ ಬಸವಣ್ಣನವರು ತಿಳಿಸಿದ್ದಾರೆ.

■

## ೬೧

ಚೇಳಿಂಗೆ ಬಸುರಾಯಿತ್ತೆ ಕಡೆ, ಬಾಳೆಗೆ ಫಲವಾಯಿತ್ತೆ ಕಡೆ, ನೋಡಾ!
ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೆ ಕಡೆ!
ಮಾಡುವ ಭಕ್ತಂಗೆ ಮನ ಹೀನವಾದಡೆ ಅದೇ ಕಡೆ
ಕೂಡಲಸಂಗಮದೇವಾ.

–ಬಸವಣ್ಣ

ಚೇಳು ತಾನು ಬಸುರಾಗಿ ಮರಿ ಹಾಕಿದರೆ ಅದರ ಆಯಸ್ಸು ಮುಗಿದಂತೆ. ಏಕೆಂದರೆ ದಿನ ತುಂಬಿದ ಮೇಲೆ ಚೇಳಿನ ಗರ್ಭದಲ್ಲಿದ್ದ ಮರಿಯು ತಾಯಿಯ ಬೆನ್ನನ್ನು ಸೀಳಿಕೊಂಡು ಹೊರಬರುತ್ತದೆ. ತಾಯಿ ಚೇಳು ಮರಣವನ್ನಪ್ಪುತ್ತದೆಯಾಗಿ

‘ಚೇಳಿಂಗೆ ಬಸುರಾಯಿತ್ತೆ ಕಡೆ’ ಎನ್ನಲಾಗಿದೆ. ಬಾಳೆಯ ಮರವು ಒಂದೇ ಗೊನೆ ಬಿಡುತ್ತದೆ. ಹೇಗೇ ಬೆಳೆಸಿದರೂ ಒಂದು ಗೊನೆಗಿಂತ ಹೆಚ್ಚು ಬಿಡುವುದಿಲ್ಲವಾದುದರಿಂದ, ಗೊನೆಬಿಟ್ಟು ಆ ಗೊನೆ ಬಲಿತು ಪಕ್ವತೆಗೆ ಬಂದಾಗ ಗೊನೆಯನ್ನು ಕಡಿದು ತೆಗೆದುಕೊಳ್ಳುವಾಗಲೇ ಅದು ಬಿಟ್ಟ ಮರವನ್ನು ಕಡಿದುಹಾಕುತ್ತಾರೆ. ಆದುದರಿಂದ ‘ಬಾಳೆಗೆ ಫಲವಾಯಿತ್ತೇ ಕಡೆ’ ಎನ್ನುತ್ತಾರೆ. ಯುದ್ಧದಲ್ಲಿ ಹೋರಾಡುವ ವೀರನು ತನ್ನ ಪ್ರಾಣವನ್ನೂ ಲೆಕ್ಕಿಸದೆ ಯುದ್ಧಮಾಡಬೇಕು. ಅವನ ಗುರಿ ಗೆಲುವು ಇಲ್ಲವೆ ಸಾವು. ಎಂದರೆ ಸಾಯುವ ತನಕ ಹೋರಾಡಬೇಕು. ಶತ್ರು ಯಾವ ಕಡೆಯಿಂದ, ಹೇಗೆ ಬರುತ್ತಾನೋ ಎಂದು ಮೈಯೆಲ್ಲಾ ಕಣ್ಣಾಗಿ ಮನವೆಲ್ಲಾ ಬುದ್ಧಿಯಾಗಿ ಎಚ್ಚರಿಕೆಯಿಂದ ಯುದ್ಧಮಾಡಬೇಕು. ಹಾಗಿಲ್ಲದೆ ಒಂದು ಕ್ಷಣ ಅವನು ಮೈಮರೆತರೂ, ಲಕ್ಷ ಮಾಡಿದರೂ ಶತ್ರುಗಳು ಅವನನ್ನು ನಾಶಮಾಡುವುದರಿಂದ, ಅಲಕ್ಷವೇ ಅವನ ಕೊನೆಯನ್ನು ತರುತ್ತದೆ. ಭಕ್ತನಾದವನು ಭಕ್ತಿಭಾವದಿಂದ, ನಿರ್ಮಲ ಮನಸ್ಕನಾಗಿ, ಚಂಚಲಗೊಳ್ಳದೆ, ಸ್ಥಿರ ಭಾವದಿಂದ ನಂಬಿಕೆಯಿಂದ, ಶ್ರದ್ಧೆ ನಿಷ್ಠೆಗಳಿಂದ ಭಗವಂತನನ್ನು ಪ್ರಾರ್ಥಿಸಬೇಕು, ನಂಬುಗೆ ಇಟ್ಟು ಬದುಕಬೇಕು. ಇಲ್ಲದೆ ವಿಮನಸ್ಕನಾದರೆ ಪರಿಶುದ್ಧವಾದ ಮನಸ್ಸಿಲ್ಲದೆ, ಮನದಲ್ಲಿ ಮಲಿನ ವಿಚಾರಮಾಡುವವನಾದರೆ ಮುಗಿಯಿತು ಅವನು ಭಕ್ತನಾಗಿ ಉಳಿಯುವುದಿಲ್ಲ. ಮನಹೀನನಾದ ಕೂಡಲೇ ಅವನ ಶರಣತ್ವಕ್ಕೆ ಕೊನೆ ಉಂಟಾಗುತ್ತದೆ. ಭಕ್ತನಿಗೆ ಪರಿಶುದ್ಧವಾದ ಮನಸ್ಸು ಎಷ್ಟು ಮುಖ್ಯ ಎಂಬ ಅಂಶವನ್ನು ಈ ವಚನದಲ್ಲಿ ಬಸವಣ್ಣನವರು ತಿಳಿಸಿದ್ದಾರೆ.

■

## ೬೨

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ
ಚಂದ್ರ ಕುಂದೆ ಕುಂದುವುದಯ್ಯಾ
ಚಂದ್ರಂಗೆ ರಾಹುವಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ?
ಅಂಬುಧಿಯ ಮುನಿ ಆಪೋಷಣ ಕೊಂಬಲ್ಲಿ
ಚಂದ್ರಮನಡ್ಡಬಂದನೆ?
ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆ ಇಲ್ಲಾ!
ಜಗದ ನಂಟ ನೀನೆ ಅಯ್ಯಾ ಕೂಡಲಸಂಗಮದೇವಾ.

–ಬಸವಣ್ಣ

ಜೀವನದಲ್ಲಿ ಮನುಷ್ಯನು ಸುಖದಲ್ಲಿದ್ದಾಗ ಇತರರು ಬಂದು ಹಾಡಿ-ಹೊಗಳಿ ತಮ್ಮ ಸಂತೋಷ ವ್ಯಕ್ತಪಡಿಸುತ್ತಾರೆ. ದುಃಖ ಬಂದಾಗ ಬಂದು ಅನುಕಂಪ ತೋರಿಸಿ ದುಃಖ ವ್ಯಕ್ತಪಡಿಸಬಹುದು. ಆದರೆ ನಿಜವಾದ ಕಷ್ಟ ಬಂದು ಆ ಕಷ್ಟವನ್ನು ಪರಿಹರಿಸಲು ಸಹಾಯಮಾಡಬೇಕಾದ ಪ್ರಸಂಗ ಬಂದಾಗ ಎಲ್ಲರೂ ದೂರ ಸರಿಯುತ್ತಾರೆ. ಪುಕ್ಕಟೆ ಮಾತಗಳಿಂದ ಸಂತೋಷ ಹಾಗೂ ದುಃಖ ವ್ಯಕ್ತಪಡಿಸುವವರು ಬೇಕಾದಷ್ಟು ಜನ ಇರುತ್ತಾರೆ. ಆದರೆ ಕಷ್ಟಕಾಲದಲ್ಲಿ ನೆರವು ನೀಡಲಿಕ್ಕೆ ಒಬ್ಬರೂ ಇರುವುದಿಲ್ಲ ಎಂಬುದು ಈ ವಚನದ ತಾತ್ಪರ್ಯ. ಈ ಮಾತನ್ನು ಬಸವಣ್ಣನವರು ಸೂಕ್ತವಾದ ಹೋಲಿಕೆಯಿಂದ ವಿವರಿಸಿದ್ದಾರೆ.

ಚಂದ್ರ ಉದಯನಾದಾಗ (ಹುಣ್ಣಿಮೆಯ ದಿನ) ಸಮುದ್ರ ಮೇಲಕ್ಕೆ ಉಕ್ಕುತ್ತದೆ. ಚಂದ್ರ ಕುಂದಿದಂತೆ, ಸಮುದ್ರವೂ ಕುಂದುತ್ತದೆ. ಆದರೆ ಚಂದ್ರನಿಗೆ ಅಡ್ಡಲಾಗಿ ರಾಹುಗ್ರಹ ಬಂದಾಗ, ಸಮುದ್ರ ಏನೂ ಮಾಡದೆ ಸುಮ್ಮನಿರುತ್ತದೆಯೇ ಹೊರತು ಚಂದ್ರನಿಗೆ ತೊಂದರೆಯಾಗುವುದೆಂದು ಸಹಾಯಕ್ಕೆ ಹೋಗುವುದಿಲ್ಲ. ಅದೇ ರೀತಿ ಚಂದ್ರನೂ ಸಮುದ್ರರಾಜನ ಸ್ನೇಹಿತ. ಆದರೆ ಅಗಸ್ತ್ಯಮುನಿ ಇಡೀ ಸಮುದ್ರವನ್ನು ಆಪೋಷಣೆ ಮಾಡಿದಾಗ ಚಂದ್ರ ಯಾವ ರೀತಿ ಅಡ್ಡಿಯನ್ನೂ ಮಾಡಲಿಲ್ಲ. ತನ್ನ ಸ್ನೇಹಿತನೆಂದು ಸಹಾಯಕ್ಕೆ ಹೋಗಲಿಲ್ಲ. ಆದುದರಿಂದ ಯಾರಿಗೆ ಯಾರೂ ಇಲ್ಲ. ಇನ್ನೊಬ್ಬರು ಸಹಾಯ ಮಾಡುತ್ತಾರೆಂದು ಕಾಯಬಾರದು. ಕಷ್ಟಬಂದ ಸಮಯದಲ್ಲಿ ಯಾವ ಸ್ನೇಹಿತರೂ ಇರುವುದಿಲ್ಲ. ಎಲ್ಲಾ ಕಾಲದಲ್ಲೂ ಎಲ್ಲರಿಗೂ ನೆರವಾಗುವವನು ಕೂಡಲ ಸಂಗಮದೇವನೊಬ್ಬನೆ ಎಂದು ಬಸವಣ್ಣನವರು ಹೇಳಿದ್ದಾರೆ. ಆದ್ದರಿಂದ ಮಾನವ ದೇವರನ್ನು ನಂಬಿ ಬದುಕಬೇಕೇ ವಿನಃ ಹುಲು ಮಾನವರನ್ನಲ್ಲ. ಆ ಜನ ಸುಖದಲ್ಲಿ ಜೊತೆಗಿರುತ್ತಾರೆಯೇ ಹೊರತು ಕಷ್ಟಕಾಲದಲ್ಲಿರುವುದಿಲ್ಲ ಎಂಬುದನ್ನು ನಾವು ಮನಗಾಣಬೇಕು.

■

## ೬೩

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗಜಂಗಮ ಒಂದೇ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ

–ಬಸವಣ್ಣ

ಶರಣನೆಂತಿರಬೇಕೆಂಬ ಅಂಶಗಳನ್ನು ಬಸವಣ್ಣನವರು ಇಲ್ಲಿ ವಿವರಿಸಿದ್ದಾರೆ. ನಾವು 'ಶರಣ' ಎಂಬ ಪದವನ್ನು ಅತಿ ಸುಲಭವಾಗಿ ಯಾರಿಗೆ ಬೇಕೆಂದರೆ ಅವರಿಗೆ 'ಶ್ರೀಮಾನ್' ಎಂದು ಶಿಷ್ಟಾಚಾರಕ್ಕಾಗಿ ಉಪಯೋಗಿಸುವ ಪದದಂತೆ ಬಳಸಿಬಿಡುತ್ತೇವೆ. ಆದರೆ ನಿಜವಾಗಿ ಶರಣನೆನ್ನಿಸಿಕೊಳ್ಳುವುದು ಸುಲಭದ ಮಾತಲ್ಲ. ಅದಕ್ಕೆ ಸಾಕಷ್ಟು ಸಾಧನೆಗಳನ್ನು ಮಾಡಬೇಕು. ಅನೇಕ ನಿಯಮಗಳನ್ನು ಪಾಲಿಸಬೇಕು. ಶರಣನಾದವನು ಪರಧನಕ್ಕೆ ಆಸೆಪಡಬಾರದು; ಅದನ್ನೆಂದೂ ಅವನು ಮುಟ್ಟಬಾರದು. ಸಾಮಾನ್ಯಜನರು ಅನೇಕ ವಿಧಗಳಿಂದ ಮೋಸಮಾಡಿ ಪರರ ಆಸ್ತಿ, ಹಣ, ಅಧಿಕಾರ ಮುಂತಾದವುಗಳನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಾರೆ. ಆದರೆ ಶರಣನಾದವನು ಹಾಗೆಂದೂ ಮಾಡಬಾರದು. ಅವನು ಪರಧನ ನನಗೆ ಬೇಡವೇ ಬೇಡ ಎಂಬ ಛಲದಿಂದ ಬದುಕಬೇಕು. ಕೆಲವು ಧೂರ್ತರು ಪರಸತಿಯನ್ನೂ ಅಪೇಕ್ಷಿಸುತ್ತಾರೆ. ಅಂತಹವರೆಂದೂ ಶರಣರಾಗಲು ಸಾಧ್ಯವೇ ಇಲ್ಲ. 'ಪರಸತಿಯನ್ನು ಪಾರ್ವತಿ ಎಂಬೆ' ಎನ್ನುತ್ತಾನೆ ಶರಣ; ಪರಸತಿಯನ್ನು ತಾಯಿಯಂತೆ ಕಾಣುವ, ದೇವತೆಯಂತೆ ಗೌರವಿಸುವ ಮಾನವನೇ ಶರಣ. ಆದುದರಿಂದ ಪರಸತಿಯನ್ನೊಲ್ಲೆನೆಂಬ ಛಲ ಶರಣರಿಗಿರಬೇಕು. ಶರಣನು ಅನ್ಯದೇವರನ್ನೆಂದೂ ಪೂಜಿಸುವುದಿಲ್ಲ. ಪರಶಿವನೇ ಅವನ ಆರಾಧ್ಯ ದೇವತೆ. ಕಂಡ-ಕಂಡ ದೇವರಿಗೆ ಕೈಮುಗಿವವನು ಶರಣನಲ್ಲ. ಏಕೆಂದರೆ, ಎಲ್ಲಾ ದೇವರಿಗೂ ಕೈಮುಗಿಯುತ್ತಾ ಕುಳಿತರೆ, ಮನವು ನಂಬುಗೆಯ ಸ್ಥಿರ ಮನಸ್ಸನ್ನು ಪಡೆಯುವುದು ಕಷ್ಟವಾಗುತ್ತದೆ. ಮನಸ್ಸು ಈ ದೇವರು, ಆ ದೇವರು ಎಂದು ಹಾರಾಡುತ್ತಿರುತ್ತದೆ. ಆದುದರಿಂದ ಪರಶಿವನೊಬ್ಬನೇ ದೇವರೆಂಬ ನಂಬುಗೆಯಿಂದ ಭಕ್ತಿಪೂರ್ವ ಪೂಜಿಸಬೇಕು. ಅದಕ್ಕಾಗಿಯೇ ಶರಣನಿಗೆ ಪರದೈವವನೊಲ್ಲೆನೆಂಬ ಛಲಬೇಕು ಎಂದು ಹೇಳಿದ್ದಾರೆ. ಇದಲ್ಲದೆ, ಶರಣನಾದವನು ಲಿಂಗ ಬೇರೆ, ಜಂಗಮ ಬೇರೆ ಎಂದು ತಿಳಿಯಬಾರದು; ಲಿಂಗ-ಜಂಗಮ ಒಂದೇ ಎಂದು ತಿಳಿಯಬೇಕು. ಜಂಗಮ ಸಾಕ್ಷಾತ್ ಪರಶಿವನ ಪ್ರತೀಕ. ಆದ್ದರಿಂದ ಲಿಂಗಕ್ಕೂ ಜಂಗಮಕ್ಕೂ ಯಾವ ಭೇದವನ್ನೂ ಎಣಿಸಬಾರದು. ಆದರೆ ಜಂಗಮ ಎಂದರೆ ಹುಟ್ಟಿನಿಂದ ಜಂಗಮರಲ್ಲ ಬದುಕಿನಿಂದ, ತನ್ನ ಆಚಾರ-ವಿಚಾರಗಳಿಂದ, ಜ್ಞಾನದಿಂದ, ಸಾಧನೆಯಿಂದ ಜಂಗಮನಾಗಿರಬೇಕು. ಅವನಿಗೂ ಲಿಂಗಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆದುದರಿಂದ ಶರಣನಾದವನಿಗೆ ಲಿಂಗ ಜಂಗಮ ಒಂದೇ ಎಂಬ ನಂಬುಗೆ, ಛಲ ಇರಬೇಕು. ಅವನಿಗೆ ಪ್ರಸಾದ ದಿಟ ಎಂಬ ನಂಬುಗೆಯೂ ಇರಬೇಕು. ಇಂತಹ ಛಲದಿಂದ ಬದುಕಿದ ಶರಣಂಗೆ ಪ್ರಸಾದ ಶತಸ್ಸಿದ್ಧ ಎಂಬ ಛಲವಿರಬೇಕು. ಈ ಐದು ಛಲಗಳಿಲ್ಲದಿದ್ದರೆ, ಅಂತಹ ಶರಣನನ್ನು ದೇವರು ಮೆಚ್ಚುವುದಿಲ್ಲವೆಂಬ ಮಾತನ್ನು ಬಸವಣ್ಣನವರು ನುಡಿದಿದ್ದಾರೆ.

■

೭೪

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ!
ಅಪ್ರಮಾಣ, ಅಗಮ್ಯ, ಅಗೋಚರ, ಅಪ್ರತಿಮ, ಲಿಂಗವೆ
ಕೂಡಲಸಂಗಮದೇವಯ್ಯಾ
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ!

–ಬಸವಣ್ಣ

ಇಲ್ಲಿ ಬಸವಣ್ಣನವರು ವಿರಾಟ್ ಸ್ವರೂಪಿಯಾದ ಭಗವಂತನ ವರ್ಣನೆ ಮಾಡಿದ್ದಾರೆ. ದೇವರನ್ನು ಭಕ್ತರು ನಾನಾ ರೀತಿಯಾಗಿ ವರ್ಣಿಸಿದ್ದಾರೆ. ನಿರ್ಗುಣಿ, ನಿರಾಕಾರಿ, ಭಕ್ತವತ್ಸಲ, ದಯಾಘನ ಮುಂತಾಗಿ ನಾನಾ ರೀತಿಯಿಂದ ಅವನ ಗುಣ, ರೂಪ, ಶಕ್ತಿ, ಸಾಮರ್ಥ್ಯಗಳನ್ನು ವಿವರಿಸಲು ಪ್ರಯತ್ನಿಸಿದ್ದಾರೆ. ಆದಿ – ಅಂತ್ಯವಿಲ್ಲದ, ರೂಪು – ಆಕಾರಗಳಿಲ್ಲದ ಅವನನ್ನು ಕೈಕಾಲ, ಮುಖಗಳಿಂದಲೂ ಕಾಣಲು ಪ್ರಯತ್ನಿಸಿದ್ದಾರೆ. ಆದರೆ ಇಲ್ಲಿ ಬಸವಣ್ಣನವರು ದೇವರು ಅಳತೆಗೆ ಮೀರಿದವನು, ಅರಿಯಲು ಅಸಾಧ್ಯನಾದವನು, ನಮ್ಮ ಕಣ್ಣಿನಳವಿಗೆ ಮೀರಿದವನು, ಹೋಲಿಸಲಿಕ್ಕೂ ಆಗದವನು ಎಂಬ ಅಂಶವನ್ನೂ ಅವನ ವಿರಾಟ್‌ಸ್ವರೂಪವನ್ನೂ ವಿವರಿಸುತ್ತಾ ತೋರಿಸಿಕೊಟ್ಟಿದ್ದಾರೆ.

ದೇವರು ನೋಡಲಿಕ್ಕೆ ಎಷ್ಟು ದೊಡ್ಡವನು ಎಂದು ವಿಚಾರ ಮಾಡಿದರೆ ವಿವರಿಸಲು ಅಸಾಧ್ಯ. ನಮ್ಮಳವಿಗೆ ಹೇಗೆ ವರ್ಣಿಸಲು ಸಾಧ್ಯ? ನಮ್ಮ ಅನುಭವದಲ್ಲಿ ಇರುವುದಕ್ಕಷ್ಟೇ ಹೋಲಿಸಬಹುದು. ಅತೀ ಅಗಲ ಎಂದರೆ ಜಗತ್ತು, ಆಕಾಶ, ಅದಕ್ಕಿಂತಲೂ ವಿಸ್ತಾರವಾದುದು ನಮಗಿನ್ನೇನೂ ಗೊತ್ತಿಲ್ಲ. ಅತೀ ಎತ್ತರವಾದುದು ನಮ್ಮ ಅನುಭವದಲ್ಲಿ ಹೇಳಬೇಕಾದರೆ ಕೆಳಗೆ ಪಾತಾಳದವರೆಗೆ ಎಂದು ವರ್ಣಿಸಿ, ಅದಕ್ಕಿಂತಲೂ ಇನ್ನೂ ಕೆಳಗೆ ಎನ್ನಬಹುದು. ಮೇಲೆ ನಮಗೆ ತಿಳಿದಿರುವುದು, ಬಹುದೂರದಲ್ಲಿ ಬ್ರಹ್ಮಾಂಡವಿದೆ ಎಂಬುದು. ಅದನ್ನು ದಾಟಿ ನಮಗೇನೂ ತಿಳಿಯದು. ಆದುದರಿಂದ ಅದಕ್ಕಿಂತಲೂ ಎತ್ತರವಾದ ದೇವರನ್ನು ವರ್ಣಿಸುವಾಗ ಬ್ರಹ್ಮಾಂಡದಿತ್ತತ್ತ ಎಂದು ಬಿಟ್ಟಿದ್ದಾರೆ. ದೇವರ ಆಕಾರ ಹೇಗಿದೆ ಎಂದು ಹೇಳಬೇಕೆಂದರೆ ಅವನು ಕಣ್ಣಿಗೆ ಕಾಣಿಸುವಂತಿಲ್ಲ. ಯಾವುದಕ್ಕಾದರೂ ಹೋಲಿಸಿ ವಿಚಾರಿಸಬೇಕೆಂದರೆ ಅವನನ್ನು ಹೋಲಿಸಲು ಸರಿಹೋಗುವಂತಹುದು ನಮಗಾವುದೂ ಗೊತ್ತಿಲ್ಲ.

ಆದ್ದರಿಂದ ಬಸವಣ್ಣನವರು ದೇವರು ನೋಡಲು ಎಷ್ಟು ದೊಡ್ಡವನೆಂದರೆ, ಜಗದಗಲ, ಮುಗಿಲಗಲ ಅಷ್ಟೇ ಅಲ್ಲ ಅದಕ್ಕಿಂತಲೂ ಅಗಲ. ಅವನು ಎಷ್ಟು ಎತ್ತರವಿರಬಹುದೆಂದರೆ, ಕಾಲು ಪಾತಾಳಕ್ಕಿಂತಲೂ ಕೆಳಗೆ, ತಲೆ ಬ್ರಹ್ಮಾಂಡಕ್ಕಿಂತಲೂ ಮೇಲೆ. ಪಾತಾಳಕ್ಕಿಂತ ಎಷ್ಟು ಕೆಳಗೆ, ಬ್ರಹ್ಮಾಂಡಕ್ಕಿಂತಲೂ ಎಷ್ಟು ಮೇಲೆ, ಜಗತ್ತಿಗಿಂತಲೂ ಮುಗಿಲಿಗಿಂತಲೂ ಎಷ್ಟು ವಿಶಾಲ? ಹೇಳಲಿಕ್ಕೆ ಆಗದಷ್ಟು ಆದುದರಿಂದ ದೇವರನ್ನು ಅಳೆಯಲು ಸಾಧ್ಯವಿಲ್ಲದ ಅಪ್ರಮಾಣನು, ಅರ್ಥಮಾಡಿಕೊಳ್ಳಲಿಕ್ಕೆ ಅಸಾಧ್ಯನು, ಕಣ್ಣಿಗೆ ಕಾಣದಂತಹವನು, ಹೋಲಿಕೆಗೆ ಮೀರಿದವನು ಎಂಬ ಮಾತುಗಳಿಂದ ಅವನ ಅಗಾಧತೆಯ ಕಲ್ಪನೆ ಮಾಡಿಕೊಟ್ಟಿದ್ದಾರೆ. ಆದರೆ ಅಂತಹ ವಿರಾಟ್‌ರೂಪಿ, ನಮ್ಮ ಕರಸ್ಥಳದಲ್ಲಿ ಇಷ್ಟಲಿಂಗ ಸ್ವರೂಪದಲ್ಲಿ ಅತ್ಯಂತ ಸೂಕ್ಷ್ಮರೀತಿಯಲ್ಲಿ ಬಂದು ಕುಳಿತಿದ್ದಾನೆ. ನಮ್ಮ ಅಂಗೈಯಲ್ಲಿ ಇರುವ ಲಿಂಗಯ್ಯ ವಿಶ್ವವ್ಯಾಪಿಯಾದ ಭಗವಂತನೆಂಬುದನ್ನು ಇಲ್ಲಿ ತಿಳಿಸಿದ್ದಾರೆ.

■

೬೫

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ
ಜನ ಮೆಚ್ಚದಿರೆ ಶಿವ ಬಿಡುತಿಹನೆ?
ಜನರಿಲ್ಲಿ ನಿನ್ನನು ದೊಡ್ಡಾತನೆಚಿದರೆ
ಚಿನುಮಯ ಶಿವನಲ್ಲಿ ಅರಿಯನೆ ಮರುಳೆ ?

–ಸರ್ಪಭೂಷಣ ಶಿವಯೋಗಿಗಳು

ಸರ್ಪಭೂಷಣ ಶಿವಯೋಗಿಗಳು ಶುದ್ಧರಂತೆ ಕಾಣಿಸಿಕೊಳ್ಳುವ ಡಾಂಭಿಕರನ್ನು ನೋಡಿ, ಅವರಿಗೆ ಸರಿಯಾದ ತಿಳಿವಳಿಕೆಯನ್ನು ಕೊಟ್ಟಿದ್ದಾರೆ. ಮನುಷ್ಯನನ್ನು ಕುರಿತು, 'ಎಲೆ ಹುಚ್ಚಪ್ಪಾ, ಇತರರಿಗಾಗಿ ಬದುಕಬೇಡ. ಹೊರಗೆ ಶಾಂತ ಮನಸ್ಕನಂತೆ, ಸಜ್ಜನನಂತೆ ತೋರಿಸಿಕೊಂಡು ಮನಸ್ಸಿನಲ್ಲಿ ಕುತಂತ್ರ, ಕುವಿಚಾರಗಳನ್ನೊಳಗೊಂಡಿದ್ದರೆ ಪ್ರಯೋಜನವಿಲ್ಲ. ಅಂಥವನು ಜನಮೆಚ್ಚು ಶುದ್ಧನಲ್ಲದೆ ಮನಮೆಚ್ಚು ಶುದ್ಧನಲ್ಲ. ಜನಮೆಚ್ಚುವಂತೆ ಹೊರಗೆ ಬದುಕಿ, ಒಳಗೆ ದುಷ್ಟಮನವುಳ್ಳವನಾಗಿದ್ದರೆ, ನಿನ್ನ ಒಳ ಅಂತರಂಗವನ್ನು ಚಿನುಮಯ ಶಿವನು ಅರಿಯಬಲ್ಲ. ಅವನು ಬಾಹ್ಯವಾದ ನಟನೆಗೆ ಮರುಳಾಗುವುದಿಲ್ಲ. ಮರುಳಾದ ಜನ ನಿನ್ನನ್ನು ಕೈಲಾಸಕ್ಕೆ ಒಯ್ಯಲಾರರು. ಜನ ನಿನ್ನನ್ನು ದೊಡ್ಡಾತನೆಂದರೂ ನೀನೆಷ್ಟು ಸಣ್ಣವನೆಂಬುದನ್ನು ಅರಿತ ಶಿವ, ನಿನಗೆ ಯಾವ ಮುಕ್ತಿಯನ್ನೂ ಕೊಡುವುದಿಲ್ಲ. ನಿನ್ನ ಜೀವನ ವ್ಯರ್ಥ. ಆದರೆ

ಜನಮೆಚ್ಚದಿದ್ದರೂ, ಅಂತರಂಗದಲ್ಲಿ ನೀನು ಯೋಗ್ಯನಾಗಿ, ಸಜ್ಜನನಾಗಿ ಬದುಕಿದರೆ, ಅದು ದೇವರಿಗೆ ಅರ್ಥವಾಗುತ್ತದೆ. ಜನ ನಿನ್ನ ಬಗ್ಗೆ ಕಾಳಜಿ ವಹಿಸದಿದ್ದರೂ ದೇವರೇನೂ ನಿನ್ನನ್ನು ಅಲಕ್ಷಿಸುವುದಿಲ್ಲ ; ನಿನ್ನನ್ನು ಎತ್ತಿಕೊಳ್ಳುತ್ತಾನೆ. ಆದುದರಿಂದ ದೇವರು ಮೆಚ್ಚುವಂತೆ ಬದುಕುವುದನ್ನು ಕಲಿ. ದುಷ್ಟಗುಣಗಳನ್ನು ಮುಚ್ಚಿಕೊಂಡು ಜನರನ್ನು ಮೆಚ್ಚಿಸುವ ಬದುಕು ಬದುಕಿದರೆ, ನಿನ್ನ ಭವಿಷ್ಯವನ್ನು ನಿರ್ಮಿಸುವ ಭಗವಂತ ನಿನ್ನ ಕೈಬಿಡುತ್ತಾನೆ. ಮೆಚ್ಚಿದ ಜನರಿಗೆ ನಿನಗೆ ಒಳಿತನ್ನು ಮಾಡುವುದಕ್ಕೆ ಆಗುವುದಿಲ್ಲ. ಹಾಗಾಗಿ ಹಾಳಾಗುತ್ತೀಯೆ. ಹಾಳಾಗುವ ಹಾಗೆ ಬಾಳದೆ, ದೇವರ ಪ್ರೀತಿಗೆ ಪಾತ್ರನಾಗುವಂತೆ ಬದುಕು ಎಂದು ತಿಳಿ ಹೇಳಿದ್ದಾರೆ ಶಿವಯೋಗಿಗಳು. ಇದು ಸರ್ಪಭೂಷಣ ಶಿವಯೋಗಿಗಳ ಪದವಚನದ ಒಂದು ಭಾಗ.

■

## ೬೬

ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ
ಕೇಳಿರಯ್ಯಾ ಎರಡಾಳಿನ ಭಾಷೆಯ;
ಕೊಲುವೆನೆಂಬ ಭಾಷೆ ದೇವನದು; ಗೆಲುವೆನೆಂಬ ಭಾಷೆ ಭಕ್ತನದು.
ಸತ್ಯವೆಂಬ ಕೂರಲಗನೆ ತಳೆದುಕೊಂಡು
ಸದ್ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವಾ.

–ಬಸವಣ್ಣ

**ಈ** ನಮ್ಮ ಜಂಬೂದ್ವೀಪದಲ್ಲಿ, ಹೊಸಖಂಡ ಏಕೆ. ಇಡೀ ಜಗತ್ತಿನಲ್ಲಿ ಇರುವುದು ಎರಡುಭಾಷೆ. ಒಂದು ಕೊಲುವೆನೆಂಬುದು ಭಗವಂತನಭಾಷೆ, ಇನ್ನೊಂದು ಗೆದ್ದೇತೀರುತ್ತೇನೆಂಬುದು ಭಕ್ತನ ಭಾಷೆ. ದೇವರು ಈ ಜಗತ್ತಿನ ಮಾಯೆಯಲ್ಲಿ ಮುಸುಕಿ ದುಷ್ಟಸ್ವಭಾವವನ್ನು ಮೈಗೂಡಿಸಿಕೊಂಡು ಬದುಕುವ ಮಾನವನ ಮೇಲೆ ಸಮರ ಸಾರಿ ಅವನನ್ನು ನಾಶಮಾಡುತ್ತೇವೆಂದು ಹೇಳಿದರೆ, ಭಕ್ತನು ನೀನು ಯುದ್ಧಕ್ಕೆ ಬಂದರೆ, ನಾವು ಸತ್ಯವೆಂಬ ಕತ್ತಿಯನ್ನು ಹಿಡಿದು ಹೋರಾಡಿ ಗೆಲ್ಲುತ್ತೇವೆಯೇ ಹೊರತು, ನಿನಗೆ ಕೊಲ್ಲಲು ಬಿಡುವುದಿಲ್ಲ ಎಂದು ಹೇಳಿದ್ದಾರೆ. ಹೀಗೆ ಹೇಳಿದ ಭಕ್ತರು ಎಷ್ಟೇ ಕಷ್ಟವಾದರೂ ಸತ್ಯವೆಂಬ ಅತ್ಯಂತ ಹರಿತವಾದ ಕತ್ತಿಯನ್ನು ಹಿಡಿದುಕೊಂಡು ಕೊನೆಗೂ ಗೆದ್ದರು ಎಂದು ಹೇಳಿದ್ದಾರೆ ಬಸವಣ್ಣ.

ಭಕ್ತನಾದವನು ಸತ್ಯಮಾರ್ಗದಲ್ಲಿ ಬದುಕಿದರೆ ಅವನನ್ನು ದೇವರು ರಕ್ಷಿಸುತ್ತಾನೆ. ಆದರೆ ಅದಕ್ಕೂ ಮುನ್ನ ಅನೇಕ ರೀತಿಯ ಕಷ್ಟಗಳನ್ನು ಕೊಟ್ಟು ಅರೆದು ನೋಡುತ್ತಾನೆ,

ತಿರಿವಂತೆ ಮಾಡಿ ನೋಡುತ್ತಾನೆ. ತಿಕ್ಕಿ ತಿಕ್ಕಿ ಒರಗೆ ಹಚ್ಚಿ ನೋಡುತ್ತಾನೆ. ಈ ಕಷ್ಟಗಳಲ್ಲಿಯೂ ಭಕ್ತನಾದವನು ಎದೆಗುಂದದೆ, ಸತ್ಯವಾದ ಕಷ್ಟಮಾರ್ಗದಲ್ಲಿ ದಾರಿತಪ್ಪದೆ ನಡೆದರೆ, ಕೊನೆಗೆ ಭಕ್ತನಿಗೇ ಗೆಲುವಾಗುತ್ತದೆ. ದೇವರು ತಾನು ಸೋಲನ್ನೊಪ್ಪಿಕೊಂಡು ಭಕ್ತನನ್ನು ಕೈಹಿಡಿದೆತ್ತುತ್ತಾನೆ ಎಂಬುದು ಈ ವಚನದ ತಾತ್ಪರ್ಯ. ಬಹುಶಃ ಬಸವಣ್ಣನವರು ಇಂತಹ ಎಲ್ಲ ಪರೀಕ್ಷೆಗೆ ಒಳಗಾಗಿ, ಸತ್ಯಮಾರ್ಗದಿಂದ ಗೆದ್ದು ಶಿವನ ದಯೆಗೆ ಪಾತ್ರರಾದ ಅನುಭವದಿಂದ ನುಡಿದ ಅನುಭಾವ ವಚನವಿದು. ಇದು ನಮಗೊಂದು ಉತ್ತಮ ಮಾರ್ಗದರ್ಶನ.

■

## ೬೭

ಜ್ಞಾನ ಶೂನ್ಯವಾದ ಕ್ರಿಯೆಯು ಪ್ರಕಾಶವಾಗಲಾರದು
ಎರಡು ರೆಕ್ಕೆಯುಳ್ಳ ಪಕ್ಷಿಯು ಮೇಲಕ್ಕೆ ಹಾರುವುದಲ್ಲದೆ
ಒಂದೇ ರೆಕ್ಕೆಯುಳ್ಳ ಪಕ್ಷಿಯು ಮೇಲಕ್ಕೆ ಹಾರಲಾರದು
ಇದು ಕಾರಣ, ಮಾಡುವ ಮಾಟದಲ್ಲಿ ಜ್ಞಾನವು ಬೆರೆತಿರಬೇಕೆಂಬಾತ
ನಮ್ಮ ಗುರು ಕುಮಾರ ಪಂಚಾಕ್ಷರೇಶ್ವರ.

–ಪಂಚಾಕ್ಷರಿ ಗವಾಯಿಗಳು

ಯಾವುದೇ ಕೆಲಸಮಾಡಿದರೂ ಅದರ ಬಗ್ಗೆ ಎಂದರೆ ಕೆಲಸ ಮಾಡುವ ಉದ್ದೇಶದ ಬಗೆಗೆ, ಮಾಡುವ ರೀತಿಯ ಬಗೆಗೆ, ಅದಕ್ಕೆ ಬೇಕಾದ ಅವಶ್ಯಕತೆಯ ಬಗೆಗೆ ಯಾವಾಗ ಹೇಗೆ, ಹೇಗೆ ಎಲ್ಲೆಲ್ಲಿ ಏನೇನು ಮಾಡಬೇಕೆಂಬ ಅರಿವು ಮೊದಲೇ ಸಂಪೂರ್ಣವಾಗಿದ್ದಾಗ ಆ ಕೆಲಸ ಉತ್ತಮ ರೀತಿಯಿಂದ ನೆರವೇರುತ್ತದೆ, ಅದು ಪ್ರಕಾಶಕ್ಕೆ ಬರುತ್ತದೆ, ಫಲನೀಡುತ್ತದೆ. ಎಲ್ಲರ ಮೆಚ್ಚುಗೆ ಪಡೆಯುತ್ತದೆ. ಸರಿಯಾದ ಜ್ಞಾನವೇ ಇಲ್ಲದೆ ಕೆಲಸಮಾಡಿದರೆ ಅದು ನಿರುಪಯೋಗ. ಮಾಡಿದ ಶ್ರಮ, ಹಣ, ಸಮಯದ ಎಲ್ಲಾ ವ್ಯರ್ಥ. ಕೊನೆಯಲ್ಲಿ ಅನರ್ಥವಲ್ಲದೆ ಫಲವು ದೊರೆಯುವುದಿಲ್ಲ. ಆದ್ದರಿಂದ ಕೇವಲ ಕೆಲಸಮಾಡುವ ಶಕ್ತಿಯೊಂದಿದ್ದರೆ ಸಾಲದು. ಅದರ ಜೊತೆಗೆ ಜ್ಞಾನವೂ ಇದ್ದರೆ, ಸಾರ್ಥಕ. ಕಾರ್ಯಮಾಡಲು ಸಾಧ್ಯವಾಗುತ್ತದೆ. ಕೇವಲ ಜ್ಞಾನವಿದ್ದರೂ ಪ್ರಯೋಜನವಿಲ್ಲ. ಆ ಜ್ಞಾನವನ್ನು ಉಪಯೋಗಿಸಿಕೊಂಡು ಚೆನ್ನಾಗಿ ಕೆಲಸಮಾಡಿದಾಗ ಫಲ ಪಡೆಯಲಾಗುತ್ತದೆ. ಆದ್ದರಿಂದ ಜ್ಞಾನ ಹಾಗೂ ಕಾರ್ಯ ಎರಡೂ ಕೂಡಿದಾಗ ಉದ್ದೇಶ ಈಡೇರುತ್ತದೆ. ಅದಕ್ಕೆ ಪಂಚಾಕ್ಷರಿ ಗವಾಯಿಗಳು ಒಂದು ಸುಂದರ ಹೋಲಿಕೆಯನ್ನು ಕೊಟ್ಟಿದ್ದಾರೆ. ಎರಡು ರೆಕ್ಕೆಯುಳ್ಳ

ಹಕ್ಕಿ ಹಾರಬಲ್ಲದು. ಒಂದೇ ರೆಕ್ಕೆಯುಳ್ಳ ಹಕ್ಕಿ ಮೇಲೇರಲಾರದು. ಹಾಗೆ ಸಾಧಕನಿಗೆ ಹಕ್ಕಿಗಿರುವ ಎರಡು ರೆಕ್ಕೆಗಳಂತೆ ಸರಿಯಾದ ಸಮ್ಯಕ್ ಜ್ಞಾನ ಸತ್ಕ್ರಿಯಾ ಶಕ್ತಿ ಎರಡೂ ಇದ್ದರೆ, ಅವನು ತನ್ನ ಗುರಿಯನ್ನು ಸಾಧಿಸಲು ಸಾಧ್ಯವಾಗುತ್ತದೆ ಎಂಬ ಅಂಶವನ್ನು ಇಲ್ಲಿ ತಿಳಿಸಿದ್ದಾರೆ. ಶರಣನಾಗುವವನಿಗೆ ಸಮ್ಯಕ್ ಜ್ಞಾನ, ಕ್ರಿಯಾ ಶಕ್ತಿ ಎರಡೂ ಬೇಕು ಜ್ಞಾನಯೋಗ, ಕಾಯಕಯೋಗಗಳೆರಡರ ಸಂಯೋಗವಾದರೆ, ಬೇಕಾದುದನ್ನು ಸಾಧಿಸಬಹುದು; ಆಧ್ಯಾತ್ಮಮಾರ್ಗದಲ್ಲಿ ಎಷ್ಟು ಎತ್ತರಕ್ಕೆ ಬೇಕಾದರೂ ಏರಬಹುದು.

ಆ ಒಂದು ವಚನದ ಬೋಧನೆಯನ್ನು ಆಧ್ಯಾತ್ಮ ಜೀವನಕ್ಕೆ ಉಪಯೋಗಿಸಿಕೊಂಡಂತೆ, ಲೌಕಿಕ ಜೀವನಕ್ಕೂ ಉಪಯೋಗಿಸಿಕೊಳ್ಳಬಹುದು. ಸತ್ಕ್ರಿಯೆ ಮಾಡಬೇಕೆಂಬ ಉದ್ದೇಶ ಒಂದು ರೆಕ್ಕೆಯಾದರೆ, ಆ ಕ್ರಿಯೆಯನ್ನು ಯಶಸ್ವಿಯಾಗಿ ನೆರವೇರಿಸಲು ಬೇಕಾದ ಜ್ಞಾನ ಇನ್ನೊಂದು ರೆಕ್ಕೆ. ಇಂತಹ ಎರಡು ರೆಕ್ಕೆಗಳನ್ನು ಹೊಂದಿದ ಮನುಷ್ಯ ಉತ್ತಮ ಕೆಲಸ ಸಾಧಿಸಬಲ್ಲ ಅವನು ಮಾಡಿದ ಉತ್ತಮ ಕೆಲಸಗಳು ಪ್ರಕಾಶಕ್ಕೆ ಬಂದು ಸರ್ವರಿಗೂ ಒಳಿತನ್ನು ಉಂಟುಮಾಡುವುದರಲ್ಲಿ ಸಂಶಯವಿಲ್ಲ.

ಈ ವಚನವು ಸುಪ್ರಸಿದ್ಧ ಸಂಗೀತ ವಿದ್ವಾಂಸರಾದ ಪಂ. ಪಂಚಾಕ್ಷರಿ ಗವಾಯಿಗಳವರದ್ದು. ಇದು ವೀರಶೈವ ಪುಣ್ಯಾಶ್ರಮದಿಂದ ಪ್ರಕಟವಾಗುವ 'ಪಂಚಾಕ್ಷರಿವಾಣಿ'ಯ ಜನವರಿ ೧೫, ೧೯೯೩ರ ಸಂಚಿಕೆಯಲ್ಲಿ ಪ್ರಕಟವಾಗಿದೆ.

■

## ೭೮

ತಟಾಕ ಒಡೆದಡೆ ಕಟ್ಟೆ ಒಡೆವುದಲ್ಲದೆ
ಅಂಬುಧಿ ತುಂಬಿ ಮೇರೆದಪ್ಪಿದಲ್ಲಿ ಕಟ್ಟಿಂಗೆ ಹಿಂಗಿ ನಿಂದುದುಂಟೆ?
ಅರಿಯದವಂಗೆ ಅರಿಕೆಯ ಹೇಳಿದಡೆ ಅರಿವನಲ್ಲದೆ,
ಅರಿದು ಮರೆದವಂಗೆ ಬೇರೊಂದೆಡೆಯ ಹೇಳಿಹೆನೆಂದೊಡೆ
ಕಡೆನಡು ಮೊಲಲಿಲ್ಲವೆಂದನಂಬಿಗ ಚೌಡಯ್ಯ.

–ಅಂಬಿಗರ ಚೌಡಯ್ಯ

ಇಲ್ಲಿ ಅಂಬಿಗರ ಚೌಡಯ್ಯನು ಜ್ಞಾನವನ್ನು ಅದರ ಕೊರತೆ ಇದೆ; ಅದನ್ನು ತಿಳಿದುಕೊಳ್ಳಬೇಕು ಎಂಬ ಬಯಕೆ ಇದ್ದವನಿಗೆ ಮಾತ್ರ ಹೇಳಬೇಕೆಂಬ ಅಂಶವನ್ನು

ತಿಳಿಸಿದ್ದಾನೆ. ಕೆರೆ ತುಂಬಿ ಹರಿದರೆ ಏರಿ ಒಡೆಯುತ್ತದೆ. ಆದರೆ ಸಮುದ್ರ ಎಂದೂ ಮೇರೆ ಮೀರುವುದಿಲ್ಲ. ಒಂದು ವೇಳೆ ಸಮುದ್ರ ತುಂಬಿ ತನ್ನ ಎಲ್ಲೆಯನ್ನು ದಾಟಿ ಬರುವುದಾದರೆ ಯಾವ ಕಟ್ಟೆ ತಾನೆ ತಡೆಯುತ್ತದೆ. ಯಾವುದೂ ಅದನ್ನು ತಡೆದು ನಿಲ್ಲಿಸಲು ಸಾಧ್ಯವಿಲ್ಲ. ಹಾಗೆಯೇ ಅರಿವಿನ ಕೊರತೆ ಇದ್ದವನಿಗೆ, ಕೊರತೆ ಇದೆ ಎಂದು ತಿಳಿದವನಿಗೆ ಏನನ್ನಾದರೂ ಹೇಳಿದರೆ ತಿಳಿದುಕೊಂಡು ಅರಿವನ್ನು ತಂದುಕೊಳ್ಳುತ್ತಾನೆ. ಅರಿವಿದ್ದೂ ಅದನ್ನು ಅಲಕ್ಷಿಸಿ ನಡೆಯುವವನಿಗೆ ಅರಿವನ್ನು ತಿಳಿಸುತ್ತೇನೆಂದು ಹೋದರೆ ಏನೂ ಉಪಯೋಗವಿಲ್ಲ. ಅವನಿಗೆ ಮೊದಲಾವುದು, ಕೊನೆಯಾವುದು, ನಡುವೆಯಾವುದು ಎಂಬ ಯಾವ ಅರಿವೂ ಇರುವುದಿಲ್ಲ. ಅವನ ಜ್ಞಾನವೆಲ್ಲಾ ಕೊಚ್ಚಿಹೋಗಿ ಅಜ್ಞಾನವಷ್ಟೇ ಮುಸುಕಿಕೊಂಡಾಗ ಯಾರೂ ಏನೂ ಮಾಡಲಾಗುವುದಿಲ್ಲ. ಎಲ್ಲಾ ಪ್ರಯತ್ನ ವ್ಯರ್ಥವಾಗುತ್ತದೆಯೆಂದು ಹೇಳಿದ್ದಾನೆ.

■

೬೯

ತನುಮುಟ್ಟಿ ಮನುಮುಟ್ಟಿದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ
ಸೂಳೆ ತನುಮುಟ್ಟಿ ಅಪ್ಪುವಳಲ್ಲದೆ ಮನಮುಟ್ಟಿ ಅಪ್ಪಳಯ್ಯಾ,
ಹಾಗೆ ಅರಿವು ಆಚಾರವನರಿಯದ ಅರಮರುಳುಗಳು
ಪರಮಾನಂದ ಶಿವಸುಖವನೆತ್ತಬಲ್ಲರಯ್ಯಾ?
ಕೋಟಿ ಸುಕೃತದ ಫಲವು ಒಂದುವೇಳೆ ಕೈಸಾರಿದಂತಿರ್ದು
ವೀರಶೈವಾಚಾರ ಸಂಪನ್ನರಾದ, ಘನಮಹಿಮರೇ ಬಲ್ಲರಯ್ಯಾ
ಕೂಡಲಚನ್ನಸಂಗಮದೇವಾ.

–ಚನ್ನಬಸವಣ್ಣ

ದೃಢಮನಸ್ಸಿನಿಂದ, ದೇವರಲ್ಲಿ ಒಂದಾಗಿ ತನ್ಮಯತೆಯಿಂದ ದೇವರ ಧ್ಯಾನ ಮಾಡದೆ ಕೇವಲ ಬಾಹ್ಯ ಕ್ರಿಯೆಗಳಿಂದ ಪೂಜಿಸುವ ಸಾಮಾನ್ಯ ಜನರನ್ನು ನೋಡಿ ಚನ್ನಬಸವಣ್ಣನವರು, ಈ ಜನರು ತನುವಿನಿಂದ ಭಗವಂತನನ್ನು ಮುಟ್ಟುವವರೇ ಹೊರತು ಮನದಿಂದಲ್ಲ. ಇಂತಹವರು ದೇವರಿಗೆ ಸದಾ ದೂರ ಎಂದು ಹೇಳುತ್ತಾ ಇವರ ಭಕ್ತಿಯು, ತಾನಪ್ಪುವ ಪುರುಷನನ್ನು ಮನಸ್ಸಿನಿಂದ ಪ್ರೇಮಿಸದೇ, ತನ್ನ ಲಾಭಕ್ಕಾಗಿ ಕೇವಲ ದೇಹದಿಂದ ಅಪ್ಪುವ ವೇಶ್ಯೆಯ ಪ್ರೇಮಕ್ಕೆ ಸಮ ಎಂದು ತಿಳಿಸಿದ್ದಾರೆ. ತನು–ಮನ–ಧನಗಳಿಂದ ಪರಮಾತ್ಮನನ್ನು ಧ್ಯಾನಿಸುವ, ಅವನಲ್ಲಿ ಒಂದಾಗುವ, ಜ್ಞಾನಿಗಳದ, ವೀರಶೈವ ಘನಮಹಿಮರಿಗೆ ದೇವರಲ್ಲಿ ಒಂದಾದಾಗ

ಸಿಕ್ಕುವ ಪರಮಾನಂದ ಶಿವಸುಖವು ತಿಳಿಯುವುದೇ ಹೊರತು, ಕೇವಲ ಬಾಹ್ಯವಾಗಿ ಪೂಜಿಸಿ, ಅಂತರಂಗದಿಂದ ಪೂಜಿಸದೇ ಇರುವವರಿಗೆ ಅರ್ಥವಾಗುವುದಿಲ್ಲ ಎಂದಿದ್ದಾರೆ. ನಿಜವಾದ ಭಕ್ತಿ ಇಲ್ಲದೆ, ಮಾಡಬೇಕಾದ ಒಂದು ಕೆಲಸವೆಂಬಂತೆ ಪೂಜೆಮಾಡುವ ಜನರನ್ನು ನೋಡಿ ಚನ್ನಬಸವಣ್ಣನವರಿಗೆ ಸಿಟ್ಟು ಬಂದಿರಬೇಕು. ಆ ಸಿಟ್ಟು ಅವರಿಗೆ ಇವರ ಪೂಜೆಯನ್ನು ಒಬ್ಬ ವೇಶ್ಯೆಯ ಪ್ರೇಮಕ್ಕೆ ಹೋಲಿಸಿ, ಅದೆಷ್ಟು ಅರ್ಥವಿಹೀನ ಹಾಗೂ ಕೀಳು ಎಂಬುದನ್ನು ಮನಗೊಳ್ಳುವಂತೆ ಮಾಡಿದ್ದಾರೆ.

■

## ೭೦

ತತ್ತಿಯೊಳಗಣ ಪಕ್ಷಿಯಂತೆ ಎತ್ತಲೆಂದರಿಯದೆ,
ಅಜ್ಞಾನದ ಕತ್ತಲೆಯೊಳಗೆ ಸಿಕ್ಕಿ ದುಃಖಿಗೊಳುತಿಹರೆಲ್ಲರೂ
ದಿವಾರಾತ್ರಿ ಎನ್ನದೆ ಇಂತು ದುಃಖವನನುಭವಿಸುತ್ತ
ಕಾಯವ ಹೊತ್ತು ಬಳಲುವ ಜೀವರುಗಳು ತಾವಾರೆಂದರಿಯದೆ
ನೋವುತ್ತ ಬೇವುತ್ತ ಸಾವುತಿಪ್ಪವರಿಗೆ
ಇನ್ನೆಂದಿಗೆ ಮುಕ್ತಿಯಹುದು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ

–ಸ್ವತಂತ್ರ ಸಿದ್ಧಲಿಂಗೇಶ್ವರ

**ಮೊ**ಟ್ಟೆಯ ಒಳಗಿರುವ ಪಕ್ಷಿಗೆ ಹೊರಗೆ ಬರಲು ದಾರಿಯೇ ಇಲ್ಲ. ಎತ್ತ ನೋಡಿದತ್ತ ಮುಚ್ಚಿದ ಕತ್ತಲೆಯೇ ಕತ್ತಲು. ಅದು ಮೊಟ್ಟೆಯೊಳಗೆ ಸೇರಿಕೊಂಡು ಅಸಹಾಯಕ ಸ್ಥಿತಿಯಲ್ಲಿ ಕತ್ತಲಿನಲ್ಲಿ ಒದ್ದಾಡುತ್ತಿರುತ್ತದೆ. ಆವರಿಸಿಕೊಂಡಿರುವ ಪರಿಸರದಲ್ಲಿ ಸಿಕ್ಕಿಕೊಂಡು ದುಃಖದಿಂದ ನರಳುತ್ತಿದ್ದಾರೆ. ಹಗಲು ರಾತ್ರಿ ಎನ್ನದೆ ದಿನವಿಡೀ ದುಃಖದಿಂದ ಬಳಲುವ ಮಾನವರು ಸರಿಯಾದ ಅರಿವಿಲ್ಲದೆ, ತಾವಾರೆಂಬುದನ್ನು ಅರ್ಥಮಾಡಿಕೊಳ್ಳಲಾರದವರಾಗಿರುವರು. ಹೀಗೆ ಇಡೀ ಜೀವನವೆಲ್ಲಾ ನೋಯುತ್ತಾ, ಬೇಯುತ್ತಾ, ಸಾಯುತ್ತಾ ದುಃಖದಲ್ಲಿ ಮುಳುಗಿರುವವರಿಗೆ ಮುಕ್ತಿ ಹೇಗೆ ಸಿಗಲು ಸಾಧ್ಯ ಎದು ಮರುಗಿದ್ದಾರೆ ಸ್ವತಂತ್ರ ಸಿದ್ಧಲಿಂಗೇಶ್ವರರು.

ಇಲ್ಲಿ ಶರಣರ (ಸ್ವತಂತ್ರ ಸಿದ್ಧಲಿಂಗೇಶ್ವರ) ಆಶಯವೆಂದರೆ ಜೀವಿಗಳು ಅಜ್ಞಾನವೆಂಬ ಕತ್ತಲೆಯಿಂದ ಹೊರಬಂದು, ಜ್ಞಾನವೆಂಬ ಬೆಳಕಿನಲ್ಲಿ ಸಂತೋಷದಿಂದ ನಲಿಯಬೇಕು. ದುಃಖದಿಂದ ಪಾರಾಗಬೇಕು ಎಂಬುದೇ ಆಗಿದೆ.

■

೭೧

ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ?
ತನಗಾದ ಆಗೇನು? ಅವರಿಗಾದ ಚೇಗೆಯೇನು?
ತನುವಿನ ಕೋಪ ತನ್ನ ಹಿರಿತನದ ಕೇಡು!
ಮನದ ಕೋಪ ತನ್ನ ಅರಿವಿನ ಕೇಡು !
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ,
ನೆರೆಮನೆಯ ಸುಡುವುದೆ ಕೂಡಲಸಂಗಮದೇವಾ!

–ಬಸವಣ್ಣ

ಯಾರಾದರೂ ನಮ್ಮ ಮೇಲೆ ಕೋಪಗೊಂಡರೆ, ಪ್ರತಿಯಾಗಿ ಅವರ ಮೇಲೆ ನಾವು ಕೋಪಗೊಳ್ಳುವುದು ಮಾನವ ಸಹಜ ಸ್ವಭಾವ. ಆದರೆ ಬಸವಣ್ಣನವರು ಹಾಗೇಕೆ ಮಾಡುತ್ತೀಯಯ್ಯಾ, ಹಾಗೆ ಮಾಡುವುದರಿಂದ ನಿನಗಾಗುವ ಲಾಭವೇನು ಅವರಿಗಾಗುವ ನಷ್ಟವೇನು? ಪ್ರಯೋಜನವಿಲ್ಲ, ಹಾಗೆ ಮಾಡಬಾರದು. ಏಕೆಂದರೆ ಬೇರೆಯವರು ಕೋಪ ಮಾಡಿದಾಗ ಅದಕ್ಕೊಂದು ಕಾರಣವಿರಬೇಕಲ್ಲವೆ? ಆ ಕಾರಣವೇನು ಎಂಬುದನ್ನು ಕಂಡುಹಿಡಿದು, ಅದಕ್ಕೆ ಪರಿಹಾರ ಕಂಡುಹಿಡಿದರೆ ಕೋಪ ಹೋಗಿ ಪ್ರೀತಿ ಉಂಟಾಗುತ್ತದೆ. ಹಾಗಿರುವಾಗ ಕೋಪಕ್ಕೆ ಪ್ರತಿಕೋಪ ತೋರಿಸುವುದರಿಂದೇನು ಪ್ರಯೋಜನ? ಒಂದು ವೇಳೆ ಅವರು ನಿನ್ನ ಮೇಲೆ ನಿಷ್ಕಾರಣ ಕೋಪಗೊಂಡಿದ್ದರೆ, ಅವರ ಅಜ್ಞಾನಕ್ಕೆ ನಕ್ಕುಬಿಡು ಅಥವಾ ಅಲಕ್ಷಿಸು. ಏಕೆಂದರೆ ನಿನ್ನಲ್ಲಿ ಹುಟ್ಟಿ ಕೋಪ ನಿನ್ನ ದೊಡ್ಡತನಕ್ಕೆ ಕುಂದು ತರುತ್ತದೆ, ನೀನೂ ಟೀಕೆಗೆ ಒಳಗಾಗುತ್ತೀ, ಬೇರೆಯವರ ದೃಷ್ಟಿಯಲ್ಲಿ ಸಣ್ಣವನಾಗುತ್ತೀಯೆ. ಅಲ್ಲದೆ ಅಜ್ಞಾನಿಯಾದವನು, ಸರಿಯಾದ ತಿಳಿವಳಿಕೆ ಇಲ್ಲದವನು ಕೋಪ ವ್ಯಕ್ತಪಡಿಸುತ್ತಾನೆ. ಕೋಪವು ವ್ಯಕ್ತಿಯಲ್ಲಿ ತಿಳಿವಳಿಕೆಯ ಅಭಾವವನ್ನು ಸೂಚಿಸುತ್ತದೆ. ಕೋಪಗೊಂಡವನು ಅಜ್ಞಾನಿ ಎನ್ನಿಸಿಕೊಳ್ಳುತ್ತಾನೆ. ಅಲ್ಲದೆ ಅದರಿಂದ ಇನ್ನೂ ಹೆಚ್ಚಿನ ಹಾನಿ ಇದೆ. ಕೋಪ ದೇಹ ಹಾಗೂ ಮನಸ್ಸಿನ ಮೇಲೂ ದುಷ್ಪರಿಣಾಮ ಉಂಟುಮಾಡುತ್ತದೆ. ಕೋಪಗೊಂಡಾಗ ಮನಸ್ಸು ಉದ್ವಿಗ್ನಗೊಂಡು ದೇಹದಲ್ಲಿ ಉಷ್ಣತೆ ಹೆಚ್ಚಿ, ತಾಪ ಉಂಟಾಗುತ್ತದೆ. ಹೇಗೆ ಮನೆಯಲ್ಲಿ ಹತ್ತಿಕೊಂಡ ಬೆಂಕಿ ಮನೆಯನ್ನು ಸುಡುತ್ತದೆಯೇ ಹೊರತು ನೆರೆಮನೆಯನ್ನು ಸುಡುವುದಿಲ್ಲ. ಹಾಗೆ ದೇಹದಲ್ಲಿ ಉತ್ಪನ್ನವಾದ ಕಿಚ್ಚು ತನ್ನ ದೇಹಕ್ಕೇ ಹಾನಿಯನ್ನುಂಟುಮಾಡುತ್ತದೆ ಬೇರೆಯವರಿಗಲ್ಲ ಎಂದು ಬಸವಣ್ಣನವರು

ಕೋಪದ ದುಷ್ಪರಿಣಾಮವನ್ನು ನಮಗೆ ತಿಳಿಯಪಡಿಸಿದ್ದಾರೆ. ಎಂತಹ ಪ್ರಸಂಗದಲ್ಲಿಯೂ ಕೋಪಗೊಳ್ಳದೆ ಸಮಾಧಾನಿಯಾಗಿ ಸಮಸ್ಯೆಗಳನ್ನು ಬಿಡಿಸಬೇಕೆಂಬುದು ಈ ವಚನದ ಉಪದೇಶ.

■

## ೭೨

ತನುಬತ್ತಲೆಯಿದ್ದರೇನೋ ಮನಶುಚಿಯಾಗದನ್ನಕ್ಕರ?
ಬೋಳಾದೊ ಡೇನೋ, ಭಾವಬಯಲಾಗದನ್ನಕ್ಕರ,
ಭಸ್ಮವ ಪೂಸಿದಡೇನೋ ಕರಣಾದಿ, ಗುಣಂಗಳ ಮೆಟ್ಟಿ ಸುಡದನ್ನಕ್ಕರ,
ಇಂತೀ ಆಸೆಯ ವೇಷದ ಭಾಷೆಗೆ
ಗೊಹೇಶ್ವರಾ, ನೀ ಸಾಕ್ಷಿಯಾಗಿ ಛೀ ಎಂಬೆನು.

–ಅಲ್ಲಮ ಪ್ರಭು

ಧಾರ್ಮಿಕ ಮನೋಭಾವದವರೆಂದು ಅವರ ವೇಷ ಭೂಷಣಗಳಿಂದಲೇ ಗುರುತಿಸಬಹುದು. ಆ ಧಾರ್ಮಿಕ ಲಾಂಛನಗಳಿಗೂ ಆ ಧರ್ಮದಲ್ಲಿ ಒಂದು ಅರ್ಥವಿರುತ್ತದೆ. ಅದು ಧರ್ಮದ ತತ್ವವನ್ನು ಒಳಗೊಂಡಿರುತ್ತದೆ. ಆ ಧರ್ಮದ ಅನುಚರರು ಆ ಲಾಂಛನಗಳನ್ನು ಧರಿಸಿರುತ್ತಾರೆ. ಉದಾಹರಣಗೆಗೆ ವೀರಶೈವ ಧರ್ಮದಲ್ಲಿ ಭಸ್ಮ ಧರಿಸುವ ಪರಿಪಾಠವಿದೆ. ಇದರ ಅರ್ಥ ಭಸ್ಮಧರಿಸುವ ವ್ಯಕ್ತಿ, ತನ್ನ ದೇಹಗುಣಗಳಾದ, ಆಸೆ, ಮೋಹ, ಮದ, ಮತ್ಸರ, ಮುಂತಾದ ದುಷ್ಟುಗುಣಗಳನ್ನು ಸುಟ್ಟು ಭಸ್ಮೀಕರಿಸಿಕೊಂಡು, ಆ ದುರ್ಗುಣಗಳಿಂದ ಸುಗುಣ ಯೋಗಿಯಾಗಿರಬೇಕು. ಅಂಥವನು ತನ್ನ ಕರುಣಾದಿ ಗುಣಂಗಳನ್ನು ಭಸ್ಮೀಕರಿಸಿದ ಸಂಕೇತವಾಗಿ ಭಸ್ಮ ಧರಿಸಿಕೊಳ್ಳುತ್ತಾನೆ. ಹಾಗೆಯೇ, ಆಸೆಗಳನ್ನೇ ಜಯಿಸಿದವನು, ದೇಹದ ಮೋಹವನ್ನು ತೊರೆದು, ಅದನ್ನು ಬಟ್ಟೆಯಿಂದ ರಕ್ಷಿಸಬೇಕು, ಮುಚ್ಚಿಡಬೇಕು ಎಂಬ ಮಮಕಾರವನ್ನು ಜಯಿಸಿದವನಾಗಿರುತ್ತಾನೆ. ಅಂತಹವನು ಬತ್ತಲೆಯೇ ಇರುತ್ತಾನೆ. ಅವನಿಗೆ. ಏನೂ ಅನ್ನಿಸುವುದೇ ಇಲ್ಲ. ನಾಚಿಕೆ ಎನ್ನಿಸುವುದಿಲ್ಲ. ದೇಹಕ್ಕೆ ಕೆಡುಕಾದೀತೆಂಬ ಭಯವಿರುವುದಿಲ್ಲ. ಅಂತಹ ಭಾವನೆಗಳನ್ನೆಲ್ಲಾ ದಾಟಿ ನಿಂತವನಾಗಿರುತ್ತಾನೆ. ಆ ರೀತಿ ಎಲ್ಲವನ್ನೂ ತ್ಯಾಗಮಾಡಿದವನು, ತನ್ನ ಮನಸ್ಸನ್ನು ತನ್ನ ಹತೋಟಿಯಲ್ಲಿಟ್ಟು ಕೊಂಡವನಾಗಿರುತ್ತಾನೆ. ಬತ್ತಲೆಯಿದ್ದರೂ, ಭಸ್ಮಧರಿಸಿದರೂ ಛಂದ. ಆದರೆ, ಶುದ್ಧಮನಸ್ಸಿಲ್ಲದವನು, ಆಸೆಯಿಂದ ಕೂಡಿದವನು, ಮೋಹಕ್ಕೆ ಒಳಗಾದವನು

ದೇಹವನ್ನು ಬತ್ತಲೆಯಾಗಿಟ್ಟುಕೊಂಡರೂ ಅಷ್ಟೆ. ಒಳಿತು-ಕೆಡುಕುಗಳು ಅರಿವಿಲ್ಲದೆ ತಲೆಯನ್ನು ಬೋಳಿಸಿಕೊಂಡರೂ ಅಷ್ಟೆ. ತನ್ನ ದೇಹದ ಗುಣಗಳಾದ ಲೋಭ, ಮೋಹ, ಮದ, ಮಾತ್ಸರ್ಯ ಮುಂತಾದವುಗಳನ್ನು ಸುಟ್ಟು ಭಸ್ಮಮಾಡಿ, ಪವಿತ್ರ ಮನ ಹೊಂದದೆ, ಭಸ್ಮಧರಿಸಿದರೂ ಅಷ್ಟೆ. ಕೇವಲ ಬಾಹ್ಯ ವೇಷದಲ್ಲಿ ಧಾರ್ಮಿಕರಂತೆ ಕಾಣಿಸಿಕೊಳ್ಳುತ್ತಾ, ಅಂತರಂಗದಲ್ಲಿ ಭಕ್ತನಿಗೆ ಸಲ್ಲದ ಗುಣಗಳನ್ನು ಹೊಂದಿದ್ದರೆ ಅವನನ್ನು ದೇವರ ಸಾಕ್ಷಿಯಾಗಿ ಛೀ ಎನ್ನುತ್ತೇನೆ, ನಿರ್ಲಕ್ಷ ಮಾಡುತ್ತೇನೆ ಎಂದು ಅಲ್ಲಮಪ್ರಭು ಹೇಳಿದ್ದಾರೆ.

■

## ೭೩

ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ, ಬೇಡು, ಬೇಡೆಲೆ ಹಂದೇ!
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ,
ಕೂಡಲಸಂಗಮದೇವಾ, ನಿಮಗಿತ್ತು ಶುದ್ಧನಾಗಿಪ್ಪೆ
ನಿಮ್ಮ ಪುರಾತರ ಮನೆಯಲ್ಲಿ.

–ಬಸವಣ್ಣ

ಬಸವೇಶ್ವರರ ಭಕ್ತಿಯು ಉತ್ಕಟವಾಗಿತ್ತು. ದೇವರ ಒಲುಮೆಗೆ ತಮ್ಮನ್ನು ತಕ್ಕವರನ್ನಾಗಿ ಮಾಡಿಕೊಳ್ಳಲು, ತನು-ಮನವನ್ನು ಶುದ್ಧವಾಗಿಟ್ಟುಕೊಳ್ಳಲು ಅವರು ಯಾವ ತ್ಯಾಗಕ್ಕಾದರೂ ಸಿದ್ಧರಿದ್ದರು. ತಾವೇ ಏನನ್ನು ಬೇಕಾದರೂ ತ್ಯಾಗಮಾಡಲು ಸಿದ್ಧವೆಂಬುದನ್ನು ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.

ದೇವರೇ, ಯಾರು ಬೇಕಾದರೂ ನನ್ನ ದೇಹವನ್ನೇ ಕೇಳಲಿ, ಮನಸ್ಸನ್ನೆ ಬೇಡಲಿ, ಹಣವನ್ನು ಬೇಕಾದರೂ ಬೇಡಲಿ, ಬೇಡಿದ್ದನ್ನೆಲ್ಲಾ ಕೊಡುವೆ. ನನ್ನ ಕಣ್ಣು ಕೇಳಿದರೂ ಕೊಡುವೆ. ತಲೆಕೇಳಿದರೂ ಕೊಟ್ಟು, ಪರಿಶುದ್ಧನಾಗಿ ನಿಮ್ಮ ಪುರಾತರ ಜೊತೆ ನಿಶ್ಚಿಂತನಾಗಿ ಇರುವಂತೆ ನಿಮ್ಮ ಧ್ಯಾನಾಸಕ್ತನಾಗಿ ನಿಮ್ಮಲ್ಲಿ ಒಂದಾಗಿ ಇರುವಂತೆ ಮಾಡೆಂದು ಬೇಡಿಕೊಂಡಿದ್ದಾರೆ.

■

೭೪

ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ
ಅಗಿದು ಕಳೆದೆನಯ್ಯಾ ಭ್ರಾಂತಿಯ ಬೇರ
ಒಡೆದು ಸಂಸಾರದ ಹೇಂಟೆಯ ಬಿಗಿದು ಬಿತ್ತಿದೆನಯ್ಯಾ ಬ್ರಹ್ಮಬೀಜವ
ಅಖಂಡಮಂಡಲವೆಂಬ ಬಾವಿ, ಪವನವೇ ರಾಟಾಳ
ಸುಷುಮ್ನ ನಾಳದಿಂದ ಉದಕವ ತಿದ್ದಿ
ಬಸವಗಳೈವರು ಹಸಗೆಡಿಸಿಯಾರೆಂದು
ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ
ಆವಾಗಳೂ ಈ ತೋಂಟದಲಿ ಜಾಗರವಿದ್ದು
ಸಸಿಯ ಸಲಹಿದೆನು ಕಾಣಾ ಗೊಹೇಶ್ವರಾ.

–ಅಲ್ಲಮಪ್ರಭು

ಉತ್ತಮ ಫಸಲನ್ನು ಪಡೆಯಬೇಕೆಂಬ ರೈತನು ಮೊದಲು ತನ್ನ ತೋಟವನ್ನು ಗುದ್ದಲಿಯ ಮೂಲಕ ಅಗೆದು ಹಸಗೊಳಿಸುತ್ತಾನೆ. ಭೂಮಿಯನ್ನು ಅಗೆಯುವಾಗ ಸಿಕ್ಕುವ–ತನ್ನ ಹುಲುಸಾದ ಬೆಳೆಗೆ – ಅಡ್ಡಿಯಾಗಿ ಬೆಳೆಯುವ ಕಳೆಯ ಬೇರುಗಳನ್ನೆಲ್ಲಾ ಆರಿಸಿ ಹೊರಗೆ ಚೆಲ್ಲುತ್ತಾನೆ. ನಂತರ ದೊಡ್ಡ ದೊಡ್ಡ ಹೆಂಟೆಗಳನ್ನು ಒಡೆದು ಪುಡಿಮಾಡಿ ಭೂಮಿಯನ್ನು ಹದಗೊಳಿಸುತ್ತಾನೆ. ಆ ಮೇಲೆ ತಗ್ಗು ತೆಗೆದು ಬೀಜ ಬಿತ್ತುತ್ತಾನೆ. ಬೀಜ ಬಿತ್ತಿದರೆ ಕೆಲಸ ಮುಗಿಯುವುದಿಲ್ಲ. ಆ ಬೀಜ ಮೊಳಕೆಯೊಡೆದು ಬೇಕಾದರೆ ನೀರುಣ್ಣಿಸಬೇಕು. ಆದುದರಿಂದ ಬಾವಿಯಲ್ಲಿಯ ನೀರನ್ನು ರಾಟಾಳದ ಮೂಲಕ ಮೇಲಕ್ಕೆತ್ತಿ ಕಾಲುವೆ ಮೂಲಕ ನೀರು ಹಾಯಿಸುತ್ತಾನೆ. ಆಗ ಬೀಜ ಮೊಳೆತು, ಚಿಗುರಿ ಸಸಿಯಾಗುತ್ತದೆ. ಆದರೆ ಚಿಗುರಿದ ಆ ಸಸಿಯನ್ನು ದನಗಳು ತೋಟಕ್ಕೆ ನುಗ್ಗಿ ತುಳಿದು ನಾಶಮಾಡುವ ಸಾಧ್ಯತೆ ಇರುವುದರಿಂದ, ಸಸಿಯ ಸುತ್ತಲೂ ದನಗಳು ಬರದಂತೆ ಬೇಲಿ ಹಾಕುತ್ತಾನೆ. ಬೇಲಿ ಹಾಕಿದರೂ ಸಹ ಎಚ್ಚರಿಕೆಯಿಂದ ಕಾಯುವ ರೈತನಿಲ್ಲದಿದ್ದರೆ, ದನಗಳು ಬೇಲಿಯನ್ನೂ ಹಾರಿ ಅಥವ ಮುರಿದು ಒಳನುಗ್ಗಿ ಕಷ್ಟಪಟ್ಟು ಬೆಳಸಿದ ಸಸಿಯನ್ನು ಫಲಕೊಡುವ ಮೊದಲೇ ನಾಶಗೊಳಿಸಬಹುದೆಂದು ಎಚ್ಚರಿಕೆಯಿಂದ ಕಾಯ್ದು ಸಸಯನ್ನು ಸಲಹುತ್ತಾನೆ. ಇದೇ ತತ್ವದ ಮೇಲೆ, ಅಲ್ಲಮ ಪ್ರಭುಗಳು ಬ್ರಹ್ಮಜ್ಞಾನವನ್ನು ಪಡೆಯುವುದಕ್ಕೆ ಏನೇನು ಪ್ರಯತ್ನ ಮಾಡಬೇಕು, ತಾನು ಹೇಗೆ ಬ್ರಹ್ಮಜ್ಞಾನ ಪಡೆದೆ ಎಂಬ ಅಂಶವನ್ನು ಈ ವಚನದಲ್ಲಿ ತುಂಬಾ ಸುಂದರವಾಗಿ, ಅರ್ಥಗರ್ಭಿತವಾದ ಉಪಮೆಯ ಮೂಲಕ ತಿಳಿಸಿದ್ದಾರೆ.

ದೇಹವೆಂಬ ಈ ತೋಟವನ್ನು ಮನವೆಂಬ ಗುದ್ದಲಿಯಿಂದ ಅಗೆದು, ಭ್ರಾಂತಿಯೆಂಬ ಕಳೆಯ ಬೇರುಗಳನ್ನು ತಮ್ಮ ಬ್ರಹ್ಮಜ್ಞಾನದ ಬೆಳವಣಿಗೆಗೆ ಅಡ್ಡಿಮಾಡಬಾರದೆಂದು ಕಿತ್ತೊಗೆದೆನೆಂದು ಹೇಳಿದ್ದಾರೆ. ಈ ದೇಹದಲ್ಲಿ ಪಂಚೇಂದ್ರಿಯಗಳ ಕಾರ್ಯಾಚರಣೆಯಿಂದ ಅನೇಕ ವಿಕಲ್ಪ ವಿಚಾರಗಳು ಮೊಳೆತು, ಮದ, ಮೋಹ, ಮಾತ್ಸರ್ಯಾದಿ ಅರಿಷಡ್ವರ್ಗಗಳಿಗೆ ಅಡಿಯಾಳಾಗಿ, ಸಂಸಾರವೆಂಬ ಪಾಶಕ್ಕೆ ಒಳಗಾಗಿ, 'ನಾನು-ನನ್ನದು-ನನ್ನವರು' ಎಂಬ ಭ್ರಾಂತಿಗೆ ಗುರಿಯಾಗಿ ನಾನಾ ಜಂಝಾಟಗಳಲ್ಲಿ ಸಿಕ್ಕಿಕೊಳ್ಳುತ್ತೇವೆ. ಇದಕ್ಕೆಲ್ಲಾ ಮನಸ್ಸು ಕಾರಣ. ನಾವು ಮನಸ್ಸನ್ನು ನಮ್ಮ ಹಿಡಿತಕ್ಕೆ ತಂದುಕೊಂಡರೆ, ಕುವಿಚಾರಗಳು ಮೂಡದಂತೆ ತಡೆಗಟ್ಟಬಹುದು. ಮನಸ್ಸು ಕೆಟ್ಟದ್ದನ್ನು ಯೋಚಿಸದಂತೆ, ದೇಹ ಅಯೋಗ್ಯವಾದುದನ್ನು ಮಾಡದಂತೆ ತಡೆಯಬಹುದು. ಆದುದರಿಂದ ಅಲ್ಲಮಪ್ರಭುಗಳು ಈ ದೇಹವನ್ನು ಬ್ರಹ್ಮ ಬೀಜ ಬಿತ್ತುವ ತೋಟ ಮಾಡಿ, ಮನಸ್ಸಿನ ಮೂಲಕ ಕೆಟ್ಟ ವಿಚಾರಗಳನ್ನೂ, ಭ್ರಾಂತಿಯನ್ನೂ ತೊಡೆದುಹಾಕಿ, ಲೌಕಿಕ ಸಂಸಾರದ ಆಸೆ ಆಮಿಷಗಳೆಂಬ ಹೆಂಟೆಗಳನ್ನು ಕುಟ್ಟಿ ಪುಡಿ ಮಾಡಿ ಶುದ್ಧ ಮನಸ್ಸಿನಾಳದಲ್ಲಿ ಬ್ರಹ್ಮಜ್ಞಾನದ ವಿಚಾರವನ್ನು ಬಿತ್ತಿದನು. ಆ ಬ್ರಹ್ಮಜ್ಞಾನದ ಬೀಜವು ಅಂಕುರಗೊಂಡು, ಸಸಿಯಾಗಿ, ಹೆಮ್ಮರವಾಗಲು, ಇಡೀ ಬ್ರಹ್ಮಾಂಡದಲ್ಲಿ ದೊರೆಯುವ ಜ್ಞಾನವೆಂಬ ನೀರನ್ನು ಸಂಗ್ರಹಿಸಿ ಉಸಿರಾಟವೆಂಬ ಎಂದರೆ ಯೋಚನೆ, ವಿಚಾರಗಳ ಮೂಲಕ ಆ ಬೀಜಕ್ಕೆ ನೀರೆರೆದೆನು. ಬೀಜ ಅಂಕುರಗೊಂಡು ಚಿಗುರೊಡೆಯಿತು. ಆದರೆ ಈ ಪಂಚೇಂದ್ರಿಯಗಳು ಯಾವಾಗ ಬೇಕಾದರೂ ನಮ್ಮ ಮನಸ್ಸನ್ನು ಆಕ್ರಮಿಸಿ, ವಿಷಯ ಮೋಹಗಳ ಕಡೆಗೆ ಎಳೆದು, ಅಲ್ಲಿಯವರೆಗೆ ಮಾಡಿದ ಸಾಧನೆಯನ್ನು ಬಸವಗಳು ಬೇಲಿ ಇಲ್ಲದ ತೋಟಕ್ಕೆ ನುಗ್ಗಿ ಬೆಳೆದ ಬೆಳೆಯನ್ನು ನಾಶಪಡಿಸಿದಂತೆ ನಾಶ ಮಾಡಬಹುದು. ಆದುದರಿಂದ ಆ ಬ್ರಹ್ಮಜ್ಞಾನದ ಸಸಿಗೆ ನಾನು ಸಮತೆ-ಸೈರಣೆ ಎಂಬ ಬೇಲಿಯನ್ನು ಹಾಕಿ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಸಾಧನೆಯು ನಾಶವಾಗದಂತೆ ಮಾಡಿದ್ದೇನೆ. ಇಷ್ಟೇ ಅಲ್ಲದೆ, ನಾನು ಒಂದು ಕ್ಷಣ ಮೈಮರೆತರೂ, ಆ ಸಮಯವನ್ನು ಸಾಧಿಸಿಕೊಂಡು ಪಂಚೇಂದ್ರಿಯಗಳು ದುರ್ಬಲನಿಮಿಷದಲ್ಲಿ ನನ್ನ ಮನಸ್ಸನ್ನು ಆಕ್ರಮಿಸಿ ನನ್ನ ಸಾಧನೆಯನ್ನೆಲ್ಲಾ ಮಣ್ಣುಗೂಡಿಸಬಹುದೆಂಬ ಎಚ್ಚರಿಕೆಯಿಂದ ಸದಾ ಜಾಗರೂಕನಾಗಿದ್ದು ಬ್ರಹ್ಮಜ್ಞಾನವು ಬೆಳೆದು ಹೆಮ್ಮರವಾಗಿ ಸತ್ಫಲಕೊಡುವಂತೆ ಸಲಹಿದ್ದೇನೆ ಎಂದು ತಮ್ಮ ಅನುಭವವನ್ನು ಹೇಳುತ್ತಾ ಅಲ್ಲಮ ಪ್ರಭುಗಳು ಬ್ರಹ್ಮಜ್ಞಾನವನ್ನು ಪಡೆಯುವುದು ಎಷ್ಟು ಕಷ್ಟ, ಅದನ್ನು ಪಡೆಯಬೇಕಾದರೆ, ಏನೇನು ಮಾಡಬೇಕು, ಎಷ್ಟು ಎಚ್ಚರಿಕೆಯಿಂದ ಇರಬೇಕು ಎಂಬುದನ್ನು ಸಾಧಕರಿಗೆ ತಿಳಿಯಪಡಿಸಿದ್ದಾರೆ.

■

## ೭೫

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು,
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಗೆಯ ನೇರಿತ್ತು,
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು,
ಅದು ಕಾರಣ,
ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನಾ ನೋಡಾ.

–ಸಿದ್ಧರಾಮ

ನಮ್ಮ ಸಮಾಜದಲ್ಲಿ 'ಹೆಣ್ಣು' ಎಂದರೆ ಒಂದು ಕೀಳಾದ ಭಾವನೆ ಇದೆ. ಅವಳನ್ನು ಕೆಲವರು 'ರಾಕ್ಷಸಿ' ಎಂದೂ, 'ಮಾಯೆ' ಎಂದೂ, ನಾನಾ ರೀತಿಯಲ್ಲಿ ಹೀಗಳೆಯುತ್ತಾರೆ. ಅದಕ್ಕೆ ಸಿದ್ಧರಾಮ ಶಿವಯೋಗಿಯು, ಹೆಣ್ಣು, ಹೆಣ್ಣೆಂದೇಕೆ ಹೀನ ದೃಷ್ಟಿಯಿಂದ ನೋಡುತ್ತೀರಿ, ಹೆಣ್ಣಿನ ಮಹತ್ವ ತಿಳಿದು ನಡೆಯಿರಿ ಎಂದು ಹೆಣ್ಣಿನ ಮಹತ್ತನ್ನು ವಿವರಿಸಿದ್ದಾನೆ.

ಈ ಹೆಣ್ಣನ್ನು ಭಗವಂತನೇ ಸೃಷ್ಟಿಸಿದ್ದಾನೆ. ಈ ಹೆಣ್ಣು ಮಾಯೆಯಾಗದೆ ಪರಮಾತ್ಮನ ಪ್ರೀತಿಗೆ ಒಳಗಾಗಿ ಗಂಗೆಯ ರೂಪದಲ್ಲಿ ಶಿವನ ತಲೆಯ ಮೇಲೆ ಕುಳಿತಿದ್ದಾಳೆ. ಅಷ್ಟೇ ಅಲ್ಲ, ಪಾರ್ವತಿ ಸ್ವರೂಪದಿಂದ ಪರಮೇಶ್ವರನ ತೊಡೆಯಲ್ಲಿ ಆಸೀನಳಾಗಿದ್ದಾಳೆ. ಶಿವನೇ ಸೃಷ್ಟಿಸಿದ ಹೆಣ್ಣು ಬ್ರಹ್ಮನ ನಾಲಿಗೆಯಲ್ಲಿ ವಿದ್ಯಾಧೀದೇವತೆಯಾದ ಸರಸ್ವತಿಯಾಗಿ ನಲಿದಾಡುತ್ತಿದ್ದಾಳೆ ಅದೇ ರೀತಿ ಶ್ರೀಮನ್ನಾರಾಯಣನ ಹೃದಯಕಮಲದಲ್ಲಿ ಒಲವಿನ ಲಕ್ಷ್ಮಿಯಾಗಿ ರಾರಾಜಿಸುತ್ತಿದ್ದಾಳೆ. ಹೀಗೆ ಆದಿಶಕ್ತಿ ಸ್ವರೂಪಳಾದ ಹೆಣ್ಣು ನಾನಾ ರೂಪದಿಂದ ಪರಮಾತ್ಮನ ಆದರಣೆಗೆ ಪಾತ್ರಳಾಗಿ ಇರುವಾಗ ಹೆಣ್ಣನ್ನು ತಿರಸ್ಕಾರ ದೃಷ್ಟಿಯಿಂದ ರಾಕ್ಷಸಿ ಎಂದು, ಮಾಯೆ ಎಂದು ದಾಸಿ ಎಂದು ಭಾವಿಸುವುದು ತಿಳಿಗೇಡಿತನ ಎಂಬುದಾಗಿ ಶಿವಯೋಗಿ ಸಿದ್ಧರಾಮನು ಸ್ತ್ರೀಯ ಘನತೆಯುಳ್ಳ ವ್ಯಕ್ತಿತ್ವವನ್ನು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ದೇವರ ಮಟ್ಟಕ್ಕೆ ಏರಿಸಿದ್ದಾನೆ.

■

೭೬

ತಿಲದ ಮರೆಯ ತೈಲವ ಅರೆದು ಕಾಂಬಂತೆ
ಚಂದನದ ಮರೆಯ ಗಂಧವ ಬಂಧಿಸಿ ಕಾಂಬಂತೆ
ಸಿಂಗಿಯ ನಾದವ ಖಂಡಿಸಿ ಅರಿವಂತೆ
ಇಷ್ಟ ಜ್ಞಾನವರಿವುದಕ್ಕೆ ಇದೆ ದೃಷ್ಟ
ಏಣಾಂಕಧರ ಸೋಮೇಶ್ವರಲಿಂಗದಲ್ಲಿ
ಪ್ರಾಣಲಿಂಗಿಯ ಲಿಂಗಸ್ಥಲ

–ಬಿಬ್ಬ ಬಾಚಯ್ಯ

ಇಷ್ಟಜ್ಞಾನವನ್ನು ಅರಿಯಬೇಕಾದರೆ ಕಷ್ಟಪಟ್ಟು ಪಡೆಯಬೇಕು. ಕಷ್ಟ ಅನುಭವಿಸಿದಾಗ ನಿಜವಾದ ಗುಣ ಹೊರಬರುತ್ತದೆ ಎಂಬುದು ಈ ವಚನದ ಸಾರಾಂಶ. ಒಳ್ಳೆಯದು ಎಂದಿಗೂ ಸುಲಭವಾಗಿ ದೊರೆಯದು ಎಂಬುದು ಸಿದ್ಧಾಂತ.

ಬಿಬ್ಬ ಬಾಚಯ್ಯನು ಇಷ್ಟವಾದುದು ಹೇಗೆ ದೊರೆಯುತ್ತದೆಂಬುದನ್ನು ತಿಲ, ಚಂದನ, ಸಿಂಗಿಯ ನಾದ ಇವುಗಳ ಹೋಲಿಕೆಯನ್ನು ಕೊಟ್ಟು ವಿವರಿಸಿದ್ದಾನೆ. ಎಳ್ಳಿನೊಳಗಿರುವ ಎಣ್ಣೆಯುನ್ನು ಅದನ್ನು ಅರೆದಾಗ ಸಿಗುತ್ತದೆ. ಚಂದನದ ಸುವಾಸನೆಯು ಅದು ಸವೆದಾಗ ತಿಳಿಯುತ್ತದೆ. ಸಿಂಗಿಯ ಸುಶ್ರಾವ್ಯನಾದವನ್ನು ಕೇಳಬೇಕಾದರೆ ಖಂಡಿಸಿ, ಹೀಯಾಳಿಸಿ, ಸಿಟ್ಟಿಗೆಬ್ಬಿಸಿದಾಗ, ನಿಜ ಶಕ್ತಿ ಹೊರಹೊಮ್ಮುತ್ತದೆ. ಇಷ್ಟ ಜ್ಞಾನವನ್ನು ಹೇಗೆ ಪಡೆಯಬೇಕೆಂಬುದಕ್ಕೆ ಮೇಲಿನವುಗಳೇ ದೃಷ್ಟಾಂತ. ಆದ್ದರಿಂದ ಏಣಾಂಕಧರ ಸೋಮೇಶ್ವರಲಿಂಗದ ಕೃಪೆ ಬೇಕಾದರೆ, ಲಿಂಗವೇ ಪ್ರಾಣವಾದ ಪ್ರಾಣಲಿಂಗ ಸ್ಥಲದಲ್ಲಿ ತನುಮನವನ್ನಿರಸಬೇಕು ಎಂದು ಹೇಳಿದ್ದಾನೆ.

■

೭೭

ತಂದೆ ನೀನು ತಾಯಿ ನೀನು, ಬಂಧು ನೀನು, ಬಳಗ ನೀನು
ನೀನಲ್ಲದೆ ಮತ್ತಾರೂ ಇಲ್ಲವಯ್ಯಾ
ಕೂಡಲಸಂಗಮದೇವಾ,
ಹಾಲಲದ್ದು, ನೀರಲ್ಲದ್ದು.

–ಬಸವಣ್ಣ

ಬಸವಣ್ಣನವರನ್ನು 'ಭಕ್ತಿಭಂಡಾರಿ' ಎಂದು ವರ್ಣಿಸಲಾಗಿದೆ. ಏಕೆಂದರೆ ಭಕ್ತಿಯೇ ಅವರ ಜೀವ ಜೀವಾಳ. ಅವರು ಪರಮಾತ್ಮನ ಒಲುಮೆಗೆ 'ಭಕ್ತಿ'ಯೇ ಸರ್ವಶಕ್ತಿ ಎಂದು ನಂಬಿ ತಮ್ಮನ್ನು ಭಗವಂತನಿಗೆ ಸರ್ವಾರ್ಪಣ ಮಾಡಿಕೊಂಡಿದ್ದರು. ಸರ್ವಶಕ್ತನಾದ ಭಗವಂತನೇ ಭಕ್ತರನ್ನು ಸರ್ವವಿಧದಲ್ಲಿ ರಕ್ಷಿಸಬಲ್ಲ. ಹಾಗೆ ಅವನ ರಕ್ಷಣೆ ಪಡೆಯಲು, ಅವನ ಕೃಪೆಗೆ ಪಾತ್ರರಾಗಬೇಕಾದರೆ ಭಕ್ತನು ಸರ್ವಾರ್ಪಣ ಭಾವದಿಂದ ಬದುಕಬೇಕು. ಆ ಬಗೆಗೆ ಸಂಪೂರ್ಣವಾದ ನಿಷ್ಠೆ, ನಂಬುಗೆ, ಆಚರಣೆ ಇರಬೇಕು ಎಂಬುದು ಅವರ ನಿಲುವು. ಅದು ಈ ವಚನದಲ್ಲಿ ವ್ಯಕ್ತವಾಗಿದೆ.

ಸಾಮಾನ್ಯ ಜೀವನದಲ್ಲಿ ಮನುಷ್ಯನಿಗೆ ಅತ್ಯಂತ ಹತ್ತಿರದವರೂ, ರಕ್ಷಣೆ ನೀಡುವವರೂ, ಮುಖ್ಯವಾಗಿ ತಂದೆ-ತಾಯಿಗಳು. ನಂತರ ಸಮಿಪದ ಬಂಧು-ಬಳಗ. ಅಂತೆಯೇ ಆಧ್ಯಾತ್ಮಿಕ ಜೀವನದಲ್ಲಿ ಕೈಹಿಡಿದು ನಡೆಸುವವನು ದೇವರು. ಅವನೇ ತಂದೆ-ತಾಯಿ, ಬಂದು-ಬಳಗ ಅವನನ್ನ ಬಿಟ್ಟು ತನ್ನನ್ನು ಸಲಹುವವರು ಮತ್ತ್ಯಾರೂ ಇಲ್ಲ ಎಂದು ಹೇಳಿ ಕೂಡಲಸಂಗಮನೇ ತನ್ನ ರಕ್ಷಕ ಎಂದು ನಿರ್ವೇದಿಸಿಕೊಂಡಿದ್ದಾರೆ. ಭಗವಂತನು ಮುಳುಗಿಸಲಿ ತೇಲಿಸಲಿ, ಹಾಲಲ್ಲಿ ಅದ್ದಲಿ ಅಥವಾ ನೀರಲ್ಲಿ ಮುಳುಗಿಸಲಿ, ಅದೆಲ್ಲ ದೇವರ ಪ್ರಸಾದ ಎಂಬ ನಿಷ್ಠೆಯನ್ನು ಈ ವಚನದಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಳಿಸಿದ್ದಾರೆ.

ಸರ್ವಾರ್ಪಣ ಭಾವದಿಂದ ಭಗವಂತನಲ್ಲಿ ನಂಬುಗೆ ಇಟ್ಟು ಬದುಕಬೇಕು. ದೇವರು ಕೊಟ್ಟದ್ದನ್ನು ಮಹಾ ಪ್ರಸಾದವೆಂದು ಸಂತೋಷದಿಂದ ಸ್ವೀಕರಿಸಬೇಕು ಎಂಬುದು ಬಸವಣ್ಣನವರ ಅಭಿಪ್ರಾಯ.

■

## ೭೮

ದಯವಿಲ್ಲದ ಧರ್ಮ ಯಾವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

–ಬಸವಣ್ಣ

ದಯೆ ಇಲ್ಲದೆ ಇದ್ದರೆ ಅದು ಕ್ರೌರ್ಯಕ್ಕೆ, ಹಿಂಸೆಗೆ ಕಾರಣವಾಗುತ್ತದೆ. ಧರ್ಮಗಳು ಹುಟ್ಟಿಕೊಂಡಿರುವುದು ಮಾನವನು ನೀಚತನದಿಂದ , ಒಬ್ಬರಿಗೊಬ್ಬರು

ಹಿಂಸೆಗೊಳಗಾಗಿ ಕಷ್ಟಪಡುತ್ತಾ ಸಂಕಟಪಡುವುದನ್ನು ತಪ್ಪಿಸಲೆಂದೇ. ದಯಾರ್ದ್ರ ಹೃದಯಿಗಳಾದ ಶ್ರೇಷ್ಠ ಮಾನವರು, ಧರ್ಮದ ಮೂಲಕ, ಮಾನವರು ಒಬ್ಬರಿಗೊಬ್ಬರು ಪ್ರೀತಿಯಿಂದ ಇರಲು ಸಾಧ್ಯವಾಗುವಂತಹ ತತ್ವಗಳನ್ನು ಬೋಧಿಸಿದರು. ಬೇರೆಯವರ ಮನಸ್ಸನ್ನು ನೋಯಿಸದೆ ಪ್ರೀತಿಯಿಂದ ಇರಬೇಕಾದರೆ, ದಯೆ ಇರಬೇಕು ಕರುಣೆ ಇರಬೇಕು, ಇನ್ನೊಬ್ಬರಿಗೆ ದುಃಖವನ್ನುಂಟುಮಾಡಬಾರದೆಂಬ, ಕಷ್ಟಕ್ಕೆ ಈಡುಮಾಡಬಾರದೆಂಬ, ಹಿಂಸೆಯಾಗಬಾರದೆಂಬ, ಕೆಟ್ಟವರಿಗೂ ದಯೆ ತೋರಿ, ಅವರನ್ನು ಉದ್ಧಾರಮಾಡಬೇಕೆಂಬ ಮನಸ್ಸು ಬೇಕು. ಅಂತಹ ಮನಸ್ಸನ್ನು ಉಂಟುಮಾಡುವುದೇ ಎಲ್ಲ ಧರ್ಮಗಳ ಗುರಿ. ಆದ್ದರಿಂದ ದಯೆಯ ಬಗ್ಗೆ ಆದರವಿರದ ಧರ್ಮ ಯಾವುದೂ ಇಲ್ಲ ಎನ್ನುತ್ತಾರೆ ಬಸವಣ್ಣನವರು. ಅಂತಹುದು ಯಾವುದಾದರೂ ಇದ್ದರೆ ಅದು ಧರ್ಮವೆನ್ನಿಸಿಕೊಳ್ಳುವುದಿಲ್ಲ.

ಮನುಷ್ಯನು ನೆಮ್ಮದಿಯಿಂದ ಬದುಕಬೇಕಾದರೆ ಎಲ್ಲರಲ್ಲಿ, ಎಲ್ಲ ಪ್ರಾಣಿಗಳಲ್ಲಿ ದಯೆಬೇಕು. ಅದಕ್ಕಾಗಿಯೇ ವೀರಶೈವದಲ್ಲಿ 'ಬಲಿ' ಕೊಡುವುದನ್ನು ನಿಷೇಧಿಸಲಾಗಿದೆ. ದಯವು ಧರ್ಮದ ಮೂಲ. ಹಾಗಿರುವಾಗ ದ್ವೇಷ, ಹೊಟ್ಟೆಯಕಿಚ್ಚು, ಬಲಿಕೊಡುವ ಪದ್ಧತಿ, ಇವೆಲ್ಲಾ ಕರುಣಾರಹಿತವಾದ ಬೇರೆಯವರಿಗೆ, ಪ್ರಾಣಿಗಳಿಗೆ ಹಿಂಸೆಯನ್ನುಂಟು ಮಾಡುವ ಆಚರಣೆಗಳು. ದೇವರು ಎಂದೂ ದಯೆ ಇಲ್ಲದ ಆಚರಣೆಯನ್ನು ಒಪ್ಪುವುದಿಲ್ಲ. ಹಾಗಾಗಿಯೇ 'ದಯೆ'ಯು ಎಲ್ಲ ಧರ್ಮಗಳ ಮೂಲವಾಗಿದೆ. ದಯೆಯಿಲ್ಲದ ಇದ್ದುದನ್ನು ಎಂದರೆ ಹಿಂಸೆಯನ್ನು, ನಿಷ್ಕರುಣೆಯನ್ನು ಕೂಡಲಸಂಗನು ಒಲ್ಲ ಎಂದು ಬಸವಣ್ಣನವರು ಹೇಳಿದ್ದಾರೆ.

ಆದರೆ ದುರದೃಷ್ಟವೆಂದರೆ ಜನರು ಧರ್ಮದ ಮೂಲತತ್ವವನ್ನೇ ಮರೆತು ನನ್ನ ಧರ್ಮ ಹೆಚ್ಚು, ನನ್ನ ಧರ್ಮ ಹೆಚ್ಚು ಎಂದು ಧರ್ಮದ ಹೆಸರಿನಲ್ಲಿ ಒಬ್ಬರನ್ನೊಬ್ಬರು ದ್ವೇಷಿಸುತ್ತಾರೆ, ದೂಷಿಸುತ್ತಾರೆ, ಹೊಡೆದಾಡುತ್ತಾರೆ, ಬಡಿದಾಡುತ್ತಾರೆ. ಇಷ್ಟೇ, ಅಲ್ಲ ಕೊಲೆ, ದರೋಡೆ, ರಕ್ತಪಾತಗಳಿಗೂ ಕಾರಣರಾಗುತ್ತಾರೆ. ಇಂತಹ ಜನರನ್ನು ಧಾರ್ಮಿಕ ವ್ಯಕ್ತಿಗಳೆಂದು ಕರೆಯಲಾಗದು. ನಿಜವಾದ ಧಾರ್ಮಿಕ ವ್ಯಕ್ತಿಗಳು ಕ್ರೌರ್ಯಕ್ಕೆ ಹಿಂಸೆಗೆ ಎಂದೆಂದಿಗೂ ಅವಕಾಶಕೊಡುವುದಿಲ್ಲ. ಏಕೆಂದರೆ ಅದು ದೇವರಿಗೆ ಬೇಕಿಲ್ಲ. ಅದಿದ್ದ ಕಡೆ ದೇವರಿರುವುದಿಲ್ಲ. ಇದನ್ನು ಅರಿತು ಬಸವಣ್ಣನ ನಿಜವಾದ ಅನುಯಾಯಿಗಳು ಸ್ವಧರ್ಮದಲ್ಲಿ ವಿಶ್ವಾಸವನ್ನೂ ಪರಧರ್ಮದಲ್ಲಿ ಸಹಿಷ್ಣುತೆಯನ್ನೂ ಅಳವಡಿಸಿಕೊಂಡು ದಯಾವಂತ ಸ್ವಭಾವದಿಂದ ಕೂಡಿದವರಾಗಿರಬೇಕು.

■

೭೯

ದಿನವಿಂದೆ ಶಿವಲಿಂಗ ಕರುಣಮಂ ಪಡೆವಂಗೆ
ದಿನವಿಂದೆ ದುಷ್ಕರ್ಮ ಪಾಶಮಂ ಕಡಿವಂಗೆ
ದಿನವಿಂದೆ ಸದ್‌ಭಕ್ತಿ ಸಾಮ್ರಾಜ್ಯವಾಳ್ವ ಸುವ್ರತವನಡೆವಿಡಿವವಂಗೆ
ದಿನವಿಂದೆ ಹಣೆಯ ದುರ್ಲಿಖಿತಮಂ ತೊಡೆವಂಗೆ
ದಿನವಿಂದೆ ಚಾಂಚಲ್ಯ ಮನವ ನೆರೆ ತಡೆವಂಗೆ
ದಿನವಿಂದೆ ತನ್ನ ತಾನರಿದು ಭೋಂಕನೆ ಪಾರಮಾರ್ಥದಿಂ ನಡೆವವಂಗೆ.

–ಘನಮಠ ಶಿವಯೋಗಿಗಳು

ಘನಮಠ ಶಿವಯೋಗಿಗಳು, ಜನರಿಗೆ, ಯಾವುದಾದರೂ ಸತ್ಕಾರ್ಯ ಮಾಡುವ ಇಚ್ಛೆ ಇದ್ದವರು, ತಮ್ಮನ್ನು ತಾವು ಉದ್ಧರಿಸಿಕೊಳ್ಳಬೇಕೆಂಬ ಅಪೇಕ್ಷೆ ಇದ್ದವರು, ಅದಕ್ಕೆ ಸಂಬಂಧಿಸಿ ಮಾಡಬೇಕಾದ ಕೆಲಸಗಳನ್ನು ನಾಳೆಗೆ ಮುಂದೂಡದೆ ಆಗಿಂದಾಗೇ ಅಂದಂದೇ ಮಾಡಬೇಕು ಎಂಬ ಬೋಧೆಯನ್ನು ಮಾಡಿದ್ದಾರೆ. ಮನುಷ್ಯನಿಗೆ ಒಳ್ಳೆಯದನ್ನು ಮಾಡಬೇಕೆಂಬ, ಒಳ್ಳೆಯದಾಗಿ ಬದುಕಬೇಕೆಂಬ ಆಸೆಬೇಕು. ಅದಕ್ಕೆ ತಕ್ಕ ಕೆಲಸ ಮಾಡಬೇಕೆಂಬ ಆಸೆಯಾಗಬಹುದು. ಆದರೆ ಕೂಡಲೇ ಅವನು ಕಾರ್ಯಪ್ರವೃತ್ತನಾಗದೆ, ಮುಂದೊಂದು ದಿನಕ್ಕೆ ಅದನ್ನು ಮುಂದೂಡಿದರೆ ಮುಂದೆ ಅವನಿಗೆ ಹಾಗೆ ಮಾಡಲು ಸಾಧ್ಯವಾಗಬಹುದು, ಆಗದಿರಬಹುದು. ಅದಕ್ಕಾಗಿ ಶಿವಯೋಗಿಗಳು ಸತ್ಸಂಕಲ್ಪ ಉಂಟಾದಾಗಲೇ ಅದಕ್ಕೆ ಬೇಕಾದ್ದನ್ನು ಕೂಡಲೇ ಮಾಡಿ ಇಷ್ಟಾರ್ಥ ಈಡೇರಿಸಿಕೊಳ್ಳಿ, ಮುಂದೂಡಿ ಕೆಡಿಸಿಕೊಳ್ಳಬೇಡಿ ಎಂದು ಬೋಧಿಸಿದ್ದಾರೆ. ಶಿವಲಿಂಗ ಕರುಣೆಯನ್ನು ಪಡೆಯಬೇಕೆಂದಿದ್ದರೆ, ಈ ದಿನವೇ ಪಡೆಯಿರಿ. ಕೆಟ್ಟ ಕೆಲಸಗಳ ಸಂಬಂಧವನ್ನು ತೊಡೆದುಹಾಕಿಕೊಳ್ಳಬೇಕೆಂದು ಮನಸ್ಸಿಗೆ ಅನಿಸಿದರೆ, ಇಂದೇ, ಈ ಕೂಡಲೇ ಮಾಡಿ, ಅದಕ್ಕೆ ದಿನ ಇವತ್ತೆ, ಬೇರೆ ದಿನಕ್ಕೆ ಮುಂದೂಡಬೇಡಿ, ಸದ್ಭಕ್ತಿ ಎಂಬ ಸಾಮ್ರಾಜ್ಯವನ್ನು ಆಳುವ ಒಳ್ಳೆಯ ವ್ರತಮಾಡಬೇಕೆಂಬ ಸಂಕಲ್ಪ ಉಂಟಾದರೆ, ಇಂದೇ ಮಾಡಿ, ಇನ್ನೊಂದುದಿನವೆಂದು ಕಾಯಬೇಡಿ ಎನ್ನುತ್ತಾರೆ. ಕೆಟ್ಟ ಹಣೆಬರಹವನ್ನು ತೊಡೆದು ಹಾಕಬೇಕೆನ್ನಿಸಿದರೆ ಅದಕ್ಕೆ ಬೇಕಾದ ಕೆಲಸವನ್ನು ಈಗಲೇ ಇಂದೇ ಮಾಡಿ ಮುಗಿಸಿಬಿಡಿ, ಎಂದು ಬುದ್ಧಿವಾದ ಹೇಳಿದ್ದಾರೆ. ಚಂಚಲವಾದ ಮನಸ್ಸನ್ನು ಹಿಡಿದಿಟ್ಟುಕೊಳ್ಳಬೇಕು ಎಂದು ಮನಸ್ಸಾದರೆ, ಈಗಿಂದೀಗಲೇ ಪ್ರಯತ್ನಿಸಿ. ಅಳಿಮನ ಮಾಡಬೇಡ. ಸತ್ಸಂಕಲ್ಪವನ್ನು ಮುಂದೂಡಬಾರದು. ಕೂಡಲೇ ಪ್ರಯತ್ನ ಪ್ರಾರಂಭಿಸಿ ಎನ್ನುತ್ತಾರೆ. ತನ್ನನ್ನು ತಾನು ಅರಿದು, ತಾನಾರೆಂದು

ತಿಳಿದು ಕೂಡಲೇ ಪಾರಮಾರ್ಥ ಮಾರ್ಗದಲ್ಲಿ ನಡೆಯಬೇಕೆನ್ನಿಸಿದರೆ ತಡಮಾಡದೆ ಪ್ರಾರಂಭಿಸಿ. ಅದಕ್ಕೇ ಈ ದಿನವೇ, ನಿಮಗೆ ಆ ಆಸೆ ಹುಟ್ಟಿದ ದಿನವೇ ಪ್ರಾರಂಭಿಸಿ. ಶುಭಸ್ಯ ಶೀಘ್ರಂ ಎಂಬ ಬುದ್ಧಿಮಾತನ್ನು, ಘನಮಠ ಶಿವಯೋಗಿಗಳು ನಮಗೆಲ್ಲಾ ಬೋಧಿಸಿದ್ದಾರೆ.

■

## ೮೦

**ದೂ**ಷಕನವನೊಬ್ಬ ದೇಶವ ಕೊಟ್ಟೊಡೆ,
ಆಶೆಮಾಡಿ ಅವನ ಹೊರೆಯಲಿರಬೇಡ
ಮಾದಾರ ಶಿವಭಕ್ತನಾದಡೆ,
ಆತನ ಹೊರೆಯಲ್ಲಿ ಭೃತ್ಯನಾಗಿಪ್ಪುದು, ಕರಲೇಸಯ್ಯಾ!
ತೊತ್ತಾಗಿಪ್ಪುದು ಕರಲೇಸಯ್ಯಾ!
ಕಾಡಸೊಪ್ಪು ತಂದು ಓಡಿನಲ್ಲಿ ಹುರಿದಿಟ್ಟು
ಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ.

–ಬಸವಣ್ಣ

ಬಸವಣ್ಣನವರು ನಮಗೆ ಹೇಗಿರಬೇಕು, ಯಾವುದಕ್ಕೆ ಆಸೆಮಾಡಬೇಕು ಎಂಬುದರ ಬಗ್ಗೆ ಹಿತವಚನ ನುಡಿದಿದ್ದಾರೆ. ದುಷ್ಟನಾದವನು, ದೂಷಣೆಗೆ ಅರ್ಹನಾದ ವ್ಯಕ್ತಿ, ನಿಮಗೆ ಸಂಪತ್ತಷ್ಟೇ ಅಲ್ಲ, ದೇಶವನ್ನೇ ಬಹುಮಾನವಾಗಿ ಕೊಟ್ಟರೂ ಅದಕ್ಕೆ ಆಸೆಪಟ್ಟು, ಅಂತಹ ದುಷ್ಟವ್ಯಕ್ತಿಯ ಆಶ್ರಯದಲ್ಲಿ ಬದುಕಬೇಡ ಶಿವಭಕ್ತನ ಸದ್ಗುಣಗಳನ್ನು ಹೊಂದಿರುವವನು ಮಾದಿಗನಾದರೂ, ಆತನ ನೆರೆಯಲ್ಲಿ ಆಶ್ರಯದಲ್ಲಿ ಸೇವಕನಾಗಿರುವುದು, ಐಶ್ವರ್ಯವಂತನಾಗಿ ಬೇಡಿದ ಸಂಪತ್ತನ್ನು ಕೊಡಬಲ್ಲ ದುಷ್ಟನ ನೆರಳಿನಲ್ಲಿರುವುದಕ್ಕಿಂತ ಮಿಗಿಲು. ನಿಜವಾದ ಶಿವಭಕ್ತನು ಕೆಳಜಾತಿಯಲ್ಲಿ ಹುಟ್ಟಿದ್ದರೂ ಅವನ ಸೇವಕನಾಗಿರುವುದು ಉತ್ತಮ. ಕಾಡಿನ ಸೊಪ್ಪನ್ನು ತಂದು ಮಣ್ಣಿನ ಹರವಿಯಲ್ಲಿ ಹುರಿದು ಲೆನ್ನುವಂತಾದರೂ ಉತ್ತಮನ ಆಶ್ರಯದಲ್ಲಿ ಇರುವುದು ಯೋಗ್ಯ. ದುಷ್ಟನ ಸಹವಾಸದಲ್ಲಿ, ಭಕ್ಷ್ಯಭೋಜ್ಯಗಳು ಸಿಕ್ಕುವಂತಿದ್ದರೂ ತಿರಸ್ಕರಿಸಬೇಕು ಎಂದಿದ್ದಾರೆ ಬಸವಣ್ಣನವರು.

ಒಟ್ಟಿನಲ್ಲಿ ಬಡತನವಿದ್ದರೂ ಸರಿ, ಐಶ್ವರ್ಯ ಭಕ್ಷ್ಯ ಭೋಜ್ಯಗಳಿಲ್ಲದಿದ್ದರೂ ಸರಿ, ಸತ್ಸಂಗ ಮುಖ್ಯವಾದುದು. ಏನೇ ದೊರೆಯುತ್ತದೆಂದರೂ ದುಷ್ಟನಾದವನ

ನೆರೆಯಲ್ಲಿ ಇರಬಾರದೆಂಬುದು ಸಾರಾಂಶ. ದುಷ್ಟಜನರ ಸಹವಾಸ, ನಮ್ಮನ್ನು ದುಷ್ಟತನಕ್ಕೆ ಹಚ್ಚುವುದಲ್ಲದೆ, ಕಷ್ಟಗಳಿಗೂ ಗುರಿಮಾಡುತ್ತದೆ.

■

## ೮೧

ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ?
ಈ ಲೋಕದೊಳಗೆ ಮತ್ತೆ ಅನಂತಲೋಕ?
ಶಿವಲೋಕ ಶಿವಾಚಾರವಯ್ಯಾ.
ಶಿವಭಕ್ತನಿದ್ದ ಠಾವೆ ದೇವಲೋಕ,
ಭಕ್ತನಂಗಳವೆ ವಾರಣಾಸಿ, ಕಾಯವೆ ಕೈಲಾಸ!
ಇದು ಸತ್ಯ ಕೂಡಲಸಂಗಮದೇವಾ

–ಬಸವಣ್ಣ

ಜನಸಾಮಾನ್ಯರು ನಾವಿರುವುದು ಮರ್ತ್ಯಲೋಕ, ದೇವಲೋಕವೆಂಬುದು ಬೇರೆಲ್ಲೋ ಮೇಲೆ ಇದೆ, ನಮ್ಮ ಸತ್‌ಸಾಧನೆಗಳಿಂದ ಅಲ್ಲಿಗೆ ಹೋಗುತ್ತೇವೆ ಎಂದು ನಂಬಿದ್ದಾರೆ. ಆದರೆ ಶರಣರು ಈ ನಂಬಿಕೆ ಸುಳ್ಳು. ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ. ನಾವಿರುವ ಈ ಭೂಲೋದಲ್ಲಿಯೇ ಎಲ್ಲಾ ಲೋಕಗಳಿವೆ. ಇದು ಸತ್ಯ; ಉಳಿದುದು ಮಿಥ್ಯ ಎಂದು ಸಾರಿದ್ದಾರೆ.

ಬಸವಣ್ಣನವರು ಈ ವಚನದಲ್ಲಿ ದೇವಲೋಕ ಮರ್ತ್ಯಲೋಕವೆಂಬುವು ಬೇರೆ ಬೇರೆ ಅಲ್ಲಾ; ಅವು ಬೇರೆಲ್ಲೂ ಇಲ್ಲ. ಈ ಲೋಕದೊಳಗೇ ಎಲ್ಲಾ ಲೋಕಗಳು ಅಡಗಿವೆ. ಹೇಗೆಂದರೆ, ಶಿವಾಚಾರದಿಂದ ಕೂಡಿರುವ ಜನರಿರುವ ಸ್ಥಳವೆ ಶಿವಲೋಕ. ಶಿವಭಕ್ತರು ಎಂದರೆ ಸದಾಚಾರ, ಸದುವಿನಯ ಉಳ್ಳಂತಹ ಜನರಿರುವ ಸ್ಥಳವೇ ದೇವಲೋಕ ಎಂದಿದ್ದಾರೆ. ವಾರಣಾಸಿ ಅಥವಾ ಕಾಶಿ ಪವಿತ್ರ ಕ್ಷೇತ್ರ. ಆ ಪವಿತ್ರ ಕ್ಷೇತ್ರಕ್ಕೆ ಹೋದರೆ ಪುಣ್ಯ ಬರುತ್ತದೆ, ಪಾಪ ಪರಿಹಾರವಾಗುತ್ತದೆಂಬುದು ಜನರ ನಂಬುಗೆ. ಅದಕ್ಕೆ ಬಸವಣ್ಣನವರು ಬೇರೆ ಕಾಶಿ ಇಲ್ಲ, ದೂರದ ಕಾಶಿ ಕ್ಷೇತ್ರಕ್ಕೆ ಹೋಗಬೇಕಿಲ್ಲ. ಶಿವಭಕ್ತನಾದವನ ಮನೆಯ ಅಂಗಳವೇ ವಾರಣಾಸಿ (ಕಾಶಿ) ಪವಿತ್ರಕ್ಷೇತ್ರ ಎಂದಿದ್ದಾರೆ. ಕೈಲಾಸವೆಂಬುದು ಬೇರೆಲ್ಲೂ ಇಲ್ಲ ಈ ದೇಹವೇ ಕೈಲಾಸ. ಪವಿತ್ರವಾದ ಆತ್ಮವೇ ಪರಶಿವ. ನಮ್ಮಲ್ಲಿರುವ ಜೀವಾತ್ಮನನ್ನು ಸತ್ಕಾರ್ಯಗಳಿಂದ, ಸನ್ಮಾರ್ಗಗಳಿಂದ, ಉತ್ತಮ ಬದುಕು, ಬದುಕುವ ಮೂಲಕ, ಸತ್ಯ ಶುದ್ಧ ನಡೆನುಡಿಯ ಮೂಲಕ ಪವಿತ್ರವೂ ಪರಿಶುದ್ಧವೂ ಆಗುವಂತೆ

ಮಾಡಿಕೊಂಡರೆ ಆ ಜೀವಾತ್ಮನೇ ಪರಮಾತ್ಮನಾಗುತ್ತಾನೆ. ಆ ಪರಮಾತ್ಮನಿರುವ ಈ ದೇಹವೇ ಕೈಲಾಸವಾಗುತ್ತದೆ. ಈ ಮಾತು ಸುಳ್ಳಲ್ಲ ಕೂಡಲಸಂಗಮನ ಸಾಕ್ಷಿಯಾಗಿ ಎಂದಿದ್ದಾರೆ ಬಸವಣ್ಣನವರು.

■

## ೮೨

ದೇವದೇವಾ, ಬಿನ್ನಪ್ಪ, ಅವಧಾರು
ವಿಪ್ರಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನೆಲ್ಲರನೊಂದೆ ಎಂಬೆ
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವರನೆಲ್ಲರನೊಂದೆ ಎಂಬೆ ;
ಈ ಹೀಗೆಂದು ನಂಬುವುದೆನ್ನ ಮನವು
ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು ಸಂದೇಹವುಳ್ಳಡೆ
ಹಲುದೋರೆ ಮೂಗಕೊಯ್ಯಿ, ಕೂಡಲಸಂಗಮದೇವಾ.

–ಬಸವಣ್ಣ

ಬಸವಣ್ಣನವರು ಕೂಡಲಸಂಗಮನಿಗೆ ತಮ್ಮ ಕಟ್ಟಾ ನಂಬಿಕೆಯ ಬಗ್ಗೆ ಇಲ್ಲಿ ವಿವರಿಸುತ್ತಾರೆ. ಇವರು ಜಾತಿಭೇದ ತೊಡೆದುಹಾಕಿದ ಸತ್ಪುರುಷರು. ಹುಟ್ಟಿನಿಂದ ಜಾತಿಯನ್ನು ಪರಿಗಣಿಸಿ ಜನರನ್ನು ಲಕ್ಷಿಸದೆ ಅವರ ಆಚಾರ ವಿಚಾರಗಳಿಗೆ ಅನುಗುಣವಾಗಿ ಜನರನ್ನು ಕಾಣಬೇಕೆಂಬುದು ಬಸವಣ್ಣನವರ ಅಭಿಪ್ರಾಯ. ಆ ನಂಬಿಕೆಯನ್ನೇ ಜೀವನದಲ್ಲಿ ಸಾಧಿಸಲು ಪ್ರಾಮಾಣಿಕ ಹೋರಾಟ ನಡೆಸಿದರು. ಲಿಂಗಾಂಗಿಗಳಾಗಿ ಬಸವ ತತ್ವಗಳಂತೆ ಬದುಕುತ್ತಿದ್ದ ಶಿವಭಕ್ತರನ್ನು ಬಿಟ್ಟು ಉಳಿದವರನ್ನೆಲ್ಲಾ 'ಭವಿ' ಎಂದು ಕರೆಯಲಾಗುತ್ತಿತ್ತು. ಆದರೆ, ಕೆಲವರು, ಹುಟ್ಟಿನಿಂದ ಉತ್ತಮರಾದವರನ್ನು ಅವರೆಷ್ಟೇ ಕೆಟ್ಟವರಿದ್ದರೂ ಮೇಲೆಂದೂ, ಕೆಳವರ್ಗದಲ್ಲಿ ಹುಟ್ಟಿದವರನ್ನು ಅವರಿಷ್ಟೇ ಒಳ್ಳೆಯವರಾದರೂ ಕೀಳೆಂದೂ ಗಣಿಸುತ್ತಿದ್ದರು. ಬಸವಣ್ಣನವರು, ತಾವು ಯಾರನ್ನು ಹೇಗೆ ಕಾಣುತ್ತೇವೆಂಬುದರ ವಿವರಣೆ ಕೊಟ್ಟಿದ್ದಾರೆ. ಇದೇ ಉಳಿದವರಿಗೂ ಮಾರ್ಗದರ್ಶನ.

ಬಸವಣ್ಣನವರು, 'ದೇವರನ್ನು ನನ್ನ ಬಿನ್ನಹವನ್ನು ಆಲಿಸು. ನಾನು ಬ್ರಾಹ್ಮಣದಿಂದ ಹಿಡಿದು ಅಂತ್ಯಜರವರೆಗೆ ಅವರು ಶಿವಭಕ್ತರಾಗಿದ್ದರೆ ಆಯಿತು.

ಅವರೆಲ್ಲರನ್ನೂ ಸಮಭಾವದಿಂದ ಕಾಣುತ್ತೇನೆ. ಎಲ್ಲರೂ ಶಿವಭಕ್ತರಾದುದರಿಂದ, ಸರ್ವರೂ ಸಮಾನ. ಇಲ್ಲಿ ಬ್ರಾಹ್ಮಣ ಮೇಲು, ಅಂತ್ಯಜ ಕೀಳು ಎಂದು ಪರಿಗಣಿಸಲಾಗುವುದಿಲ್ಲ. ಹಾಗೆಯೇ ಹಾರುವನಿಂದ ಹಿಡಿದು ಮಾಂಸ ತಿನ್ನುವ ಹೀನಕುಲದವನವರೆಗೆ ಅವರು ಶಿವಭಕ್ತರಾಗಿ ಇಲ್ಲದಿದ್ದರೆ, ಅವರನ್ನೆಲ್ಲಾ 'ಭವಿ'ಗಳೆಂದು ಕರೆಯುತ್ತೇನೆ. ಅವರು ಯಾವ ಜಾತಿಗೇ ಸೇರಿರಲಿ, ಶಿವಭಕ್ತರಾಗಿಲ್ಲದಿದ್ದರೆ ಅವರೆಲ್ಲಾ 'ಭವಿ'ಗಳೇ ಎನ್ನುತ್ತಾರೆ ಬಸವಣ್ಣನವರು. ಅದು ತಮ್ಮ ಅಚಲವಾದ ನಂಬಿಕೆ. ಈ ಮಾತಿಗೆ ನಾನು ಎಳ್ಳು ಮೊನೆಯಷ್ಟೂ ತಪ್ಪಿ ನಡೆದರೆ, ಅನುಮಾನ ಬರುವಂತೆ ವರ್ತಿಸಿದರೆ, ನನಗೆ ಬೇಕಾದ ಉಗ್ರ ಶಿಕ್ಷೆ ಕೊಡು. ಹಲ್ಲು ಕಾಣುವಂತೆ ನನ್ನ ಮೂಗಕೊಯ್ದು ಅವಮಾನಗೊಳಿಸು ಎಂದು ತಮ್ಮ ಬಲವಾದ ನಂಬಿಕೆಯನ್ನು ಪ್ರತಿಪಾದಿಸಿದ್ದಾರೆ.

■

## ೮೩

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ
ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ, ಅನಾಚಾರವೆ ನರಕ
ಕೂಡಲಸಂಗಮದೇವಾ, ನೀವೆ ಪ್ರಮಾಣ.

–ಬಸವಣ್ಣ

ನಾವು ಸಾಮಾನ್ಯ ಜನರು. ನಾವಿರುವುದು ಮರ್ತ್ಯಲೋಕವೆಂದೂ ದೇವರು ದೇವಲೋಕದಲ್ಲಿರುತ್ತಾನೆಂದೂ ತಿಳಿಯುತ್ತೇವೆ. ಈ ಅಜ್ಞಾನದಿಂದ ಮುಸುಕಿದ ನಾವು ಪೂಜೆ ಪುರಸ್ಕಾರಗಳ ಮೂಲಕ, ದೇವರಿರುವ ದೇವಲೋಕಕ್ಕೆ ಹೋಗಬೇಕೆಂದು ಆಶಿಸುತ್ತೇವೆ. ನಮಗೆ ದೇವರೆಡೆಗೆ ಹೋಗುವ ಮಾರ್ಗ ಸರಿಯಾಗಿ ತಿಳಿಯದು. ಪೂಜೆ ಧ್ಯಾನಗಳನ್ನು ಮಾಡಿದರೆ ಸ್ವರ್ಗಲೋಕಕ್ಕೆ ಹೋಗುತ್ತೇವೆ, ಇಲ್ಲದಿದ್ದರೆ ನರಕಕ್ಕೆ ಹೋಗುತ್ತೇವೆ ಎಂಬುದು ಬಹಳ ಜನರ ನಂಬಿಕೆ. ಆದುದರಿಂದ ಅನಾಚಾರದಿಂದ ಬದುಕುತ್ತಾ, ವ್ರತ, ಪೂಜೆ, ತೀರ್ಥಯಾತ್ರೆ, ದೇವರ ದರುಶನ ಮಾಡುತ್ತಾ ಸ್ವರ್ಗಲೋಕಕ್ಕೆ ಹೋಗಬೇಕೆಂದು ಬಯಸುತ್ತಾರೆ. ಅಂಥವರನ್ನು ನೋಡಿ ಬಸವಣ್ಣನವರು ನಿಜವಾದ ಸ್ವರ್ಗ ಯಾವುದು, ನಿಜವಾದ ನರಕ ಯಾವುದು, ದೇವಲೋಕ ಯಾವುದು, ಮರ್ತ್ಯಲೋಕ ಯಾವುದು ಎಂಬ ಬಗ್ಗೆ ತಿಳಿವಳಿಕೆ ನೀಡಿದ್ದಾರೆ, ಜನರ ಕಣ್ಣು ತೆರೆಸಿದ್ದಾರೆ.

ದೇವಲೋಕ, ಮರ್ತ್ಯಲೋಕ ಎಂಬುವು ಬೇರೆಲ್ಲಿಯೋ ಇಲ್ಲ. ಸತ್ಯವಾಗಿ ನುಡಿಯುತ್ತಾ ಸತ್ಯದಿಂದ ಬದುಕುವುದೇ ದೇವಲೋಕ. ಸುಳ್ಳು ಹೇಳುತ್ತ ಕಪಟ ಜೀವನ ಬಾಳುತ್ತಾ, ಬೇರೆಯವರನ್ನು ಮೋಸಗೊಳಿಸಿ ಅವರಿಗೆ ದುಃಖ ಉಂಟುಮಾಡುತ್ತಾ ತಾವೂ ಆ ಪಾಪದಿಂದ ದುಃಖದಲ್ಲಿ ಮುಳುಗಿರುವುದೇ ಮರ್ತ್ಯಲೋಕ. ಆಚಾರ ಎಂದರೆ ನಡೆ-ನುಡಿ ಶುದ್ಧವಾದ ಮಾರ್ಗದಲ್ಲಿ ಸತ್ಕಾರ್ಯಗಳನ್ನು ಮಾಡುತ್ತಾ ಸತ್ಯ ಶುದ್ಧ ಜೀವನ ಮಾಡುತ್ತಿರುವುದೇ ಸ್ವರ್ಗ ಜೀವನ. ದುಷ್ಟತನದಿಂದ, ದುರ್ಮಾರ್ಗಿಗಳಾಗಿ ಮೋಸ, ವಂಚನೆಗಳಿಗೆ ಇತರರನ್ನು ಗುರಿಮಾಡಿ ಅದರಿಂದಾಗಿ ಲಾಭವನ್ನು ಅನುಭವಿಸುತ್ತಾ ಕ್ಷುದ್ರ ಸಂತೋಷಪಡುತ್ತಾ ಇರುವುದೇ ನರಕವಾಸ. ಇದಕ್ಕೆ ಕೂಡಲಸಂಗಮನೇ ಸಾಕ್ಷಿ ಎಂದು ಬಸವಣ್ಣನವರು ನುಡಿಯುತ್ತಾರೆ.

ಆದುದರಿಂದ ಜನರು ಮರ್ತ್ಯಲೋಕ, ದೇವಲೋಕ ಬೇರೆಲ್ಲಿಯೋ ಇರುತ್ತವೆಂದು ತಿಳಿಯಬಾರದು. ಸತ್ಯ, ಶುದ್ಧ ಜೀವನದಿಂದ ಬದುಕುವುದೇ ಸ್ವರ್ಗ ಮತ್ತು ದೇವಲೋಕ. ಸುಳ್ಳು ಹೇಳುತ್ತಾ ಅನಾಚಾರ ಮಾಡುತ್ತಾ ವಂಚನೆಯ ಜೀವನ ಮಾಡುವುದೇ ಮರ್ತ್ಯಲೋಕ ಹಾಗೂ ನರಕ. ಇದನ್ನರಿತು ಈ ಭೂಮಿಯಲ್ಲಿಯೇ ಸ್ವರ್ಗದ ಬದುಕನ್ನು ಬದುಕುತ್ತಾ, ಇತರರ ಜೀವನವೂ ಸ್ವರ್ಗವಾಗುವಂತೆ ಇರುತ್ತಾ ಜೀವನ ಸಾರ್ಥಕ ಮಾಡಿಕೊಳ್ಳಬೇಕು.

■

## ೮೪

ನಡೆವುದೊಂದೇ ಭೂಮಿ; ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ||

–ಸರ್ವಜ್ಞ

ಸಮಾಜದಲ್ಲಿ ಈ ಇಪ್ಪತ್ತನೇ ಶತಮಾನದಲ್ಲಿಯೇ ಆ ಜಾತಿ, ಈ ಜಾತಿ, ಈ ಜಾತಿ ಮೇಲು, ಆ ಜಾತಿ ಕೀಳು ಎಂಬ ತಾರತಮ್ಯಗಳಿರುವಾಗ ಹನ್ನೆರಡನೆಯ ಶತಮಾನದಲ್ಲಿ ಹಾಗೂ ಸರ್ವಜ್ಞನ ಕಾಲದಲ್ಲಿಯಂತೂ ಜಾತೀಯತೆ ಉಲ್ಬಣ ಸ್ಥಿತಿಯಲ್ಲಿತ್ತು. ಕೆಳಜಾತಿಯವರೆಂದು ಪರಿಗಣಿಸಲ್ಪಟ್ಟವರನ್ನು ಮೇಲ್ಜಾತಿಯವರೆನ್ನಿಸಿ ಕೊಂಡವರು ತುಂಬಾ ಹೀನಾಯವಾಗಿ ಕಾಣುತ್ತಿದ್ದರು. ಇದನ್ನು ಬಸವಾದಿ ಶರಣರೂ ಒಪ್ಪಲಿಲ್ಲ. ಹಾಗೆಯೇ ಸರ್ವಜ್ಞನೂ ಈ ಜಾತೀಯತೆಯ ಭಾವನೆಗಳನ್ನು

ಕಂಡು ಬೆರಗುಗೊಂಡಿದ್ದಾನೆ. ದೇವರು ಮಾಡದ ಈ ಭಿನ್ನ ಭೇದವನ್ನು ಮನುಷ್ಯರು ಮಾಡಿಕೊಂಡು, ಮನುಷ್ಯರಲ್ಲೇ ಕೆಲವರನ್ನು ಮೇಲೆಂದು ತಿಳಿಯುವುದು, ಮತ್ತೆ ಕೆಲವರನ್ನು ಕೀಳೆಂದು ಕಾಣುವುದು ಅವನಿಗೆ ಸೋಜಿಗವನ್ನುಂಟುಮಾಡಿದೆ. ದೇವರು ಕೊಟ್ಟ ದೇಣಿಗೆಗಳಾದ ನೆಲ, ಜಲ, ಅಗ್ನಿ ಮುಂತಾದವುಗಳು ಮಾನವರಿಗೆಲ್ಲಾ ಒಂದೇ ಸಮವಾಗಿರಲು, ಮೇಲ್ಜಾತಿಯವರಿಗೆ ವಾಸಿಸಲು ಭೂಮಿ ಬೇರೆ, ಕೆಳಜಾತಿಯವರಿಗೆ ವಾಸಿಸಲು ಭೂಮಿಯ ಬೇರೆಯದೇ ಭಾಗವಾಗಿ ಬ್ರಾಹ್ಮಣ ಅಗ್ರಹಾರ, ಹೊಲಗೇರಿ ಮುಂತಾಗಿ ಪ್ರತ್ಯೇಕವಾದ ಸ್ಥಳವನ್ನು ಮೀಸಲಾಗಿರಿಸುವುದು, ಒಂದು ಜಾತಿಯವರು ವಾಸಿಸುವ ಸ್ಥಳಕ್ಕೆ ಮತ್ತೊಂದು ಜಾತಿಯವರು ಹೋಗದಂತೆ ಪ್ರತಿಬಂಧಿಸುವುದು ಎಂತಹ ವಿಪರ್ಯಾಸ! ಎಷ್ಟು ಅರ್ಥಹೀನ! ಎಂದು ಹೀಗಳೆದಿದ್ದಾನೆ ಸರ್ವಜ್ಞ. ದೇವರು ಎಲ್ಲರಿಗಾಗಿ ಕೊಟ್ಟಿರುವ ಭೂಮಿ ಒಂದೆ. ಹೀಗಿರಲು ಈ ಭೇದವೇಕೆ ಎಂಬ ಜಿಜ್ಞಾಸೆ, ಸರ್ವರನ್ನೂ ಸಮಾನರನ್ನಾಗಿ ಕಾಣುವ ಭಾವನೆ ಶರಣರಿಗೆ ಉಂಟಾಗಿರುವುದು ಅತಿಶಯೋಕ್ತಿ ಏನಲ್ಲ.

ನೀರೂ ಅಷ್ಟೆ. ದೇವರು ಎಲ್ಲರಿಗಾಗಿ ಭೂಮಿಯ ಮೇಲೆ ಜಲವನ್ನು ಕರುಣಿಸಿದ್ದಾನೆ. ಮಳೆಬಂದರೆ, ಉತ್ತಮ ಕುಲದವರಿಗೆ – ಕಡಿಮೆ ಕುಲದವರಿಗೆಂದು ಬೇರೆ, ಬೇರೆ ಸುರಿಯುವುದಿಲ್ಲ. ಬಾವಿಯನ್ನು ಯಾರು ತೋಡಿದರೂ, ಅದೇ ನೀರೇ ಎಲ್ಲರಿಗೂ ಸಿಗುತ್ತದೆ. ನದಿಯ ನೀರು ಎಲ್ಲೆಡೆ ಯಾರು ಬೇಕಾದರೂ ಉಪಯೋಗಿಸಲಿ ಎಂದು ಹರಿಯುತ್ತದೆ. ಬೆಂಕಿಯೂ ಅಷ್ಟೆ. ಭೇದಭಾವ ಮಾಡದೆ ಸರ್ವರಿಗೂ ಸಾಮಾನ್ಯವಾಗಿ ದೊರೆಯುತ್ತದೆ. ಬಿಸಿಲನ್ನು ಕೊಡುವ ಸೂರ್ಯ, ಎಲ್ಲರಿಗೂ ಬಿಸಿಲು ಕೊಡುತ್ತಾನೆ. ಭಿನ್ನಭೇದ ಮಾಡುವುದಿಲ್ಲ. ಆದರೆ ಮಾನವರು ಕೆಲವೊಂದು ಜಾತಿಯವರು, ಮೇಲ್ಜಾತಿಯವರು ಉಪಯೋಗಿಸುವ ಬಾವಿ-ಕೆರೆಗಳಿಗೆ ಬರಬಾರದು, ಆ ನೀರು ಉಪಯೋಗಿಸಿಬಾರದು ಎಂಬ ಕಟ್ಟಳೆ ಮಾಡಿರುತ್ತಾರೆ. ಬೆಂಕಿಯನ್ನಾದರೂ ಅಷ್ಟೆ ಅದನ್ನು ಉಪಯೋಗಿಸುವಾಗಲೂ ಮೇಲು ಕೀಳೆಂಬ ತಾರತಮ್ಯ ಮಾಡುತ್ತಾರೆ. ನಡೆವ ಭೂಮಿ, ಕುಡಿವ ಜಲ, ಸುಡುವ ಅಗ್ನಿ ಇಡೀ ಮಾನವರಿಗೆ ಒಂದೇ ಆಗಿರುವಾಗ, ಮಾನವ-ಮಾನವರ ನಡುವೆ ಈ ಕುಲ ಗೋತ್ರಗಳು ಬಂದು ಏಕೆ ಅಡ್ಡಿ ಮಾಡಬೇಕು. ಇಂತಹ ಅಡ್ಡಿ ಮಾಡುವಿಕೆ ಯೋಗ್ಯವಿಲ್ಲ. ದೇವರು ಹೀಗೆ ಮಾಡದುದನ್ನು ಮಾನವ ಮಾಡಿ, ದೇವರ ಕೊಡುಗೆಯನ್ನು ಸಮಾನವಾಗಿ ಎಲ್ಲರೂ ಅನುಭವಿಸಲು ಅಡ್ಡಿಮಾಡುವುದು ಸರಿಯಲ್ಲ ಎಂಬ ಸರ್ವಜ್ಞ ಮೇಲಿನ ವಚನದಲ್ಲಿ ಹೇಳಿದ್ದಾನೆ.

■

೬೫

ನಾನೆಂಬುದು ಅಹಂಕಾರ, ನೀನೆಂಬುದು ಮಾಯೆ
ನಾನು ನೀನೆಂಬ ಉಭಯವಳಿದರೆ
ನಾನೆಂಬುವನೂ ನೀನೆಂಬುವನೂ ನೀನೆ, ಅಯ್ಯ
ಇವೆರಡರ ಭೇದವೆಲ್ಲಿಯದೋ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

–ತೋಂಟದ ಸಿದ್ಧಲಿಂಗಯತಿ

ಅಜ್ಞಾನಿಯಾದ ಮನುಷ್ಯನಿಗೆ 'ಅಹಂ' ಹೆಚ್ಚು. ಅಹಂ ಇದ್ದವನು ಅಹಂಕಾರಿ. ಅವನು ಪ್ರತಿಯೊಂದಕ್ಕೂ ನಾನು, ನನ್ನಿಂದ, ನನಗಾಗಿ ಎಂದು ತಿಳಿದಿರುತ್ತಾನೆ. ಇದರಲ್ಲಿ ನಾನು ಎಂಬುದು, ನಾ ಹೆಚ್ಚು ಎಂಬುದು ಅಹಂಕಾರ, ನೀನು ಕಡಿಮೆ ಎಂಬುದು ಮಾಯೆಯಿಂದ ಮುಸುಕಿದ ಅಜ್ಞಾನ. ಆದರೆ ಅಜ್ಞಾನವಳಿದು ಸುಜ್ಞಾನಿಯಾದಾಗ ನಾನು–ನೀನು ಎಂಬುದು ಎಷ್ಟು ಮಿಥ್ಯ ಎಂಬುದು ಗೋಚರವಾಗುತ್ತದೆ. ನಾನು–ನೀನು ಎಂಬ ಭೇದಭಾವ ಅಳಿದು ನಾನು ಎಂಬುದು, ನೀನು ಎಂಬುದು ನೀನಲ್ಲದೆ ಬೇರಿಲ್ಲ, ಎಂದರೆ ಭಗವಂತನಲ್ಲದೆ ಬೇರಲ್ಲ ಎಂಬ ವಿರಾಟ್‌ಸತ್ಯದ ಅರಿವಾಗುತ್ತದೆ. ನಾನು ನೀನು ಎನ್ನುವುದೂ ಭಗವಂತನೇ, ನಮ್ಮಲ್ಲಿಯ ಜೀವಾತ್ಮ ಪರಮಾತ್ಮನ ಅಂಶ. ಅದನ್ನು ಅರಿವುದೇ ಆಧ್ಯಾತ್ಮದ ಗುರಿ. ಏಕೆಂದರೆ ಈ ಸೃಷ್ಟಿಯೇ ಒಂದು ದೇವರು. ಮಾನವ ಎಂದರೆ, ನಾನು ಅವನೂ ಎಲ್ಲರೂ ಸೃಷ್ಟಿಯ ಒಂದು ಭಾಗವಾದುದರಿಂದ ಎಲ್ಲರೂ ದೇವರ ಅಂಶವೆ. ಆದುದರಿಂದ 'ನಾನೆಂಬುವನೂ ನೀನೆಂಬುವ ನೀನೆ ಅಯ್ಯಾ' ಎಂದು ತೋಂಟದ ಸಿದ್ಧಲಿಂಗಯತಿಗಳು ಇಲ್ಲಿ ತಿಳಿಯಪಡಿಸಿದ್ದಾರೆ. ಆದ್ದರಿಂದ ನಾವು ನಾನೆಂಬುವನೂ ಭಗವಂತ; ನೀನೆಂಬುವನೂ ಭಗವಂತ ಎಂಬ ಆತ್ಮಜ್ಞಾನ ಪಡೆದು ನೇರ ಮಾರ್ಗದಲ್ಲಿ, ಮಾಯೆಯ ಹಿಡಿತದಿಂದಲೂ ಅಹಂಕಾರದಿಂದಲೂ ಬಿಡಿಸಿಕೊಂಡು ಬದುಕಬೇಕೆಂಬುದು ಈ ವಚನದ ಉಪದೇಶ.

■

೬೬

ನಿತ್ಯ ನೇಮಗಳೇಕೆ ಮತ್ತೆ ಪೂಜೆಗಳೇಕೆ
ನೆತ್ತಿ ಬೋಳೇಕೆ ಜಡೆಯೇಕೆ
ವದನದ ಸತ್ಯ ಉಳ್ಳಕ್ಕ ಸರ್ವಜ್ಞ.

–ಸರ್ವಜ್ಞ

ಶರಣರು ಯಾವಾಗಲೂ ಸತ್ಯಕ್ಕೆ ಬಹಳ ಮಹತ್ವ ಕೊಡುತ್ತಾ ಬಂದಿದ್ದಾರೆ. ಸತ್ಯ ಶುದ್ಧ ಜೀವನವೇ ಪರಮನ ಪೂಜೆ ಎಂಬುದು ಶರಣರ ಸಿದ್ಧಾಂತ. ಅದರಂತೆ ಸರ್ವಜ್ಞನೂ ಸಹ ಮಾತಿನಲ್ಲಿ ಸದಾ ಸತ್ಯವನ್ನೇ ಹೇಳುವವನಿಗೆ ಅದೇ ಪೂಜೆ, ಮತ್ತೆ ಬೇರೆಯಾದ ನಿತ್ಯನೇಮಗಳನ್ನೂ ಪೂಜೆಗಳನ್ನೂ ಮಾಡುವ ಅವಶ್ಯಕವಿಲ್ಲ ಎಂದಿದ್ದಾನೆ. ಕೆಲವರು ದೇವರ ಹೆಸರಿನಲ್ಲಿ ತಲೆಯನ್ನು ಬೋಳಿಸಿಕೊಳ್ಳುವರು, ಮತ್ತೆ ಕೆಲವರು ಜಟೆ ಬಿಡುವರು. ದೇವರನ್ನು ಮೆಚ್ಚಿಸಲು ಅದೊಂದು ಮಾರ್ಗವೆಂದುಕೊಂಡಿದ್ದಾರೆ. ಆದರೆ ಸತ್ಯ ಹೇಳುವವನಿಗೆ ಅದೇ ಸಾಕು, ಆದರಿಂದಲೇ ದೇವರ ಸಾಕ್ಷಾತ್ಕಾರವಾಗುತ್ತದೆ. ನೆತ್ತಿಯನ್ನು ಬೋಳು ಮಾಡಿಸಿಕೊಳ್ಳುವ ಅಥವಾ ಜಟೆ ಬಿಡುವ ಅವಶ್ಯಕವಿಲ್ಲ ಎಂದು ಸರಳ ಸುಂದರ ರೀತಿಯಲ್ಲಿ ನೇರವಾಗಿ ಹೇಳಿದ್ದಾನೆ ಸರ್ವಜ್ಞ.

■

## ೮೭

ನೀರೊಳಗಣ ಕಿಚ್ಚಿಗೆ ನೀರೇ ತಾಯಿ
ಕಲ್ಲೊಳಗಣ ಕಿಚ್ಚಿಗೆ ಕಲ್ಲೇ ತಾಯಿ
ಮರದೊಳಗಣ ಕಿಚ್ಚಿಗೆ ಮರವೇ ತಾಯಿ
ಅವು ಹೊರಹೊಮ್ಮಿದಾಗ ತಾಯತಿಂದು
ತಾವು ತಲೆದೋರುವಂತೆ
ಕುರುಹಿಂದ ಅರಿವನರಿತು, ಅರಿವು ಕುರುಹ
ನಷ್ಟವ ಮಾಡಿ ನಿಂದಲ್ಲಿಯೇ
ಐಘಟದೂರ ರಾಮೇಶ್ವರ ಲಿಂಗವು
ಅಂಗವರಿತು ನಿಂದ ನಿಲವು.

–ಮೆರೆಮಿಂಡಯ್ಯ

ಒಂದು ಇನ್ನೊಂದರ ಹುಟ್ಟಿಗೆ ಕಾರಣವಾದಾಗ ಕೆಲವು ಸಾರಿ, ಹುಟ್ಟಿಗೆ ಕಾರಣವಾದುದು ನಾಶವಾಗುತ್ತದೆ. ಆಧ್ಯಾತ್ಮದಲ್ಲೂ ಹಾಗೆ ನಡೆಯುತ್ತದೆಂಬುದನ್ನು ಶರಣ ಮೆರೆಮಿಂಡದೇವ ನೀರಿನಲ್ಲಿಯ ಕಿಚ್ಚು ಕಲ್ಲೊಳಗಿನ ಕಿಚ್ಚು, ಮರದೊಳಗಿನ ಕಿಚ್ಚು – ಇವುಗಳ ಉದಾಹರಣೆ ಕೊಟ್ಟು ಈ ವಚನದಲ್ಲಿ ವಿವರಿಸಿದ್ದಾನೆ.

ನೀರಿನಲ್ಲಿ ಬೆಂಕಿ ಹುಟ್ಟುವುದರಿಂದ ಆ ಕಿಚ್ಚಿಗೆ ನೀರೇ ತಾಯಿ. ಆ ಕಿಚ್ಚು ಹುಟ್ಟುವಾಗ ನೀರನ್ನು ಉಪಯೋಗಿಸಿಕೊಂಡು, ನೀರನ್ನು ಇಲ್ಲವಾಗಿಸಿ ಕಿಚ್ಚು

ಉತ್ಪನ್ನವಾಗುತ್ತದೆ. ಈ ಕಿಚ್ಚಿಗೆ ನೀರೇ ತಾಯಿ. ಹಾಗೆಯೇ ಕಲ್ಲು ಕಲ್ಲಿಗೆ ಸಿಡಿದಾಗ ಕಿಚ್ಚು ಹೊಮ್ಮುತ್ತದೆ. ಆಗ ಕಿಚ್ಚಿಗೆ ಬೇಕಾದಷ್ಟು ಕಲ್ಲು ಕಲ್ಲಿಗೆ ಸಿಡಿದಾಗ ಕಿಚ್ಚು ಹೊಮ್ಮುತ್ತದೆ. ಆಗ ಕಿಚ್ಚಿಗೆ ಬೇಕಾದಷ್ಟು ಕಲ್ಲು ಸುಟ್ಟು ನಾಶವಾಗಿ ಕಿಚ್ಚಾಗುತ್ತದೆ. ಹಾಗಾಗಿ ಕಲ್ಲಿನಿಂದ ಹುಟ್ಟಿದ ಕಲ್ಲೇ ಅದರ ತಾಯಿ. ಮರಮರವು ಒಂದಕ್ಕೊಂದು ಉಜ್ಜಿದಾಗ ಕಿಚ್ಚು ಉತ್ಪನ್ನವಾಗುತ್ತದೆ. ಆ ಕಿಚ್ಚು ಮರವನ್ನು ಸುಟ್ಟು ಉತ್ಪನ್ನವಾದುದು. ಈ ಮರದ ಕಿಚ್ಚೂ ಮರದಲ್ಲೇ ಉತ್ಪನ್ನವಾದುದರಿಂದ ಅದಕ್ಕೇ ಮರವೇ ತಾಯಿ. ಅವುಗಳ ಕಿಚ್ಚು ಹೊರಹೊಮ್ಮುವಾಗ ತಮ್ಮ ತಾಯಿಯನ್ನು ತಿಂದು, ತಾವು ಕಾಣಿಸಿಕೊಳ್ಳುತ್ತವೆ. ಹಾಗೆಯೇ ನಾವು ಇಷ್ಟಲಿಂಗವೆಂಬ ಕುರುಹನ್ನು ಇಟ್ಟುಕೊಂಡು ಆತ್ಮಚಿಂತನೆ, ಆಧ್ಯಾತ್ಮಚಿಂತನೆ, ಆತ್ಮಾನುಸಂಧಾನ ಮಾಡುವ ಮೂಲಕ ಅರಿವನ್ನು ಪಡೆದರೆ, ವಿಶ್ವವೇ ದೇವರು ವಿಶ್ವದಲ್ಲಿರುವ ಸಚರಾಚರ ವಸ್ತುಗಳೆಲ್ಲಾ ವಿಶ್ವದ ಭಾಗ. ನಾನು ವಿಶ್ವದ ಒಂದು ಅಂಗ. ಹಾಗಾಗಿ ನಾನೂ ವಿಶ್ವವೇ. ಅಂದರೆ ನಾನು ದೇವರೇ. ಅಹಂಬ್ರಹ್ಮಾಸ್ಮಿ ಎಂದು ಅದ್ವೈತ ಸಿದ್ಧಾಂತದ ಅರಿವಾಗಿ ಕೈಯಲ್ಲಿರುವ ಇಷ್ಟಲಿಂಗ ಅರಿವಿಗೆ ಒಂದು ಸಾಧನ. ಅದೇ ದೇವರಲ್ಲ ಎಂದು ವೇದ್ಯವಾಗುತ್ತದೆ. ಆದುದರಿಂದ ಇಷ್ಟಲಿಂಗ ಧ್ಯಾನದಿಂದ ಹುಟ್ಟಿದ ಅರಿವು ಇಷ್ಟಲಿಂಗದ ಅಸ್ತಿತ್ವವನ್ನೇ ಇಲ್ಲವಾಗಿಸುತ್ತದೆ. ಇದೇ ಐಘಟದೂರ ರಾಮೇಶ್ವರ ಲಿಂಗವು. ಈ ದೇಹದ ನಶ್ವರತೆಯನ್ನು ತೋರಿಸಿ, ನಮ್ಮ ನಿಲುವೇನಿರಬೇಕೆಂಬುದನ್ನು ಅರಿವು ಮಾಡುತ್ತದೆ ಎಂದು ಶರಣ ಮೆರೆಮಿಂಡದೇವ ಹೇಳಿದ್ದಾನೆ.

■

## ೮೮

ನೀರ ಕಂಡಲ್ಲಿ ಮುಳುಗುವರಯ್ಯಾ
ಮರನ ಕಂಡಲ್ಲಿ ಸುತ್ತುವರಯ್ಯಾ
ಬತ್ತುವ ಜಲವ, ಒಣಗುವ ಮರವ
ನೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ.

–ಬಸವಣ್ಣ

ಸಾಮಾನ್ಯವಾಗಿ ಜನರು ಪಾಪಕರ್ಮಗಳನ್ನು ಮಾಡುತ್ತಾ, ಪವಿತ್ರವಾದ ನದಿಯಲ್ಲಿ ಸ್ನಾನ ಮಾಡಿದರೆ ತಮ್ಮ ಪಾಪವೆಲ್ಲ ತೊಳೆದುಹೋಗುತ್ತದೆ, ಪವಿತ್ರ ವೃಕ್ಷಗಳಿಗೆ ಪೂಜೆ ಮಾಡಿ ಪ್ರದಕ್ಷಿಣೆ ಹಾಕಿದರೆ, ತಮ್ಮಲ್ಲಿರುವ ದೋಷಗಳು ಇಲ್ಲದಂತಾಗಿ, ತಮ್ಮ ಬೇಡಿಕೆಗಳು ಈಡೇರುತ್ತವೆ ಎಂದು ನಂಬಿ, ಪವಿತ್ರ ಜಲ ಕಂಡಲ್ಲೆಲ್ಲಾ ಮುಳುಗುತ್ತಾರೆ, ವೃಕ್ಷಗಳಿಗೆ ಪ್ರದಕ್ಷಿಣೆ ಹಾಕುತ್ತಾರೆ. ಆದರೆ ದೇವರನ್ನು ಕಾಣಬೇಕಾದರೆ ಅಥವಾ ದೇವರ ಕೃಪೆ ದೊರೆಯಬೇಕಾದರೆ, ತಮ್ಮಲ್ಲಿರುವ

ದುಷ್ಟಗುಣಗಳನ್ನು ತೊರೆದು, ಇಂದ್ರಿಯಗಳನ್ನು ಜಯಿಸಿ, ಸತ್ಕಾರ್ಯಗಳನ್ನು ಮಾಡಬೇಕು. ದೇವರನ್ನು ಭಕ್ತಿಭಾವದಿಂದ ನೆನೆಯಬೇಕು. ಅಂತಲ್ಲದೆ ದೇವರ ಒಲುಮೆಯಾಗದು. ಆದರೆ ಜನರಿಗೆ ತಮ್ಮ ರೀತಿ- ನೀತಿಗಳಲ್ಲಿ ಬದಲಾವಣೆ ಬೇಡ, ತಮ್ಮ ಸ್ವಾರ್ಥಕ್ಕೆ ಬೇಕಾದಂತೆ ತಾವು ಬದುಕುತ್ತಿರಬೇಕು. ಆದರೆ ಪಾಪ ತೊಳೆದುಹೋಗಬೇಕು, ಕಷ್ಟ ಪರಿಹಾರವಾಗಬೇಕು. ಅದಕ್ಕಾಗಿ ಪವಿತ್ರ ಜಲದಲ್ಲಿ ಸ್ನಾನ ಮಾಡಿ, ಪಾಪ ತೊಳೆದುಕೊಳ್ಳೋಣ. ಮರಗಳಿಗೆ ಪ್ರದಕ್ಷಿಣೆ ಹಾಕಿ ಕಷ್ಟ ಪರಿಹಾರ ಮಾಡಿಕೊಳ್ಳೋಣ ಎಂದು ನೀರ ಕಂಡಲ್ಲಿ ಮುಳುಗುತ್ತಾರೆ. ಮರವ ಕಂಡಲ್ಲಿ ಸುತ್ತುತ್ತಾರೆ. ಸತ್ಯ ಶುದ್ಧ ಜೀವನ ಮಾಡುವುದು, ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಳ್ಳುವುದು ಕಷ್ಟವೆಂದು ಅದರ ತಂಟೆಗೆ ಹೋಗುವುದಿಲ್ಲವಾಗಿ, ಬಸವಣ್ಣನವರು ಬತ್ತುವ ಜಲವ, ಒಣಗುವ ಮರವ ನಂಬುವ ಜನರು, ನಿಮ್ಮನ್ನು (ದೇವರನ್ನು) ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂಬ ಮಾತನ್ನು ಹೇಳಿದ್ದಾರೆ.

ಶತಮಾನಗಳಿಂದ ಆಚರಣೆಯಲ್ಲಿ ಬಂದ, ಯಾಂತ್ರಿಕವಾದ, ಸರಿಯಾದ ತಿಳಿವಳಿಕೆ ಇಲ್ಲದ ಅಂಧಾನುಕರಣೆಯಿಂದ ಆಚರಿಸುವ ಧಾರ್ಮಿಕ ಕ್ರಿಯೆಗಳು ನಿಷ್ಪ್ರಯೋಜಕ ಎಂಬ ಮಾತು ಬಸವಣ್ಣನವರ ಈ ವಚನದಲ್ಲಿ ವ್ಯಕ್ತವಾಗಿದೆ.

■

## ೮೯

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ
ಹಿಡಿದಿರ್ದ ಲಿಂಗವು ಘಟಸರ್ಪವಯ್ಯಾ
ನುಡಿಯಲು ಬಾರದು, ನಡೆಯಲು ಬಾರದು.
ಲಿಂಗದೇವನ ದಿಬ್ಬಯ್ಯೊ ಅಯ್ಯಾ.
ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ
ಕಡೆದಾಂಟದು ಕಾಣಾ, ಕೂಡಲಸಂಗಮದೇವಾ.

–ಬಸವಣ್ಣ

ಕೆಲವರ ಮಾತನ್ನು ಕೇಳಿದರೆ, ಅವರೆಷ್ಟು ಸಜ್ಜನರೋ ಸತ್ಪುರುಷರೋ ಎನ್ನಿಸುತ್ತದೆ. ಅಷ್ಟರಮಟ್ಟಿಗೆ ದೇವರ, ಭಕ್ತರ, ಆಧ್ಯಾತ್ಮದ, ಧ್ಯಾನದ, ಶಿವಯೋಗದ ಮಾತನಾಡುತ್ತಾರೆ. ಅವರ ಮಾತನ್ನು ಕೇಳಿದರೆ ಬೆರಗಾಗಬೇಕು; ಶಿರ ಬಾಗಬೇಕು, ಹಾಗಿರುತ್ತದೆ. ಆದರೆ ಅವರ ನಡೆ ನೋಡಿದರೆ, ಅವರ ಮಾತುಗಳಿಗೆ ವಿರುದ್ಧವಾಗಿರುತ್ತದೆ, ನಡೆಯು ಸ್ವಲ್ಪವೂ ಶುದ್ಧವಿಲ್ಲ, ಅವರ ಮಾತುಗಳಿಗೆ

ವಿರುದ್ಧವಾಗಿರುತ್ತದೆ, ನಡೆಯು ಸ್ವಲ್ಪವೂ ಶುದ್ಧವಿಲ್ಲ. ನಡೆ-ನುಡಿಯಲ್ಲಿ ಅಜಗಜಾಂತರ ವ್ಯತ್ಯಾಸ. ಇಂತಹವರನ್ನು ಕಂಡರೆ ಈಶ್ವರನಿಗೆ ಸ್ವಲ್ಪವೂ ಇಷ್ಟವಿಲ್ಲ, ತುಂಬಾ ಕೋಪ. ಆಗ ಅವರ ಕೈಲಿದ್ದ ಇಷ್ಟಲಿಂಗವೇ ಅಂತಹ ಧೂರ್ತರ ಪಾಲಿಗೆ ಘಟಸರ್ಪವಾಗಿ ಬಿಡುತ್ತದೆ. ಪರಶಿವನ ಕಟ್ಟುಕಟ್ಟಳೆಯ ವಚನವೂ ಬಾಯಲ್ಲಿ ಬಡಾಯಿ ಕೊಚ್ಚಲಿಕ್ಕೆ ಅಲ್ಲ. ಅದನ್ನು ಮೌನವಾಗಿ ಬದುಕಬೇಕು. ಅದಿಲ್ಲದೆ ಬೇರೆ ಯಾರೋ ಕೋಪಗೊಂಡರೆಂದು ಪ್ರತಿಯಾಗಿ ನಾವೂ ಕೋಪಗೊಂಡರೆ 'ಬಡವನ ಸಿಟ್ಟು ದವಡೆಗೆ ಮೂಲ' ವೆಂಬಂತೆ ಏನೂ ಪ್ರಯೋಜನವಾಗುವುದಿಲ್ಲ, ನಮಗೇ ಕೇಡಾಗುತ್ತದೆ. ಬಡವನಾದವನು ಎಚ್ಚರದಿಂದಿರಬೇಕು. ಅವನು ಇನ್ನೊಬ್ಬರ ಆಶ್ರಯದಲ್ಲಿ ಬದುಕಬೇಕಾದುದರಿಂದ ಅವನು ಎಲ್ಲರ ಮಾತನ್ನು ಕೇಳಬೇಕಾಗುತ್ತದೆ. ಅವನ ಮಾತಿಗೆ ಬೆಲೆ ಇರುವುದಿಲ್ಲ. ಅವನು ಸಿಟ್ಟಿನಿಂದ ಮಾತನಾಡಿದರೆ, ಯಾರೂ ಕೇಳುವುದಿಲ್ಲ. ಕೆಲವು ಸಾರಿ ಇವನಿಗೆಷ್ಟು ಸೊಕ್ಕು ಎಂದುಕೊಂಡು ಸಿಟ್ಟು ಮಾಡಿಸಿಕೊಂಡವರು ದವಡೆಯ ಹಲ್ಲು ಉದುರುವಂತೆ ಕೆನ್ನೆಗೆ ಬಾರಿಸಿದರೂ ಬಾರಿಸಬಹುದು. ಆಗ ಬಡವನಾದವನು ಏನೂ ಮಾಡಲೂ ಬರುವುದಿಲ್ಲ. ಆದುದರಿಂದ ದೇವರ ಕಟ್ಟಳೆಗೆ ಅನುಗುಣವಾಗಿ ಬದುಕುವುದೇ ಕ್ಷೇಮ ಎಂದಿದ್ದಾರೆ ಬಸವಣ್ಣ.

■

೯೦

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದಡೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದಡೆ ಲಿಂಗಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದೊಡೆ,
ಕೂಡಲಸಂಗಮದೇವನೆಂತೊಲಿವನಯ್ಯಾ?

–ಬಸವಣ್ಣ

'ಮಾತುಬಲ್ಲವ ಮಾಣಿಕ್ಯ ತಂದ, ಮಾತು ಬರದವ ಜಗಳ ತಂದ' ಎಂಬ ನಾಣ್ಣುಡಿಯು ಮಾತಿನ ಮಹತ್ವವನ್ನು ತಿಳಿಸುತ್ತದೆ. ಆದುದರಿಂದ ನಾವು ಮಾತಾಡುವಾಗ ಬಲು ಎಚ್ಚರಿಕೆಯಿಂದ ಆಡಬೇಕು. ಆದರಿಂದಲೇ ನಮ್ಮ ಸೋಲು-ನಮ್ಮ ಗೆಲವು-ನಮ್ಮ ಒಳಿತು ನಮ್ಮ ಕೆಡಕು ನಿರ್ಧರಿಸಲ್ಪಡುತ್ತದೆ. ಆದ್ದರಿಂದಲೇ ಬಸವಣ್ಣನವರು ಮಾತು ಹೇಗಿರಬೇಕೆಂಬುದನ್ನು ಈ ವಚನದಲ್ಲಿ ನಿರೂಪಿಸಿದ್ದಾರೆ.

ಆಡಿದ ಮಾತು ಮುತ್ತಿನಹಾರದಂತೆ ಬಿಡಿಬಿಡಿಯಿದ್ದರೂ ಇಡಿಯಾಗಿ, ಸುಂದರವಾಗಿ, ಆಕರ್ಷಕವಾಗಿ ಇರಬೇಕು. ನುಡಿದ ಮಾತು ಬೆಲೆಬಾಳುವ ವಜ್ರದ ಬೆಳಕಿನಂತೆ ಜ್ಞಾನವನ್ನು ಕೊಡುವಂತಿರಬೇಕು–ಬೆಲೆ ಬರುವಂತೆಯೂ ಇರಬೇಕು. ನುಡಿದ ಮಾತು ಸ್ಫಟಿಕದ ಪ್ರಕಾಶದಂತೆ ಶುಭ್ರವಾಗಿ, ಉಜ್ವಲವಾಗಿ, ಕಶ್ಮಲವಿಲ್ಲದೆ ಅಂದರೆ ಕಪಟವಿಲ್ಲದೆ, ಒಳ ಹೊರಗೆ ಒಂದಾಗಿರಬೇಕು. ನೇರವಾಗಿ ಹೃದಯವನ್ನು ತಟ್ಟುವಂತಿರಬೇಕು. ಮಾತು ವ್ಯರ್ಥವಾಗಬಾರದು. ದೇವರೂ ಸಹ ಮೆಚ್ಚಬೇಕು. ಇದು ಸರಿ ಎಂದು ಒಪ್ಪಬೇಕು. ಯಾರೂ ಅಲ್ಲಗಳೆಯುವಂತಿರಬಾರದು. ಅಲ್ಲದೆ ಆಡಿದ ಮಾತಿನಂತೆ ನಡೆಯಲೂ ಬೇಕು. ನುಡಿಯವುದೊಂದು ನಡೆಯುವುದೊಂದು ಆಗಬಾರದು. ಹಾಗೇನಾದರೂ ಆದರೆ ಕೂಡಲಸಂಗಮದೇವ ಅಂಥವನಿಗೆ ಒಲಿಯುವುದೂ ಇಲ್ಲ. ಅಂಥವರ ಮಾತಿಗೆ ಬೆಲೆ ಬರುವುದೂ ಇಲ್ಲ ಎಂಬುದು ಈ ವಚನದ ಸಾರ.

■

## ೬೧

ನೆರೆ ಕೆನ್ನಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ,
ಅನ್ಯರಿಗೆ ಹಂಗಾಗದಮುನ್ನ, ಕಾಲಮೇಲೆ ಕೈಯ್ಯನೂರಿ
ಕೋಲಹಿಡಿಯದಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯುಮುಟ್ಟದ ಮುನ್ನ, ಪೂಜಿಸು ನಮ್ಮ ಕೂಡಲಸಂಗಮದೇವನಾ.

–ಬಸವಣ್ಣ

ಬಸವಣ್ಣನವರು ಕೂಡಲಸಂಗಮವನ್ನು ಪೂಜಿಸಿ, ಸಾಯುವ ಮೊದಲು ಜೀವನವನ್ನು ಸಾರ್ಥಕಪಡಿಸಿಕೊ ಎಂದು ಎಲ್ಲ ಮಾನವರನ್ನು ಎಚ್ಚರಿಸಿದ್ದಾರೆ.

ಎಲೆ ಮಾನವಾ, ಮುನುಷ್ಯನಿಗೆ ಈ ಜೀವನ ಶಾಶ್ವತವಲ್ಲ. ಎಷ್ಟೇ ವರ್ಷ ಬದುಕಿದರೂ ಸಾಯಲೇಬೇಕು. ಅಲ್ಲದೆ ಬಹಳ ವರ್ಷಗಳು ಕಳೆದ ನಂತರ ಮುಪ್ಪು ಇಡೀ ದೇಹವನ್ನು ಆಕ್ರಮಿಸುತ್ತದೆ. ದೇಹ ಕುಗ್ಗಿ ಗೂಡಿನಂತಾಗುತ್ತದೆ. ಹಲ್ಲೆಲ್ಲಾ ಉದುರಿಹೋಗಿ, ಬೆನ್ನು ಬಾಗುತ್ತದೆ. ಏಳುವಾಗ ಕೈಯ್ಯನೂರಿ ಏಳಬೇಕಾದ ಅಸಹಾಯಕ ಸ್ಥಿತಿ ಬರುತ್ತದೆ. ಓಡಾಡುವುದೂ ಕಷ್ಟವಾಗಿ ಕೋಲಿನ ಆಧಾರದಿಂದ ನಡೆಯಬೇಕಾಗುತ್ತದೆ. ಸುಂದರವಾದ ದೇಹವು ಮುಪ್ಪಿನ ಕಾರಣದಿಂದ ಒಪ್ಪಗೆಟ್ಟು ಅಂದಹೀನವಾಗುತ್ತದೆ. ಅನ್ಯರ ಹಂಗಿಗೆ ಒಳಗಾಗಿ ಬದುಕಬೇಕಾಗುತ್ತದೆ. ಆದುದರಿಂದ

ಮುಪ್ಪು ಬರುವ ಮುನ್ನ, ಮೃತ್ಯುವಿಗೆ ಒಳಗಾಗುವ ಮುನ್ನ ದೇವರನ್ನು ಪೂಜಿಸು. ಮನಸ್ಸನ್ನು ದೇವರ ಕಡೆಗೆ ಹರಿಸು. ಆಧ್ಯಾತ್ಮ ಚಿಂತನೆ ಮಾಡು, ಬಾಳನ್ನು ಪುನೀತ ಮಾಡಿಕೊ. ಆಗ ಹುಟ್ಟು ಸಾರ್ಥಕವೆನ್ನಿಸುತ್ತದೆ ಎಂದು ಬೋಧಿಸಿದ್ದಾರೆ.

ಹೀಗೆ ಬೋಧಿಸಿದಬೇಕಾದರೆ, ಜನರು ಮುಪ್ಪಡರಿದರೂ, ಸಾಯುವ ಕಾಲ ಬಂದರೂ, ದೇವರ ಕಡೆಗೆ ಮನಸ್ಸನ್ನು ತಿರುಗಿಸದೆ, ಬರೀ ಲೌಕಿಕದಲ್ಲಿ ಮುಳುಗಿರುವುದನ್ನು ನೋಡಿ ಬಸವಣ್ಣನವರಿಗೆ 'ಪಾಪ' ಎನ್ನಿಸಿರಬೇಕು. ಆಗ ಹೇಳಿರಬಹುದಾದ ವಚನವಿದು.

■

## ೬೨

ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನರಿದವಂಗೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲುವೊಂದೇ ಕೂಡಲಸಂಗಮದೇವಾ ನಿಮ್ಮನರಿದವಂಗೆ.

–ಬಸವಣ್ಣ

ನೆಲ ಜಲವನ್ನು ದೇವರು ಮಾನವನ ಉಪಯೋಗಕ್ಕೆಂದು ಕರುಣಿಸಿದ್ದಾರೆ. ಆ ಜಲವನ್ನಾಗಲೀ ನೆಲವನ್ನಾಗಲೀ, ಈ ಜಾತಿಯವರಿಗೆ, ಆ ಜಾತಿಯವರಿಗೆ ಎಂದು ದೇವರು ವಿಭಾಗ ಮಾಡಿಲ್ಲ. ಸಕಲರನ್ನು ಸಾಮಾನ್ಯವಾಗಿ ಪರಿಗಣಿಸಿ ಎಲ್ಲರಿಗೆಂದು ಅದನ್ನು ಕರುಣಿಸಿದ್ದಾನೆ. ಜಲವನ್ನು ಶೌಚಾಚಮನಕ್ಕೆಂದೇನೂ ಬೇರೆ ಬೇರೆ ಮಾಡಿಲ್ಲ. ಈ ನೆಲವನ್ನು ಶಿವಾಲಯಕ್ಕೆ ಉಪಯೋಗಿಸಬೇಕು. ಆ ನೆಲವನ್ನು ಹೊಲಗೇರಿಗೆ ಉಪಯೋಗಿಸಬೇಕು ಎಂದೂ ದೇವರು ವಿಭಾಗಿಸಿಲ್ಲ. ದೇವರ ದೇಣಿಗೆಯನ್ನು ವಿಭಾಗಿಸಿಕೊಂಡಿರುವವನು ಮಾನವ. ದೇವರಲ್ಲಿ ಭೇದಭಾವವಿಲ್ಲ. ಭಗವಂತನು ಕರುಣಿಸಿದ ಭೂಮಿ ಮತ್ತು ನೀರನ್ನು ಸರ್ವರಿಗೂ ಸಮಾನವಾಗಿ ಅಗತ್ಯಕ್ಕಾಗಿ ಉಪಯೋಗಿಸಿಕೊಳ್ಳಬೇಕು. ಅದನ್ನು ಮನುಷ್ಯ ತಮ್ಮ ತಮ್ಮಲ್ಲಿ ಮೇಲು-ಕೀಳೆಂದು ವಿಂಗಡಿಸಿಕೊಳ್ಳುವುದು ಸರಿಯಲ್ಲ ಎಂದು ಹೇಳಿದ್ದಾರೆ ಶರಣರು. ತನ್ನನ್ನು ತಾನು ಅರ್ಥಮಾಡಿಕೊಂಡವನು ಜಾತಿ ಭೇದಮಾಡದೆ ಸರ್ವರೂ ಸಮಾನಕುಲದವರೆಂದು ಪರಿಗಣಿಸುತ್ತಾನೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮುಂತಾದ ಷಡ್ದರ್ಶನದ ಮಾರ್ಗಗಳಿಂದ ಮುಕ್ತಿಯನ್ನು ಪಡೆಯಬೇಕೆನ್ನುವವನು ಒಂದೇ

ಛಲದಿಂದ, ಮನಸ್ಸನ್ನು ಇಮ್ಮನ ಮಾಡಿಕೊಳ್ಳದೆ ಇರುತ್ತಾನೆ. ಮತ್ತು ಕೂಡಲಸಂಗಮನನ್ನು ಸರಿಯಾಗಿ ಅರ್ಥ ಮಾಡಿಕೊಂಡವನ ಅಭಿಪ್ರಾಯ ಸದಾಕಾಲವೂ ಒಂದೇ ರೀತಿ ಇರುತ್ತದೆ. ಹಾಗೆ ಭಗವಂತನ ದೇಣಿಗೆಯಾದ ಜಲ-ನೆಲಗಳು ಎಲ್ಲರಿಗೂ ಒಂದೇ ಸಮನಾಗಿ ದೊರೆಯುತ್ತವೆ.

■

೬೩

ನಂಬರು ನೆಚ್ಚರು ಬರಿದೆ ಕರೆವರು
ನಂಬಲರಿಯರೀ ಲೋಕದ ಜನರು
ನಂಬಿ ಕರೆದಡೆ, ಓ ಎನ್ನನೇ ಶಿವನು
ನಂಬಿದೆ, ನೆಚ್ಚದೆ ಬರಿದೆ ಕರೆದರೆ
ಕೊಂಬಮೆಟ್ಟಿ ಕೂಗೆಂದ ಕೂಡಲಸಂಗಮದೇವಾ.

–ಬಸವಣ್ಣ

ಸಾಮಾನ್ಯವಾಗಿ ಜನರು ತಮಗೆ ಕಷ್ಟಬಂದಾಗ, 'ಸಂಕಟಬಂದಾಗ ವೆಂಕಟರಮಣ' ಎಂಬಂತೆ, ದೇವರನ್ನು ನೆನಸುತ್ತಾರೆ. ಅದು ಭಕ್ತಿಗಾಗಿಯಲ್ಲ. ತಮ್ಮ ಕಷ್ಟವನ್ನು ಪರಿಹಾರ ಮಾಡಬೇಕೆಂದು. ತಮಗೆ ಕಷ್ಟ ಇದ್ದಾಗ ಮಾತ್ರ ಅವರ ಲಕ್ಷ್ಯ ದೇವರ ಕಡೆ ಹರಿಯುತ್ತದೆ. ಆಗ ಅವರು ಬೇಡಿದ ತಕ್ಷಣ ಆ ದೇವರು ತಮಗೆ ಬೇಕಾದುದನ್ನು ಕೊಡಬೇಕು. ಇಲ್ಲದಿದ್ದಲ್ಲಿ ಅವರಿಗೆ ನಂಬುಗೆ ಇಲ್ಲವಾಗುತ್ತದೆ. ಹೀಗೊಂದು ಸಾರಿ ಅವರಿಷ್ಟಾರ್ಥ ನೆರವೇರಿದರೆ ದೇವರನ್ನು ಮರೆತು ಮತ್ತೆ ಕಷ್ಟಬಂದಾಗ ಮಾತ್ರ ನೆನೆಸುತ್ತಾರೆ. ಆಗೆಲ್ಲಾ ಅವರ ಆಳಿನಂತೆ ದೇವರು ಅವರು ಹೇಳಿದುದನ್ನು ಮಾಡಬೇಕು. ಬೇಡಿದುದನ್ನು ಕೊಡಬೇಕು. ಇಂತಹ ಜನರನ್ನು ದೇವರು ಲಕ್ಷಿಸುವುದಿಲ್ಲ. ಜನರು ದೇವರ ಬಗ್ಗೆ ನಿಜವಾದ ಭಕ್ತಿಯ ನಂಬಿಕೆ ಇಲ್ಲದೆ, ಏನೇ ಬರಲಿ ಅವನೇ ರಕ್ಷಕ, ಅವನೇ ನಮ್ಮನ್ನು ರಕ್ಷಿಸುತ್ತಾನೆ ಎಂಬ ಅಚಲವಾದ ನಂಬುಗೆ ಇಲ್ಲದೆ ಕಷ್ಟ ಬಂದಾಗ ಮಾತ್ರ ಅವನನ್ನು ಕರೆಯುತ್ತಾರೆ. ಅವರಿಗೆ ದೇವರನ್ನು ಹೇಗೆ ನಂಬಿ ಬದುಕಬೇಕೆಂಬುದೇ ಗೊತ್ತಿಲ್ಲ. ಅನನ್ಯ ಭಾವದಿಂದ, ಶ್ರದ್ಧಾಪೂರ್ವಕ, ಅಚಲನಂಬಿಕೆಯಿಂದ ಭಗವಂತನನ್ನು ಭಕ್ತಿಪೂರ್ವಕ ಕರೆದಡೆ, ನಮ್ಮ ಕರೆಗೆ ಭಗವಂತನು ಓಗೊಟ್ಟೇ ಕೊಡುತ್ತಾನೆ. ನಂಬದೆ ಸುಮ್ಮನೆ ತಾತ್ಕಾಲಿಕವಾಗಿ, ನಾನು ಕಾಯಿ ಒಡೆಸುತ್ತೇನೆ, ಮಂಗಳಾರತಿ ಮಾಡಿಸುತ್ತೇನೆ, ಹಾಗೆ, ಹೀಗೇಂತ ಬಾಹ್ಯವಾದ ಆಚರಣೆಗಳನ್ನು ಮಾಡುತ್ತ ಹೃದಯದಲ್ಲಿ ನಿಷ್ಠೆಯ

ಭಕ್ತಿ ಇಲ್ಲದವರ ತಲೆಯನ್ನು ಮೆಟ್ಟಿ ಅವರ ಅಹಂಕಾರವನ್ನು ತುಳಿದು ನಿಲ್ಲುತ್ತಾನೆ ಎಂದು ಬಸವೇಶ್ವರರು ಹೇಳಿದ್ದಾರೆ.

■

೯೪

ಪ್ರಣತಿಯೂ ಇದೆ, ಬತ್ತಿಯೂ ಇದೆ, ಜ್ಯೋತಿಯ ಬೆಳಗುವೊಡೆ
ಪ್ರಭೆ ತಾನೆಲ್ಲಿಯದೊ, ಗುರುವಿದೆ, ಲಿಂಗವಿದೆ
ಸುಜ್ಞಾನೋದಯವಾಗದನ್ನಕ್ಕರ, ಭಕ್ತಿ ಎಲ್ಲಿಯದೋ ಗುಹೇಶ್ವರಾ.

–ಅಲ್ಲಮಪ್ರಭು

ಪ್ರಕಾಶಮಾನವಾದ ದೀಪವು ಬೆಳಗಬೇಕಾದರೆ ಪ್ರಣತಿ ಬೇಕು. ಬತ್ತಿ ಬೇಕು. ಆದರೆ ಅವೆರಡರಿಂದಲೇ ಪ್ರಕಾಶ ಬರುವುದಿಲ್ಲ. ಅದಕ್ಕೆ ತೈಲವನ್ನು ಹಾಕಬೇಕು. ಬರೀ ತೈಲ ಹಾಕಿದರೂ ಜ್ಯೋತಿ ಬರುವುದಿಲ್ಲ. ಆ ಪ್ರಣತೆಯಲ್ಲಿರುವ ಬತ್ತಿಯು ಎಣ್ಣೆಯಲ್ಲಿ ನೆನೆದಾಗ, ಆ ಬತ್ತಿಗೆ ಪ್ರಕಾಶ ಮುಟ್ಟಿಸಿದಾಗ ಪ್ರಭೆ ಪ್ರಕಟಗೊಳ್ಳುತ್ತದೆ. ಬೆಳಕನ್ನು ನೀಡುತ್ತದೆ. ಹಾಗೆಯೇ ಭಕ್ತನನ್ನು ಬೆಳಕಿಗೆ ತರುವ ಪ್ರಣತಿಯಂತಹ ಗುರುವಿರಬಹುದು. ಭಕ್ತನನ್ನಾಗಿಸಬಲ್ಲ, ಬತ್ತಿಯಂತಹ ಲಿಂಗವಿರಬಹುದು. ಅವರ ಆಶೀರ್ವಾದ ಪಡೆಯಬಲ್ಲ ಎಣ್ಣೆಯಂತಹ ಮನುಜನೂ ಎಣ್ಣೆಯೋಪಾದಿಯಲ್ಲಿ ಇರಬಹುದು. ಆದರೆ ಆ ಮನುಜ ಭಕ್ತನಾಗಬೇಕಾದರೆ, ಅವನಿಗೆ ಸುಜ್ಞಾನೋದಯವಾಗಬೇಕು. ತಾನು ನಿಷ್ಠೆಯಿಂದ ಪೂಜಿಸಿ ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡು, ತನ್ನ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕೆಂಬ ಸುಜ್ಞಾನ ಹುಟ್ಟುವವರೆಗೆ ಗುರುವಿದ್ದರೂ, ಲಿಂಗವಿದ್ದರೂ ಅವನು ಅವುಗಳ ಉಪಯೋಗ ಪಡೆಯಲಾರ. ಸುಜ್ಞಾನೋದಯವಾದರೆ ಪ್ರಣತಿ ಮತ್ತು ಬತ್ತಿ ಎಂಬ ಗುರು ಮತ್ತು ಲಿಂಗ ಅವನಿಗೆ ಪ್ರಭೆಯನ್ನು ನೀಡಿ ಜ್ಯೋತಿಯಂತೆ ಬೆಳಗಿಸುತ್ತಾರೆ. ಆಗ ಅವನು ಉಳಿದೆಲ್ಲರಿಗೆ ಬೆಳಕು ಕೊಡಬಲ್ಲವನಾಗುತ್ತಾನೆ ಎಂದು ಅಲ್ಲಮ ಪ್ರಭುದೇವರ ಈ ವಚನದಿಂದ ಅರ್ಥವಾಗುತ್ತದೆ.

■

೯೫

ಬಚ್ಚಲ ನೀರು ತಿಳಿದಡೇನು
ಸಲ್ಲದ ಹೊನ್ನು ಮತ್ತೆಲ್ಲಿದ್ದಡೇನು

ಆಕಾಶದ ಮಾವಿನ ಫಲದಿಂದದೇನು
ಕೊಯ್ಯಲಿಲ್ಲ ಮೆಲ್ಲಲಿಲ್ಲ
ಕೂಡಲ ಸಂಗನ ಅನುಭಾವವಿಲ್ಲದವನು
ಎಲ್ಲಿದ್ದಡೇನು ಎಂತಾದಡೇನು?

–ಬಸವಣ್ಣ

ಬಚ್ಚಲ ಕೊಚ್ಚೆಯ ನೀರು, ತಿಳಿಯಾಗಿ ಸ್ವಚ್ಛವಾಗಿ ಕಂಡರೂ ಅದನ್ನು ಕುಡಿಯಲಾಗಲೀ, ಅಡಿಗೆಗಾಗಲೀ, ಪೂಜೆಗಾಗಲೀ, ಸ್ನಾನಕ್ಕಾಗಲೀ ಬಳಸಲು ಬರುವುದಿಲ್ಲ. ಅನ್ಯಾಯದಿಂದ ಗಳಿಸಿದ ಹೊನ್ನು ಎಷ್ಟು ಸುಲಭವಾಗಿ ಸಿಕ್ಕುವಂತಿದ್ದರೂ ಅದು ಸತ್ಕಾರ್ಯಕ್ಕೆ ಉಪಯೋಗಿಸಲು ಬಾರದು. ಆಕಾಶದಲ್ಲಿ ಎಂದರೆ ಕೈಗೆ ಎಟುಕದಂತಹ ಸ್ಥಳದಲ್ಲಿ ಮಾವಿನ ಹಣ್ಣು ಬಿಟ್ಟರೂ ಪ್ರಯೋಜನವಿಲ್ಲ. ಏಕೆಂದರೆ ಅದನ್ನು ಕೊಯ್ಯಲೂ ಆಗುವುದಿಲ್ಲ. ತಿನ್ನಲೂ ಬರುವುದಿಲ್ಲ. ಅಂತಹ ಹಣ್ಣು ಬಿಟ್ಟರೂ ವ್ಯರ್ಥ. ಹಾಗೆಯೇ ದೈವ ಭಕ್ತಿ ಇಲ್ಲದವರು, ಸಜ್ಜನರಲ್ಲದವರು, ಸತ್ಸಂಗವ ಮಾಡಲಾರದವರು ಎಂತಹ ದೊಡ್ಡಪದವಿಯಲ್ಲಿ ಇದ್ದರೂ, ಮಂತ್ರಿಯಾಗಲೀ, ಪ್ರಧಾನಿಯಾಗಲೀ, ದಂಡನಾಯಕನಾಗಲೀ ಏನೇ ಆದರೂ ಅಂಥವರಿಂದ ಕೆಡುಕೇ ಹೊರತು ಯಾರಿಗೂ ಪ್ರಯೋಜನವಿಲ್ಲ ಎಂಬ ಅಂಶ ಈ ವಚನದಿಂದ ಅರ್ಥವಾಗುತ್ತದೆ. ಹಾಗೆಯೇ ಕೂಡಲ ಸಂಗಮ ದೇವನ ಎಂದರೆ ಈಶ್ವರನ ಬಗ್ಗೆ ಮನಸ್ಸಿಲ್ಲದವರು, ಆ ಬಗ್ಗೆ ಚಿಂತೆಮಾಡದವರು ಇದ್ದರೂ ಒಂದೇ ಸತ್ತರೂ ಒಂದೆ. ಅಂತಹವರು ಎಲ್ಲಿದ್ದರೂ ಅಷ್ಟೆ. ಎಂತಹ ದೊಡ್ಡ ಪದವಿ ಪಡೆದರೂ ಅಷ್ಟೆ. ಅವರ ಜೀವನ ವ್ಯರ್ಥ ಎಂಬ ಅಭಿಪ್ರಾಯವನ್ನು ಬಸವಣ್ಣನವರು ಈ ವಚನದ ಮೂಲಕ ವ್ಯಕ್ತಪಡಿಸಿದ್ದಾರೆ.

■

## ೯೭

ಬಡತನಕ್ಕೆ ಉಂಬುವ ಚಿಂತೆ
ಉಣಲಾದರೆ ಉಡುವ ಚಿಂತೆ
ಉಡಲಾದರೆ ಇಡುವ ಚಿಂತೆ
ಇಡಲಾದರೆ ಹೆಂಡಿರ ಚಿಂತೆ
ಹೆಂಡಿರಾದರೆ ಮಕ್ಕಳ ಚಿಂತೆ
ಮಕ್ಕಳಾದರೆ ಬದುಕಿನ ಚಿಂತೆ
ಬದುಕಾದರೆ ಕೇಡಿನ ಚಿಂತೆ

ಕೇಡಾದರೆ ಮರಣದ ಚಿಂತೆ
ಇಂತೀ ಹಲವು ಚಿಂತೆಯಲ್ಲಿ ಇಪ್ಪವರನು ಕಂಡೆನು
ಶಿವನ ಚಿಂತೆಯಲ್ಲಿದ್ದವರೊಬ್ಬರನು ಕಾಣೆನೆಂದಾತ
ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

–ಅಂಬಿಗರ ಚೌಡಯ್ಯ

ಶರಣ ಅಂಬಿಗರ ಚೌಡಯ್ಯ ಶಿವನ ಚಿಂತೆ ಮಾಡುವ ಮಹಾಶಿವಭಕ್ತ. ಆದರೆ ತನ್ನ ಸುತ್ತಮುತ್ತಲಿನ ಜನರನ್ನು ಗಮನಿಸಿದಾಗ ಅವರೆಲ್ಲ ಕೇವಲ ಲೌಕಿಕ ಜೀವನದ ಚಿಂತೆಯಲ್ಲಿ ಮುಳುಗಿ, ಶಿವಚಿಂತೆಯ ಬಗ್ಗೆ ಗಮನವನ್ನೇ ಹರಿಸದಿರುವುದನ್ನು ನೋಡಿ, ತಿನ್ನಲಿಕ್ಕೂ ಗತಿ ಇಲ್ಲದ ಬಡವರಿಗೆ ಸದಾ ಊಟಕ್ಕೆ ಸಿಕ್ಕುತ್ತೋ ಇಲ್ಲವೋ ಎಂದು, ಯಾವಾಗಲೂ ಉಣ್ಣುವ ಕಡೆಗೇ ಅವರ ಚಿಂತೆ. ಚಿಂತೆ ಇಲ್ಲದೆ ಊಟ ಮಾಡುವಷ್ಟು ಸಿಕ್ಕುವಂತಿದ್ದರೆ, ಉಡುವ ಬಗ್ಗೆ ಚಿಂತೆ, ಉಡಲು ಅಂಥ ಬಟ್ಟೆ ಬೇಕು, ಇಂಥ ಬಟ್ಟೆ ಬೇಕು ಎಂದು ಅವರ ಮನಸ್ಸನ್ನೆಲ್ಲಾ ಆವರಿಸಿರುವ ವಿಷಯವೆಂದರೆ, ಉಡುಪು. ಉಡುವುದಕ್ಕೂ ಅವರಿಗೆ ಕೊರತೆ ಇರಲಿಲ್ಲ. ಆಗಲಾದರೂ ಶಿವನ ಚಿಂತೆ ಮಾಡುತ್ತಾರೆಯೋ ಎಂದರೆ ಅದೂ ಇಲ್ಲ. ಆಗ ಇಡುವ ಚಿಂತೆ. ಆಭರಣಗಳು ಬೇಕು ಎನ್ನುವ ಚಿಂತೆ. ಅದೂ ಇತ್ತು ಎಂದರೆ ಹೆಂಡತಿ ಮಾಡಿಕೊಳ್ಳಬೇಕೆಂಬ ಚಿಂತೆ. ಹೆಂಡತಿಯನ್ನು ಮಾಡಿಕೊಂಡಾದ ಮೇಲೆ ಮಕ್ಕಳಾಗಬೇಕೆಂಬ ಚಿಂತೆ. ಮಕ್ಕಳಾದರೆ ಬದುಕಿಗೆ ಏನು ಮಾಡಬೇಕು, ಅದಾಗಿಲ್ಲ ಇದಾಗಿಲ್ಲ ಇದು ಬೇಕು ಅದು ಬೇಕು ಎನ್ನುವ ಚಿಂತೆ. ಅದೂ ಎಲ್ಲಾ ಆಯ್ತೆಂದಿಟ್ಟುಕೊಳ್ಳೋಣ. ಆಗಲಾದರೂ ಶಿವನ ಚಿಂತೆ ಮಾಡುತ್ತಾರೆಯೇ ಎಂದರೆ ಆಗಲೂ ಇಲ್ಲ. ಆಗ ಎಲ್ಲಿಯಾದರೂ ಏನಾದರೂ ಕೇಡಾದರೆ ಎಂಬ ಚಿಂತೆ. ಕೇಡಾದರೆ ಸಾವು ಎಲ್ಲಿ ಬಂದೀತೋ ಎಂಬ ಭಯದ ಚಿಂತೆ. ಹೀಗೆ ಒಂದಲ್ಲ ಒಂದು, ಒಂದಾದ ಮೇಲೊಂದು ಲೌಕಿಕದ ಚಿಂತೆಯನ್ನೇ ಜನರು ಮಾಡುತ್ತಾರೆಯೇ ಹೊರತು, ಶಿವನ ಚಿಂತೆ ಮಾಡುವವರೊಬ್ಬರನೂ ಕಾಣೆ ಎಂದು ಪ್ರಾಪಂಚಿಕ, ಸ್ಥಿತಿಯನ್ನು ಇಲ್ಲಿ ಬಿಚ್ಚಿ ತೋರಿಸಿದ್ದಾನೆ ಅಂಬಿಗರ ಚೌಡಯ್ಯ.

■

## ೯೭

ಬಟ್ಟಬಯಲದೆಲ್ಲಾ ಗಟ್ಟಿಗೊಂಡಡೆ,
ಸ್ವರ್ಗಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಯದೋ?
ಮೇಘ ನಿರ್ಮಲ ಜಲವೆಲ್ಲ ಮುತ್ತಾದಡೆ
ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಯದೊ?

ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದರೆ
ಮುಂದೆ ಭವದ ಬಳ್ಳಿ ಬೆಳೆಯಿನ್ನೆಲ್ಲಿಯದೋ?
'ಗುರುಭಕ್ತಿಂ ಪರಿತ್ಯಜ್ಯ ಸದ್ಯೋsಪಿ ನರಕಂ ವ್ರಜೇತ್!'
ಇಂತೆಂದುದಾಗಿ,
ಕೂಡಲ ಚನ್ನಸಂಗಯ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ.

–ಚನ್ನಬಸವಣ್ಣ

ಭೂಮಿಯ ಸುತ್ತ ನಿರ್ವಾಲಯವಿದೆ. ಭೂಮಿ ಗಟ್ಟಿಗೊಂಡಿದೆ. ಆದರೆ ಇಡೀ ವಿಶ್ವವೆಲ್ಲಾ ಗಟ್ಟಿಯಾದರೆ ಸ್ವರ್ಗ, ಮರ್ತ್ಯ, ಪಾತಾಳಕ್ಕೆ ಸ್ಥಳವೇ ಇಲ್ಲವಾಗುತ್ತದೆ. ಆಕಾಶದಿಂದ ಉದುರುವ ನೀರು ಮುತ್ತಾಗುತ್ತದೆ. ಆದರೆ ಆಕಾಶದಿಂದ ಬೀಳುವ ಎಲ್ಲಾ ಹನಿಗಳು ಮುತ್ತಾಗುವುದಿಲ್ಲ. ಸ್ವಾತಿ ಮಳೆಯ ಕೆಲವು ಹನಿಗಳು ಮಾತ್ರ ಮುತ್ತಾಗುತ್ತವೆ. ಹಾಗೆ ಮಳೆಯೆಲ್ಲಾ ಮುತ್ತಾಗಿದ್ದಿದ್ದರೆ ಸಪ್ತಸಾಗರಗಳಿಗೆ ನೀರೇ ಇಲ್ಲವಾಗುತ್ತಿತ್ತು. ಅದೇ ರೀತಿ ಜಗತ್ತಿನಲ್ಲಿ ಹುಟ್ಟುವ ಜನರೆಲ್ಲರೂ ಶಿವಜ್ಞಾನಿಗಳು ಎಂದರೆ ಶರಣರಾದರೆ ಮುಂದೆ ಈ ಮನುಷ್ಯ ಸಂತಾನವೇ ಇಲ್ಲವಾಗಿ ಹೋಗುತ್ತದೆ. ಮನುಷ್ಯ ಪೀಳಿಗೆ ಮುಂದುವರಿಯಲು ಸಾಧ್ಯವಿಲ್ಲವಾಗುತ್ತದೆ. ಆದುದರಿಂದಲೇ ಬಹಳಷ್ಟು ಜನರು ಗುರುಭಕ್ತಿಯನ್ನು ಬಿಟ್ಟು, ನರಕ ಸದೃಶವಾದ ಜಗತ್ತಿನ ವ್ಯಾಪಾರದಲ್ಲಿ ತೊಡಗುತ್ತಾರೆ. ಹಾಗಾಗಿ ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ. ತಲೆ ಬೋಳಿಸಿದವರು, ಗಡ್ಡಬಿಟ್ಟವರು, ಕಾವಿ ಹಾಕಿದವರು, ದಿನಕ್ಕೆ ತ್ರಿಕಾಲ ಪೂಜೆ ಮಾಡುವವರು ಎಲ್ಲರೂ ಶರಣರಲ್ಲ. ನಿಜವಾಗಿ ಕಾಯಾ, ವಾಚಾ, ಮನಸಾ, ಶರಣರಾಗಿರುವವರು ಅತಿವಿರಳ. ಕೋಟಿಗೊಬ್ಬರೂ ಸಿಕ್ಕುವುದೂ ಕಷ್ಟ. ಹಾಗೆಯೇ ನಿಜವಾದ ಭಕ್ತರು ಲಕ್ಷಕ್ಕೊಬ್ಬರು ದೊರೆಯುವುದೂ ಕಷ್ಟ ಎಂದು ಚನ್ನಬಸವಣ್ಣನವರು ಹೇಳಿದ್ದಾರೆ.

■

## ೯೮

ಬಾರನೇತಕ್ಕವ್ವಾ ನಮ್ಮನೆಯಾತ?
ತೋರನೇತಕ್ಕವ್ವಾ ತನ್ನ ದಿವ್ಯರೂಪವ?
ಬೀರನೇತಕ್ಕವ್ವಾ ಅತಿಸ್ನೇಹವ?
ಇನ್ನೆಂತು ಸೈರಿಸುವೆನವ್ವಾ? ಹೇಗೆ ತಾಳುವೆನವ್ವಾ?
ತನು ತಾಪಗೊಳ್ಳುತ್ತಿದೆ, ಮನ ತಲ್ಲಣವಾಗುತ್ತಿದೆ
ಅಖಂಡೇಶ್ವರನೆಂಬ ನಲ್ಲನ ತೋರಿಸಿ ಎನ್ನ
ಪ್ರಾಣವನುಳಿಸಿಕೊಳ್ಳಿರವ್ವಾ.

–ಷಣ್ಮುಖಸ್ವಾಮಿ

ಅತಿಯಾದ ಪ್ರೀತಿಯ, ಭಕ್ತಿಯ ಭಾವವನ್ನು ನಲ್ಲೆ, ನಲ್ಲನಿಗಾಗಿ ತೋರಿಸಬಲ್ಲಳು. ದೇವರ ಬಗೆಗೆ ಭಕ್ತನ ಪ್ರೀತಿ ನಲ್ಲನ ಬಗೆಗೆ ಇರುವ ನಲ್ಲೆಯ ಪ್ರೀತಿಗೆ ಸಮಾನವಾಗಿರುತ್ತದೆ. ಅದಕ್ಕೋಸ್ಕರವೇ ದೇವರು ಹಾಗೂ ಭಕ್ತನನ್ನು ಸತಿ-ಪತಿಗಳಿಗೆ ಶರಣರು ಹೋಲಿಸಿದ್ದಾರೆ. ದೇವರ ದರುಶನವಿಲ್ಲದ ಭಕ್ತ ಅವನ ದರುಶನಕ್ಕಾಗಿ, ಸತಿಯು ಪತಿಯ ದರುಶನಕ್ಕಾಗಿ, ಬರವಿಗಾಗಿ ಹಾತೊರೆಯುವಂತೆ ಹಾತೊರೆಯುತ್ತಾನೆ. ಅವನ ಇಲ್ಲದಿರುವಿಕೆಯು ಭಕ್ತರಿಗೆ ನಲ್ಲನನ್ನು ಕಾಣದ ನಲ್ಲೆಗಾಗುವ ವಿರಹ ಯಾತನೆಗೆ ಸಮನಾಗಿರುತ್ತದೆ. ಅವನನ್ನು ಕಾಣಲು, ಅವನ ಸ್ನೇಹವನ್ನು ಅನುಭವಿಸಲು ಕಾತುರದಿಂದ ಕಾಯುತ್ತಾಳೆ. ಅದಿಲ್ಲದೆ ಆಕೆಯ ಮನ ತಲ್ಲಣಿಸುತ್ತದೆ. ದೇಹ ತಾಪದಿಂದ ಬೇಯುತ್ತದೆ. ಆ ಸ್ಥಿತಿಯನ್ನು ಅವಳಿಗೆ ತಾಳಿಕೊಳ್ಳಲು ಅಸಾಧ್ಯವೆನ್ನಿಸುತ್ತದೆ. ಅದೇ ರೀತಿ ಭಗವಂತನನ್ನು ಕಾಣುವ, ಅವನ ಕೃಪೆ ಬೇಕೆಂಬ ಹಂಬಲವುಳ್ಳ ಭಕ್ತನಿಗೆ ಅವನನ್ನು ಕಾಣದೆ, ಅವನ ಕೃಪೆ ದೊರೆಯದೆ ಅಂತಹದೆ ಒಂದು ಭಾವ, ವಿರಹ, ನೋವು, ಸಂಕಟ, ಯಾತನೆ ಉಂಟಾಗುತ್ತದೆ. ಈ ಸ್ಥಿತಿಯನ್ನು ಷಣ್ಮುಖಸ್ವಾಮಿ ಅನುಭವಿಸಿದ್ದಾರೆ. ಅವರ ಅನಿಸಿಕೆಯನ್ನು ಈ ವಚನರೂಪದಲ್ಲಿ ವ್ಯಕ್ತಗೊಳಿಸಿದ್ದಾರೆ.

ನಮ್ಮ ಮನೆಯಾತ(ಎಂದರೆ ದೇವರು) ನಾನೆಷ್ಟು ಬೇಡಿದರೂ, ಪಾಡಿದರೂ ಇನ್ನೂ ಏಕೆ ಬರಲಿಲ್ಲ, ಬರಲೊಲ್ಲ. ತನ್ನ ದಿವ್ಯರೂಪವನ್ನು ನನಗೇಕೆ ತೋರಿಸುತ್ತಿಲ್ಲ. ನನ್ನ ಮೇಲೆ ತನ್ನ ಅತಿ ಪ್ರೀತಿಯನ್ನು ಏಕೆ ಬೀರುತ್ತಿಲ್ಲ. ಹೀಗೆ ಅವನ ಬಾರದಿರುವಿಕೆಯನ್ನು, ಕಾಣದಿರುವಿಕೆಯನ್ನು, ಪ್ರೀತಿಸದಿರುವಿಕೆಯನ್ನು ನಾನು ಹೇಗೆ ಸೈರಿಸಿಕೊಳ್ಳಲಿ? ನನಗಿನ್ನು ತಾಳಿಕೊಳ್ಳಲು ಸಾಧ್ಯವಿಲ್ಲ. ನನ್ನ ತನು-ಮನವೆಲ್ಲಾ ದುಃಖದಿಂದ ಬೇಯುತ್ತಿದೆ. ನನಗೆ ಈ ನೋವನ್ನು ಸಹಿಸಲು ಅಸಾಧ್ಯ. ಅವನು ಬರದಿದ್ದರೆ ನಾನು ಸತ್ತು ಹೋಗಿಬಿಡುತ್ತೇನೆ. ನನ್ನ ನಲ್ಲನಾದ ಅಖಂಡೇಶ್ವರನನ್ನು ನನಗೆ ತೋರಿಸಿ ನನ್ನ ಪ್ರಾಣ ಉಳಿಸಿ ಎಂದು ವಿರಹಿಣಿಯಂತೆ ತಪಿಸುತ್ತಾ ಬೇಡಿಕೊಂಡಿದ್ದಾರೆ.

ಹುಲುಮಾನವರಾದ ನಾವು ನಮ್ಮ ಮನೆ, ನಮ್ಮ ಗಂಡ, ನಮ್ಮ ಹೆಂಡತಿ, ನಮ್ಮ ಮಕ್ಕಳು, ನಮ್ಮ ತಂದೆ, ನಮ್ಮ ತಾಯಿ ಎಂದು ಗೋಳಾಡಿದರೆ, ಈ ಶರಣರು ಶಿವನ ದರ್ಶನಕ್ಕಾಗಿ, ಅವನ ಕೃಪೆಗಾಗಿ ಕಳವಳಿಸಿ ಕಾತರಿಸಿದ್ದಾರೆ. ಇದು ನಿಜವಾದ ಆಧ್ಯಾತ್ಮಮಾರ್ಗ.

■

೯೯

ಬ್ರಹ್ಮದ ಮಾತಾಡಿ ಕನ್ನೆಯರ
ಕಾಲದೆಸೆಯಲ್ಲಿ ಕುಳಿತಡೆ ಬ್ರಹ್ಮದ ಮಾತು
ಅಲ್ಲಿಗೇ ನಿಂದಿತ್ತಯ್ಯ ಅಂಬಿಗರ ಚೌಡಯ್ಯ.

–ಅಂಬಿಗರ ಚೌಡಯ್ಯ

ಬ್ರಹ್ಮಜ್ಞಾನವನ್ನು ಪಡೆಯಬೇಕಾದರೆ ಎಷ್ಟೊಂದು ಪ್ರಯತ್ನಶೀಲನಾಗಬೇಕು. ತನ್ನ ತನು, ಮನಗಳನ್ನು ಎಷ್ಟರಮಟ್ಟಿಗೆ ಹಸನುಗೊಳಿಸಬೇಕು.ಹೇಗೆ ಹದಗೊಳಿಸಬೇಕು ಎಂಬ ವಿಚಾರವನ್ನು ಅಲ್ಲಮಪ್ರಭುಗಳು 'ತನುವ ತೋಂಟವ ಮಾಡಿ' ಎಂಬ ತಮ್ಮ ವಚನದಲ್ಲಿ ಬಹು ಸುಂದರವಾಗಿ ವಿವರಿಸಿದ್ದಾರೆ. ದೇಹ, ಆತ್ಮ, ಮನಸ್ಸು, ಇವುಗಳನ್ನೆಲ್ಲಾ ಪರಿಶುದ್ಧಗೊಳಿಸಿಕೊಂಡ ನಂತರವೆ ಬ್ರಹ್ಮಜ್ಞಾನದ ವಿಚಾರ ತಿಳಿದುಕೊಳ್ಳಲು ಪ್ರಾರಂಭಿಸಬೇಕು. ಅಂತಹ ವ್ಯಕ್ತಿ ಜೀವನವನ್ನು ಅರ್ಥಮಾಡಿಕೊಂಡು ಅದರ ಒಳಿತು – ಕೆಡುಕುಗಳು ಯಾವುವು ಎಂಬುದನ್ನು ತಿಳಿದುಕೊಂಡು, ಒಳಿತಾದವುಗಳನ್ನು ಒಳಗೆ ಸೇರಿಸಿಕೊಂಡು, ಕೆಟ್ಟವಿಚಾರಗಳನ್ನು ಹೊರಚೆಲ್ಲಬೇಕು. ಸಮತೆ, ಸ್ಥೈರಣೆ, ಕ್ಷಮಾ ಮುಂತಾದ ಸದ್ಗುಣಗಳನ್ನು ತನ್ನಲ್ಲಿ ಮೇಳವಿಸಿಕೊಂಡು ಬದುಕಬೇಕು. ಇಂದ್ರಿಯಗಳನ್ನು ತನ್ನ ಹತೋಟಿ ಯಲ್ಲಿಟ್ಟುಕೊಂಡು ಅವುಗಳಿಂದ ತನ್ನ ಚಿತ್ತ ಚಾಂಚಲ್ಯಕ್ಕೆ ಒಳಗಾಗದಂತಹ ದೃಢ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ಆಗ ಬ್ರಹ್ಮಜ್ಞಾನದ ಬೀಜಾಂಕುರವನ್ನು ಮನದಲ್ಲಿ ಮಾಡಿಕೊಂಡು, ಅದನ್ನು ಸಲಹಿ, ಬೆಳೆಸುವ ಪ್ರಯತ್ನ ಪ್ರಾರಂಭಿಸಬೇಕು. ಇಲ್ಲಿಗೆ ಅವನ ಕಾರ್ಯ ಮುಗಿಯಲಿಲ್ಲ. ಜೀವನವಿಡೀ ಜಾಗೃತನಾಗಿದ್ದುಕೊಂಡು, ಪಂಚೇಂದ್ರಿಯಗಳು ತಮ್ಮ ಜಾಲವನ್ನು ಬೀಸದಂತೆ ಎಚ್ಚರಿಕೆ ವಹಿಸಬೇಕು. ಏಕೆಂದರೆ ಒಂದು ಕ್ಷಣ ಎಚ್ಚರ ತಪ್ಪಿದರೂ ಆ ಕ್ಷಣಕ್ಕಾಗಿ ಕಾದಿದ್ದವೇನೋ ಎಂಬಂತೆ ಪಂಚೇಂದ್ರಿಯಗಳು ದುರ್ಬಲ ಮನಸ್ಸನ್ನು ಆವರಿಸಿ ಆ ವ್ಯಕ್ತಿ ಅದುವರೆಗೆ ಮಾಡಿದ ಸಾಧನೆಗಳನ್ನೆಲ್ಲಾ ಮಣ್ಣುಗೂಡಿಸಿಬಿಡುತ್ತವೆ. ಆದ್ದರಿಂದ ಸಸಿ ಹೆಮ್ಮರವಾಗಿ ಬೆಳೆದು ಆನೆಗೂ ಎಳೆಯಲಾರದಷ್ಟು, ಉರುಳಿಸಲಾರದಷ್ಟು ಸದೃಢವಾಗಿ ನಿಲ್ಲಬೇಕೆಂದು ಪ್ರಭುದೇವರು ಹೇಳಿದ್ದಾರೆ.

ಪರಿಸ್ಥಿತಿ ಹೀಗಿರುವಾಗ, ಅನೇಕ ಅಳಿಮನದ ಡಾಂಭಿಕರು, ಕಾಮನ ವಶಕ್ಕೆ ಬಲಿಯಾಗಿ, ಕಾಮಿನಿಯ ಪದತಲದಲ್ಲಿ ಕುಳಿತು, ಕಾಮದಾಟಗಳಲ್ಲಿ ನಿರತರಾಗಿ ಬ್ರಹ್ಮಜ್ಞಾನದ ಮಾತನಾಡಿದರೆ ಅದೆಷ್ಟು ಹಾಸ್ಯಾಸ್ಪದ ಎನ್ನುವ ಮಾತನ್ನು ಅಂಬಿಗರ

ಚೌಡಯ್ಯನವರು ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ. ಬಹುಶಃ ಇಂದ್ರಿಯ ವಶರಾದ ಸಾಧಾರಣರಾದ, ಕೆಲಸಕ್ಕೆ ಬಾರದ ಅವಿವೇಕಿಗಳು ಬ್ರಹ್ಮಜ್ಞಾನ ಪಡೆಯುವ ಬಗ್ಗೆ ಮಾತನಾಡಿರಬೇಕು. ಅದನ್ನು ಕೇಳಿದ ಚೌಡಯ್ಯನವರು, 'ನೀವು ಯಾವಾಗ ಕಾಮಕ್ಕೆ ಬಲಿಯಾದಿರೋ ಅಲ್ಲಿಗೇ ಬ್ರಹ್ಮಜ್ಞಾನ ಪಡೆಯುವ ಮಾತು ಮುಗಿಯಿತು. ಆ ದಾರಿಯಲ್ಲಿ ಮುಂದುವರಿಯಲು ಸಾಧ್ಯವೇ ಇಲ್ಲ' ಎಂಬ ಮಾತನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ ಈ ವಚನದಲ್ಲಿ.

■

## ೧೦೦

ಬಿಡು ಬಾಹ್ಯದೊಳು ಡಂಬವ ಮಾನಸದೊಳ-
ಗೆಡೆವಿಡದಿರು ಶಂಭುವ
ಒಡಲೊಳು ವಂಚಿಸಿ, ಹೊರಗೆ ನೀ ಕೀರ್ತಿಯ
ಪಡೆದರೆ ಶಿವ ನಿನಗೊಲಿವನೆ ಮರುಳೆ?
ಜನಮೆಚ್ಚಿ ನಡೆಕೊಂಡರೇನುಂಟು ಲೋಕದಿ
ಮನಮೆಚ್ಚಿ ನಡೆಕೊಂಬುವುದೆ ಚೆಂದವು
ಜನರೇನು ಬಲ್ಲರು ಒಳಗಾಗೋ ಕೃತ್ಯವ
ಮನವರಿಯದ ಕಳ್ಳತನವಿಲ್ಲವಲ್ಲ.

–ಸರ್ಪಭೂಷಣ ಶಿವಯೋಗಿ

ಇದು ಸರ್ಪಭೂಷಣ ಶಿವಯೋಗಿಗಳ ಸ್ವರವಚನ. ಮಾನವರ ವಂಚನೆಯ ಸ್ವಭಾವವನ್ನು ಅರಿತು ಹೇಗಿರಬೇಕು, ಹೇಗಿರಬಾರದು, ಏಕೆ ಹಾಗಿರಬೇಕೆಂಬುದನ್ನು ಶ್ರೀಗಳು ಬಹಳ ಸರಳ ಸುಂದರವಾಗಿ ಉಪದೇಶ ಮಾಡಿದ್ದಾರೆ.

ಬಹಳಷ್ಟು ಜನರು ಹೊರಗೆ ದೊಡ್ಡವ್ಯಕ್ತಿಗಳಂತೆ, ಸಜ್ಜನರಂತೆ, ಸತ್ಪುರುಷರಂತೆ, ದೈವಭಕ್ತರಂತೆ, ಧಾರ್ಮಿಕ ವ್ಯಕ್ತಿಗಳಂತೆ ಕಾಣಿಸಿಕೊಳ್ಳುತ್ತಾರೆ. ಹಾಗೆಂದೇ ತಿಳಿಯಲ್ಪಟ್ಟು ಜನರ ಮೆಚ್ಚುಗೆಗೆ ಪಾತ್ರರಾಗಿ ಧರ್ಮವಂತರೆಂಬ ಕೀರ್ತಿಗೂ ಪಾತ್ರರಾಗುತ್ತಾರೆ. ಆದರೆ ಬಹಳಷ್ಟು ಮಂದಿ ಹೊರಗೆ ಹಾಗೆ ಕಾಣಿಸಿಕೊಂಡರೂ, ಒಳಜೀವನದಲ್ಲಿ, ಅಂತರಾತ್ಮದಲ್ಲಿ ಠಕ್ಕರೂ, ಮೋಸಗಾರರೂ, ಅಧರ್ಮಿಗಳೂ, ದುಷ್ಟರೂ ಆಗಿರುತ್ತಾರೆ. ಇಂತಹ ಡಾಂಭಿಕ ಜನರು ಶಿವಯೋಗಿಗಳ ದೃಷ್ಟಿಗೆ ಬಿದ್ದಿರಬೇಕು. ಅದಕ್ಕೆ ಅವರು ಅಂತಹ ಜನರನ್ನು ಕುರಿತು 'ಈ ಡಂಭಾಚಾರವನ್ನು ಬಿಡು, ಶಂಭುವನ್ನು ಮನಸ್ಸಿನಲ್ಲಿ

ಎಡೆಬಿಡದೆ ನೆನೆಯುತ್ತಿರು. ಹೊಟ್ಟೆಯೊಳಗೆ ದುಷ್ಟತನ ಇಟ್ಟುಕೊಂಡು ಹೊರಗೆ ಒಳ್ಳೆಯವನೆಂದು ನಟಿಸಿ ಕೀರ್ತಿವಂತನಾದರೆ, ನಿನ್ನನ್ನು ನೀನೇ ವಂಚಿಸಿಕೊಂಡಂತೆ. ಇದರಿಂದ ಶಿವನು ನಿನಗೆ ಒಲಿಯುವುದಿಲ್ಲ. ಹುಚ್ಚಪ್ಪಾ, ಜನಮೆಚ್ಚುವಂತೆ ನಡೆಯುವುದಕ್ಕಿಂತ, ನಿನ್ನ ಆತ್ಮ ಒಪ್ಪಬೇಕು, ಮೆಚ್ಚಬೇಕು, ಹಾಗೆ ಬದುಕಬೇಕು. ಆಗ ದೇವರಿಗೆ ಮೆಚ್ಚುಗೆ ಆಗುತ್ತದೆ. ನಿನ್ನ ಮೋಸ ಜನಕ್ಕೆ ಗೊತ್ತಾಗದಂತೆ ಬದುಕಿದರೂ ದೇವರಿಗೆ ನಿನ್ನ ಅಂತರಂಗವೆಲ್ಲಾ ಅರಿವಾಗುತ್ತದೆ. ನೀನು ಎಂತಹವನು ಎಂಬುದು ಅವನಿಗೆ ತಿಳಿದಿರುತ್ತದೆ. ದೇವರಿಗೆ ಮುಚ್ಚು-ಮರೆಮಾಡಲು ಸಾಧ್ಯವಿಲ್ಲ. ನಿನ್ನ ಅಂತರಾತ್ಮಕ್ಕೆ ಗೊತ್ತಾಗುತ್ತದೆ. ಮನಸ್ಸಿಗೆ ತಿಳಿಯದಂತೆ ಏನೂ ಮಾಡಲಾರೆ. ನಿನ್ನ ಕಳ್ಳಬುದ್ಧಿಯೆಲ್ಲಾ ಆತ್ಮನಿಗೆ ಅರಿವಾಗೇ ಆಗುತ್ತದೆ. ಆದ್ದರಿಂದ ಈ ಬಾಹ್ಯ ಡಂಭಾಚಾರವನ್ನು ಬಿಟ್ಟು ಮನಮೆಚ್ಚುವಂತೆ ಬದುಕು ಆಗ ಶಿವ ನಿನಗೊಲಿಯುತ್ತಾನೆ ಎಂದಿದ್ದಾರೆ.

■

## ೧೦೧

ಬಿರುಗಾಳಿ ಬೀಸಿ ಮರ ಮುರಿವಂತಹ ಸುಳಿಹ ಸುಳಿಯದೆ
ತಂಗಾಳಿ ಪರಿಮಳದೊಡಗೂಡಿ ಸುಳಿದಂತೆ ಸುಳಿಯಬೇಕು.
ಸುಳಿದಡೆ ನೆಟ್ಟನೆ ಜಂಗಮನಾಗಿ ಸುಳಿಯಬೇಕು.
ಸುಳಿದಡೆ ನೆಟ್ಟನೆ ಭಕ್ತನಾಗಿ ನಿಲಬೇಕು.
ಸುಳಿದು ಜಂಗಮವಾಗಲರಿಯದ,
ನಿಂದು ಭಕ್ತನಾಗಲರಿಯದ ಉಭಯಭ್ರಷ್ಟರನೇನೆಂಬೆ ಗುಹೇಶ್ವರಾ.

-ಅಲ್ಲಮ ಪ್ರಭು

ಮಾನವ ತನ್ನ ಜೀವನದಲ್ಲಿ, ಬೇರೆಯವರಿಗೆ ಕೆಡುಕುಂಟಾಗುವಂತೆ ಬದುಕುವುದೇ ಹೆಚ್ಚು. ಆದರೆ ಅಲ್ಲಮಪ್ರಭುವು ಮನುಷ್ಯನು ಯಾವ ರೀತಿ ಬದುಕಬೇಕೆಂಬದುನ್ನು ಈ ವಚನದಲ್ಲಿ ಬೋಧಿಸಿದ್ದಾರೆ. ಅದರಲ್ಲಿಯೂ ಮುಖ್ಯವಾಗಿ ಭಕ್ತನೆಂದು, ಜಂಗಮನೆಂದು ಹೇಳಿಕೊಂಡು, ತಮ್ಮ ಪ್ರಭಾವವನ್ನು ಬೀರುವಂತಹವರಿಗೆ ಉದ್ದೇಶದಿಂದ ಹೇಳಿದ ವಚನವಿದೆಂದು ಗೋಚರಿಸುತ್ತದೆ.

ಬಿರುಗಾಳಿ ಬೀಸಿದರೆ ಅದು ಮರಗಳನ್ನೇ ಮುರಿದು ಹಾಕುತ್ತದೆ. ಅಂತಹುದರಿಂದ ನಾಶವೇ ಹೊರತು ಉದ್ಧಾರವಿಲ್ಲ. ಆದುದರಿಂದ ನೀನು ಜನತೆಯಲ್ಲಿ ಅವರನ್ನುದ್ಧರಿಸಲು ಹೋದಾಗ, ಅವರನ್ನು ಖಂಡಿಸಿ ಬೈದು ಶಿಕ್ಷಿಸಿ, ಮನಮುರಿಯುವಂತೆ ಬಿರುಗಾಳಿಯೋಪಾದಿಯಲ್ಲಿ ವರ್ತಿಸದೆ, ಪರಿಮಳದಿಂದ

ಕೂಡಿದ ತಂಗಾಳಿಯು ಬೀಸಿದಾಗ ಹೇಗೆ ಮನಸ್ಸಿಗೆ ಆನಂದವಾಗುತ್ತದೆಯೋ, ಸಮಾಧಾನವಾಗುತ್ತದೆಯೋ ಅಂತಹ ರೀತಿಯ ಪರಿಣಾಮವಾಗುವಂತೆ ನೀನವರ ನಡುವೆ ಸುಳಿಯಬೇಕು. ನಿನ್ನ ಸುಳಿಯುವಿಕೆಯಿಂದ ಜನರ ಉದ್ಧಾರವಾಗಬೇಕು. ಒಳ್ಳೆಯ ಪರಿವರ್ತನೆಯಾಗಬೇಕು. ಅವರಿಗೆ ಒಳಿತಾಗಬೇಕು. ನೀನು ಸುಳಿದರೆ ನಿಜವಾದ ಜಂಗಮನಂತೆ ಸುಳಿಯಬೇಕು. ಅವರ ನಡುವೆ ನಿರಂತರ ನಿಜವಾದ ಭಕ್ತನಂತೆ ನಿಲ್ಲಬೇಕು. ಜನರ ನಡುವೆ ಅವರನ್ನು ಉದ್ಧಾರ ಮಾಡುವವನಂತೆ ಹೋಗಿ, ಜಂಗಮನಂತಿರಲು ಬಾರದೆ, ಭಕ್ತನಾಗಿ ನಿಲ್ಲಲೂ ಆಗದೆ, ಜನರನ್ನು ಹಿಂಸಿಸುತ್ತಾ, ಅದರ ಉದ್ಧಾರಕನಂತೆ ನಟಿಸುವ ಭ್ರಷ್ಟತನ ಇರಬಾರದೆಂಬ ಎಚ್ಚರವನ್ನು ಅಲ್ಲಮಪ್ರಭುದೇವರು ಡಾಂಭಿಕ ಜಂಗಮ – ಭಕ್ತರಿಗೆ ಕೊಟ್ಟಿದ್ದಾರೆ.

■

## ೧೦೨

ಬಿತ್ತಿದ ಬೆಳೆ, ಕಟ್ಟಿದ ಕೆರೆ, ಸಲಹಿದ ಶರೀರ, ನೆಟ್ಟ ವೃಕ್ಷ
ತನಗಲ್ಲದ ಅವಕ್ಕೊಡಲುಂಟೆ?
ತಾ ಮಾಡುವ ಭಕ್ತಿ ತನಗಲ್ಲದೆ ಬೇರೊಂದು ಗುಣವನರಸಲಿಲ್ಲ.
ಈ ಪರಿಯ ನಿನ್ನ ನೀ ತಿಳಿ
ಪುಣ್ಯಾರಣ್ಯದಹನ ಭೀಮೇಶ್ವರ ನಿರಂಗಸಂಗ

–ಕೋಲ ಶಾಂತಯ್ಯ

**ಮ**ನುಷ್ಯ ಬೀಜವನ್ನು ಬಿತ್ತುತ್ತಾನೆ. ಪೈರು ಬೆಳೆಯುತ್ತದೆ. ಕೆರೆಕಟ್ಟುತ್ತಾನೆ. ನೀರು ತುಂಬಿಕೊಂಡಿರುತ್ತದೆ. ಶರೀರವನ್ನು ಸಲಹುತ್ತಾನೆ. ಆರೋಗ್ಯದಿಂದಿರುತ್ತದೆ. ವೃಕ್ಷವನ್ನು ನೆಡುತ್ತಾನೆ. ಫಲ ಬಿಡುತ್ತದೆ. ಈ ಫಲಗಳೆಲ್ಲಾ ಅವನ್ನು ಮಾಡಿದವಗೇ ದೊರೆಯುತ್ತವೆ. ಬೆಳೆ ತನ್ನ ಬೆಳೆಸನ್ನು ತಾನೇ ತಿನ್ನುವುದಿಲ್ಲ. ಕೆರೆ ತಾನೇ ನೀರು ಕುಡಿಯುವುದಿಲ್ಲ. ಆರೋಗ್ಯಕರ ಶರೀರದ ಲಾಭ ಅದನ್ನು ಆರೋಗ್ಯವಾಗಿಟ್ಟವನಿಗೇ ಸಿಗುತ್ತದೆ. ಮರ ಬಿಟ್ಟ ಫಲವನ್ನು ನೆಟ್ಟವನು–ಸಲಹಿದವನು ತಿನ್ನುತ್ತಾನೆ. ಮರವೇನೂ ತಿನ್ನುವುದಿಲ್ಲ. ಹಾಗೆಯೇ ಭಕ್ತನಾದವನು ತಾ ಮಾಡಿದ ಭಕ್ತಿಯ ಫಲವನ್ನು ತಾನೇ ಅನುಭವಿಸುತ್ತಾನೆ. ಬೇರೆಯವರಿಗೆ ಹೋಗುವುದಿಲ್ಲವೆಂಬುದನ್ನು ಅರ್ಥಮಾಡಿಕೊಂಡು ಪ್ರತಿಯೊಬ್ಬ ಮನುಷ್ಯನೂ ತನ್ನನ್ನು ತಾನು ಅರಿಯಲು ಮೊದಲು ಮುಂದಾಗಬೇಕು. ಅರಿವೇ ಗುರು. ಅದೇ ಸಾಕ್ಷಾತ್ಕಾರ ಎಂದು ಕೋಲಶಾಂತಯ್ಯ ಹೇಳಿದ್ದಾನೆ.

■

೧೦೩

ಬೀಜದಲ್ಲಿರುವ ವೃಕ್ಷವು ಭೂಮಿಯಲ್ಲಿ ಅಡಗಿದೆ
ಆ ಬೀಜದಿಂದ ಪ್ರಕಟವಾಗಿ ಹಣ್ಣಿನಲ್ಲಿ ಬೀಜವನ್ನು
ಪ್ರಕಟಗೊಳಿಸುವಂತೆ ಜಗತ್ತನ್ನು ಅಡಗಿಸಿಕೊಂಡ
ಲಿಂಗವು, ಶರಣನಲ್ಲಿ ಅಡಗಿ ಜಗತ್ತನ್ನು ಪ್ರಕಾಶಗೊಳಿಸಿ
ಜಗದ್ ರಕ್ಷಣೆಗಾಗಿ ಮತ್ತೆ ಶರಣನಲ್ಲಿ ಪ್ರಕಾಶಗೊಳ್ಳುವುದೆಂದಾತ
ನಮ್ಮ ಗುರು ಕುಮಾರ ಪಂಚಾಕ್ಷರ.

–ಪಂಚಾಕ್ಷರಿ ಗವಾಯಿಗಳು

ಈ ವಚನವನ್ನು ಗದುಗಿನ ಸುಪ್ರಸಿದ್ಧ ಸಂಗೀತಗಾರರಾದ ಪಂಚಾಕ್ಷರಿ ಗವಾಯಿಗಳು ಬರೆದಿರುವರು. ಈ ವಚನದಲ್ಲಿ ಶರಣರು ಎಂಥವರು, ಅವರ ಕಾರ್ಯವೇನು ಎಂಬುದನ್ನು ವೃಕ್ಷವಾಗಿ ಫಲಕೊಡುವ ಬೀಜಕ್ಕೆ ಹೋಲಿಸಿ ಬರೆದಿದ್ದಾರೆ. ಇವರು ತಮ್ಮ ವಚನಗಳಿಗೆ ಗುರು ಕುಮಾರ ಪಂಚಾಕ್ಷರ ಎಂಬ ಅಂಕಿತವನ್ನಿಟ್ಟುಕೊಂಡಿದ್ದಾರೆ.

ಒಂದು ಬೀಜದಲ್ಲಿ ವೃಕ್ಷ ಅಡಗಿದೆ. ಉದಾಹರಣೆಗೆ ಒಂದು ಹಲಸಿನ ಬೀಜವನ್ನು ತೆಗೆದುಕೊಂಡರೆ, ಆ ಬೀಜದಲ್ಲಿ ಹಲಸಿನ ಮರವು ಅಡಗಿರುವುದಾದರೂ, ಆ ಬೀಜವನ್ನು ಭೂಮಿಯಲ್ಲಿ ಅಡಗಿಸಿದಾಗ ಎಂದರೆ ಬಿತ್ತಿಬೆಳೆವಂತೆ ಮಾಡಿದಾಗ ವೃಕ್ಷ ಬೀಜದಿಂದ ಹೊರಗೆ ಕಾಣಿಸಿಕೊಳ್ಳುತ್ತದೆ. ಆ ವೃಕ್ಷದಲ್ಲಿ ಹಣ್ಣುಗಳು ಬಿಟ್ಟು ಆ ಹಣ್ಣಿನಲ್ಲಿ ಬಿತ್ತಿದ್ದ ಬೀಜ ಲೆಕ್ಕವಿಲ್ಲದಷ್ಟು ಸಂಖ್ಯೆಯಲ್ಲಿ ಪ್ರಕಟವಾಗಿ ಹಣ್ಣುಗಳನ್ನು, ವೃಕ್ಷಗಳನ್ನು, ಬೀಜಗಳನ್ನು ಮಾನವರಿಗೆ ಯಥೇಚ್ಛವಾಗಿ ಕೊಟ್ಟು ಸಂತುಷ್ಟಗೊಳಿಸುತ್ತದೆ. ಅದೇ ರೀತಿ ಸರ್ವಾಂತರ್ಯಾಮಿಯೂ, ಸರ್ವಜ್ಞನೂ, ಸರ್ವಶಕ್ತನೂ ಆದ ಭಗವಂತನು ಶರಣನಲ್ಲಿ ಅಡಗಿದಾಗ ಜಗತ್ತನ್ನು ಪ್ರಕಾಶಿಸುತ್ತಾನೆ. ಸುಜ್ಞಾನಿಗಳಾದ ಅನೇಕ ಶರಣರು ರೂಪುಗೊಳ್ಳುವಂತೆ ಮಾಡುತ್ತಾನೆ. ಆಗ ಪುನಃ ಲಿಂಗವು ಜಗದ್ ರಕ್ಷಣೆಗಾಗಿ ಅನೇಕ ಶರಣರಲ್ಲಿ ಪ್ರಕಟಗೊಂಡು ಜಗತ್ತನ್ನು ಉದ್ಧರಿಸುತ್ತದೆ, ರಕ್ಷಿಸುತ್ತದೆ ಎಂಬ ಅಭಿಪ್ರಾಯವು ಇಲ್ಲಿ ವ್ಯಕ್ತವಾಗಿದೆ.

■

## ೧೦೪

ಬೆಟ್ಟಕ್ಕೆ ಚಳಿಯಾದರೆ ಏನು ಹೊದಿಸುವಿರಯ್ಯಾ?
ಬಯಲು ಬತ್ತಲೆ ಇದ್ದರೆ ಏನನುಡಿಸುವಿರಯ್ಯಾ,
ಭಕ್ತನು ಭವಿಯಾದಡೆ ಏನನುಪಮಿಸುವಿರಯ್ಯಾ ಗುಹೇಶ್ವರಾ.

–ಅಲ್ಲಮ ಪ್ರಭು

ಬೆಟ್ಟಕ್ಕೆ ಚಳಿಯಾಗಲೇಬಾರದು. ಏಕೆಂದರೆ ಬೆಟ್ಟವು ಚಳಿ, ಮಳೆ, ಗಾಳಿ, ಬಿಸಿಲುಗಳಿಗಾವುದಕ್ಕೂ ಬೆಚ್ಚದೆ, ಅದನ್ನೆಲ್ಲಾ ತನ್ನಲ್ಲಿ ಮೈಗೂಡಿಸಿಕೊಂಡು, ತನ್ನನ್ನು ಇನ್ನೂ ಉತ್ತಮವಾಗಿಸಿಕೊಳ್ಳುವುದು ಬೆಟ್ಟದ ಗುಣ. ಆ ಬೃಹತ್ತಾದ ಬೆಟ್ಟಕ್ಕೆ, ಚಳಿ ಇಲ್ಲ, ಸೆಕೆ ಇಲ್ಲ, ಬಿಸಿಲಿನ ಬೇಗುದಿ ಇಲ್ಲ. ಎಲ್ಲಕ್ಕೂ ಅಚಲವಾಗಿ ಮೈಯ್ಯೊಡ್ಡಿ ನಿಂತ ಸ್ಥಿತಪ್ರಜ್ಞ ಅದು. ಒಂದು ವೇಳೆ ಬೆಟ್ಟಕ್ಕೆ ಚಳಿಯಾದರೆ, ಅದಕ್ಕೆ ಏನನ್ನಾದರೂ ಹೊದ್ದಿಸಿ, ಬೆಚ್ಚಗಾಗುವಂತೆ ಮಾಡಲು ಸಾಧ್ಯವೇ ಇಲ್ಲ. ಅದು ಯಾರಿಗೂ ಅಸಾಧ್ಯದ ಮಾತು. ಅದೇ ರೀತಿ ವಿಶಾಲವಾದ ಬಯಲು. ಬಯಲು ಬಯಲೇ. ಅದು ಇದ್ದಂತೆಯೇ ಕಾಣಿಸಿಕೊಳ್ಳುತ್ತದೆ. ಅದು ಬತ್ತಲೆಯಾಗಿದೆ ಎಂದುಕೊಂಡು ಅದಕ್ಕೆ ಬಟ್ಟೆಯುಡಿಸಿ, ಮುಚ್ಚಲು ಸಾಧ್ಯವೇ ಇಲ್ಲ. ಉಪಮಿಸಲಾರದಂತಹ ವಿಶಾಲವಾದ ಬಯಲಿಗೆ ಏನನ್ನಾದರೂ ಉಡಿಸುತ್ತೇನೆ ಎಂದು ಯೋಚಿಸುವ ಮಾತು ಹುಚ್ಚುತನದ್ದು. ಬಯಲು ಇರುವುದೇ ಹಾಗೆ. ಅದನ್ನು ಬೇರೆಯ ರೀತಿ ಕಾಣುವುದು, ಬೇರೆಯ ರೀತಿಯಾಗಿ ಯೋಚಿಸುವುದು ಅನಗತ್ಯ.

ಹಾಗೆಯೇ ಭಕ್ತನೆನ್ನಿಸಿಕೊಂಡವನಿಗೆ ಕೆಲವೊಂದು ನಿರ್ದಿಷ್ಟ ನಡತೆಗಳೂ, ನಿರ್ದಿಷ್ಟ ವಿಚಾರಗಳೂ, ಗುರಿಗಳೂ ಇರುತ್ತವೆ. ಭಕ್ತನೆಂದರೆ ಅವುಗಳನ್ನು ಅವನು ಹೊಂದಿದ್ದಾನೆಂದೇ ಅರ್ಥ. ಅಂತಹವನು ಭವಿಯ ಗುಣಗಳನ್ನು ಅಳವಡಿಸಿಕೊಂಡರೆ, ಭವಿಯಗುಣದ ಭಕ್ತನನ್ನು ಯಾವ ವಿಧವಾಗಿಯೂ ವಿವರಿಸಲು ಸಾಧ್ಯವಿಲ್ಲ, ಹೋಲಿಕೆ ಕೊಟ್ಟು ತಿಳಿಯಪಡಿಸುವುದೂ ಅಸಾಧ್ಯ. ಆದ್ದರಿಂದ ಭಕ್ತನು ಎಂದೂ ಭವಿಯಾಗಲು ಸಾಧ್ಯವಿಲ್ಲ. ಭವಿಯ ಗುಣಗಳು ಕಂಡಲ್ಲಿ ಅವನು ಭಕ್ತನಾಗಿ ಉಳಿಯುವುದೇ ಇಲ್ಲ.

■

## ೧೦೫

ಬೆಟ್ಟದಾ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯಾ?
ಸಮುದ್ರದಾ ತಡಿಯಲೊಂದು ಮನೆಯಮಾಡಿ,

ನೊರೆ–ತೆರೆಗಳಗಂಜಿದೊಡೆಂತಯ್ಯಾ?
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯಾ?
ಚನ್ನಮಲ್ಲಿಕಾರ್ಜುನ ಕೇಳಯ್ಯ, ಲೋಕದೊಳಗೆ ಹುಟ್ಟಿರ್ದ ಬಳಿಕ
ಸ್ತುತಿನಿಂದೆಗಳು ಬಂದಡೆ, ಮನದಲ್ಲಿ ಕೋಪವ ತಾಳದೆ
ಸಮಾಧಾನಿಯಾಗಿರಬೇಕು

–ಅಕ್ಕಮಹಾದೇವಿ

**ಈ** ಜಗತ್ತಿನಲ್ಲಿ ಜನ್ಮತಾಳಿರುವಾಗ ಜೀವನಕ್ರಮದಲ್ಲಿ ಹೊಗಳಿಕೆಯೂ ಸಿಗುತ್ತದೆ, ತೆಗಳಿಕೆಯೂ ದೊರೆಯುತ್ತದೆ. ಇದು ಇಲ್ಲಿ ಸಹಜವಾದುದು. ಆದ್ದರಿಂದ ಜೀವನದಲ್ಲಿ ಒಳಿತು ಬರಲಿ ಕೆಡುಕು ಬರಲಿ, ಹೊಗಳಿಕೆ ಬರಲಿ–ತೆಗಳಿಕೆ ಬರಲಿ ಅದರಿಂದ ಬೇಸರಗೊಳ್ಳದೆ ಬಂದುದನ್ನು ಸಮಾಧಾನದಿಂದ ಎದುರಿಸದೆ ವಿಧಿಯಿಲ್ಲ ಎಂಬ ಅಂಶವನ್ನು ಅಕ್ಕಮಹಾದೇವಿ ತುಂಬಾ ಸರಳವಾದ ಉದಾಹರಣೆಗಳಿಂದ ವಿವರಿಸಿದ್ದಾಳೆ.

ಬೆಟ್ಟದ ಮೇಲೆ ಕಾಡುಗಳಿರುತ್ತದೆ. ಕಾಡಿನಲ್ಲಿ ಕಾಡುಪ್ರಾಣಿಗಳು ಇರುವುದು ಸಹಜ. ಇದು ಗೊತ್ತಿದ್ದೂ ನಾವು ಬೆಟ್ಟದ ಮೇಲೆ ಮನೆಯನ್ನು ಮಾಡಿ ವಾಸಿಸುವುದಾದರೆ, ಕಾಡುಮೃಗಗಳು ನಮಗೆ ತೊಂದರೆ ಕೊಡಲು ಬರುತ್ತವೆ. ಅವನ್ನು ಸಮರ್ಥವಾಗಿ ಎದುರಿಸಿ ಬದುಕಬೇಕು ಎಂಬ ನಿರ್ಧಾರದಿಂದಲೇ ಅಲ್ಲಿ ಮನೆ ಮಾಡಬೇಕು. ಹಾಗೆಯೇ ಸಮುದ್ರದಲ್ಲಿ ನೊರೆ–ತೆರೆಗಳು ಇದ್ದೇ ಇರುತ್ತವೆ. ಸಮುದ್ರದ ತಡಿಯಲ್ಲಿರುವವರಿಗೆ ಅದರಿಂದ ತೊಂದರೆಯಾಗುವುದು ಕಟ್ಟಿಟ್ಟದ್ದು. ಹಾಗಿದ್ದೂ ನಾವು ಸಮುದ್ರದ ದಡದಲ್ಲಿ ಮನೆ ಮಾಡಿದ್ದೇ ಆದರೆ ನೊರೆ–ತೆರೆಗಳಿಂದಾಗುವ ಕಷ್ಟಗಳನ್ನು ಧೈರ್ಯದಿಂದ ಎದುರಿಸಲು ಸಿದ್ಧರಿರಬೇಕು. ಅದೇ ರೀತಿ ಸಂತೆಯಲ್ಲಿ ಗದ್ದಲವಿದ್ದೇ ಇರುತ್ತದೆ. ಗದ್ದಲ ಬೇಕಿಲ್ಲದಿದ್ದರೆ ಸಂತೆಯ ಸಮೀಪ ಹಾಯಬಾರದು. ಆದರೆ, ಸಂತೆಯೊಳಗೆ ನಾವು ಮನೆ ಮಾಡಿಕೊಂಡರೆ ಸಹಿಸಿಕೊಳ್ಳಬೇಕಾಗುವುದು ಹೇಗೆ ಅನಿವಾರ್ಯವಾಗುತ್ತದೆಯೋ ಹಾಗೆ ನಾವು ಈ ಜಗತ್ತಿನಲ್ಲಿ ಜನ್ಮತಾಳಿದ ಬಳಿಕ ಹೊಗಳಿಕೆ – ಬೈಗುಳಗಳಿಗೆ ಎದೆಗುಂದಬಾರದು. ಅವು ಜೀವನದಲ್ಲಿ ಅನಿವಾರ್ಯ. ಆದುದರಿಂದ ಈ ಜಗದ ಜಂಝಾಟಗಳಿಂದ ಹೆದರದೆ, ಸಿಟ್ಟುಮಾಡಿಕೊಳ್ಳದೆ, ಬಂದುದನ್ನು ಅನುಭವಿಸಬೇಕು. ಸಮಾಧಾನ ಉಳಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ನಮಗೇ ಕೆಡುಕಾಗುತ್ತದೆ ಎಂಬ ಸಲಹೆಯನ್ನು ಶರಣೆ ಅಕ್ಕಮಹಾದೇವಿ, ತನ್ನ ಜೀವನದಲ್ಲಿ ಕಂಡುಂಡ ಸತ್ಯವನ್ನು ಜನತೆಗೆ ಈ ವಚನದ ಮೂಲಕ ಬೋಧಿಸಿದ್ದಾಳೆ.

ಜಗತ್ತಿನಲ್ಲಿ ಎಲ್ಲ ತರದ ಜನರೂ ಇರುತ್ತಾರೆ. ಕೆಲವರು ನಮ್ಮನ್ನು ಹೊಗಳುತ್ತಾರೆ. ಕೆಲವರು ತೆಗಳುತ್ತಾರೆ. ಹೊಗಳುತ್ತಾರೆಂದು ಹಿಗ್ಗಬಾರದು ತೆಗಳುತ್ತಾರೆಂದು ಕುಗ್ಗಬಾರದು. ಎರಡೂ ಶಾಶ್ವತವಲ್ಲ. ನಾವೇನಿದ್ದೇವೆಯೋ ಅದೇ ಇರುತ್ತೇವೆ. ಆದುದರಿಂದ ಹೊಗಳಿಕೆ-ತೆಗಳಿಕೆಗಳಿಂದ ಪ್ರಭಾವಿತರಾಗದೆ ಸಮಾಧಾನದಿಂದ ಇರುವುದನ್ನು ಮಾನವ ಕಲಿಯಬೇಕು ಎಂಬ ನೀತಿ ಈ ವಚನದಲ್ಲಿ ಅಡಗಿದೆ.

■

## ೧೦೬

ಬೇರಿಗೆ ನೀರನೆರೆದಲ್ಲಿ
ಆ ಗಿಡುವಿಗೆ ಕಡೆ-ನಡು-ಮೊದಲೆನ್ನದೆ
ಸರ್ವಾಂಗವ ವೇಧಿಸಿ ಸಂಪನ್ನಿಕೆಯ ದೃಕ್ಕಿಂಗೆ ತೋರುವಂತೆ
ಚಿತ್ತುವಿನ ಎರಕ ನಿಜತತ್ವದ ಕುರುಹಿನಲ್ಲಿ
ಪರಿಪೂರ್ಣವಾಗಿ ಸಂಪದ ತೋರುತ್ತದೆ
ಕುರಿತ ಕುರುವಿನ ಮರೆಯಲ್ಲಿ ಅರಿವು ನಿಂದು
ಕುರುಹು ನಿಪ್ಪತ್ತಿಯಾಗುತ್ತದೆ ಎಂಬ ಸಂದೇಹ ನಿಂದಿತ್ತು
ಎಂಬುದನರಿದಾಗ ಬೆಳಗು ತೋರುತ್ತದೆ.

-ಅರಿವಿನ ಮಾರಿತಂದೆ

ಗಿಡದ ಬುಡಕ್ಕೆ ಎಂದರೆ ಬೇರಿಗೆ ನೀರು ಹಾಕಿದರೆ ಸಾಕು. ಆ ನೀರು ಮೇಲಿನ ಗಿಡದ ಆದಿ-ಅಂತ್ಯ-ನಡುವೆ ಎಲ್ಲಾ ಭಾಗಗಳಿಗೆ ಹರಿದು ಆ ಗಿಡ ಸೊಂಪಾಗಿ ನಳನಳಿಸುವಂತೆ ಕಾಣುತ್ತದೆ. ಹಾಗೆಯೇ ಮನಸ್ಸನ್ನು ಇಷ್ಟಲಿಂಗದ ಮೇಲೆ ತದೇಕಚಿತ್ತದಿಂದ ಕೇಂದ್ರೀಕೃತ ಮಾಡಿ ಧ್ಯಾನಾಸಕ್ತರಾದರೆ ಅದು ಇಡೀ ದೇಹದ ಮೇಲೆ ಅದರ ಪ್ರಭಾವವನ್ನು ಬೀರುತ್ತದೆ. ಆಗ ಕುರುಹಾಗಿ ಉಪಯೋಗಿಸಲ್ಪಟ್ಟ ಇಷ್ಟಲಿಂಗವು ಶಿವನ ಪ್ರಾರ್ಥನೆಗೆ, ಪೂಜೆಗೆ, ಸಾಕ್ಷಾತ್ಕಾರಕ್ಕೆ ಇದೊಂದು ಕುರುಹು. ಸಂಕೇತ. ಇದೇ ದೇವರಲ್ಲ. ಸೃಷ್ಟಿಕರ್ತನಾದ ದೇವರ ಅಂಶವೇ ನಾನು. ಆದುದರಿಂದ ಅಹಂ ಬ್ರಹ್ಮಾಸ್ಮಿ. ಇಷ್ಟಲಿಂಗ ಕೇವಲ ಒಂದು ಕುರುಹು ಎನ್ನುವ ಅರಿವು ಮೂಡಿ ಅದೇ ದೇವರೆಂದು ನಂಬಿದ್ದ ನಂಬಿಕೆ ಮಾಯವಾಗಿ, ಜ್ಞಾನದ ಬೆಳಕು ಚೆಲ್ಲುತ್ತದೆ. ನಿಜವಾದ ಅರಿವು ಉಂಟಾಗುತ್ತದೆ ಎಂಬಂಶವನ್ನು ಅರಿವಿನ ಮಾರಿತಂದೆ ತಿಳಿಸಿದ್ದಾರೆ.

■

## ೧೦೭

ಬಂದಿತ್ತು ದಿನ! ಬಸವಣ್ಣ ಕಲ್ಲಿಗೆ
ಚನ್ನಬಸವಣ್ಣ ಉಳುವೆಯಲ್ಲಿಗೆ
ಪ್ರಭು–ಅಕ್ಕ ಕದಳಿದ್ವಾರಕ್ಕೆ
ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ
ನಾನು ಕರುವಿನ ಬೆಂಬಳಿಯಲ್ಲಿ.
ಹೋದ ಮರೆಯಲ್ಲಿ ಅಡಗಿಹರೆಲ್ಲರೂ
ಅಡಗಿದುದ ಕೇಳಿ ನಾ
ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿಯೆ ಅಡಗುವೆನು

–ತುರುಗಾಹಿ ರಾಮಣ್ಣ

ಈ ವಚನವನ್ನು ದನಮೇಯಿಸುವ ಕಾಯಕದ ರಾಮಣ್ಣರು ಕಲ್ಯಾಣದ ಕ್ರಾಂತಿಯಾದ ನಂತರ ಶರಣರು ಬೇರೆ, ಬೇರೆ ಸ್ಥಳಗಳಿಗೆ ಹೋಗಿ ಅಡಗಿಕೊಂಡಿದ್ದಂತೆಯೂ, ಅವರೆಲ್ಲರೂ 'ಅಡಗಿದುದು ಕೇಳಿ' ಎಂದರೆ ಇಲ್ಲಿ ಬಯಲಾದುದನ್ನು ಕೇಳಿ, ತಾನು ನಂಬಿದ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ ಅಡುಗುವೆನು ಎಂದು ಹೇಳಿದ ವಚನವಾಗಿ ಕಾಣಿಸುತ್ತದೆ.

ರಾಮಯ್ಯನು, ತನ್ನ ಐಕ್ಯದ ದಿನ ಬಂದಿತು ಎಂದು ಹೇಳಿದ್ದಾನೆ. ಆ ದಿನ ಯಾವುದೆಂದರೆ ಬಸವಣ್ಣನು ಕಲ್ಲಿಗೆ ಎಂದರೆ ಕಪ್ಪಡಿ ಸಂಗಮಕ್ಕೆ, ಚನ್ನಬಸವಣ್ಣನು ಉಳುವಿಗೆ, ಅಲ್ಲಮಪ್ರಭು ಮತ್ತು ಅಕ್ಕಮಹಾದೇವಿಯರು ಶ್ರೀಶೈಲದ ಕದಳಿಯವನಕ್ಕೆ, ಉಳಿದ ಪ್ರಮಥರು ತಮಗೆ ಬೇಕುಬೇಕಾದಲ್ಲಿಗೆ ಹೋಗಲು ತಾನು ತನ್ನ ದನಗಳ ಬೆಂಬಳಿಯಲ್ಲಿಯೇ ಇರಲು, ಹೋದವರೆಲ್ಲರೂ ಯಾರಿಗೂ ತಿಳಿಯದ ಜಾಗದಲ್ಲಿ ಅಡಗಿದ್ದರು. ಅವರೆಲ್ಲರೂ ಶಿವನಲ್ಲಿ ಅಡಗಲು ತಾನೂ ಸಹ ತನ್ನ ಇಷ್ಟದೈವವಾದ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ ಅಡಗುವೆನೆಂದು ಹೇಳಿದ್ದಾನೆ.

■

## ೧೦೮

ಬಂಜೆ ಬೇನೆಯರಿಯಳು, ಮಲತಾಯಿ ಮುದ್ದ ಬಲ್ಲಳೆ?
ನೊಂದ ನೋವ ನೋಯದವರೆತ್ತ ಬಲ್ಲರು? ಚನ್ನಮಲ್ಲಿಕಾರ್ಜುನ

ನೀನಿರಿದ ಅಲಗು ಒಡಲಲ್ಲಿ ಮುರಿದು ಹೊರಳುವವಳ –
ನೀವೆತ್ತ ಬಲ್ಲಿರೇ, ಎಲೆ ತಾಯಿಗಳಿರಾ

–ಅಕ್ಕಮಹಾದೇವಿ

ಅಕ್ಕಮಹಾದೇವಿಯು ಮಲ್ಲಿಕಾರ್ಜುನನಿಗೆ ಒಲಿದವಳು. ಅವಳ ಹೃದಯದ ತುಂಬೆಲ್ಲಾ ಮಲ್ಲಿಕಾರ್ಜುನನೇ ತುಂಬಿದ್ದಾನೆ. ದೇಹವನ್ನೆಲ್ಲಾ ಅವನ ಬಗೆಗಿನ ಭಕ್ತಿ ವ್ಯಾಪಿಸಿದೆ. ಶರಣಸತಿ ಲಿಂಗಪತಿ ಎಂಬ ಭಾವದಲ್ಲಿ ಮಲ್ಲಿಕಾರ್ಜುನನೇ ಪತಿಯೆಂದು ಬಾಲ್ಯದಿಂದಲೇ ಭಾವಿಸಿದ ಅವಳು, ಕೌಶಿಕರಾಜನು ಅವಳನ್ನು ವಿವಾಹವಾಗುತ್ತೇನೆಂದು ಆಸೆಪಟ್ಟರೂ ತಿರಸ್ಕರಿಸಿದ ಮಹಾವಿರಾಗಿಣಿ. ದೇವರಲ್ಲಿಯ ಭಕ್ತಿ ಒಡಲಲ್ಲಿ ಮೂಡಿದ ಮೇಲೆ ದೇವರ ಸಾಕ್ಷಾತ್ಕಾರಕ್ಕಾಗಿ ಆ ವ್ಯಕ್ತಿ ಹಗಲಿರುಳೂ ಪರಿತಪಿಸುತ್ತಾನೆ. ತನ್ನ ಆಸೆ ನೆರವೇರುವವರೆಗೆ ನಾನಾ ವಿಧದಲ್ಲಿ ದೇವರನ್ನು ಧ್ಯಾನಿಸುತ್ತಾನೆ. ಆ ಭಕ್ತಿಯೆಂಬ ಗರಗಸ ಹೋಗುತ್ತಾ ಕೊಯ್ವುದು ಬರುತ್ತಾ ಕೊಯ್ವುದು ಎಂದು ಶರಣರು ಹೇಳಿದ್ದಾರೆ. ಭಕ್ತಿಗೆ ಒಳಗಾದವರ ಮನಸ್ಸು ತಮ್ಮ ಗುರಿಮುಟ್ಟುವವರೆಗೆ ಗರಗಸ ಕೊಯ್ದಂತಹ ನೋವನ್ನು ಅನುಭವಿಸುತ್ತಾರೆಂಬ ಅರ್ಥವಿಲ್ಲಿದೆ. ಅದರಂತೆ ಮಲ್ಲಿಕಾರ್ಜುನನಲ್ಲಿ ಮನೆ–ಮಠ, ಸಂಸಾರ, ತಂದೆ–ತಾಯಿ, ಕಡೆಗೆ ದೇಹದ ಮೋಹವನ್ನು ತೊರೆದು ಹೊರಟವಳು. ಅಕ್ಕಮಹಾದೇವಿ ಅಂತಹ ಸಂದರ್ಭದಲ್ಲಿ ಅನೇಕ ಹಿತೈಷಿಗಳು ಸಂಸಾರದ ಆಮಿಷಗಳನ್ನೂ ಅದರಿಂದ ದೊರೆವ ಸುಖವನ್ನೂ ವರ್ಣಿಸಿ ಅವಳನ್ನು ಕೌಶಿಕನನ್ನು ವಿವಾಹವಾಗಲು ಒಪ್ಪಿಸಲು ಪ್ರಯತ್ನಿಸಿದಾಗ, ಅವಳು ತನ್ನ ಮನಸ್ಸನ್ನು ಎಷ್ಟೇ ವಿಧವಾಗಿ ತಿಳಿ ಹೇಳಿದರೂ ಅವರಿಗೆ ಅರ್ಥವಾಗುವುದಿಲ್ಲ. ಸಂಸಾರಕ್ಕೆ ಅಂಟಿಕೊಂಡ ಅವರಿಗೆ ಇವಳ ಆತ್ಮಜ್ಞಾನ, ತಿಳಿವಳಿಕೆ ಎಲ್ಲಾ ಮೂರ್ಖತನವೆನ್ನಿಸಿ, ಮತ್ತೂ, ಮತ್ತೂ ಸಂಸಾರದ ಸುಖಗಳನ್ನು ಬಣ್ಣಿಸುತ್ತಾರೆ. ಆಗ ಅಕ್ಕಮಹಾದೇವಿಯು ಈ ವಚನ ಹೇಳಿರಬಹುದೆಂದು ತೋರುತ್ತದೆ.

ಹೆರಿಗೆಯ ನೋವು ಎಷ್ಟು ಕಷ್ಟ ಎಂಬುದನ್ನು ಮಕ್ಕಳನ್ನು ಹೆತ್ತ ತಾಯಿಗೆ ಅರ್ಥವಾಗುವಂತೆ, ಆ ನೋವನ್ನೇ ಅನುಭವಿಸದ ಬಂಜೆಗೆ ಯಾವ ಬಗೆಯಲ್ಲಿ ವಿವರಿಸಿದರೂ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಅದೇ ರೀತಿ ತಾಯಿಯಾದವಳಿಗೆ ಮಕ್ಕಳ ಮೇಲಿನ ಮಮತೆ ವರ್ಣಿಸಲಸಾಧ್ಯ. ಮಕ್ಕಳಿಗಾಗಿ ಆ ತಾಯಿ ಯಾವ ತ್ಯಾಗಕ್ಕಾದರೂ ಸಿದ್ಧಳಿರುತ್ತಾಳೆ. ಹಾಗೆ ಮಕ್ಕಳನ್ನು ಪ್ರೀತಿಸುವುದೇ ಗೊತ್ತಿಲ್ಲದ ಮಲತಾಯಿಗೆ ತಾಯಿಯ ಮಮತೆ ಗೊತ್ತಿರುವುದಿಲ್ಲ. ಹಾಗೆಯೇ ಭಗವಂತನ ಬಗೆಗೆ ಉತ್ಕಟ ಭಕ್ತಿ ಇಲ್ಲದೆ, ಸಂಸಾರ ಸುಖಕ್ಕೆ ಜೋತುಬಿದ್ದಿರುವ ಸಾಮಾನ್ಯ ಸ್ತ್ರೀಯರಿಗೆ, ಭಗವಂತನಲ್ಲಿ ಐಕ್ಯಳಾಗಬೇಕೆಂಬ ತೀವ್ರ ಇಚ್ಛೆಯಿಂದ ಅಕ್ಕಮಹಾದೇವಿಗುಂಟಾದ ನೋವಿನ ಆಳವನ್ನು, ಅರಿತುಕೊಳ್ಳಲು ಸಾಧ್ಯವೇ

ಇಲ್ಲ. ಹಾಗಾಗಿ ಆ ಮಹಿಳೆಯರು ಅಕ್ಕಮಹಾದೇವಿಯನ್ನು ಸಂಸಾರ ಜೀವನಕ್ಕೆ ಹೊಂದಿಕೊಳ್ಳಲು ಬೋಧಿಸಿದಾಗ, ನೊಂದು, ಬಂಜೆಗೆ ಹೇಗೆ ಬೇನೆಯ ತೀವ್ರತೆ ಅರ್ಥವಾಗುವುದಿಲ್ಲವೋ, ಮಲತಾಯಿಗೆ ಮಕ್ಕಳನ್ನು ಪ್ರೀತಿಸುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಸಂಸಾರದಲ್ಲಿ ಮುಳುಗಿರುವ ನಿಮಗೆ, ಪರಮಾತ್ಮನಲ್ಲಿ ಮನಸ್ಸಿಟ್ಟಿರುವ ತನ್ನ ನೋವು ಅರಿವಾಗಲು ಸಾಧ್ಯವಿಲ್ಲ ಎಂದು ನಿಷ್ಠುರವಾಗಿ ನುಡಿದಂತಿದೆ.

■

## ೧೮೯

ಭಕ್ತಹೀನನ ದಾಸೋಹವ ಸದ್ಭಕ್ತರು ಸವಿಯರು,
ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲಬಾರದು.
ಲಿಂಗಸಂಬಂಧವಿಲ್ಲದವರ ನುಡಿ
ಕೂಡಲಸಂಗನ ಶರಣರಿಗೆ ಸಮನಿಸದು.

–ಬಸವಣ್ಣ

ದಾಸೋಹದಲ್ಲಿ ಮೂರುವಿಧ. ಗುರು ಲಿಂಗ ಜಂಗಮಕ್ಕೆ ತನು ಮನ ಧನವನರ್ಪಿಸುವುದು. ಆ ದಾಸೋಹವನ್ನು ಸತ್ಯ ಶುದ್ಧ ಕಾಯಕದ ಜೀವನದಿಂದ ಗಳಿಸಿದ ಭಕ್ತಭಾವವುಳ್ಳ ಮಾನವನು ಮಾಡಿದಾಗ ಮಾತ್ರ ಸದ್ಭಕ್ತರು ಅದನ್ನು ಪ್ರೇಮದಿಂದ ಸವಿದು ಸಂತುಷ್ಟರಾಗುತ್ತಾರೆ. ಅದಿಲ್ಲದೆ ಆಡಂಬರಕ್ಕಾಗಿ, ತಮ್ಮಲ್ಲಿ ದುಡ್ಡಿದೆ ಎಂಬ ಕಾರಣದಿಂದ, ಹೆಸರು ಪಡೆಯಬೇಕೆಂಬ ಉದ್ದೇಶದಿಂದ ದಾಸೋಹ ಮಾಡಿದರೆ ಸದ್ಭಕ್ತರು ಅತ್ತ ತಿರುಗಿಯೂ ನೋಡುವುದಿಲ್ಲ. ಯಾರೋ ಅವರಂತೆಯೇ ಭಕ್ತಿಯಿಂದ ಲೌಕಿಕ ಜನರು ಅದರಿಂದ ಸಂತುಷ್ಟಗೊಳ್ಳಬಹುದಷ್ಟೆ. ಹೇಗೆಂದರೆ ಬೇವಿನಹಣ್ಣು ಕಾಗೆಗೆ ರುಚಿಸಬಹುದು. ಆದರೆ ಕೋಗಿಲೆ ಅದನ್ನು ತಿನ್ನುವುದಿಲ್ಲ. ಕೋಗಿಲೆ ಉತ್ತಮವಾದ ಹಣ್ಣನ್ನು ಮಾತ್ರ ತಿನ್ನುತ್ತದೆ. ಅದೇ ರೀತಿ ಲಿಂಗಸಂಬಂಧವಿಲ್ಲದವನ ಎಂದರೆ ಭಕ್ತಿಭಾವವಿಲ್ಲದವನ, ಪರಶಿವನ ಬಗೆಗೆ ಆಸ್ಥೆ ಇಲ್ಲದವನ ಮಾತುಗಳಾಗಲೀ, ಪ್ರಸಾದವಾಗಲೀ, ಸದ್ಭಕ್ತರಿಗೆ ಹೋಗುವುದೇ ಇಲ್ಲ ಎಂದು ಬಸವಣ್ಣನವರಲ್ಲಿ ಹೇಳಿದ್ದಾರೆ.

■

## ೧೧೦

ಮಡಕೆಯ ಮಾಡುವೊಡೆ ಮಣ್ಣೇ ಮೊದಲು
ತೊಡಿಗೆಯ ಮಾಡುವೊಡೆ ಹೊನ್ನೇ ಮೊದಲು
ಶಿವಪಥವನರಿವಡೆ ಗುರುಪಥವೇ ಮೊದಲು
ಕೂಡಲಸಂಗಮದೇವರನರಿವಡೆ ಶರಣರ ಸಂಗವೇ ಮೊದಲು.

–ಬಸವಣ್ಣ

ಇಲ್ಲಿ ಬಸವಣ್ಣನವರು ಶಿವಪಥವನ್ನು ಹಾಗೂ ಕೂಡಲಸಂಗಮನಾಥನನ್ನು ಅರಿವ ಮಾರ್ಗವಾವುದೆಂಬುದನ್ನು ಬಹು ಸರಳ ರೀತಿಯಿಂದ ಸಾಮಾನ್ಯವಾದ ಉದಾಹರಣೆ ಕೊಟ್ಟು ವಿವರಿಸಿದ್ದಾರೆ. ಕುಂಬಾರನು ಮಡಕೆಯನ್ನು ಮಾಡಬೇಕಾದರೆ ಮೊದಲು ಮಣ್ಣನ್ನು ತರಬೇಕು. ನಂತರ ಉಳಿದ ಪರಿಕರ ಹಾಗೂ ಪ್ರಯತ್ನ. ಮಣ್ಣಿದ್ದರೆ ತಾನೆ ಮುಂದಿನ ಕೆಲಸ. ಆದುದರಿಂದ ಮಡಕೆಯನ್ನು ಮಾಡಬೇಕಾದರೆ ಮಣ್ಣು ಮೊದಲು ಬೇಕೆಂಬ ಅಂಶ ತಿಳಿಸಿದ್ದಾರೆ. ಹಾಗೆಯೇ ಒಡವೆಗಳನ್ನು ಮಾಡುವುದಾದರೆ ಮೊದಲು ಬಂಗಾರ ಬೇಕು. ಬಂಗಾರವಿದ್ದರೆ ತಾನೆ ತೊಡುಗೆಗಳನ್ನು ಅಕ್ಕಸಾಲಿಗ ಮಾಡಬಲ್ಲ. ಬಂಗಾರವನ್ನೇ ಕೊಡದೆ ತೊಡುಗೆ ಮಾಡೆಂದರೆ ಹೇಗೆ ತಾನೇ ಮಾಡಬಲ್ಲ. ಹಾಗೆಯೇ ಯಾರಿಗಾದರೂ ಶಿವಪಥವನ್ನು ಅರಿಯಬೇಕೆಂಬ ಆಸೆಯಿದ್ದರೆ, ಮೊದಲು ಅವರು ಗುರುಪಥವನ್ನು ಅರಿಯಬೇಕು. ಹಾಗೆಯೇ ಕೂಡಲಸಂಗಮನನ್ನು ಅರಿಯಬೇಕಾದರೆ ಶರಣರ ಸಂಗವನ್ನು ಮೊದಲು ಮಾಡಬೇಕು. ಏಕೆಂದರೆ ಶರಣರು ಲಿಂಗಾಂಗ ಸಾಮರಸ್ಯವನ್ನು ಅರಿತವರೂ, ದೇವರಲ್ಲಿ ಅಭೇದ್ಯರೂ ಆಗಿರುತ್ತಾರೆ. ಅವರ ಒಡನಾಟದಿಂದ ಸಂಗಮನಾಥನ ಬಗ್ಗೆ ನಮಗೆ ತಿಳಿಯಬೇಕಾದುದೆಲ್ಲವೂ ತಿಳಿಯುತ್ತದೆ ಎಂದಿದ್ದಾರೆ. ಆದುದರಿಂದ ಶಿವಪಥವನ್ನರಿಯಲು, ಕೂಡಲ ಸಂಗಮದೇವರನ್ನು ಅರಿಯಲು ಶರಣರ ಸಂಗಬೇಕು ಎಂದು ಬಸವಣ್ಣನವರು ಮಾರ್ಗ ಸೂಚಿಸಿದ್ದಾರೆ.

■

## ೧೧೧

ಮದ ಮತ್ಸರ ಬಿಡದು ಕನಲು ನಿಲ್ಲದು ಒಡಲಗುಣ ಹಿಂಗದು
ಇವು ಮೂರನು ಬಿಡದೆ ನಡೆಸುವನ್ನಕ್ಕ ಘನವ ಕಾಣಬಾರದು

ಘನವ ಕಾಂಬುದಕ್ಕೆ ಮದಮತ್ಸರವನೆ ಬಿಟ್ಟು, ಮನದ ಕನಲನೆ ನಿಲಿಸಿ
ಒಡಲ ಗುಣವನೆ ಹಿಂಗಿ ತಾ ಮೃಡರೂಪಾದಲ್ಲದೆ
ಘನವ ಕಾಣಬಾರದೆಂದನು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ

–ಲಿಂಗಮ್ಮ

ಲಿಂಗಮ್ಮ ಆತ್ಮಜ್ಞಾನದಲ್ಲಿ, ಆಧ್ಯಾತ್ಮ ಸಾಧನೆಯಲ್ಲಿ ಮುಂದುವರಿದ ಶರಣೆ. ಅವಳ ಹೆಚ್ಚು ವಚನಗಳು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಬೇಕಾದ ಅಥವಾ ಭಕ್ತ ಬದುಕಬೇಕಾದ ರೀತಿಯನ್ನು ವಿವರಿಸುತ್ತವೆ. ಈ ವಚನದಲ್ಲಿಯೂ ಆ ಮಹಾಂತನ ದರುಶನವಾಗಬೇಕಾದರೆ, ಮಾನವ ಹೇಗಿರಬೇಕೆಂಬುದನ್ನು ವಿವರಿಸಿದ್ದಾಳೆ.

ಮನುಷ್ಯನು ಪಂಚೇಂದ್ರಿಯಗಳಿಗೆ ಸಾಮಾನ್ಯವಾಗಿ ವಶ. ಪಂಚೇಂದ್ರಿಯಗಳನ್ನು ಉದಾತ್ತೀಕರಿಸಿ ತನ್ನ ಅಂಕಿತಕ್ಕೆ ಒಳಪಡಿಸಿಕೊಳ್ಳದಿದ್ದರೆ, ಒಡಲಗುಣಗಳಾದ ಮದ, ಹೊಟ್ಟೆಕಿಚ್ಚು, ಸಿಟ್ಟು, ರೋಷ, ದ್ವೇಷ, ಮೋಹ ಮುಂತಾದ ದುಷ್ಟ ಗುಣಗಳ ಹಿಡಿತಕ್ಕೆ ಒಳಗಾಗಿ, ಕೇಡಿಗನಾಗಿ ವರ್ತಿಸುತ್ತಾನೆ. ಅಹಂಕಾರ ದ್ವೇಷಭಾವನೆಯಿಂದ ಬೇರೆಯವರಿಗೆ ನೋವುಂಟುಮಾಡುತ್ತಾನೆ. ರೋಷದಿಂದ ಸಿಟ್ಟಿಗೇಳುತ್ತಾನೆ. ಕಾಯಗುಣಗಳಾದ ಮದ, ಮತ್ಸರ, ಕೋಪಗಳನ್ನು ತ್ಯಜಿಸದೆ ಬದುಕುವವನಿಗೆ ಪರಮಾತ್ಮನನ್ನು ಕಾಣಲಿಕ್ಕೆ ಸಾಧ್ಯವಿಲ್ಲ. ಆ ಪರಮಾತ್ಮನನ್ನು ಅರಿಯಬೇಕಾದರೆ ತನ್ನನ್ನಾವರಿಸಿರುವ ಮದ ಮತ್ಸರಗಳನ್ನು ಬಿಟ್ಟು, ಸಿಟ್ಟನ್ನು ಅಧೀನಕ್ಕೆ ತಂದುಕೊಂಡು, ಕಾಯಗುಣಗಳನ್ನು ಕಳೆದುಕೊಂಡು ತಾನೇ ಪರಮಾತ್ಮನ ಸಮನಾಗುವ ತನಕ ಆ ದಿವ್ಯಾತ್ಮ ಗೋಚರಿಸುವುದಿಲ್ಲ. ಆದುದರಿಂದ ಘನಸ್ವರೂಪನಾದ ಭಗವಂತನನ್ನು ಕಾಣಬೇಕಾದರೆ, ಮೊದಲು ಕಾಯದಗುಣಗಳನ್ನು ಕಳೆದುಕೊಂಡು ತಾನೇ ಮೃಡರೂಪನಾಗಬೇಕೆಂದು ಲಿಂಗಮ್ಮ ಮಾರ್ಗದರ್ಶನ ಮಾಡಿದ್ದಾಳೆ.

■

## ೧೧೨

ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ
ಇಂದ್ರಿಯಂಗಳೆಂಬ ಶಾಖೆಶಾಖೆಗೆ ಹಾರಿ
ವಿಷಯಂಗಳೆಂಬ ಹಣ್ಣು ಫಲಂಗಳ ಗ್ರಹಿಸಿ
ಭವದತ್ತಮುಖವಾಗಿ ಹೋಗುತಿದೆ ನೋಡಾ.
ಈ ಮನವೆಂಬ ಮರ್ಕಟನ ನಿಮ್ಮ ನೆನೆಹೆಂಬ ಪಾಶದಲಿ
ಕಟ್ಟಿ ಎನ್ನನುಳಿಹಿಕೊಳ್ಳಯ್ಯಾ ಅಖಂಡೇಶ್ವರಾ.

–ಷಣ್ಮುಖಸ್ವಾಮಿ

ಶರಣರೆಲ್ಲರೂ ಪಂಚೇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಬೇಕೆಂದು ಬೋಧಿಸಿದ್ದಾರೆ. ಇಲ್ಲದಿದ್ದಲ್ಲಿ ಶಿವಪಥವನ್ನು ಅರಸಿ ಹೋಗುವುದು ಅಸಾಧ್ಯ. ಮನುಷ್ಯನು ಪಂಚೇಂದ್ರಿಯಗಳ ಪ್ರಭಾವಕ್ಕೆ ಸಹಜವಾಗಿಯೇ ಒಳಗಾಗುತ್ತಾನೆ. ಆಗ ವಿಷಯಸುಖಗಳಿಗೆ ಪರವಶನಾಗಿ ಅನೇಕ ಕಷ್ಟಗಳಿಗೆ ಗುರಿಯಾಗುತ್ತಾನೆ. ಪಂಚೇಂದ್ರಿಯಗಳಿಗೆ ವಶವಾದ ಈ ದೇಹ, ಮನಸ್ಸು ಅಧ್ಯಾತ್ಮದ ಕಡೆಗೆ ವಾಲುವುದಿಲ್ಲ. ಆ ಬಗ್ಗೆ ಚಿಂತಿಸುವುದೂ ಸಹ ಇಲ್ಲವಾಗಿ ಅಂತಹ ಮನುಷ್ಯನಿಗೆ ಅರಿವು ಮೂಡುವುದು ಅಸಾಧ್ಯ. ಈ ಲೌಕಿಕ ಜೀವನಕ್ಕೆ ಜೋತುಬಿದ್ದ ಮನಸ್ಸನ್ನು ಈ ವಚನದಲ್ಲಿ ಮರ್ಕಟಕ್ಕೆ ಹೋಲಿಸಿದ್ದಾರೆ. ಈ ಹೋಲಿಕೆ ಅತ್ಯಂತ ವೈಶಿಷ್ಟ್ಯಪೂರ್ಣವೂ ಸೂಕ್ತವೂ ಆಗಿದೆ. ಏಕೆಂದರೆ ಮರ್ಕಟವು ಬಹಳ ಚಂಚಲ. ಅದಕ್ಕೆ ಗಳಿಗೆಗೆ ಒಂದು ಮನಸ್ಸು. ಈಗ ಇಲ್ಲಿದ್ದರೆ ಇನ್ನೊಂದು ಕ್ಷಣದಲ್ಲಿ ಮತ್ತೆಲ್ಲಿಗೋ ಹಾರುತ್ತದೆ. ಆದುದರಿಂದ ಅದು ಯಾವಾಗ ಏನು ಮಾಡುತ್ತದೆಯೆಂದು ಹೇಳಲು ಬರುವುದಿಲ್ಲ. ಅದೇ ರೀತಿ ಮಾನವನ ಮನಸ್ಸು ಮರ್ಕಟವಿದ್ದಂತೆ ಬಹು ಚಂಚಲ ಈ ಮನವೆಂಬ ಮರ್ಕಟ ತನುವೆಂಬ ಮರದಲ್ಲಿ ಅಡಗಿ ಕುಳಿತಿದೆ. ಅಲ್ಲಿಂದ ಇಂದ್ರಿಯಗಳೆಂಬ ದೇಹದ ಭಾಗಗಳಾದ ಪಂಚೇಂದ್ರಿಯಗಳಿಗೆ ಹಾರುತ್ತದೆ. ಮರ್ಕಟದಂತಹ ಮನಸ್ಸು ಇಂದ್ರಿಯಗಳಲ್ಲಿ ನಿರತವಾದಾಗ ಅದು ಆ ಮನುಷ್ಯನನ್ನು ವಿಷಯ ಸುಖಗಳಿಗೆ ಎಳಸುವಂತೆ, ಭೋಗ-ಭಾಗ್ಯಗಳಿಗೆ ಬಾಯ್ಬಿಡುವಂತೆ ಮಾಡುತ್ತದೆ. ಹಾಗೆ ಈ ಮನಸ್ಸೆಂಬ ಮರ್ಕಟ ಪಂಚೇಂದ್ರಿಯಗಳ ಸಹಕಾರದಿಂದ ಭವಜೀವನದ ಮೋಹ, ಪ್ರೇಮ, ಕಾಮ, ದ್ವೇಷ, ಸ್ವಾರ್ಥ ಮುಂತಾದ ವಿಷಯಂಗಳ ಫಲಗಳನ್ನು ತಿನ್ನುತ್ತಾ ಭವದತ್ತ ಎಂದರೆ ಭವಜೀವನದ ಕಡೆ ಹೋಗುತ್ತಿದೆ. ಇಂತಹ ವಿಷಯಗಳಿಂದ ಆಕರ್ಷಣೆಗೊಳ್ಳುವ ಮನಸ್ಸನ್ನು ಸದಾ ಅಂಕಿತದಲ್ಲಿ ಇಟ್ಟುಕೊಂಡು, ಅಧ್ಯಾತ್ಮದ ಕಡೆಗೆ ಮುಖಮಾಡುವಂತೆ ಮಾಡುವುದು ಅಷ್ಟು ಸುಲಭವಲ್ಲ. ಎಲ್ಲರಿಗೂ ಸಾಧ್ಯವಲ್ಲ. ಸಾಧಕರು, ಋಷಿಗಳು, ಶರಣರು ಎಲ್ಲರೂ ಇದಕ್ಕೆ ಹೋರಾಟ ನಡೆಸಿದ್ದಾರೆ. ಸಾಕ್ಷಾತ್ ಅಲ್ಲಮಪ್ರಭುಗಳೇ ಬ್ರಹ್ಮಜ್ಞಾನ ಸಂಪಾದಿಸಲು ಮೊದಲಿಂದಲೂ, ಆವಾಗಲೂ ಜಾಗರವಿದ್ದು ಸಸಿಯ ಸಲಹುತ್ತಿದ್ದೇನೆಂದು ಹೇಳಿದ್ದಾರೆ. ಹಾಗಿರುವಾಗ ಉಳಿದವರ ಪಾಡೇನು! ಆದ್ದರಿಂದ ಷಣ್ಮುಖಸ್ವಾಮಿಯೂ ಸಹ 'ಮರ್ಕಟನಂತೆ ಚಂಚಲಗೊಳ್ಳುತ್ತಿರುವ ನನ್ನ ಮನಸ್ಸನ್ನು ನಿನ್ನ ನೆನಹೆಂಬ ಹಗ್ಗದಲ್ಲಿ ಕಟ್ಟಿಟ್ಟುಕೊಂಡು ಚಂಚಲವಾಗಲು, ಭವಜೀವಕ್ಕೆ ಜೋತು ಬೀಳಲು ಹೋಗದಂತೆ ಕಟ್ಟಿಹಾಕು. ನನ್ನನ್ನು ಉಳಿಸು, ಕಾಪಾಡು' ಎಂದು ದೇವರನ್ನು ಬೇಡಿಕೊಂಡಿದ್ದಾನೆ.

ಈ ವಚನದಲ್ಲಿ ಷಣ್ಮುಖಸ್ವಾಮಿಯು ತನಗಾಗಿ ಬೇಡಿಕೊಂಡಿದ್ದರೂ ಈ ಪ್ರಾರ್ಥನೆ, ಈ ಹೋರಾಟ ಎಲ್ಲಾ ಮಾನವರಿಗೂ ಅನ್ವಯವಾಗುತ್ತದೆ.

■

೧೧೩

ಮರಮರ ಮಥನಿಸಿ ಕಿಚ್ಚುಹುಟ್ಟಿ
ಸುತ್ತಣ ತರುಮರಾದಿಗಳ ಸುಡಲಾಯ್ತು
ಆತ್ಮ, ಆತ್, ಮಥನಿಸಿ ಅನುಭಾವ ಹುಟ್ಟಿ
ಹೊದ್ದಿರ್ದ ತನುಗುಣಾದಿಗಳ ಸುಡಲಾಯ್ತು.
ಇಂತಪ್ಪ ಅನುಭಾವರ ಅನುಭಾವವ ತೋರಿ
ಎನ್ನ ಒಡಲನುಳುಹಿಕೊಳ್ಳಾ ಚನ್ನಮಲ್ಲಿಕಾರ್ಜುನಾ.

–ಅಕ್ಕಮಹಾದೇವಿ

ವೃಕ್ಷಗಳು ಒಂದನ್ನೊಂದು ತಿಕ್ಕಿಕೊಳ್ಳುವುದರಿಂದ ಅಲ್ಲಿ ಕಿಚ್ಚು ಉತ್ಪನ್ನವಾಗಿ, ಬೆಂಕಿ ಹತ್ತಿಕೊಳ್ಳುತ್ತದೆ. ಆ ಬೆಂಕಿಯು ಸುತ್ತಮುತ್ತಲಿರುವ ಗಿಡಮರಗಳಿಗೆ ವ್ಯಾಪಿಸಿ ಅವುಗಳನ್ನೆಲ್ಲಾ ಸುಟ್ಟು ಭಸ್ಮ ಮಾಡುತ್ತದೆ. ಅದೇ ರೀತಿ ಜ್ಞಾನಿಗಳಾದವರು, ಆಧ್ಯಾತ್ಮ ಹೃದಯಗಳು ಒಬ್ಬರಿಗೊಬ್ಬರು ವಿಷಯದ ಬಗ್ಗೆ ಚರ್ಚಿಸಿ, ಮಥನಿಸಿ ತಮ್ಮ ಅನುಭವಗಳಲ್ಲಿ ಆ ಚರ್ಚೆಯ ಫಲಿತಾಂಶವನ್ನು ಒರೆಗೆ ಹಚ್ಚಿ, ಒಂದು ರೀತಿಯ ಆಧ್ಯಾತ್ಮ ತತ್ವಜ್ಞಾನವನ್ನು ಕಂಡುಹಿಡಿದುಕೊಳ್ಳುತ್ತಾರೆ. ಆ ಸತ್ಯಶೋಧನೆ ಅಜ್ಞಾನವನ್ನು ನಾಶಮಾಡಿ ದಿವ್ಯಜ್ಞಾನವನ್ನುಂಟುಮಾಡುತ್ತದೆ. ಹಾಗೆ ಹುಟ್ಟಿದ ದಿವ್ಯಜ್ಞಾನವು ಪಂಚೇಂದ್ರಿಯಗಳಿಂದ ಹುಟ್ಟಿದ ತನುಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ ಮುಂತಾದ ದುಷ್ಟ ಸ್ವಭಾವಗಳನ್ನು ಸುಟ್ಟು ನಾಶಮಾಡುತ್ತದೆ. ಆದುದರಿಂದ ಚನ್ನಮಲ್ಲಿಕಾರ್ಜುನನೇ ನನಗೆ ಅಂತಹ ಅನುಭಾವಿಗಳ ಸಂಗವು ದೊರೆತು ಅವರು ಆತ್ಮಮಂಥನದಿಂದ ಕಂಡುಹಿಡಿದ ಅನುಭಾವ ಸತ್ಯವು ನನ್ನಲ್ಲಿರುವ ದೋಷಗಳನ್ನು ನಾಶಮಾಡುವಂತೆ, ನಾನು ನಿನ್ನವಳಾಗಿ ಉಳಿಯುವಂತಹ ಗುಣಗಳುಳ್ಳ ವಾಗಿರುವಂತೆ ಕಾಪಾಡು ಎಂದು ಮೊರೆ ಇಟ್ಟಿದ್ದಾಳೆ ಅಕ್ಕಮಹಾದೇವಿ.

■

೧೧೪

ಮನೆಮನೆದಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ
ಬೇಡಿದರೆ ಇಕ್ಕದಂತೆ ಮಾಡಯ್ಯ
ಇಕ್ಕಿದಡೆ ನೆಲಕ್ಕೆ ಬೀಳುವಂತೆ ಮಾಡಯ್ಯ

ನೆಲಕ್ಕೆ ಬಿದ್ದಡೆ ನಾನೆತ್ತಿಕೊಂಬುದಕ್ಕೆ ಮುನ್ನವೆ
ಶುನಿ ಎತ್ತಿಕೊಂಬಂತೆ ಮಾಡಾ ಚನ್ನಮಲ್ಲಿಕಾರ್ಜುನಾ.

–ಅಕ್ಕಮಹಾದೇವಿ

ಮನುಷ್ಯರನ್ನು ದೇವರು ಸುಖವಾಗಿಟ್ಟುಬಿಟ್ಟರೆ, ತನ್ನನ್ನು ಸೃಷ್ಟಿಸಿದ ದೇವರನ್ನೇ ಮರೆತುಬಿಡುತ್ತಾರೆ. ಎಲ್ಲವೂ ತಮ್ಮ ಮನಸ್ಸಿನಂತೆ ಇದ್ದಾಗ ದೇವರನ್ನು ನೆನೆಯುವವರು ಅಪರೂಪ. ಸಂಕಟಬಂದಾಗ ವೆಂಕಟರಮಣ ಎಂಬಂತೆ ಕಷ್ಟಬಂದಾಗ ನೆನಪು ಬರುತ್ತದೆ. ಪರಿಹಾರ ಕಾಣದಿದ್ದಾಗ ಭಕ್ತಿ ತೀವ್ರವಾಗುತ್ತದೆ. ತಾನು ಎಷ್ಟೇ ಪ್ರಯತ್ನಪಟ್ಟರೂ ಎಷ್ಟೇ ಎಚ್ಚರಿಕೆ ವಹಿಸಿದರೂ ನೆರವೇರದಿದ್ದಾಗ, ತನ್ನ ಶಕ್ತಿಗೆ ಮೀರಿದುದು ಬೇರೆ ಇದೆ ಎಂಬ ಅರಿವಾಗುತ್ತದೆ. ಹಗಲಿರುಳು ಹೋರಾಡಿದರೂ, ಏನೆಲ್ಲಾ ಮಾಡಿದರೂ ಕೈಮಿರಿ ಹೋದಾಗ, ಪ್ರಯತ್ನಗಳು ಮೇಲಿಂದ, ಮೇಲೆ ವಿಫಲವಾದಾಗ ಈ ಜಗತ್ತಿನ ನಶ್ವರತೆಯ ಬಗ್ಗೆ, ಮರ್ತ್ಯಲೋಕದ ಜಂಝಾಟದ ಬಗ್ಗೆ ಅರಿವು ಮೂಡಲು ಪ್ರಾರಂಭವಾಗುತ್ತದೆ. ಶಾಶ್ವತ ಯಾವುದು ಅಶಾಶ್ವತ ಯಾವುದು? ಸುಖ ಯಾವುದು ದುಃಖ ಯಾವುದು? ಯಾವುದಕ್ಕಾಗಿ ಹಂಬಲಿಸಬೇಕು? ಯಾವುದರ ಹಂಬಲ ಬಿಡಬೇಕು ಎಂಬ ಬಗ್ಗೆ ಮನಸ್ಸು ವಿಚಾರ ಮಾಡತೊಡಗುತ್ತದೆ. ಅದಕ್ಕಾಗಿ ಅಕ್ಕಮಹಾದೇವಿ, ನಿರಾಸೆಗಳ ಮೇಲೆ ನಿರಾಸೆಯನ್ನು ಉಂಟುಮಾಡು. ಬೇಕಾದುದು ಕೈಗೂಡದೆ ಇರಲಿ ನಿನ್ನ ಕಡೆಗೆ ಮನಸ್ಸು ತಿರುಗಿಸುವಂತಾಗಲಿ ಎಂದು ಮಲ್ಲಿಕಾರ್ಜುನನನ್ನು ಪ್ರಾರ್ಥಿಸಿದ್ದಾಳೆ.

ಮಹಾದೇವಿಯು, 'ದೇವರೇ' ನನಗೆ ಗತಿ ಇಲ್ಲದಂತೆ ಮಾಡಿ ಮನೆ–ಮನೆಯ ಮುಂದೆ ಕೈಯೊಡ್ಡಿ ಬೇಡುವಂತೆ ಮಾಡು. ನಾನು ಬೇಡಿದಾಗ ಯಾರೂ ನೀಡದಂತೆ ಮಾಡಿ, ಹಸಿವೆಯಿಂದ ಸಂಕಟಪಡುವಂತೆ ಮಾಡು. ಅಕಸ್ಮಾತ್ ಯಾರಾದರೂ ನೀಡಿದರೂ ಸಹ ಅದು ಚೆಲ್ಲಿ ನೆಲಕ್ಕೆ ಬೀಳುವಂತೆ ಮಾಡು. ಹಸಿವೆಯನ್ನು ತಾಳಲಾರದೆ ನೆಲಕ್ಕೆ ಬಿದ್ದಿದ್ದನ್ನು ಎತ್ತಿಕೊಳ್ಳುವಂತೆ ಮಾಡು. ಆಗಲೂ ನಾನು ಎತ್ತಿಕೊಳ್ಳುವ ಮೊದಲೇ ನಾಯಿ ಬಂದು ತಿಂದು ನನಗೆ ಸಿಗದಂತೆ ಮಾಡು. ಹಾಗೆ ಮಾಡಿ ನಾನು ಸಂಪೂರ್ಣ ಅಸಹಾಯಕಳಾಗಿ, ನಿನ್ನ ಬಳಿಗೆ ಬರುವಂತೆ ಮಾಡು. ಹಾಗೆ ಮಾಡಿ ನಾನು ನಿನ್ನನ್ನೇ ನಂಬುವಂತೆ ಮಾಡು. ನಿನ್ನನ್ನೇ ಹಂಬಲಿಸಿ ಪ್ರಾರ್ಥಿಸುವಂತೆ ಮಾಡು ಎಂದು ಬೇಡಿಕೊಂಡಿದ್ದಾಳೆ.

ಈ ವಚನದಿಂದ ನಾವು ಕಷ್ಟಬಂದಾಗ, ನಮ್ಮ ಮನದಿಚ್ಛೆ ಪೂರೈಸದಿದ್ದಾಗ, ಇದು ನಮ್ಮ ಒಳಿತಿಗೇ ಬಂದಿದೆ. ಒಳಿತಾಗಿ ಬಾಳದಿದ್ದರೆ ದೇವರನ್ನು ಮರೆತು, ಈ ಪಂಚೇಂದ್ರಿಯ ಸುಖಗಳಲ್ಲಿ ಮುಳುಗಿ ಅಹಂಕಾರಿಗಳಾಗುತ್ತಿದ್ದೆವು. ಕಷ್ಟಕೊಟ್ಟು

ದೇವರು ನಮ್ಮನ್ನು ಸಜ್ಜನರನ್ನಾಗಿಸಿ ತನ್ನಕಡೆಗೆ ಬರಮಾಡಿಕೊಳ್ಳುತ್ತಿದ್ದಾನೆಂಬ ಭಾವದಿಂದ ಸಂತೋಷದಿಂದ ಬದುಕುವುದನ್ನು ಕಲಿಯಬೇಕು ಎಂಬ ಅಂಶವನ್ನು ಅರಿಯಬೇಕು.

■

## ೧೧೫

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲಸಂಗಮದೇವಾ

–ಬಸವಣ್ಣ

ಸಾಮಾನ್ಯವಾಗಿ ಜನರಲ್ಲಿ ಮರ್ತ್ಯವೆಂಬುದು ಜಂಝಾಟದ, ನರಕ ಸದೃಶವಾದ ಜೀವನವನ್ನು ಒಳಗೊಂಡದ್ದು ಎಂಬ ಭಾವನೆ ಇದೆ. ಹಾಗಾಗಿ ಅನೇಕರು ಇದನ್ನು ತೊರೆದು ತಿರಸ್ಕರಿಸಿ, ಸ್ವರ್ಗಪ್ರಾಪ್ತಿಗಾಗಿ, ದೇಹದಂಡನೆ, ಪೂಜೆ, ವ್ರತ, ತಪಸ್ಸು, ಮುಂತಾದವುಗಳನ್ನು ಮಾಡುತ್ತಾರೆ. ಅಂತಹವರನ್ನು ಕುರಿತು ಬಸವಣ್ಣನವರು, ನಾವು ಹುಟ್ಟಿ ವಾಸಿಸುತ್ತಿರುವ ಈ ಮರ್ತ್ಯ ಲೋಕವೆಂಬುದೇನೂ ಬೇರಲ್ಲ. ಇದನ್ನೂ ಸಹ ಆ ಕರ್ತಾರನಾದ ದೇವರೇ ಸೃಷ್ಟಿಸಿದ್ದಾನೆ. ಇದು ಅವನು ಸೃಷ್ಟಿಸಿರುವ ಕಮ್ಮಟ. ಈ ಕಾರ್ಯಾಗಾರದಲ್ಲಿ ಮಾನವರಿಗೆ ಅನೇಕ ರೀತಿಯ ಕೆಲಸಗಳನ್ನು ಒಪ್ಪಿಸಿದ್ದಾನೆ. ಪ್ರತಿಯೊಬ್ಬರೂ ತಮ್ಮ ತಮ್ಮ ಜವಾಬ್ದಾರಿಯನ್ನು ಅತ್ಯಂತ, ದಕ್ಷತೆಯಿಂದ, ನಿಷ್ಠೆಯಿಂದ, ಪ್ರಾಮಾಣಿಕವಾಗಿ ಮಾಡಬೇಕು. ಹಾಗೆ ಮಾಡಿ ಇಲ್ಲಿ ಎಲ್ಲರಿಗೂ ಬೇಕಾದವರಾಗಿ ಬಾಳಬೇಕು. ಇಲ್ಲಿ ಯಾರು ಸಲ್ಲುವಂತೆ ಬಾಳುತ್ತಾರೋ ಅಂಥವರು ಅಲ್ಲಿಯೂ ಸಲ್ಲುತ್ತಾರೆ ಎಂದರೆ ಬೇಕಾದವರಾಗುತ್ತಾರೆ. ಇಲ್ಲಿ ಯಾರಿಗೂ ಬೇಡದವರಾಗಿ ಬಾಳಿದರೆ, ಅಲ್ಲಿಯೂ ಬೇಡದವರಾಗುತ್ತಾರೆ. ಆದ್ದರಿಂದ ಕರ್ತಾರನ ಕಮ್ಮಟವಾದ ಮರ್ತ್ಯದಲ್ಲಿ ಎಲ್ಲರಿಗೂ ಬೇಕಾಗಿ ಬದುಕಬೇಕು. ಇದನ್ನು ತಿರಸ್ಕರಿಸಬಾರದು ಮತ್ತು ಇಲ್ಲಿ ಬೇಡದವರಾಗಿ ಬದುಕಬಾರದು. ಬೇಕಾದವರಾಗುವ ರೀತಿಯಲ್ಲಿ ಜೀವಿಸಬೇಕು. ಆಗ, ಅಂಥವರು ಪರಮಾತ್ಮನಿಗೆ ಪ್ರಿಯರಾಗುತ್ತಾರೆ ಎಂಬ ಮಾತನ್ನು ಬಸವಣ್ಣನವರು ಈ ವಚನದ ಮೂಲಕ ಸಾರಿದ್ದಾರೆ.

■

೧೧೬

ಮನವ ನಿರ್ಮಲ ಮಾಡ್ವೆನೆಂದು
ತನುವ ಕರಗಿಸಿ, ಮನವ ಬಳಲಿಸಿ, ಕಳವಳಿಸಿ,
ಕಣ್ಣುಕಾಣದ ಅಂಧಕರಂತೆ, ಮುಂದುಗಾಣದೆ
ಸಂದೇಹದಲ್ಲಿ ಮುಳುಗಿರುವ ಮನುಜರಿರಾ
ನೀವು ಕೇಳಿರೋ ಹೇಳಿಹೆನು
ಮನವ ನಿರ್ಮಲವ್ ಮಾಡೆ ಆ ಘನವ ಕಾಂಬುದಕ್ಕೆ
ಆ ಮನವೆಂತಾಗಬೇಕೆಂದಡೆ
ಗಾಳಿ ಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ
ಬೆಳಗಿದ ದರ್ಪಣದಂತೆ, ಮನ ನಿರ್ಮಲವಾದಲ್ಲದೆ
ಆ ಮಹಾಘನವ ಕಾಣಲಾಗದೆಂದರು
ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ

–ಲಿಂಗಮ್ಮ

**ಹ**ಡಪದ ಅಪ್ಪಣ್ಣ ಬಸವಣ್ಣನವರ ನಂಬುಗೆಯ ಶರಣ. ಅಪ್ಪಣ್ಣನದು ಶರಣಸಂಕುಲದಲ್ಲಿ ಎದ್ದು ಕಾಣುವ ಹೆಸರು. ಅವರ ಪತ್ನಿ ಹಡಪದ ಲಿಂಗಮ್ಮ. ಆಕೆಯೂ ಪತಿಯಂತೆಯೇ ಆಧ್ಯಾತ್ಮ ಜೀವನದಲ್ಲಿ ಬಹಳ ಮುಂದುವರಿದವಳು. ಬಸವ ಮಾರ್ಗದಲ್ಲೇ ನಡೆಯುತ್ತಿದ್ದ ಮಹಾಶಿವಶರಣೆ. ಅನೇಕರು ದೇವರನ್ನು ಒಲಿಸಿಕೊಳ್ಳಬೇಕೆಂಬ ಹಂಬಲವುಳ್ಳವರಾಗಿ, ಆ ಸಾಧನೆಯ ಮಾರ್ಗದಲ್ಲಿ ಮನಸ್ಸನ್ನು ಪರಿಶುದ್ಧಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಬಸವಮಾರ್ಗದ ಪರಿಚಯವಿಲ್ಲದವರು ಮನವನ್ನು ಪವಿತ್ರಗೊಳಿಸಿಕೊಳ್ಳಲು, ವ್ರತ, ಉಪವಾಸ ಮುಂತಾದ ಆಚರಣೆಗಳಿಂದ ದೇಹವನ್ನು ದಂಡಿಸಿ, ಮನಸ್ಸು ಬಳಲುವಂತೆ ಮಾಡಿ, ಹಾಗೂ ಮನಸ್ಸು ಪರಿಶುದ್ಧವಾಗದಿರಲು ಕಳವಳಗೊಂಡು ಕಣ್ಣುಕಾಣದ ಕುರುಡರಂತೆ ಮುಂದಿನ ಮಾರ್ಗಕಾಣದೆ ಸಂದೇಹದಲ್ಲಿ ಮುಳುಗಿದ ಜನರನ್ನು ಕುರಿತು ಲಿಂಗಮ್ಮ ಹೇಳುತ್ತಾಳೆ. ಈ ಘನವಂತನಾದ ಪರಮಾತ್ಮನನ್ನು ಕಾಣಲು, ಹೀಗೆ ದೇಹವನ್ನು ದಂಡಿಸಬೇಕಿಲ್ಲ. ಮನಸ್ಸನ್ನು ಬಳಲಿಸಬೇಕಿಲ್ಲ. ಆ ಮಹಾಘನವನ್ನು ಕಾಣಲು ಮನಸ್ಸನ್ನು ನಿರ್ಮಲಗೊಳಿಸಬೇಕು. ಆ ನಿರ್ಮಲಗೊಂಡ ಮನಸ್ಸು ಹೇಗಿರಬೇಕೆಂದರೆ, ಗಾಳಿಬೀಸದೆ ಇರುವಾಗ ಕೊಳದ ನೀರು ಹೇಗೆ ಅಲುಗದೆ ಸ್ಥಿರವಾಗಿರುತ್ತದೋ ಪಾರದರ್ಶಕವಾಗಿರುತ್ತದೊ ಹಾಗೆ ಸ್ಥಿರವಾಗಿಯೂ ಮುಚ್ಚುಮರೆ

ಇಲ್ಲದೆ ಸ್ವಚ್ಛವಾಗಿಯೂ ಇರಬೇಕು. ಮೋಡವಿಲ್ಲದಾಗ ಸೂರ್ಯನು ಹೇಗೆ ಪ್ರಕಾಶಮಾನವಾಗಿರುತ್ತಾನೋ ಹಾಗೆ ಶುದ್ಧವಾಗಿ ಪ್ರಕಾಶಮಾನವಾಗಿರಬೇಕು. ತೊಳೆದು ಸ್ವಚ್ಛವಾದ ಕನ್ನಡಿಯ ನೋಡಿಕೊಂಡವರಲ್ಲಿ ಮುಖವು, ಇದ್ದುದು ಇದ್ದಂತೆ ಕಾಣಿಸುತ್ತದೆಯೋ ಹಾಗೆ, ಒಳಹೊರಗೆ ಒಂದಾಗಿರಬೇಕು. ಅಷ್ಟರಮಟ್ಟಿಗೆ ಮನಸ್ಸು ನಿರ್ಮಲವಾದಾಗ ಮಾತ್ರ ಆ ಘನವು ನಮ್ಮ ಕಣ್ಣಿಗೆ ಕಾಣಿಸುತ್ತದೆ, ಇಲ್ಲದಿದ್ದರೆ ಕಾಣಲು ಸಾಧ್ಯವಿಲ್ಲ ಎಂದಿದ್ದಾಳೆ.

ಲಿಂಗಮ್ಮನು ತನ್ನ ವಚನದ ಅಂಕಿತವನ್ನಾಗಿ ಬೇರೆ ದೇವರ ಹೆಸರನ್ನೇ ಇಟ್ಟುಕೊಂಡಿಲ್ಲ. ನಿಜವಾದ ಶರಣನೇ ದೇವರು ಎಂಬ ವೀರಶೈವ ಸಿದ್ಧಾಂತವನ್ನು ನಂಬಿ ತನ್ನ ಪತಿ ಅಪ್ಪಣ್ಣನಿಗೆ ಪ್ರಿಯನಾದ ಶರಣಶ್ರೇಷ್ಠನಾದ ಚನ್ನಬಸವಣ್ಣನನ್ನೇ ದೇವರೆಂದು ಭಾವಿಸಿ, 'ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ' ಎಂಬ ಅಂಕಿತವನ್ನಿಟ್ಟುಕೊಂಡಿದ್ದಾಳೆ.

■

## ೧೧೭

ಮಣಿಯನೆಣಿಸಿ ದಿನವಕಳೆಯಲು ಬೇಡ
ಕಣಿಯ ಪೂಜಿಸಿ ದಿನವ ಕಳೆಯಲು ಬೇಡ
ಕ್ಷಣವಾದರೂ ನಿಜದ ನೆನಹೇ ಸಾಕು
ಕ್ಷಣದೊಳಗಣ ಅರ್ಧವಾದರೂ ನಿಜದ ನೆನಹೇ ಸಾಕು
ಬೆಂಕಿಯೊಳಗುಳ್ಳಾ ಬಿಸಿ ನೀರೊಳಗುಂಟೇ ಗುಹೇಶ್ವರ.

–ಅಲ್ಲಮಪ್ರಭು

ಮನಸ್ಸನ್ನು ಶುದ್ಧಗೊಳಿಸಿಕೊಳ್ಳದೆ ಕೇವಲ ಬಾಹ್ಯಾಡಂಬರದಿಂದ, ಬಾಹ್ಯವಾದ ಆಚರಣೆಗಳಾದ ಜಪ, ತಪ, ಪೂಜೆ, ವ್ರತ, ಉಪವಾಸ ಮಾಡುವುದರಿಂದ ಪ್ರಯೋಜನವಿಲ್ಲ. ಕೇವಲ ಒಂದು ಕ್ಷಣ ಅದೂ ಆಗದಿದ್ದರೆ ಅರ್ಧಕ್ಷಣ ಪರಿಪೂರ್ಣ ಮನಸ್ಸಿನಿಂದ ತದೇಕ ಚಿತ್ತನಾಗಿ ಆ ಸತ್ಯಮೂರ್ತಿಯಾದ ಭಗವಂತನನ್ನು ನೆನೆದರೆ ಸಾಕು ಎಂಬ ಮಾತನ್ನು ಎಲ್ಲಾ ಶರಣರೂ ಅನೇಕ ವಚನಗಳಲ್ಲಿ ನಾನಾ ರೂಪದಿಂದ ತಿಳಿಯಪಡಿಸಿದ್ದಾರೆ.

ಈ ವಚನದಲ್ಲಿಯೂ ಸಹ ಅಲ್ಲಮಪ್ರಭುದೇವರು, ಮನಸ್ಸನ್ನು ಎಲ್ಲಿಯೋ ಹರಿಬಿಟ್ಟು, ಕೈಯಲ್ಲಿ ಜಪಮಾಲೆ ಹಿಡಿದು ಸಮಯ ಕಳೆಯಬೇಡ, ದಿನವೂ ಪೂಜೆ ಮಾಡುತ್ತಾ ವೇಳೆ ಸವೆಸುವ ಅಗತ್ಯವಿಲ್ಲ. ನಿಶ್ಚಲ ಮನಸ್ಸಿನಿಂದ ಭಗವಂತನನ್ನು ಧ್ಯಾನಿಸದ ಜಪ, ತಪ, ಪೂಜೆಗಳು ಸಮಯದ ಅಪವ್ಯಯ ಅಷ್ಟೆ. ಬಿಸಿ ಬೇಕಾದರೆ

ಬೆಂಕಿಯಲ್ಲಿ ಅರಸಬೇಕಲ್ಲದೆ, ನೀರಲ್ಲಿ ಹುಡುಕಿದರೆ ಸಿಗುವುದಿಲ್ಲ. ಹಾಗೆಯೇ ದೇವರ ಕೃಪೆ ಬೇಕಾದರೆ ಒಂದು ಕ್ಷಣ, ಇಲ್ಲದಿದ್ದಲ್ಲಿ ಕೊನೆಗೆ ಅರೆಕ್ಷಣವಾದರೂ ಈ ಚಂಚಲ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಸ್ಥಿರ ಮನಸ್ಸಿನಿಂದ ಪ್ರಾರ್ಥಿಸಿದರೆ ಸಾಕು. ಬಿಸಿಯನ್ನು ನೀರಲ್ಲಿ ಹುಡುಕುವಂತೆ ಜಪ, ತಪ, ಪೂಜೆಗಳನ್ನು ಯಾಂತ್ರಿಕವಾಗಿ ಮಾಡುವ ಮೂಲಕ ದೇವರನ್ನು ಹುಡುಕಿದರೆ ದೊರೆಯುವುದಿಲ್ಲ.

ನೀರಲ್ಲಿ ವಿದ್ಯುಚ್ಛಕ್ತಿ ಉಂಟು. ಆದರೆ ಅದಕ್ಕೆ ಬೇಕಾದ ರೀತಿಯ ವ್ಯವಸ್ಥೆಯ ಮೂಲಕ ಪಡೆಯಬಹುದು. ಆದರೆ ನೀರಲ್ಲಿ ನೇರವಾಗಿ ಬಿಸಿ ಸಿಗುವುದಿಲ್ಲ. ಆದರೆ ಬೆಂಕಿಯಲ್ಲಿ ನೇರವಾಗಿ ಬಿಸಿ ಸಿಗುತ್ತದೆ. ಹಾಗೆಯೇ ಸುತ್ತು ಬಳಸು ಮಾರ್ಗವಾದ ಜಪ, ತಪ, ಪೂಜೆಗಳನ್ನು ಬಿಟ್ಟು, ದೃಢ ಮನಸ್ಸಿನಿಂದ ಪರಿಶುದ್ಧ ಭಾವನೆಯಿಂದ ನಿಶ್ಚಲವಾದ ಹೃದಯದಿಂದ ಭಗವಂತನನ್ನು ಸ್ಥಿರಚಿತ್ತದಿಂದ ಕ್ಷಣಮಾತ್ರ ಧ್ಯಾನಿಸಿದರೂ ಸಾಕು. ಭಗವಂತನ ಸಾಕ್ಷಾತ್ಕಾರ ಸಾಧ್ಯ ಎಂಬ ಸತ್ಯವನ್ನು ಅಲ್ಲಮಪ್ರಭುಗಳು ಈ ವಚನದ ಮೂಲಕ ನಮಗೆ ಮನದಟ್ಟು ಮಾಡಿದ್ದಾರೆ.

■

## ೧೧೮

ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವವಲ್ಲದೆ
ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತರಿಗೆ ಎತ್ತನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು
ಮಾರಯ್ಯಪ್ರಿಯ ಅಮರೇಶ್ವರಲಿಂಗದ ಸೇವೆಯುಳ್ಳನ್ನಕ್ಕ?

–ಆಯ್ದಕ್ಕಿ ಲಕ್ಕಮ್ಮ

ಆಯ್ದಕ್ಕಿ ಲಕ್ಕಮ್ಮನು ತನ್ನ ಪತಿ ಆಯ್ದಕ್ಕಿ ಮಾರಯ್ಯನವರಿಗೆ ಈ ವಚನವನ್ನು ಹೇಳಿರುವರಾದರೂ, ಸದ್ಭಕ್ತರಾಗಿದ್ದ ಪಕ್ಷದಲ್ಲಿ ಸತ್ಯಶುದ್ಧ ಕಾಯಕ ಮಾಡಿಕೊಂಡು ಬದುಕಿದರೆ ಹಣಕ್ಕೆ ಅವಶ್ಯಕವಿದ್ದಾಗ ಕೊರತೆಯಾಗುವುದಿಲ್ಲ ಎಂಬ ಬೋಧೆಯ ಮಾತು ಸರ್ವರಿಗೂ ಇಲ್ಲಿ ಸಲ್ಲುತ್ತದೆ.

ಒಂದು ದಿನ ಮಾರಯ್ಯನವರು ತಮಗೆ ಬೇಕಾದುದಕ್ಕಿಂತ ಹೆಚ್ಚಿನ ಅಕ್ಕಿಯನ್ನು ಕಾಯಕದಿಂದ ತಂದರು, ಇದು ಶರಣತತ್ವಕ್ಕೆ ವಿರೋಧವೆಂದು ಅರಿತ ಲಕ್ಕಮ್ಮ, ಹೆಚ್ಚಿನದನ್ನು ಅಲ್ಲಿಯೇ ಸುರಿದು ಬರಲು ಹೇಳುತ್ತಾಳೆ. ಆಗ ಮಾರಯ್ಯ 'ಶರಣರಿಗೆ ಒಂದು ದಿನ ಆರೋಗಣೆಗೆ ಕರೆಯಬೇಕೆಂಬ ಆಸೆ ಇದೆ. ನಮಗೆ ಬೇಕಾದಷ್ಟನ್ನೇ ತಂದರೆ, ಆ ಆಸೆ ತೀರುವುದು ಹೇಗೆ' ಎಂದಾಗ, ಬೇರೆಯವರು ದುಡಿದದ್ದನ್ನು

ತಂದು ಆರೋಗಣೆ ಮಾಡುವುದೂ ಸರಿಯಲ್ಲ. ನೀನು ಅದನ್ನು ಮೊದಲಿದ್ದಲ್ಲೇ ಸುರಿದು ಬಸವಣ್ಣ, ಪ್ರಭು ಮೊದಲಾದ ಶರಣರಿಗೆ ಆರೋಗಣೆಗೆ ಆಹ್ವಾನಿಸಿ ಬನ್ನಿ ಎನ್ನುತ್ತಾಳೆ. ಇದನ್ನು ಕೇಳಿ ಮಾರಯ್ಯ ಗಾಬರಿಯಾಗುತ್ತಾರೆ. ಬಡತನದಲ್ಲಿರುವ ನಾವು ಅಂತಹ ಮಹಾ ಶರಣರನ್ನೆಲ್ಲಾ ಕರೆದರೆ, ಹೇಗೆ ಮಾಡುತ್ತಿ? ಸುಮ್ಮನೆ ಕರೆದು ನಾಚಿಕೆಗೇಡಾಗಬಾರದು ಎಂದ ಸಂದರ್ಭದಲ್ಲಿ ಹೇಳಿದ ವಚನವಿದೆಂದು ತೋರುತ್ತದೆ. ಯಾವ ವ್ಯಕ್ತಿಗೆ ಮನಃಶುದ್ಧಿ ಇರುವುದಿಲ್ಲವೋ ಅವನಿಗೆ ದ್ರವ್ಯದ ಬಡತನ. ಪರಿಶುದ್ಧಮನಸ್ಸಿನಿಂದ ಸತ್ಯ ಶುದ್ಧ ಕಾಯಕ ಮಾಡುವ ಸದ್ಭಕ್ತನಿಗೆ ಎತ್ತ ನೋಡಿದತ್ತ ಐಶ್ವರ್ಯ ಬಂದು ಬೀಳುತ್ತದೆ. ದೇವರ ಸೇವೆಯನ್ನು ನಾವು ಭಕ್ತಿಯಿಂದ ಮಾಡುವವರೆಗೆ ನಮಗೆ ಯಾರ ಭಯವೂ ಇಲ್ಲ. ಹಣದ ಕೊರತೆಯೂ ಇರುವುದಿಲ್ಲ. ಅವರನ್ನೆಲ್ಲಾ ಕರೆದು ಬನ್ನಿ ಎನ್ನುತ್ತಾಳೆ. ಈ ವಚನದ ಸತ್ಯವನ್ನು ಮಹಿಮರಾದ ಸ್ವಾಮಿಗಳು ಕೈಕೊಂಡ ಅನೇಕ ಸತ್ಕಾರ್ಯಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಮಹಿಮಾನ್ವಿತರಾದ ಸತ್ಪುರುಷರು ಬರೀ ಕೈಲಿ ಸತ್ಕಾರ್ಯ ಪ್ರಾರಂಭಿಸುತ್ತಾರೆ. ಹಣ ಎಲ್ಲಿಂದಲೋ ಬಂದು ಕೂಡಿ, ಕೆಲಸ ಸರಾಗವಾಗಿ ನಡೆದು ಹೋಗುತ್ತದೆ. ಇದಕ್ಕೆ ಅವರ ಶುದ್ಧ ಉದ್ದೇಶ, ಸದ್ಭಾವನೆ, ನಿಸ್ವಾರ್ಥ ಭಾವನೆ ತತ್ವಬದ್ಧ ಜೀವನವೇ ಕಾರಣ. ಆದುದರಿಂದ ಏನೇ ಕಷ್ಟ ಬಂದರೂ ನ್ಯಾಯಮಾರ್ಗ ಬಿಡದೆ ಭಗವಂತನಲ್ಲಿ ಶ್ರದ್ಧಾ ಭಕ್ತಿಗಳಿಂದ ಶುದ್ಧ ಜೀವನ ನಡೆಸಿದರೆ, ಮನಸ್ಸು ಕಷ್ಟಗಳಿಂದ ಪಾರಾಗುವುದರಲ್ಲಿ ಸಂಶಯವಿಲ್ಲ. ಹಣದ ಕೊರತೆ ಕಾಣುವುದಿಲ್ಲ ಎಂಬುದು ಈ ವಚನದ ಸಾರ.

■

## ೧೧೯

ಮರವಿದ್ದು ಫಲವೇನು? ನೆರಳಿಲ್ಲದನ್ನಕ್ಕ?
ಧನವಿದ್ದು ಫಲವೇನು? ದಯವಿಲ್ಲದನ್ನಕ್ಕ?
ಹಸುವಿದ್ದು ಫಲವೇನು? ಹಯನಿಲ್ಲದನ್ನಕ್ಕ?
ರೂಪಿದ್ದು ಫಲವೇನು? ಗುಣವಿಲ್ಲದನ್ನಕ್ಕ?
ಅಗಲಿದ್ದು ಫಲವೇನು? ಬಾನವಿಲ್ಲದನ್ನಕ್ಕ?
ನಾನಿದ್ದು ಫಲವೇನು? ನಿಮ್ಮ ಜ್ಞಾನವಿಲ್ಲದನ್ನಕ್ಕ ಚನ್ನಮಲ್ಲಿಕಾರ್ಜುನಾ?

–ಅಕ್ಕಮಹಾದೇವಿ

ಒಂದು ಮರವಿದ್ದರೆ ಜನರು ಬಿಸಿಲಿನಿಂದ, ಮಳೆಯಿಂದ ರಕ್ಷಿಸಿಕೊಳ್ಳಲು ಅದರ ನೆರಳಿಗೆ ಯಾರು ಹೋಗುತ್ತಾರೆ. ಆದರೆ ಮರ ನೆರಳೇ ಕೊಡದಂತಹುದಾದರೆ

ಆ ಮರದ ಸಮೀಪ ಯರೂ ಹೋಗುವುದಿಲ್ಲ. ಆ ಮರದ ಇರುವಿಕೆ ನಿಷ್ಪ್ರಯೋಜಕ. ಹಾಗೆಯೇ ಐಶ್ವರ್ಯವಂತನು ಸಾಕಷ್ಟು ಧನವುಳ್ಳವನಾಗಿರುತ್ತಾನೆ. ಅವನಿಗೆ ದಯೆ ಇದ್ದರೆ – ದಯಾಪರನಾಗಿದ್ದರೆ, ಕಷ್ಟ, ನಷ್ಟಗಳಿಗೆ ಗುರಿಯಾದವರನ್ನು ನೋಡಿ, ದುಃಖಿಗಳನ್ನು ನೋಡಿ ಅವನ ಮನಸ್ಸು ಕರಗುತ್ತದೆ. ಅವರಿಗೆ ಸಹಾಯಮಾಡಿ ಅವರ ದುಃಖ ನಿವಾರಿಸಬೇಕೆನ್ನಿಸಿ ತನ್ನ ಧನಬಲದಿಂದ ಸಹಾಯ ಮಾಡುತ್ತಾನೆ. ಆಗ ಅವನಲ್ಲಿ ಧನವಿದ್ದುದ್ದಕ್ಕೂ ಸಾರ್ಥಕವಾಗುತ್ತದೆ. ಆದರೆ, ಅವನು ಧನವಂತನಾಗಿದ್ದರೂ, ದಯಾಪರನಾಗಿಲ್ಲದಿದ್ದರೆ ಅವನಲ್ಲಿಯ ಹಣ ಯಾವ ದುಃಖಿಗಳ ಕಣ್ಣೀರನ್ನೂ ಒರೆಸಲಾರದು. ಯಾರ ದುಃಖವನ್ನೂ ಹೋಗಲಾಡಿಸಲಾರದು. ಆದುದರಿಂದ ಅವನಲ್ಲಿರುವ ಧನ ವ್ಯರ್ಥವೇ ಹೊರತು ಸಾರ್ಥಕವಲ್ಲ! ಅದೇ ರೀತಿ ಒಂದು ಹಸುವಿದ್ದರೆ, ಮನೆಯಲ್ಲಿ ಹಯನಿರಬೇಕು. ಹಯನಿದ್ದರೆ ಮನೆಯಲ್ಲಿ ಹಾಲು, ಮೊಸರು, ಬೆಣ್ಣೆ, ತುಪ್ಪ ಸಮೃದ್ಧಿ. ಇವೆಲ್ಲಾ ಇದ್ದಾಗ ಮನೆಯ ಮಕ್ಕಳು ಹೃಷ್ಟ–ಪುಷ್ಟ, ಆರೋಗ್ಯವೇ ಭಾಗ್ಯ. ಸಂಪತ್ತು. ಆದುದರಿಂದ ಹಿಂಡುವ ಆಕಳು ಮನೆಯಲ್ಲಿ ಇದ್ದರೆ ಸಾರ್ಥಕ. ಆದರೆ ಆಕಳಿದ್ದೂ ಅದು ಹಿಂಡದಿದ್ದರೆ, ಮನೆಯಲ್ಲಿ ಹಯನಿರುವುದಿಲ್ಲ. ಅಂತಹ ಆಕಳು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ. ಅದರ ಇರುವಿಕೆ ನಿರರ್ಥಕ. ಇಂಥದೇ ಇನ್ನೊಂದು ಉದಾಹರಣೆಯನ್ನು ಅಕ್ಕಮಹಾದೇವಿ ಕೊಟ್ಟಿದ್ದಾಳೆ. ಸ್ತ್ರೀಗೆ ರೂಪ ಶೋಭೆ ಕೊಡುತ್ತದೆ. ಆದರೆ ರೂಪವಿದ್ದು ಗುಣವೇ ಇಲ್ಲದಿದ್ದರೆ, ಆ ರೂಪ ವ್ಯರ್ಥ. ಹಾಗೆಯೇ ಊಟಮಾಡುವ ಗಂಗಳ–ತಟ್ಟೆ ಇದ್ದರೇನು ಬಂತು, ಬಡಿಸಿಕೊಳ್ಳಲು ಅನ್ನವೇ ಇಲ್ಲದಿದ್ದರೆ? ಅಲಿಅಗಲ (ತಾಟು) ಇದ್ದರೂ ವ್ಯರ್ಥ. ಅದೇ ರೀತಿ ಚನ್ನಮಲ್ಲಿಕಾರ್ಜುನ ನಿಮ್ಮನ್ನು ಅರಿಯುವ ಜ್ಞಾನ ನನ್ನಲ್ಲಿಲ್ಲದಿದ್ದರೆ, ನಾನಿದ್ದೂ ಫಲವಿಲ್ಲ. ನನ್ನ ಜೀವನ ಸಾರ್ಥಕವಾಗಬೇಕಾದರೆ ನನಗೆ ನಿಮ್ಮ ಅರಿವಿರಬೇಕು ಎನ್ನುತ್ತಾಳೆ.

ಅಕ್ಕಮಹಾದೇವಿಯು ತನ್ನನ್ನೇ ಕುರಿತು ಈ ವಚನ ಹೇಳಿಕೊಂಡಿರುವಳಾದರೂ, ಈ ಅಂಶವನ್ನು ನಮಗೂ ಅನ್ವಯಿಸಿಕೊಂಡು ವಿಚಾರಮಾಡಬೇಕು.

■

## ೧೨೦

ಮನೆಯೊಳಗೆ ಮನೆಯೊಡಯನಿದ್ದಾನೋ ಇಲ್ಲವೊ
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜತುಂಬಿ

ಮನೆಯೊಳಗೆ ಮನೆಯೊಡಯನಿದ್ದಾನೊ ಇಲ್ಲವೊ
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲಾ, ಇಲ್ಲಾ, ಕೂಡಲಸಂಗಮದೇವಾ.

–ಬಸವಣ್ಣ

ಮನೆಯಲ್ಲಿ ಒಡೆಯನು ವಾಸವಾಗಿದ್ದರೆ, ಹೊಸ್ತಿಲ ಮುಂದೆ ಗುಡಿಸಿ ಸ್ವಚ್ಛವಾಗಿಟ್ಟು ಹೊಸಿಲು ಸಾರಿಸಿ ರಂಗವಲ್ಲಿ ಹಾಕಿರುತ್ತಾರೆ. ಒಳಗೆಲ್ಲಾ ಸ್ವಚ್ಛತೆ ಇರುತ್ತದೆ. ಎಲ್ಲೂ ಧೂಳಿರುವುದಿಲ್ಲ. ಹಾಗೆಯೇ ದೇವರು ಈ ದೇಹದಲ್ಲಿ ಇದ್ದರೆ, ಅಲ್ಲಿ ಎಂದರೆ ಆ ವ್ಯಕ್ತಿಯ ಹೃದಯ ಪರಿಶುದ್ಧವಾಗಿರುತ್ತದೆ. ಅಲ್ಲಿ ಕಲ್ಮಷಕ್ಕೆ ಮದ, ಮೋಹ ಮುಂತಾದ ಅರಿಷಡ್ವರ್ಗಗಳಿಗೆ ಎಡೆಯಿರುವುದಿಲ್ಲ. ಅಂತಹ ಪರಿಶುದ್ಧ ಹೃದಯದಲ್ಲಿ ದೇವರು ವಾಸವಾಗಿರುತ್ತಾರೆ.

ಯಾವುದಾದರೂ ಮನೆಯ ಹೊಸ್ತಿಲಲ್ಲಿ ಹುಲ್ಲು, ಮುಳ್ಳಿನಗಿಡಗಳು ಬೆಳೆದಿದ್ದರೆ, ಮನೆತುಂಬಾ ಧೂಳು ತುಂಬಿದ್ದರೆ, ಆ ಮನೆಯಲ್ಲಿ ಮನೆಯೊಡೆಯ ವಾಸವಾಗಿಲ್ಲ ಎಂದು ಸರಳವಾಗಿ ಗೊತ್ತಾಗಿಬಿಡುತ್ತದೆ. ಹಾಗಿಲ್ಲದೆ ಬಾಗಿಲನ್ನು ಸಾರಿಸಿ ಗುಡಿಸಿ ರಂಗವಲ್ಲಿ ಹಾಕಿದ್ದರೆ, ಮನೆಯನ್ನೆಲ್ಲಾ ಸ್ವಚ್ಛಗೊಳಿಸಿ ಅಂದವಾಗಿಟ್ಟಿದ್ದರೆ, ಆ ಮನೆಯಲ್ಲಿ ಮನೆಯೊಡೆಯ ವಾಸವಾಗಿದ್ದಾನೆ ಎಂದು ಸುಲಭವಾಗಿ ಗುರ್ತಿಸಬಹುದು.

ಹಾಗೆಯೇ ದೇವರ ದೇಗುಲದಂತಿರುವ ಈ ಮಾನವನ ಹೃದಯದಲ್ಲಿ ಸುಳ್ಳು, ಕಪಟ, ವಂಚನೆ, ವಿಷಯ ವಾಸನೆಗಳು ತುಂಬಿದ್ದರೆ ಅಂತಹವನ ಹೃದಯದಲ್ಲಿ ದೇವರು ವಾಸವಾಗಿರುವುದಿಲ್ಲ. ಯಾವನ ಹೃದಯ ಪರಿಶುದ್ಧವಿರುತ್ತದೆ, ಯಾವನು ಸಾತ್ವಿಕ ಜೀವನ ನಡೆಸುತ್ತಾ ಪವಿತ್ರ ಮನುಷ್ಯನಾಗಿ ಆತ್ಮಶುದ್ಧಿ ಹೊಂದಿರುತ್ತಾನೋ ಅಂತಹವನ ಹೃದಯ ಭಗವಂತನ ವಾಸಕ್ಕೆ ಯೋಗ್ಯವಾಗುತ್ತದೆ. ದೇವರು ಅಲ್ಲಿ ನೆಲೆಸಿರುತ್ತಾನೆ. ಸುಳ್ಳು, ಮೋಸ, ವಂಚನೆ, ಮುಂತಾದ ದುಷ್ಟಗುಣಗಳಿಗೆ ಅವಕಾಶವಿರಬಾರದು. ಮೋಸ, ಕಪಟಗಳಿಂದ ದೂರವಿರಬೇಕು. ನಡೆನುಡಿಯಲ್ಲಿ ಪರಿಶುದ್ಧನಾಗಿರಬೇಕು. ಆಸೆ, ಆಮಿಷಗಳಿಗೆ ಒಳಗಾಗುವ ಅಳಿಮನಸ್ಸಿರಬಾರದು. ಆಗ ಹೃದಯ ಸ್ವಚ್ಛವಿರುತ್ತದೆ. ಆ ವ್ಯಕ್ತಿ ಪರಿಶುದ್ಧ ಜೀವನ ಬದುಕುತ್ತಾನೆ. ಒಳ–ಹೊರಗೆ ಒಂದಾಗಿ ನಡೆಯುತ್ತಾನೆ. ಆಗ ಅವನು ದೇವರಿಗೆ ಪ್ರಿಯನಾಗುತ್ತಾನೆ. ದೇವರು ಅವನಲ್ಲಿ ವಾಸಿಸುತ್ತಾನೆ. ಈ ದೇಹದ ಒಡೆಯ, ಯಜಮಾನ ದೇವರು. ಅವನು ಇಲ್ಲಿ ವಾಸಿಸಿರಬೇಕಾದಲ್ಲಿ, ನಾವು ದೇಹವನ್ನು ಅವನ ವಾಸಕ್ಕೆ ಯೋಗ್ಯವಾದುದನ್ನಾಗಿ ಮಾಡಬೇಕು. ಯಾವ ವ್ಯಕ್ತಿ ಶುದ್ಧಾತ್ಮನಾಗಿ ಇರುತ್ತಾನೋ ಅವನಲ್ಲಿ ಮನಸ್ಸಿನ ಹಾಗೂ ದೇಹದ ಒಡೆಯನಾದ ಭಗವಂತ ವಾಸವಾಗಿದ್ದಾನೆ ಎಂದು ತಿಳಿಯಬೇಕು. ಒಬ್ಬ ವ್ಯಕ್ತಿ ಕಲ್ಮಷಗಳಿಂದಲೂ ದುಷ್ಟಸ್ವಭಾವಗಳಿಂದಲೂ

ಕೂಡಿದವನಾಗಿದ್ದರೆ ಅವನ ದೇಹ ಮನಸ್ಸು ದೇವರ ವಾಸಕ್ಕೆ ಯೋಗ್ಯವಿಲ್ಲ. ಮನದೊಡೆಯನಾದ ದೇವರು ಅಲ್ಲಿಲ್ಲ ಎಂದು ತಕ್ಷಣ ತಿಳಿದುಕೊಳ್ಳಬಹುದು.

ಆದುದರಿಂದ ದೇವರಿಗೆ ಪ್ರಿಯರಾಗಿ ಬದುಕಬೇಕೆನ್ನುವವರು ದೇವರ ಸನ್ನಿಧಾನವನ್ನು ಬಯಸುವವರು, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಗೆಲ್ಲಬೇಕು. ಪಂಚೇಂದ್ರಿಯಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಬೇಕು. ಪರಿಶುದ್ಧ ಜೀವನ ಬಾಳಬೇಕು. ಸ್ವಚ್ಛಬಾಳು ನಡೆಸಬೇಕು. ಆಗ ಈ ದೇಹದ ಒಡೆಯನಾದ ಭಗವಂತನು ಅಂತಹ ಹೃದಯದಲ್ಲಿ ವಾಸಿಸುತ್ತಾನೆ ಎಂಬುದು ಮೇಲಿನ ವಚನದ ತಿರುಳು.

■

## ೧೨೧

ಮಜ್ಜನಕ್ಕೆರೆದು ಫಲವ ಬೇಡುವರಯ್ಯಾ;
ತಮಗೆಲ್ಲಿಯದೋ ಆ ಫಲವು ಸೀತಾಳಕ್ಕಲ್ಲದೆ?
ಪತ್ರೆಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರಯ್ಯಾ;
ತಮಗೆಲ್ಲಿಯದೋ ಆ ಫಲವು, ಗಿಡಗಳಿಗಲ್ಲದೆ?
ಸುಯಿದಾನವರ್ಪಿಸಿ ಪ್ರಸಾದದ ಫಲವ ಬೇಡುವರಯ್ಯಾ;
ತಮಗೆಲ್ಲಿಯದೋ ಆ ಫಲವು, ಹದಿನೆಂಟು ಧಾನ್ಯಕ್ಕಲ್ಲದೆ?
ಲಿಂಗದೊಡವೆಯ ಲಿಂಗಕ್ಕೆ ಕೊಟ್ಟು
ಫಲವ ಬೇಡುವ ಸರ್ವ ನ್ಯಾಯಿಗಳನೇನೆಂಬೆ ಗುಹೇಶ್ವರಾ!

–ಅಲ್ಲಮಪ್ರಭು

ಜನರು ತಮ್ಮ ಆಸೆಗಳನ್ನು ನೆರವೇರಿಸಿಕೊಳ್ಳಬೇಕೆಂದು ದೇವರಿಗೆ ಪೂಜೆ ಮಾಡುವುದು, ಎಡೆ ಮಾಡುವುದು ಪದ್ಧತಿ. ಸ್ವಾರ್ಥಕ್ಕಾಗಿ ಪೂಜಿಸಿ ಅದಕ್ಕೆ ಪ್ರತಿಫಲವನ್ನು ಬೇಡುವ ಜನರನ್ನು ಅಲ್ಲಮಪ್ರಭು ಇಲ್ಲಿ ಲೇವಡಿ ಮಾಡಿದ್ದಾರೆ.

ಜನರು ದೇವರಿಗೆ ಅಭಿಷೇಕ ಮಾಡಿಸಿ, ತಮಗೆ ಬೇಕಾದ ಫಲವನ್ನು ಕೊಡಬೇಕೆಂದು ಬೇಡುತ್ತಾರೆ. ಅದಕ್ಕೆ ಅಲ್ಲಮಪ್ರಭುದೇವರು ನೀರನ್ನು ದೇವರಿಗೆ. ಎರೆದು, ಫಲ ತಮಗೆ ಸಿಕ್ಕಬೇಕೆಂದು ಕೇಳುವುದು ಸರಿಯಲ್ಲ. ಏಕೆಂದರೆ ಆ ನೀರು ಇವರದ್ದಲ್ಲ. ದೇವರ ಮೈತೊಳೆದ ಸೀತಾಳಕ್ಕೆ ಫಲ ಸಿಕ್ಕಬೇಕು. ಎರೆದವನಿಗಲ್ಲಾ ಎನ್ನುತ್ತಾರೆ. ಪತ್ರೆ–ಪುಷ್ಪಗಳಿಂದ ದೇವರನ್ನು ಅರ್ಚಿಸಿ ಅದಕ್ಕಾಗಿ ತಮ್ಮ ಇಷ್ಟಾರ್ಥಸಿದ್ಧಿ ಮಾಡಬೇಕೆಂದು ಜನ ಕೇಳುತ್ತಾರೆ. ದೇವರ ಪೂಜೆಗೆ ಉಪಯೋಗಿಸಿದ ಆ ಪತ್ರೆ ಪುಷ್ಪಗಳನ್ನು ಗಿಡ ಕೊಟ್ಟಿವೆಯಾದುದರಿಂದ, ಆ ಫಲ ಗಿಡಕ್ಕೆ ಸಿಗಬೇಕು; ಪೂಜಿಸಿದ

ಮನುಷ್ಯನಿಗಲ್ಲ ಎಂದಿದ್ದಾರೆ. ಹಾಗೆಯೇ ನೈವೇದ್ಯವನ್ನು ಎಡೆಮಾಡಿ, ಆ ಪ್ರಸಾದಕ್ಕೆ ಫಲವನ್ನು ಬೇಡುತ್ತಾರೆ. ಅದು ಇವರಿಗೆ ಹೇಗೆ ಸಿಗಬೇಕು? ಆ ನೈವೇದ್ಯ ಹದಿನೆಂಟು ಧಾನ್ಯಗಳನ್ನು ಉಪಯೋಗಿಸಿ ಮಾಡಿರುವುದರಿಂದ, ಆ ಧಾನ್ಯಗಳಿಗೆ ಹೋಗಬೇಕು ಫಲ ಎಂದಿದ್ದಾರೆ. ಅಲ್ಲದೆ ಫಲ-ಪುಷ್ಪ, ನೀರು ಧಾನ್ಯ ದೇವರ ಕೊಡುಗೆ. ಆ ದೇವರು ಕೊಟ್ಟ ಕೊಡುಗೆಯನ್ನೇ ಅವನಿಗೆ ಕೊಟ್ಟು ಪ್ರತಿಫಲ ಕೇಳುತ್ತಾರಲ್ಲ ಈ ಜನ ಎಂದು ವಿಡಂಬನಾತ್ಮಕವಾಗಿ ಅಲ್ಲಮಪ್ರಭುಗಳು ಈ ವಚನ ಹೇಳಿದ್ದಾರೆ.

ಈ ವಚನದಲ್ಲಿ ನಾವು ತಿಳಿದುಕೊಳ್ಳಬೇಕಾದ ಎರಡು ಅಂಶಗಳಿವೆ.

೧. ದೇವರಿಗೆ ಪೂಜೆ ಪ್ರಾರ್ಥನೆ ಸಲ್ಲಿಸಿ, ಪ್ರತಿಯಾಗಿ ಏನನ್ನಾದರೂ ಕೊಡು ಎಂದು ಕೇಳುವುದು, ದೇವರೊಡನೆ ಕೊಡು-ಕೊಳ್ಳುವ ವ್ಯವಹಾರ ಮಾಡಿದಂತಾಗುತ್ತದೆ. ಅಲ್ಲದೆ ಇವೆಲ್ಲಾ ದೇವರ ದೇಣಿಗೆ. ಅದನ್ನು ನಾವು ನಮ್ಮ ಭಕ್ತಿಯನ್ನು ಅರ್ಪಿಸಲು ಉಪಯೋಗಿಸಿದ್ದೇವೆ. ಭಕ್ತಿ ಯಾವಾಗಲೂ ಪ್ರತಿಫಲಾಪೇಕ್ಷೆಯಿಂದ ಕೂಡಿರಬಾರದು. ಪ್ರತಿಫಲ ಬಯಸಿದರೆ ಅದು ಭಕ್ತಿಯಾಗುವುದಿಲ್ಲ. ವ್ಯವಹಾರವಾಗುತ್ತದೆ.

೨. ಅಭಿಷೇಕ ಮಾಡಿಸುವುದು, ಪತ್ರೆ ಪುಷ್ಪಗಳಿಂದ ಪೂಜಿಸುವುದು, ನೈವೇದ್ಯ ಮಾಡುವುದು-ಇವೆಲ್ಲಾ ದೇವರಲ್ಲಿ ತೋರುವ ಭಕ್ತಿಯ ಸಾಧನಗಳು ಮಾತ್ರ ಅವೇ ಭಕ್ತಿಯಲ್ಲ. ಮನಸ್ಸನ್ನು ದೃಢತೆಗೆ ಒಯ್ಯಲು, ಸ್ಥಿರಮಾಡಿಕೊಳ್ಳಲು ಇವೆಲ್ಲಾ ಆವರಣಗಳು. ಭಕ್ತಿಗೆ ಮುಖ್ಯವಾದುದು ದೃಢಮನಸ್ಸು. ಚಂಚಲತೆ ಇಲ್ಲದೆ ಸ್ಥಿರವಾದ, ಧ್ಯಾನಾಸಕ್ತವಾದ ಮನಸ್ಸು. ಅದು ಮುಖ್ಯವೇ ಹೊರತು ಉಳಿದವಲ್ಲ ಎಂಬುದನ್ನು ತಿಳಿಯಬೇಕು ಎನ್ನುವುದು ಅಲ್ಲಮಪ್ರಭುವಿನ ಅಭಿಪ್ರಾಯ.

■

## ೧೨೨

**ಮಾ**ಡಿ ನೀಡಿ ಲಿಂಗವ ಪೂಜಿಸಿಹೆನೆಂಬವರು ನೀವೆಲ್ಲಾ ಕೇಳಿರಣ್ಣಾ
ಹಾಗದ ಕೆರಹ ಹೊರಗೆ ಕಳೆದು
ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ
ತನ್ನ ಕೆರಹಿನ ಧ್ಯಾನವಲ್ಲದೆ, ದೇವರ ಧ್ಯಾನವಿಲ್ಲ
ಧನವನಿರಿಸದಿರಾ, ಇರಿಸಿದಡೆ ಭವ ಬಪ್ಪುದು ತಪ್ಪದು
ಕೂಡಲಸಂಗನ ಶರಣರಿಗೆ ಸವೆಸಲೇಬೇಕು.

–ಬಸವಣ್ಣ

ಹಣ್ಣವಿದ್ದ ಕೆಲವರು ದೇವರ ಕೆಲಸಕ್ಕೆಂದು ದಾನ ಧರ್ಮ ಮಾಡುತ್ತಾರೆ. ಆಮೇಲೆ ದೇವರ ಸೇವೆ ಮಾಡಿದ್ದೇವೆ ಎಂದು ಜಂಬ ಕೊಚ್ಚಿಕೊಳ್ಳುತ್ತಾರೆ. ಅವರನ್ನು ಕುರಿತು ಬಸವಣ್ಣನವರು ಧನಸಂಗ್ರಹ ಮಾಡಿದವರನ್ನು ಕುರಿತು ಹೇಳಿರುವ ವಚನವಿದು.

ದಾನ ಧರ್ಮ ಮಾಡಿದ್ದೇವೆಂದು ಹೇಳುವ ಧನವಂತರೇ ಕೇಳಿ, ನೀವು ನಾಲ್ಕುಕಾಸು ಬಾಳುವ ಚಪ್ಪಲಿಗಳನ್ನು ದೇವಸ್ಥಾನದ ಹೊರಗೆ ಬಿಟ್ಟು, ದೇವಸ್ಥಾನದ ಒಳಗೆ ಹೋಗಿ ದೇವರಿಗೆ ನಮಸ್ಕಾರ ಮಾಡುತ್ತಿದ್ದರೂ ನಾಲ್ಕು ಕಾಸಿನ ಚಪ್ಪಲಿ ಕಡೆಗೆ ನಿಮ್ಮ ಮನಸ್ಸು ಹೋಗಿರುತ್ತದೆ. ನೋಡಲು ದೇವರಿಗೆ ನಮಸ್ಕಾರ ಮಾಡುವಂತೆ ಕಂಡರೂ ಮನಸ್ಸು ಮಾತ್ರ ಕೆರಹ(ಚಪ್ಪಲಿ)ನ್ನು ಯಾರಾದರೂ ಎಲ್ಲಿ ತೆಗೆದುಕೊಂಡು ಹೋಗುತ್ತಾರೋ ಎಂದು ಚಿಂತಿಸುತ್ತಿರುತ್ತದೆ. ದೇವರ ಕಡೆ ಧ್ಯಾನಮಾಡುತ್ತಿರುವುದಿಲ್ಲ ಧನ ಸಂಗ್ರಹಿಸಿದರೆ. ಮನಸ್ಸು ಸದಾ ಅದನ್ನೇ ಚಿಂತಿಸುತ್ತಿರುತ್ತದೆ. ಆದುದರಿಂದ ದೇವರೇ ಧನವನ್ನು ಸಂಗ್ರಹಿಸದಂತೆ ಮಾಡು. ಸಂಗ್ರಹಿಸಿದರೆ ಭವದ ಕಡೆಗೆ ಮನಸ್ಸು ಎಳೆಯುತ್ತಿರುತ್ತದೆ. ದೇವರಕಡೆಗೆ ಬಿಡುವುದಿಲ್ಲ. ಈ ಜನ್ಮವನ್ನು ಶರಣರ ಸೇವೆಗಾಗಿ ಸವೆಸಬೇಕಾಗಿದೆ. ಆದ್ದರಿಂದ ಧನವಿಲ್ಲದಂತೆ ಮಾಡಿ ನನ್ನನ್ನು ಕಾಪಾಡು ಎಂದು ಪ್ರಾರ್ಥಿಸಿದ್ದಾರೆ ಬಸವಣ್ಣನವರು.

■

## ೧೨೩

ಮಾಡುವ ಮಾಟ ಉಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ?
ದಾಸೋಹವೆಂಬ ಸೇವೆಯಬಿಟ್ಟು ನೀಸಲಾರದೆ ಕೈಲಾಸವೆಂಬ ಆಸೆ
ಬೇಡ ಮಾರಯ್ಯಪ್ರಿಯ ಅಮರೇಶ್ವರಲಿಂಗವಿದ್ದ ಠಾವೆ ಕೈಲಾಸ

–ಮೋಳಿಗೆ ಮಹಾದೇವಿ

ಕಲ್ಯಾಣದಲ್ಲಿ ಕ್ರಾಂತಿಯಾದ ಮೇಲೆ ಶರಣರು ನಾನಾ ದಿಕ್ಕುಗಳಿಗೆ ಚದುರಿದರು. ಬಸವಣ್ಣ, ಅಲ್ಲಮಪ್ರಭು, ಚನ್ನಬಸವಣ್ಣ ಅವರುಗಳೆಲ್ಲಾ ಕಲ್ಯಾಣ ಬಿಟ್ಟು ಹೋದರು. ಆಗ ಕಟ್ಟಿಗೆ ಕಾಯಕದಿಂದ ಜೀವಿಸುತ್ತಿದ್ದ ಮೋಳಿಗೆ ಮಾರಯ್ಯನವರಿಗೆ ಬೇಸರವಾಗಿ, ದೇವರನ್ನು ಕುರಿತು, ತಾವು ಇನ್ನೂ ಎಷ್ಟು ಕಾಲ ಈ ಕಾಯಕ ಮಾಡಿ ಬದುಕಬೇಕು. ಇದು ಸಾಕು. ಇನ್ನು ಕೈಲಾಸಕ್ಕೆ ಹೋಗಬೇಕು. ಅಲ್ಲಿಗೆ ಎನ್ನನ್ನು ಕರೆದುಕೊ ಎಂದು ಕೇಳುತ್ತಾರೆ.

ಆಗ ಅವರ ಪತ್ನಿ ಶರಣೆ ಮೋಳಿಗೆ ಮಹಾದೇವಿ, ಸರಿಯಾದ ವಿವೇಕ ಹೇಳುತ್ತಾಳೆ. ಮಾಡಲಿಕ್ಕೆ ಇಲ್ಲೇ ಬೇಕಾದಷ್ಟು ಕೆಲಸವಿರುವಾಗ ಇನ್ನೊಂದು ಜ್ಞಾನ ಹುಡುಕುವುದು ಸರಿಯಲ್ಲ. ಬಸವಣ್ಣ ಮುಂತಾದ ಶರಣರು ದಾಸೋಹ ನಡೆಸುತ್ತಿದ್ದು ಬಿಟ್ಟುಹೋಗಿದ್ದಾರೆ. ಆ ಸೇವೆಯನ್ನು ಮಾಡು. ಇರುವುದನ್ನು ಮಾಡಬೇಕಾದುದನ್ನು ಮಾಡಲಾರದೆ ಕೈಲಾಸವೆಂಬ ಆಸೆ ಇಟ್ಟುಕೊಳ್ಳುವುದು ಸರಿಯಲ್ಲ. ದೇವರನ್ನು ಕೂಡಲು ಕೈಲಾಸಕ್ಕೇ ಹೋಗಬೇಕೆಂದೇನಿಲ್ಲ. ಎಲ್ಲಿ ಅಮರೇಶ್ವರಲಿಂಗನಿದ್ದಾನೋ ಅದೇ ಕೈಲಾಸ; ಬೇರೊಂದು ಕೈಲಾಸವಿಲ್ಲ ಎಂದು ಶರಣ ಮಾರ್ಗವನ್ನು ಬೋಧಿಸಿದ್ದಾಳೆ.

■

## ೧೨೪

ಮಾಡಿದೆನೆಂಬುದು ಮನದಲ್ಲಿ ಹೊಳೆದೊಡೆ
ಏಡಿಸಿ ಕಾಡಿತ್ತು ಶಿವನ ಡಂಗುರ;
ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದನೆಂಬುದು ಮನದಲ್ಲಿಲ್ಲದೊಡೆ
ಬೇಡಿದನೀವ ಕೂಡಲಸಂಗಮದೇವಾ.

–ಬಸವಣ್ಣ

ನಮ್ಮಲ್ಲಿ ಬಹಳಷ್ಟು ಜನ ಹೊಗಳಿಸಿಕೊಳ್ಳುವ ಸಲುವಾಗಿ ಒಳ್ಳೆಯ ಕೆಲಸ ಮಾಡುತ್ತಾರೆ. ಆದ್ದರಿಂದ ತಾವು ಹಾಗೆ ಮಾಡಿದೆವು, ಹೀಗೆ ಮಾಡಿದೆವು ಎಂದು ಜಂಬದಿಂದ ಪ್ರಚಾರ ಮಾಡಿಕೊಳ್ಳುತ್ತಾರೆ. ತಾವು ಒಂದು ರೀತಿಯಲ್ಲಿ ಬೇರೆಯವರಿಗೆ ಮಾಡಿ ಇನ್ನೊಂದು ರೀತಿಯಲ್ಲಿ ಪ್ರಯೋಜನ ಮಾಡಿಕೊಳ್ಳುತ್ತಾರೆ. ಆದರೆ ಅದು ಸರಿಯಾದ ಸತ್ಕಾರ್ಯವಲ್ಲ. ಸಜ್ಜನಿಕೆಯಿಂದ, ಇತರರಿಗೆ ಒಳ್ಳೆಯದಾಗಬೇಕೆಂಬ ಉದ್ದೇಶದಿಂದ ಒಳಿತನ್ನು ಮಾಡಿದ ವ್ಯಕ್ತಿ ತಾನು ಹೀಗೆ ಮಾಡಿದೆ ಎಂಬ ವಿಷಯವನ್ನು ಸಹ ಮನಸ್ಸಿಗೆ ತಂದುಕೊಳ್ಳುವುದಿಲ್ಲ. ಅದು ನಿಜವಾದ ಸತ್ಕಾರ್ಯ. ಆಗ ದೇವರು ಮೆಚ್ಚಿ ಬೇಡಿದುದನ್ನು ನೀಡುತ್ತಾನೆ ಎಂಬ ಮಾತನ್ನು ಬಸವಣ್ಣನವರು ಈ ವಚನದಲ್ಲಿ ತಿಳಿಸಿದ್ದಾರೆ.

ಯಾರೇ ಆಗಲಿ ಬೇರೆಯವರಿಗೆ ಒಳಿತು ಮಾಡಿದಾಗ, ನಾನು ಇಂತಹ ಒಳ್ಳೆಯ ಕೆಲಸ ಮಾಡಿದೆನೆಂದು ಅಹಂಕಾರ ಪಡಬಾರದು. ಬಲಗೈಲಿ ಮಾಡಿದ

ಸತ್ಕಾರ್ಯ ಎಡಗೈಗೆ ಗೊತ್ತಿರಬಾರದು ಎಂಬುದು ಶರಣ ತತ್ವ. ಯಾರು, ತಾವು ಮಾಡಿದ್ದನ್ನು ಎತ್ತಿ ಹೇಳಿಕೊಳ್ಳುತ್ತಾ, ತನ್ನನ್ನು ಮೆರೆಸಿಕೊಳ್ಳಲು ಪ್ರಯತ್ನಿಸುತ್ತಾರೋ ಅಂತಹವರು ಮಾಡಿದುದೆಲ್ಲವೂ ವ್ಯರ್ಥವಾಗುತ್ತದೆ. ದೇವರಿಗೆ ಸಲ್ಲುವುದಿಲ್ಲ. ನಾನು ಮಾಡಿದ್ದೇನೆ ಎಂಬ ಅಹಂಕಾರ ಬಂದ ತಕ್ಷಣ ದೇವರು ಕಷ್ಟಕೊಟ್ಟು ಕಾಡಿಸುತ್ತಾನೆ. ಆದರೆ ಮಾಡಿಯೂ ಸಹ, ಮಾಡಿದೆ ಎಂಬ ಭಾವನೆಯನ್ನು ಸಹ ಮನಸ್ಸಿಗೆ ತಂದುಕೊಳ್ಳದ ಜನರಿಗೆ ಅವರ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುತ್ತಾನೆಂದು ಬಸವಣ್ಣನವರು ಹೇಳಿದ್ದಾರೆ.

■

## ೧೨೫

ಮಾಡುವಾತ ನಾನಲ್ಲಯ್ಯಾ, ನೀಡುವಾತ ನಾನಲ್ಲಯ್ಯಾ
ಬೇಡುವಾತ ನಾನಲ್ಲಯ್ಯಾ, ನಿಮ್ಮ ಕಾರುಣ್ಯವಲ್ಲದೆ,
ಎಲೆ ದೇವಾ, ಮನೆಯತೊತ್ತಲಸಿದಡೆ ಒಡತಿ ಮಾಡಿಕೊಂಬಂತೆ
ನಿನಗೆ ನೀ ಮಾಡಿಕೊ ಕೂಡಲಸಂಗಮದೇವಾ.

–ಬಸವಣ್ಣ

ಇಲ್ಲಿ ಭಕ್ತ ಭಗವಂತನಿಗೆ, ಸಮರ್ಪಣಾ ಭಾವದಿಂದ ಸರ್ವಕ್ಕೂ ಶಿವನೇ ಕಾರಣ ನಾವೇನು ಮಾಡಿದರೂ ನೀಡಿದರೂ ಬೇಡಿದರೂ ಅದೆಲ್ಲಾ ದೇವರ ಕಾರುಣ್ಯದಿಂದಲೇ ಆದುದು ಹೊರತಾಗಿ ಬೇರೆ ಅಲ್ಲ ಎಂದು ಸರ್ವಾರ್ಪಣ ಭಾವದಿಂದ ಬಸವಣ್ಣನವರು ನುಡಿದ ವಚನವಿದು.

ಏನಾದರೂ ಒಳಿತಾದುದನ್ನು ಮಾಡಬೇಕೆನ್ನಿಸಿ ಮಾಡಿದರೆ, ಅದನ್ನು 'ನಾನು' ಮಾಡಿದೆ ಎಂದು ಹೇಳಿಕೊಳ್ಳುವುದು ಸರಿಯಲ್ಲ. ಅಂತಹ ಮನಸ್ಸನ್ನು ಆ ಭಗವಂತನು ಕೊಟ್ಟುದರಿಂದ ಮಾಡಲಾಯಿತು, ಅಷ್ಟೆ. ಬೇರೆಯವರಿಗೆ ನೀಡಿದಾಗಲೂ ಅದು 'ನಾನು' ನೀಡಿದೆ ಎಂದುಕೊಂಡರೆ ಶಿವನ ಡಂಗುರ ಏಡಿಸಿ ಕಾಡುವುದು. ಕೊಟ್ಟುದು ನಾನಲ್ಲ, ಕೊಡಿಸುವವನು 'ಅವನು'. ನಾನು ಬೇಡಿದರೂ ಅದು ಅವನ ದಯೆಯೇ. 'ಅವನೇ' ಎಲ್ಲ ಮಾಡಿಸುವವನು. ಆದುದರಿಂದ, ಎಲ್ಲಕ್ಕೂ ಸರ್ವಾಂತರ್ಯಾಮಿಯೂ. ಸರ್ವಜ್ಞನೂ, ಸರ್ವಶಕ್ತನೂ ಆದ ಭಗವಂತನೇ ಕಾರಣ. ನಾನು ಏನು ಮಾಡದಿದ್ದರೂ ನೀಡದಿದ್ದರೂ ಬೇಡದಿದ್ದರೂ ಅವನೇ ಕಾರಣ. ಆದುದರಿಂದ ನಾನೇನಾದರೂ ಮಾಡದಿದ್ದರೆ, ಮನೆಯ ಕೆಲಸದ ಆಳು ಆಲಸ್ಯದಿಂದ ಕೆಲಸ ಮಾಡದೆ ಬಿಟ್ಟರೆ,

ಮನೆಯೊಡತಿ, ಅದನ್ನು ತಾನೇ ಮಾಡಿಕೊಳ್ಳುತ್ತಾಳಲ್ಲ ಹಾಗೆ ನಾ ಮಾಡಬೇಕಾದ ಕೆಲಸವನ್ನು ನೀನೇ ಮಾಡಿಕೊ ಎಂದು ದಾಸ್ಯ ಭಾವದಿಂದ ತನ್ನನ್ನು ತೊತ್ತಿಗೂ ಭಗವಂತನನ್ನು ಒಡೆಯನಿಗೂ ಉಪಮಿಸಿ ತನ್ನ ಭಕ್ತಭಾವ ವ್ಯಕ್ತಪಡಿಸಿದ್ದಾನೆ ಬಸವಣ್ಣ.

## ೧೨೬

ಮುತ್ತು ಉದುಕದಲಾಗದು, ಉದಕ ಮುತ್ತಿನಲಾಗದು
ತತ್ವಘಟಿಸಿದ ಸುಮುಹೂರ್ತದಲಲ್ಲದೆ.
ಚಿತ್ತವೇದ್ಯವಾಗದು ಸದ್ಗುರುವಿನ ಕಾರುಣ್ಯಕ್ಕಲ್ಲದೆ.
ಕರ್ತೃ ಕೂಡಲಸಂಗಮದೇವರ ಒಲವಿನ ದಯದ
ಚಿತ್ತವಿಡಿದಂಗಲ್ಲದೆ ಶಿವತತ್ವ ಸಾಹಿತ್ಯವಾಗದು

–ಬಸವಣ್ಣ

ಮುತ್ತು ಸಮುದ್ರದಲ್ಲಿರುವ ಕಪ್ಪೆಚಿಪ್ಪಿನಲ್ಲಿ ಸಿಗುತ್ತದೆ. ಆ ಮುತ್ತು ಆಗುವ ಪರಿ ವಿಶಿಷ್ಟ. ಸ್ವಾತಿ ಮಳೆ ಬರುವ ಸಮಯಕ್ಕೆ ಸರಿಯಾಗಿ ಸಮುದ್ರದಲ್ಲಿರುವ ಪೆಟ್ಟಿಗೆಯಂತಿರುವ ಕಪ್ಪೆಚಿಪ್ಪುಗಳು ಬಾಯ್ದೆರೆದು ಸಮುದ್ರದ ಮೇಲೆ ತೇಲಾಡುತ್ತಿರುತ್ತವೆ. ಯಾವುದೋ ಒಂದು ಘಳಿಗೆಯಲ್ಲಿ ಮಳೆಯ ಹನಿ ಆ ಕಪ್ಪೆಚಿಪ್ಪಿನೊಳಗೆ ಬೀಳುತ್ತದೆ. ಆಗ ಕಪ್ಪೆಚಿಪ್ಪನ ತೆರೆದ ಬಾಗಿಲು ಮುಚ್ಚಿಕೊಂಡು ಸಮುದ್ರದ ತಳಕ್ಕೆ ಹೋಗುತ್ತದೆ. ಅಲ್ಲಿ ಮುತ್ತಾಗುವ ತತ್ವ ಘಟಿಸಿ ಮುತ್ತಾಗುತ್ತದೆ. ಇದು ಸಮುದ್ರರಾಜ ಮುತ್ತಿನ ನೀರನ್ನು ಬಯಸಿ ಬಾಯ್ದೆರೆದು ನಿಂದಾಗ ಇಂದ್ರನು ಸಂತೃಪ್ತನಾಗಿ ಸ್ವಾತಿ ಮಳೆಯ ಒಂದು ಹನಿಯನ್ನು ನೇರವಾಗಿ ಆ ಚಿಪ್ಪಿನೊಳಕ್ಕೇ ಬೀಳಿಸುತ್ತಾನೆ. ಅದು ಮುತ್ತಾಗಿ ಸಮುದ್ರರಾಜನ ಆಸೆ ನೆರವೇರುತ್ತದೆ. ಹಾಗೆಯೇ ಭಕ್ತನು ಗುರುಕರುಣೆಗಾಗಿ ಭಕ್ತಿಯ ಉತ್ಕಟೇಚ್ಛೆಯಿಂದ ಪ್ರಾರ್ಥಿಸುತ್ತಿರುತ್ತಾನೆ. ಯಾವುದೋ ಸುಮುಹೂರ್ತದಲ್ಲಿ ಅವನ ಹೃದಯ ತೆರೆಯುತ್ತದೆ. ಅದೇ ಸಮಯದಲ್ಲಿ ಗುರುವಿಗೆ ಶಿಷ್ಯನ ಬಯಕೆಯ ಅರಿವಾಗಿ ಗುರು ಕರುಣಿಸುತ್ತಾನೆ. ಹೀಗೆ ಗುರುವಿನ ದಯೆ, ಯಾರು ಅದಕ್ಕಾಗಿ ಹಾತೊರೆದು ಕಾಯುತ್ತಿರುತ್ತಾರೋ ಅವರಿಗೆ, ಯಾವುದೋ ಒಂದು ಸುಮುಹೂರ್ತ ಕೂಡಿಬಂದಾಗ ಗುರು–ಶಿಷ್ಯರ ಆತ್ಮ ಸಂಯೋಗವಾಗಿ, ಗುರುಕರುಣೆ ಒದಗುತ್ತದೆ. ಅವನ ಹಂಬಲ ಈಡೇರುತ್ತದೆ. ಗುರುಕೃಪೆ ಪಡೆದ ಶಿಷ್ಯನಿಗೆ ಶಿವಾನುಭವವಾಗುತ್ತದೆ. ಇದು ನೀರು ಮುತ್ತಾದಷ್ಟೇ ಅಪರೂಪ. ಅಲಭ್ಯ.

ನೀರು ಮುತ್ತಾಯಿತೆಂದು ಯಾವಾಗ ಬೇಕಾದರೂ, ಯಾವ ನೀರಿನಿಂದ ಬೇಕಾದರೂ ಮುತ್ತು ಪಡೆಯಲು ಸಾಧ್ಯವಿಲ್ಲ. ಮತ್ತು ಆ ಮುತ್ತು ನೀರಿನಲ್ಲಾದುದು ಆ ಮುತ್ತನ್ನು ಮತ್ತೆ ನೀರನ್ನಾಗಿ ಮಾಡಲೂ ಸಾಧ್ಯವಿಲ್ಲ. ಇದೆಲ್ಲಾ ದೈವದ ಕೃತಿ. ಅದೇ ರೀತಿ ಭಕ್ತನಿಗೆ ಗುರುಕರುಣೆಯಾಯಿತೆಂದು ಯಾವಾಗಬೇಕಾದರೂ, ಯಾರಿಗೆ ಬೇಕಾದರೂ ಗುರುಕರಣೆ ದೊರೆಯುವುದೆಂದು ಹೇಳಲು ಬರುವುದಿಲ್ಲ. ಅದೆಲ್ಲಾ ಯೋಗಾಯೋಗ. ದೇವರ ದಯೆ ಯಾರ ಮೇಲೆ ಹರಿಯುತ್ತದೋ ಅಂತಹ ಸುಮುಹೂರ್ತ ಯಾವಾಗ ಕೂಡಿಬರುತ್ತದೋ ಆಗ ಆಗುವ ಘಟನೆಗಳು ಇವು ಅಷ್ಟೆ.

■

## ೧೨೭

ಮುತ್ತು ನೀರೊಳಗೆ ಹುಟ್ಟಿ ಮರಳಿ ನೀರಾಗದಂತೆ
ತಿಳಿಯ ಕಾಸಿದ ತುಪ್ಪ ಕ್ಷೀರವಾಗದಂತೆ
ತೊಟ್ಟುಬಿಟ್ಟ ಹಣ್ಣು ಹೂಮಿಡಿಯಾಗದಂತೆ
ಸಂಸಾರದಲ್ಲಿ ಹುಟ್ಟಿ ಅದ ಹೊದ್ದದೆ
ಸ್ವಯಂಪ್ರಕಾಶ ಲಿಂಗದ ಬೆಳಗಿನಲ್ಲಿ ಬೆಳೆದು ತಲ್ಲೀಯವಾಗಿರ್ದರಯ್ಯಾ
ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು

–ಆದಯ್ಯ

ಜಾತಿಮುತ್ತು ನೀರಿನಲ್ಲಿಯೇ ನೀರಿನಿಂದಲೇ ಹುಟ್ಟುತ್ತದೆ. ಸ್ವಾತಿ ಮಳೆಬರುವ ಮುನ್ನ ಸಮುದ್ರದ ಕಪ್ಪೆಚಿಪ್ಪಿನ ಪೆಟ್ಟಿಗೆಗಳು ಬಾಯ್ದೆರೆದು ತೇಲುತ್ತಿರುತ್ತವೆಯಂತೆ. ಅದರಲ್ಲಿ ಸ್ವಾತಿ ಮಳೆಯ ಹನಿ ಬಿದ್ದ ತಕ್ಷಣ ಆ ಪೆಟ್ಟಿಗೆ ಮುಚ್ಚಿಕೊಳ್ಳುತ್ತದೆ. ಆ ಹನಿಯೇ ಮುತ್ತಾಗುತ್ತದೆ. ದೇವನ ನಿಯಮದಲ್ಲಿ ನೀರು ಮುತ್ತಾಗಬಲ್ಲದು. ಆದರೆ ಆ ಮುತ್ತಾಗಿರುವ ನೀರನ್ನು ಮೊದಲಿನಂತೆ ನೀರು ಮಾಡಲು ಯಾರಿಗೂ ಸಾಧ್ಯವಿಲ್ಲ. ಮುತ್ತಾಗುವ ಗುಣವನ್ನು ದೇವರು ಅದರಲ್ಲಿ ಬೀಳುವ ಸ್ವಾತಿಯ ಮಳೆಯ ಹನಿಯಲ್ಲಿ ಇಟ್ಟಿದ್ದಾನೆ. ಹಾಗೆಯೇ, ಹಾಲನ್ನು ಕಾಯಿಸಿ ಹೆಪ್ಪುಹಾಕಿ, ಮೊಸರನ್ನು ಕಡೆದು ಬೆಣ್ಣೆ ತೆಗೆದು, ಆ ಬೆಣ್ಣೆಯನ್ನು ಕಾಯಿಸಿದರೆ ತುಪ್ಪ ಬರುತ್ತದೆ. ಹಾಲಿನಲ್ಲಿ ತುಪ್ಪವನ್ನು ದೇವರು ಇಟ್ಟಿದ್ದಾನೆ. ಆದುದರಿಂದ ಹಾಲಿನ ಮೂಲಕ ತುಪ್ಪ ಮಾಡಬಹುದು. ಹಾಲಿನಿಂದಲೇ ತುಪ್ಪ ಮಾಡಿದರೂ ಆ ತುಪ್ಪವನ್ನು ಮೊದಲಿನಂತೆ ಹಾಲು ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಅದರಂತೆಯೇ ಪಕ್ವವಾದ ಹಣ್ಣಿನ ತೊಟ್ಟು ಕಳಚುತ್ತದೆ. ಹಣ್ಣು ದೊರೆಯುತ್ತದೆ. ಆ ಹಣ್ಣು ಆಗುವ

ಮೊದಲು ಬೀಜವು ಗಿಡವಾಗಿ, ಹೂವಾಗಿ, ಮಿಡಿಯಾಗಿ, ಮಿಡಿ ಬಲಿತು ಕಾಯಾಗಿ, ಆ ಕಾಯಿ ಹಣ್ಣಾಗುತ್ತದೆ. ಹಣ್ಣು ದೊರೆಯುತ್ತದೆ. ಇದು ದೇವರು ಕೊಟ್ಟ ದೇಣಿಗೆ. ದೇವರು ಕೊಟ್ಟ ಈ ಹಣ್ಣನ್ನು ಮಾನವ ಏನೇ ಪ್ರಯತ್ನ ಮಾಡಿದರೂ ಅದರ ಮೊದಲಿನ ರೂಪವಾದ ಮಿಡಿ ಅಥವಾ ಹೂವನ್ನಾಗಿ ಪರಿವರ್ತಿಸಲು ಸಾಧ್ಯವಿಲ್ಲ. ಅದೇ ರೀತಿ ಮನುಷ್ಯರು ಸಂಸಾರದಲ್ಲಿ ಹುಟ್ಟುತ್ತಾರೆ. ಸಂಸಾರದಲ್ಲಿ ಬೆರೆಯುತ್ತಾರೆ. ಆದರೆ ಶರಣರು ಸಂಸಾರದಲ್ಲಿ ಭವಬಂಧನದ ನಡುವೆಯೇ ಹುಟ್ಟಿದರೂ ಅದರಲ್ಲಿ ಸಿಕ್ಕಿಕೊಳ್ಳದೆ, ಅದರಲ್ಲಿ ಸ್ವಯಂ ಪ್ರಕಾಶಿತನಾದ ಲಿಂಗದಲ್ಲಿ ತನ್ಮಯರಾಗಿ ಶರಣರಾದ ಬಳಿಕ ಪುನಃ ಅವರನ್ನು ಸಾಮಾನ್ಯ ಮನುಷ್ಯರನ್ನಾಗಿಸಲು ಬರುವುದಿಲ್ಲ. ಅವರ ಜೀವನವು ಜಾತಿಮುತ್ತಿನಂತೆ ಶ್ರೇಷ್ಠವಾಗಿ ಕಳಂಕರಹಿತವಾಗಿ ಇರುತ್ತದೆ. ತುಪ್ಪದಂತೆ ಕಂಪಾಗಿಯೂ, ಶಕ್ತಿವರ್ಧಕವಾಗಿಯೂ ಇರುತ್ತದೆ. ಪರಿಪಕ್ವವಾದ ಹಣ್ಣಿನಂತೆ, ರಸ-ರುಚಿ ಪೂರ್ಣವಾಗಿಯೂ ಪರಿಪಕ್ವವಾಗಿ ಇರುತ್ತದೆ. ಇಂತಹ ಶರಣರು ಲಿಂಗವೇ ತಾವಾಗಿ ಬಾಳುತ್ತಾರೆ.

■

## ೧೨೮

ಮೊನೆ ತಪ್ಪಿದ ಬಳಿಕ ಅಲಗೇನ ಮಾಡುವುದು?
ವಿಷ ತಪ್ಪಿದ ಬಳಿಕ ಹಾವೇನ ಮಡುವುದು?
ಭಾಷೆ ತಪ್ಪಿದ ಬಳಿಕ ದೇವಾ, ಬಲ್ಲಿದ ಭಕ್ತನೇನ ಮಾಡುವನು?
ಭಾಷೆ ತಪ್ಪಿದ ಬಳಿಕ ಪ್ರಾಣದಾಸೆಯ ಹಾರಿದಡೆ
ಮೀಸಲನು ಸೊಣಗ ಮುಟ್ಟಿದಂತೆ ಕೂಡಲಸಂಗಮದೇವಾ.

–ಬಸವಣ್ಣ

ಶರಣನಿಗೆ ಎಂದರೆ ಭಕ್ತನಾದವನಿಗೆ ತತ್ವಗಳು ಬಹಳ ಮುಖ್ಯ. ಅವನು ತತ್ವನಿಷ್ಠನಾಗಿ ಬದುಕಬೇಕು. ನುಡಿದಂತೆ ನಡೆಯಬೇಕು. ಇದು ಶರಣನ ಲಕ್ಷಣ. ಆಗಲೇ ಅವನಿಗೆ ಮಹತ್ವ. ಹಾಗಿದ್ದಾಗಲೇ ಅವನು ಬಲ್ಲಿದ ಭಕ್ತನೆನ್ನಿಸಿಕೊಳ್ಳುತ್ತಾನೆ. ಕತ್ತಿಗೆ ಬೆಲೆ ಬರಬೇಕಾದರೆ ಅದರ ಅಲಗು ಹರಿತವಾಗಿರಬೇಕು. ಮೊಂಡು ಕತ್ತಿ ಇದ್ದರೆ ಯಾರೂ ಲಕ್ಷ್ಯ ಕೊಡುವುದಿಲ್ಲ. ಅದು ಸಮಯದಲ್ಲಿ ಉಪಯೋಗಕ್ಕೆ ಬರುವುದಿಲ್ಲವಾದುದರಿಂದ ಅದನ್ನು ಎಲ್ಲರೂ ಅಲಕ್ಷಿಸುತ್ತಾರೆ. 'ಹಾವೆಂದರೆ ಹರಣನಡುಗಿತು' ಎನ್ನುವ ಮಾತಿದೆ. ಹಾವಿಗೆ ಎಲ್ಲರೂ ಹೆದರಲು ಕಾರಣವೆಂದರೆ ಅದಲ್ಲಿರುವ ವಿಷ. ಅದು ಪ್ರಾಣಾಂತಿಕವಾದುದು. ಆದುದರಿಂದ ಅದರ ಸಮೀಪ

ಹೋಗಲು ಜನ ಹೆದರುತ್ತಾರೆ. ಆದರೆ ಅದರ ವಿಷದ ಹಲ್ಲನ್ನು ಕಿತ್ತುಬಿಟ್ಟರೆ, ಹಾವು ಕಚ್ಚಿದರೂ ಅಪಾಯವಿಲ್ಲ. ಆಗ, ಅದರ ಬಾಲವನ್ನು ಹಿಡಿದು ತಿರುಗಿಸುತ್ತಾ ಆಟ ಸಹ ಆಡಿಸುತ್ತಾರೆ. ವಿಷ ಕಳೆದುಕೊಂಡ ಹಾವನ್ನು ಯಾರೂ ಲಕ್ಷಿಸುವುದಿಲ್ಲ. ಅದೇ ರೀತಿ ಭಕ್ತನಾದವನು ತನ್ನ ಮುಖ್ಯ ಗುಣ ತತ್ವನಿಷ್ಠಾಗುಣವನ್ನು ಕಳೆದುಕೊಂಡನಾದರೆ, ಅವನು ನಿಸ್ಸತ್ವನಾದಂತೆಯೇ ಸರಿ. ಅವನಲ್ಲಿ ಯಾವ ಶಕ್ತಿಯೂ ಉಳಿಯುವುದಿಲ್ಲ. ಅವನಿಗೆ ಗೌರವ ದೊರೆಯಲಾರದು. ಭಕ್ತನು ದೀಕ್ಷೆ ತೆಗೆದುಕೊಂಡಾಗ ಕೊಟ್ಟ ಭಾಷೆಯನ್ನು ತಪ್ಪಿದರೆ ಅಂತಹವನನ್ನು ಯಾರೂ ಮೂಸಿಯೂ ಸಹ ನೋಡಲಾರರು. ಅವನು ಇದ್ದರೂ ಸತ್ತಂತೆ. ಅವನು, ಮುಟ್ಟಿದ ಮಾಸಲಿನಂತೆ ಅಸ್ಪೃಶ್ಯ. ದೇವರಿಗೆ ನೈವೇದ್ಯ ಮಾಡುವ ಮಾಸಲನ್ನು ನಾಯಿ ಮುಟ್ಟಿದರೆ, ಅದು ದೇವರ ನೈವೇದ್ಯಕ್ಕೆ ಯೋಗ್ಯವಾಗಿ ಉಳಿಯುವುದಿಲ್ಲ. ಆ ಮಾಸಲು ವ್ಯರ್ಥ. ಹಾಗೆಯೇ ತತ್ವಭ್ರಷ್ಟನಾದ ಭಕ್ತ ನಾಯಿಮುಟ್ಟಿದ ಮಾಸಲಿನಂತೆ, ದೇವರ ಭಕ್ತನಾಗಲು ಅಯೋಗ್ಯನಾಗುತ್ತಾನೆ ಎಂದು ಬಸವಣ್ಣನವರು ಶರಣರಿಗೆ ತತ್ವನಿಷ್ಠರಾಗಿ ಬದುಕಬೇಕೆಂದು ಎಚ್ಚರಿಕೆ ಇತ್ತಿದ್ದಾರೆ.

■

## ೧೪೬

ಮಂಡೆ ಬೋಳಾದರೇನೋ ಹುಟ್ಟು ಬೋಳಾಗದನ್ನಕ್ಕರ
ತನು ನಿರ್ವಾಣವಾದರೇನೋ ಆಶೆ ನಿರ್ವಾಣವಾಗದನ್ನಕ್ಕರ?
ಇಂದ್ರಿಯ ನಿಗ್ರಹವ ಮಾಡಿದೊಡೇನೋ ಷಟ್‌ಸ್ಥಲಾಗ್ರಹವಾಗದನ್ನಕ್ಕರ?
ಸೌರಾಷ್ಟ್ರ ಸೋಮೇಶ್ವರಲಿಂಗ ಬರಿದೆ ಒಲಿವನೆ?

–ಆದಯ್ಯ

ಅನೇಕ ಜನರು ದೇವರ ಅನ್ವೇಷಣೆಯ ಮಾರ್ಗದಲ್ಲಿ ಸಂಚರಿಸುವಾಗ, ಕೆಲವರು ತಲೆಯನ್ನು ಬೋಳಿಸಿಕೊಳ್ಳುತ್ತಾರೆ. ಬಟ್ಟೆ ಬರೆಯನ್ನು ಎಸೆದು ಕೌಪೀನವನ್ನಷ್ಟೇ ಹಾಕಿಕೊಳ್ಳುತ್ತಾರೆ. ಇಂದ್ರಿಯವನ್ನು ನಿಗ್ರಹಮಾಡಿ ಸಂಸಾರದಿಂದ ದೂರವಿರುತ್ತಾರೆ. ಯಾವ ಆಸೆಗೂ ಒಳಗಾಗುವುದಿಲ್ಲ. ರುಚಿಯಾದ ಊಟವನ್ನಾಗಲೀ ಸುಂದರವಾದ ನೋಟವನ್ನಾಗಲೀ ಗೃಹಸ್ಥಜೀವನದ ಸುಖವನ್ನಾಗಲೀ ಸುವಾಸನೆಯುಳ್ಳ ವಸ್ತುಗಳನ್ನಾಗಲೀ, ಸುಶ್ರಾವ್ಯವಾದ ಸಂಗೀತವನ್ನಾಗಲೀ, ಮಧುರವಾದ ಮಾತುಗಳನ್ನಾಗಲೀ ಅಪೇಕ್ಷಿಸದಿರಬಹುದು. ಆದರೆ, ತನ್ನ ಹುಟ್ಟಿನ ಬಗ್ಗೆ ತಾನು ಈ ಜಾತಿ ಆ ಜಾತಿ ಎಂಬ ಭಾವನೆಯಾಗಲೀ, ತನ್ನ ತಾಯಿ, ತಂದೆ, ಬಂಧುಬಳಗವೆಂಬ ವ್ಯಾಮೋಹವಾಗಲೀ, ಸಂಪೂರ್ಣವಾಗಿ

ಇಲ್ಲವಾಗದಿದ್ದರೆ, ಯಾವುದೇ ರೀತಿಯ ಆಸೆಯೂ ಇಲ್ಲವಾಗದಿದ್ದರೆ, ಭಕ್ತಸ್ಥಲದಿಂದ ಹಿಡಿದು ಐಕ್ಯಸ್ಥಲದವರೆಗೆ ಒಂದೊಂದಾಗಿ ಮೆಟ್ಟಿಲನ್ನು ಏರಿ, ಶರಣನಾಗಿ ಐಕ್ಯಸ್ಥಲವನ್ನು ಮುಟ್ಟಿ ಪರಮಾತ್ಮನಲ್ಲಿ ಒಂದಾಗುವ ಸ್ಥಿತಿಗೆ ಏರದಿದ್ದರೆ, ತಲೆ ಬೋಳುಮಾಡಿಕೊಳ್ಳುವುದರಿಂದ, ಶರೀರವನ್ನು ಬೆತ್ತಲೆ ಮಾಡಿಕೊಳ್ಳುವುದರಿಂದ ಇಂದ್ರಿಯಗಳನ್ನು ನಿಗ್ರಹವನ್ನು ಮಾಡುವುದರಿಂದ ಏನೂ ಪ್ರಯೋಜನವಿಲ್ಲ. ದೇವರು ಬರೀ ಬಾಹ್ಯವಾದ ತಂತ್ರಗಳಿಂದ ಒಲಿಯುವುದಿಲ್ಲ. ಅವನು ಒಲಿಯಬೇಕಾದರೆ ಹುಟ್ಟು ಬೋಳಾಗಬೇಕು. ಆಶೆ ನಿರ್ವಾಣವಾಗಬೇಕು. ಷಟ್‌ಸ್ಥಲಾನುಗ್ರಹವಾಗಬೇಕು ಎನ್ನುತ್ತಾನೆ ಶರಣ ಆದಯ್ಯ.

■

## ೧೩೦

ಯೋಗಿಗೆ ಸಕಲ ಸಂಸಾರ ಸಂಗವದಿಲ್ಲವಾಗಿ
ತಿಳಿವದಡು ಪುಸಿನೋಡು, ತಾಯೆ
ವರವಿದ್ಯೆಯೆಂಬ ಕುಲವನಿತೆಯುಂಟು,
ಅಗಲದ ಪರಿತೋಷವೆಂಬ ಮೋಹದಣುಗನುಂಟು,
ವಿರತಿಯೆಂಬನುಕೂಲ ಜನಮುಂಟು,
ಕ್ಷಮೆಯೆಂಬ ಚರನುಂಟು, ಶಾಂತಿಯೆಂಬ ಸಖನ ಸರಸಮುಂಟು
ನುತಭಕ್ತಿಯೆಂಬ ಮಾತೆಯುಂಟು, ಸುಚಾರಿತ್ರವೆಂಬ ಪಿತನುಂಟು
ಸತ್ಯವೆಂಬ ಕುವರಿಯುಂಟು
ಹಿತವಾದ ನಂಬುಗೆಯೆಂಬಾಪ್ತ ಜನರ ಸೇವೆಯುಂಟು
ಮತಿಯೆಂಬ ಗೇಹಮುಂಟು, ಆಚಾರವೆಂಬ ಕ್ಷೇತಿರಮುಂಟು
ದಾಸಿಯುಂಟು, ಅಹಿಂಸೆಯೆಂಬ ದಾಸನುಂಟು
ಆಸ್ತೇಯವೆಂಬ ಲೇಸನೀವ ಧರ್ಮವೆಂಬ ವಾಹನಮುಂಟು
ಭಾಸುರ ಮೈತ್ರಾದಿಯೆಂಬ ಪಾತ್ರಾರುಂಟು, ಮುಕ್ತಿಯೆಂಬ
ದೇಶಮುಂಟು, ಗುರುಶಂಭುಲಿಂಗವೆಂಬ ಗುರು ನಿಜಗುಣಶಿವಯೋಗಿ
ತನಗುಂಟು ॥

–ನಿಜಗುಣ ಶಿವಯೋಗಿ

ಯೋಗಿಗಳು ತ್ಯಾಗಿಗಳು. ಅವರು ಸಂಸಾರದ ಸಂಗವನ್ನು ಮಾಡುವುದಿಲ್ಲ. ಮಾಯೆ ಮೋಹದಲ್ಲಿ ಮುಳುಗಿಸುವಂತಹ ಸಂಸಾರದಿಂದ ಅವರು ದೂರವಿರುತ್ತಾರೆ. ಸಾಮಾನ್ಯಮಾನವ ಸಂಸಾರ ಕಟ್ಟಿಕೊಂಡೇ ಬದುಕುತ್ತಾನೆ. ಅವನ ಸಂಸಾರದಲ್ಲಿ

ಸತಿ, ಸುತ, ತಂದೆ-ತಾಯಿ, ಮಗಳು, ಸ್ನೇಹಿತ, ಆಪ್ತಜನರು, ದಾಸ-ದಾಸಿಯರು, ತೀರ್ಥಕ್ಷೇತ್ರದ ತಿರುಗಾಟ, ವಸ್ತುವಾಹನಾದಿಗಳು ಮೊಮ್ಮಕ್ಕಳು, ತನ್ನ ನಾಡು, ಗುರುತನ, ಅನುಚರರು ಮುಂತಾದವರೆಲ್ಲಾ ಇರುತ್ತಾರೆ. ಆದರೆ ಯೋಗಿಗಳು ಇವುಗಳೆಲ್ಲದರಿಂದ ದೂರ. ಇವೆಲ್ಲ ತ್ಯಾಜ್ಯ.

ಆದರೆ ನಿಜಗುಣ ಶಿವಯೋಗಿಗಳು, ಯೋಗಿಗಳಿಗೆ ಸಂಸಾರ ಸಂಗವಿಲ್ಲ ಎಂಬ ಮಾತು ಸುಳ್ಳು ಎನ್ನುತ್ತಾರೆ. ಅವರಿಗೂ ಸಂಸಾರವಿದೆ. ಅವರಿಗೂ ಪತ್ನಿ, ಪುತ್ರ, ತಂದೆ-ತಾಯಿಗಳು, ಬಂಧು-ಬಳಗ, ದಾಸ-ದಾಸಿಯರು, ಸ್ನೇಹಿತರು, ಆಪ್ತರು, ಪುತ್ರ-ಪೌತ್ರಾದಿಗಳು, ದೇಶ ಕೋಶ ವಸ್ತು-ವಾಹನಗಳು ಇವೆ. ಆದರೆ ಅವು ಈ ಸಾಮಾನ್ಯ ಜನರಿಗೆ ಇರುವಂತಹವುಗಳಲ್ಲ. ಬೇರೆಯೆ ಆದ ಸಂಸಾರ ಸಂಗ ಅವರಿಗೆ ಇದೆ ಎಂಬುದನ್ನು ಬಹು ಮಾರ್ಮಿಕವಾದ ಹೋಲಿಕೆ ಕೊಟ್ಟು ವಿವರಿಸಿದ್ದಾರೆ. ಸಾಮಾನ್ಯ ಜನರ ಸಂಸಾರ ಸಂಗದಿಂದ ಇವರು-ದೂರ. ಆದರೆ ಯೋಗಿಗಳ ಸಂಸಾರ ಬಳಗ, ತ್ಯಾಗಿಗಳನ್ನು ಯೋಗಿಗಳನ್ನು ಮಾಡುವಂತಹು-ವೆಂಬುದನ್ನು ನಿಜಗುಣರ ಈ ವಚನದಿಂದ ತಿಳಿಯಬಹುದು.

'ಯೋಗಿಗಳಿಗೆ ವರವಿದ್ಯೆ ಎಂಬ ಕುಲವಧು ಇದ್ದಾಳೆಂದು ಹೇಳಿದ್ದಾರೆ. ಸದಾ ಇರುವ ಸಂತೋಷವೇ ಮೋಹದ ಮಗ. ವೈರಾಗ್ಯವೇ ಹೊಂದಿಕೊಂಡು ನಡೆಯುವ ಬಳಗ. ಕ್ಷಮೆಯೇ ಸದಾ ಜೊತೆಗಿರುವ ಸೇವಕ. ಶಾಂತಿಯೇ ಸದಾ ಸರಸದಿಂದಿರಲು ಸಹಾಯಕನಾದ ಸ್ನೇಹಿತ. ದೇವರಲ್ಲಿರುವ ಅನಂತ ಭಕ್ತಿಯೇ ತಾಯಿ. ಉತ್ತಮ ಚಾರಿತ್ರ್ಯವೇ ತಂದೆ. ಜೊತೆಗಿರುವ ಸತ್ಯಮಾರ್ಗವೇ ಮಗಳು. ಹಿತವಾದ ಜನರ ವಿಶ್ವಾಸವೇ ಆಪ್ತಜನರ ಸೇವೆ. ಬುದ್ಧಿಯೇ ಮನೆ, ಆಚಾರವೇ ಕ್ಷೇತ್ರ, ಅಹಿಂಸೆಯೆ ದಾಸಿಯಾದರೆ, ಆಸೆಯೇ ದಾಸ, ಒಳಿತನ್ನು ಮಾಡುವ ಧರ್ಮಮಾರ್ಗವೇ ವಾಹನ. ಭಾಸುರ ಮತ್ತು ಮೈತ್ರಾದಿಗಳು ಮೊಮ್ಮಕ್ಕಳು. ಮುಕ್ತಿಯೇ, ದೇಶ. ಗುರು ಶಂಭುಲಿಂಗವೇ ತನಗೆ ಉಂಟು ಎಂದು ಯೋಗಿಯ ಸಂಸಾರದ ಸಂಗಡಿಗರು ಯಾರು ಎಂಬುದನ್ನು ಮನನೀಯವಾಗಿ ವಿವರಿಸಿದ್ದಾರೆ ಇಲ್ಲಿ. ಇಂತಹವರೊಡಗೂಡಿ ಯೋಗಿ ಸಂಸಾರ ಮಾಡುತ್ತಾನೆ ಎಂಬ ವಿವರನ್ನು ನಿಜಗುಣರು ಈ ಹಾಡಿನ ಮೂಲಕ ತಿಳಿಸಿದ್ದಾರೆ.

■

## ೧೩೧

ರಿಣತಪ್ಪಿದ ಹೆಂಡಿರಲ್ಲಿ, ಗುಣ ತಪ್ಪಿದ ನಂಟರಲ್ಲಿ
ಜೀವವಿಲ್ಲದ ದೇಹದಲ್ಲಿ ಫಲವೇನೋ?
ಆಳ್ದನೊಲ್ಲದ ಆಳಿನಲ್ಲಿ, ಸಿರಿ ತೊಲಗಿದ ಅರಸಿನಲ್ಲಿ

ವರವಿಲ್ಲದ ದೈವದಲ್ಲಿ ಫಲವೇನೋ?
ಕಳಿದ ಹೂವಿನಲ್ಲಿ, ಕಂಪನುಳಿದ ಸೂಳೆಯಲ್ಲಿ ಹೆಂಪ
ಕೊಳಚೆಯ ನೀರಿನಲ್ಲಿ ಗುಂಪನರಸುವಿರಿ, ಮರುಳಿರೆ
ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ
ಪರಮ ಕಾರಣಿಕ ನಮ್ಮ ಕೂಡಲಸಂಗಮದೇವ

–ಬಸವಣ್ಣ

ಪತಿ ಪತ್ನಿಯರ ಸಂಬಂಧ ಚೆನ್ನಾಗಿದ್ದರೆ ಗೃಹಸ್ಥಜೀವನ ಚನ್ನ. ಅಂತಹ ಸುಖಜೀವನಕ್ಕೆ ಇಬ್ಬರಿಗೂ ಕೂಡಿಬಾಳುವ ಋಣವಿದ್ದರೆ ಮಾತ್ರ ಎಲ್ಲಾ ಹಸನು. ಇಲ್ಲದಿದ್ದಲ್ಲಿ ಜೀವನ ನರಕಸದೃಶ. ಇನ್ನು ಬಂಧುಬಳಗ ನೆಂಟರಲ್ಲಿ ಸ್ನೇಹ ಪ್ರೀತಿಯ ನಡೆ ಇರಬೇಕು. ಇಂತಹ ಸದ್ಗುಣಗಳು ಅವರಲ್ಲಿ ಇಲ್ಲದಿದ್ದರೆ ವಿಶ್ವಾಸ ಉಳಿಯುವುದಿಲ್ಲ. ಪ್ರೀತಿ ಸಹಕಾರ ಸಹಾಯ, ನೆಮ್ಮದಿಯ ಸಂಬಂಧ ಸಾಧ್ಯವೂ ಇಲ್ಲ. ಅದೇ ರೀತಿ ಈ ದೇಹದಲ್ಲಿ ಜೀವವಿರುವ ತನಕ ಬೆಲೆ. ಜೀವ ಹೋದ ಮರುಕ್ಷಣವೇ ಆ ದೇಹಕ್ಕೆ ಯಾವ ಬೆಲೆಯೂ ಇಲ್ಲ. ಜೀವವಿದ್ದಾಗ ಆ ದೇಹ ಒಳ್ಳೆಯ ಯೋಧನಾಗಿದ್ದಿರಬಹುದು, ಆಡಳಿತಗಾರನಾಗಿರಬಹುದು, ಕಲಾಕಾರನಾಗಿರಬಹುದು, ಸತ್ಪುರುಷನಿರಬಹುದು, ಸಾಹಿತಿಯೇ ಆಗಿರಬಹುದು, ಸಮಾಜಸುಧಾರಕನೇ ಆಗಿರಬಹುದು. ಆದರೆ ದೇಹದಿಂದ ಪ್ರಾಣಹೋದ ಕೂಡಲೇ, ಆ ದೇಹ ನಿಶ್ಚೇಷ್ಟಿತವಾಗುತ್ತದೆ. ಪ್ರಾಣವಿದ್ದಾಗ ಎಷ್ಟು ಶಕ್ತಿ ಇದ್ದರೂ, ಈಗ ಅವೆಲ್ಲಾ ಇಲ್ಲವಾಗುತ್ತಲೇ ಆ ನಿಶ್ಚೇಷ್ಟಿತ ದೇಹವನ್ನು ಒಂದು ದಿನ ಸಹ ಇಟ್ಟುಕೊಳ್ಳಲಾಗುವುದಿಲ್ಲ. ಇಟ್ಟುಕೊಂಡರೂ ಏನೂ ಪ್ರಯೋಜನವಿಲ್ಲ. ಆದ್ದರಿಂದ ಬಸವಣ್ಣನವರು ರಿಣ ತಪ್ಪದ ಹೆಂಡಿರಲ್ಲಿ ಗುಣತಪ್ಪಿದ ನಂಟರಲ್ಲಿ, ಜೀವವಿಲ್ಲದ ದೇಹದಲ್ಲಿ ಏನೂ ಫಲವಿಲ್ಲವೆಂದು ಹೇಳಿದ್ದಾರೆ. ಅದೇ ರೀತಿ ಆಳು ಯಜಮಾನನಿಗೆ ವಿಧೇಯನಾಗಿದ್ದರೆ ಉಪಯೋಗ. ಇಲ್ಲದಿದ್ದಲ್ಲಿ ಅವನಿದ್ದರೂ ಪ್ರಯೋಜನವಿಲ್ಲ. ಹಾಗೆಯೇ ರಾಜನಿಗೆ ಸಂಪತ್ತಿರಬೇಕು. ಸಂಪತ್ತಿದ್ದರೆ, ಪ್ರಜೆಗಳಿಗೆ ಬೇಕಾದ ಅನುಕೂಲ ಮಾಡಿಕೊಡಬಲ್ಲ, ವೈರಿಗಳು ಬಂದರೆ ಸೆಣಸಿ ಹೋರಾಡಿ, ಹೊಡೆದೋಡಿಸಬಲ್ಲ. ವೈಭವದಿಂದ ರಾಜ್ಯವಾಳಬಲ್ಲ. ಸಿರಿಯೇ ಇಲ್ಲದಿದ್ದಲ್ಲಿ ರಾಜನ ಕರ್ತವ್ಯಗಳಾದ ಇವಾವುಗಳನ್ನೂ ಮಾಡಲು ಸಾಧ್ಯವಾಗುವುದಿಲ್ಲ. ಅದಿಲ್ಲದ ಅರಸನಿಂದ ಏನೂ ಪ್ರಯೋಜನವಿಲ್ಲ. ಅದೇ ರೀತಿ ಭಕ್ತನಾದವನು ಎಷ್ಟು ಬೇಡಿದರೂ, ಕರುಣೆ ತೋರದ ದೈವದಿಂದಲೂ ಫಲವಿಲ್ಲವೆಂದಿದ್ದಾರೆ. ಆದುದರಿಂದ ವಿಚಾರ ಮಾಡದೆ ಏನು ಮಾಡಲೂ ಹೋಗಬಾರದು. ಬಾಡಿ ಉದುರಿಹೋದ ಹೂವಿನಲ್ಲಿ, ಹಿತವಾಗಿ ನಡೆದ ಮನಸ್ಸಿಗೆ ಆನಂದವನ್ನುಂಟುಮಾಡಲಾರದ ಸೂಳೆಯಲ್ಲಿ, ನಿಂತು ಕೊಳೆತು ನಾರುವ ನೀರಿನಲ್ಲಿ ಸಂಗವನ್ನು ಬಯಸಿದಂತೆ, ಅಲ್ಲಲ್ಲಿ ದೇವರನ್ನು ಹುಡುಕಿಕೊಂಡು ಹೋಗಬೇಡಿರಿ. ಹುಚ್ಚಪ್ಪಗಳಿರಾ, ಗಿರಿಜಾವಲ್ಲಭನೂ, ಪರಮಕಾರಣಿಕನೂ, ಆದ ನಮ್ಮ

ಕೂಡಲಸಂಗಮನೇ ಜಗತ್ತಿನಲ್ಲಿ ವರಗುರುವಾಗಿದ್ದಾನೆ ಎಂದು ಹೇಳಿದ್ದಾರೆ ಬಸವಣ್ಣನವರು.

■

## ೧೩೨

ಲೋಕದ ಡೊಂಕ ನೀವೇಕೆ ತಿದ್ದುವಿರಿ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯವರ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವಾ.

–ಬಸವಣ್ಣ

ನಮ್ಮಲ್ಲಿ ಬಹಳಷ್ಟು ಜನ ತಮ್ಮಲ್ಲಿ ಬೇಕಾದಷ್ಟು ತಪ್ಪಗಳಿದ್ದರೂ ಅವುಗಳ ಕಡೆಗೆ ಗಮನಕೊಡದೆ, ಬೇರೆಯವರು ಸಣ್ಣ ತಪ್ಪು ಮಾಡಿದರೂ ಅದನ್ನೇ ದೊಡ್ಡದು ಮಾಡಿ, ತಾವು ಬಹಳ ಸಭ್ಯರೆಂಬಂತೆ ತಿದ್ದಲು ಹೋಗುವವರೇ ಹೆಚ್ಚು. ಇಂಥವರನ್ನು ನೋಡಿಯೇ ತಮ್ಮ ಎಲೆಯಲ್ಲಿ ಕತ್ತೆ ಸತ್ತು ಬಿದ್ದಿದೆ, ಅದರ ಕಡೆ ಲಕ್ಷ್ಯ ಕೊಡೋದು ಬಿಟ್ಟು, ಬೇರೆಯವರ ಎಲೆಯ ಮೇಲೆ ಹಾರಾಡುವ ನೊಣ ಝಾಡಿಸಲು ಹೋಗ್ತಾರೆ ಎಂಬ ಗಾದೆ ಮಾತು ಹುಟ್ಟಿಕೊಂಡಿದೆ. ಪ್ರತಿಯೊಬ್ಬರೂ ಬೇರೆಯವರ ಹುಳುಕನ್ನು ಹುಡುಕಿ ಟೀಕಿಸುವ ಬದಲು ತಮ್ಮ ತಮ್ಮಲ್ಲಿರುವ ದೋಷಗಳನ್ನು ಗುರುತಿಸಿಕೊಂಡು, ತಮ್ಮ ಮನದಲ್ಲಿರುವ ಕೆಟ್ಟ ಯೋಚನೆಗಳನ್ನು ಗಮನಕ್ಕೆ ತಂದುಕೊಂಡು, ತಮ್ಮನ್ನು ತಾವು ತಿದ್ದಿಕೊಂಡರೆ ಸಾಕು. ಬೇರೆಯವರನ್ನು ತಿದ್ದಲು ಹೋಗುವ ಅವಶ್ಯಕವಿಲ್ಲ ಎಂಬ ಮಾತನ್ನು ಬಸವಣ್ಣನವರು ಲೋಕದ ಡೊಂಕ ತಿದ್ದುವ ಮೊದಲು ನಿಮ್ಮ ನಿಮ್ಮನ್ನು ತಿದ್ದಿಕೊಳ್ಳಿ ತಮ್ಮಲ್ಲಿ ದೋಷವಿಟ್ಟುಕೊಂಡು, ಬೇರೆಯವರು ಹಾಗೆ ಮಾಡ್ತಾರೆ, ಹೀಗೆ ಮಾಡ್ತಾರೆ ಎಂದು ಟೀಕಿಸುವವರನ್ನು, ವ್ಯಥೆಪಡುವವರನ್ನು ದೇವರು ಮೆಚ್ಚುವುದಿಲ್ಲ ಎಂದು ಹೇಳಿದ್ದಾರೆ.

ಪ್ರತಿಯೊಬ್ಬ ವ್ಯಕ್ತಿಯೂ ಬೇರೆಯವರ ಗೊಡವೆಗೆ ಹೋಗದೆ, ತನ್ನನ್ನು ತಾನು ಸುಧಾರಿಸಿಕೊಂಡರೆ, ತಪ್ಪಿಲ್ಲದಂತೆ ಬದುಕಿದರೆ, ಮಾನವರೆಲ್ಲಾ ಸರಿ ಇದ್ದಂತಾಗುತ್ತದೆ. ಯಾರನ್ನೂ ತಿದ್ದುವ ಅವಶ್ಯಕತೆ ಬೀಳುವುದಿಲ್ಲ. ಆದ್ದರಿಂದ ಎಲ್ಲರೂ ಮೊದಲು ತಮ್ಮ ತನು ಮನದಲ್ಲಿ ತಪ್ಪಿಲ್ಲದಂತೆ, ದೋಷವಿಲ್ಲದಂತೆ ನೋಡಿಕೊಳ್ಳಬೇಕು ಎಂಬುದು ಬಸವಣ್ಣನವರ ಆದೇಶ.

■

೧೩೩

ಲಿಂಗಬಾಹ್ಯನ, ಆಚಾರಭ್ರಷ್ಟನ, ವ್ರತತಪ್ಪುಕನ,
ಗುರುಲಿಂಗಜಂಗಮವ ಕೊಂದವನ, ಪಾದೋದಕ ಪ್ರಸಾದದೂಶಕನ,
ವಿಭೂತಿ, ರುದ್ರಾಕ್ಷಿ ನಿಂದಕನ ಕಂಡೊಡೆ
ಶಕ್ತಿಯುಳ್ಳಡೆ ಸಂಹಾರ ಮಾಡುವುದು
ಶಕ್ತಿ ಇಲ್ಲದಿದ್ದಡೆ ಕಣ್ಣು, ಕರ್ಣವ ಮುಚ್ಚಿಕೊಂಡು, ಶಿವ ಮಂತ್ರ ಜಪಿಸುವುದು
ಅಷ್ಟೂ ಆಗದಿದ್ದರೆ, ಆ ಸ್ಥಳವ ಬಿಡುವುದು
ಅದಲ್ಲದಿದ್ದಡೆ, ಕುಂಭೀಪಾತಕ ನಾಯಕನರಕದಲ್ಲಿಕ್ಕುವ
ಶ್ರೀ ಗುರುಸಿದ್ಧೇಶ್ವರನು.

–ರೇಕಮ್ಮ

ಶರಣೆ ರೇಕಮ್ಮನು ಬರೆದ ಇದೊಂದೇ ವಚನ ದೊರೆತಿದೆ. ವೀರಶೈವ ಧರ್ಮ ಬಸವಣ್ಣನವರ ಕಾಲದಲ್ಲಿ ವ್ಯಾಪಕವಾಗಿ ಪ್ರಚಲಿತಗೊಂಡಿತು. ಆಗ ಅದರ ಪ್ರಭಾವಕ್ಕೆ ಒಳಗಾಗಿ ಸಮಾಜದ ಎಲ್ಲ ಸ್ಥರದ ಜನರು ವೀರಶೈವ ಧರ್ಮದ ದೀಕ್ಷೆಯನ್ನು ಪಡೆಯಲು ಮುಂದಾದರು. ಆಗ ವಿಧಿವತ್ತಾಗಿ ವೀರಶೈವ ದೀಕ್ಷೆಯನ್ನು ಅರಸಿ ಬಂದವರಿಗೆ ಕೊಡುತ್ತಿದ್ದರು. ಆಗ ಅಂತಹವರಿಗೆ ಗುರು, ಲಿಂಗ, ಜಂಗಮವೆ ಮುಂತಾದ ಅಷ್ಟಾವರಣದ ಅವಶ್ಯಕತೆಯನ್ನೂ ಪಂಚಾಚಾರಗಳ ಮಹತ್ತನ್ನೂ ವಿವರಿಸಿ ಕೊಡಲಾಗುತ್ತಿತ್ತು. ಆ ದೀಕ್ಷೆಯನ್ನು ನಿಷ್ಠೆಯಿಂದ ಪಡೆದವರಿಗೆ, ಅದರ ಬಗ್ಗೆ ಆಸಕ್ತಿಯೂ, ಶ್ರದ್ಧೆಯೂ, ಅಭಿಮಾನವೂ, ಭಕ್ತಿಯೂ ಇರುವುದು ಸಹಜ. ಅಂತಹ ನಿಷ್ಠೆಯಿಂದ ದೀಕ್ಷೆಯನ್ನು ಪಡೆದವರಲ್ಲಿ ರೇಕಮ್ಮನೂ ಒಬ್ಬಳೆಂದು ಕಾಣುತ್ತದೆ. ಆ ಕಾಲದಲ್ಲಿ ಗುರು–ಲಿಂಗ–ಜಂಗಮ ಮುಂತಾದ ಅಷ್ಟಾವರಣ, ಪಂಚಾಚಾರದ ಬಗ್ಗೆ, ಬಸವಣ್ಣನ ಕ್ರಾಂತಿಕಾರಕ ಸುಧಾರಣೆಗಳನ್ನು ಒಪ್ಪದಿದ್ದ ಜನ, ಟೀಕೆ ಮಾಡಿರಬೇಕು. ತೊಂದರೆ ಕೊಟ್ಟಿರಬೇಕು. ಇದರಿಂದ ತಾನು ಒಪ್ಪಿಕೊಂಡ ಧರ್ಮದ ವಿರುದ್ಧವಾದ ನಡವಳಿಕೆಗಳು, ನಿಂದನೆಗಳು ಆಕೆಯನ್ನು ಸಿಟ್ಟಿಗೇಳಿಸಿರಬೇಕು. ದುಃಖಕ್ಕೆ ಈಡು ಮಾಡಿರಬೇಕು. ಅಸಹಾಯ ಸ್ಥಿತಿಯನ್ನು ಉಂಟುಮಾಡಿರಬಹುದು. ಅಲ್ಲದೆ ಕೆಲವು ಡಾಂಭಿಕ ಜನರು ದೀಕ್ಷೆ ಕೈಗೊಂಡರೂ, ಆ ದೀಕ್ಷೆಯ ಕಟ್ಟುಪಾಡುಗಳಿಗೆ ಅನುಸರಿಸಿ ನಡೆಯುವ ವ್ರತತಪ್ಪಿ, ವಚನವನ್ನು ಮೀರಿಯೂ ಬದುಕಿರಬೇಕು. ಹಾಗೆ ಮಾಡಿರುವವರು ಇದ್ದರೆಂಬುದನ್ನು ಬಸವಣ್ಣ, ಅಲ್ಲಮಪ್ರಭು, ಚನ್ನಬಸವಣ್ಣ ಮುಂತಾದವರ ವಚನಗಳಲ್ಲಿ ಗುರುತಿಸಬಹುದಾಗಿದೆ. ಅಂತಹ ಸಂದರ್ಭಗಳನ್ನು ನೋಡಿ ರೇಕಮ್ಮನು, ಲಿಂಗವನ್ನು ಧರಿಸಿಕೊಳ್ಳದವನನ್ನು, ಆಚಾರಕ್ಕೆ

ನಿಷ್ಠವಾಗಿಲ್ಲದವನನ್ನು ವ್ರತದ ನಿಯಮಗಳನ್ನು ಮೀರಿ ನಡೆಯುವವನನ್ನು, ಗುರು, ಲಿಂಗ, ಜಂಗಮರ ನಾಶಕ್ಕೆ ಕಾರಣನಾದವನನ್ನು, ಪ್ರಸಾದ-ಪಾದೋದಕಗಳ ಬಗ್ಗೆ ನಿಂದೆಯ ಮಾತಾಡುವವನನ್ನು, ವಿಭೂತಿ, ರುದ್ರಾಕ್ಷಿಗಳ ಬೆಲೆಯನ್ನು ತಿಳಿಯದೆ ಅಗ್ಗವಾಗಿ ಮಾತಾಡುವವನನ್ನು ಕಂಡರೆ, ಶಕ್ತಿಯಿದ್ದರೆ, ಕೂಡಲೇ ಕೊಂದುಹಾಕಿಬಿಡಬೇಕು. ಇದು ಗಣಾಚಾರದ ಲಕ್ಷಣ. ಶಕ್ತಿ ಇಲ್ಲದಿದ್ದರೆ ಕಿವಿ, ಕಣ್ಣುಗಳನ್ನು ಮುಚ್ಚಿಕೊಂಡು ಅವುಗಳನ್ನು ನೋಡದಂತೆ, ಕೇಳದಂತೆ ಶಿವಮಂತ್ರವನ್ನು ಜಪಿಸುತ್ತಾ ಇರಬೇಕು ಎನ್ನುತ್ತಾಳೆ. ಅದೂ ಆಗದಿದ್ದರೆ, ಅಂತಹ ಸ್ಥಳದಿಂದಲೇ ದೂರ ಹೋಗಿಬಿಡಬೇಕು. ಇಲ್ಲದಿದ್ದಲ್ಲಿ ತನ್ನ ಆರಾಧ್ಯದೇವತೆಯಾದ ಗುರುಸಿದ್ಧನು ಕುಂಭೀಪಾಕ ನರಕದಲ್ಲಿ ಅಂತಹವರನ್ನು ಹಾಕುವನು ಎಂದಿದ್ದಾಳೆ ಶರಣೆ ರೇಕಮ್ಮ.

■

## ೧೩೪

ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕೂಡಲಸಂಗಮದೇವಾ
ನಿಮ್ಮ ಚರಣಕಮಲದೊಳಗಾನು ತುಂಬಿ.

–ಬಸವಣ್ಣ

ನಿಜವಾದ ಭಕ್ತ, ಭಕ್ತಿಯ ತುಟ್ಟ ತುದಿಯನ್ನು ಮುಟ್ಟಿದಾಗ, ಅವನಿಗೆ ಎಲ್ಲೆಲ್ಲಿಯೂ ಕಾಣುವುದು, ತನ್ನ ಆರಾಧ್ಯ ದೈವ. ಅದನ್ನು ಬಿಟ್ಟು ಅವನಿಗಿನ್ನೊಂದು ಬೇಡ. ಅವನು ಮಾತನಾಡುವುದು ಆ ದೈವದ ಬಗ್ಗೆ, ಕೇಳುವುದು ಆ ದೈವದ ಸಂಬಂಧದ ವಿಷಯಗಳನ್ನು, ಆ ದೈವವನ್ನು ನೋಡುವುದರಲ್ಲೇ ಅವನ ಆಸಕ್ತಿ. ಬೇರೊಂದಾವುದಕ್ಕೂ ಅವನ ಮನ ಎಳಸುವುದಿಲ್ಲ. ಅವನ ಮನಸ್ಸನ್ನು ಆವರಿಸುವುದು ಆ ದೈವದ ನೆನಪುಗಳು. ತನ್ನನ್ನು ಸಂಪೂರ್ಣವಾಗಿ ದೈವಕ್ಕೆ ಅರ್ಪಿಸಿಕೊಳ್ಳುವುದರಲ್ಲೇ ಅವನು ಅಪಾರ ಆನಂದವನ್ನು ಅನುಭವಿಸುತ್ತಾನೆ. ಅಂತಹವನಿಗೆ ದೈವವನ್ನು ಎಷ್ಟು ಕೊಂಡಾಡಿದರೂ, ಎಷ್ಟು ವರ್ಣಿಸಿದರೂ ಕಡಿಮೆಯೆ. ಅವನು ದೇವರನ್ನು ನೋಡಿ ದಣಿಯ, ಪ್ರಶಂಸೆಯನ್ನು ಮಾಡಿ ದಣಿಯ, ಮಹಿಮೆಯನ್ನು ಕೇಳಿ ದಣಿಯ. ಆ ದೈವವನ್ನು ಬಿಟ್ಟು ಅವನಿಗಿನ್ನಾವುದರಲ್ಲೂ ಆಸಕ್ತಿ ಇರುವುದಿಲ್ಲ. ಅದು ಭಕ್ತನ ತೂರ್ಯಾವಸ್ಥೆ.

ಅಂತಹ ಒಂದು ಘಟ್ಟವನ್ನು ಮುಟ್ಟಿದ ಬಸವಣ್ಣ ಕೂಡಲಸಂಗಮನನ್ನು ಕುರಿತು, ದೇವಾ, ನನ್ನ ಮಾತಿನ ತುಂಬಾ ನಿಮ್ಮ ನಾಮಾಮೃತವು ತುಂಬಿಬರಲಿ, ನನ್ನ ಕಣ್ಣು ತುಂಬ ನೀವೇ ಕಾಣಿಸುತ್ತಿರಲಿ, ಕಿವಿ ತುಂಬ ನಿಮ್ಮ ಕೀರುತಿಯನ್ನೇ ಕೇಳುವ ಭಾಗ್ಯ ಒದಗಿರಲಿ, ಮನಸ್ಸನ್ನೆಲ್ಲಾ ನಿಮ್ಮ ನೆನಪೇ ಆವರಿಸಿರುವಾಗ, ನನಗೆ ಮತ್ತೆನ್ನೊಂದೇನು ತಾನೇ ಬೇಕು? ನಿಮ್ಮ ಚರಣವೆಂಬ ಕಮಲಗಳಲ್ಲಿ ದುಂಬಿಯಂತೆ ನಾನು ತುಂಬಿಕೊಂಡು ಕೃತಕೃತ್ಯನಾಗುತ್ತೇನೆ ಎಂದು ಭಕ್ತಿ ಎಂಬ ಸಂತೋಷ ಸಾಗರದಲ್ಲಿ ಮುಳುಗಿ ಆನಂದದಿಂದ ಹಾಡಿದ್ದಾನೆ–ಹೀಗೆ ಪಂಚೇಂದ್ರಿಯಗಳೆಲ್ಲ–ದರಲ್ಲಿಯೂ ಆ ದಯಾಮಯನಾದ ಭಗವಂತನೇ ತುಂಬಿ ಇನ್ನೊಂದು ವಿಚಾರವೇ ಮನಕ್ಕೆ ಬಾರದಿರುವ ಸ್ಥಿತಿಯೇ, ಶರಣಸ್ಥಲವನ್ನು ಕ್ರಮಿಸಿ ಐಕ್ಯಸ್ಥಲವನ್ನು ಮುಟ್ಟಿದ ಸ್ಥಿತಿ. ಆ ಸ್ಥಿತಿಗೆ ಬಸವಣ್ಣ ಮುಟ್ಟಿರುವುದನ್ನು ನಾವು ಇಲ್ಲಿ ಕಾಣಬಹುದು.

■

## ೧೩೫

ವಾರವೆಂದರಿಯೆ ದಿನವೆಂದರಿಯೆ
ಏನೆಂದರಿಯೆನಯ್ಯಾ
ಇರುಳೆಂದರಿಯೆ ಹಗಲೆಂದರಿಯೆ
ಏನೆಂದರಿಯೆನಯ್ಯಾ
ನಿಮ್ಮ ಪೂಜಿಸಿ ಎನ್ನುವ ಮರೆದೆ,
ಕೂಡಲಸಂಗಮದೇವಾ.

–ಬಸವಣ್ಣ

ನಿಜವಾದ ಭಕ್ತ, ಪರಮಾತ್ಮನಲ್ಲಿ ಒಂದಾಗಿಬಿಡುತ್ತಾನೆ. ಅವನಿಗೆ ಭಗವಂತನನ್ನು ಬಿಟ್ಟು ಮತ್ತೊಂದಿಲ್ಲ. ಒಳ್ಳೆಯ ಬಿಲ್ಲುಗಾರ ಬಾಣವಿಡುವಾಗ ಅವನಿಗೆ ಮತ್ತೊಂದರ ಕಡೆ ಲಕ್ಷ್ಯವಿರುವುದಿಲ್ಲ. ಮೈಯ್ಯೆಲ್ಲಾ ಕಣ್ಣಾಗಿ ತಾನು ಬಾಣಬಿಡಬೇಕೆಂಬ ಗುರಿಯೊಂದೇ ಅವನ ಕಣ್ಣಿಗೆ ಕಾಣಿಸುತ್ತದೆ. ಅವನು ಮರದಲ್ಲಿ ಬಿಟ್ಟಿರುವ ಹಣ್ಣಿಗೆ ಗುರಿಯಿಟ್ಟು ಅದನ್ನು ಬೀಳಿಸಬೇಕೆಂದಿದ್ದರೆ, ಗುರಿಯಿಟ್ಟ ಅವನಿಗೆ ತೂಗಾಡುತ್ತಿರುವ ಹಣ್ಣಷ್ಟೇ ಕಾಣಿಸುತ್ತಿರುತ್ತದೆ. ಅದರಲ್ಲಿ ಬಿಟ್ಟಿರುವ ಮರ, ಎಲೆ, ಕೊಂಬ, ರೆಂಬೆಗಳೊಂದರೂ ಕಾಣುವುದಿಲ್ಲ. ಅಂಥವನು ಗುರಿತಪ್ಪುವುದಿಲ್ಲ. ಅದೇ ರೀತಿ, ನಿಜವಾದ ಭಕ್ತನ ಮನಸ್ಸಿನ ತುಂಬಾ ದೇವರೆ. ಭಕ್ತಿ ಭಾವದಲ್ಲಿ ಮುಳುಗಿದ ಅವನಿಗೆ ಹಗಲು ರಾತ್ರಿಯಾದುದು ಗೋಚರಿಸುವುದಿಲ್ಲ. ಅಂತಹ ಪರಿಪೂರ್ಣ ಭಕ್ತಿ ಭಾವವನ್ನು ಬಸವಣ್ಣ ಈ ವಚನದಲ್ಲಿ ಪ್ರಕಟಿಸಿದ್ದಾನೆ.

ಭಕ್ತಿಯಲ್ಲಿ ಮೈಮರೆತ ಬಸವಣ್ಣ, ದೇವಾ ನಿಮ್ಮ ಪೂಜೆಯಲ್ಲಿ ಧ್ಯಾನದಲ್ಲಿ ನಿರತನಾದವನಿಗೆ ದಿನಗಳುರುಳಿದ್ದೂ, ವಾರಗಳು ಸಂದುದೂ, ಯಾವುದೂ ಗೊತ್ತಾಗುವುದಿಲ್ಲ. ಹಗಲಾದದ್ದೂ ತಿಳಿಯುತ್ತಿಲ್ಲ, ರಾತ್ರಿಯಾದದ್ದೂ ಕಾಣುತ್ತಿಲ್ಲ. ನಿಮ್ಮ ಪೂಜೆಯಲ್ಲಿ ನಿರತನಾದ ನನಗೆ 'ನನ್ನ' ಅರಿವೇ ಇರುವುದಿಲ್ಲ ಕೂಡಲಸಂಗಮದೇವಾ ಎಂದಿದ್ದಾನೆ.

ಈ ಭಕ್ತಿಯ ಹಂತವನ್ನು ಮುಟ್ಟುವುದೇ ನಮ್ಮ ಗುರಿಯಾಗಬೇಕು. ಇದು ಎಲ್ಲರಿಗೂ ಸಾಧ್ಯವಾದುದಲ್ಲವಾದರೂ ಈ ಉದ್ದೇಶದಿಂದ ನಾವು ಭಕ್ತಿ ಮಾರ್ಗದಲ್ಲಿ ನಡೆದದ್ದೇ ಆದರೆ, ಪೂರ್ಣಗುರಿಯನ್ನು ಮುಟ್ಟಿದರೂ ಮುಟ್ಟಬಹುದು. ಇಲ್ಲದಿದ್ದಲ್ಲಿ ಆ ಮಾರ್ಗದಲ್ಲಿಯೇ ಮುಂದುವರಿಯುತ್ತಿರುತ್ತೇವಲ್ಲದೆ, ಆದಷ್ಟು ಮಟ್ಟಿಗೆ ಗುರಿಯ ಸಮೀಪವನ್ನಾದರೂ ಸೇರುತ್ತೇವೆ. ಇದು ಕೂಡ ಒಂದು ದೊಡ್ಡ ಸಾಧನೆ.

■

## ೧೩೬

ವೇಷವ ಹೊತ್ತ ಹಿರಿಯರು ಈಶ್ವರಧ್ಯಾನದಲಿರಬೇಕು
ವೇಷವ ತೋರಿ, ಗ್ರಾಸಕ್ಕೆ ಆಸೆಮಾಡಿ
ಲೋಗರ ಮನೆಯ ಕಾದು, ಗ್ರಾಸವ ಪಡೆದು
ಉದರ ಹೊರವ ವೇಷವು
ವೇಶಿಯಿಂದಲೂ ಕರಕಷ್ಟ ಕಾಣಾ ರಾಮನಾಥಾ.

–ಜೇಡರ ದಾಸಿಮಯ್ಯ

ಧರ್ಮಗುರುಗಳಾದವರು ಲಾಂಛನವ ಧರಿಸಿಕೊಂಡಿರುತ್ತಾರೆ. ಆ ಲಾಂಛನದಿಂದ ಧರ್ಮಗುರುಗಳೆಂದು ಎಲ್ಲರಿಗೂ ತಿಳಿಯುತ್ತದೆ. ಅಂಥವರ ಬದುಕು ಲಾಂಛನಕ್ಕೆ ತಕ್ಕಂತಿರಬೇಕು. ಅವರ ಕಾಯಕ, ಮುಖ್ಯವಾಗಿ ಈಶ್ವರಧ್ಯಾನವಾಗಬೇಕು. ಅದಿಲ್ಲದೆ ಜನರನ್ನು ಮರುಳುಮಾಡಲು ಗುರುಗಳ ವೇಷವನ್ನು ಹಾಕಿಕೊಂಡಾಗ ಭಕ್ತನು ಗುರುಗಳೆಂದು ತಿಳಿದು ಭಯ, ಭಕ್ತಿ, ಗೌರವಗಳಿಂದ ನಡೆದುಕೊಳ್ಳುವಂತೆ ಮಾಡಿ, ಅವರಿಂದ ತಮಗೆ ಬೇಕಾದ ಸಾಮಾನು, ತಿನಿಸು ಪಡೆಯುವಂತೆ ಮಾಡಿಕೊಳ್ಳುವುದು ತುಂಬಾ ಮೋಸ ಎಂದಿದ್ದಾನೆ ದಾಸಿಮಯ್ಯ. ಕಾವಿಯನ್ನು ಹಾಕಿಕೊಂಡು, ಭಕ್ತ ಮನೆಯಲ್ಲಿ ಕಾಲ ಕಳೆಯುತ್ತಾ, ತಮಗೆ ಬೇಕಾದುದನ್ನು ಪಡೆದುಕೊಂಡು ಹೊಟ್ಟೆ ಹೊರೆದುಕೊಳ್ಳುವ ಮೋಸಗಾರ ವೇಷಧಾರಿಗಳ ಜೀವನ ವೇಶ್ಯೆಯರ ಜೀವನಕ್ಕಿಂತಲೂ ಹೀನಾಯ ಎಂದು ಅಂತಹವರ ಬಗೆಗೆ ಜೇಡರ ದಾಸಿಮಯ್ಯನು ತಿರಸ್ಕಾರದ ಮಾತನಾಡಿದ್ದಾನೆ.

ಸಮಾಜದಲ್ಲಿರುವ ಮೋಸಗಾರರ ಬಗ್ಗೆ ದಾಸಿಮಯ್ಯನು ಕಣ್ಣು ತೆರೆಯಿಸುವ ಮಾತನ್ನು ನಿರ್ದಾಕ್ಷಿಣ್ಯವಾಗಿ ಹೇಳಿದ್ದಾನೆ. ಅಂದಿನ ಮಾತು ಇಂದಿಗೂ ಸತ್ಯವಾಗಿದೆ. ಈಗಲೂ ಅಂತಹ ಮೋಸಗಾರರನ್ನು ಕಾಣಬಹುದು. ಅವರಿಗೆ ದಾಸಿಮಯ್ಯ ಹೇಳಿರುವ ಬೋಧೆ ಸರ್ವಕಾಲಿಕ. ಇದನ್ನು ಮನಗಂಡು ಮೋಸಗಾರರು ಬುದ್ಧಿ ಕಲಿತುಕೊಳ್ಳಬೇಕು. ಸಮಾಜದಲ್ಲಿ ವೇಶ್ಯೆ ತುಂಬ ಕೀಳು ಎಂದು ಪರಿಗಣಿಸಲ್ಪಟ್ಟಿದ್ದಾಳೆ. ಮೋಸಮಾಡುವ ವೇಷದ ಗುರು, ವೇಶ್ಯೆಗಿಂತ ಕೆಳಮಟ್ಟದವನು ಎಂದು ಹೇಳಿ ದಾಸಿಮಯ್ಯ ಕಟುವಾಗಿ ಟೀಕಿಸಿದ್ದಾನೆ.

■

## ೧೩೭

ವಿದ್ಯೆಯ ಬಹಳ ಕಲಿತಡೇನು ಭಕ್ತಿಯಲಿ ಶುದ್ಧಿಯಿಲ್ಲದಾತನು?
ಬುದ್ಧಿಯಲ್ಲಿ ವಿಶೇಷವೆನಿಸಿದಡೇನು ಭಕ್ತಿಯಲ್ಲಿ ಬಡವನಾದವನು?
ಅರ್ಥದಲ್ಲಿ ಅಧಿಕನಾದಡೇನು ಕರ್ತೃಶಿವನ ನೆನೆಯದವನು?
ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಎನ್ನತ್ತ ತೋರಿದಿರಯ್ಯ
ಅಖಂಡೇಶ್ವರಾ.

–ಷಣ್ಮುಖಸ್ವಾಮಿ

ಒಬ್ಬ ವ್ಯಕ್ತಿ ಬೇಕಾದಷ್ಟು ವಿದ್ಯೆ ಕಲಿತು ಪಾರಂಗತನಾಗಬಹುದು. ಆದರೆ ಅವನು ಪರಿಶುದ್ಧ ಭಕ್ತಿ ಇಲ್ಲದವನಾದರೆ ಉಪಯೋಗವಿಲ್ಲ. ಬುದ್ಧಿಯಲ್ಲೂ ಬಹಳ ಪ್ರವೀಣನಿರಬಹುದು; ಚುರುಕಿರಬಹುದು. ಆದರೆ ಅವನಿಗೆ ದೇವರ ಬಗ್ಗೆ ಭಕ್ತಿ-ಶ್ರದ್ಧೆಗಳೇ ಇಲ್ಲದಿದ್ದರೆ ಪ್ರಯೋಜನವಿಲ್ಲ. ಹಣದಲ್ಲಿ ಹೆಚ್ಚಿನವನಾಗಿರಬಹುದು. ಆದರೆ ಅದನ್ನೆಲ್ಲಾ ಕೊಟ್ಟು ಕೃಪೆಮಾಡಿರುವ ಕಾರಣಕರ್ತನಾದ ಶಿವನನ್ನೇ ನೆನೆಯದಿದ್ದರೆ, ಧನಿಕನಾದರೂ ನಿಷ್ಪ್ರಯೋಜಕ. ಅವನು ಕೃತಘ್ನ. ವಿದ್ಯಾವಂತನಾಗಿ ದೇವರಲ್ಲಿ ಪರಿಶುದ್ಧ ಭಕ್ತಿ ಇಲ್ಲದವನು ಬುದ್ಧಿವಂತನಾಗಿ ದೇವರಲ್ಲೇ ನಂಬಿಕೆ ಇಲ್ಲದವನೂ, ಧನವಂತನಾಗಿ ತನಗೆ ಕೃಪೆತೋರಿದ ಶಿವನನ್ನೇ ನೆನೆಯದವನೂ ಇವರೆಲ್ಲರೂ ಅಹಂಕಾರಿಗಳು. ವಿದ್ಯೆ, ಬುದ್ಧಿ, ಧನ ತಮಗೆ ಬೇಕಾದಷ್ಟಿದೆಯೆಂದು ಮದ್ದುಗುಣಿಕೆಯನ್ನು ತಿಂದ ಮದೋನ್ಮತ್ತರಂತೆ ವರ್ತಿಸುವವರನ್ನು ನನ್ನ ಕಣ್ಣಿಗೂ ಬೀಳಿಸಬೇಡ ದೇವರೆ ಎಂದು ಷಣ್ಮುಖಸ್ವಾಮಿಯು ಬೇಡಿಕೊಂಡಿದ್ದಾನೆ.

■

## ೧೩೮

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ
ಪಶುವೇನ ಬಲ್ಲುದು? ಹಸುರೆಂದೆಳಸುವುದು.
ವಿಷಯರಹಿತನ ಮಾಡಿ
ಭಕ್ತಿರಸವ ದಣಿಯೆ ಮೇಯಿಸಿ
ಸುಬುದ್ಧಿಯೆಂಬುದಕವನೆರೆದು
ನೋಡಿ ಸಲಹಯ್ಯಾ ಕೂಡಲಸಂಗಮದೇವಾ

–ಬಸವಣ್ಣ

ಪಶುವಿಗೆ ಹಸುರುಮೇವು ಬಹಳ ಇಷ್ಟ. ಅದನ್ನು ಕಂಡೊಡನೆ ಅದಕ್ಕೆ ಹಾತೊರೆದು ತಿಂದುಹಾಕಿಬಿಡುವುದು. ಹಾಗೆ ಇಂದ್ರಿಯಸುಖಗಳು ಮಾನವನಿಗೆ ತುಂಬಾ ಇಷ್ಟ. ಅವನ್ನು ಹೊಂದಲು ಅವಕಾಶ ಸಿಕ್ಕಿಬಿಟ್ಟರೆ ಸಾಕು ಮಾನವ ಉಳಿದುದನ್ನೆಲ್ಲಾ ಮರೆತು ಅದಕ್ಕೆ ದುಂಬಾಲು ಬಿದ್ದು ಅದರಲ್ಲೇ ಮುಳುಗಿ ಜೀವನವನ್ನೆಲ್ಲಾ ಹಾಳುಮಾಡಿಬಿಡುತ್ತಾನೆ. ವಿಷಯವೆಂಬುದು ಮಾನವನಿಗೆ ವಿಷವಿದ್ದಂತೆ. ಆದ್ದರಿಂದ ನನ್ನ ಮುಂದೆ ಅದು ಕಾಣುವಂತೆ ಮಾಡಬೇಡ. ಏಕೆಂದರೆ ಪಶು ಹಸುರಾಗಿ ಕಂಡದ್ದನ್ನೆಲ್ಲಾ ಮೇದುಬಿಡುವಂತೆ ನಾನು ವಿಷಯವೆಂಬ ಹಸುರಿಗೆ ಮರುಳಾಗಿಬಿಡುತ್ತೇನೆ. ನಾನೂ ಸಹ ಒಂದು ಪಶುವಿದ್ದಂತೆ. ಆದುದರಿಂದ ನನ್ನನ್ನು ವಿಷಯದಲ್ಲಿ ಆಸಕ್ತಿ ಇಲ್ಲದಂತೆ ಮಾಡು. ವಿಷಯ ರಹಿತನನ್ನಾಗಿ ಮಾಡಿ, ಮನಸ್ಸು ತೃಪ್ತಿಯಾಗುವಂತೆ ಭಕ್ತರಸವನ್ನು ನನಗೆ ಉಣ್ಣಿಸು. ನನ್ನನ್ನು ಸದ್ಭಕ್ತನನ್ನಾಗಿ ಮಾಡು. ಊಟದ ನಂತರ ನೀರು ಬೇಕು ತಾನೆ? ಭಕ್ತನಾದ ನನಗೆ ಸುಬುದ್ಧಿ, ಸುಜ್ಞಾನಬೇಕು. ಆದುಧರಿಂದ ಸುಬುದ್ಧಿ ಎಂಬ ನೀರನ್ನು ಎರೆದು ಕಾಪಾಡು ಸಂಗಮದೇವಾ ಎಂದು ಬಸವಣ್ಣನು ದೇವರನ್ನು ಪ್ರಾರ್ಥಿಸಿದ್ದಾನೆ. ಭಕ್ತ ಪಶು, ಆತ ಪಶುಪತಿ ಅಲ್ಲವೆ?

■

## ೧೩೯

ವ್ಯಾಧನೊಂದು ಮೊಲನ ತಂದರೆ
ಸಲುವ ಹಾಗಕ್ಕೆ ಬಿಲಿವರಯ್ಯಾ
ನೆಲನಾಳ್ದನ ಹೆಣನ ತಂದರೆ
ಒಂದಡಕೆಗೆ ಕೊಂಬರಿಲ್ಲ ನೋಡಯ್ಯಾ!

ಮೊಲನಿಂದ ಕಡುಕಷ್ಟ ನರನ ಬಾಳುವೆ
ಸಲೆ ನಂಬೋ ನಮ್ಮ ಕೂಡಲಸಂಗಮದೇವನ.

—ಬಸವಣ್ಣ

ಈ ಲೋಕದ ಮೋಹಕ್ಕೆ ಒಳಗಾಗಿ, ಪ್ರಾಪಂಚಿಕ ಸುಖದಲ್ಲಿ ಮೈಮರೆತು, ಅನ್ಯಾಯ ಅನಾಚಾರಗಳಲ್ಲಿ ಮುಳುಗಿ ದೇವರನ್ನು ಮರೆತಿರುವ ಮನುಜರನ್ನು ಕುರಿತು ಬಸವಣ್ಣನವರು ಹೇಳಿರುವ ವಚನ ಇದು.

ನಾವು ಬದುಕಿರುವವರೆಗೆ ಮಾತ್ರ ನಮಗೆ ಒಂದಿಷ್ಟಾದರೂ ಬೆಲೆ. ಸತ್ತ ಮರುಕ್ಷಣದಲ್ಲೇ ಇದನ್ನು ಕೇಳುವವರಿರುವುದಿಲ್ಲ. ಈ ದೇಹವನ್ನು ಆದಷ್ಟು ಬೇಗ ಮರೆಮಾಡುವುದರಲ್ಲೇ ಎಲ್ಲರ ಆಸಕ್ತಿ. ಒಂದು ಪ್ರಾಣಿಗಾದರೂ ಸತ್ತ ನಂತರ ಕಿಂಚಿತ್ತಾದರೂ ಬೆಲೆ ಇದೆ. ಆದರೆ ಮೊಲವನ್ನು ಕೊಂದು ಮಾರಲು ಬಂದರೆ, ಯಾರಾದರೂ ಹಣಕೊಟ್ಟು ಕೊಂಡುಕೊಳ್ಳುತ್ತಾರೆ. ಆದರೆ ಭೂಪತಿಯಾಗಿ ರಾಜ್ಯಭಾರಮಾಡಿ, ರಾಜನಾಗಿ ಮೆರೆದವನು ಸತ್ತರೆ ಒಂದು ಅಡಕೆಗೂ ಯಾರೂ ಕೊಳ್ಳುವುದಿಲ್ಲ, ಅವನ ಬಾಳು ಒಂದು ಮೊಲಕ್ಕಿಂತಲೂ ಕಡೆಯಾಗುತ್ತದೆ. ಹಾಗಿರುವಾಗ ಬದುಕಿರುವಾಗ ಸಾಧ್ಯವಾಷ್ಟು ಒಳ್ಳೆಯ ಕೆಲಸಮಾಡಿ ಹುಟ್ಟಿದುದಕ್ಕೆ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು. ಪರಮಾತ್ಮನಲ್ಲಿ ನಂಬಿಕೆ ಇಟ್ಟು ಬಾಳಿದರೆ, ಮನಸ್ಸು ಸ್ವಾರ್ಥದಿಂದ ಬಿಡುಗಡೆ ಹೊಂದಿ, ಪರೋಪಕಾರ ಕೆಲಸದಲ್ಲಿ, ಸತ್ಕಾರ್ಯಗಳಲ್ಲಿ ಮನಸ್ಸು ತೊಡಗುತ್ತದೆ. ಅದರಿಂದ ಈ ಜೀವಕ್ಕೆ, ಭೂಮಿಯಲ್ಲಿ ಹುಟ್ಟಿದುದಕ್ಕೆ ಒಂದು ಬೆಲೆ ಬರುತ್ತದೆ. ಅವನೆಂತಹ ದೊಡ್ಡ ಸ್ಥಾನದಲ್ಲಿದ್ದರೂ, ಅವನೆಷ್ಟೇ ಐಶ್ವರ್ಯವಂತನಿದ್ದರೂ, ಸತ್ತ ಮರುಕ್ಷಣವೇ ಅವನಿಗೆ ಕಿಂಚಿತ್ತು ಬೆಲೆಯನ್ನು ಯಾರೂ ಕೊಡುವುದಿಲ್ಲ. ಆದುದರಿಂದ ಬದುಕಿದ್ದಾಗ ಈ ಜನ್ಮಕ್ಕೆ ಬೆಲೆ ಬರುವಂತೆ ಬದುಕಬೇಕು, ಬೆಲೆ ಬರಲು ಭಗವಂತನನ್ನು ನಂಬು ಎಂದು ಬಸವಣ್ಣನವರು ಹೇಳಿದ್ದಾರೆ.

■

## ೧೪೦

ವ್ಯಾಪಾರವನೆ ಬಿಟ್ಟು, ತಾಪತ್ರಯವನೆ ಹಿಂಗಿ
ಲೋಕದ ಹಂಗನೆ ಹರಿದು, ಬೇಕು ಬೇಡೆಂಬುದನೆ ನೂಕಿ,
ತಾನು ವಿವೇಕಿಯಾದಲ್ಲದೆ, ಜ್ಯೋತಿಯ ಬೆಳಗ ಕಾಣಬಾರದೆಂದರು
ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣನ ಶರಣರು.

—ಲಿಂಗಮ್ಮ

ಈ ವಚನವು ಲಿಂಗಮ್ಮನ ಬೋಧೆಯ ವಚನಗಳಲ್ಲಿ ಒಂದು. ಲಿಂಗಮ್ಮ ಜನಸಾಮಾನ್ಯರಿಗೆ. ಹೇಗೆ ಶುದ್ಧ ವೀರಶೈವ ಜೀವನ ನಡೆಸಬೇಕು, ಅಂತಹ ಗುಣ ಸ್ವಭಾವಗಳು ಹೇಗಿರಬೇಕು, ಎಂಬುದನ್ನು ಅನೇಕ ವಚನಗಳ ಮೂಲಕ ವಿವರಿಸಿದ್ದಾಳೆ. ಹಾಗೆಯೇ ಸಾಧನೆಯ ದಾರಿಯಲ್ಲಿ ಇನ್ನೂ ಮುಂದೆ ಸಾಗಿ ಆ ಘನ ಸ್ವರೂಪವನ್ನು ಜ್ಯೋತಿ ಸ್ವರೂಪವನ್ನು ಕಾಣಬೇಕೆಂಬವರಿಗೂ ಮಾರ್ಗವನ್ನು ತೋರಿಸಿದ್ದಾಳೆ. ಈ ವಚನದಲ್ಲಿ ಜ್ಯೋತಿಯ ಬೆಳಗನ್ನು ಕಾಣಬೇಕೆಂಬ ಆಸೆಯುಳ್ಳ ವ್ಯಕ್ತಿ ಏನು ಮಾಡಬೇಕೆಂಬುದನ್ನು ಬೋಧಿಸಿದ್ದಾಳೆ.

ಈ ಲೋಕ ವ್ಯಾಪಾರಗಳನ್ನು ತ್ಯಜಿಸಿ, ಈ ಸಾಂಸಾರಿಕ ಜೀವನದಲ್ಲಿ ತಲೆದೋರುವ, ಎದುರಾಗುವ ಕಷ್ಟ ನಷ್ಟಗಳನ್ನು ತಾಪತ್ರಯಗಳನ್ನು ದೂರಮಾಡಿ, ಈ ಲೋಕದ ಹಂಗನ್ನು ತೊರೆದು ಎಂದರೆ, ನಾನು, ನನ್ನದು, ನನ್ನವರೆನ್ನುವ ವ್ಯಾಮೋಹದ ಬಂಧನವನ್ನು ಕಳಚಿ, ಈ ಸಂಸಾರ ಜೀವನದಲ್ಲಿ ಉಂಟಾಗುವ ಬೇಕು ಬೇಡಗಳೆಂಬ ಆಮಿಷಗಳನ್ನು ದೂರತಳ್ಳಿ, ಅವುಗಳಿಂದಾಚೆಗೆ ನಿಲ್ಲಬೇಕು. ವಿವೇಕಿಯಾಗಬೇಕು. ಎಂದರೆ ಮಾನವ ಜೀವನ ಸಾರ್ಥಕ ಪಡಿಸಿಕೊಳ್ಳಲು ಬೇಕಾದುದೇನು, ಬೇಡವಾದುದೇನು ಎಂಬ ಸರಿಯಾದ ಅರಿವು ಮಾಡಿಕೊಳ್ಳಬೇಕು. ತದನಂತರ ಜ್ಯೋತಿಸ್ವರೂಪನಾದ ಆ ಮಹಾಘನವೆಂಬ ಬೆಳಕು ಕಾಣಿಸುತ್ತದೆ. ಅಲ್ಲಿಯ ತನಕ ಅದು ಸಾಧ್ಯವಿಲ್ಲ ಎಂಬ ಮಾತನ್ನು ಇಲ್ಲಿ, ಬಹುಶಃ ಬೆಳಗ ದರ್ಶನವನ್ನು ಪಡೆದಿರಬಹುದಾದ ಲಿಂಗಮ್ಮ ಬೋಧಿಸುತ್ತಾಳೆ.

ಆದರೆ ಎಲ್ಲರಿಗೂ ಇಂತ ಮಹೋನ್ನತಿಯ ಸಾಧನೆ, ಸಾಧ್ಯವಿಲ್ಲೆಂದು ನಿರಾಶರಾಗಬಾರದು. ಸದ್ಗುಣಗಳನ್ನು ಅಳವಡಿಸಿಕೊಂಡು ಶುದ್ಧವಾದ, ಸಂಸಾರ ಜೀವನವನ್ನು ಬಾಳುತ್ತಲೆ ಪಾರಮಾರ್ಥದ ಕಡೆಗೆ ಹಂತ-ಹಂತವಾಗಿ ಹೋಗಲು ಪ್ರಯತ್ನಿಸಬೇಕು. ಆಗ ದಿನವೂ ಪರಮಾತ್ಮನ ಸಮೀಪ, ಸಮೀಪಕ್ಕೆ ಹೋಗಲು ಸಾಧ್ಯವಾಗುತ್ತದೆ. ಪರಮಾತ್ಮನಿಗೆ ಪ್ರಿಯರಾಗಲು, ಜೀವಾತ್ಮ ಪರಮಾತ್ಮಗಳಲ್ಲಿ ಭೇದವಿಲ್ಲ ಎಂಬ ಅರಿವು ಮೂಡಲು ಸಹಾಯಕವಾಗುತ್ತದೆ.

■

೧೪೧

ಶರಣಸತಿ ಲಿಂಗಪತಿ ಎಂಬರು
ಶರಣ ಹೆಣ್ಣಾದ ಪರಿಯಿನ್ನೆಂತು?
ಲಿಂಗ ಗಂಡಾದ ಪರಿಯಿನ್ನೆಂತು?
ನೀರು ನೀರ ಕೂಡಿ ಬೆರೆದಲ್ಲಿ ಭೇದಿಸಿ ಬೇರು ಮಾಡಬಹುದೆ?

ಗಂಡು ಹೆಣ್ಣು ಯೋಗವಾದಲ್ಲಿ ಆತುರ ಹಿಂಗೆ ಘಟ ಬೇರಾಯಿತ್ತು.
ಶರಣಸತಿ ಲಿಂಗಪತಿ ಎಂಬ ಮಾತುಮೊದಲಿಗೆ ಮೋಸ
ಲಾಭಕ್ಕಧೀನ ಉಂಟೆ? ಎಂದ ಅಂಬಿಗರ ಚೌಡಯ್ಯ.

–ಅಂಬಿಗರ ಚೌಡಯ್ಯ

ಅಂಬಿಗರ ಚೌಡಯ್ಯ ಬಹಳ ದೊಡ್ಡ ಶರಣ. ಅವನು ನಿರ್ಭಿಡೆಯಿಂದ ತನಗನ್ನಿಸಿದುದನ್ನು ಹೇಳುವ ಧೀರ; ಯಾರ ದಾಕ್ಷಿಣ್ಯಕ್ಕೂ ಒಳಗಾಗುವನಲ್ಲ. ವೀರಶೈವದ ಗುರಿ ಐಕ್ಯಸ್ಥಲ ಮುಟ್ಟುವುದು ಎಂದರೆ ಪರಮಾತ್ಮ ಬೇರೆ ತಾನು ಬೇರೆ ಎಂಬ ಭಾವ ಹೋಗಿ, ನಾನೇ ಪರಮಾತ್ಮ ಎಂಬ ಅದ್ವೈತ ಸಿದ್ಧಾಂತಕ್ಕೆ ಬರುವುದಾಗಿದೆ. ಹೀಗಿದ್ದರೂ ಎಲ್ಲ ಶರಣರು ಶರಣಸತಿ ಲಿಂಗಪತಿ ಎಂಬ ಮಾತನ್ನು ಸಾಧನೆಯ ಮಾರ್ಗದಲ್ಲಿ ಹೇಳಿದ್ದಾರೆ. ಹಾಗಾದರೆ ಶರಣರೆಲ್ಲರೂ ಹೆಣ್ಣಾದಂತಾಯಿತು, ಅವರು ಪೂಜಿಸುವ ಲಿಂಗ ಗಂಡಾದಂತಾಯಿತು. ಇದೆಂತಹ ಮಾತು! ಭಕ್ತನಾದವನು ತನ್ನ ಸಾಧನೆಯಿಂದ ತಾನೇ ಪರಮಾತ್ಮನಾಗಿ, ಭಗವಂತನಲ್ಲಿ ಒಂದಾಗುತ್ತಾನೆ. ಅದು ನೀರಲ್ಲಿ ನೀರನ್ನು ಬೆರೆಸಿದಂತೆ. ಅದನ್ನು ಬೇರೆ ಬೇರೆ ಮಾಡಲು ಸಾಧ್ಯವಿಲ್ಲ. ಭಕ್ತ ಭಗವಂತನ ಸ್ವರೂಪನಾಗಿ, ಐಕ್ಯನಾಗುವುದು ನೀರಲ್ಲಿ ನೀರನ್ನು ಕೂಡಿಸಿದಂತೆ, ಒಂದೇ ರೂಪವಾಗಿ ಬಿಡುತ್ತಾನೆ. ಅಲ್ಲಿ ಬೇರೆ ಬೇರೆಯಾಗಿ ಕಾಣುವುದು ಸಾಧ್ಯ. ಗಂಡು ಹೆಣ್ಣು ಬೇರೆ ಬೇರೆಯಾಗಿ ಸಂಯೋಗವಾಗಿ ಕಾಮಭಾವನೆ ತೃಪ್ತಿಪಡುವಾಗ ಮಾತ್ರ ಗಂಡು ಬೇರೆ ಹೆಣ್ಣು ಬೇರೆ. ಆದುದರಿಂದ ಶರಣಸತಿ ಲಿಂಗಪತಿ ಎಂಬುವ ಮಾತು ಸರಿಯಲ್ಲ. ಹೀಗೆ ಹೇಳುವುದು ಮೋಸದ ಮಾತು. ಗಂಡು ಹೆಣ್ಣು ಎಂದರೆ, ಗಂಡು ಹೆಚ್ಚು ಹೆಣ್ಣು ಕಡಿಮೆ ಎಂಬ ಭಾವನೆ ಸಾಧಾರಣವಾಗಿ ಇದೆ. ಅದು ಸರಿಯಲ್ಲ. ಒಬ್ಬರ ಅಧೀನದಲ್ಲಿ ಮತ್ತೊಬ್ಬರು ಇರುತ್ತಾರೆಂಬ ಮಾತು ಸರಿಯಲ್ಲ. ಇಲ್ಲಿ ದೇವರನ್ನು ಪತಿ ಎಂದೂ, ಶರಣನನ್ನು ಸತಿ ಎಂದೂ ಹೇಳಿ ಒಬ್ಬರು ಹೆಚ್ಚು, ಒಬ್ಬರು ಕಡಿಮೆ ಎನ್ನುವ ಮಾತು ತಪ್ಪು, ಲಿಂಗ–ಶರಣ ಇಬ್ಬರೂ ಸಮ ಎನ್ನುವುದು ಅಂಬಿಗರ ಚೌಡಯ್ಯನ ಹೇಳಿಕೆ. ಶರಣರ ವಿಚಾರ ಸ್ವಾತಂತ್ರ್ಯಕ್ಕೆ ಇದೊಂದು ಮಹತ್ವದ ಉದಾಹರಣೆ.

■

## ೧೪೨

ಶಿವಪ್ರಸಾದವನಾರೋಗಣೆಯ ಮಾಡುವಲ್ಲಿ ಕರಣಂಗಳು ಕಡೆಗೆ
ತುಳುಕದಿರಬೇಕು.
ಚಿತ್ತವು ಅತ್ತಿತ್ತ ಹರಿಯದಿರಬೇಕು, ಶಿವಧ್ಯಾನ ಪಾರಾಯಣನಾಗಿರಬೇಕು.

ಶಿವಪ್ರಸಾದದಲ್ಲಿ ಮನವು ಮಗ್ನವಾಗಿರಬೇಕು, ಪ್ರಸಾದವೇ ಪರಬ್ರಹ್ಮವೆಂಬ
ಭಾವ ಬಲಿದಿರಬೇಕು.
ತುತ್ತು ತುತ್ತಿಗೆ ಶಿವಮಂತ್ರವ ಉಚ್ಚರಿಸುತ್ತಿರಬೇಕು.
ಇಂತೀ ಭೇದವನರಿಯಬಲ್ಲಾತನೇಅಚ್ಚಪ್ರಸಾದಿಯಯ್ಯಾ ಅಖಂಡೇಶ್ವರಾ

–ಷಣ್ಮುಖಸ್ವಾಮಿ

ನಾವು ಸೇವಿಸುವುದೆಲ್ಲವೂ ಶಿವಪ್ರಸಾದ. ಇಳೆ, ಬೆಳೆ, ನೀರು, ಗಾಳಿ ಎಲ್ಲವೂ ದೇವರ ದಾನ. ಇವುಗಳನ್ನು ದೇವರು ಕೊಟ್ಟಿದ್ದಾನೆಂದು ನಾವು ಜೀವಿಸಲು ಸಾಧ್ಯವಾಗಿದೆ. ದೇವರು ಕೊಟ್ಟ ಬೆಳೆಯಿಂದ ಪ್ರಸಾದ ತಯಾರಿಸಿ ಆರೋಗಣೆ ಮಾಡುತ್ತೇವೆ. ಹಾಗೆ ಪ್ರಸಾದವನ್ನು ಸೇವಿಸುವಲ್ಲಿ ನಮ್ಮ ಪಂಚೇಂದ್ರಿಯಗಳು ಅಲ್ಲಿ ಇಲ್ಲಿ ವಿಚಾರಮಾಡದೆ, ಪ್ರಸಾದದ ಕಡೆ ಸ್ಥಿರಮನಸ್ಸನ್ನಿಟ್ಟುಕೊಂಡು ಭಕ್ತಿಯಿಂದ ಸೇವಿಸಬೇಕು. ಮನಸ್ಸು ಅತ್ತಿತ್ತ ಚಲಿಸಬಾರದು, ಚಂಚಲವಾಗಬಾರದು, ಶಿವಧ್ಯಾನದಲ್ಲಿ ಮಗ್ನವಾಗಿರಬೇಕು. ಪ್ರಸಾದವೇ ಪರಬ್ರಹ್ಮವೆಂಬ ತಿಳಿವಳಿಕೆಯಿಂದ, ದೇವರ ದಾನವೆಂಬ ಎಚ್ಚರದಿಂದ ತುತ್ತು ತುತ್ತಿಗೂ ಶಿವಮಂತ್ರವನ್ನು ಉಚ್ಚರಿಸುತ್ತಿರಬೇಕು. ಈ ರೀತಿಯಾಗಿ ಆರೋಗಣೆ ಮಾಡುವಾಗ ಅದು ಶಿವಪ್ರಸಾದವೆಂಬುದನ್ನು ಮರೆಯದೆ, ಶಿವಚಿಂತನವನ್ನು ಮನಸ್ಸಿನಲ್ಲಿಯೇ ಮಾಡುತ್ತಾ ಇರುವವನೇ ಅಚ್ಚಪ್ರಸಾದಿ ಎಂದು ಶರಣ ಷಣ್ಮುಖಸ್ವಾಮಿ ನುಡಿದಿದ್ದಾರೆ.

■

## ೧೪೩

ಶೆಟ್ಟಿ ಎಂಬೆನೆ ಸಿರಿಯಾಳನ
ಮಡಿವಾಳನೆಂಬೆನೆ ಮಾಚಯ್ಯನ
ಡೋಹಾರನೆಂಬೆನೆ ಕಕ್ಕಯ್ಯನ
ಮಾದಾರನೆಂಬೆನೆ ಚನ್ನಯ್ಯನ
ಅನುಹಾರುವನೆಂದರೆ ನಗುವನಯ್ಯಾ ಕೂಡಲಸಂಗಮದೇವಾ.

–ಬಸವಣ್ಣ

ವೀರಶೈವ ಧರ್ಮದ ಮೂಲತತ್ವ ಸಮಾನತೆ. ಹುಟ್ಟಿನಲ್ಲಿ ಸಮಾನತೆ, ಗಂಡು–ಹೆಣ್ಣಿನಲ್ಲಿ ಸಮಾನತೆ, ಸಂಪತ್ತಿನಲ್ಲಿ ಸಮಾನತೆ, ಉದ್ಯೋಗದಲ್ಲಿ

ಸಮಾನತೆಯನ್ನು ತರುವುದೇ ಈ ಧರ್ಮದ ಗುರಿ. ಇಡೀ ಮಾನವಕುಲವನ್ನೇ ಅಪ್ಪಿಕೊಳ್ಳುವ ಧರ್ಮ ಇದು. ಜಾತೀಯತೆಗೂ ವೀರಶೈವಧರ್ಮಕ್ಕೂ ಬಹಳ ದೂರ. ವೀರಶೈವ ಧರ್ಮದ ಪ್ರಕಾರ ಮನುಷ್ಯ ತನ್ನ ನಡೆನುಡಿಗಳಿಂದ ಶ್ರೇಷ್ಠ ಅಥವಾ ನಿಕೃಷ್ಟ ಎನ್ನಿಸಿಕೊಳ್ಳುತ್ತಾನೆಯೇ ಹೊರತು, ಹುಟ್ಟಿನಿಂದಲ್ಲ. ದೇವರ ದೃಷ್ಟಿಯಲ್ಲಿ ಸಕಲ ಮಾನವರೂ ಸಮಾನರು. ಆದರೆ ಲೌಕಿಕ ಜೀವನದಲ್ಲಿ ಜನರನ್ನು ಹುಟ್ಟಿನ ಆಧಾರದ ಮೇಲೆ ಅವರು ಮೇಲು ಅಥವಾ ಕೀಳು ಎಂದು ಭಾವಿಸುತ್ತಾರೆ. ಒಬ್ಬ ವ್ಯಕ್ತಿ ಅಂತ್ಯಜರ ಮನೆಯಲ್ಲಿ ಹುಟ್ಟಿದರೆ, ಅವನು ಆಚರಣೆಯಿಂದ ಎಷ್ಟೇ ಉತ್ತಮನಿದ್ದರೂ ಅವನು ಕೀಳುಜಾತಿಯವನೆಂದು ತಿರಸ್ಕಾರ ದೃಷ್ಟಿಯಿಂದ ನೋಡುತ್ತಾರೆ. ಹಾಗೆಯೇ ಒಬ್ಬ ವ್ಯಕ್ತಿಯ ನಡೆ ನುಡಿಯಲ್ಲಿ ತುಂಬಾ ಹೀನನಾಗಿದ್ದರೂ ಅವನು ಉತ್ತಮ ಕುಲದಲ್ಲಿ ಹುಟ್ಟಿದ್ದರೆ, ಅವನನ್ನು ಕೀಳು ಎಂದು ಭಾವಿಸುವುದಿಲ್ಲ! ಅದು ಸರಿಯಲ್ಲ. ಒಬ್ಬ ವ್ಯಕ್ತಿಯನ್ನು ಮೇಲು-ಕೀಳು ಎಂದು ಹೇಳಬೇಕಾದರೆ, ಅವನ ಬದುಕನ್ನು ನೋಡಿ ಗುರುತಿಸಬೇಕು, ಹುಟ್ಟನ್ನಲ್ಲ ಎಂಬ ಮಾತನ್ನು ಬಸವಣ್ಣನವರು ಲೌಕಿಕವಾಗಿ ಕೀಳು ಜಾತಿಯಲ್ಲಿ ಹುಟ್ಟಿದರೂ ಶರಣಜೀವನವನ್ನು ಬಾಳಿ ಉತ್ತಮರೆನ್ನಿಸಿದವರನ್ನು ಉದಾಹರಣೆಯ ಮೂಲಕ ವಿವರಿಸಿದ್ದಾರೆ. ಸಿರಿಯಾಳ, ಮಾಚಯ್ಯ, ಕಕ್ಕಯ್ಯ, ಚನ್ನಯ್ಯ ಮುಂತಾದವರು ಬ್ರಾಹ್ಮಣಕುಲಕ್ಕಿಂತ ಕೀಳು ಎಂದು ಭಾವಿಸಿದ ಕೆಳವರ್ಗದಲ್ಲಿ ಹುಟ್ಟಿದ್ದರೂ, ಅವರು ತಮ್ಮ ಶುದ್ಧವಾದ ಆಚರಣೆಗಳಿಂದ, ತತ್ವಬದ್ಧ ಜೀವನದಿಂದ, ಶ್ರೇಷ್ಠವರ್ಗದವರಾಗಿ ಮೇಲ್ಮಟ್ಟಕ್ಕೇರಿದ್ದಾರೆ. ಅವರು ಉತ್ತಮ ಕುಲದವರನ್ನೂ ನಡೆನುಡಿಯಲ್ಲಿ ಮೀರಿಸುವಂತೆ ಬದುಕಿದ್ದಾರೆ. ಹೀಗಿರುವಾಗ ಮಾಚಯ್ಯನು ಮಡಿವಾಳರವನು, ಶಿರಿಯಾಳನು ಸೆಟ್ಟಿಯು, ಕಕ್ಕಯ್ಯನು ಡೋಹಾರ ಜಾತಿಯವನು, ಚನ್ನಯ್ಯನು ಮಾದಾರನು, ನಾನು (ಬಸವಣ್ಣನು) ಬ್ರಾಹ್ಮಣನು ಎಂದು ಗುರುತಿಸಿದರೆ, ಕೂಡಲಸಂಗಮದೇವನು ನನ್ನ ಅಜ್ಞಾನವನ್ನು ನೋಡಿ, ಮೂರ್ಖತನವೆಂದು ನಗುತ್ತಾನೆ. ಅಷ್ಟೆ ಎಂದಿದ್ದಾರೆ. ಮೇಲೆ ಹೇಳಿದ ಎಲ್ಲರೂ ಒಂದೇ ತೆರನಾದ ಉತ್ತಮ ಆಚರಣೆಯುಳ್ಳವರಾದುದರಿಂದ, ಯಾರು ಮೇಲಲ್ಲ, ಯಾರೂ ಕೀಳಲ್ಲ, ಎಲ್ಲರೂ ಸಮಾನರು ಎಂಬ ಅಂಶವನ್ನು ಇಲ್ಲಿ ಬಸವಣ್ಣನವರು ತಿಳಿಯಪಡಿಸಿದ್ದಾರೆ.

■

## ೧೪೪

ಶೀಲಶೀಲವೆಂಬಿರಯ್ಯಾ,
ಶೀಲದ ನೆಲೆಯಬಲ್ಲಡೆ ಹೇಳಿರೋ, ಅರಿಯದಿದ್ದಡೆ ಕೇಳಿರೊ!

ಕಾಮ ಒಂದನೆಯ ಭವಿ, ಕ್ರೋಧ ಎರಡನೆಯ ಭವಿ
ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ
ಮದ ಐದನೆಯ ಭವಿ ಮತ್ಸರ ಆರನೆಯ ಭವಿ, ಆಮಿಷ ಏಳನೆಯ ಭವಿ!
ಇಂತೀ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು
ಲಿಂಗವಿಲ್ಲದವನು ಭವಿ, ಭವಿ ಎಂಬಿರಿ
ತಮ್ಮಂತರಂಗದಲ್ಲಿದ್ದ ಲಿಂಗಾಂಗದ ಸುದ್ದಿಯನರಿಯದೆ
ಅಚ್ಚ ಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿಗಳೆಂದು
ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ
ಹಗಲುಗಳ್ಳರ ಮೆಚ್ಚುವನೆ ಕೂಡಲಸಂಗಮದೇವಾ ಚನ್ನಮಲ್ಲಿಕಾರ್ಜುನಾ.

–ಅಕ್ಕಮಹಾದೇವಿ

ಶರಣರಲ್ಲಿ ಒಂದು ಮಾತು. ಶಿವಭಕ್ತರಲ್ಲದವರನ್ನು ಭವಿ ಎಂದು ಕರೆಯುತ್ತಿದ್ದರು. ಈ 'ಭವಿ' ಶಬ್ದ ಬರುಬರುತ್ತಾ ಲಿಂಗಾಂಗಿಗಳಲ್ಲದವರನ್ನು ಭವಿಗಳೆಂತಲೂ ಲಿಂಗಧರಿಸಿದವರನ್ನು ಭಕ್ತರೆಂದೂ ಕರೆಯತೊಡಗಿದರು. ಲಿಂಗ ಧರಿಸಿದವರು ಭಕ್ತನ ಸಕಲಗುಣಗಳನ್ನು ಪಡೆದಿದ್ದರೂ ಅವನನ್ನು ಭವಿ ಎನ್ನುವ ರೂಢಿ ಬೆಳೆಯಿತು. ಹಾಗೆಯೇ ಲಿಂಗ ಹಾಕಿಕೊಂಡು ಮಾಡಬಾರದ್ದನ್ನು ಮಾಡುತ್ತಾ, ಆಡಬಾರದ್ದನ್ನು ಆಡುತ್ತಾ, ಭಕ್ತನ ಲಿಂಗವಂತನ ಒಂದೂ ಗುಣವಿಲ್ಲದಿದ್ದರೂ ಅವನು ಭಕ್ತನೆನಿಸಿಕೊಳ್ಳುತ್ತಿದ್ದ. ಹೀಗೆ ಭವಿ ಮತ್ತು ಭಕ್ತ ಶಬ್ದಗಳ ನಿಜವಾದ ಅರ್ಥ ಅಡಗಿ ಬಳಕೆಯಲ್ಲಿ ಅದರ ವಿರುದ್ಧವಾದ ಅರ್ಥ ಜಾರಿಗೆ ಬಂದಿತು. ಅಂತಹ ಸಂದರ್ಭದಲ್ಲಿ ಅಕ್ಕಮಹಾದೇವಿಯು ಸರಿಯಾದ ಮಾರ್ಗದರ್ಶನ ಮಾಡಿದ ವಚನವಿದು.

ಅಕ್ಕಮಹಾದೇವಿಯು, ಜನರಿಗೆ, ಶೀಲದ, ಸದಾಚಾರದ ನೆಲೆಯೇನೆಂದು ನಿಮಗೆ ಗೊತ್ತಿದ್ದರೆ ಸರಿ; ಗೊತ್ತಿಲ್ಲದಿದ್ದರೆ ತಿಳಿದುಕೊಳ್ಳಿ ಎನ್ನುತ್ತಾ ಕಾಮ ಒಂದನೆಯ ಭವಿ, ಕ್ರೋಧ ಎರಡನೆಯ ಭವಿ, ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ, ಮದ ಐದನೆಯ ಭವಿ, ಮತ್ಸರ ಆರನೆಯ ಭವಿ, ಆಮಿಷ ಏಳನೆಯ ಭವಿ; ಈ ಭವಿಗಳನ್ನು ಭಕ್ತನಾದವನು ತನ್ನಿಂದ ಓಡಿಸಬೇಕು. ಕೇವಲ ಲಿಂಗ ಕಟ್ಟುವುದರಿಂದ ಭಕ್ತನಾಗುವುದಿಲ್ಲ. ಭವಿತನ ಹೋಗುವುದಿಲ್ಲ. ಈ ಮೇಲಿನ ಏಳು ಭವಿಗಳನ್ನು ದೂರಮಾಡಿದಾಗ ಅವನ ಭವಿತನ ಹೋಗುತ್ತದೆ. ಇವುಗಳನ್ನೆಲ್ಲಾ ತಮ್ಮಲ್ಲಿ ಅಡಗಿಸಿಟ್ಟುಕೊಂಡು, ಲಿಂಗವಿಲ್ಲದವರನ್ನು 'ಭವಿ' ಎಂದು ಕರೆಯುತ್ತಾ, ತಾವು ಲಿಂಗ ಕಟ್ಟಿದ್ದರೂ, ಲಿಂಗಾಂಗದ ಸುದ್ದಿಯನ್ನು ತಿಳಿಯುವ ಗೊಡವೆಗೆ ಹೋಗದೆ, ಕೇವಲ ಬಾಹ್ಯಾಡಂಬರಗಳಿಂದ ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯ

ಪ್ರಸಾದಿಗಳೆಂದು ಡೋಂಗಿ ಆಚರಣೆಗಳನ್ನು ಮಾಡುತ್ತಾ, ಮನಸ್ಸನ್ನು ನಿರ್ಮಲವಾಗಿಟ್ಟುಕೊಳ್ಳದೆ, ಲಿಂಗಕ್ಕೆ ಮಜ್ಜನ ಮಾಡಿಸುತ್ತಾ ನಾವು ಭವಿಗಳಲ್ಲವೆಂದು ತಿಳಿದುಕೊಳ್ಳುವ ಹಗಲುಗಳ್ಳರನ್ನು ದೇವರು ಮೆಚ್ಚುವುದಿಲ್ಲ. ನಿಮ್ಮ ಭವಿತನ ಹೋಗಬೇಕಾದರೆ, ದೇವರ ಒಲುಮೆಯ ಆಸೆ ಇದ್ದರೆ, ಲೇಖಕರ ಆಸೆ ಮೊದಲಾದ ಏಳು ದುರ್ಗುಣಗಳನ್ನು ದೂರ ಮಾಡಬೇಕೆಂದು ಅಕ್ಕಮಹಾದೇವಿ ಹೇಳಿದ್ದಾಳೆ.

■

## ೧೪೫

ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತ ಸುಖಿ
ಪಂಚೇಂದ್ರಿಯಗಳಿಚ್ಛೆಯಲ್ಲಿ ಕೀಳುಮನಂಗೊಂಡು ಸುಳಿವಾತ ದುಃಖಿ
ಮನಸ್ಸು ಬಹಿರ್ಮುಖವಾಗಲು ಮಾಯಾಪ್ರಪಂಚ
ಮನವಂತರ್ಮುಖವಾದರೆ ಅವಿರಳಜ್ಞಾನಿ
ಮನವು ಮಹದಲ್ಲಿ ನಿಂದಿರಲಾತ ಮುಕ್ತನು
ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರಲಿಂಗದಲ್ಲಿ ಅಭೇದ್ಯನು.

–ಆದಯ್ಯ

ಪುಣ್ಯಜೀವಿಗಳು, ಯಾವಾಗಲ ಶಾಶ್ವತ ಸುಖವನ್ನು ಬಯಸುತ್ತಾರೆ. ಅವಿರಳ ಜ್ಞಾನಿಗಳಾಗಿ, ಈ ನಶ್ವರ ಪ್ರಪಂಚದಿದ ಮುಕ್ತರಾಗಲು ಹಾತೊರೆಯುತ್ತಾರೆ. ದೇವರಲ್ಲಿ ಒಂದಾಗಲು ಬಯಸುತ್ತಾರೆ. ಕೆಲವರು ಈ ಸಂಸಾರವೆಂಬ ಕೆಸರಲ್ಲಿಯೇ ಸಿಕ್ಕಿಕೊಂಡು, ಹೊರಬರಲಾಗದೆ ಅದರಲ್ಲೇ ಜೀವನ ಪರ್ಯಂತ ವಿಲಿವಿಲಿ ಒದ್ದಾಡಿ ತೊಳಲಾಡುತ್ತಾರೆ. ಅಂತಹವರನ್ನೆಲ್ಲಾ ಕುರಿತು ಶರಣ ಆದಯ್ಯನು, ಯಾವ ಮನುಷ್ಯನು ಪಂಚೇಂದ್ರಿಯಗಳ ಪ್ರಭಾವಕ್ಕೆ ಒಳಗಾಗಿ ವಿಕಾರಗೊಳ್ಳುವ ಮನಸ್ಸನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡು, ವಿಷಯ ಸುಖಗಳಿಗೆ ವಶನಾಗದೆ ಬದುಕುತ್ತಾನೋ ಅವನು 'ಶಾಶ್ವತ ಸುಖ'ವನ್ನು ಪಡೆಯುತ್ತಾನೆ. ಯಾರು ಈ ಪಂಚೇಂದ್ರಿಯಗಳ ಕೀಳುಮಟ್ಟದ ಇಚ್ಛೆಗಳಿಗೆ ಜೋತುಬಿದ್ದು ವಿಷಯಲಾಲಸೆಗಳಲ್ಲಿ ಮುಳುಗುತ್ತಾನೋ ಅವನೇ ದುಃಖಕ್ಕೆ ಒಳಗಾಗುತ್ತಾನೆ. ಯಾವನು ಮನಸ್ಸನ್ನು ಬಾಹ್ಯವಾಸನೆಗಳಿಗೆ, ಬಾಹ್ಯ ಆಕರ್ಷಣೆಗಳಿಗೆ ಒಳಪಡುವಂತಹ ದೌರ್ಬಲ್ಯವನ್ನು ಹೊಂದಿರುತ್ತಾನೋ ಅವನು, ಈ ಪ್ರಾಪಂಚಿಕ ವಿಷಯಗಳಲ್ಲಿ ಮುಳುಗಿ ಮೇಲೇರದವನಾಗುತ್ತಾನೆ. ಯಾರ ಮನಸ್ಸು ಅಂತರ್ಮುಖವಾಗಿ, ಪರಮಾತ್ಮನ ಧ್ಯಾನದಲ್ಲಿ ಲೀನವಾಗುತ್ತದೆಯೋ ಅವನು ಮುಕ್ತಿಪಡೆಯುತ್ತಾನೆ. ಭಕ್ತಿಭಾವನೆಯಿಂದ, ಧ್ಯಾನದಿಂದ ಚಿತ್ತವನ್ನು ಬರಿದುಮಾಡಿಕೊಂಡು, ಧ್ಯಾನಿಸುವವನು ಭಗವಂತನಲ್ಲಿ ಅಭೇದ್ಯನಾಗಿ ಬೆರೆಯುತ್ತಾನೆ. ಎಂದರೆ ಪರಮಾತ್ಮನೇ ಆಗುತ್ತಾನೆಂದು ಹೇಳಿದ್ದಾನೆ.

ಒಟ್ಟಿನಲ್ಲಿ ಎಲ್ಲಾ ಶರಣರೂ ತಮ್ಮ ತಮ್ಮದೇ ಆದ ರೀತಿಗಳಲ್ಲಿ ಭಗವಂತನನ್ನು ಒಲಿಸಬೇಕಾದರೆ ಪಂಚೇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡಿರಬೇಕು; ಪರಿಶುದ್ಧ ಮನವಿರಬೇಕು ಎಂಬ ಅಂಶವನ್ನು ನಾನಾ ರೀತಿಯಿಂದ ಒತ್ತಿ ಒತ್ತಿ ಹೇಳಿದ್ದಾರೆ. ಇಲ್ಲಿ ಶರಣ ಅದಯ್ಯನೂ ಅದೇ ಅಭಿಪ್ರಾಯ ವ್ಯಕ್ತಪಡಿಸಿರುವುದನ್ನು ಕಾಣಬಹುದು. ■

## ೧೪೬

ಸಸಿಯ ಮೇಲೆ ಸಾಗರವರಿದಂತಾಯಿತ್ತಯ್ಯಾ.
ಆನಂದದಿಂದ ನಲಿನಲಿದಾಡುವೆ
ಆನಂದದಿಂದ ಕುಣಿಕುಣಿದಾಡುವೆ
ಕೂಡಲಸಂಗನ ಶರಣರು ಬಂದಡೆ
ಉಬ್ಬಿ, ಕೊಬ್ಬಿ, ಹರುಷದಲೋಲಾಡುವೆ.

–ಬಸವಣ್ಣ

ಶರಣರ ಬರವೆನಗೆ ಒಂದು ದೊಡ್ಡ ಹಬ್ಬವೆಂದು ತಿಳಿದಿದ್ದರು ಬಸವಣ್ಣ. ಎನಗಿಂತ ಕಿರಿಯರಿಲ್ಲವೆಂದು ತಿಳಿದಿದ್ದ ಬಸವಣ್ಣನವರು ಶಿವಶರಣರ ಆಗಮನವು ತಮಗೆ ದೊರೆತ ಒಂದು ದೊಡ್ಡ ಸಂಭ್ರಮವೆಂದು ತಿಳಿದು, ಅವರ ಆಗಮನದಿಂದ ಒಂದು ಸಣ್ಣ ಸಸಿಗೆ ನೀರೆರೆಯಲು ಸಾಗರವೇ ಹರಿದುಬಂದಷ್ಟು ದೊಡ್ಡದಾಗಿ ತಿಳಿದುಕೊಂಡು ಆನಂದದಿಂದ ನಲಿದಾಡಿದರು. ತಾವೇ ಮಹಾಮೊಹ ಶರಣರಾಗಿದ್ದರೂ ತಾವು ದೊಡ್ಡವರೆಂದು ಭಾವಿಸದೆ, ಇತರರ ದೊಡ್ಡಸ್ತಿಕೆಯನ್ನು ಕೊಂಡಾಡುತ್ತಿದ್ದ ವಿನಯಶೀಲರಾಗಿದ್ದರವರು.

ಮನೆಗೆ ನಮಗೆ ಪ್ರಿಯರಾದ ಅತಿಥಿಗಳಾಗಲೀ ಬಂಧುಗಳಾಗಲೀ ಬಂದರೆ ಸಾಮಾನ್ಯವಾಗಿ ಮಕ್ಕಳು ತುಂಬಾ ಖುಷಿಪಟ್ಟು, ಉಬ್ಬಿ ಹೋಗಿ, ಹರುಷದೊಳಗೆ ಓಲಾಡುವಂತೆ ಬಸವಣ್ಣನವರು ಕೂಡಲಸಂಗಮ ಶರಣರು ಬಂದರೆ ಆನಂದದಿಂದ ಉಬ್ಬಿಹೋಗುತ್ತಿದ್ದರು. ಈ ತಮ್ಮ ಆನಂದವನ್ನು ಈ ವಚನದಲ್ಲಿ ಹೇಳಿಕೊಂಡಿದ್ದಾರೆ. ■

## ೧೪೭

ಸತ್ಯವ ನುಡಿವುದೇ ದೇವಲೋಕ
ಅಸತ್ಯವ ನುಡಿವುದೇ ಮರ್ತ್ಯಲೋಕ

ಆಚಾರವೇ ಸ್ವರ್ಗ, ಅನಾಚಾರವೇ ನರಕ
ಇದಕ್ಕೆ ನೀವೇ ಕಾರಣ ಕೂಡಲಸಂಗಮದೇವಾ

–ಬಸವಣ್ಣ

ಈ ಲೋಕದ ಬಹಳಷ್ಟು ಜನರು 'ಹೇಳೋದು ಆಚಾರ ತಿನ್ನೋದು ಬದನೆಕಾಯಿ' ಎಂಬ ಗಾದೆಯಂತೆ, ಹೇಳುವುದೊಂದು ಮಾಡುವುದೊಂದು. ಅವರ ಕೃತಿಗೂ ಮಾತಿಗೂ ಸಂಬಂಧವಿರುವುದಿಲ್ಲ. ಬರೀ ಸುಳ್ಳಿನ ಕಂತೆ ಅವರ ಮಾತು. ಹೀಗೆ ಬದುಕಿದರೂ ಅವರು ದೇವಲೋಕಕ್ಕೆ ಹೋಗಬೇಕು ಈ ಮರ್ತ್ಯಲೋಕದ ಬವಣೆ ಸಾಕು ಎಂದು ಬಾಹ್ಯವಾದ ಪೂಜೆಗೆ ಸಂಬಂಧಿಸಿದ ಆಚರಣೆಗಳನ್ನು ಮಾಡುತ್ತಾರೆ. ಆದರೆ ಅವರ ಜೀವನವನ್ನು ನೋಡಿದರೆ ಅದು ಬರೀ ಅನಾಚಾರದಿಂದ ತುಂಬಿರುತ್ತದೆ. ತಿನ್ನಬಾರದುದನ್ನು ತಿನ್ನುತ್ತಾ, ಕುಡಿಯಬಾರದುದನ್ನು ಕುಡಿಯುತ್ತಾ, ಮಾಡಬಾರದುದನ್ನು ಮಾಡುತ್ತಾ, ಆಡಬಾರದುದನ್ನು ಆಡುತ್ತಾ ಬದುಕುವರು. ಈ ಮನುಷ್ಯ ಜೀವನದಲ್ಲಿಯೇ ತಮ್ಮ ಕೃತ್ಯಗಳಿಂದ ಸ್ವರ್ಗ ನರಕಗಳ ಅನುಭವವನ್ನು ಪಡೆಯುತ್ತಾರೆ. ಸತ್ಯವ ನುಡಿದರೆ ಅಲ್ಲಿ ದೇವಲೋಕವಿರುತ್ತದೆ. ಅಂದರೆ ಎಲ್ಲಿ ಎಲ್ಲರೂ ಸತ್ಯವನ್ನು ಹೇಳುತ್ತಾ, ಸತ್ಯವಾಗಿ, ಬದುಕುತ್ತಾ, ಸತ್ಕಾರ್ಯಗಳನ್ನು ಮಾಡುತ್ತಾ ಇದ್ದರೆ, ಅಲ್ಲಿ ಕೆಡುಕುಂಟಾಗಲೂ ಸಾಧ್ಯವೇ ಇಲ್ಲ. ಅಲ್ಲಿ ವಿರಸಕ್ಕಾಗಲೀ, ದ್ವೇಷಕ್ಕಾಗಲೀ, ಅಸಮಾಧಾನಕ್ಕಾಗಲೀ ಅವಕಾಶವಿರುವುದಿಲ್ಲ. ಅಲ್ಲಿ ಬರೀ ಸುಖ, ಸಂತೋಷ, ನೆಮ್ಮದಿಗಳೇ ತಾಂಡವವಾಡುತ್ತವೆ. ನೆಮ್ಮದಿ ಇರುವ ಸ್ಥಳವೇ ದೇವಲೋಕ. ಎಲ್ಲಿ ಅಸತ್ಯವಿರುವುದೋ ಅಲ್ಲಿ ಕಪಟ, ವಂಚನೆ, ಮೋಸಗಳು ಸೇರಿಕೊಳ್ಳುವುವು, ಇದೆಲ್ಲಾ ತಾಂಡವವಾಡುತ್ತಿದ್ದರೂ ಅಂತಹ ಕಪಟಿಗಳು, ವಂಚಕರು, ಮೋಸಗಾರರು ಸುಳ್ಳು ಹೇಳುವವರು ಇದ್ದಲ್ಲಿ ನೆಮ್ಮದಿ, ಸಂತೋಷ, ಪ್ರೀತಿ, ವಿಶ್ವಾಸಗಳು ಇಲ್ಲವಾಗಿ, ಸಂಕಟ, ನೋವು, ಅಸಹಾಯಕತೆ, ಕಷ್ಟಗಳು ತುಂಬಿರುತ್ತವೆ. ಅವುಗಳಿಂದ ತುಂಬಿದ ಜೀವನ ನರಕ ಸದೃಶವಾಗಿ ಅದೇ ಮರ್ತ್ಯಲೋಕವಾಗುತ್ತದೆ. ಆಚಾರಪೂರಿತ ನಡೆನುಡಿ ಇದ್ದ ಕಡೆ ಸ್ವರ್ಗ, ಅನಾಚಾರದ ನಡೆನುಡಿ ಇದ್ದುದೇ ನರಕ. ಬೇರೆ ಸ್ವರ್ಗ ನರಕಗಳಿಲ್ಲ ಎಂಬ ಅಂಶವನ್ನಿಲ್ಲಿ ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ.

■

## ೧೪೪

ಸತ್ಯಕ್ಕೆ ಸರಿಇಲ್ಲ, ಮಿಥ್ಯಕ್ಕೆ ನೆಲೆಇಲ್ಲ
ಹೆತ್ತಮ್ಮನಿಂದ ಹಿತರಿಲ್ಲ, ನರರೊಳು
ನಿತ್ಯರೇ ಇಲ್ಲ ಸರ್ವಜ್ಞ

–ಸರ್ವಜ್ಞ

ವಹಿಸಿದರೆ, ಅವರು ಕೆಲಸವನ್ನು ಕೆಡಿಸಿಬಿಡುತ್ತಾರೆ. ಆಗ ಉದ್ದೇಶವೇ ನೆರವೇರುವುದಿಲ್ಲ. ಹೀಗೆಯೇ ಶಿವದೀಕ್ಷೆಯನ್ನು ಕೊಡುವಾಗಲೂ ಆ ವ್ಯಕ್ತಿ ಅದಕ್ಕೆ ಯೋಗ್ಯನೇ ಎಂದು ಮೊದಲು ನೋಡಬೇಕು. ಅವನಲ್ಲಿ ಸದ್ಭಕ್ತನಾಗಿ ಗುಣಶೀಲನಾಗಿ, ಉತ್ತಮರೀತಿಯಿಂದ ಬದುಕಬಲ್ಲ ಸಂಸ್ಕಾರವಿದ್ದರೆ, ಶಿವಭಕ್ತನ ಗುಣಗಳನ್ನು ಅಳವಡಿಸಿಕೊಂಡು ಬದುಕುವ ಆಸೆ, ಜ್ಞಾನ ಇದ್ದರೆ ಮಾತ್ರ ಕೊಡಬೇಕು. ಯೋಗ್ಯತೆ ಇಲ್ಲದವನಿಗೆ ಕೊಟ್ಟರೆ ಅವನು ತನ್ನ ಮೂಲಗುಣಗಳನ್ನು ಬಿಡುವುದಿಲ್ಲ, ಭಕ್ತನಾಗಿ ಪರಿವರ್ತನೆಗೊಳ್ಳುವುದಿಲ್ಲ. ಕೊಟ್ಟ ಸಂಸ್ಕಾರ ವ್ಯರ್ಥವಾಗುತ್ತದೆ ಎಂಬ ಮಾತನ್ನು ಬಸವಣ್ಣನವರು ಸುಂದರವಾದ ಉಪಮೆಯ ಮೂಲಕ ವಿವರಿಸಿದ್ದಾರೆ.

ನಮ್ಮಲ್ಲಿ ಪೂಜೆ ಮಾಡುವಾಗ ಅಗ್ರಪೂಜೆಯನ್ನು ಬೆನಕನಿಗೆ ಸಲ್ಲಿಸುತ್ತಾರೆ. ಆಗ ಕೆಲವರು ಸಗಣಿಯಲ್ಲಿ ಬೆನಕನನ್ನು ಮಾಡಿ, ಸಂಪಿಗೆ ಮುಂತಾದ ಸುಗಂಧ ಪುಷ್ಪಗಳಿಂದ ಪೂಜಿಸುತ್ತಾರೆ. ಆದರೂ ಆ ಬೆನಕನಿಂದ ಗಂಜಳದ ವಾಸನೆ ಹೊಡೆಯುತ್ತಲೇ ಇರುತ್ತದೆ. ಆ ಸಗಣಿ ನನ್ನನ್ನು ಬೆನಕನನ್ನಾಗಿ ಮಾಡಿದ್ದಾರೆಂದು, ಸುವಾಸನೆಯನ್ನೇನೂ ಬೀರುವುದಿಲ್ಲ. ಅದೇ ರೀತಿ ಮಣ್ಣಿನಿಂದ ದೇವರ ಆಕಾರಮಾಡಿ ಪೂಜಿಸುತ್ತಾರೆ (ಗಣಪತಿ, ಗೌರಿ, ಬಸವಣ್ಣ ಇತ್ಯಾದಿ). ಆ ಮಣ್ಣು ನಾನೀಗ ದೇವರಾಗಿದ್ದೇನೆಂದು ಗಟ್ಟಿತನವನ್ನೇನೂ ಪಡೆಯುವುದಿಲ್ಲ ನೀರಲ್ಲಿ ಹಾಕಿದರೆ ಮೂರ್ತಿ ಕರಿಗೆ ಕೆಸರಾಗುತ್ತದೆ. ಮಣ್ಣಿನ ಗುಣದಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಮಣ್ಣು ಮಣ್ಣೇ, ಸಗಣಿ ಸಗಣಿಯೇ. ಹೀಗೆ ಮಾಡಿ ಪೂಜಿಸುವುದು ಒಂದು ಮನರಂಜನೆಯ ಆಟವಾಗುತ್ತದೆ ಅಷ್ಟೆ. ಅದೇ ರೀತಿ, ಉತ್ತಮ ಸಂಸ್ಕಾರವಿಲ್ಲದವನಿಗೆ ಪೂರ್ವಾಪರ ವಿಚಾರಿಸದೆ, ಶಿವದೀಕ್ಷೆ ಕೊಟ್ಟರೆ, ಅವನಲ್ಲಿ ಯಾವ ಬದಲಾವಣೆಯೂ ಕಾಣುವುದಿಲ್ಲ. ಮೊದಲಿನಂತೆ ಅವನ ದಾರಿಯಲ್ಲೇ ನಡೆಯುತ್ತಾನೆ. ಶಿವದೀಕ್ಷೆ ಕೊಟ್ಟ ಉದ್ದೇಶ ಸಫಲವಾಗುವುದಿಲ್ಲ. ಅವನು ಸದ್ಭಕ್ತನಾಗುವುದಿಲ್ಲ. ಮಾಡಿದುದೆಲ್ಲಾ ವ್ಯರ್ಥವಾಗುತ್ತದೆ; ಒಂದು ಆಟವಾಗುತ್ತದೆ. ಆದುದರಿಂದ ಶಿವದೀಕ್ಷೆ ಕೊಡುವಾಗ ಸತ್ಪಾತ್ರನಿಗೆ ಕೊಟ್ಟರೆ ಮಾತ್ರ ಉಪಯೋಗ; ಸತ್ಪಾತ್ರನಿಗೆ ಮಾತ್ರ ಶಿವದೀಕ್ಷೆ ಕೊಡಬೇಕು ಎಂಬ ಎಚ್ಚರಿಕೆಯ ಮಾತನ್ನು ಬಸವಣ್ಣನವರು ನಮಗೆಲ್ಲಾ ಈ ವಚನದ ಮೂಲಕ ತಿಳಿಯಪಡಿಸಿದ್ದಾರೆ.

■

## ೧೫೦

ಸಾವಾಗ ದೇವನೆಂದರೆ ಸಾವು ಬಿಡುವುದೆ?
ಇದಾವ ಮಾತೆಂದು ನುಡಿಯುವಿರಿ ಎಲೆ ಅಣ್ಣಗಳಿರಾ?

ಬಾಳುವಲ್ಲಿ ಬದುಕುವಲ್ಲಿ ಗುರು ಲಿಂಗ ಜಂಗಮವನರಿಯದೆ
ಹಾಳು ಹರಿಯತಿಂದ ಶುನಕನಂತೆ ಕಾಲ್ಗೆಡೆದು ಓಡಾಡಿ
ಏಳಲಾರದೆ ಬಿದ್ದಾಗ ಶಿವಶಿವಾ ಎಂದರೆ ಅಲ್ಲಿ ದೇವನಿಪ್ಪನೆ?
ಇದ ನೋಡಿ ನಾಚಿ ನಗುತಿರ್ದ ನಮ್ಮ ಬಸವಪ್ರಿಯ
ಕೂಡಲಸಂಗಮಚೆನ್ನಬಸವಣ್ಣಾ.

–ಹಡಪದ ಅಪ್ಪಣ

ಮನುಷ್ಯಸ್ವಭಾವ ವಿಚಿತ್ರ, ತನಗೆಲ್ಲಾ ಅನುಕೂಲವಿದ್ದಾಗ, ಯಾವ ಕಷ್ಟಗಳೂ ಬರದಿದ್ದಾಗ, ದೇವರ ಹೆಸರನ್ನೂ ಎತ್ತುವುದಿಲ್ಲ. ಆಗ ಮನಸ್ಸಿಗೆ ಬಂದಂತೆ ಮೆರೆಯುತ್ತಾನೆ, ಅಹಂಕಾರದಿಂದ ವರ್ತಿಸುತ್ತಾನೆ. ತನಗೆ ಸಮಾನರಿಲ್ಲವೆಂಬಂತೆ ನಡೆಯುತ್ತಾನೆ. ಆಗ ಗುರು, ಲಿಂಗ, ಜಂಗಮ ಯಾವುದರ ಪರಿವೆಯೂ ಇರುವುದಿಲ್ಲ. ನಾಯಿಯ ಹಾಗೆ ಹಾಳುಮೂಳನ್ನೆಲ್ಲಾ ತಿಂದು ಸಿಕ್ಕಲ್ಲಿ ತಿರುಗಿ, ಅದರ ಪರಿಣಾಮವಾಗಿ ನೆಲಕ್ಕೆ ಬಿದ್ದಾಗ, ಸಾಯುವ ಸ್ಥಿತಿ ಬಂದಾಗ ದೇವರನ್ನು ನೆನೆಸಿದರೆ ಸಾವು ತಪ್ಪುತ್ತದೆಯೇ? ಇದೆಲ್ಲ ಸಂಕಟ ಬಂದಾಗ ಮಾತ್ರ ವೆಂಕಟರಮಣ ಎನ್ನುವ ರೀತಿ. ಎಂದೂ ದೇವರನ್ನು ನೆನೆಯದೆ, ಇಂದು ಕಷ್ಟ ಬಂದುದಕ್ಕಾಗಿ ನೆನೆದರೆ ದೇವರು ಬರುವುದು ಸಾಧ್ಯವಿಲ್ಲ. ಎಂದೂ ದೇವರನ್ನು ನೆನೆಯದೆ ಮರೆದಾಡಿ, ಇಂದು ನೆನೆದಾಗ ದೇವರಿಗೇ ನಾಚಿಕೆಯಾಗುತ್ತದಂತೆ. ನಾಚಿಕೆಬಿಟ್ಟು ಈಗ ದೇವರನ್ನು ನೆನೆಸುವುದನ್ನು ನೋಡಿ, ಆಗ ದೇವರು ಅಯ್ಯೋ ಮೂರ್ಖ ಎಂದು ನಗತೊಡಗುತ್ತಾನೆ ಎಂದಿದ್ದಾನೆ.

■

೧೫೧

ಸಾರ? ಸಜ್ಜನರ ಸಂಗವ ಮಾಡುವುದು;
ದೂರ! ದುರ್ಜನರ ಸಂಗ ಬೇಡವಯ್ಯಾ.
ಆವ ಹಾವಾದಡೇನು, ವಿಷವೊಂದೆ,
ಅಂತವರ ಸಂಗ ಬೇಡವಯ್ಯಾ.
ಅಂತರಂಗ ಶುದ್ಧವಿಲ್ಲದವರ ಸಂಗ
ಸಿಂಗಿ ಕಾಳಕೂಟ ವಿಷವೊ, ಕೂಡಲಸಂಗಮದೇವಾ.

–ಬಸವಣ್ಣ

ನಾವು ಮಾಡುವ ಸಹವಾಸ ಅಂದರೆ ನಾವು ಯಾರೊಡನೆ ಹೆಚ್ಚು ಸಂಪರ್ಕವಿಟ್ಟುಕೊಳ್ಳುತ್ತೇವೆಯೋ ಅವರ ಪ್ರಭಾವ ನಮ್ಮ ಸ್ವಭಾವದ ಮೇಲೆ

ಉಂಟಾಗುತ್ತದೆ. ಆದುದರಿಂದ ಸಹವಾಸ ಮಾಡುವಾಗ ನಾವು ಬಹು ಎಚ್ಚರದಿಂದಿರಬೇಕು. ಯಾವಾಗಲೂ ಉತ್ತಮರ ಎಂದರೆ ಸಜ್ಜನರ ಅರ್ಥಾತ್ ಒಳ್ಳೆಯ ಜನರ ಸಹವಾಸ ಮಾಡಬೇಕು. ದುರ್ಜನರ ಎಂದರೆ ಕೆಟ್ಟಜನರ ಸಹವಾಸದಿಂದ ಸದಾ ದೂರವಿರಬೇಕು. ಆಗ ನಮ್ಮ ಮೇಲೆ ಸತ್ಪರಿಣಾಮವಷ್ಟೇ ಆಗಲು ಸಾಧ್ಯವಾಗುತ್ತದೆ ದುಷ್ಪರಿಣಾಮವಾಗಲು ಆಸ್ಪದವಾಗುವುದಿಲ್ಲ. ದುಷ್ಟರ ಸಹವಾಸ ವಿಷಸರ್ಪ ಕಚ್ಚಿದಂತೆ. ಹಾವು ಯಾವುದಿದ್ದರೂ ಸರಿಯೆ, ಮಿಡಿನಾಗರಾಗಲೀ, ಕಾಳಿಂಗ ಸರ್ಪವಾಗಲೀ, ಗೋಧಿನಾಗರಹಾವಾಗಲೀ, ಮತ್ತ್ಯಾವುದೇ ಹಾವಾದರೂ ಸರಿ ವಿಷ ವಿಷವೆ. ಆ ವಿಷ ಕೆಟ್ಟಪರಿಣಾಮವನ್ನು ಉಂಟುಮಾಡಿಯೇ ತೀರುತ್ತದೆ. ಹಾಗೆ ದುಷ್ಟಜನರು ಯಾರೇ ಆಗಿರಲಿ ಬಂಧುವಾಗಲಿ, ಬಳಗದವರಾಗಲಿ, ಸ್ನೇಹಿತರಾಗಲಿ, ನೆರೆಹೊರೆಯವರಾಗಲಿ, ಗಂಡನಾಗಲಿ, ಹೆಂಡತಿಯಾಗಲಿ, ಮಕ್ಕಳಾಗಲಿ ಅವರು ದುಷ್ಟರಾಗಿದ್ದರೆ ಅವರಿಂದ ದೂರವಿರಬೇಕು. ಏಕೆಂದರೆ ಅಂತರಂಗ ಶುದ್ಧವಿಲ್ಲದವರ ಸಹವಾಸ, ಮಹಾವಿಷಸರ್ಪದ ವಿಷಕ್ಕೆ ಸಮಾನ ಎಂದು ಬಸವಣ್ಣ ಬುದ್ಧಿಹೇಳಿದ್ದಾನೆ, ಎಚ್ಚರಿಸಿದ್ದಾನೆ, ಬೋಧಿಸಿದ್ದಾನೆ.

■

## ೧೫೨

ಸಂಸಾರವೆಂಬ ಹೆಣಬಿದ್ದಿರೆ ತಿನಬಂದ
ನಾಯ ಜಗಳವ ನೋಡಿರೇ!
ನಾಯಜಗಳವನೋಡಿ, ಹೆಣನೆದ್ದು ನಗುತ್ತಿದೆ
ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರೆ

–ಅಲ್ಲಮಪ್ರಭು

ಗಂಡ–ಹೆಂಡತಿ, ಮಕ್ಕಳು, ನಾನು–ನನ್ನದು ಇದೆಲ್ಲಾ ಈ ಜಗದ ವ್ಯಾಪಾರ. ಸಂಸಾರ ಸಾಗರದಲ್ಲೇ ಮಾನವ ಮುಳುಗೇಳುತ್ತಾನೆ. ಇದು ಒಂದು ಅಯಸ್ಕಾಂತವಿದ್ದಂತೆ. ಆ ಸಂಸಾರದಿಂದ ಆಕರ್ಷಿತನಾಗಿ, ಅದನ್ನು ಪಡೆಯಲು, ಅನುಭವಿಸಲು ಇಡೀ ಜೀವನ ಗುದ್ದಾಡುತ್ತಾನೆ. ಅದರಲ್ಲೇ ಸಿಕ್ಕಿ ಒದ್ದಾಡುತ್ತಾನೆ. ಮೇಲೇಳದವನಾಗಿ ಅಲ್ಲೇ ತೊಳಲಾಡುತ್ತಾನೆ. ಶರಣರು ಸಂಸಾರ ಜೀವನವನ್ನು ವಿರೋಧಿಸಿಲ್ಲ. ಆದರೆ ಕೊನೆಯವರೆಗೂ ಅದರಲ್ಲೇ ಸಿಕ್ಕಿಹಾಕಿಕೊಂಡು ಒದ್ದಾಡದೆ, ಅದರ ಅಸ್ಥಿರತೆಯನ್ನು ನಿಸ್ಸಾರತ್ವವನ್ನು ಹಂತ–ಹಂತವಾಗಿ ಮನಗಂಡು, ಷಟ್‌ಸ್ಥಲಗಳ ಮೂಲಕ ಸಂಸಾರ ಹೇಯಸ್ಥಲಕ್ಕೆ ಬಂದು, ಮೋಕ್ಷಸ್ಥಲವನ್ನು ಮುಟ್ಟಬೇಕೆಂದು ಬೋಧಿಸುತ್ತಾರೆ. ಆದರೆ ಬಹುಜನರು ಈ ಸಂಸಾರದ ಆಕರ್ಷಣೆಗೆ ಒಳಗಾಗಿ,

ಶರಣರು ಸತ್ಯಕ್ಕೆ ಬಹಳ ಮಹತ್ವದ ಸ್ಥಾನ ಕೊಟ್ಟಿದ್ದಾರೆ. ಸತ್ಯಮಾರ್ಗದ ಮೂಲಕ ಭಗವಂತನನ್ನೇ ಕಾಣಬಹುದೆಂದು ಹೇಳುತ್ತಾರೆ. ಸತ್ಯಶುದ್ಧ ಕಾಯಕ ಮಾರ್ಗದಿಂದ ಭಕ್ತನು ತನ್ನ ಗುರಿಮುಟ್ಟುತ್ತಾನೆಂಬ ಮಾತನ್ನು ಶರಣರು ನಾನಾ ರೀತಿಯಲ್ಲಿ ವ್ಯಕ್ತಮಾಡಿದ್ದಾರೆ. ಅದೇ ರೀತಿ ಸರ್ವಜ್ಞನೂ ಸಹ ಸತ್ಯಕ್ಕೆ ಸರಿಸಮಾನವಾದುದು ಯಾವುದೂ ಇಲ್ಲವೆಂದೂ, ಮಿಥ್ಯವಾದುದು ಎಂದರೆ ಸುಳ್ಳಾದುದು ಕಡೆಯ ತನಕ ಉಳಿಯದೆ ನೆಲೆಗೆಟ್ಟು ಹೋಗುತ್ತದೆ ಎಂಬ ಮಾತನ್ನು ಹೇಳಿದ್ದಾನೆ. ಅಲ್ಲದೆ ಜಗತ್ತಿನಲ್ಲಿ ಹೆತ್ತ ತಾಯಿಗಿಂತ ಹೆಚ್ಚಾದ ಹಿತೈಷಿಗಳು ಯಾರೂ ಇಲ್ಲ. ಎಲ್ಲರಿಗಿಂತ ಅವಳ ಮಮತೆ ಮಿಗಿಲಾದುದು ಎಂಬ 'ಸತ್ಯ'ವನ್ನು ಮತ್ತು ಮಾನವ ಜೀವನ ಅಶಾಶ್ವತ, ಮಾನವರು ಶಾಶ್ವತರಾಗಿ ಭೂಮಿಯ ಮೇಲೆ ಇರಲು ಸಾಧ್ಯವೇ ಇಲ್ಲ, ಒಂದಲ್ಲ ಒಂದು ದಿನ ಸಾಯಲೇ ಬೇಕೆಂಬ 'ಸತ್ಯ'ವನ್ನು ಹೇಳಿದ್ದಾನೆ. ಆದ್ದರಿಂದ ಒಂದಲ್ಲ ಒಂದು ದಿನ ಸಾಯುವ ಮನುಷ್ಯ ಅದನ್ನರಿತು, ತಾನಿದ್ದ ಕಾಲದಲ್ಲಿ ಶಾಶ್ವತವಾಗಿ ನಿಲ್ಲುವಂತಹ ಕೆಲಸಗಳನ್ನು ಮಾಡಬೇಕು. ತಾನೇ ಶಾಶ್ವತನಾಗಿರುವೆನೆಂಬಂತೆ ಸ್ವಾರ್ಥದಿಂದ ತನ್ನ ಲಾಭಕ್ಕಾಗಿಯೇ ಬದುಕಬಾರದು. ಬೇರೆಯವರ ಹಿತಕ್ಕಾಗಿ ಬದುಕಿ, ತಾನು ಸತ್ತರೂ ತನ್ನ ಸತ್ಕಾರ್ಯ ಉಳಿಯುವಂತೆ ಬದುಕಬೇಕೆಂಬುದು ಈ ವಚನದ ಹಿಂದಿರುವ ಅರ್ಥ.

## ೧೪೫

ಸಗಣಿಯ ಬೆನಕಂಗೆ ಸಂಪಗೆಯ ಅರಳಲ್ಲಿ ಪೂಜಿಸಿದರೆ
ರಂಜನೆಯಲ್ಲದೆ ಅದರ ಗಂಜಳದ ಬಿಡದಣ್ಣಾ.
ಮಣ್ಣ ಪುತ್ಥಳಿಯ ಮಾಣದೆ-ಜಲದಲ್ಲಿ ತೊಳೆದೊಡೆ
ನಿಚ್ಚ ನಿಚ್ಚ ಕೆಸರಹುದಲ್ಲದೆ, ಅದರ ಅಚ್ಚುಗ ಬಿಡದಣ್ಣ.
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟೊಡೆ
ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ

–ಬಸವಣ್ಣ

ಸಮಾಜದಲ್ಲಿ, ವ್ಯಕ್ತಿ ಯೋಗತ್ಯೆಯನ್ನು ಒರೆಗೆ ಹಚ್ಚದೆ, ಬೇಕೆಂದವರಿಗೆಲ್ಲ ಶಿವದೀಕ್ಷೆಯನ್ನು ಕೊಡುವ, ತಾರತಮ್ಯವಿಲ್ಲದ ಸಾರಾಸಗಟು ಆಚರಣೆ ಬೆಳೆದುಬಂದಿದೆ. ಆದರೆ, ನಿಜವಾಗಿ ಹೇಳುವುದಾದರೆ, ಯಾರಿಗಾದರೂ ಯಾವುದೇ ಜವಾಬ್ದಾರಿ ವಹಿಸಬೇಕಾದರೂ, ಅವರು ಅದನ್ನು ನಿರ್ವಹಿಸಲು ಅರ್ಹರೆ, ಸಮರ್ಥರೆ ಎಂದು ಸರಿಯಾಗ ತಿಳಿದುಕೊಂಡು ಕೊಡಬೇಕು. ಅಲ್ಲದೆ, ಸಿಕ್ಕ ಸಿಕ್ಕವರಿಗೆ ಜವಾಬ್ದಾರಿ

ಅದನ್ನು ಪಡೆಯಲು, ಹೆಣವನ್ನು ಮಾಂಸದ ಆಸೆಗಾಗಿ ಮುತ್ತುವ ನಾಯಿಗಳಂತೆ, ಮುತ್ತಿ ಜಗಳಾಡುತ್ತಾರೆ. ಅವರ ಜಗಳವ ನೋಡಿ ಸಂಸಾರವೇ 'ಹುಚ್ಚಪ್ಪಗಳಿರಾ ಈ ಹೇಯವಾದ ಸಂಸಾರಕ್ಕೆ ಇಷ್ಟೇಕೆ ಜಗಳಾಡುತ್ತೀರಿ ಇದರಿಂದ ನಿಮಗೇನೂ ಸಿಗುವುದಿಲ್ಲ. ನಿಮಗೆ ಅಗತ್ಯವಾದ ಪರಶಿವನ ಸಾಕ್ಷಾತ್ಕಾರ ಈ ಮಾರ್ಗದಲ್ಲಿ ಇಲ್ಲ. ನೀವೆಷ್ಟು ಮೂರ್ಖರಿದ್ದೀರಿ" ಎಂದು ನಗುತ್ತದೆ ಎಂಬ ವ್ಯಂಗ್ಯದ ಮಾತಿನಿಂದ ಪ್ರಭುದೇವರು, ಸಂಸಾರಕ್ಕಾಗಿ ಪರದಾಡುವ ಜನರನ್ನು ಕುರಿತು ಹೇಳಿದ್ದಾರೆ ಇಲ್ಲಿ.

■

೧೫೩

ಸ್ವಾಮಿ ಭೃತ್ಯ ಸಂಬಂಧಕ್ಕೆ ಆವುದು ಪಥವೆಂದಡೆ
ದಿಟವ ನುಡಿವುದು; ನುಡಿದಂತೆ ನಡೆಯುವುದು
ನುಡಿದು ಹುಸಿವ; ನಡೆದು ತಪ್ಪುವ
ಪ್ರಪಂಚಿಯನೊಲ್ಲ ಕೂಡಲಸಂಗಮದೇವಾ

–ಬಸವಣ್ಣ

ದೇವರ ಒಲುಮೆಗಾಗಿ ಕಾತರಿಸುವವರಿಗೆ ಬಸವಣ್ಣನವರು ಮಾರ್ಗವನ್ನಿಲ್ಲಿ ಸೂಚಿಸಿದ್ದಾರೆ. ಯಜಮಾನ ಮತ್ತು ಸೇವಕನ ಸಂಬಂಧ ಉತ್ತಮವಾಗಿರುವ ಮಾರ್ಗ, ಸೇವಕನು ಸತ್ಯವನ್ನು ನುಡಿಯುವವನಾಗಿದ್ದರೆ, ಯಜಮಾನ ಅವನನ್ನು ನಂಬುತ್ತಾನೆ, ಸಮಿಪಕ್ಕೆ ಸೇರಿಸಿಕೊಳ್ಳುತ್ತಾನೆ, ಸ್ವತಂತ್ರ ಕೆಲಸಮಾಡಲು ಬಿಡುತ್ತಾನೆ. ಇಲ್ಲಿ ಬಸವಣ್ಣನು ಗುರು ಮತ್ತು ದೇವರನ್ನು ಭಗವಂತನೆಂದೂ, ಶಿಷ್ಯ ಮತ್ತು ಭಕ್ತನನ್ನು ಭೃತ್ಯನೆಂದೂ ರೂಪಕದಿಂದ ಸಂಬಂಧ ಮಾರ್ಗವನ್ನು ತಿಳಿಸಿದ್ದಾರೆ. ಈ ಗುರು ಶಿಷ್ಯ ಸಂಬಂಧ ಚೆನ್ನಾಗಿರಬೇಕಾದರೆ, ದೇವ–ಭಕ್ತ ಸಂಬಂಧ ಸುಮಧುರವಾಗಿರಬೇಕಾದರೆ, ಭಕ್ತನಾದವನು, ಶಿಷ್ಯನಾದವನು ದಿಟವ ನುಡಿಯಬೇಕು, ನುಡಿದಂತೆ ನಡೆಯಬೇಕು. ತಾನು ಹೇಳಿದಂತೆ ನಡೆಯದ ನಡತೆಯಲ್ಲಿ ತಪ್ಪುವ ಈ ಪ್ರಾಪಂಚಿಕ ವ್ಯವಹಾರಸ್ಥ ಮಾನವನನ್ನು ದೇವರು ಒಲ್ಲ. ಅವನಿಗೆ ಒಲಿಯುವುದಿಲ್ಲ ಎಂದಿದ್ದಾರೆ ಬಸವಣ್ಣನವರು.

■

೧೫೪

ಹರಿವ ಹಾವಿಗಂಜೆ, ಉರಿವ ನಾಲಗೆಗಂಜೆ
ಸುರಗಿಯ ಮೊನೆಗಂಜೆ!

ಒಂದಕ್ಕಂಜುವೆ, ಒಂದಕ್ಕಳಕುವೆ
ಪರಸ್ತ್ರೀ ಪರಧನವೆಂಬ ಜೂಬಿಂಗಂಜುವೆ।
ಮುನ್ನಂಜದ ರಾವಣನೇ ವಿಧಿಯಾದ।
ಅಂಜುವೆನಯ್ಯಾ ಕೂಡಲಸಂಗಮದೇವಾ

–ಬಸವಣ್ಣ

ಬಸವಣ್ಣ ಕಟ್ಟಾ ಶಿವಭಕ್ತ, ಶರಣರಲ್ಲಿ ಶರಣ. ಶರಣ ತತ್ವಗಳನ್ನು ಬಾಳಿದವನು. ನುಡಿದಂತೆ ನಡೆದವನು. ಪರಸ್ತ್ರೀಯನ್ನು ಆಶಿಸಿ, ಸಂಪೂರ್ಣ ನಾಶವಾದ ರಾವಣನ ಇತಿಹಾಸವನ್ನು ಕೇಳಿದಾಗ ಅವನಿಗನ್ನಿಸಿದ ಭಾವನೆಗಳು ಈ ವಚನದಲ್ಲಿ ವ್ಯಕ್ತವಾದಂತಿವೆ.

ಹಾವು ಕಂಡರೆ ಹರನಡುಗಿದ ಎನ್ನುತ್ತಾರೆ. ಅಷ್ಟು ವಿಷಪೂರಿತ ಹಾವು. ಬಸವಣ್ಣನವರು ಅಂತಹ ಹಾವಿಗೂ ನಾನಂಜುವುದಿಲ್ಲ. ತನ್ನ ಕೆನ್ನಾಲಿಗೆಗಳನ್ನು ಚಾಚಿ ಸುತ್ತಮುತ್ತಲಿದ್ದುದನೆಲ್ಲವನ್ನೂ ಸುಟ್ಟು ಭಸ್ಮ ಮಾಡಬಲ್ಲ ಬೆಂಕಿಯ ಜ್ವಾಲೆಗೂ ನಾನು ಅಂಜುವುದಿಲ್ಲ. ಒಮ್ಮೆ ಚುಚ್ಚಿದರೆ ಪ್ರಾಣವನ್ನೇ ತೆಗೆಯುವಂತಹ ಕಠಾರಿಯ ಚೂಪಾದ ಮೊನೆಗೂ ಹೆದರುವುದಿಲ್ಲ. ಆದರೆ ನಾನು ಒಂದು ವಿಷಯಕ್ಕೆ ಅಂಜುತ್ತೇನೆ – ಅಳುಕುತ್ತೇನೆ. ಅದಾವುದೆಂದರೆ ಪರಸ್ತ್ರೀ ಮತ್ತು ಪರಧನವೆಂಬ ವಿನಾಶಕಾರಿಗಳಿಗೆ ಅಂಜುವೆ. ಇವು ಬಹಳ ಕೆಟ್ಟ, ಇವಕ್ಕೆ ಅಂಜದ ರಾವಣ, ವಿಧಿಯ ಕೋಪಕ್ಕೆ ಗುರಿಯಾಗಿ ನಾಶವಾದ. ರಾವಣನನ್ನೇ ನಾಶಮಾಡಿದ ಈ ಪರಧನ, ಪರಸ್ತ್ರೀಗೆ ಅಂಜುತ್ತೇನೆ ಎಂದು ಹೇಳಿದ್ದಾರೆ ಬಸವಣ್ಣನವರು.

■

## ೧೫೫

ಹರಿದ ಗೋಣಿಯಲೊಬ್ಬ ಕಳವೆಯ ತುಂಬಿ
ಇರುಳೆಲ್ಲ ನಡೆದನು ಸುಂಕಕ್ಕಂಜಿ;
ಕಳವೆಯೆಲ್ಲ ಹೋಗಿ, ಬರಿ ಗೋಣಿ ಉಳಿಯಿತ್ತು!
ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥಾ.

–ಜೇಡರ ದಾಸಿಮಯ್ಯ

ಚಂಚಲ ಮನಸ್ಸಿನವನು ಮಾಡುವ ಭಕ್ತಿ, ಭಕ್ತನಂತೆ ನಟಿಸುತ್ತಾ ಬದುಕುವ ರೀತಿಯನ್ನು ಜೇಡರ ದಾಸಿಮಯ್ಯನು ಹರಿದ ಗೋಣಿಚೀಲದಲ್ಲಿ ಭತ್ತವನ್ನು

ತುಂಬಿಕೊಂಡವನೊಬ್ಬನು ಅದಕ್ಕೆ ಸುಂಕ ಕೊಡಬೇಕಾದೀತೆಂದು ಕಳ್ಳತನದಿಂದ ಯಾರಿಗೂ ಕಾಣದಂತೆ ಸಾಗಿಸಲು ರಾತ್ರಿಯೆಲ್ಲಾ ಆ ಚೀಲವನ್ನು ಹೊತ್ತುಕೊಂಡು ಹೋಗುವ ಹೋಲಿಕೆ ಕೊಟ್ಟಿದ್ದಾನೆ. ಅವನು ಊರನ್ನು ಸೇರುವ ಹೊತ್ತಿಗೆ ಹರಿದ ಗೋಣಿ ಚೀಲದಿಂದ ಭತ್ತವೆಲ್ಲಾ ಸೋರಿಹೋಗಿ, ಕೊನೆಗೆ ಖಾಲಿ ಚೀಲ ಮಾತ್ರ ಉಳಿದಿರುತ್ತದೆ! ಅವನು ಸುಂಕ ತಪ್ಪಿಸಲು ಹೋಗಿ ಭತ್ತವನ್ನೇ ಕಳೆದುಕೊಳ್ಳುತ್ತಾನೆ! ಹಾಗೆ ಅಳಿಮನದವನು ನಿಜವಾದ ಭಕ್ತನಂತೆ ಬದುಕಲಾರದೆ, ಹೊಯ್ದಾಟದ ಮನಸ್ಸಿನಿಂದ ಜೀವಮಾನವೆಲ್ಲಾ ಪಂಚೇಂದ್ರಿಯಗಳಿಗೆ ವಶನಾಗಿದ್ದರೂ ಸದ್ಭಕ್ತನೇನೋ ಎನ್ನುವಂತೆ ಕಾಣಿಸಿಕೊಳ್ಳಲು ಪ್ರಯತ್ನಿಸುತ್ತಾ, ಕಳವಿನಲ್ಲಿ ವಿಷಯ ಲೋಲುಪತೆಗೆ ಒಳಗಾಗಿ ಬದುಕುತ್ತಾನೆ. ಅಂತಹ ಅಳಿಮನದ ಭಕ್ತಿಯಿಂದ ಬದುಕಿದ ಜೀವನದಿಂದ ಅವನೇನೂ ಸಾಧಿಸಲಾಗುವುದಿಲ್ಲ. ಅವನ ಮಾಂಸದ ದೇಹ, ಮಂತ್ರದೇಹವಾಗುವುದಿಲ್ಲ. ಪರಮಾತ್ಮನ ಒಲುಮೆಯಂತೂ ದೂರದ ಮಾತು. ಅವನು ಶ್ರದ್ಧೆ, ನಿಷ್ಠೆಗಳಿಲ್ಲದೆ ಇಡೀ ಜೀವಮಾನದಲ್ಲಿ ಮಾಡಿದ ಪೂಜೆ ವ್ಯರ್ಥ. ಅಜ್ಞಾನವೆಂಬ ಕತ್ತಲೆಯಲ್ಲಿ ಮುಳುಗಿದ ಅವನಿಗೆ, ಇಡೀ ರಾತ್ರಿ ಬತ್ತವೆಲ್ಲ ಸೋರಿ ಹೋಗಿ ಚೀಲ ಬರಿದಾದರೂ ಆ ಮನುಷ್ಯನಿಗೆ ಹೇಗೆ ಗೊತ್ತಾಗಲಿಲ್ಲವೋ ಹಾಗೆ, ಜೀವನವಿಡೀ ತಾನು ಬದುಕಿದ ರೀತಿ ವ್ಯರ್ಥವಾಗಿ ಅಂತ್ಯದಲ್ಲಿ ಯಾವ ಸಾಧನೆಯೂ ಇಲ್ಲದೆ ಬರೀ ಗೋಣಿಚೀಲದಂತಹ ದೇಹವಷ್ಟೇ ಉಳಿದುದು ಕೊನೆಯವರೆಗೂ ಅವನಿಗೆ ಅರಿವಾಗುವುದೇ ಇಲ್ಲ. ಈ ವಚನದಲ್ಲಿ ವ್ಯಕ್ತವಾಗಿರುವ ಮುಖ್ಯ ಅಂಶವೆಂದರೆ, ಪಂಚೇಂದ್ರಿಯಗಳಿಗೆ ವಶವಾದ ಈ ದೇಹ ಮತ್ತು ಮನಸ್ಸನ್ನು ಸ್ಥಿರಮಾಡಿಕೊಳ್ಳದೆ, ಚಂಚಲ ಸ್ಥಿತಿಯಲ್ಲಿಯೇ ಜೀವನಪರ್ಯಂತ ಭಕ್ತಿ ಸೇವೆಗಳನ್ನು ಮಾಡಿದರೂ ಯಾವ ಸಾಧನೆಯೂ ಆಗುವುದಿಲ್ಲ. ಮಾಡಿದ್ದೆಲ್ಲಾ ವ್ಯರ್ಥ ಎಂಬುದೇ ಆಗಿದೆ. ಕೊಂಚ ಸುಂಕವನ್ನು ತಪ್ಪಿಸುವ ದುಷ್ಟತನದಿಂದಾಗಿ ಚೀಲತುಂಬಿದ ಬತ್ತವನ್ನೆಲ್ಲ ಕಳೆದುಕೊಳ್ಳುವ, ಅವನ್ನು ರಾತ್ರಿಯೆಲ್ಲಾ ಹೊತ್ತು ತಿರುಗುವ ಶ್ರಮ ವಹಿಸಿದ, ಅಜ್ಞಾನಿಯ ಅಳಿಮನವನ್ನು ಇಲ್ಲಿ ವರ್ಣಿಸಿರುವನು ದಾಸಿಮಯ್ಯ. ಬಹುಜನರ ಜೀವನ ಸಾಧನೆಯೆಲ್ಲಾ ಇಷ್ಟೇ ಅಲ್ಲವೆ?

■

## ೧೫೬

ಹಣ್ಣ ಮೆದ್ದಬಳಿಕ ಆ ಮರವನಾರು ತರಿದಡೇನು?
ಹೆಣ್ಣ ಬಿಟ್ಟಬಳಿಕ ಆಕೆಯನಾರು ಕೂಡಿದಡೇನು?
ಮಣ್ಣ ಬಿಟ್ಟಬಳಿಕ ಆ ಕೆಯ್ಯನಾರುತ್ತಡೇನು?

ಚನ್ನಮಲ್ಲಿಕಾರ್ಜುನನನ್ನರಿಯದ ಬಳಿಕ
ಆ ಕಾಯವ ನಾಯಿ ತಿಂದಡೇನು, ನೀರುಕುಡಿದಡೇನು.

–ಅಕ್ಕಮಹಾದೇವಿ

ಮರದ ಉಪಯೋಗ ಅದು ಬಿಡುವ ಹಣ್ಣಗಳಿಂದ. ಆ ಹಣ್ಣುಬಿಟ್ಟು ಅದನ್ನು ತಿಂದು ಆನಂದಿಸಿ, ಮುಗಿದ ಬಳಿಕ, ಅದು ಇನ್ನೂ ಹಣ್ಣನ್ನು ಬಿಡಲಾಗದಷ್ಟು ಹಳೆಯದಾದ ಬಳಿಕ ಅದನ್ನು ಯಾರು ತರಿದುಹಾಕಿದರೂ ಯಾರಿಗೂ ಲಕ್ಷ್ಯವಿರುವುದಿಲ್ಲ. ಹಣ್ಣು ಬಿಡುವ ಕಾಲಕ್ಕೆ ಆ ಮರವನ್ನು ಎಲ್ಲರೂ ಲಕ್ಷಿಸುತ್ತಿರುತ್ತಾರೆ. ಒಬ್ಬ ಮಹಿಳೆಯು ಕುಲವಧುವಾಗಿದ್ದಾಗ, ಆಕೆಗೆಲ್ಲಾ ಮಾನಸನ್ಮಾನಗಳೂ, ಸ್ಥಾನಮಾನಗಳೂ, ಬೆಲೆಗೌರವಗಳೂ ಸಲ್ಲುತ್ತವೆ. ಅವಳ ಪುರುಷನು ಆಕೆಗಾದ ಅವಮಾನ, ಅಗೌರವ ತನಗಾದುದೆಂದರಿದು, ಆಕೆಯನ್ನು ಸಂರಕ್ಷಿಸುತ್ತಾನೆ. ಆದರೆ, ಅವನು ಆಕೆಯನ್ನು ಬಿಟ್ಟುಬಿಟ್ಟಿದ್ದರೆ, ತಿರಸ್ಕರಿಸಿ ಹೊರಗೆ ಹಾಕಿದ್ದರೆ, ಅವಳು ಎಲ್ಲಿಗೆ ಹೋಗಲಿ, ಏನೇ ಮಾಡಲಿ ಅವಳಿಗೆ ಏನೇ ಆಗಲಿ, ಅವಳು ಯಾರೊಡನೆಯಾದರೂ ಇರಲಿ, ಪುರುಷ ಚಿಂತಿಸುವುದಿಲ್ಲ. ಅವಳಿಗೆ ಏನಾದರಾಗಲಿ, ತನಗೇನೂ ಸಂಬಂಧವಿಲ್ಲವೆಂಬಂತೆ ಇರುತ್ತಾನೆ. ಭೂಮಿಗೂ ಅಷ್ಟೆ. ಒಡೆಯನರುವತನಕ ಅದನ್ನು ಜತನವಾಗಿ ನೋಡಿಕೊಳ್ಳುತ್ತಾನೆ. ಉತ್ತುತ್ತಾನೆ ಬಿತ್ತುತ್ತಾನೆ ಬೆಳೆ ಪಡೆಯುತ್ತಾನೆ. ಬೇರೆಯವರು ಅದರಲ್ಲಿ ಬೇಸಾಯ ಮಾಡಲು ಬಂದರೆ ಆಸ್ಪದಕೊಡುವುದಿಲ್ಲ. ಆ ಭೂಮಿ ತನಗೆ ಸೇರಿದ್ದೆಂದು ಬಡಿದಾಡುತ್ತಾನೆ. ಆದರೆ ಆ ಒಂದು ಭೂಮಿಯನ್ನು ತನಗೆ ಬೇಡವೆಂದು ಬಿಟ್ಟುಬಿಟ್ಟರೆ, ಬೇರೆ ಯಾರು ಬೇಕಾದರೂ ಅದರಲ್ಲಿ ವ್ಯವಸಾಯ ಮಾಡಿಕೊಳ್ಳಬಹುದು. ತಡೆಯುವವರು ಯಾರೂ ಇರುವುದಿಲ್ಲ. ಬೇಡವಾದ ಭೂಮಿಯನ್ನು ಯಾರು ಉತ್ತರೇನು? ಕೇಳುವವರಿರುವುದಿಲ್ಲ. ಹಾಗೆಯೇ ಮನುಷ್ಯನಾಗಿ ಹುಟ್ಟಿದ ಬಳಿಕ ಪರಮಾತ್ಮನನ್ನು ಅರಿಯಬೇಕು. ಅದನ್ನೇ ಮಾಡದಿದ್ದರೆ, ಆ ವ್ಯಕ್ತಿಯ ದೇಹ, ವ್ಯರ್ಥ, ನಿಕೃಷ್ಟ ಅಂತಹವನನ್ನು ನಾಯಿ–ತಿಂದು ನೀರು ಕುಡಿದರೂ ಅತಿಶಯವಲ್ಲ. ಅದು ಅದಕ್ಕೇ ಯೋಗ್ಯ. ಭಗವಂತನನ್ನು ಅರಿಯುವಂತಹ ಜ್ಞಾನವಿಲ್ಲದ ಆ ವ್ಯಕ್ತಿ ಏನು ಗತಿಯಾದರೆ ಆಗಬಹುದು. ಅದಕ್ಕೆ ಬೆಲೆ ಇಲ್ಲ ಎಂಬ ಜೀವನ ಸಾರ್ಥ್ಯಕ್ಯದ ಮಾತನ್ನು ಅಕ್ಕಮಹಾದೇವಿ ಇಲ್ಲಿ ಹೇಳಿದ್ದಾಳೆ.

■

೧೫೭

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು!

ಕೊಂದಹರನೆಂಬುದನರಿಯದೆ.
ಬೆಂದೊಡಲ ಹೊರೆಯ ಹೋಯಿತ್ತು
ಅಂದಂದೆ ಹುಟ್ಟಿತ್ತು ಅಂದಂದೆ ಹೊಂದಿತ್ತು
ಕೊಂದವರುಳಿದರೆ ಕೂಡಲಸಂಗಮದೇವ.

–ಬಸವಣ್ಣ

ಕೆಲವು ಜನ ಮೂಢ ಆಚರಣೆಯನ್ನು ಆಚರಿಸುತ್ತಾರೆ. ಕೆಲವೊಂದು ಹಬ್ಬಗಳಲ್ಲಿ ಕುರಿಯನ್ನು ಬಲಿಕೊಡುತ್ತೇವೆಂದು ಹರಕೆ ಹೊತ್ತಿರುತ್ತಾರೆ. ಅದಕ್ಕಾಗಿ ಕುರಿಯೊಂದನ್ನು ಕೊಂಡು ತಂದಿರುತ್ತಾರೆ. ಕೊಲ್ಲುವ ಮುನ್ನ ಅದು ಮನೆಯಲ್ಲಿ ಓಡಾಡಿಕೊಂಡಿರುತ್ತದೆ. ಅದಕ್ಕೆ ಇಷ್ಟರಲ್ಲೇ ತನ್ನನ್ನು ಕೊಂದು ಹಾಕುತ್ತಾರೆಂಬ ತಿಳಿವಳಿಕೆಯಿಲ್ಲ. ಅದನ್ನು ಕಂಬಕ್ಕೆ ಕಟ್ಟಿರುತ್ತಾರೆ. ಆ ದಿನ ಬಾಗಿಲಿಗೆ ಕಟ್ಟಬೇಕೆಂದು ಅಲ್ಲಿಯೇ ತಂದಿಟ್ಟ ಮಾವಿನ ತಳಿರನ್ನು ಕುರಿ ತನ್ನ ಹಸಿವನ್ನು ಹೋಗಲಾಡಿಸಿಕೊಳ್ಳಲು ತಿಂದುಹಾಕಿಬಿಡುತ್ತದೆ. ಮರುಕ್ಷಣದಲ್ಲಿಯೇ ತಾನು ಸಾಯುತ್ತೇನೆಂಬ ಅರಿವಿಲ್ಲದ ಅದು, ತನ್ನ ಹಸಿವಿನ ಕಡೆ, ತಾನು ಬದುಕುವ ಕಡೆ ಯೋಚಿಸುತ್ತದೆ. ಆದರೆ ಈ ಜನ ಅದರ ಪರಿವೆ ಇಲ್ಲದೆ, ಕರುಣೆ ಇಲ್ಲದೆ ತಂದು, ಆಗಲೇ ಕೊಂದು, ಆಗಲೇ ತಿಂದು ಹಾಕುತ್ತಾರೆ. ಅದನ್ನಂತೂ ಇವರ ಕೊಂದು ಹಾಕುತ್ತಾರೆ ಆದರೆ ಕೊಂದಂತಹ ಇವರು ಶಾಶ್ವತವೆ? ಒಂದಲ್ಲ ಒಂದು ದಿನ ಇವರೂ ಸಾಯಬೇಕಲ್ಲವೆ? ರೋಗವೋ ಅಪಘಾತವೋ, ವಾರ್ಧಕ್ಯವೋ ಅಥವಾ ಬೇರೆ ಯಾವುದೋ ಇವರನ್ನು ಒಂದು ದಿನ ಕೊಂದೇ ಕೊಲ್ಲುತ್ತದೆ. ಹೀಗಿರುವಾಗ ಇವರು ದೇವರ ಸೃಷ್ಟಿಯಾದ ಕುರಿಯನ್ನು ತಮಗೆ ಒಳಿತಾಗಲಿ ಎಂದು ಕೊಲ್ಲುವುದು ಯಾವ ನ್ಯಾಯ? ಇವರ ಬದುಕೇನು ಶಾಶ್ವತವೆ? ಎಂದು ನೋವಿನ ಮಾತನ್ನು ಬಸವಣ್ಣನವರು ನುಡಿದಿದ್ದಾರೆ. ದೇವರ ಹೆಸರಿನಲ್ಲಿ ಪ್ರಾಣಿಹತ್ಯೆ ಮಾಡಿ ಪುಣ್ಯ ಸಂಪಾದಿಸುತ್ತೇವೆಂಬ ಮೂಢ ನಂಬಿಕೆಯನ್ನು ಬಸವಣ್ಣನವರು ಇಲ್ಲಿ ಖಂಡಿಸಿದ್ದಾರೆ.

■

## ೧೩೮

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ,
ಹಾವಿನ ಸಂಗವೇ ಲೇಸು ಕಂಡಯ್ಯ
ಕಾಯವಿಕಾರವ ಕಳೆದು ಕಾಯದಲಿರ್ದಡೆ
ಕಾಯದ ಸಂಗವೇ ಲೇಸು ಕಂಡಯ್ಯ
ತಾಯಿ ರಕ್ಕಸಿಯಾದಂತೆ ಕಾಯವಿಕಾರವು

ಚನ್ನಮಲ್ಲಿಕಾರ್ಜುನಯ್ಯಾ
ನೀನೊಲಿದವರು ಕಾಯಗೊಂಡಿದ್ದರೆನಬೇಡ.

–ಅಕ್ಕಮಹಾದೇವಿ

ಹಾವಿನ ಹಲ್ಲಿನಲ್ಲಿರುವ ಮಹಾವಿಷ ಬಹಳ ಅಪಾಯಕಾರಿ. ಆದರೆ ನಮಗೆ ಅದರ ಹಲ್ಲನ್ನೇ ಕಿತ್ತುಹಾಕಿ, ಆ ಹಾವನ್ನು ನಮಗೆ ಹೇಗೆ ಬೇಕೋ ಹಾಗೆ ಆಡಿಸಬಲ್ಲ ಶಕ್ತಿ ಇದ್ದರೆ, ಹಾವಿನೊಡನಾಟವು ಒಳ್ಳೆಯದೆ. ಹಾಗೆಯೇ ಈ ದೇಹವು ಅನೇಕ ವಿಕಾರ ಗುಣಗಳನ್ನು ಹೊಂದಿದ್ದುದಾಗಿರುತ್ತದೆ. ಆದ್ದರಿಂದ ದೇಹ ನಮಗೆ ಕೆಡುಕು ಮಾಡುವಂತಹುದು. ನಮ್ಮ ದೇಹದ ವಿಕಾರಗುಣಗಳಿಂದ ನಮಗೆ ಕೇಡಾಗುತ್ತದೆ. ಆದರೆ ದೇಹದಲ್ಲಿರುವ ಪಂಚೇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು, ದೇಹದ ವಿಕೃತ ಆಸೆಗಳಿಗೆ ಅವಕಾಶವೀಯದೇ ದೇಹವನ್ನು ಸದುಪಯೋಗಪಡಿ–
–ಸಿಕೊಳ್ಳುವ ಶಕ್ತಿ ನಮ್ಮಲ್ಲಿದ್ದರೆ, ಆ ಕಾಯಕ ಸಂಗವೂ ಒಳ್ಳೆಯದೆ. ಈ ದೇಹದ ಮೂಲಕ ಅನೇಕ ಸತ್ಕಾರ್ಯಗಳನ್ನು ಮಾಡಬಹುದು. ಸತ್ಯಶುದ್ಧ ಕಾಯಕ ನಿರತವಾಗಿ ಅನೇಕ ಒಳಿತನ್ನು ಇತರರಿಗೆ ಉಂಟುಮಾಡಬಹುದು. ಭಗವಂತನ ಒಲುಮೆಗೆ ಸಹಕಾರಿಯಾಗುವ ಪೂಜೆ, ಭಕ್ತಿ, ಧ್ಯಾನ, ತ್ಯಾಗ, ಮುಂತಾದ ಪುಣ್ಯಕಾರ್ಯಗಳನ್ನು ನೆರವೇರಿಸಲು ಸಹಕಾರಿಯಾಗುತ್ತದೆ. ರಕ್ಷಿಸುವ ತಾಯಿಯೇ ಭಕ್ಷಿಸುವ ರಾಕ್ಷಿಸಿಯಾದರೆ ಮಕ್ಕಳಿಗೆ ಹೇಗೆ ಕೇಡುಂಟಾಗುತ್ತದೋ ಹಾಗೆ ನಮ್ಮ ಕಾಯವು ತನ್ನ ತನುಗುಣಗಳಿಂದ ವಿಕಾರಗೊಂಡರೆ, ನಮ್ಮ ಕೇಡಿಗೆ ಕಾರಣವಾಗುತ್ತದೆ.

ಅಕ್ಕಮಹಾದೇವಿಯು, ಮಲ್ಲಿಕಾರ್ಜುನನಿಗೆ, ನೀನೊಲಿದವರು ದೇಹಧಾರಿಗಳಾಗಿದ್ದರೂ ಅದರ ಮಾಯೆಗೊಳಗಾಗದೆ ದೇಹಗುಣಗಳನ್ನು ಗೆದ್ದುನಿಂತವರಾಗಿರುತ್ತಾರೆ. ಆದ್ದರಿಂದ ಅವರನ್ನು ಕಾಯಗೊಡಿದ್ದವರು (ಕಾಯವಿಕಾರಕ್ಕೆ ಒಳಗಾಗಿದ್ದವರು) ಎಂದು ತಿಳಿಯಬೇಡ ಎಂದಿದ್ದಾಳೆ.

■

## ೧೫೫

ಹಿರಿತನವು ಹೇಡಿಂಗೆ, ಗುರುತನವು ಮೂಢಂಗೆ
ದೊರೆತನವು ನಾಡ ನೀಚಂಗೆ ದೊರೆತಿಹರೆ
ಧರೆಯೆಲ್ಲಾ ಕೆಡುಗು ಸರ್ವಜ್ಞ॥

–ಸರ್ವಜ್ಞ

ಸರ್ವಜ್ಞನು ವಿರಾಗಿಯಾದರೂ ಪ್ರಾಪಂಚಿಕ ಜೀವನದ ಎಲ್ಲಾ ಸ್ಥಿತಿಗಳನ್ನು ಬಲ್ಲವನಾಗಿ, ಎಲ್ಲ ವಿಷಯಗಳ ಬಗೆಗೂ ಅವನು ವಿಚಾರಮಾಡಿ, ಸೂಕ್ತ ಮಾರ್ಗದರ್ಶನ ನೀಡಿದ್ದಾನೆ.

ಮನೆತನದ ಹಿರಿಯನಾದವನು, ಮನೆಯಲ್ಲಿಯ ಎಲ್ಲರ ಹಿತವನ್ನು ಕಾಪಾಡಬೇಕಾಗುತ್ತದೆ. ಅದಕ್ಕಾಗಿ ಅವನು ಎಲ್ಲರ ಬೇಕು-ಬೇಡಗಳನ್ನು, ಅವಶ್ಯಕತೆಗಳನ್ನು ಅರಿತವನಾಗಿರಬೇಕು. ಅವನ್ನೆಲ್ಲಾ ನಿರ್ವಹಿಸುವಂತಹ ದಕ್ಷನಾಗಿರಬೇಕು. ಎಲ್ಲರ ಒಳಿತನ್ನು ಸಾಧಿಸುವಲ್ಲಿ ಕಷ್ಟ ಬಂದರೂ ಧೃತಿಗೆಡದೆ, ಸಮರ್ಥ ರೀತಿಯಲ್ಲಿ ಎಲ್ಲವನ್ನೂ ನಿರ್ವಹಿಸಿ, ಸರಿಪಡಿಸಲು ಶಕ್ತನಾಗಿರಬೇಕು. ಹೀಗೆಯೇ, ಸಮಾಜದ, ಸಂಸ್ಥೆಯ, ರಾಷ್ಟ್ರದ ಹಿರಿಯನು ಹಿರಿತನಕ್ಕೆ ಬೇಕಾದ ಧೈರ್ಯ, ಮುಂದಾಲೋಚನೆ, ಸಾಮರ್ಥ್ಯ, ದಕ್ಷತೆಗಳನ್ನು ಹೊಂದಿರಬೇಕು. ಹಾಗಿಲ್ಲದೆ ಅವನು ಹೇಡಿಯಾಗಿದ್ದರೆ, ಎಲ್ಲವೂ ಕೆಟ್ಟುಹೋಗುತ್ತದೆ. ಹಾಗೆಯೇ ಗುರುವಾದವನು ಸುಜ್ಞಾನಿಯಾಗಿ ಸಕಾಲದಲ್ಲಿ ಸೂಕ್ತ ಮಾರ್ಗದರ್ಶನ ಕೊಡುವಂತಹ ಜ್ಞಾನಿಯಾಗಿರಬೇಕು. ಹಾಗಿಲ್ಲದೆ ಮೂಢನಾದವನು ಗುರುವಾದರೆ, ಅವನು ಸೂಕ್ತ ಸಲಹೆ, ಸೂಚನೆ ಕೊಡಲು, ಮಾರ್ಗದರ್ಶನ ಮಾಡಲು ಅಸಮರ್ಥನಾಗುತ್ತಾನೆ ಅಥವಾ ಅಯೋಗ್ಯವಾದ ರೀತಿಯಲ್ಲಿ, ಅಂದರೆ ತಪ್ಪಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿ ಎಲ್ಲವನ್ನೂ ಕೆಟ್ಟುಹೋಗುವಂತೆ ಮಾಡುತ್ತಾನೆ. ಅದೇ ರೀತಿ, ದೇಶದಲ್ಲಿ ನೀಚನಾದವನ ಕೈಗೆ ದೊರೆತನವು ಸಿಕ್ಕರೆ, ಆ ರಾಷ್ಟ್ರಕ್ಕೆಲ್ಲಾ ಕೆಡುಕು ತಪ್ಪಿದ್ದಲ್ಲ. ದೊರೆಯಾದವನು ತಂದೆಯೋಪಾದಿಯಲ್ಲಿ ಪ್ರಜೆಗಳನ್ನು ಮಕ್ಕಳೆಂದು ತಿಳಿದು ಪಾಲಿಸಬೇಕಾಗುತ್ತದೆ. ಅವರ ಹಿತಕ್ಕೆ, ಅಭಿವೃದ್ಧಿಗೆ ಸೂಕ್ತವಾದ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಅವರಿಗೆ ಕಷ್ಟ ಬರದಂತಹ ರೀತಿಯಲ್ಲಿ ಮುನ್ನೆಚ್ಚರಿಕೆ ವಹಿಸಬೇಕಾಗುತ್ತದೆ. ಹೀಗೆ ಮಾಡಲು ದೊರೆಯಾದವನು ಸಹೃದಯಿಯಾಗಿರ ಬೇಕಾಗುತ್ತದೆ. ಇಲ್ಲದಿದ್ದಲ್ಲಿ ನೀಚತನದಿಂದ, ತನ್ನ ಮನಸ್ಸಿಗೆ ಬಂದಂತೆ ರಾಜ್ಯಭಾರಮಾಡಿ, ಪ್ರಜಾಪೀಡನೆ ಮಾಡುತ್ತಾನೆ. ಅವರ ದುಃಖಕ್ಕೆ ಕಾರಣನಾಗುತ್ತಾನೆ. ಈಗಿನ ಕಾಲದಲ್ಲಿ ಭಾರತದಲ್ಲಿ ದೊರೆಗಳಿಲ್ಲ. ಆ ಸ್ಥಾನದಲ್ಲಿ ಮಂತ್ರಿಗಳಿದ್ದಾರೆ. ಅವರು ನೀಚರಾದಲ್ಲಿ ಜನರಿಗೆ ಸುಖವಿಲ್ಲ. ಈ ಹಿನ್ನೆಲೆಯಲ್ಲಿ ಸರ್ವಜ್ಞನ ಮಾತು ನೂರಕ್ಕೆ ನೂರು ಸತ್ಯ.

■

## ೧೬೦

**ಹೊ**ಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು
ಹಸಿವು ಹೋಹುದೆ? ಅಂಗದ ಮೇಲೆ ಲಿಂಗ ಸ್ವಾಯತ್ತವಾದರೇನ್ನು?

ಇಟ್ಟಕಲ್ಲು ಮೆಳೆಯಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೆ?
ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ? ಇಂತಪ್ಪವರ ಕಂಡಡೆ
ನಾನು ನಾಚುವೆನಯ್ಯಾ ಗುಹೇಶ್ವರ.

–ಅಲ್ಲಮಪ್ರಭು

ಹಸಿವೆಯಾದರೆ ಮಾಡಿದ ಅಡಿಗೆಯನ್ನು ಸೇವಿಸಿದರೆ ಹಸಿವು ಹಿಂಗುತ್ತದೆ. ಆದರೆ ಅದೇ ಭೋಜ್ಯಗಳನ್ನು ಆ ಹೊಟ್ಟೆಯ ಮೇಲೆ ಕಟ್ಟಿದರೆ ಹಸಿವು ಹೋಗುವುದಿಲ್ಲ. ಭಕ್ತನಾಗಿ ಕಲ್ಲನ್ನು ದೇವರನ್ನಾಗಿಸಿಕೊಳ್ಳಬಲ್ಲ ವ್ಯಕ್ತಿಯ ದೇಹದ ಮೇಲೆ ಇಷ್ಟಲಿಂಗ ಕಟ್ಟಿದರೆ ಮಾತ್ರ ಸೂಕ್ತ ಎಂಬ ಮಾತನ್ನು ಈ ವಚನದಲ್ಲಿ ಪ್ರಭುದೇವರು ಬಹು ಮಾರ್ಮಿಕವಾಗಿ ತಿಳಿಸಿದ್ದಾರೆ.

ಕಾಮ, ಕ್ರೋಧಗಳಿಗೆ ಇಂಬುಗೊಡದ, ಕಪಟ–ಮೋಸಗಳನ್ನರಿಯದ ಪವಿತ್ರವಾದ ಮನಸ್ಸುಳ್ಳ ವ್ಯಕ್ತಿಯು ಲಿಂಗಧಾರಣೆಗೆ ಯೋಗ್ಯ, ಅವನಿಗೆ ಪರಶಿವನನ್ನು ಪೂಜಿಸಬೇಕು, ಧ್ಯಾನಿಸಬೇಕು ಎಂಬ ಇಚ್ಛೆ ಇರುತ್ತದೆ. ಲಿಂಗಧಾರಣೆಯನ್ನು ಅಂತಹ ವ್ಯಕ್ತಿಗೆ, ಯೋಗ್ಯ ಗುರುವಾದವನು ಮಾಡಬೇಕು. ಯೋಗ್ಯ ಗುರು ಎಂದರೆ ಸದ್ಗುಣಭರಿತನೂ, ಸದಾಚಾರ ಸಂಪನ್ನನೂ, ಬ್ರಹ್ಮಜ್ಞಾನಿಯೂ ತನ್ನನ್ನೇ ತಾನು ಅರಿತವನೂ ಲಿಂಗಾಕಾರದ ಕಲ್ಲಿನಲ್ಲಿ ಸಾಕ್ಷಾತ್ ಪರಬ್ರಹ್ಮನನ್ನೇ ಸಾಕ್ಷಾತ್ಕರಿಸಿಕೊಳ್ಳಬಲ್ಲ ಶಕ್ತಿಯುಳ್ಳವನು ಎಂದರ್ಥ. ಇಂತಹ ಗುರುವು ಭಕ್ತನ ಲಕ್ಷಣವುಳ್ಳ ವ್ಯಕ್ತಿಗೆ ಲಿಂಗಧಾರಣೆ ಮಾಡಿದಾಗ, ಆ ವ್ಯಕ್ತಿಯನ್ನು ಭಕ್ತನೆನ್ನಬಹುದು. ಲಿಂಗಧಾರಣೆ ಮಾಡಿದವನನ್ನು ಗುರುವೆನ್ನಬಹುದು. ಕಟ್ಟಿದ ಲಿಂಗಾಕಾರದ ಕಲ್ಲನ್ನು ಲಿಂಗವೆನ್ನಬಹುದು.

ಆದರೆ ಈ ಲೋಕದಲ್ಲಿ ಗುರುವಿನ ಗುಣಗಳಿಲ್ಲದವರು ಗುರುಗಳೆನ್ನಿಸಿಕೊಂಡು, ಭಕ್ತನ ಲಕ್ಷಣಗಳಾವೂ ಇಲ್ಲದೆ, ಎಲ್ಲಾ ದುಷ್ಟಸ್ವಭಾವಗಳು ತುಂಬಿದ ವ್ಯಕ್ತಿಗೆ ಲಿಂಗವೆಂಬ ಕಲ್ಲನ್ನು ಕಟ್ಟುತ್ತಾರೆ. ಆಗ ಆ ಕಲ್ಲು ಲಿಂಗವಾಗಲು ಸಾಧ್ಯವಿಲ್ಲ. ಅದು ಲಿಂಗಾಕಾರದ ಕಲ್ಲು ಅಷ್ಟೆ. ಕಲ್ಲು, ಮುಳ್ಳುಗಳಿಗೆ ಸಮಾನವಾದ ದುಷ್ಟಗುಣಗಳ ವ್ಯಕ್ತಿಯನ್ನು ಪ್ರಭುದೇವರು ಮುಳ್ಳಿನ ಮೆಳೆಗೆ ಹೋಲಿಸಿದ್ದಾರೆ ಇಲ್ಲಿ. ಅಂತಹ ವ್ಯಕ್ತಿಗೆ ಕಟ್ಟಿದ ಲಿಂಗವನ್ನು ಮೆಳೆಯ ಮೇಲೆ ಎಸೆದಾಗ ಸಿಕ್ಕಿಕೊಂಡ ಕಲ್ಲಿಗೆ ಸಮಗೊಳಿಸಿದ್ದಾರೆ. ಅಂತಹ ಅಯೋಗ್ಯನಾದ ವ್ಯಕ್ತಿಯ ದೇಹದ ಮೇಲೆ ಲಿಂಗಧಾರಣೆ ಮಾಡಿದರೂ ಅವನಲ್ಲಿರುವ ದೋಷಯುಕ್ತ ಸ್ವಭಾವಗಳು ಅಳಿಯುವುದಿಲ್ಲ. ಭಕ್ಷ್ಯ ಭೋಜ್ಯಗಳನ್ನು ಹೊಟ್ಟೆಯ ಮೇಲೆ ಕಟ್ಟಿದರೂ ಆ ಭೋಜ್ಯಗಳು ಹಸಿವನ್ನು ಹೋಗಲಾಡಿಸುವುದಿಲ್ಲ. ಹಾಗೆಯೇ ಲಿಂಗಧಾರಣೆ ಮಾಡಿದರೂ ಅವನಲ್ಲಿ ಆ ಶಕ್ತಿ ಇಲ್ಲದಿದ್ದರೆ ಅವನಲ್ಲಿಯ

ದೋಷಯುಕ್ತ ಗುಣಗಳು ಹೋಗುವುದಿಲ್ಲ. ಅವನು ಭಕ್ತನಾಗುವುದಿಲ್ಲ. ಒಬ್ಬ ಗುರುವು ಅಂತಹ ವ್ಯಕ್ತಿಗೆ ಲಿಂಗಧಾರಣೆ ಮಾಡಿದರೂ, ಅವನು ಭಕ್ತನಾಗಲಾರ. ಲಿಂಗಧಾರಣೆಯನ್ನು ತಾರತಮ್ಯವಿಲ್ಲದೆ ಎಂತೆಂಥವರಿಗೊ ಮಾಡಿದವನು ಗುರುವೆನ್ನಿಸಿಕೊಳ್ಳಲಾರ, ಆ ಲಿಂಗವು ಪರಶಿವನಾಗಲೂ ಸಾಧ್ಯವಿಲ್ಲ. ಹಾಗಿದ್ದರೂ ಜನ ಅಂತಹ ರೀತಿಯ ಆಚರಣೆಗಳನ್ನು ಮಾಡುತ್ತಿರುವುದನ್ನು ನೋಡಿದರೆ ನಾಚಿಕೆಯಾಗುತ್ತದೆ ಎಂದು ಅಲ್ಲಮ ಪರಭುಗಳು ನೊಂದು ನುಡಿದಿದ್ದಾರೆ.

■

೧೬೧

ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು
ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ
ನೆರೆಯದ ವಸ್ತು ನೆರೆವುದು ನೋಡಯ್ಯಾ
ಅರಸು ಪರಿವಾರ ಕೈವಾರ ನೋಡಯ್ಯಾ
ಪರಮ ನಿರಂಜನನ ಮರೆವ ಕಾಲಕ್ಕೆ
ತುಂಬಿದ ಹರವಿಯ ಕಲ್ಲು ಕೊಂಡಂತೆ ಕೂಡಲಸಂಗಮದೇವಾ.

–ಬಸವಣ್ಣ

ವಿದ್ಯೆ, ಹಣ, ಆಸ್ತಿ, ಬಂಧು–ಬಳಗ ಇವೆಲ್ಲಾ ಮಾನವನ ಸಂಪತ್ತುಗಳು. ಇವುಗಳಿದ್ದವರನ್ನು ನೋಡಿ, ಜನರು 'ಆಹಾ ಅವರೆಷ್ಟು ಪುಣ್ಯವಂತರು!' ಎಂದುಕೊಳ್ಳುತ್ತಾರೆ. ಆ ಸಿರಿಯನ್ನು ಜನರೇ ಸಂಪಾದಿಸಿಕೊಂಡರೆಂದು ಮೂರ್ಖರು ತಿಳಿಯುತ್ತಾರೆ. ಆದರೆ, ಹರ ಕೊಟ್ಟ ಕಾಲಕ್ಕೆ ಮಾನವನಿಗೆ ಸಂಪತ್ತು ದೊರೆಯುತ್ತದೆ. ಕೊಡದಿದ್ದರೆ ಮಾನವನ ಕೈ, ಬರಿಗೈ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ನಾವು, ನಮ್ಮ ಸುತ್ತಮುತ್ತಲೇ, ಅತೀ ಶ್ರೀಮಂತರನ್ನು ಅತೀ ಬಡವರನ್ನು ಕಾಣುತ್ತೇವೆ. ದೇವರು ಕೃಪೆಮಾಡಿದವರು ಶ್ರೀಮಂತರಾಗುತ್ತಾರೆ. ಕೃಪೆಗೆ ಅರ್ಹರಲ್ಲದವರು ಬಡತನ, ಕಷ್ಟ–ನಷ್ಟ ಮುಂತಾದ ತೊಂದರೆಗಳಿಗೆ ಗುರಿಯಾಗುತ್ತಾರೆ. ಅದೇ ರೀತಿ ಬಸವಣ್ಣನವರು ದೇವರು ಕೊಟ್ಟ ಕಾಲಕ್ಕೆ, ಅವನು ಕೊಡಬೇಕೆಂದು ಮನಸ್ಸುಮಾಡಿದರೆ, ಐಶ್ವರ್ಯವು ಹಿಂದೆಯೇ ಬೆನ್ನಟ್ಟಿ ಬರುತ್ತದೆ. ಅದು ಬರುವಾಗ ಹಾಗೆ ಹೀಗೆ ಬರುವುದಿಲ್ಲ. ಹಿರಿದಾದ ತೊರೆಯು ರಭಸದಿಂದ ಹರಿದುಬಂದು ಕ್ಷಣದಲ್ಲಿ ಕೆರೆಯನ್ನೇ ತುಂಬುವಂತೆ ಮಾಡುತ್ತದಲ್ಲಾ ಹಾಗೆ ಐಶ್ವರ್ಯ ತಾನೇ ತಾನಾಗಿ ಬಂದು ಸೇರಿಕೊಳ್ಳುತ್ತದೆ. ದೊರೆಯಲಾರದ ಅಪರೂಪ ವಸ್ತುಗಳೂ ಅವನ ಕೈವಶವಾಗುತ್ತವೆ. ಅರಸನಂತೆ ಬಾಳುತ್ತಾನೆ. ಮನೆತುಂಬ ಬಂಧು–ಬಳಗ

ಆಳು–ಕಾಳುಗಳು. ಆದರೆ ಮನುಷ್ಯ ದೇವರನ್ನು ಮರೆತರೆ, ಎಷ್ಟೇ ಐಶ್ವರ್ಯವಿದ್ದರೂ ಅದು ಕ್ಷಣದಲ್ಲಿ, ತುಂಬಿದ ಮಣ್ಣಿನ ಹರವಿಗೆ ಕಲ್ಲು ಹೊಡೆದಾಗ, ಹರವಿಯಲ್ಲಿ ತೂತು ಉಂಟಾಗಿ ಅದರಲ್ಲಿದ್ದ ನೀರೆಲ್ಲಾ ಹರಿದು ಹೋಗಿ ಹರವಿ ಬರಿದಾಗುವಂತೆ, ಅವನ ಹಣವೆಲ್ಲಾ ನಷ್ಟವಾಗಿ ಬರಿಗೈಯ್ಯಾಗುತ್ತಾನೆ, ಬಡವನಾಗುತ್ತಾನೆ. ಭಗವಂತನಲ್ಲಿ ಭಕ್ತಿ ಇಲ್ಲದೆ, ಭಗವಂತನ ಕೃಪೆ ದೊರೆಯುವುದಿಲ್ಲ. ಭಗವಂತನ ಕೃಪೆ ಇಲ್ಲದೆ, ಧನ, ಧಾನ್ಯ, ವಿದ್ಯೆ, ಬುದ್ಧಿ, ಭೂಮಿ ಕಾಣಿ, ಪ್ರೀತಿ–ವಿಶ್ವಾಸ ಮುಂತಾದ ಐಶ್ವರ್ಯಗಳು ದೊರೆಯುವುದಿಲ್ಲ. ಶಿವನ ಕೃಪೆ ಇದ್ದವರು ಮಾತ್ರ ಸಂಪತ್ಸುಖಗಳನ್ನು ಪಡೆದು ಸುಖವಾಗಿರಬಲ್ಲರು. ಆದ್ದರಿಂದ ಮಾನವನು ಸದಾಕಾಲದಲ್ಲಿಯೂ ತನಗೆ ಸುಖ–ಸಂಪತ್ತು, ವಿದ್ಯೆ–ಬುದ್ಧಿ, ಸ್ಥಾನ–ಮಾನ, ಪ್ರೀತಿ–ವಿಶ್ವಾಸಗಳು ದೊರೆವಂತೆ ಕರುಣಿಸಿದ ಭಗವಂತನನ್ನು ಮರೆಯದೆ, ಸದ್ಗುಣಭರಿತನಾಗಿ, ಸದಾಚಾರ ಸಂಪನ್ನನಾಗಿ ಬದುಕಿ ತಾನೂ ನೆಮ್ಮದಿಯಾಗಿ ಬಾಳುತ್ತಾ, ಇತರರೂ ನೆಮ್ಮದಿಯಿಂದಿರಲು ಸಹಕಾರ ನೀಡಬೇಕು ಎಂಬ ಉದ್ದೇಶದಿಂದ ಈ ವಚನವನ್ನು ರಚಿಸಿರುವುದು ಕಂಡುಬರುತ್ತದೆ.

■

## ೧೬೨

ಹಸಿದು ಎಕ್ಕೆಯ ಕಾಯ ಮೆಲಬಹುದೆ?
ನೀರಡಿಸಿ ವಿಷವ ಕುಡಿಯಬಹುದೆ?
ಸುಣ್ಣದ ತುಯ್ಯಲ ಬಣ್ಣವೊಂದೆ ಎಂದಡೆ,
ನಂಟುತನಕ್ಕೆ ಉಣ್ಣಬಹುದೆ?
ಲಿಂಗಸಾರಾಯ ಸಜ್ಜನರಲ್ಲದವರ
ಕೂಡಲಸಂಗಮದೇವನೆಂತೊಳಿಸುವನು?

–ಬಸವಣ್ಣ

ಪ್ರಾಣಹೋಗುವಂತಹ ಹಸಿವಾಗಿದ್ದರೂ ಯಾರೂ ಎಕ್ಕೆಯ ಕಾಯನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುವುದಿಲ್ಲ. ಎಷ್ಟೇ ನೀರಡಿಕೆಯಾಗಿದ್ದರೂ, ಬಾಯಾರಿ ಸಾಯುವಂತಹ ಸ್ಥಿತಿಯಲ್ಲೂ ವಿಷವನ್ನು ಕುಡಿಯಲು ಆಗುವುದಿಲ್ಲ. ಬೆಣ್ಣೆಯ ಬಣ್ಣ, ತಿಳಿ ಸುಣ್ಣದ ಬಣ್ಣ ಒಂದೇ ತೆರನಾಗಿದ್ದರೂ ಒಂದಕ್ಕೊಂದಕ್ಕೆ ಬಣ್ಣದಲ್ಲಿ ಹೋಲಿಕೆ ಇದೆಯೆಂದ ಮಾತ್ರಕ್ಕೆ ತಿಳಿಸುಣ್ಣವನ್ನು ತಿನ್ನಲು ಬರುವುದಿಲ್ಲ. ಅದೇ ರೀತಿ ಲಿಂಗವಂತರಾದ ಮಾತ್ರಕ್ಕೆ ಅವರು ಸಜ್ಜನರಲ್ಲದಿದ್ದರೆ, ಕೂಡಲಸಂಗಮನು ಒಲಿಯಲು ಸಾಧ್ಯವಿಲ್ಲ ಎಂಬ ಅಂಶವನ್ನು ಇಲ್ಲಿ ಬಸವಣ್ಣ ಸ್ಪಷ್ಟಪಡಿಸಿದಾರೆ.

ಇಲ್ಲಿರುವ ಮುಖ್ಯ ಅಂಶವೇನೆಂದರೆ, ಯಾವ ಮನುಷ್ಯನೂ ಕೇವಲ ಲಿಂಗಧಾರಿಯಾಗುವ ಮೂಲಕ ಭಗವಂತನನ್ನು ಒಲಿಸಲಾರ. ಅದರ ಜೊತೆಗೆ ಸಜ್ಜನಿಕೆ ಇದ್ದರೆ ಮಾತ್ರ ಒಲಿಯುತ್ತಾನೆ. ಇಲ್ಲದಿದ್ದಲ್ಲಿ ಭಗವಂತನ ಒಲುಮೆ ಕಿಂಚಿತ್ತೂ ಲಭ್ಯವಾಗುವುದಿಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸುವುದು ಬಸವಣ್ಣನವರ ಉದ್ದೇಶ. ■

೧೬೩

ಹರಿಯ ನುಂಗಿತ್ತು ಮಾಯೆ, ಅಜನ ನುಂಗಿತ್ತು ಮಾಯೆ
ಇಂದ್ರನ ನುಂಗಿತ್ತು ಮಾಯೆ, ಚಂದ್ರನ ನುಂಗಿತ್ತು ಮಾಯೆ
ಬಲ್ಲೆನೆಂಬ ಬಲುಗೈಯ್ಯರ ನುಂಗಿತ್ತು ಮಾಯೆ,
ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ,
ಈರೇಳು ಭುವನವ ನಾರಡಿಗೊಂಡಿತ್ತು ಮಾಯೆ,
ಚನ್ನಮಲ್ಲಿಕಾರ್ಜುನಯ್ಯಾ ಎನ್ನ ಮಾಯೆಯ ಮಾಣಿಸಾ ಕರುಣಿ.

–ಅಕ್ಕಮಹಾದೇವಿ

ಲೋಕವೆಲ್ಲಾ ಮಾಯೆಯಿಂದ ಆವೃತವಾಗಿದೆ. ಎಲ್ಲರನ್ನೂ ಈ ಮಾಯೆ ತನ್ನ ತೋಳತೆಕ್ಕೆಗೆ ತೆಗೆದುಕೊಂಡು, ಅವರು ತೊಳಲುವಂತೆ, ಬಳಲುವಂತೆ ಮಾಡುತ್ತದೆ. ಮಾಯೆಯ ಪ್ರಭಾವಕ್ಕೆ ಒಳಗಾದವರು ದೇವರ ಕಡೆಗೆ ಒಲಿಯಲಾರರು. ಮಾಯೆಯ ವಶವರ್ತಿಗಳಾಗಿ, ಕ್ಷಣಿಕ ಸುಖದ ಆಸೆಗೆ ಒಳಗಾಗುತ್ತಾರೆ. ಅದರ ಮೂಲಕ ದುಃಖಸಾಗರದಲ್ಲಿ ಮುಳುಗಿ ಉಸಿರುಕಟ್ಟಿ ಸಾಯುತ್ತಾರೆ. ಉಳಿದವರನ್ನು ಈ ಮಾಯೆ ದುಃಖದಲ್ಲಿ ನರಳಿಸುತ್ತದೆ. ಭುವನದ ಅಜ್ಞಾನಿಗಳು, ಜ್ಞಾನಿಗಳು ಯಾರನ್ನೂ ಈ ಮಾಯೆ ಬಿಡುವುದಿಲ್ಲ. ಎಲ್ಲರ ಬೆಂಬತ್ತಿ ತನ್ನ ವಶವರ್ತಿಗಳನ್ನಾಗಿ ಮಾಡಲು ಹವಣಿಸುತ್ತದೆ. ಭೂಲೋಕದವರೇ ಏಕೆ? ಹರಿ, ಬ್ರಹ್ಮ, ಇಂದ್ರ, ಚಂದ್ರರೂ ಕೂಡ ಈ ಮಾಯಾಪಾಶಕ್ಕೆ ಒಳಗಾಗಿದ್ದಾರೆ. ಮಾಯೆಯ ಹಿಡಿತಕ್ಕೆ ಸಿಕ್ಕದಿರುವವರು ಅಪರೂಪ. ಆದರೆ ಸಿಕ್ಕಿದವರು ತೊಳಲಾಡುವುದು ಖಂಡಿತ. ಆದ್ದರಿಂದ ತನ್ನನ್ನು ಈ ಮಾಯೆಗೆ ಒಳಗಾಗದಂತೆ, ಅದರ ವಶವರ್ತಿಯಾಗದಂತೆ ರಕ್ಷಿಸು ಎಂದು ಮಲ್ಲಿಕಾರ್ಜುನನನ್ನು ಅಕ್ಕಮಹಾದೇವಿಯು ಅತ್ಯಂತ ದೈನ್ಯತೆಯಿಂದ ಪ್ರಾರ್ಥಿಸಿದ್ದಾಳೆ. ■

೧೬೪

ಹದಮಣ್ಣಲ್ಲದೆ ಮಡಕೆಯಾಗಲಾರದು
ವ್ರತಹೀನನ ಬೆರೆಯಲಾಗದು

ಬೆರೆದಡೆ ನರಕ ತಪ್ಪದು
ನಾನೊಲ್ಲೆ ಬಲ್ಲೆನಾಗಿ ಕುಂಭೇಶ್ವರ

–ಮಡಕೆಯ ಕಾಯಕದ ಕೇತಲದೇವಿ

ಶರಣರು ವಚನಗಳನ್ನು ತಮ್ಮ ತಮ್ಮ ಜೀವನಾನುಭವಗಳಿಂದ ರಚಿಸಿದ್ದಾರೆ. ಮಡಕೆ ಕಾಯಕದ ಕುಂಬಾರ ಗುಂಡಯ್ಯ ಹಾಗೂ ಆತನ ಪತ್ನಿ ಕೇತಲದೇವಿಯೂ ಬಸವಣ್ಣನ ಕ್ರಾಂತಿಕಾರಕ ವಿಚಾರಗಳ ಪ್ರಭಾವಕ್ಕೆ ಒಳಗಾಗಿದ್ದರು. ಒಬ್ಬ ಸಾಮಾನ್ಯ ಕುಂಬಾರನ ಹೆಂಡತಿ ಈಗ ಎಂಟನೂರು ವರ್ಷಗಳ ಹಿಂದೆ, ಎಷ್ಟು ಹಿಂದುಳಿದಿರಬಹುದು ಎಂಬುದನ್ನು ನಾವು ಮೊದಲು ಊಹಿಸಿಕೊಳ್ಳಬೇಕು ಅಷ್ಟು ಹಿಂದಿಳಿದ ಒಬ್ಬ ಮಹಿಳೆಗಂತೂ ವಿದ್ಯೆಯಾಗಲಿ ವಿಚಾರ ಶಕ್ತಿಯಾಗಲಿ ಇರಲು ಸಾಧ್ಯವಿಲ್ಲ. ಯಾವುದೋ ಒಂದು ಉದ್ಯೋಗ ಮಾಡಿಕೊಂಡು ಪ್ರಾಣಿಗಳಂತೆ ಹೊಟ್ಟೆ ಹೊರೆದುಕೊಳ್ಳುತ್ತಾ, ಪಂಚೇಂದ್ರಿಯಗಳಿಗೆ ಅಧೀನರಾಗಿ ಬದುಕುವ ಮಟ್ಟದಲ್ಲಿ ಅವರಿರುತ್ತಾರೆ. ಅಂತಹವರಿಗೆ ನೀತಿ ಧರ್ಮ ಬೋಧಿಸಿ, ಅದರಲ್ಲಿ ನಂಬಿಕೆ ಹುಟ್ಟಿಸಿ, ಅದರಂತೆ ಅವರು ಆಚರಿಸುವಂತೆ ಮಾಡುವುದು ಸುಲದ ಮಾತಲ್ಲ. ಅಂತಹುದರಲ್ಲಿ ಕುಂಬಾರ ಕಾಯಕದ ಈ ಮಹಿಳೆ, ಬಸವಯುಗದ ಪ್ರಭಾವದಿಂದ, ಒಂದು ಮಡಕೆ ಮಾಡಲು ಕೆಸರು ಮಣ್ಣಿನಿಂದ ಮಾಡಲು ಬರುವುದಿಲ್ಲ; ಮಡಕೆ ಮಾಡಬೇಕಾದರೆ ಅದಕ್ಕೆ ಸೂಕ್ತ ಮಣ್ಣು ಬೇಕು. ಆ ಮಣ್ಣನ್ನು ಮೊದಲು ಹದಗೊಳಿಸಿಕೊಳ್ಳಬೇಕು. ಅನಂತರ ಅದರಿಂದ ಮಡಕೆ ಮಾಡಲು ಸಾಧ್ಯವಾಗುತ್ತದೆ ಎಂಬ ತನ್ನ ಕಸುಬಿನ ಅನುಭವವನ್ನು, ಇಲ್ಲಿ ತುಂಬಾ ಚೆನ್ನಾಗಿ ಹೋಲಿಸಿದ್ದಾಳೆ. ಮನುಷ್ಯರೂ ಶರಣತತ್ವ ಕೇಳಿದ ಮಾತ್ರಕ್ಕೆ ಶರಣರಾಗಲಾರರು, ಭಕ್ತರಾಗಲಾರರು. ಮೊದಲು ಮನಸ್ಸನ್ನು ಹದಗೊಳಿಸಬೇಕು. ಅದು ಭಕ್ತನಾಗುವ ಹದಕ್ಕೆ ಬರಬೇಕು. ಬಂದಾಗ ಮಾತ್ರ ದೀಕ್ಷೆ ತೆಗೆದುಕೊಳ್ಳಲು, ವ್ರತಿಯಾಗಿ ಬದುಕಲು ಸಾಧ್ಯವಾಗುತ್ತದೆ. ಸಿಕ್ಕ ಸಿಕ್ಕ ಮಣ್ಣಲ್ಲಿ ಹೇಗೆ ಮಡಕೆ ಮಾಡಲು ಸಾಧ್ಯವಿಲ್ಲವೋ ಹಾಗೆ ಸಿಕ್ಕವರಿಗೆಲ್ಲಾ ದೀಕ್ಷೆ ಕೊಟ್ಟರೆ ಅವರು ಭಕ್ತರಾಗಲಾರರು ಎಂಬ ತತ್ವವು ಈ ವಚನದಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ ಭಕ್ತೆಯಾದವಳು ವ್ರತಹೀನನ ಸಂಗಮಾಡಲಾಗದು. ಮಾಡಿದರೆ ನರಕ ತಪ್ಪದು ಎಂಬ ನಂಬಿಕೆಯನ್ನಿಲ್ಲಿ ವ್ಯಕ್ತಪಡಿಸಿದ್ದಾಳೆ. ಇದರಿಂದ ತುಂಬಾ ಕೆಳವರ್ಗದ ಜನರೂ ಸಹ ಬಸವಯುಗದ ಪ್ರಭಾವದಿಂದ ತಿಳಿವಳಿಕೆ ಪಡೆದು ಬದುಕುತ್ತಿದ್ದರೆಂಬ ಅಂಶವನ್ನು ನಾವಿಲ್ಲಿ ಕಂಡುಕೊಳ್ಳಬಹುದಾಗಿದೆ.

■

ಹರಿವಗ್ನಿಜಲ ಮೊಳೆದೋರದಂದು, ಹುಟ್ಟಿದಳೆಮ್ಮವ್ವೆ
ಅದಕ್ಕೆ ಮುನ್ನವೆ ಹುಟ್ಟದೆ ಬೆಳೆದನೆಮ್ಮಯ್ಯ
ಈ ಇಬ್ಬರ ಬಸುರಲ್ಲಿ ಹುಟ್ಟಿದೆ ನಾನು
ಎನ್ನ ತಂಗಿಯರೈವರು ಮೊರೆಗೆಟ್ಟು ಹೆಂಡಿರಾದರೆನಗೆ
ಕಾಮಬಾಣವ ತಾಗದೆ, ಅವರ ಸಂಗವ ಮಾಡಿದೆನು
ನಾ ನಿಮ್ಮ ಭಾವನಲ್ಲಯ್ಯನು, ನೀನೆನಗೆ ನಗೆವೆಣ್ಣು
ನಮ್ಮ ಗುಹೇಶ್ವರ ಕೈವಿಡಿದು ಪರಮ ಸುಖಿಯಾಗಿ
ಕಳವಳಕಂದಿರಿವೆಯೇನು ಹೇಳ?

–ಅಲ್ಲಮಪ್ರಭು

ಮುಕ್ತಾಯಕ್ಕನನ್ನು ಅಲ್ಲಮಪ್ರಭುವು ನೀನಾರೆಂದು ಕೇಳಿದಾಗ 'ನಾನು ಅಜಗಣ್ಣ ತಂಗಿ' ಎಂದು ಹೇಳುತ್ತಾಳೆ. ಅಜಗಣ್ಣನ ಹೆಸರು ಕೇಳುತ್ತಲೇ ಪ್ರಭು ಮಹಾಶರಣನ ಲಿಂಗ ದೇಹಕ್ಕೆ ನಮಸ್ಕರಿಸುತ್ತಾನೆ. ಆಗ ಮುಕ್ತಾಯಕ್ಕನು, ನನ್ನ ಅಜಗಣ್ಣನ ಹೆಸರನ್ನು ಕೇಳಿದ ತಕ್ಷಣ ಅವನಿಗೆ ನಮಸ್ಕರಿಸಿದ ನೀನಾರು? ಎಂದು ಪ್ರಶ್ನಿಸಿದುದಕ್ಕೆ ಉತ್ತರವಾಗಿ ಹೇಳಿದ ವಚನವಿದೆಂದು ತೋರುತ್ತದೆ. ನನ್ನಪ್ಪ ಅಮ್ಮ ಯಾರು, ನಾನು ಯಾರು ಅನ್ನುವುದನ್ನು ಕೇಳಿ ಪ್ರಯೋಜನವೇನು? ನಾನು ದೇವರ ಮಗ ಅಂತ ತಿಳಿದುಕೊ ಎಂಬ ಮಾತನ್ನು ಈ ಜಗತ್ತಿನಲ್ಲಿ ನೀರು, ಬೆಂಕಿ ಸಹ ಇನ್ನೂ ಸೃಷ್ಟಿಯಾಗುವ ಮೊದಲು ಹುಟ್ಟಿದ ಪ್ರಕೃತಿ ಶಕ್ತಿಯೇ ನನ್ನ ತಾಯಿ. ಅದಕ್ಕೂ ಮುಂಚೆಯೇ ಹುಟ್ಟದೆ ಬೆಳೆದ ಸ್ವಯಂಭುವಾದ ಪುರುಷನೇ ನನ್ನ ತಂದೆ. ಈ ಪ್ರಕೃತಿ ಮತ್ತು ಪುರುಷ ಗರ್ಭದಿಂದ ಹುಟ್ಟಿದವನು ನಾನು ಎನ್ನುತ್ತಾನೆ. ತನ್ನ ಗೊತ್ತು ಗುರಿಗಳನ್ನು ಲೌಕಿಕ ರೀತಿಯಲ್ಲಿ ಹೇಳಿಕೊಳ್ಳುವುದಿಲ್ಲ ವೈರಾಗ್ಯ ಚಕ್ರವರ್ತಿಯಾದ ಅಲ್ಲಮನು.

ಶರಣರಾದವರು ಈ ಪಂಚೇಂದ್ರಿಯಗಳನ್ನು ತಮ್ಮ ಅಂಕಿತದಲ್ಲಿ ಇಟ್ಟುಕೊಳ್ಳಬೇಕು ಎನ್ನುವ ಅರ್ಥವನ್ನು ಈ ಬೆಡಗಿನ ವಚನ ಕೊಡುತ್ತದೆ. ಪಂಚೇಂದ್ರಿಯಗಳನ್ನು, ಪ್ರಭು ತನ್ನ ಐದು ಜನ ತಂಗಿಯರೆಂದು ಕರೆದಿದ್ದಾನೆ. ಏಕೆಂದರೆ, ಈ ಇಂದ್ರಿಯಗಳು ಮನುಷ್ಯನೊಡನೆಯೇ ಹುಟ್ಟುತ್ತವೆ. ಆ ತಂಗಿಯರೈವರು ಮೊರೆಗೆಟ್ಟು (ದಿಕ್ಕುಗೆಟ್ಟು) ನನಗೆ ಹೆಂಡತಿಯರಾದರು ಎಂದಿದ್ದಾನೆ. ಇಲ್ಲಿ ಹೆಂಡತಿಯರಾದರು ಎಂದರೆ ಆ ಪಂಚೇಂದ್ರಿಯಗಳ ಸಹಜ ಸ್ವಭಾವಗಳಿಗೆ ಅವಕಾಶಕೊಡದೆ, ಅವುಗಳನ್ನು ಉದಾತ್ತೀಕರಿಸಿಕೊಂಡು, ನನ್ನ ಹಿಡಿತದಲ್ಲಿ

ಇಟ್ಟುಕೊಂಡಾಗ ಬೇರೆ ಮಾರ್ಗವಿಲ್ಲದೆ ಅವು ತನ್ನ ಅಧೀನಕ್ಕೆ ಒಳಗಾಗವೆ ಎಂದು ಹೇಳಿದ್ದಾನೆ. ಆದರೆ ಮುಕ್ತಾಯಿಯು ದುಃಖಿಸಿತ್ತಿರುವುದನ್ನು ನೋಡಿದರೆ ಪಂಚೇಂದ್ರಿಯಗಳಿಗೆ ಅಡಿಯಾಗಿದ್ದಾಳೆ. ಅವುಗಳನ್ನು ಇನ್ನೂ ನಿಯಂತ್ರಣಕ್ಕೆ ತಂದುಕೊಂಡಿಲ್ಲವೆಂಬ ಮಾತನ್ನು ಬಹಳ ಸುಂದರವಾಗಿ, ಒಳ ಅರ್ಥವನ್ನಿಟ್ಟು ಇಲ್ಲಿ ಹೇಳಿದ್ದಾನೆ. ನನ್ನೊಡನೆಯೇ ಹುಟ್ಟಿದ ಪಂಚೇಂದ್ರಿಯಗಳನ್ನು (ಐವರು ತಂಗಿಯರನ್ನು) ನಾನು ಅಂಕಿತದಲ್ಲಿಟ್ಟುಕೊಂಡಿರುವೆ. ಆದರೆ, ನೀನು ನಿನ್ನ ಜೊತೆಯಲ್ಲಿ ಹುಟ್ಟಿರುವ ಪಂಚೇಂದ್ರಿಯಗಳನು ತಂಗಿಯರನ್ನಾಗಿಯೇ ಇಟ್ಟುಕೊಂಡು ಅವರಕ್ಕನಾಗಿದ್ದೇಯೆ. ನಿನ್ನ ತಂಗಿಯರನ್ನು ಹಿಡಿತದಲ್ಲಿಟ್ಟುಕೊಂಡು ನಾನವರ ಗಂಡನಾಗಿದ್ದೇನೆ. ನನ್ನ ಹಂಡತಿಯರ (ಪಂಚೇಂದ್ರಿಯಗಳ) ಅಕ್ಕ ನೀನಾದುದರಿಂದ ನಾನು ನಿನಗೆ ಭಾವ. ಆದ್ದರಿಂದ ನಾನು ನಿನ್ನ ಭಾವನಾದ ಅಲ್ಲಯ್ಯನು ಎಂದು ಹೇಳಿದ್ದಾನೆ. ಪಂಚೇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡಿರದ ಆಕೆಗೆ ಪ್ರಭು ಭಾವನಾದಂತೆ, ತನ್ನಂತೆಯೇ ಅವಳೂ ಶರಣಳಾಗಿ, ಶರಣಧರ್ಮವನ್ನನುಸರಿಸಿ, ಶರಣಮಾರ್ಗದಲ್ಲಿ ಮುಂದುವರಿಯುತ್ತಿರುವುದರಿಂದ, ಲಿಂಗ ಪತಿ ಶರಣ ಸತಿ ಎಂಬ ಶರಣತತ್ವದ ಪ್ರಕಾರ ತಾವಿಬ್ಬರೂ ತಮ್ಮ ತಮ್ಮ ಇಷ್ಟಲಿಂಗದ ಪತ್ನಿಯರಾದುದರಿಂದ, ಅವರಿಬ್ಬರೂ ಒಬ್ಬರಿಗೊಬ್ಬರು ನೆಗೆವೆಣ್ಣು (ನೆಗೆಣ್ಣಿ, ಓರಗಿತ್ತಿ) ಗಳಾಗುತ್ತಾರೆಂದು ನೀನೆನಗೆ ನೆಗೆವೆಣ್ಣು ಎಂದು ಹೇಳದ್ದಾನೆ ಅಲ್ಲಮ. ಈಗ ನೀನು ದುಃಖಕ್ಕೆ ಒಳಗಾಗಿ ಕಳವಳಿಸುವುದು ಸರಿಯೇ ಹೇಳು. ನಮ್ಮ ಗುಹೇಶ್ವರನ ಕೈವಿಡಿದು (ಪತಿಯಾಗಿ ಸ್ವೀಕರಿಸಿ ಎಂದರೆ ಶರಣೆಯಾಗಿ, ಸುಖಿಯಾಗಿ ಬಾಳು. ಈ ಅಣ್ಣ ತಮ್ಮ, ಸಾವು-ಹುಟ್ಟು ಇವುಗಳ ಗೊಂದಲಕ್ಕೆ ಸಿಲುಕಿ ವ್ಯಥೆಗೆ ಒಳಗಾಗಬೇಡ ಎಂದು ಪ್ರಭು ಬುದ್ಧಿವಾದ ಹೇಳುತ್ತಾನೆ ಇಲ್ಲಿ ಮಾನವರೆಲ್ಲರಿಗೂ ಮಾರ್ಗದರ್ಶನವಿದೆ. ನಿಜವಾದ ಭಕ್ತರು ಸಾವಿಗಂಜುವುದಿಲ್ಲ. ಅವರು ಪಂಚೇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡು, ಮೋಹ, ದುಃಖ, ಆಸೆ-ಆಮಿಷಗಳಿಂದ ದೂರಾಗಿರುತ್ತಾರೆ. ಅಂತಹವರಿಗೆ ಸಾವಿನಿಂದ ನೋವಾಗುವುದಿಲ್ಲ. ಮನುಷ್ಯನ ಸಾವು, ಆತ್ಮಕ್ಕೆ ಸಾವು ತರುವುದಿಲ್ಲ. ಭಗವಂತನ ಅಂಶವಾದ ಆ ಆತ್ಮ, ಪರಮಾತ್ಮನಲ್ಲಿ ಲೀನವಾಗುವ ಅಂಶವನ್ನು ತಿಳಿದವರಾಗಿ, ಅವರು ದುಃಖಕ್ಕೆ ಒಳಗಾಗುವುದಿಲ್ಲ. ಆದುದರಿಂದ ಅಲ್ಲಮ ಪ್ರಭುಗಳು ಮುಕ್ತಾಯಿಗೆ ನೀನು ಪರಮಾತ್ಮನ ಭಕ್ತಿಯಲ್ಲಿ ತನ್ಮಯಳಾಗಿ, ಈ ಅಂಶವನ್ನು ತಿಳಿದು ದುಃಖದಿಂದ ಬಿಡುಗಡೆ ಹೊಂದು; ದುಃಖಿಸಬೇಡ ಎಂದು ಬೋಧಿಸಿದ್ದಾನೆ.

■

Hara tanna bhaktaranu

ಹರ ತನ್ನ ಭಕ್ತರನು ತಿರಿವಂತೆ ಮಾಡುವ,
ಒರೆದು ನೋಡುವ ಸುವರ್ಣದಂತೆ
ಅರೆದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ
ಕರವಿಡಿದೆತ್ತಿಕೊಂಬ ರಾಮನಾಥಾ॥

–ಜೇಡರ ದಾಸಿಮಯ್ಯ

ಜಗತ್ತಿನಲ್ಲಿ, ಸಜ್ಜನರು ಸದ್ಭಕ್ತಿಯ ಮಾರ್ಗದಲ್ಲಿ, ಸತ್ಯದ ದಾರಿಯಲ್ಲಿ ಬದುಕುತ್ತಿದ್ದರೂ ಅನೇಕರು ನಾನಾ ರೀತಿಯ ಕಷ್ಟಗಳಿಗೆ ಗುರಿಯಾಗಿರುವುದನ್ನು ಕಾಣುತ್ತಿದ್ದೇವೆ. ಸಹಿಸಲಾರದ ಕಷ್ಟಗಳಿಗೆ ಗುರಿಯಾದ ಅನೇಕ ಸಜ್ಜನರು, ಕಷ್ಟಗಳಿಂದ ಬೇಸತ್ತು ಸೋತು, 'ದೇವರೆಲ್ಲಿದ್ದಾನೆ? ನಾವು ಎಷ್ಟೇ ಸತ್ಯದಿಂದ ಬದುಕಿದರೂ, ಇಷ್ಟು ಕಾಡಾಟ ಹತ್ತಿದೆ. ದೇವರಿದ್ದರೆ ಹೀಗಾಗುತ್ತಿತ್ತೆ? ಎಂದು ದೇವರು ನಂಬಿಕೆಯನ್ನೇ ಎಷ್ಟೋ ಜನ ಕಳೆದುಕೊಂಡಿದ್ದಾರೆ. ಮತ್ತೆ ಕೆಲವರು ಕಷ್ಟಗಳಿಂದ ಕಂಗಾಲಾಗಿ, ಸತ್ಯಮಾರ್ಗದಲ್ಲಿ ಹೋದವರಿಗೆ ಬವಣೆಯೇ ಗತಿ, ಅಡ್ಡಮಾರ್ಗದಲ್ಲಿ ಬದುಕಿದವರೇ ಸುಖವಾಗಿರುತ್ತಾರೆ ಎಂಬ ಸಿದ್ಧಾಂತಕ್ಕೆ ಬಂದು ಅಡ್ಡದಾರಿ ಹಿಡಿದವರೆಷ್ಟೋ ಮಂದಿ. ಇಂತಹ ಜನರು ಒಡ್ಡಿದ ಪರೀಕ್ಷೆಯಲ್ಲಿ ಸೋತರೆಂದೇ ಅರ್ಥ. ದೇವರು ನೈಜಮಾರ್ಗದಲ್ಲಿರುವ ಸಜ್ಜನರಿಗೆ ಮತ್ತಷ್ಟು, ಇನ್ನಷ್ಟು, ಕಷ್ಟಕೊಟ್ಟು ಪರೀಕ್ಷಿಸುತ್ತಾನೆ. ಅವರ ಭಕ್ತಿ, ಸತ್ಯಮಾರ್ಗ ದೃಢವಾದುದೆ, ಅಲ್ಲವೆ ಎಂಬುದನ್ನು ಅವರನ್ನು ನಾನಾ ವಿಧವಾಗಿ ಪರೀಕ್ಷಿಸುವ ಮೂಲಕ ಕಂಡುಕೊಳ್ಳುತ್ತಾನೆ. ಆ ಕಷ್ಟಗಳಿಗೆ ಹೆದರಿ ಅಡ್ಡದಾರಿ ಹಿಡಿದ ಅಳಿಮನದವರನ್ನು ತನ್ನ ದೃಷ್ಟಿಯಿಂದ, ಕೃಪೆಯಿಂದ ಸರಿಸಿಬಿಡುತ್ತಾನೆ. ಏನೇ ಕಷ್ಟಬಂದರೂ ಸತ್ಯಮಾರ್ಗ ಬಿಡದೆ ದೃಢವಾಗಿ ನಿಂತವರ ಕೈಹಿಡಿದು ಮೇಲೆತ್ತುತ್ತಾನೆ ಎಂಬ ಸಿದ್ಧಾಂತವನ್ನು ಜೇಡರ ದಾಸಿಮಯ್ಯನವರ ಮೇಲಿನ ವಚನದಿಂದ ತಿಳಿದುಕೊಳ್ಳಬಹುದಾಗಿದೆ.

ಭಗವಂತನು ತನ್ನ ಭಕ್ತರಿಗೆ ನಾನಾ ರೀತಿಯ ಕಷ್ಟಗಳನ್ನು ಕೊಡುತ್ತಾನೆ. ಕೊನೆಗೆ ಅವರಿಗೆ ಏನೂ ಗತಿ ಇಲ್ಲದಂತಾಗಿ ತಿರಿದು ತಿನ್ನುವ ಪರಿಸ್ಥಿತಿಯನ್ನು ಉಂಟುಮಾಡುತ್ತಾನೆ. ದೇವರಿಗೆ ತನ್ನ ಭಕ್ತನು ಕಷ್ಟದಲ್ಲಿ ಬೇಯಲಿ ಎಂಬ ಆಸೆ ಏನಿಲ್ಲ. ಆದರೆ ಅವನದು ದೃಢ ಭಕ್ತಿಯೋ ಅಲ್ಲವೋ, ಅವನದು ಸ್ವಾರ್ಥಕ್ಕಾಗಿ ತೋರಿಸುವ ಭಕ್ತಿಯೋ ಎಂಬುದನ್ನು ಒರೆಗೆ ಹಚ್ಚಿ ನೋಡಬೇಕೆಂಬುದು ಅವನ

ಇಟ್ಟೆ, ಒರೆಗೆ ಹಚ್ಚಬೇಕಾದರೆ ಉಜ್ಜಬೇಕಾಗುತ್ತದೆ, ಅರೆಯಬೇಕಾಗುತ್ತದೆ, ಹಿಂಡಬೇಕಾಗುತ್ತದೆ. ಹಾಗೆ ಮಾಡಿದಾಗ ದೋಷವಿಲ್ಲದ ವಸ್ತುವು ತನ್ನ ನಿಜವಾದ ಲಕ್ಷಣವನ್ನು ಹೆಚ್ಚು ಸ್ಪಷ್ಟವಾಗಿ ತೋರಿಸಿಕೊಳ್ಳುತ್ತದೆ. ಅಲ್ಲಿ ಮುಚ್ಚುಮರೆಗೆ ಅವಕಾಶವಿರುವುದಿಲ್ಲ. ನಿಜವಾದ ಗುಣ ಬಯಲಿಗೆ ಬಂದೇ ತೀರುತ್ತದೆ. ಅಕ್ಕಸಾಲಿಗನು ಬಂಗಾರ ಚೊಕ್ಕವಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಒರೆಗೆ ಹಚ್ಚಿ ತಿಕ್ಕಿ, ತಿಕ್ಕಿ ನೋಡಿದಾಗ, ಅದರ ಪರಿಶುದ್ಧತೆ ಎಷ್ಟು ಎಂಬುದು ತಿಳಿಯುತ್ತದೆ. ಅದು ಶುದ್ಧವಾಗಿದ್ದರೆ ಹೊಳಪಾಗಿ ಕಾಣಿಸುತ್ತದೆ. ಚಂದನವು ಸುವಾಸನೆಯುಳ್ಳ ಕಟ್ಟಿಗೆ. ಅದನ್ನು ಸಾಣೆಯ ಕಲ್ಲಿಗೆ ಹಾಕಿ ಸವೆಸಿದಷ್ಟೂ ಅದು ತನ್ನ ಕಂಪನ್ನು ಬಿಡುತ್ತದೆ. ತನ್ನನ್ನು ಉಜ್ಜಿ ಸವೆಸುತ್ತಾರೆ ಎಂದು ಅದು ತನ್ನ ಸುವಾಸನೆಯನ್ನು ಕಳೆದುಕೊಳ್ಳುವುದಿಲ್ಲ. ಪ್ರತಿಯಾಗಿ ಮತ್ತಷ್ಟು ಸುವಾಸನೆಯನ್ನು ಬೀರುತ್ತದೆ. ಹಾಗೆಯೇ ಕಬ್ಬಿನ ಕೋಲನ್ನು ಗಾಣಕ್ಕೆ ಹಾಕಿ ಅರೆದು, ಹಿಂಡಿ ಹಿಪ್ಪೆಮಾಡಿದಾಗ ತನ್ನಲ್ಲಿರುವ ಸಿಹಿಯನ್ನೆಲ್ಲಾ ಹೊರಚೆಲ್ಲುತ್ತದೆ. ಆಗ ಅದರಲ್ಲಿರುವ ರಸವೆಷ್ಟು, ಅದರ ಸಿಹಿ ಎಷ್ಟು ಎಬುದು ಇತರರಿಗೆ ತಿಳಿಯುತ್ತದೆ. ಆ ಕಬ್ಬಿನ ಕೋಲು, ತನ್ನನ್ನು ಗಾಣಕ್ಕೆ ಹಾಕಿ ಅರೆದರೆಂದು ತನ್ನ ಸಿಹಿಯನ್ನು ಕಳೆದುಕೊಳ್ಳುವುದಿಲ್ಲ. ಅದೇ ರೀತಿ ಸಜ್ಜನರಾದವರು ಕಷ್ಟ ಕೋಟಲೆಗಳು ಬಂದಾಗ, ತಮ್ಮಲ್ಲಿರುವ ಶ್ರೇಷ್ಠ ಗುಣಗಳನ್ನು ಕಳೆದುಕೊಳ್ಳುವುದಿಲ್ಲ. ಅಷ್ಟೇ ಅಲ್ಲ, ತಮ್ಮ ಉತ್ತಮ ನಡೆಯಲ್ಲಿ ಇನ್ನೂ ದೃಢಗೊಳ್ಳುತ್ತಾರೆ. ದುಃಖಗಳಿಂದ ಕುಗ್ಗದೆ, ತಮ್ಮ ನೇರಮಾರ್ಗದಲ್ಲಿಯೇ ಸಾಗುತ್ತಾರೆ. ಆಗ ಉಳಿದವರಿಗೆ ಅವರ ಸದ್ಗುಣಗಳ ಪರಿಚಯವಾಗುತ್ತದೆ. ಉದಾ: ಸತ್ಯಹರಿಶ್ಚಂದ್ರ ಸತ್ಯಕ್ಕಾಗಿ ತನ್ನ ರಾಜ್ಯ-ಕೋಶಗಳನ್ನು ಕಳೆದುಕೊಂಡ. ಹೆಂಡತಿ ಮಗನನ್ನು ಮಾರಿಕೊಂಡ. ರಾಣಿಯಾದ ತನ್ನ ಹೆಂಡತಿ ಹೆರವರ ಮನೆಯ ಊಳಿಗ ಮಾಡಬೇಕಾಯ್ತು. ತಾನು ಸ್ಮಶಾನ ಕಾಯುವಂತಾಯ್ತು. ಆದರೂ ಅವನು ಸನ್ಮಾರ್ಗ ಬಿಡಲಿಲ್ಲ. ತನ್ನ ಮಗನ ಶವ ಸಂಸ್ಕಾರಕ್ಕೆ ಏನೂ ಇಲ್ಲದಾದಾಗ, ಹೆಂಡತಿಯ ಮಾಂಗಲ್ಯವನ್ನೇ ಶುಲ್ಕವಾಗಿ ತೆಗೆದುಕೊಳ್ಳುವನಲ್ಲದೆ, ಸುಂಕ ಕೊಡದೆ ಸಂಸ್ಕಾರಕ್ಕೆ ಆಸ್ಪದ ಕೊಡುವುದಿಲ್ಲ. ಮಿಥ್ಯಾಪವಾದಕ್ಕೆ ಗುರಿಯಾದ ಹೆಂಡತಿಯನ್ನು ಕೊಲ್ಲಲು ಹೇಳಿದಾಗ ಕರ್ತವ್ಯಪಾಲನೆಗಾಗಿ ಅದಕ್ಕೂ ಸಿದ್ಧನಾಗುತ್ತಾನೆಯೇ ಹೊರತು, ತಾನು ನಂಬಿದ್ದ, ಬದುಕಿದ ಮೌಲ್ಯಗಳಿಗೆ ಎರವಾಗುವುದಿಲ್ಲ. ಆಗ ದೇವರು ತಾನೊಡ್ಡಿದ ಕಷ್ಟಗಳನ್ನೆಲ್ಲಾ ಸಹಿಸಿಯೂ ನೇರ ಮಾರ್ಗ ಬಿಡದ ಹರಿಶ್ಚಂದ್ರನ ಸದ್ಗುಣಕ್ಕೆ ಮೆಚ್ಚಿ, ತನ್ನ ಪರೀಕ್ಷೆಗಳಲ್ಲೆಲ್ಲಾ ಗೆದ್ದಂತಹ ಹರಿಶ್ಚಂದ್ರನನ್ನು ಕೈಹಿಡಿದು ಉದ್ಧರಿಸುತ್ತಾನೆ.

ಸಜ್ಜನರಿಗೆ ಕಷ್ಟಗಳು ಹೆಚ್ಚು. ಏಕೆಂದರೆ ಅವರನ್ನು ಪರೀಕ್ಷಿಸಲೆಂದೇ ದೇವರು ತಿರಿಯುವ ಸ್ಥಿತಿ ಉಂಟುಮಾಡಿ, ಬಂಗಾರವನ್ನು ಒರೆಗೆ ಹಚ್ಚಿ ನೋಡುವಂತೆ ನೋಡುತ್ತಾನೆ. ಕಬ್ಬನ್ನು ಅರೆಯುವಂತಹ ಅನುಭವ ತರುವ ಕಷ್ಟಕೊಟ್ಟು

ಪರೀಕ್ಷಿಸುತ್ತಾನೆ. ಗಂಧವನ್ನು ತೇದಂತೆ ತೇದು ನೋಡುತ್ತಾನೆ. ಇಷ್ಟಾದರೂ ಮಾನವ ಕಷ್ಟಗಳನ್ನೆಲ್ಲಾ ಸಹಿಸಿಕೊಂಡು, ಕರ್ತವ್ಯಪ್ರಜ್ಞೆಯಿಂದ, ಸತ್ಯಮಾರ್ಗ ಬಿಡದೆ, ದೇವರ ನಂಬುಗೆಯನ್ನು ಕಳೆದುಕೊಳ್ಳದೆ, ಶುಭ ಬದುಕನ್ನು ಬದುಕಿದಾಗ, 'ಇವನೆಂದಿಗೂ ಪರಿಶುದ್ಧ, ಯಾವ ಕಷ್ಟವೂ ಇವನ ದೃಢನಂಬುಗೆಯನ್ನು ಅಲುಗಿಸಲಾರದು' ಎಂದು ತಿಳಿದು ಅವನನ್ನು ಹಿಡಿದು ಮೇಲಕ್ಕೆತ್ತುತ್ತಾನೆ, ಉದ್ಧರಿಸುತ್ತಾನೆ ಎಂಬ ಅಂಶವನ್ನು ಜೇಡರ ದಾಸಿಮಯ್ಯ ಬಹಳ ಸುಂದರವಾಗಿ, ಪರಿಣಾಮಕಾರಿಯಾಗಿ ಹೇಳಿದ್ದಾನೆ.

■

## ೧೬೭

ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ
ಆಸೆಮಾಡುವಂತೆ, ಸೂಲವನೇರುವ ಕಳ್ಳನು
ಹಾಲುತುಪ್ಪವ ಕುಡಿದು ಮೇಲೇಸುಕಾಲ ಬದುಕುವನೊ?
ಕೆಡುವೊಡಲ ನೆಚ್ಚಿ, ಕಡು ಹುಸಿಯನೆ ಹುಸಿದು ಒಡಲ ಹೊರೆವರ
ಕೂಡಲಸಂಗಮದೇವನವರನೊಲ್ಲ ಕಾಣಿರಣ್ಣಾ.

–ಬಸವಣ್ಣ

ಕಪ್ಪೆ ಹಾವಿನ ಬಾಯಲ್ಲಿ ಇದ್ದಾಗ ಅದು ಇನ್ನೊಂದು ಕ್ಷಣದಲ್ಲಿ ಹಾವಿನ ಹೊಟ್ಟೆಯೊಳಗೆ ಹೋಗಿಬಿಡುವುದು. ಅಂತಹ ಸಂದರ್ಭದಲ್ಲೂ ಒಂದು ನೊಣ ಮುಂದೆ ಹಾರಿದರೆ, ಕಪ್ಪೆ ತಾನು ಸಾವಿನ ನೆರಳಲ್ಲಿ ಇದ್ದೇನೆ, ತನಗೆ ಉಳಿಗಾಲವಿಲ್ಲ ಎಂಬುದನ್ನು ಆ ಕ್ಷಣ ಮರೆತು, ಮುಂದೆ ಹಾರುವ ನೊಣವನ್ನು ತಿಂದು ಹಸಿವನ್ನು ಹಿಂಗಿಸಿಕೊಳ್ಳಬೇಕೆಂದು ಆಸೆಮಾಡುವಂತೆ, ತಪ್ಪು ಮಾಡಿ ಶೂಲಕ್ಕೆ ಏರಿಸಬೇಕೆಂದು ನಿರ್ಧಾರವಾಗಿರುವ ಕಳ್ಳನನ್ನು ನಿನ್ನ ಕೊನೆಯ ಆಸೆಯೇನು ಹೇಳು ಹೇಳಿದರೆ ತೀರಿಸುತ್ತೇವೆ ಎಂದಾಗ ಹಾಲುತುಪ್ಪ ಕುಡಿಯಬೇಕು ಎಂದು ಕೇಳಿದರೆ ಎಷ್ಟು ಹಾಸ್ಯಾಸ್ಪದ. ಪ್ರಾಣವೇ ಇನ್ನೊಂದು ಕ್ಷಣದಲ್ಲಿ ಹೋಗುತ್ತಿರುವಾಗ ಹಾಲುತುಪ್ಪ ಕುಡಿದು ಏನಾಗಬೇಕಾಗಿದೆ? ಇನ್ನೊಂದು ದಿನ ಸಹ ಬದುಕುವ ಸಾಧ್ಯತೆ ಇಲ್ಲದ ಅವನು, ಮುಂದಿನದನ್ನು ಯೋಚಿಸದೆ, ಕ್ಷಣಿಕದ, ತಾತ್ಕಾಲಿಕವಾದ ಸುಖಕ್ಕೆ ಆಸೆಪಡುವುದು ನಾಚಿಕೆಗೇಡೇ ಸರಿ. ಹಾಗೆಯೇ ಮನುಷ್ಯನು ಲೋಕದ ಜೀವನಕ್ಕೆ ಆಸೆಪಟ್ಟು ಯಾವ ಕ್ಷಣದಲ್ಲಿ ಬೇಕಾದರೂ, ಮೃತ್ಯುವು ಮನುಷ್ಯನನ್ನು ಕೊಂಡೊಯ್ಯಬಹುದಾಗಿದ್ದರೂ ಯಾವುದೇ ರೋಗಕ್ಕೆ, ಕಷ್ಟಕ್ಕೆ, ಆಘಾತಕ್ಕೆ ಅವನು ಗುರಿಯಾಗಬಹುದಿದ್ದರೂ, ಮಾಯಾ ಮೋಹಿತನಾಗಿ, ಕರಣೇಂದ್ರಿಯಗಳ ವಶನಾಗಿ,

ತಾನಿರುವ ಪರಿಸ್ಥಿತಿಯನ್ನೂ ಯೋಚಿಸದೆ, ಅದೂರ ದೃಷ್ಟಿಯುಳ್ಳವನಾಗಿ, ತಾತ್ಕಾಲಿಕ ಸುಖ ಭೋಗಗಳಿಗೆ ಗಮನಕೊಡುವ ಜನರು ಅತಿ ಮೂರ್ಖರು. ಅವರು ಹೊಟ್ಟೆ ಪಾಡಿಗಾಗಿ ಎಂತಹ ಹೇಸಿಗೆ ತನವನ್ನು ಬೇಕಾದರೂ ಮಾಡಬಲ್ಲರು. ಅಂತಹವರನ್ನು ದೇವರು ಎಂದೂ ಮೆಚ್ಚನು. ತನ್ನ ಕೃಪೆಗೆ ಎಂದೂ ಅವನು ಒಳಗಾಗಿಸಿಕೊಳ್ಳುವುದಿಲ್ಲ ಎಂದು ಬಸವಣ್ಣ ಖಡಾಖಂಡಿತವಾಗಿ ನುಡಿದಿದ್ದಾರೆ. ■

## ೧೬೮

ಹಾಲಕಂಡ ಬೆಕ್ಕು ಮೆಲ್ಲಗೆ ತೆಗೆದು ಕುಡಿಯುತಿರಲು
ಬಾಲನಿಗಿರ್ದ ಹಾಲ ಬೆಕ್ಕು ಕುಡಿಯುತ್ತಿದೆ ಎಂದು
ನಾರಿ ಕಂಡು ಗುದಿಗೆಯಲ್ಲಿ ಹೊಡೆದರೆ,
ಏಳುತ್ತ ಬೀಳುತ್ತ ಕಾಲ್ಗೆಡೆದು ಓಡುವಂತೆ
ಏನ ಹೇಳುವೆನಯ್ಯಾ?
ಮರ್ತ್ಯದ ಮನುಜರು ಕರಣಂಗಳ ಹರಿಯಬಿಟ್ಟು
ತಮ್ಮ ಬಾಳುವೆಯ ಮರೆದು
ಕಾಲನ ಬಾಯಲ್ಲಿ ಮುಳುಗುತಿಪ್ಪವನಾರು
ಅರಿಯರು ನೋಡಾ
ಬಸವ ಪ್ರಿಯ ಕೂಡಲಚನ್ನಬಸವಣ್ಣಾ

–ಹಡಪದ ಅಪ್ಪಣ್ಣ

ಹಾಲಿಟ್ಟಿರುವುದು ಕಣ್ಣಿಗೆ ಕಂಡಾಗ, ಬೆಕ್ಕು ಸದ್ದಿಲ್ಲದೆ ಮೆಲ್ಲಗೆ ಬಂದು ಪಾತ್ರೆಯ ಮುಚ್ಚಳ ತೆಗೆದು ಹಾಲುಕುಡಿಯುತ್ತಿದ್ದಾಗ, ತನ್ನ ಬಾಲಕನಿಗಾಗಿ ಇಟ್ಟಿದ್ದ ಹಾಲನ್ನು ಈ ಬೆಕ್ಕು ಕುಡಿಯುತ್ತಿದೆ ಎಂದು ಸಿಟ್ಟಿಗೆದ್ದ ತಾಯಿಯು ದೊಣ್ಣೆಯಿಂದ ಹೊಡೆಯಲು ಬೆಕ್ಕು ಸತ್ತೆನೊ ಕೆಟ್ಟೆನೋ ಎಂದು ದಿಕ್ಕಾಪಾಲಾಗಿ ಓಡುತ್ತದೆ. ಅದೇರೀತಿ, ಮನುಷ್ಯನು ತನ್ನ ಇಂದ್ರಿಯಗಳ ಮೇಲೆ ಹತೋಟಿಯನ್ನು ಇಟ್ಟುಕೊಳ್ಳದೆ ಅವುಗಳ ಚಾಪಲ್ಯಕ್ಕೆ ಒಳಗಾಗಿ, ಅವು ಹೇಗೆ ಬೇಕೆಂದರೆ ಹಾಗು ಪಾಪಕರ್ಮಗಳಲ್ಲಿ ನಿರುತವಾಗಲು ಬಿಟ್ಟು, ತಮ್ಮ ಬದುಕೇನು, ಕರ್ತವ್ಯವೇನು, ತಾವು ಹೇಗಿರಬೇಕು ಎಂಬ ಬಗ್ಗೆ ಸ್ವಲ್ಪವೂ ಚಿಂತಿಸದೆ ಮನಬಂದಂತೆ ವರ್ತಿಸುವುದು ಸರಿಯೆ ಎಂದು ವಿಚಾರಿಸದೆ ದುಷ್ಕಾರ್ಯಗಳಲ್ಲಿ ಪ್ರವೃತ್ತನಾಗುತ್ತಾನೆ. ಅದರ ಫಲವಾಗಿ ಅನೇಕ ಕಷ್ಟ–ನಷ್ಟಗಳಿಗೆ ಒಳಗಾಗುತ್ತಾನೆ. ಮರಣಕ್ಕೆ ಸಮನಾದ ದುಃಖವು ಆವರಿಸಿದಾಗ ಅವುಗಳಿಂದ ತಪ್ಪಿಸಿಕೊಳ್ಳಲು, ಹೊಡೆತದಿಂದ ತಪ್ಪಿಸಿಕೊಳ್ಳಲು ಓಡುವ ಬೆಕ್ಕಿನಂತೆ,

ಕಷ್ಟದಿಂದ ಪಾರಾಗಲು ಪರಿತಪಿಸುತ್ತಾನೆ. ಆದರೆ ತಾನು ಮಾಡಿದ ಕಾರ್ಯದ ಫಲವನ್ನು ತಾನೇ ಅನುಭವಿಸಲೇಬೇಕು. ಯಾರಿಂದಲೂ ಅದನ್ನು ತಪ್ಪಿಸಲು ಸಾಧ್ಯವಾಗುವುದಿಲ್ಲ ಎಂದು ಹಡಪದ ಅಪ್ಪಣ್ಣನವರು ವಿಷಾದಪಟ್ಟುಕೊಂಡು ನುಡಿದಿದ್ದಾರೆ.

■

## ೧೬೭

ಹಿರಿಯತನಕ್ಕೆ ಪಥವೆ ಬಾಣನ ಮನೆಯಬಾಗಿಲ ಕಾಯ್ವುದು?
ಮಹಂತತನಕ್ಕೆ ಪಥವೆ ನಂಬಿಗೆ ಕುಂಟಣಿಯಾದುದು?
ಕರುಣಿತನಕ್ಕೆ ಪಥವೆ ಸಿರಿಯಾಳನ ಮಗನ ಕೊಲುವುದು?
ದಾನಿತನಕ್ಕೆ ಪಥವೆ ದಾಸನ ವಸ್ತ್ರವ ಸೀಳುವುದು?
ನಿಮ್ಮ ಹಿರಿಯತನಕ್ಕಿದು ಪಥವೆ ಬಲ್ಲಾಳನ ವಧುವ ಬೇಡುವುದು?
ನಿಮ್ಮ ಗುರುತನಕ್ಕಿದು ಪಥವೆ ನಾರಿಯರಿಬ್ಬರೊಡನೆ ಇಪ್ಪುದು?

–ಸತ್ಯಕ್ಕ

ತಪ್ಪಿ ನಡೆದವರನು ಅಥವಾ ತಪ್ಪಿನಡೆದಿದದ್ದರೆ ಅವರ ನಡೆ ಸರಿ ಇಲ್ಲ ಎನ್ನಿಸಿದವರನ್ನು ಯಾರನ್ನು ಬೇಕಾದರೂ ನಮ್ಮ ಶರಣರು ತರಾಟೆಗೆ ತೆಗೆದುಕೊಳ್ಳುತ್ತಾರೆ. ತಪ್ಪಿತಸ್ಥ ಯಾರಾದರೂ ಸರಿ. ಅವನು ಸಾಕ್ಷಾತ್ ಪರಶಿವನೆ ಆದರೂ ಪ್ರಶ್ನಿಸುತ್ತಿದ್ದರು ಎಂಬುದಕ್ಕೆ ಸತ್ಯಕ್ಕನ, ಮೇಲಿನ ವಚನವೆ ಸಾಕ್ಷಿ. ಈಗಿನ ಕಾಲದಲ್ಲಿ ದೊಡ್ಡಮನುಷ್ಯರೆನ್ನಿಸಕೊಂಡವರು, ಅಧಿಕಾರವಿದ್ದವರು, ದುಷ್ಟರು, ಹಣವಂತರು ಏನು ತಪ್ಪು ಮಾಡಿದರೂ ಅವನ್ನು ಕೇಳುವವರೇ ಇಲ್ಲ. ಹಾಗಿದ್ದರೂ ಅವರನ್ನು ಓಲೈಸಿಕೊಂಡು ಹೋಗುವವರೇ ಹೆಚ್ಚು, ಬಡವರಂತೂ ಅವರ ತಂಟೆಗೆ ಹೋಗುವುದಿಲ್ಲ. ಆದರೆ ಬಸವಣ್ಣನವರು ಮಾಡಿದ ಕ್ರಾಂತಿಯ ಫಲವಾಗಿ ಜನ ಸಾಮಾನ್ಯರೂ, ಹೆಣ್ಣುಮಕ್ಕಳು ಸಹ ತಪ್ಪಿತಸ್ಥರನ್ನು ಟೀಕಿಸುವಷ್ಟ, ಪ್ರಶ್ನೆಮಾಡುವಷ್ಟು ಗಟ್ಟಿತನ, ಧರ್ಮಪ್ರಜ್ಞೆ ಪಡೆದು ನ್ಯಾಯನಿಷ್ಠುರಿಗಳಾಗಿದ್ದರು. ಸಾಮಾನ್ಯ ಮಹಿಳೆಯಾದ ಸತ್ಯಕ್ಕ ಈ ವಚನದಲ್ಲಿ ಪರಶಿವನನ್ನೇ ಅವನ ತಪ್ಪುಗಳನ್ನು ಗುರುತಿಸಿ, ಹೀಗೆ ಮಾಡುವುದು ಸರಿಯೇ ಎಂದು ಪ್ರಶ್ನಿಸಿದ್ದಾಳೆ. ಆ ಮೂಲಕ ಸರ್ವರಿಗೂ ಪರಶಿವನು ಮಾಡಿದ ಕೃತ್ಯಗಳು–ಸಾಮಾನ್ಯರಿಗೆ ತಪ್ಪೆಂದು ಗೋಚರಿಸಿದರೂ–ಅದರ ಹಿಂದೆ ಅಡಗಿರುವ ಸದುದ್ದೇಶವನ್ನು ಪ್ರಚಾರಗೊಳಿಸಿದ್ದಾಳೆ.

ಪರಶಿವನನ್ನು ಎಲ್ಲರೂ ದೊಡ್ಡವನೆಂದು ಬಗೆದಿದ್ದೇವೆ. ಆದರೆ ಅಂತಹ ದೊಡ್ಡ ಮನುಷ್ಯ ಬಾಣನೆಂಬ ರಾಕ್ಷಸನ ಮನೆಯ ಬಾಗಿಲನ್ನು ಕಾಯ್ದನಲ್ಲಾ ಇದು ಅವನ ಶ್ರೇಷ್ಠತೆಗೆ ಶೋಭೆ ತರುವುದೆ? ಎಂದು ಪ್ರಶ್ನಿಸಿದ್ದಾಳೆ. (ಶಿವನ ಪರಮ ಭಕ್ತನಾದ ಬಾಣಾಸುರ ತನ್ನ ತಪಸ್ಸಿನಿಂದ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡು, ತಾನು ಎದ್ದ ತಕ್ಷಣ ದಿನವೂ ತನ್ನ ಬಾಗಿಲಲ್ಲಿ ನಿಂತಿದ್ದು ನಿನ್ನ ದರ್ಶನಕೊಡಬೇಕು ಎಂದು ಪ್ರಾರ್ಥಿಸಿದನಂತೆ. ಬೋಳೇಶಂಕರನಾಧ ಭಗವಂತನು ತಥಾಸ್ತು ಎಂದು ಹೇಳಿ, ದಿನವೂ ಅವನ ಬಾಗಿಲಲ್ಲಿ ನಿಂತು ಅವನು ಎದ್ದು ಬಂದು ತನ್ನ ದರ್ಶನ ತೆಗೆದುಕೊಳ್ಳುವವರೆಗೆ ಕಾದಿರುತ್ತಿದ್ದನೆಂದು ಕಥೆ) ನಂಬಿ ಶಿವನ ಪರಮಭಕ್ತ. ಅವನು ಕಾರಣಾಂತರದಿಂದ ತನ್ನ ಪ್ರೀತಿಯ ಉಪಪತ್ನಿಯ ಹತ್ತಿರ ಹೋಗಲಾಗದೆ ತುಂಬಾ ದುಃಖಪಡುತ್ತಿರುತ್ತಾನೆ. ಆಗ ಶಿವನು ಕುಂಟಣಿಯಾಗಿ ಅವರಿಬ್ಬರ ಕೂಡುವಿಕೆಗೆ ಅವಕಾಶ ಮಾಡಿಕೊಡುತ್ತಾನೆ. ಈ ವಿಷಯ ತಿಳಿದೋ ಏನೋ ಸತ್ಯಕ್ಕ ನಂಬಿಗೆ ಕುಂಟಣಿಯಾಗೋದು ನಿನಗೆ ಯೋಗ್ಯವೆ? ಎಂದು ಸಿಟ್ಟಿನಿಂದ ಪ್ರಶ್ನಿಸಿದ್ದಾಳೆ. ಈಶ್ವರನನ್ನು ನಾವು ದಯಾಮಯನೆಂದೂ, ಕರುಣಾಸಾಗರನೆಂದೂ ತಿಳಿದಿದ್ದೇವೆ. ಅಂತಹ ಈಶ್ವರ ತನ್ನನ್ನೇ ನಂಬಿ, ತನಗಾಗಿ ಏನು ತ್ಯಾಗಬೇಕಾದರೂ ಮಾಡಲು ಸಿದ್ಧನಿದ್ದ, ಭಕ್ತ ಸಿರಿಯಾಳನಿಗೆ ತನ್ನ ಮಗನನ್ನೇ ಕೊಂದು ಅಡಿಗೆ ಮಾಡಿ ಬಡಿಸಬೇಕೆಂದು ಜಂಗಮವೇಷದಲ್ಲಿ ಬಂದು ಕೇಳುತ್ತಾನೆ. ಭಕ್ತ ಸಿರಿಯಾಳ ಅದಕ್ಕೂ ಒಪ್ಪುತ್ತಾನೆ. ಈಶ್ವರ ಇಷ್ಟಕ್ಕೂ ಬಿಡದೆ, ತನ್ನ ಜೊತೆಗೆ ಕೂತು, ಊಟಮಾಡು ಎನ್ನುತ್ತಾನೆ. ಈ ಕಥೆಯನ್ನು ಕೇಳಿದ ಸತ್ಯಕ್ಕ, ಕರುಣಿ ಎನ್ನಿಸಕೊಂಡಿರುವ ನೀನು ಇಷ್ಟು ನಿಷ್ಕರುಣಿಯಾಗಿ, ಕ್ರೂರನಾಗಿ ವರ್ತಿಸಿದ್ದೀಯಲ್ಲಾ ನಿನ್ನ ಕರುಣತನಕ್ಕೆ ಹೀಗೆ ಮಾಡಿದುದು ಸರಿಯೆ? ಎಂದು ಕೇಳಿದ್ದಾಳೆ. ಈಶ್ವರನು ಒಂದೊಂದೇ ತಪ್ಪುಗಳನ್ನು ಪಟ್ಟಿಮಾಡಿ ಅವಳು ಪ್ರತಿಯೊಂದನ್ನೂ ಪ್ರಶ್ನಿಸಿದ್ದಾಳೆ. ಬಲ್ಲಾಳನ ಭಕ್ತಿಯ ಮಟ್ಟವನ್ನು ಪರೀಕ್ಷಿಸಲು ಈಶ್ವರನು, ಅವನ ಹೆಂಡತಿಯನ್ನೇ ಕೇಳುತ್ತಾನೆ. ಬಲ್ಲಾಳ ಅದಕ್ಕೂ ಸಿದ್ಧನಾಗುತ್ತಾನೆ. (ಆಗ ಈಶ್ವರ ಪ್ರತ್ಯಕ್ಷನಾಗಿ ಆಶೀರ್ವದಿಸುತ್ತಾನೆ ಅದು ಬೇರೆ ಮಾತು) ಆ ವಿಷಯ ಕುರಿತು ಸತ್ಯಕ್ಕ ಪರವಧುವನ್ನು ಬೇಡುವುದು ನಿನ್ನ ಯೋಗ್ಯತೆಗೆ ಸರಿಯೆ? ಎಂದು ಕೇಳಿದ್ದಾಳೆ. ದೇವರು ಅವಳನ್ನೇನೂ ಅನುಭವಿಸಲಿಲ್ಲ. ಪ್ರತ್ಯಕ್ಷನಾಗಿ ವರ ಕೊಟ್ಟ, ಇದು ಗೊತ್ತಿದ್ದರೂ ಪರೀಕ್ಷೆ ಮಾಡಲೂ ಸಹ, ಇಂತಹ ಹೇಯವಾದ ರೀತಿಯಲ್ಲಿ ಪರೀಕ್ಷಿಸಬಾರದಿತ್ತು ಎಂಬುದು ಆ ಶರಣೆಯ ಅನಿಸಿಕೆ. ಅದಕ್ಕಾಗಿ ಹೀಗೆ ಪ್ರಶ್ನಿಸಿದ್ದಾಳೆ. ಕೊನೆಯದಾಗಿ, ವೈಯಕ್ತಿಕ ಜೀವನದ ಬಗ್ಗೆಯೂ ಶಿವನನ್ನು ತರಾಟೆಗೆ ತೆಗೆದುಕೊಂಡಿದ್ದಾಳೆ ಸತ್ಯಕ್ಕ. ಅಲ್ಲಯ್ಯಾ ನಿನ್ನನ್ನು ದೇವರೂಂತ ತಿಳಿದಿದ್ದೇವಲ್ಲ! ಮನುಷ್ಯರ ಹಾಗೆ ಗಂಗೆ–ಗೌರಿ ಎಂಬ ಇಬ್ಬರು ಹೆಂಡತಿಯರನ್ನು ಮಾಡಿಕೊಂಡಿದ್ದೀಯಲ್ಲಾ ಇದು ಸರಿಯ? ಎಂತಲೂ ಕೇಳಿಬಿಟ್ಟಿದ್ದಾಳೆ!

ಪರಶಿವನು ಪ್ರತಿಯೊಂದು ಸಲವೂ ತನ್ನ ಭಕ್ತರ ಭಕ್ತಿಯ ಆಳವನ್ನು ಪರೀಕ್ಷಿಸಲು, ಮತ್ತು ಅವರ ಭಕ್ತಿ ಎಂತಹುದು ಎಂದು ಇತರರಿಗೆ ಪರಿಚಯಿಸಲು ಅವರುಗಳನ್ನು ಅಸಾಧ್ಯವಾದಂತಹ ಕಠಿಣ ಪರೀಕ್ಷೆಗಳಿಗೆ ಗುರಿಪಡಿಸಿದ್ದಾನೆ. ಅಂತಹ ಸಂದರ್ಭದಲ್ಲೂ ಅವರು ಗೆದ್ದು ಬಂದಿದ್ದಾರೆ. ಇವೆಲ್ಲಾ ವಿಚಾರಗಳ ಕಥೆಗಳನ್ನು ಕೇಳಿದ್ದ ಸತ್ಯಕ್ಕ ಸಾಮಾನ್ಯ ಜನರು ಈ ರೀತಿಯಾಗಿ ಈಶ್ವರನ ಬಗ್ಗೆ ಯೋಚಿಸಿ ಪರಶಿವನ ಬಗ್ಗೆ ತಪ್ಪು ತಿಳಿದುಕೊಂಡಾರು ಎಂದು ಬಗೆದು, ಈ ವಚನ ಬರೆದು, ಇದನ್ನು ವಿಶ್ಲೇಷಿಸಿದಾಗ, ನಿಜಾಂಶ, ಪರಶಿವನ ಉದ್ದೇಶ ಮುಂತಾದ ಆಧ್ಯಾತ್ಮಿಕ ವಿಚಾರಗಳನ್ನು ವಿಶದವಾಗಿ ಜನ ಸಾಮಾನ್ಯರು ತಿಳಿದುಕೊಳ್ಳಲಿ ಎಂಬುದು ಆಕೆಯ ಉದ್ದೇಶವಾಗಿರಬೇಕು. ತಾನು ಈಶ್ವರನನ್ನು ತರಾಟೆಗೆ ತೆಗೆದುಕೊಳ್ಳುವುದರ ಮೂಲಕ ಸತ್ಯಾಂಶಗಳನ್ನು ಜನರು ತಿಳಿದುಕೊಳ್ಳುವುದಕ್ಕೆ, ಭಕ್ತರ ಮಹಿಮೆಗಳನ್ನು ತಿಳಿಯಲು ಪ್ರಯತ್ನಿಸುವುದಕ್ಕೆ ಅನುವು ಮಾಡಿಕೊಟ್ಟಿದ್ದಾಳೆ. ■

## ೧೭೦

ಹಿಂಡಿನೊಳಗಣ ಕುರುಬನ ತೋಳ ತಿಂಬಾಗ  
ಕುರಿ ಮಾಣಿಸಬಲ್ಲುದೆ?  
ಕಟ್ಟೊಡೆಯ ಕೊಲುವಾಗ ಮತ್ತೊಬ್ಬರು ಬೇಡಾ ಎನಲುಂಟೆ?  
ಹುಟ್ಟಿಸಿದಾತ ಭವದ ಗೊತ್ತಿಂಗೆ ತಳುವೊಡೆ  
ನಮ್ಮ ಗೊತ್ತಿನ ಅರಿವೇನ ಮಾಡುವುದು?  
ಉಭಯವು ನಿನ್ನಾಟ ಏಣಾಂಕಧರ ಸೋಮೇಶ್ವರಲಿಂಗವೆ.

–ಬಿಬ್ಬಿ ಬಾಚಯ್ಯ

ಕುರಿಗಳ ಹಿಂಡನ್ನು ತೋಳದಿಂದ ರಕ್ಷಿಸಲಿಕ್ಕಾಗಿ ಕುರುಬನಿರುತ್ತಾನೆ. ತೋಳವು ಆ ಕುರುಬನನ್ನೇ ತಿಂದುಹಾಕುವಾಗ, ಅದು ಕುರಿಯನ್ನು ಬಿಟ್ಟೀತೆ? ಹಾಗಾಗಿ ಅದನ್ನು ಕಟ್ಟಿದ, ಸಾಕಿ ಸಲಹಿದ ಯಜಮಾನನೇ ಅದನ್ನು ಕೊಲ್ಲಲು ಇಷ್ಟಪಟ್ಟರೆ ಬೇರೆಯವರು ಬೇಡ ಎಂದು ತಡೆಗಟ್ಟಲು ಸಾಧ್ಯವಿಲ್ಲ. ಅದೇ ರೀತಿ ನಮ್ಮನ್ನು ಹುಟ್ಟಿಸಿದಾತ ಭಗವಂತ. ಅವನೇ ನಮ್ಮನ್ನು ಭವದ ಪಾಶದೊಳಗೆ ಕಟ್ಟಿಹಾಕಿದರೆ, ವಿಷಯಗಳ ಕೂಪದಲ್ಲಿ ತಳ್ಳಿದರೆ, ನಮಗೆ ಏನೇ ಜ್ಞಾನವಿದ್ದರೂ ಅವೇನು ಮಾಡೀತು? ಕಾಯುವವನೇ ಕೊಲ್ಲುವವನಾದರೆ, ಉಳಿಯುವುದು ಸಾಧ್ಯವಿಲ್ಲ. ಕಾಯುವುದು ಕೊಲ್ಲುವುದು ಎರಡೂ ಏಣಾಂಕಧರ ಸೋಮೇಶ್ವರ ಲಿಂಗನೆ. ಅದು ಅವನ ಇಷ್ಟ ಅವನಾಟ. ಅವನು ಮನಸ್ಸು ಮಾಡಿದಂತೆ ಆಗುತ್ತದೆ. ಎಲ್ಲಾ ಅವನ ಕೈಲಿದೆ.

ಅವನು ಏನು ಬೇಕಾದರೂ ಮಾಡಲಿ ಎಂದು ಬಿಬ್ಬಿ ಬಾಚಯ್ಯ ಕಿಂಕರ ಭಾವದಿಂದ ನುಡಿದಿದ್ದಾನೆ.

ಶರಣ ಬಿಬ್ಬಿ ಬಾಚಯ್ಯ ಏನು ಬಂದರೂ ಅದು ನಿನ್ನ ಇಚ್ಛೆ, ನಿನ್ನ ಇಚ್ಛೆಯನ್ನು ಮೀರಿ ನಾವೇನೂ ಮಾಡಲಾರೆವು ಎಂದು ಸಮರ್ಪಣಾ ಭಾವದಿಂದ ನುಡಿದಿದ್ದಾನೆ.

■

## ೧೭೧

ಹುತ್ತದಮೇಲಣ ರುಜ್ಜು ಮುಟಿದಡೆ ಸಾವರು ಶಂಕಿತರಾದವರು
ಸರ್ಪದಷ್ಟವಾದಡೆಯೂ ಸಾಯರು ನಿಶ್ಶಂಕಿತರಾದವರು
ಕೂಡಲಸಂಗಮದೇವಯ್ಯಾ
ಶಂಕಿತಂಗೆ ಪ್ರಸಾದ ಸಿಂಗಿ ಕಾಳಕೂಟ ವಿಷವು.

–ಬಸವಣ್ಣ

ಅನುಮಾನ ಸ್ವಭಾವ, ವ್ಯಕ್ತಿಯ ಘೋರ ಶತ್ರು. ಈ ಸ್ವಭಾವದವರು ನಿಷ್ಕಾರಣವಾಗಿ ಎಲ್ಲದರ ಬಗ್ಗೆಯೂ ಅನುಮಾನ ಪಡುತ್ತಾರೆ. ಯಾವುದರಲ್ಲೂ ವಿಶ್ವಾಸವಿರುವುದಿಲ್ಲ ಯಾರ ಬಗ್ಗೆಯೂ ನಂಬಿಕೆ ಇರುವುದಿಲ್ಲ. ಹೀಗೆ ಶಂಕಿತ ಸ್ವಭಾವವಿದ್ದವರು ಎಲ್ಲದಕ್ಕೂ ಹೆದರಿ ಹಿಂಜರಿಯುತ್ತಾರೆ. ಹಗ್ಗ ತುಳಿದರೂ ಹಾವು ತುಳಿದೆವೆಂದು ಶಂಕಿಸಿ ಹೌಹಾರುತ್ತಾರೆ. ಅಂತಹ ಒಂದು ರೀತಿಯ ಅನುಮಾನದ ಸ್ವಭಾವ ಒಳಿತಲ್ಲ. ಅದು ಆ ವ್ಯಕ್ತಿಗೆ ಕಂಕಟಪ್ರಾಯ ಎಂಬ ಮಾತನ್ನು ಬಸವಣ್ಣನವರು ಈ ವಚನದಲ್ಲಿ ತಿಳಿಯಪಡಿಸಿದ್ದಾರೆ. ಶಂಕಿತ ಸ್ವಭಾವವಿದ್ದವರು, ಹುತ್ತದ ಮೇಲಿರುವ ಧೂಳನ್ನು ಮುಟ್ಟಿದರೂ ಹಾವೇ ಕಚ್ಚಿತೇನೋ ಎಂಬ ಭಯದಿಂದ ಸತ್ತುಹೋಗುತ್ತಾರೆ. ಇಲ್ಲಿ ಹಾವಿನ ವಿಷದಿಂದ ಸಾಯುವುದಿಲ್ಲ. ಕಲ್ಪಿತ ಭಯದಿಂದ ಸಾಯುತ್ತಾರೆ. ಆದರೆ, ನಿಃಶಂಕೆಯ ಸ್ವಭಾವದವರು ಧೈರ್ಯವಂತರಾಗಿರುತ್ತಾರೆ. ಆತ್ಮವಿಶ್ವಾಸ ಉಳ್ಳವರಾಗಿರುತ್ತಾರೆ. ವೃಥಾ ಕಾರಣ ಅನುಮಾನ ಪಡುವುದಿಲ್ಲ. ಸರ್ಪಕಚ್ಚಿದರೂ ನಿಸ್ಸಂಶಯ ಸ್ವಭಾವದವರು ಭಯವಿಹ್ವಲರಾಗದೆ, ಧೈರ್ಯದಿಂದ ಎದುರಿಸಿ, ಅದಕ್ಕೆ ಬೇಕಾದ ವ್ಯವಸ್ಥೆ ಮಾಡಿಕೊಂಡು ಸಾವಿನಿಂದ ಪಾರಾಗುತ್ತಾರೆ ಬಸವಣ್ಣನವರು ಅನುಮಾನ ಸ್ವಭಾವದವರು ಹಾವು ಕಚ್ಚಿದಾಗ ಸಾಯುವುದಿರಲಿ, ಪ್ರಸಾದ ಸೇವಿಸಿದಾಗಲೂ, ಅವರ ಶಂಕಿತ ಸ್ವಭಾವದ ಫಲವಾಗಿ, ಅವರಿಗೆ ಅದು ಕಾಲಕೂಟ ವಿಷಕ್ಕೆ ಸಮವೆಂದು ತಿಳಿದಾಗ, ಅದು ನಿಜಕ್ಕೂ ವಿಷವೇ ಆಗಿ ಪರಿಣಮಿಸುತ್ತದೆ ಎಂಬರ್ಥ ಕೊಡುತ್ತಾರೆ.

ಒಟ್ಟಿನಲ್ಲಿ ಸಂಶಯ ಸ್ವಭಾವ ಒಳಿತಲ್ಲ. ಅಂತಹ ಸಂಶಯ ಸ್ವಭಾವವಿದ್ದವರು ನೆಮ್ಮದಿಯಿಂದ ಇರಲು ಸಾಧ್ಯವಿಲ್ಲ. ಅದು ಅವರಿಗೇ ಮಾರಕ. ಆದರೆ ಇದರರ್ಥ ಅನುಮಾನಪಟ್ಟುಕೊಳ್ಳಲೇ ಬಾರದೆಂದು ಅರ್ಥವಲ್ಲ ಅನುಮಾನ ಪಡುವುದು, ಕೆಲವು ಸಾರಿ ಎಚ್ಚರಿಕೆಯ ಗಂಟೆಯಂತೆ ಕೆಲಸ ಮಾಡುತ್ತದೆ. ಆಗ ಶಂಕೆಯಿಂದ ನೋಡುವುದು ಸರಿ. ಇಲ್ಲದಿದ್ದಲ್ಲಿ ಅಪಾಯಕ್ಕೆ ಒಳಗಾಗುವ ಪ್ರಸಂಗ ಬಂದರೂ ಬರಬಹುದು. ಆದರೆ ವೃಥಾ ಅನುಮಾನಪಡಬಾರದು. ಎಲ್ಲದಕ್ಕೂ, ಎಲ್ಲವನ್ನೂ ನೋಡುವ ದೃಷ್ಟಿ ಸಂಶಯದಿಂದ ಕೂಡಿರಬಾರದು ಎಂದು ತಿಳಿಯುವುದು ಇಲ್ಲಿ ಅಗತ್ಯ.

■

## ೧೭೨

ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ
ಅಘೋರ ತಪವ ಮಾಡಿದೊಡೇನು
ಅಂತರಂಗ ಆತ್ಮಶುದ್ಧಿ ಇಲ್ಲದವರನೆಂತು
ನಂಬುವನಯ್ಯಾ ಕೂಡಲಸಂಗಮದೇವಾ

–ಬಸವಣ್ಣ

ಅನೇಕ ಜನರು ದೇವರ ಒಲುಮೆಗಾಗಿ ಪೂಜೆ ಮಾಡುತ್ತಾರೆ, ವ್ರತಮಾಡುತ್ತಾರೆ, ಉಪವಾಸಮಾಡುತ್ತಾರೆ, ಜಾಗರಣೆ ಮಾಡುತ್ತಾರೆ, ದಿಂಡುರುಳು ಸೇವೆಸಲ್ಲಿಸುತ್ತಾರೆ, ಮುಳ್ಳಾವಿಗೆ ಕಾಯಕ ಮಾಡುತ್ತಾರೆ, ಕೆನ್ನೆಗೆ ಶಸ್ತ್ರಹಾಕುತ್ತಾರೆ, ಒಂಟಿಕಾಲಲ್ಲಿ ನಿಂತು ತಪಸ್ಸು ಮಾಡುತ್ತಾರೆ, ಸಾವಿರ ಸಲ ಪ್ರದಕ್ಷಿಣೆ ಹಾಕುತ್ತಾರೆ, ನೀರು ಸಹ ಮುಟ್ಟದೆ ಉಪವಾಸವಿರುತ್ತಾರೆ – ಹೀಗೆ ದೇವರ ಹೆಸರಿನಲ್ಲಿ ದೇವರ ಆಶೀರ್ವಾದ ಪಡೆಯಲು ನಾನಾ ರೀತಿಯಾಗಿ ದೇಹವನ್ನು ದಂಡಿಸುತ್ತಾರೆ. ಆದರೆ ಪಂಚೇಂದ್ರಿಯಗಳಿಗೆ ಅಧೀನರಾಗಿ ಕಾಮ, ಕ್ರೋಧ, ಮದ, ಮತ್ಸರಾದಿಗಳನ್ನು ಹೃದಯದಲ್ಲಿ ತುಂಬಿಕೊಂಡು ಅದಕ್ಕೆ ಸಂಬಂಧಿಸಿದಂತೆ ಮೋಸ, ದ್ವೇಷ, ಕುತಂತ್ರಗಳನ್ನು ಮಾಡುತ್ತಾ ಇರುವ ಜೀವನವನ್ನು, ಬಸವಣ್ಣನವರು ಹುತ್ತದ ಒಳಗಡೆ ವಿಷಸರ್ಪ ಯಾವುದೇ ತೊಂದರೆ ಇಲ್ಲದೆ ಇರುವಾಗ ಹುತ್ತವನ್ನು ಒಡೆದು ಪುಡಿ, ಪುಡಿ ಮಾಡಿದರೂ, ಹಾವಿಗೆ ಏನೂ ಆಗುವುದಿಲ್ಲ. ಆದುದರಿಂದ ಹುತ್ತವನ್ನು ಬಡಿದರೂ ಹಾವು ಸಾಯುವುದಿಲ್ಲ, ಕಷ್ಟ ತಪ್ಪುವುದಿಲ್ಲ. ಅದೇ ರೀತಿ, ವಿಷಸರ್ಪದಂತಿರುವ ದೋಷಾದಿಗಳನ್ನು ಹೃದಯದಲ್ಲಿ ತುಂಬಿಕೊಂಡು ದೇಹವನ್ನು ದೇವರ ಹೆಸರಿನಲ್ಲಿ ಎಷ್ಟು ದಂಡಿಸಿದರೂ ದೇವರು ಒಲಿಯುವುದಿಲ್ಲ ಎಂಬ ಮಾತನ್ನು, ಹುತ್ತವನ್ನು ದೇಹಕ್ಕೂ,

ದುಷ್ಟಸ್ವಭಾವಗಳನ್ನು ವಿಷಪೂರಿತ ಹಾವಿಗೂ ದೇಹದಂಡಿಸುವ ಪೂಜಾ ಮಾರ್ಗಗಳನ್ನು ಹುತ್ತವನ್ನು ಬಡಿಯುವುದಕ್ಕೂ ಈ ವಚನದಲ್ಲಿ ಹೋಲಿಸಿ, ದೇವರ ಒಲುಮೆ ಇಂತಹ ಮಾರ್ಗಗಳಿಂದ ಸಾಧ್ಯವಿಲ್ಲವೆಂಬುದನ್ನು ತಿಳಿಸಿದ್ದಾರೆ. ಪಂಚೇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡು ನಿಶ್ಚಲ ಮನಸ್ಸಿನಿಂದ ಮಾಡುವ ಧ್ಯಾನ ಶ್ರೇಷ್ಠ ಅದರಿಂದ ಮಾತ್ರ ದೇವರು ಒಲಿಯುವನು ಎಂಬುದು ಬಸವಣ್ಣನವರ ಬೋಧೆ.

■

## ೧೭೩

**ಹೊ**ತ್ತಾರೆ ಎದ್ದು ಕಣ್ಣ ಹೊಸೆಯುತ್ತ
ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ–ಮಕ್ಕಳಿಗೆಂದು
ಕುದಿದೆನಾದಡೆ ಎನ್ನ ಮನಕ್ಕೆ ಮನವೆ ಸಾಕ್ಷಿ!
'ಅಸನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ॥.

ಎಂಬ ಶ್ರುತಿಯ ಬಸವಣ್ಣನೋದುವನು ಎಂಬರು
ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು
ಓಲೈಸಿಹನೆಂದು ನುಡಿವರಯ್ಯಾ ಪ್ರಮಥರು
ಕೊಡುವೆನೆ ಉತ್ತರವನವರಿಗೆ? ಕೊಡಲಮ್ಮೆ!
ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯೂ,
ಸಲೆ ಕೈಕೂಲಿಯ ಮಾಡಿಯಾದಡೆಯೂ,
ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದಡೆ
ತಲೆದಂಡ! ಕೂಡಲಸಂಗಮದೇವಾ.

–ಬಸವಣ್ಣ

**ಬೆ**ಳಗಾಗ ಕಣ್ಣು ಹೊಸಕಿಕೊಂಡು ಏಳುತ್ತಿದ್ದಂತೆಯೇ ಸಾಮಾನ್ಯ ಜನರಿಗೆ ಮನೆಯ ಚಿಂತೆ, ಮಡದಿ ಮಕ್ಕಳ ಚಿಂತೆ, ದುಡಿದು ದ್ರವ್ಯಗಳಿಸುವ ಚಿಂತೆ. ಹೀಗೆ ತಮ್ಮ ಜೀವನದ ಲೋಕವ್ಯವಹಾರದ ಚಿಂತೆಯಿಂದಲೇ ದಿನವನ್ನು ಪ್ರಾರಂಭಿಸಿ, ದಿನವೆಲ್ಲಾ ಅದಕ್ಕಾಗಿಯೇ ಬಡಿದಾಡುತ್ತಾರೆ. ಇದು ಪರಶಿವನ ಹತ್ತಿರಕ್ಕೆ ಹೋಗುವ ಮಾರ್ಗವಲ್ಲ. ಆದ್ದರಿಂದ ಬಸವಣ್ಣನವರು ನಾನು ಮನಸ್ಸಾಕ್ಷಿಯಾಗಿಯೂ, ಎದ್ದವನೇ ನನ್ನ ಹೊಟ್ಟೆಗೆ, ನನ್ನ ಮಡದಿ ಮಕ್ಕಳಿಗೆ ಎಂದೂ ಕುದಿಯುವುದಿಲ್ಲ. ಹಾಗೆ

ಮಾಡಿದರೆ ಜನರು ಬಸವಣ್ಣನು ಇಷ್ಟೊಂದು ಸುಧಾರಣೆಯ ಮಾತು ಹೇಳ್ತಾನೆ. ಆದರೆ ಅವನು ಮಾತ್ರ ಊಟ, ಮಲಗುವಿಕೆ, ರತಿಸುಖ, ಭೋಜನ ಇವುಗಳಲ್ಲೇ ಮುಳುಗಿ ಕಾಲಕಳೆಯುತ್ತಾನೆ ಎಂದು ತಿಳಿಯುತ್ತಾರೆ. ಅಲ್ಲದೆ ಭವಿಯಾದ ಬಿಜ್ಜಳನ ಸಿಂಹಾಸನದ ರಕ್ಷಣೆಯಲ್ಲಿ ಕುಳಿತುಕೊಂಡು ತನ್ನ ಬೇಳೆ ಬೇಯಿಸಿಕೊಳ್ಳುತ್ತಾನೆ ಎಂದು ಅಗ್ಗವಾಗಿ ಮಾತನಾಡುತ್ತಾರೆ. ಆಗ ಅಂಥವರಿಗೆ ನಾನೇನು ಉತ್ತರ ಕೊಡಲು ಸಾಧ್ಯ? ಸಾಧ್ಯವಿಲ್ಲ. ಅದಕ್ಕಾಗಿ ಹೊಲೆಯರ ಮನೆಗಾದರೂ ಹೋಗಿ, ಅಲ್ಲಿ ಕೂಲಿ ಕೆಲಸ ಮಾಡಿಯಾದರೂ ದುಡಿದು ಬಂದ ಹಣದಿಂದ ಪರಮಾತ್ಮನ ನಿಲುವಿಗೆ ಸರಿಯಾಗುವ ರೀತಿಯಲ್ಲಿ ಸೇವೆ ಮಾಡುತ್ತೇನೆಯೇ ಹೊರತು, ನನ್ನ ಹೊಟ್ಟೆ ಹೊರೆಯಲು ಎಂದೂ ಬಡಿದಾಡುವುದಿಲ್ಲ. ದೇವರ ಸಾಕ್ಷಿಯಾಗಿ ನನಗಾಗಿ, ನನ್ನ ಜೀವನ ಸವೆಸುವುದಿಲ್ಲ. ಹಾಗೆ ಮಾಡಿದೆನಾದರೆ ದೇವರಾಣೆಯಾಗಿ ನನ್ನ ತಲೆಯನ್ನು ದಂಡವಾಗಿ ಕೊಡುತ್ತೇನೆ. ಹೀಗೆ ತಾನು ನಿಸ್ವಾರ್ಥಿಯಾಗಿ ಬದುಕುತ್ತೇನೆಂದು ಸಾರ್ವಜನಿಕವಾಗಿ, ದೇವರ ಹೆಸರಿನಲ್ಲಿ ಬಸವಣ್ಣ ಪ್ರಮಾಣ ಮಾಡಿ ಹೇಳಿದ್ದಾನೆ.

■

## ೧೭೪

**ಹೊ**ತ್ತಾರೆ ಎದ್ದು ಅಷ್ಟವಣಿಪತ್ರೆಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ,
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?
ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ
ತೊತ್ತುಗೆಲಸವ ಮಾಡು ಕೂಡಲಸಂಗಮದೇವನ.

–ಬಸವಣ್ಣ

**ಮಾ**ನವನು ದೇವರ ಪೂಜೆಮಾಡಬೇಕು. ನಿಜವಾದ ಭಕ್ತಿಯಿಂದ ಭಗವಂತನ ಪೂಜೆ ಮಾಡುವುದರಿಂದ ಜೀವನ ಸಾರ್ಥಕವಾಗುತ್ತದೆ. ಆದುದರಿಂದ ದಿನವೂ ಎದ್ದು ತಮ್ಮ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು, ನೀರು ತಂದುಕೊಂಡು, ಹೊತ್ತಾಗುವ ಮೊದಲೇ ಲಿಂಗವನ್ನು ಪೂಜಿಸಬೇಕು. ಅನಂತರ ಉಳಿದ ಕೆಲಸಗಳು. ದೇವರ ಪೂಜೆ ಮಾಡಿದರೆ ಆ ದಿನದ ಪೂಜೆಯನ್ನು ದೇವರಿಗೆ ಅರ್ಪಿಸುವ ಕರ್ತವ್ಯ ಮಾಡಿದಂತಾಗುತ್ತದೆ. ಆ ಮೇಲೆ ಮಾಡಿದರಾಯ್ತೆಂದು ಪೂಜೆಯನ್ನು ಮುಂದೂಡಬಾರದೆಂದು ಬಸವಣ್ಣನವರು ಹೇಳಿದ್ದಾರೆ. ಏಕೆಂದರೆ, ನಂತರ

ಏನಾಗುತ್ತದೆಯೋ ಯಾರಿಗೆ ಗೊತ್ತು. ಮನುಷ್ಯನ ಕೈಲಿ ಯಾವುದೂ ಇಲ್ಲ. ಯಾವ ಘಳಿಗೆಯಲ್ಲಾದರೂ ಮೃತ್ಯುವು ಮಾನವನನ್ನು ಯಾವ ರೂಪದಲ್ಲಾದರೂ ಕೊಂಡೊಯ್ಯಬಹುದು. ಆದುದರಿಂದ, ಹೊತ್ತಾಗುವುದಕ್ಕೆ ಮೊದಲೇ, ಸಾವು ಬಂದು ಒಯ್ಯುವ ಮೊದಲೇ ನೀನು ಮಾಡಬೇಕಾದ ಕೆಲಸವನ್ನು ಮಾಡಿ ಮುಗಿಸು. ಉದಾಸೀನ ಮಾಡಬೇಡ ಎಂಬ ಎಚ್ಚರಿಕೆಯ ಉಪದೇಶವನ್ನಿಲ್ಲಿ ಬಸವಣ್ಣನವರು ಕೊಟ್ಟಿದ್ದಾರೆ.

ಈ ವಚನದಿಂದ, ನಾವು ಭಗವಂತನ ಪೂಜೆಯನ್ನು ದಿನವೂ ತಡಮಾಡದೆ, ಆ ದಿನದ ಮೊದಲೇ ಮಾಡಬೇಕೆಂಬ ಅರಿವು ತಿಳಿಯುವುದಲ್ಲದೆ, ನಾವು ಮಾಡಲೇಬೇಕಾದ ಮುಖ್ಯ ಕೆಲಸಗಳನ್ನು ಮುಂದೂಡದೆ ಆಗಿಂದಾಗಲೇ ಮಾಡಿ ಮುಗಿಸಬೇಕು. ಇಲ್ಲದಿದ್ದಲ್ಲಿ ಆ ಕೆಲಸವನ್ನು ಮಾಡಲಾಗದಂತಹ ಅಸಹಾಯಕ ಪರಿಸ್ಥಿತಿ ಬಂದು, ಕೆಲಸ ಉಳಿಯಬಹುದು ಎಂಬ ತತ್ವವೂ ಈ ವಚನದಲ್ಲಿ ಅಡಗಿದೆ.

■

# ಶಿವ ಶರಣೆಯರು

ಲೇಖಕಿಯರು

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

೧೯೯೭

ಪ್ರಕಾಶಕರು

ಪೂಜ್ಯ ಲಿಂ. ಶ್ರೀ ಮಹಾಂತ ಶಿವಯೋಗಿಗಳ ೨೫ನೆಯ ವಾರ್ಷಿಕ
ಪುಣ್ಯಸ್ಮರಣೋತ್ಸವ ಹಾಗೂ ಶ್ರೀ ನೀಲಕಂಠ ಮಹಾಸ್ವಾಮಿಗಳ
ಪೀಠಾರೋಹಣ ರಜತ ಮಹೋತ್ಸವ ಸಮಿತಿ, ದುರದುಂಡೀಶ್ವರ ಮಠ,
ಮುರಗೋಡ

## ಆಶೀರ್ವಚನ

ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ. ನೀಲಕಂಠ ಮಹಾಸ್ವಾಮಿಗಳು ದುರದುಂಡೇಶ್ವರ ಮಠ, ಮುರಗೋಡ ಅವರ ಸನ್ನಿಧಿಯಿಂದ:

ಕನ್ನಡ ನಾಡು, ಧರ್ಮಸಂಸ್ಥಾಪಕರ ನೆಲೆವೀಡು. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಧರ್ಮ ಜಾಗೃತಿಗಾಗಿ ಸುಖೀಸಮಾಜ ನಿರ್ಮಾಣಕ್ಕಾಗಿ ಕ್ರಾಂತಿಯನ್ನೇ ಮಾಡಿದರು. ವೀರಶೈವ ಧರ್ಮಕ್ಕೆ ನೂತನ ಆಯಾಮವನ್ನೇ ತಂದು ಕೊಟ್ಟರು.

ಶೂನ್ಯ ಸಿಂಹಾಸನಾಧೀಶ್ವರ ಶ್ರೀ ಅಲ್ಲಮ ಪ್ರಭುದೇವರಾದಿಯಾಗಿ ಕಾಲ ಕಾಲಕ್ಕೆ ಮಹಾನ್ ಶಿವಯೋಗಿಗಳು, ಮಠಾಧೀಶ್ವರರು ಈ ದಿಶೆಯಲ್ಲಿ ಸಮಾಜ ಕಲ್ಯಾಣಕ್ಕಾಗಿ ತಪಸ್ಸುಗೈಯುತ್ತ ಬಂದಿದ್ದಾರೆ.

ಈ ಪರಪಂರೆಯಲ್ಲಿ ೨೦ನೆಯ ಶತಮಾನದಲ್ಲಿಯೇ ಪ್ರಖ್ಯಾತರಾದ ಮುರಗೋಡದ ದುರದುಂಡೇಶ್ವರ ಮಠದ ಶತಾಯುಷಿ ಜಂಗಮ ಪುಂಗವ ಲಿಂ. ಮಹಾಂತ ಮಹಾ ಶಿವಯೋಗಿಗಳನ್ನು ಉದಾಹರಿಸಬಹುದು.

ಭಕ್ತರ ಬಾಳಿನ ಬೆಳಕಾಗಿದ್ದ ಅವರು, ಲಿಂಗೈಕ್ಯರಾಗಿ ಇಂದಿಗೆ ೨೫ ಸಂವತ್ಸರಗಳು ಗತಿಸಿದ್ದರೂ ಅವರು ಈಗಲೂ ಪ್ರತ್ಯಕ್ಷ ಜೀವಿಸಿದ್ದಾರೆಂದು ಭಾಸವಾಗುತ್ತದೆ.

ನಮ್ಮ ಪರಮ ಪೂಜ್ಯ ಸದ್ಗುರುಗಳಾದ ಶ್ರೀ ಶ್ರೀ ಮಹಾಂತ ಮಹಾಶಿವಯೋಗಿಗಳು ಲಿಂಗೈಕ್ಯರಾದಂದಿನಿಂದ ಅವರ ಮಾಸಿಕ ಹಾಗೂ ವಾರ್ಷಿಕ ಪುಣ್ಯಸ್ಮರಣೋತ್ಸಗಳ, ರಥೋತ್ಸವಗಳ ಆಚರಣೆಯ ಮುಖಾಂತರ ಅವರ ಲೀಲೆಗಳನ್ನು ಪ್ರಚಾರ ಮಾಡಿಸುತ್ತಲೇ ಬಂದಿದ್ದೇವೆ.

ಈಗ ೨೫ನೆಯ ವಾರ್ಷಿಕ ಪುಣ್ಯ ಸ್ಮರಣೋತ್ಸವವನ್ನು ಪ್ರಭಾವ ಪೂರ್ಣವಾಗಿ, ವಿಶಿಷ್ಟ ರೀತಿಯಲ್ಲಿ ಆಚರಿಸಲು ಸತ್ ಸಂಕಲ್ಪ ಮಾಡಿ ಯೋಜನೆಗಳನ್ನೂ ಹಮ್ಮಿಕೊಂಡಿದ್ದು ವೀರಶೈವ ಧರ್ಮವನ್ನು ಕೇಂದ್ರವನ್ನಾಗಿಸಿಕೊಂಡು ೨೫ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದು ಯೋಜನೆಯ ಒಂದಂಶವಾಗಿದೆ. ಉತ್ಸವ

ಸಮಿತಿಯವರು ಸಮಗ್ರ ಯೋಜನೆಗಳನ್ನು ಅನುಷ್ಠಾನದಲ್ಲಿ ತಂದುದರಿಂದಾಗಿ ನಮ್ಮ ಸತ್ ಸಂಕಲ್ಪ ಈಡೇರಿದೆ. ನಾಡಿನ ಗಣ್ಯ ವಿದ್ವಾಂಸರು ವಿದುಷಿಯರು ಉನ್ನತ ವಿಚಾರ ಧಾರೆಯ ಶ್ರೇಷ್ಠ ತರಗತಿಯ ಗ್ರಂಥಗಳನ್ನು ರಚಿಸಿರುವುದು ನಮಗೆ ಸಂತೋಷವನ್ನುಂಟು ಮಾಡಿದೆ.

ಗ್ರಂಥ ಪ್ರಕಟಣೆಯ ಸಂಪೂರ್ಣ ಹೊಣೆಯನ್ನು ನಿರ್ವಹಿಸಿದ ಮಾನ್ಯ ಶ್ರೀ ರವೀಂದ್ರಸ್ವಾಮಿ ರಾಚಯ್ಯಸ್ವಾಮಿ ವಸ್ತ್ರದ ಇವರ ಭಕ್ತಿಯ ಕೊಡುಗೆ ಅಸಾಧಾರಣವಾದುದು. ಪೂಜ್ಯ ಶ್ರೀ ಮಹಾಂತ ಮಹಾಶಿವಯೋಗಿಗಳ ಕೃಪಾಪಾತ್ರರಾಗಿರುವ ಇವರ, ಇವರ ಬಳಗದವರ ಬದುಕು ಬಂಗಾರವಾಗಲಿ ಎಂದು ನಾವು ಹೃದಯಪೂರ್ವಕ ಹಾರೈಸುತ್ತೇವೆ.

ಪ್ರಸ್ತುತ 'ಶಿವಶರಣೆಯರು' ಗ್ರಂಥವನ್ನು ರಚಿಸಿಕೊಟ್ಟ ಪ್ರೊ. ಲಲಿತಾಂಬಾ ವೃಷಬೇಂದ್ರಸ್ವಾಮಿ ಧಾರವಾಡ, ಅವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ನಿವೃತ್ತಿ ಜೀವನದಲ್ಲೂ ಅವರ ಸಾಹಿತ್ಯ ಸೇವೆ ಮುಂದುವರಿದಿದೆ. ಶಿಕ್ಷಣ ಹಾಗೂ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲೂ ಹೆಸರು ಪಡೆದಿದ್ದಾರೆ. ಅತ್ಯುತ್ತಮ ವಾಗ್ಮಿಗಳೂ ಆಗಿದ್ದಾರೆ. ಪ್ರಮುಖ ಶಿವ ಶರಣೆಯರನ್ನು ಕುರಿತು ಸರಳ ಸುಂದರ ಶೈಲಿಯಲ್ಲಿ ಕೃತಿ ರಚಿಸಿರುವುದು ಒಂದು ವಿಶೇಷ. ಇವರ ಸಾಹಿತ್ಯಿಕ ಬದುಕು ಸಂಪದ್ಭರಿತವಾಗಲಿ ಎಂದು ಹಾರೈಸುತ್ತೇವೆ.

ಇತ್ಯಾ ಶಿಷಃ

■

## ಲೇಖಕರ ನುಡಿ

ನಮ್ಮ ಮಗ ಚಿ॥ ಶಿವಪ್ರಸಾದನು ಕುಟುಂಬ ಸಹಿತ ರಜೆಗಾಗಿ ಬಂದಾಗ, ಆತನ ಗೆಳೆಯ ಶ್ರೀ ಸೋಮಶೇಖರ ನಾಡಗೌಡ ಮತ್ತು ನಮ್ಮ ಯಜಮಾನರು (ಸನ್ಮಾನ್ಯ ಡಾ॥ ವೃಷಭೇಂದ್ರ ಸ್ವಾಮಿಯವರು) ಪ್ರವಾಸ ಕೈಕೊಂಡಿದ್ದೆವು. ಮುರಗೋಡ ಮಾರ್ಗವಾಗಿ ಬರುವಾಗ ಶ್ರೀ ಮಠಕ್ಕೆ, ಶ್ರೀಗಳ ದರ್ಶನಕ್ಕೆಂದು ಹೋದೆವು. ಶ್ರೀ ನೀಲಕಂಠ ಮಹಾಸ್ವಾಮಿಗಳು ಪೂಜ್ಯ ಮಹಾಂತ ಶಿವಯೋಗಿಗಳ ಪುಣ್ಯ ಸ್ಮರಣೋತ್ಸವ ನಮ್ಮ ಪೀಠಾರೋಹಣ ರಜತ ಮಹೋತ್ಸವ ನಿಮಿತ್ತ ೨೫ ಗ್ರಂಥಗಳನ್ನು ಪ್ರಕಟಿಸಬೇಕಾಗಿದೆ. ನೀವೂ ಒಂದು ಗ್ರಂಥ ಬರೆಯಿರಿ ಎಂದು ಅಪ್ಪಣೆ ಮಾಡಿದರು. ಅವರ ಆಶೀರ್ವಾಣಿಯು 'ನನಗೆ ಶಿವ ಶರಣೆಯರು' ಗ್ರಂಥ ರಚಿಸಲಿಕ್ಕೆ ಪ್ರೇರಣೆಯಾಯಿತು.

ಏಳು ಜನ ಶರಣೆಯರ ಕುರಿತು ವಿವರವಾಗಿ ಬರೆದಿರುವೆನು. ಆರು ಜನ ಶರಣೆಯರ ಕುರಿತು ಸಂಕ್ಷಿಪ್ತವಾಗಿ ಪರಿಚಯಿಸಿ, ಮಿಕ್ಕ ಶರಣೆಯರ ಹೆಸರುಗಳನ್ನು ಕೊಟಿದ್ದೇನೆ. ಗ್ರಂಥ ಬರೆಯುವೆನೆಂದು ಒಪ್ಪಿಕೊಂಡ ಮೇಲೆ ಸಂಪಾದಕರು ಆಗಾಗ ಓಲೆ ಬರೆದು ಬರವಣಿಗೆಗೆ ತಡೆಯಾಗದಂತೆ ನೋಡಿಕೊಂಡರು.ಸಂಪಾದಕರಾದ ಶ್ರೀ ಉಳವೀಶರು ನನ್ನ ಬಿ.ಇಡಿ. ಕಾಲೇಜಿನ ಹಳೆಯ ವಿದ್ಯಾರ್ಥಿಗಳು ಅವರು ಸಂಪಾದಕರಾಗಿ ಸೇವೆ ಸಲ್ಲಿಸುತ್ತಿರುವುದು ನನಗೆ ಅಭಿಮಾನ.

ಈ ಸೇವೆಯ ಭಾಗ್ಯವನ್ನು ಕರುಣಿಸಿದ ಸಮಿತಿಯವರಿಗೆ, ಪೂಜ್ಯ ಶ್ರೀ ಮ.ನಿ.ಪ್ರ. ನೀಲಕಂಠಪ್ಪ ಶ್ರೀಗಳಿಗೆ ನಾನು ಶಿ.ಸಾ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

■

# ಪರಿವಿಡಿ



■

# ೧. ಮಹಾದೇವಿಯಕ್ಕನ ಮಹತಿ

ಶರಣ ಶರಣೆಯರ ಜೀವನಗಳು ಸಮಾಜ ಸುಧಾರಣೆಗಳಲ್ಲಿ ಅಮೋಘ ಪಾತ್ರವಹಿಸಿವೆ. ಅವರ ವಚನಗಳು ಸಮಾಜಕ್ಕೆ ಮಾರ್ಗದರ್ಶನವನ್ನು ನೀಡುವುದಲ್ಲದೆ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳಾಗಿವೆ. ಶರಣ ಜೀವನದಲ್ಲಿ ಶ್ರೇಷ್ಠರಾದ ಅಣ್ಣ ಬಸವಣ್ಣ, ಅಕ್ಕ ಮಹಾದೇವಿ, ಪ್ರಭು ಅಲ್ಲಮ, ಇವರುಗಳು ಎಲ್ಲ ಕಾಲಕ್ಕೂ, ಎಲ್ಲ ಜನರಿಗೂ ತಮ್ಮ ಮಾರ್ಗದರ್ಶನದ ವಚನಗಳಿಂದ ಶ್ರೇಷ್ಠ ವ್ಯಕ್ತಿತ್ವದಿಂದ ಅಣ್ಣ, ಅಕ್ಕ ಮತ್ತು ಪ್ರಭುಗಳಾಗಿದ್ದಾರೆ.

ಅಕ್ಕ ಮಹಾದೇವಿ ಸಮಾಜ ಸುಧಾರಣೆಗೆಂದಾಗಲೀ, ಲೋಕದ ಡೊಂಕು ತಿದ್ದಲೆಂದಾಗಲೀ ಪ್ರಯತ್ನಿಸಲಿಲ್ಲ. ಆಕೆಯ ವಚನಗಳು ಹೆಚ್ಚಾಗಿ ಭಕ್ತಿ, ನಿಷ್ಠೆ, ಪರಮಾತ್ಮ, ಆತ್ಮ ಇವುಗಳ ಬಗ್ಗೆ ರಚಿತವಾಗಿವೆ. ಅಕ್ಕ ಮಹಾದೇವಿ ಒಂದು ಧರ್ಮದ ಅಥವಾ ಒಂದು ಮತದ ವ್ಯಕ್ತಿಯಲ್ಲ, ಎಲ್ಲ ಕಾಲದ, ಎಲ್ಲ ಧರ್ಮದ ಎಲ್ಲಾ ದೇಶದ ಜನರೂ ಅನುಸರಿಸಬಹುದಾದ ಅನೇಕ ಸದ್ಗುಣಗಳ ಖಣಿ, ಅದಕ್ಕಾಗಿಯೇ ಆಕೆ ಎಲ್ಲರಿಗೂ ಎಲ್ಲ ಕಾಲಕ್ಕೂ ಅಕ್ಕ. ಆಕೆಯ ವಿಷಯಗಳನ್ನು ಆಕೆಯ ಬಗ್ಗೆ ದೊರೆತಿರುವ ವಚನಗಳನ್ನೋ ಬರಹಗಳನ್ನೋ ಅವಲಂಬಿಸಿ ತಿಳಿದುಕೊಳ್ಳಬಹುದಾಗಿದೆ. ಅವುಗಳ ಆಧಾರದ ಮೇಲೆ ಜನರು ಆಕೆಯ ಜೀವನವನ್ನು ತಮ್ಮ ಬುದ್ಧಿಗೆ ಹಾಗೂ ಅನುಭವಕ್ಕೆ ಸಿಲುಕಿದ ರೀತಿಯಲ್ಲಿ ಚಿತ್ರಿಸಿದ್ದಾರೆ. ದೊರೆತ ಆಧಾರದ ಮೇಲೆ ಅನೇಕ ಊಹಾಪೋಹಗಳನ್ನು ಹೆಣೆದಿದ್ದಾರೆ, ದೊರೆತಿರುವ ಆಧಾರಗಳು ಎಷ್ಟರಮಟ್ಟಿಗೆ ಸತ್ಯವೋ, ಎಷ್ಟರಮಟ್ಟಿಗೆ ಮಿಥ್ಯವೋ ಯಾರಿಂದಲೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಈಗಿಂದೀಗ ನಡೆದ ಘಟನೆಗಳೇ ಒಬ್ಬರ ಬಾಯಿಂದ ಒಬ್ಬರಿಗೆ ಹೋಗುವುದರೊಳಗೆ ಕಾಗೆಯಂತೆ ಕಪ್ಪಾಗಿ ವಾಂತಿಮಾಡಿದನೆಂಬ ಸುದ್ದಿ ಮೂರು ಕಾಗೆಗಳನ್ನೇ ವಾಂತಿ ಮಾಡಿದನಂತೆ ಎಂದು ಹರಡುವಾಗ, ಎಂಟುನೂರು ವರ್ಷಗಳ ಹಿಂದಿನ ಸುದ್ದಿಯ ಬಗ್ಗೆ ಎಷ್ಟು ಸತ್ಯವಾದ ವಿಷಯಗಳು ಬರಬಹುದೋ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ವಚನಗಳನ್ನು ಬಿಟ್ಟರೆ ಅಕ್ಕನ ಕಾಲಕ್ಕೆ ಅತೀ ಸಮೀಪದಲ್ಲಿ ಸಿಕ್ಕುವ ಆಧಾರ, ನ್ಯಾಯ ನಿಷ್ಠುರನಾದ ಹರಿಹರನು ಬರೆದ ರಗಳೆ. ಇದು ಅಕ್ಕನ ಕಾಲದನಂತರ ಸುಮಾರು ಎಂಬತ್ತು

ವರ್ಷಗಳ ಮೇಲೆ ಬರೆದದ್ದು. ಹರಿಹರನು ಇದ್ದದನ್ನು ಇದ್ದಂತೆಯೇ ಚಿತ್ರಿಸುವ ಕವಿ ಎಂದುಕೊಂಡರೂ ಕವಿ ಕವಿಯೇ, 'ರವಿ ಕಾಣುದುದು ಕವಿ ಕಂಡ' ಎಂಬಂತೆ ಸಾಹಿತ್ಯದ ಚೌಕಟ್ಟಿನಲ್ಲಿ ವಿಷಯ ಜೋಡಣೆ ಮಾಡುವಾಗ ಓದುಗರ ಮೆಚ್ಚುಗೆ, ಜನ ಪ್ರಿಯತೆ ಗಳಿಸಲು ರೂಪಾಂತರ ಆಗಿಯೇ ತೀರುತ್ತದೆ. ಮೇಲ್ಲಾಗಿ ಕವಿಯೂ ಮನುಷ್ಯನೇ. ತಾನು ರಚಿಸುವ ಸಾಹಿತ್ಯದಲ್ಲಿ ತನ್ನ ಸ್ವಂತ ಅಭಿಪ್ರಾಯ ವಿಚಾರಗಳನ್ನು ಅಲ್ಲಲ್ಲಿ ಸೇರಿಸುವುದು ಸಹಜವೆ. ಆದುದರಿಂದ ಕವಿಗಳ ಬರಹಗಳಾಗಲೀ, ಪುರಾಣಗಳಾಗಲಿಎಷ್ಟರಮಟ್ಟಿಗೆ ಸತ್ಯಕ್ಕೆ ಹತ್ತಿರವಾಗಿವೆ ಎಂಬುದನ್ನು ನಿಖರವಾಗಿ ಹೇಳಲು ಅಸಾಧ್ಯ. ಒಟ್ಟಿನಲ್ಲಿ ಈಕೆ ಒಬ್ಬ ಮಹಾಶಿವಶರಣೆ. ನಶ್ವರನಲ್ಲದ ಈಶ್ವರನ ನಿಸ್ಸೀಮ ಭಕ್ತೆ. ಅವನ ಪದತಲದಲ್ಲಿ ತನ್ನನ್ನೇ ತಾನರ್ಪಿಸಿಕೊಂಡ ಜ್ಞಾನ ನಿಧಿ. ಪ್ರಪಂಚದ ಪ್ರಲೋಭನೆಗಳಲ್ಲಿ ಕೈಚಾಚಿ ಕರೆದರೂ ಮೈ ಒಡ್ಡದ ಮಹಾಧೀರೆ. ಯೌವ್ವನ, ಐಶ್ವರ್ಯ, ಸ್ಥಾನ, ಗೌರವಾದಿಗಳು ಪದತಲದಲ್ಲಿ ಬಿದ್ದರೂ ಕೌಮಾರ್ಯದಲ್ಲಿಯೇ ಅವುಗಳ ನಶ್ವರತೆಯನ್ನರಿತು ನಡೆದ ವೈರಾಗ್ಯ ನಿಧಿ. ಯಾವ ವಯಸ್ಸಿನಲ್ಲಿ ಉಳಿದವರಾರೇ ಆಗಿದ್ದರೂ ಪ್ರಲೋಭನೆಗಳಿಗೆ ಸುಲಭವಾಗಿ ಒಳಗಾಗಬಹುದಾಗಿತ್ತೊ ಆ ವಯಸ್ಸಿನಲ್ಲಿ ಪ್ರಲೋಭನೆಗಳನ್ನೆಲ್ಲಾ ತುಚ್ಛೀಕರಿಸಿ, ಮಾಯೆಯನ್ನು ದಾಟಿ ನಿರ್ಮಾಯೆಯನ್ನು ಮುಟ್ಟಿದ ಸಾಧ್ವಿ, ಈ ದಿಟ್ಟತನ. ಯೌವ್ವನದಲ್ಲಿಯೇ ನಿರ್ವಿಕಾರ, ಸುಖದ ಸುಪ್ಪತ್ತಿಗೆಯಲ್ಲಿಯೇ ವೈರಾಗ್ಯವನ್ನು ಪಡೆಯುವುದು ಅಸಾಮಾನ್ಯರಿಗೂ ಅಸಾಧ್ಯವೇ ಏಕೆ, ಇದೊಂದು ಅಪರೂಪದ ಉದಾಹರಣೆ. ಅಸಾಧ್ಯವನ್ನು ಸಾಧ್ಯವಾಗಿಸಿದ ನಿಸ್ಸೀಮೆ ಈಕೆ. ಮೈಯ ನಾಚಿಕೆಯನ್ನು ಯೌವ್ವನದಲ್ಲಿ, ಅದರಲ್ಲಿಯೂ ಹೆಣ್ಣಾದವಳು ತೊರೆಯುವುದು ಸುಲಭದ ಮಾತೇನಲ್ಲ. ಆಗಿನ ಸಮಾಜದ ಪರಿಸ್ಥಿತಿಯಲ್ಲಿ ಇಪ್ಪತ್ತನ್ನು ದಾಟಿದ ಹರೆಯದ ಹೆಣ್ಣು, ಸಮಾಜವನ್ನೇ ಎದುರಿಸಿ, ಹುಟ್ಟು ದಿಗಂಬರೆಯಾಗಿ, ನಟ್ಟಡವಿಯಲಿ ಒಂಟಿಯಾಗಿ ಅಲೆದು, ಗುರಿಯನ್ನು ಮುಟ್ಟಿದುದು ಅದ್ಭುತದ ಸಂಗತಿಯಲ್ಲದೆ, ಆಕೆ ಅಸಾಮಾನ್ಯ ವ್ಯಕ್ತಿ; ದೈವಾಂಶ ಸಂಭೂತೆ ಎಂಬ ವಿಷಯವನ್ನು ಪುಷ್ಟೀಕರಿಸುತ್ತದೆ.

ಅಕ್ಕನ ವಚನಗಳಲ್ಲಿ ಕೊಟ್ಟಿರುವ ಉಪಮೆಗಳು, "ಹೇಳುವ ಅರ್ಥವನ್ನು ಪುಷ್ಟೀಕರಿಸಿ ವಿಷಯಗಳನ್ನು ಸುಲಭಗ್ರಾಹ್ಯವಾಗುವಂತೆ ಮಾಡಿದೆ. ಎಲ್ಲ ಉಪಮೆಗಳು ಜೀವಂತ ಉಪಮೆಗಳು. ದಿನ ದಿನದ ಲೋಕಾನುಭದಿಂದ ನೇರವಾಗಿ ಸೆಳೆದುಕೊಂಡವುಗಳು" ಅಕ್ಕನ ವಚನಗಳಿಂದ ಆಕೆಯ ಗುಣ, ಶೀಲ, ಸ್ವಭಾವ ಚಾರಿತ್ರ್ಯಗಳ ಕಲ್ಪನೆ ಪಡೆಯಬಹುದಾಗಿದೆ. ಪ್ರಭುದೇವರೊಡನೆ ಸಂವಾದದಲ್ಲಿ ಆಕೆಯು, ಶೂನ್ಯ ಸಿಂಹಾಸನಾಧೀಶ್ವರನೂ, ಬಸವೇಶ್ವರನ ಗೌರವ, ಪೂಜ್ಯತೆಗಳಿಗೆ ಪಾತ್ರನೂ ಆದ ಅಲ್ಲಮಪ್ರಭುವಿಗೇ ಮೆಚ್ಚುಗೆ ಎನಿಸುವ ಉತ್ತರ ಕೊಟ್ಟು ಎಲ್ಲರ ದೃಷ್ಟಿಯಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ಉನ್ನತಿಸಿದ್ದಾಳೆ.

ಇಂಥಹ ಉನ್ನತ ಶೀಖಾಮಣಿಯಾದ ಅಕ್ಕನ ಬಗ್ಗೆ ಎಲ್ಲರೂ ತಿಳಿಯುವುದು ಅವಶ್ಯಕ. ವಿಧವಿಧವಾದ ಕಥೆಗಳು ಆಕೆಯ ಬಗೆಗಿದ್ದರೂ ಮುಖ್ಯ ವಿಷಯದಲ್ಲಿ ಮಾತ್ರ ಎಲ್ಲವುಗಳಲ್ಲಿಯೂ ಏಕತೆ ಇದೆ. ಈಗ ಹರಿಹರನು ಬರೆದಿರುವ ರಗಳೆಗಳನ್ನೇ ತೆಗೆದುಕೊಳ್ಳೋಣ: ಅದರಲ್ಲಿ ಚಿತ್ರಿಸಿರುವಂತೆ ಅಕ್ಕಮಹಾದೇವಿ ಪಾರ್ವತಿಯ ಒಡ್ಡೋಲಗದಲ್ಲಿದ್ದ ಮಹಾದೇವಿ ಎಂಬ ರುದ್ರಕನ್ನಿಕೆ. ಒಮ್ಮೆ ಪರಮೇಶ್ವರನಿಂದ ಕಳಿಸಲ್ಪಟ್ಟ ಗುಪ್ತಗಣನಾಥನು ಪಾರ್ವತಿಯ ಓಲಗಕ್ಕೆ ಬಂದು ಆಕೆಗೆ ನಮಸ್ಕರಿಸುವಾಗ ಅವನ ಕಾಲು ಈ ರುದ್ರಕನ್ನಿಕೆಗೆ ತಗಲುತ್ತದೆ. ಇದರಿಂದ ಕುಪಿತಳಾದ ಮಹಾದೇವಿಯೂ "ಭವೀ ನೋಡಿ ನಮಸ್ಕರಿಸು" ಎಂದು ನಿಂದಿಸುತ್ತಾಳೆ. ಶಿವನ ಭಕ್ತರಿಗೆ "ಭವಿ" ಎಂಬುದಕ್ಕಿಂತ ಹೀನವಾದ ಶಬ್ದ ಮತ್ತೊಂದಿಲ್ಲ; ಶಿವನ ಪರಮಭಕ್ತನಾದ ತನ್ನನ್ನು "ಭವಿ" ಎಂದು ಕರೆದುದ್ದಕ್ಕಾಗಿ ಕಾದ ಎಣ್ಣೆಯಲ್ಲಿ ಹಾಕಿ ಕುದಿಸಿದಷ್ಟು ನೊಂದುಕೊಳ್ಳುತ್ತಾನೆ; ಗಣನಾಥ. ಅವನಸಂಕಟವನ್ನು ನೋಡಿ ಮಹಾಮಾತೆಯಾದ ಪಾರ್ವತಿಗೆ ಕನಿಕರವಾದುದಲ್ಲದೆ, ರುದ್ರಕನ್ನಿಕೆಯ ಮುಂಗೋಪಕ್ಕೆ ಸಿಟ್ಟೂ ಬರುತ್ತದೆ. "ನೀನು ಮರ್ತ್ಯದಲ್ಲಿ ಶಿವಭಕ್ತೆಯಾಗಿ ಹುಟ್ಟಿ, ಭವಿಗೆ ಹೆಂಡತಿಯಾಗಿ, ಶ್ರೀಶೈಲಕ್ಕೆ ತೆರಳಿ ನಂತರ ಇಲ್ಲಿಗೆ ಬಾ" ಎಂದು ಶಪಿಸುತ್ತಾಳೆ. ರುದ್ರ ಕನ್ನಿಕೆಗೆ ತಾನು ಮರ್ತ್ಯದಲ್ಲಿ ಜನಿಸಿ ಜಗನ್ಮಾತೆಯಿಂದ ದೂರವಿರಬೇಕಾದ ದುಃಖದ ಜೊತೆಗೆ "ಭವಿ"ಯ ಪತ್ನಿಯಾಗಬೇಕಾದ ಪರಿಸ್ಥಿತಿ ನುಂಗಲಾರದ ತುತ್ತಾಗುತ್ತದೆ, ಆದರೆ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತ ಅನುಭವಿಸಲೇಬೇಕು. ಅದಕ್ಕಾಗಿ ಶಿವಭಕ್ತ-ಶಿವಭಕ್ತೆಯರ ಮುದ್ದಿನ ಮಗಳಾಗಿ ಉಡುತಡಿಯಲ್ಲಿ ಜನ್ಮ ತಾಳುತ್ತಾಳೆ. ಪೂರ್ವ ಸಂಸ್ಕಾರದಿಂದ ಈಕೆ ಬಾಲ್ಯದಿಂದಲೇ ಶಿವಭಕ್ತಿ ಸಂಪನ್ನಳಾಗಿರುತ್ತಾಳೆ. ಸದಾ ಶಿವಧ್ಯಾನ-ಶಿವಪೂಜೆಯಲ್ಲಿಯೇ ಮಗ್ನಳಾಗಿರುತ್ತಾಳೆ. "ಬೆಳೆಯುವ ಸಸಿಯನ್ನು ಮೊಳಕೆಯಲ್ಲಿಯೇ ನೋಡು" ಎಂಬಂತೆ ಬಾಲ್ಯದಿಂದಲೇ ಶಿವಶರಣೆಯ ಲಕ್ಷಣಗಳೆಲ್ಲ ಈಕೆಯಲ್ಲಿದ್ದವು. "ಲಿಂಗಪತಿ ಶರಣಸತಿ" ಎಂಬ ಶರಣರ ಬೀಜಮಂತ್ರವು ಈಕೆಯ ಮನಸ್ಸಿಗೆ ತುಂಬಾ ನಾಟಿತು. ಚೆನ್ನಮಲ್ಲಿಕಾರ್ಜುನನು ತನ್ನ ಪತಿ, ಸಾಮಾನ್ಯವಾಗಿ "ಸಾವ ಕೆಡುವ ಗಂಡರನ್ನು" ತಾನು ಮಾಡಿಕೊಳ್ಳುವುದಿಲ್ಲೆಂಬ ನಿರ್ಧಾರದ ಸಸಿಯನ್ನು ಬಾಲ್ಯದಿಂದಲೇ ನೀರೆರೆದು ಪೋಷಿಸಿದಳು. ಇಂಥಹ ಭಾವನೆಗಳನ್ನೇ ರಕ್ತಗತ ಮಾಡಿಕೊಳ್ಳುತ್ತ ಪ್ರೌಢ ತರುಣಿಯಾದಳು, ನವಯೌವನದಿಂದೊಡಗೂಡಿ, "ಇದಾವ ಕಾಮುಕರಂ ಕೀಳ್ ಮಾಡಲಿರ್ದಪುದು ಇದಾವ ರಸಿಕರ ಭಾವವಂ ಬರಿಕೈಯಲಿರ್ದಪುದು. ಇದಾವ ಸಜ್ಜನರಂ ನೀತಿಗೆಡಿಸಲಿರ್ದಪುದು" ಎಂದು ಅಚ್ಚರಿ ಪಡುವಂತೆ ಬೆಳೆದು ನಿಂತಳು.

ಇಂದು ಗ್ರಾಮವಾಗಿ ಉಳಿದಿರುವ "ಉಡತಡಿ"ಯು ಅಂದು ಕೌಶಿಕನೆಂಬ ಅರಸನ ರಾಜಧಾನಿಯಾಗಿತ್ತು. ಒಮ್ಮೆ ರಾಜನು ವೈಹಾಳಿ(ಮೆರವಣಿಗೆ)ಯಿಂದ

ಹಿಂತಿರುಗಿ ಅರಮನೆಗೆ ಹೋಗುತ್ತಿರುವಾಗ ರಾಜನ ದರ್ಶನಾರ್ಥ ನಿಂತ ಜನರ ಸಮೂಹದಲ್ಲಿ ಷೋಡಶ ಕಳೆಗಳಿಂದ ಕಂಗೊಳಿಸುತ್ತಿದ್ದ ಮಹಾದೇವಿ ರಾಜನ ದೃಷ್ಟಿಗೆ ಬಿದ್ದಳು. ಅವಳ ದಿವ್ಯ ರೂಪವನ್ನು ಕಂಡು ಮೋಹಿತನಾಗಿ ಆಕೆಯಂಥಹ ರೂಪರಾಶಿ ತನ್ನರಮನೆಯಲ್ಲಿರದಿದ್ದರೆ ತನ್ನ ಅಂತಃಪುರಕ್ಕೆ ನ್ಯೂನತೆ ಎಂದು ಯೋಚಿಸಿ ಆಕೆಯನ್ನು ವಿವಾಹ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿಯೇ ತನ್ನ ಅರಮನೆಯನ್ನು ಪ್ರವೇಶಿಸುತ್ತಾನೆ. ಎಂಟುನೂರು ವರ್ಷಗಳ ಹಿಂದೆ ರಾಜನ ಅಭಿಲಾಷೆಯನ್ನು ವಿರೋಧಿಸುವವರಾರು? ತಡೆಹಿಡಿಯುವವರಾರು ! ಯುಕ್ತಾಯುಕ್ತವೋ ಧರ್ಮಾಧರ್ಮವೋ ವಿಚಾರಿಸುವಂತಿಲ್ಲ. ಪ್ರಜೆಗಳು ರಾಜಾಜ್ಞೆಗೆ ತಲೆಬಾಗಲೇಬೇಕು. ವಿಜಯನಗರದ ಅರಸರು ಆಳುವ ಕಾಲದಲ್ಲೇ 'ರಾಜನು' ಹೇಳಿ ಕಳುಹಿಸಿದನೆಂದು ಬಂಡೆ ಬೆನ್ನು ಮೇಲೆ ಹೊತ್ತು ನಿಲ್ಲಬೇಕೆಂದು ರಾಜನ ಕಡೆಯ ಒಬ್ಬ ಅಧಿಕಾರಿ ಕೇಳಿದರೆ, ಕಾರಣವನ್ನು ಕೆಳದೆಯೇ ಪ್ರಜೆಗಳು ಆಗಿನ ಕಾಲದಲ್ಲಿ ಮರುಮಾತಿಲ್ಲದೆ ಬಂಡೆ ಹೊತ್ತು ನಿಲ್ಲುತ್ತಿದ್ದರಂತೆ! ಎಂದಮೇಲೆ ಅದಕ್ಕೂ ಶತಮಾನಗಳು ಮೊದಲು ರಾಜನ ದಬ್ಬಾಳಿಕೆಗೆ ಮಿತಿ ಎಲ್ಲಿಯದು? ರಾಜನ ಮನಸ್ಸಿಗೆ ಬಂದುದು ನಡೆಯಲೇ ಬೇಕು, ಎಂತಲೇ ಮರುದಿನವೇ ಅಕ್ಕಮಹಾದೇವಿಯ ತಂದೆತಾಯ್ಗಳಿಗೆ ರಾಜನ 'ಅಭಿಲಾಷೆ'ಯ ಸುದ್ದಿ ಬಂದಿತು, ಅವರುಗಳಾದರೋ ಕಟ್ಟಾ ಶಿವಭಕ್ತರು. ಕೌಶಿಕನಾದರೋ ಭವಿ! ರಾಜಾಜ್ಞೆ ಮೀರುವಂತಿಲ್ಲ, ಉಗುಳಲೂ ಆಗದ, ನುಂಗಲೂ ಬಾರದ ಪರಿಸ್ಥಿತಿ. ಮಹಾದೇವಿಯಾದರೋ ಮಲ್ಲಿಕಾರ್ಜುನನೇ ಗಂಡನೆಂದು ಭಾವಿಸಿ ಬೆಳೆದವಳು. ಉಳಿದ ಶಿವಭಕ್ತರನ್ನೂ ವರಿಸಲು ಮನಸ್ಸಿಲ್ಲದ ಆಕೆ 'ಭವಿ'ಯನ್ನು ವರಿಸಲು ಒಪ್ಪಬಹುದೆ? ಆದರೆ ವಿಧಿ ಇಲ್ಲ. ಒಪ್ಪಲೇಬೇಕಾದ ಪ್ರಸಂಗ. ಧರ್ಮಚಾರಿಗಳಿಗೆ ಶಿವಪೂಜೆ, ಶರಣದಾಸೋಹ, ಜಂಗಮ ಸೇವೆ ಮೊದಲಾದವುಗಳಿಗೆ ಭಂಗ ತರದಿದ್ದಲ್ಲಿ ವಿವಾಹಕ್ಕೆ ಸಮ್ಮತಿ ಎಂದು, ವಿವಾಹವಾದ ಮೇಲೂ ರಾಜ ಮೂರು ಸಾರಿ ತನ್ನ ವಚನಕ್ಕೆ ಮೀರಿ ನಡೆದರೆ ರಾಜನನ್ನೇ ತೊರೆದು ಹೋಗುವದಾಗಿ ಷರತ್ತುಗಳನ್ನು ಹಾಕುತ್ತಾಳೆ. ಕಾಮಾತುರನಾದ ರಾಜ ವಿವಾಹದ ನಂತರ ಎಲ್ಲವೂ ತನ್ನಿಚ್ಛೆಯಂತೆ ಮಾರ್ಪಡುವದೆಂದು ಭಾವಿಸಿ ಎಲ್ಲಾ ಷರತ್ತುಗಳಿಗೂ ಒಪ್ಪುತ್ತಾನೆ. ವಿವಾಹವಾಗುತ್ತದೆ. ಕೆಲವು ಕಾಲ ಕೌಶಿಕನ ಅರಸಿಯಾಗಿದ್ದು ನಂತರ ಅವನು ಮೂರು ತಪ್ಪುಗಳನ್ನು ಮಾಡಿದ ತಕ್ಷಣ ಸರ್ವವನ್ನು ತ್ಯಜಿಸಿ ವೈರಾಗ್ಯ ನಿಧಿಯಾಗಿ ಮಲ್ಲಿಕಾರ್ಜುನನ್ನು ಹುಡುಕಿಕೊಂಡು ಹೊರಡುತ್ತಾಳೆ. ಇದು ರಸವತ್ತಾಗುವಂತೆ ಹೆಣೆದಿರುವ ಕಥೆ, ಆದರೆ ಈಕೆಯ ವಿವಾಹ ಕೌಶಿಕನೊಡನೆ ಆಯಿತೆ ಇಲ್ಲವೆ ಅವನೊಡನೆ ವೈವಾಹಿಕ ಜೀವನ ನಡೆಯಿತೆ ಇಲ್ಲವೆ ಎಂಬ ಬಗ್ಗೆ ವಿವಿಧಾಭಿಪ್ರಾಯಗಳು ಇವೆ. ಆದರೆ ಈಕೆ ಮಾತ್ರ.

"ಸಾವಿಲ್ಲದ, ಕೇಡಿಲ್ಲದ, ರೂಪಿಲ್ಲದ, ಚೆಲುವಂಗಾನೊಲಿದೆನವ್ವಾ,
ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆ
ಎಲೆ ಅವ್ವಾ, ನೀನು ಕೇಳಾ ತಾಯೇ !
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು

ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ ಪ್ರಯತ್ನ ಮಾಡಿದಂತೆ ಈ ಸಾವ ಕೇಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಹೇಳಿರುವುದನ್ನು ನೋಡಿದರೆ ಮದುವೆ ಯಾಕೆಂದು ಒಪ್ಪಿಸಲು ತೋರುತ್ತದೆ. ಆದ್ದರಿಂದ ಆಕೆ ಕೌಶಿಕನೊಡನೆ ವಿವಾಹವಾದಳೆ? ವೈವಾಹಿಕ ಜೀವನ ನಡೆಸಿದಳೆ ಎಂಬ ಬಗ್ಗೆ ಊಹಾ-ಅಪೋಹಗಳಿಗವಕಾಶಗಳಿವೆ. ಅಕ್ಕನು ಕೌಶಿಕನ ಮನೆಯಲ್ಲಿದ್ದುದನ್ನು ಒಪ್ಪಿಕೊಂಡರೆ ಅವನೊಡನೆ ವಿವಾಹವಾದುದನ್ನೂ ಅವನೊಡನೆ ವೈವಾಹಿಕ ಜೀವನ ನಡೆಸಿದಳೆಂಬುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಅಂತಹ ನೇಮ ನಿಷ್ಠೆಯಲ್ಲಿ ಬೆಳೆದ ಆಕೆಗಾಗಲೀ, ಗೌರವಾನ್ವಿತರೂ,ಶ್ರೇಷ್ಠ ಶಿವಭಕ್ತರೂ ಆದ ಆಕೆಯ ತಂದೆ-ತಾಯಿಗಳಾಗಲೀ ವಿವಾಹ ಸಂಸ್ಕಾರವಿಲ್ಲದೆ ಅರಮನೆಯಲ್ಲಿ ವಿವಾಹವಾಗಿ ಧರ್ಮದ ಹಾಗೂ ಸಮಾಜದ ಒಪ್ಪಿಗೆಯ ಮುದ್ರೆಯೊತ್ತಿದ ಮೇಲೆ ಇರಲು ಒಪ್ಪಿರಲಾರರು. ಅಂದ ಮೇಲೆ, ಕಾಮಾಂಧನಾದ ಕೌಶಿಕನು ತನ್ನ ದೇಶದಲ್ಲೇ ಇದ್ದ ಪತ್ನಿಯೊಡನೆ ವೈವಾಹಿಕ ಜೀವನ ನಡೆಸದಷ್ಟು ವಿಚಾರಶೀಲನಾಗಿದ್ದ ಎನ್ನುವದಾದರೆ ಬಲವಂತವಾಗಿ ಆಕೆಯನ್ನು ವರಿಸಲು ಒತ್ತಾಯಿಸುವವನಲ್ಲ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಈ ದಿಶೆಯಲ್ಲಿ ಚರ್ಚಿಸುವುದು ವ್ಯರ್ಥವೆನಿಸುವುದು. ಆಕೆಯ ವಿವಾಹ ಕೌಶಿಕನೊಡನೆ ಆಗಿರಲಿ-ಆಗದಿರಲಿ ಆ ವಿಷಯ ವೈರಾಗ್ಯ ಲೋಕದಲ್ಲಿ ಅಕ್ಕನ ಸ್ಥಾನಮಾನವನ್ನು ಕಿಂಚಿತ್ತೂ ಕಿರಿದನ್ನಾಗಿ ಮಾಡಲಾರದು. ವಿವಾಹಕ್ಕೆ ಒಪ್ಪದೇ ಎಲ್ಲವನ್ನು ತೊರೆದು ಹೋಗಿದ್ದರೂ ಅದ್ಭುತ ಸಂಗತಿಯೆ! ವಿವಾಹವಾಗಿಯೂ ಅದರ ಕಾಲ್ತೊಡಕುಗಳನ್ನೆಲ್ಲಾ ಹರಿದೊಗೆದು, ಸಂಸಾರ ಬಂಧನಕ್ಕೆ ಸಿಕ್ಕಿಯೂ ಕಮಲ ಪತ್ರದ ಮೇಲಿನ ನೀರ ಹನಿಯಂತೆ ಅದಕ್ಕೇ ಅಂಟಿಕೊಳ್ಳದೆ ಮರಳಿ ಬರುವುದು ಮಹಿಮಾನ್ವಿತರಿಗಲ್ಲದೆ ಸಾಧಾರಣರಿಗೆ ಸಲ್ಲುವ ಮಾತಲ್ಲ. ಆ ಬಂಧನಕ್ಕೆ ಆಕೆಯನ್ನು ಸಿಲುಕಿಸಿದ ಸನ್ನಿವೇಶ ಅಕ್ಕನನ್ನು ಒರೆಗೆ ಹಚ್ಚಿದಂತಾಯ್ತು, ಚಿನ್ನಕ್ಕೆ ಪುಟವಿಟ್ಟಂತೆ ಆಕೆಗೆ ಮತ್ತಷ್ಟುಪ್ರಭೆಯನ್ನು ಕೊಟ್ಟಿತೇ ವಿನಾ ಯಾವ ರೀತಿಯಲ್ಲಿಯೂ ಅಕ್ಕನ ಮಹತಿಯನ್ನು ಕಡಿಮೆ ಮಾಡುವುದಿಲ್ಲ, ಆದುದರಿಂದ "ಭವಿ"ಯನ್ನು ವಿವಾಹವಾದಳೆಂಬ ಸಂಗತಿ. ಆಕೆಗೆ ಅವಮಾನ ಮಾಡಿತೋ ಎಂದು ಅದು ನಡೆದೇ ಇಲ್ಲ ಎಂದು ವಿಚಾರಿಸುವುದಕ್ಕಿಂತ ಅದು ವಿವಾದಗ್ರಸ್ತ ಎಂದು ವಿಚಾರ ಮಾಡುವುದು ಅಥವಾ ನಡೆದರೂ ಆಕೆಯ

ಘನತೆಯನ್ನು ಹೆಚ್ಚಿಸುತ್ತದೆ ಎಂಬ ದೃಷ್ಟಿಯಿಂದ ನೋಡುವುದು ಉತ್ತಮವಾಗಿ ತೋರುತ್ತದೆ.

ಅಂತೂ ಅಕ್ಕನು ಎಲ್ಲವನ್ನೂ ತ್ಯಜಿಸಿ ವಿರಾಗಿಣಿಯಾಗಿ, ದೇಹಮೋಹವನ್ನು ತೊರೆದು ಉಟ್ಟ ಬಟ್ಟೆಯನ್ನು ಬಿಸುಟಿ, ಹೊರಟಳು. ಅಲ್ಲಿಂದ ಕಲ್ಯಾಣಕ್ಕೆ ನಡೆದು ಶರಣರ ಸಂಗದಿಂದ ಮತ್ತಷ್ಟು ಜ್ಞಾನ ಸಂಪಾದನೆ ಮಾಡಿ ಅಲ್ಲಿ ಬಸವಾದಿ ಶರಣರ ಪ್ರೀತಿ, ಆದರ ಗೌರವಗಳಿಗೆ ಪಾತ್ರಳಾಗಿ ಶ್ರೀಶೈಲಕ್ಕೆ ತನ್ನ ಒಲುಮೆಯ ಚೆನ್ನ ಮಲ್ಲಿಕಾರ್ಜುನನ್ನು ಕಾಣಲು ಹೋಗಿ ಅಲ್ಲಿ ಬಯಲಾದಳು.

ಎಸ್. ವಿ. ಪಮೇಶ್ವರ ಭಟ್ಟರು ಹೇಳುವಂತೆ "ಆ ಜೀವ ಕೇವಲ ಜೀವವಲ್ಲ, ಜ್ಯೋತಿ, ಆ ದೇಹ ಕೇವಲ ದೇಹವಲ್ಲ ಹಣತೆ" ಎನ್ನಬೇಕು, ಆಕೆಯ ವಚನಗಳು ಆಣಿ ಮುತ್ತುಗಳು, ಇವುಗಳಿಂದ "ಮಹಾದೇವಿಯಕ್ಕ ಹೆಂಗಸಾದರೂ ಆಕೆಯಲ್ಲಿ ಲೋಕಾನುಭವ ಜ್ಞಾನ, ಅಂತರಂಗದ ಅನುಭವಜ್ಞಾನ ಬಹಳಸೊಗಸಾಗಿ ಮಿಳಿತವಾಗಿವೆ. ಬಸವಣ್ಣಾದಿಗಳಲ್ಲಿ ಕೂಡ ಕಂಡು ಬಾರದ ಅಪೂರ್ವ ಭಾವಗಳು ಕೆಲವು ಪ್ರಸಂಗಗಳಲ್ಲಿ ಮಿಂಚುವುವು" ಎಂಬ ಸಂಗತಿ ಕಂಡು ಬರುತ್ತದೆ.

ವೀರಶೈವರು ಲಿಂಗ ಧರಿಸದಿದ್ದವನನ್ನು "ಭವಿ" ಎಂದು ರೂಢಿಯಲ್ಲಿ ಕರೆಯುತ್ತಾರೆ, ಆದರೆ ಆಕೆ "ಭವಿ" ತನ್ನ ಹುಟ್ಟಿನಿಂದ ಬರುವುದಲ್ಲ, ವ್ಯಕ್ತಿಯ ಅಯೋಗ್ಯತನದಿಂದ ಬರುವುದು. ಎಂತಹವನು ಭವಿ ಎಂಬುದನ್ನು ಸರಳವಾಗಿ ಎಲ್ಲರಿಗೂ ಸುಲಭ ಗ್ರಾಹ್ಯವಾಗುವಂತೆ.

'ಕಾಮ ಒಂದನೆ ಭವಿ, ಕ್ರೋಧ ಎರಡನೆಯ ಭವಿ, ಲೋಭ ಮೂರನೆಯ ಭವಿ. ಮೋಹ ನಾಲ್ಕನೆಯ ಭವಿ,ಮದ ಐದನೆಯ ಭವಿ, ಮತ್ಸರ ಆರನೆಯ ಭವಿ, ಆಮಿಷ ಏಳನೆಯ ಭವಿ ಇಂತೀ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿ, ಭವಿ ಎಂಬುರು ತಮ್ಮಂತರಂಗದಲ್ಲಿದ್ದ ಲಿಂಗಾಂಗದ ಸಿದ್ಧಿಯನರಿಯದೆ ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳೆಂದು, ಜಲಕ್ಕೆ ಕನ್ನವನಿಕಿ ಉದಕ ತಂದು ಲಿಂಗಕ್ಕೆ ಮಜ್ಜನಕ್ಕೆರವ ಹಗಲುಗಳ್ಳರ ಮೆಚ್ಚುವನೇ ಚೆನ್ನಮಲ್ಲಿಕಾರ್ಜುನಾ ಎಂದು ತಿಳಿಸಿದ್ದಾಳೆ. ಶಿವಭಕ್ತನಾದವನು ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಗೆದ್ದಿರಬೇಕು. ಅಂದರೆ ಮಾತ್ರ ಅವನ "ಭವಿ"ತನ ಅಳಿಯುತ್ತದೆ ಎಂದು ತಿಳಿಸುವ ಈ ವಚನ ರಾಮಾನುಜಾಚಾರ್ಯರು "ಶೂದ್ರನಾರು" ನಿಜವಾದ "ಬ್ರಾಹ್ಮಣನಾ" ಎಂದು ತೋರಿಸಿ ಕೊಟ್ಟ ಕಥೆಯನ್ನು ನೆನಪಿಗೆ ತಂದುಕೊಡುತ್ತದೆ.

ಒಬ್ಬರ ಕಷ್ಟ ನೋವು ಇನ್ನೊಬ್ಬರಿಗೆ ಅನುಭವಿಸದೆ ಅರ್ಥವಾಗುವುದಿಲ್ಲ ಎಂಬ ವಿಚಾರವನ್ನು ದಿನನಿತ್ಯದ ಉದಾಹರಣೆಗಳಿಂದ ಸುಲಲಿತವಾದ ವಚನದಲ್ಲಿ ತಿಳಿಸಿದ್ದಾಳೆ.

"ಬಂಜೆ ಬೇನೆಯರಿಯಳು ಮಲತಾಯಿ ಮುದ್ದಬಲ್ಲಳೆ ನೊಂದನೋವ ನೋಯದವರಯೆತ್ತಬಲ್ಲರು ಚೆನ್ನಮಲ್ಲಿಕಾರ್ಜುನ ನೀನಿರದ ಅಲಗು ಒಡಲಲ್ಲಿ ಮುರಿದು ಹೊರಳುವವಳ..."ಹೀಗೆ ಹೃದಯ ವೇದ್ಯವಾಗುವಂತೆ ರಚಿಸುವ ಅಕ್ಕನ ವಚನಗಳು ಬಹುಹಿತ.

ಆಗಿನ ಕಾಲದಲ್ಲಿಯೂ 'ರತ್ನ'ವನ್ನು ರತ್ನವೆಂದು ಕಂಡುಕೊಳ್ಳಲಾಗದ ಬಹುಜನವಿದ್ದಿರಬೇಕು, ಒಳಿತಿನಲ್ಲಿಯೂ ಕೆಡುಕನ್ನೆ ಕಾಣುವ, ಅಕ್ಕನ ಔನ್ನತ್ಯವನ್ನು ಅರಿಯಲು ಅಸಮರ್ಥರಾದ ಅಸಂಖ್ಯಾತ ಮೂಢ ಜನ ಯೌವ್ವನದಲ್ಲೇ ದಿಗಂಬರೆಯಾಗಿ, ಶಿವಶರಣರೊಡನೆ ಸೌಹಾರ್ದತೆಯಿಂದಿರುತ್ತ ಕಾಡುಮೇಡೆನ್ನದೆ, ಹಗಲು ರಾತ್ರಿ ಎನ್ನದೆ ಭಯ, ಮೋಹ, ಸಂಕೋಚಗಳನ್ನೆಲ್ಲಾ ತೊರೆದು ವ್ಯವಹರಿಸುವುದನ್ನು ನೋಡಿ, ತಮ್ಮ ಮಟ್ಟದಲ್ಲಿಯೇ ಆ ಮಹಿಮಳನ್ನೂ ಅಳೆದಿರಬೇಕು. ಆಗ ಅಸಾಮಾನ್ಯ ವ್ಯಕ್ತಿಯಾದ ಅಕ್ಕ ಅದಕ್ಕಾಗಿ ದುಃಖಿಸದೆ ಅವರುಗಳ ವಿಚಾರಕ್ಕೆ ಬೆಲೆಕೊಡುವುದರಲ್ಲಿ ಅರ್ಥವಿಲ್ಲ ಎಂದು ಕೊಂಡಿರಬಹುದು.ಏನೇ ಆದರೂ ಕೊಳಚೆಯನ್ನು ಬಿಟ್ಟು ಮೇಲೆಳಲಾರದ ಜನರ ಅಭಿಪ್ರಾಯಗಳಿಗೆ ಸಿಟ್ಟು, ದುಃಖಪಡುವುದಕ್ಕಿಂತ, ಕೇಳಿಯೂ ಕೇಳದಂತೆ ಇರುವುದು ಮೇಲೆನಿಸಿ ಜೀವನವೇ ಹೀಗೆ, ಆದುದರಿಂದ ಬಂದುದನ್ನು ಎದುರಿಸಬೇಕಲ್ಲದೆ, ನೊಂದರೆ, ದುಃಖಪಟ್ಟರೆ ಉಪಯೋಗವಿಲ್ಲ ಎನಿಸಿದಾಗ,

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ !
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ!
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ!
ಚೆನ್ನ ಮಲ್ಲಿಕಾರ್ಜುದೇವ ಕೇಳಯ್ಯ, ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ ನಿಂದೆಗಳು ಬಂದೆಡೆ ಮನದಲ್ಲಿ ಕೋಪವತಾಳದೆ
ಸಮಾಧಾನಿಯಾಗಿರಬೇಕು"

ಎಂಬ ವಚನವನ್ನು ರಚಿಸಿರಬೇಕೆನ್ನಿಸುತ್ತದೆ. ಈ ವಚನವು ಗೀತೆಯಲ್ಲಿರುವ "ಸುಖೇ ದುಃಖೇ ಸಮೇಕೃತ್ವಾ" ಎಂಬ ನಿರ್ವಿಕಾರಿ ಮನೋಭಾವ ಬೆಳೆಸಿಕೊಳ್ಳಬೇಕೆಂಬ ತತ್ತ್ವವನ್ನು ನೆನಪಿಸುತ್ತದೆ. ಈಕೆಯ ಅರಿವು ತನ್ನ ಅನುಭವಕ್ಕೆ ಮೀರಿದುದು. ವೈರಾಗ್ಯ, ವಯಸ್ಸಿಗೆ ಮೀರಿದುದು, ಬಹುಶಃ ಕೌಶಿಕನು ಆಕೆಯ ದೇಹದ ಬಗ್ಗೆ ಮೋಹಗೊಂಡಾಗ ಅವನ ಕಾಮ ಪಿಪಾಸೆಗೆ ಜಿಗುಪ್ಸೆಗೊಂಡು ದೇಹದ ನಶ್ವರತೆ ಮತ್ತು ನ್ಯೂನತೆಗಳ ಬಗ್ಗೆ ವಿವರಿಸಿ, ಇಂತಹ ದೇಹದ ಬಗ್ಗೆ ಮೋಹಗೊಂಡು ಕೆಟ್ಟು ಹೋಗದೆ, ಪರಮಾತ್ಮನನ್ನು ಅರಿತು ಜೀವನ ಸಾರ್ಥಕ ಪಡಿಸಿಕೊ ಎಂದು ವಿವೇಕದ ಹಾದಿಯನ್ನು

"ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ
ಕೀವಿನ ಹಡಿಕೆ ಸುಡಲೀ ದೇಹವ, ಒಡಲವಿಡಿದು ಕೆಡದಿರು
ಚೆನ್ನಮಲ್ಲಿಕಾರ್ಜುನನರಿ ಮರುಳೆ"

ಎಂಬ ವಚನದಿಂದ ಮಾರ್ಗದರ್ಶನ ಮಾಡಲು ಪ್ರಯತ್ನಿಸಿದಂತೆ ತೋರುತ್ತದೆ. ಇದೆಲ್ಲಾ ನಿಜವಾದರೂ ಇಲ್ಲವೂ ತಿಳಿದಿದ್ದರೂ ಆ ಕೊಳಚೆಯಲ್ಲಿಯೇ ಹೊರಳಾಡುವ ಜನರೇ ಹೆಚ್ಚು, ಈ ಮಾರ್ಗದರ್ಶನದಲ್ಲಿ ನಡೆಯುವ ಶಕ್ತಿ, ಈ ಉಪದೇಶವನ್ನು ಪಾಲಿಸುವ ಯೋಗ್ಯತೆ ಎಷ್ಟು ಮಂದಿಗೆ ತಾನೆ ಇದೆ? ಇದರಿಂದ ಎಲ್ಲರಿಗೂ "ಅಕ್ಕ"ನಾಗಿ ಸದಾಕಾಲಕ್ಕೆ ಉಳಿಯುವ ಹಿರಿಯತನವನ್ನು ಪಡೆದಿದ್ದಾಳೆ, ಈ ತಪಸ್ವಿನಿ.

**ಮಾಯೆಯನ್ನು ಗೆದ್ದ ಮಹಾದೇವಿ**

ವಿರಾಗಿಣಿಯಾಗಿ ಹೊರಟ ನಂತರ ಅಕ್ಕನನ್ನೂ ಸಹ ಈ ಲೋಕಮಾಯೆ ಆವರಿಸಲು ಹವಣಿಸಿರಬೇಕು. ಅಲ್ಲದೆ ದೇವಾದಿ ದೇವತೆಗಳನ್ನೂ ಆವರಿಸುವ ಈ ಮಾಯೆಯ ಪ್ರಭಾವವನ್ನು ಗಮನಿಸಿ ಅದು ತನ್ನ ತಂಟೆಗೆ ಬರದಿರಲಿ ಎಂದು ಹಾರೈಸಲೆಂದು ಬೇಡಿ ಆಕೆಯೂ ಬವಣೆಗೆಟ್ಟಿರಬಹುದೆಂದು ಕೆಳಗಿನ ವಚನಗಳಿಂದ ತಿಳಿಯುತ್ತದೆ.

"ಹರಿಯ ನುಂಗಿತ್ತು ಮಾಯೆ, ಅಜನ ನುಂಗಿತ್ತು ಮಾಯೆ,
ಇಂದ್ರನ ನುಂಗಿತ್ತು ಮಾಯೆ ಚಂದ್ರನ ನುಂಗಿತ್ತು ಮಾಯೆ,
ಬಲ್ಲನೆಂಬ ಬಲುಗೈಯರ ನುಂಗಿತ್ತು ಮಾಯೆ,
ಅರಿವೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ,
ಈರೇಳು ಭುವನವನಾರಡಿಗೊಂಡಿತ್ತು ಮಾಯೆ,
ಚೆನ್ನಮಲ್ಲಿಕಾರ್ಜುನಯ್ಯ ಎನ್ನ ಮಾಯೆ ಮಾಣಿಸಾ ಕರುಣಿ"

ಎಂದು ಮಾಯೆಯ ಪ್ರಬಲ ಪ್ರಭಾವದಿಂದ ಬಿಡಿಸಲು ಚೆನ್ನಮಲ್ಲಿಕಾರ್ಜುನನಲ್ಲಿ ಮೊರೆ ಹೊಕ್ಕಿದ್ದಾಳೆ. ತನ್ನ ಆತ್ಮಶಕ್ತಿಯ ಅನೇಕ ಯೋಗಿಗಳು ಮಾಯೆಯ ಪ್ರಭಾವಕ್ಕೆ ಸಿಲುಕಿದುದನ್ನು ಗಮನಿಸಿದ ಈಕೆ ತಾನು ಮಾತ್ರ ಈ ಮಾಯೆಯ ಜಾಲಕ್ಕೆ ಸಿಕ್ಕಿ ಹಾಕಿಕೊಳ್ಳುವುದಿಲ್ಲವೆಂದು ಮಲ್ಲಿಕಾರ್ಜುನನ ಆಣೆಯಿಟ್ಟು ಈ ವಚನದಲ್ಲಿ ಹೇಳಿದ್ದಾಳೆ.

"ಬಿಟ್ಟೆನೆಂದರೆ ಬೀಡದೀ ಮಾಯೆ ಬಿಡದಿದ್ದರೆ ಬೆಂಬತ್ತಿತು ಮಾಯೆ
ಯೋಗಿಗೆ ಯೋಗಿಣಿಯಾಗಿತ್ತು ಮಾಯೆ,
ಸವಣಗೆ ಸವಣೆಯಾಯಿತ್ತು ಮಾಯೆ,
ಯತಿಗೆ ಪರಾಕಿಯಾಯಿತ್ತು ಮಾಯೆ,

ನಿನ್ನ ಮಾಯೆಗೆ ನಾನಂಜುವವಳಲ್ಲ ಚೆನ್ನಮಲ್ಲಿಕಾರ್ಜುನ ದೇವಾ. ನಿಮ್ಮಾಣೆ"

ಹೀಗೆ ಪ್ರಾರಂಭದಲ್ಲಿ ಈ ಪ್ರಪಂಚದ ಆಶಾಪಾಶಗಳಿಗೆ ಒಮ್ಮೊಮ್ಮೆ ಮನ ಹರಿದರೂ, ಅದನ್ನು ಸ್ತಿಮಿತಕ್ಕೆ ತಂದುಕೊಂಡು, ಸ್ಥಿರತೆಯನ್ನು ಕಂಡುಕೊಂಡಿದ್ದಾಳೆ. ಎಲ್ಲದರ ಬಗ್ಗೆ ನಿಜವಾದ ಅರಿವಾದ ಮೇಲೆ, ಈ ಲೌಕಿಕ ವ್ಯವಹಾರಗಳಲ್ಲಿ ಅಲಿಪ್ತರಾಗಿ ಅರಿಷಡ್ವರ್ಗಗಳಿಗೆ ದಾಸರಾಗಿದ್ದರೂ ದೇವರನ್ನು ತೃಪ್ತಿಗೊಳಿಸಲು ವೇದ, ಶಾಸ್ತ್ರ, ಪುರಾಣಗಳ ಮೂಲಕ ಪ್ರಯತ್ನಿವವರನ್ನು ನೋಡಿ ಈಕೆಗೆ ಹುಚ್ಚುತನವೆನಿಸುತ್ತದೆ. ಸುಲಭವಾಗಿ ದೇವನನ್ನೊಲಿಸುವ ಸರಳ ಮಾರ್ಗ ಬಿಟ್ಟು ಮನಸ್ಸನ್ನು ಹಿಡಿತದಲ್ಲಿ ಇಟ್ಟುಕೊಳ್ಳದೇ ಕೇವಲ ವೇದ,ಶಾಸ್ತ್ರ, ಪುರಾಣಗಳಲ್ಲಿ ಹೇಳಿರುವ ಧಾರ್ಮಿಕ ಆಚರಣೆಗಳನ್ನು ಮಾಡುವ ಜನರನ್ನು ನೋಡಿ, ಅವರ ಬಗೆಗೆ ಕನಿಕರಿಸಿ,

"ವೇದಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ
ನುಚ್ಚು ತೌಡು ಕಾಣಭೋ! ಇವ ಕುಟ್ಟಲೇಕೆ? ಅತ್ತಲಿತ್ತ
ಹರಿವ ಮನದ ಶಿರವನರಿದಡೆ ಬಚ್ಚಬರಿಯ
ಬಯಲು ಚೆನ್ನಮಲ್ಲಿಕಾರ್ಜುನ"

ಎಂದು ಪಾಮರರಿಗೆ ನಿಜಮಾರ್ಗತೋರಿಸಿದ್ದಾಳೆ ಮಹಾದೇವಿ. ಈ ಒಂದೇ ವಚನದಲ್ಲಿ ದೇವನೊಲುಮೆಯ ಬಗ್ಗೆ ಶರಣಮಾರ್ಗದಲ್ಲಿ ಹೇಳಿರುವ ತತ್ವಗಳನ್ನೆಲ್ಲಾ ಸಂಗ್ರಹಿಸಿದ್ದಾಳೆ. ವಚನ ಸಾಹಿತ್ಯದಲ್ಲಿ ಅಕ್ಕನ ಪ್ರತಿಭೆಯನ್ನು ಆಗಿನ ಕಾಲದಲ್ಲಿಯೇ ಮಹಾ ಶರಣರಾದ ಚೆನ್ನ ಬಸವಣ್ಣನವರು,

"ಅದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತುವಚನ
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದುವಚನ
ಅಜಗಣ್ಣನ ಐದು ವಚನಕ್ಕೆ ಚೆನ್ನಮಲ್ಲಿಕಾರ್ಜುನಯ್ಯನಮಹಾದೇವಿಯಕ್ಕನ
ಒಂದು ವಚನ ನಿರ್ವಚನ ಕಾಣಾ"

ಎಂದು ಕೊಂಡಾಡಿದ್ದಾರೆ. ಆಕೆಯ ವಚನಗಳಷ್ಟೇ ಮಹತ್ತರವಾದುದಲ್ಲ ಸ್ವತಃ ಅಕ್ಕನೇ ಚಿಕ್ಕವಳಾದರೂ ಹಿರಿತನದ ಗೌರವಕ್ಕೆ ಪಾತ್ರಳೆಂಬುದನ್ನು ಆಗಲೇ ಶರಣರೆಲ್ಲ ತಿಳಿದಿದ್ದರೆಂಬುದಕ್ಕೆ ಚೆನ್ನ ಬಸವಣ್ಣನವರ ಈ ಕೆಳಗಿನ ವಚನವೇ ಸಾಕ್ಷಿ.

ಅಜಕೋಟಿ ವರುಷದವರೆಲ್ಲರೂ ಹಿರಿಯರೇ? ಹುತ್ತೇರಿ
ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ನಡುಮುರಿದು

ಗುಡಗೂರಿ ತಲೆ ನಡುಗಿ ನೆರೆತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ
ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ? ಅನುವರಿದು
ಘನವ ತೀರಿಸಿ ಹಿರಿಯ ಕಿರಿದೆಂಬ ಭೇದವ ಮರೆದು ಕೂಡಲ
ಚೆನ್ನ ಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ
ಮಹಾದೇವಿಯಕ್ಕಂಗಾಯಿತ್ತು"

ಈ ವಚನವು ವರ್ಷಾನುಗಟ್ಟಲೆ ತಪಸ್ಸು ಮಾಡದವರಿಗಿಂತಲೂ, ಮನಸ್ಸಿನಲ್ಲಿ ಕೂದಲು ಹಣ್ಣಾಗಿ ತಲೆನಡುಗುತ್ತ ನಡುಬಾಗಿರುವ ಅನೇಕ ಅಜ್ಞಾನಿ ವಯೋವೃದ್ಧರಿಗಿಂತ ಜ್ಞಾನದಲ್ಲಿ ಹಣ್ಣಾದ ಅಕ್ಕಮಹಾದೇವಿಯೇ ಶಿವನಿಗೆ ಸಮವಾದ ಹಿರಿಯತನ ಪಡೆದವಳು ಎಂಬುದನ್ನು ಸೂಚಿಸುತ್ತದೆ.

**ಅಕ್ಕನ ಬದುಕು ನಂದಾದೀಪ**

ಮಹಾದೇವಿಯಕ್ಕನ ಮಾನವ ಇತಿಹಾಸದಲ್ಲಿಯೇ ಅಪರೂಪವಾದ ಬಾಳನ್ನು ಬಾಳಿ ಅಮರಳಾಗಿದ್ದಾಳೆ. ಎಂದೆಂದಿಗೂ ಅಕ್ಕನಾಗಿ ಉಳಿಯಬಲ್ಲವಳಾಗಿದ್ದಾಳೆ. ಅಕ್ಕಮಹಾದೇವಿಯಂತಹ ಪುಣ್ಯಜೀವಿ ಆಗಾಗ್ಗೆ ಹುಟ್ಟಲು ಸಾಧ್ಯವಿಲ್ಲ. ಒಮ್ಮೆಯ ಅವತಾರದಿಂದ ಸಾವಿರಾರು ವರ್ಷಗಳವರೆಗೆ ಕೋಟ್ಯಾಂತರ ಜನರು ಪ್ರಭಾವಿತರಾಗಿ ಬಾಳಲು ಸಾಧ್ಯ. ಆಕೆಯ ಬದುಕು ಎಲ್ಲರ ಬಾಳಿಗೂ ಯಾವಾಗಲೂ ನಂದಾದೀವಿಗೆ. ಇಂತಹ ಅಕ್ಕನ ಜೀವನ ಚರಿತ್ರೆಯನ್ನು ಅರಿಯುವುದು ಅವಳ ಪುಣ್ಯಸ್ಮರಣೆ ಮಾಡುವುದು ಮುಂದಿನ ಪೀಳಿಗೆಗೆ ಆಕೆಯ ಮಾರ್ಗದರ್ಶನ ಪಡೆಯಲು ಅನುವು ಮಾಡಿ ಕೊಡುವುದು ಎಲ್ಲರ ಕರ್ತವ್ಯ, ಎಲ್ಲ ಶರಣರ ವಚನಗಳಂತೆ "ಸುಲಿದ ಬಾಳೆಯ ಹಣ್ಣಿನಂದದಿ ಕಳೆದ ಸಿಗುರಿನ ಕಬ್ಬಿನಂದದಿ" ಎಲ್ಲರಿಗೂ ಸುಲಭವಾಗಿಯೂ ಸರಳವಾಗಿಯೂ, ಇರುವ ತಿಳಿಗನ್ನಡದ ಆಡುಮಾತಿನಲ್ಲಿ ರಚಿತವಾಗಿರುವ ಅಕ್ಕನ ವಚನಗಳನ್ನೋದುವುದರಿಂದ ಒಂದಲ್ಲ ಒಂದು ರೀತಿಯಾಗಿ ಒಮ್ಮೆಯಲ್ಲ ಒಮ್ಮೆ ಓದುಗರ ಮನಸ್ಸಿನ ಮೇಲೆ ಒಳ್ಳೆಯ ಪ್ರಭಾವ ಬೀರುದಿರಲು ಸಾಧ್ಯವಿಲ್ಲ. ಈಕೆಯ ಚರಿತ್ರೆ ಮನೆಮಾತಾಗಿ ಮನೆ ಮನೆಯನ್ನೂ ಮನ ಮನವನ್ನೂ ಬೆಳಗಲಿ.

■

## ೨. ಧೀಮಂತ ಶರಣೆ ಅಕ್ಕನಾಗಮ್ಮ

### ಅಕ್ಕನಾಮಗಮ್ಮನ ಇತಿವೃತ್ತ

ನಾಗಮ್ಮ, ಅಕ್ಕನಾಗಮ್ಮ, ನಾಗಲಾಂಬಿಕೆ, ನಾಗಾಂಬಿಕೆ, ನಾಗಾಯಿ ಮುಂತಾದ ಹೆಸರುಗಳಿಂದ ಪ್ರಸಿದ್ಧಳಾದ, ಅಕ್ಕನಾಗಮ್ಮನು ಪ್ರಭುದ್ಧಳೂ, ಶರಣ ತತ್ವವನ್ನು ಕರತಲಾಮಲಕ ಮಾಡಿಕೊಂಡಿದ್ದ ಧಿರೋದಾತ್ತ ಶರಣೆ. ಆಕೆಯ ಹೆಸರು ಸಾಂಸ್ಕೃತಿಕ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಈಕೆ ಹನ್ನೆರಡನೆಯ ಶತಮಾನದ ಮಹಾ ಶಿವಶರಣೆ. ಈಕೆಯ ಬಾಲ್ಯ ಹೇಗೆ ಕಳೆಯಿತೆಂಬ ಅಂಶ ಸಿಕ್ಕುವುದಿಲ್ಲ. ನಮಗೆ ಹೆಚ್ಚಾಗಿ ಈಕೆಯ ಬಗ್ಗೆ ತಿಳಿಯುವುದು ಬಸವಣ್ಣನ ಉಪನಯನ ಸಂಸ್ಕಾರದ ಘಟನೆಯ ಕಾಲದಿಂದ. ಉಪಲಬ್ದವಿರುವ ವೀರಶೈವ ಸಾಹಿತ್ಯ ಹಾಗೂ ವಚನಗಳಿಂದ. ಆಕೆ ಬಾಗೇವಾಡಿಯ ಒಂದು ಸುಸಂಸ್ಕೃತ ದೊಡ್ಡ ವಿದ್ಯಾವಂತ ಮನೆಯಲ್ಲಿ ಜನಿಸಿದಳು. ಆಕೆಯ ತಂದೆ ಕಾಶ್ಯಪ ಗೋತ್ರದ ಶೈವ ಬ್ರಾಹ್ಮಣನಾದ ಮಾದರಸ ಮತ್ತು ತಾಯಿ ಮಾದಲಾಂಬಿಕೆ. ಈಕೆಯ ತಮ್ಮನೇ ಜಗತ್ಪ್ರಸಿದ್ಧನಾದ ಬಸವಣ್ಣ. ಈಕೆಯು ಸುಮಾರು ಕ್ರಿ.ಶ.೧೧೧೯ರಲ್ಲಿ ಜನ್ಮವೆತ್ತಿರಬಹುದೆಂದು ಸಾಹಿತ್ಯದ ಆಧಾರಗಳಿಂದ ಊಹಿಸಲಾಗಿದೆ. ಅದರಂತೆ ಬಸವಣ್ಣನವರ ಜನ್ಮ ವರ್ಷವನ್ನು ಕ್ರಿ.ಶ. ೧೧೩೨ಎಂದೂ ಊಹಿಸಲಾಗಿದೆ. ಈ ಊಹೆ ಸರಿಯಾಗಿದ್ದಲ್ಲಿ, ಬಸವಣ್ಣರಿಗಿಂತ ಹದಿಮೂರುವರ್ಷ ದೊಡ್ಡವಳಾಗಿರಬೇಕಾಗುತ್ತಿದೆ ನಾಗಮ್ಮ. ವಯಸ್ಸಿನ ಅಮತರದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇದ್ದರೂ ಈಕೆ ಬಸವೇಶ್ವರನಿಗಿಂತ ಹಿರಿಯಳು ಎಂಬ ಅಂಶ ನಿರ್ವಿವಾದ. ಈಕೆ ಬಸವಣ್ಣನಲ್ಲಿ ಹುದುಗಿದ್ದ ಕ್ರಾಂತಿಕಾರಕ ಸಮಾಜ ಸುಧಾರಣಾ ವಿಚಾರಗಳನ್ನೂ ಪ್ರತಿಭೆಯನ್ನೂ ಬಾಲ್ಯದಲ್ಲಿಯೇ ಗುರುತಿಸಿ, ಘೋಷಿಸಿ, ಪ್ರೋತ್ಸಾಹಿಸಿ, ಒಬ್ಬ ಶ್ರೇಷ್ಠ ವ್ಯಕ್ತಿಯಾಗಿ ರೂಪುಗೊಳ್ಳಲು, ಒಂದು ಮಹಾ ಶಕ್ತಿಯಾಗಿ ಹೊರಬರಲು, ಅಪರೂಪದ ಸಾಧನೆ ಸಾಧಿಸಲು ಸಹಾಯಕಳಾದ ಮಹಾಶಕ್ತಿ, ತಮ್ಮನ ಆದರ್ಶ ಗುಣಗಳನ್ನೂ ಮೆಚ್ಚಿದ, ಮಾರುಹೋದ, ಶರಣಾದ ಶಿವಶರಣೆ, ಅವಿರಳ ಜ್ಞಾನಿಯೆಂದು, ವಯಸ್ಸಿಗೆ ಮೀರಿದ ವೈರಾಗ್ಯ ಜ್ಞಾನ, ಪ್ರತಿಭೆ, ದಕ್ಷತೆಗಳನ್ನು ಹೊಂದಿ ಶರಣಾಗ್ರ ಗಣ್ಯನೆಂದು ಷಟ್‌ಸ್ಥಲ ಚಕ್ರವರ್ತಿ ಎಂದು ಪ್ರಖ್ಯಾತನಾದ ಚೆನ್ನಬಸವಣ್ಣನಿಗೆ ಜನ್ಮಕೊಟ್ಟ ಮಹಾತಾಯಿ. ಹೀಗೆ ಮೇರು

ಸದೃಶಳಾಗಿ ಶರಣ ಜೀವನವನ್ನು ಬಾಳಿದ, ಜಗತ್ತಿಗೆ ಮಾರ್ಗದರ್ಶನ ನೀಡಿದ. ಇಬ್ಬರು ಮಹಾವ್ಯಕ್ತಿಗಳನ್ನೂ ರೂಪಿಸಿದ ರೂವರಿ ಅಕ್ಕ ನಾಗಮ್ಮ.

ಬಸವಣ್ಣ, ಚೆನ್ನಬಸವಣ್ಣ, ಅಕ್ಕನಾಗಮ್ಮ ಇವರುಗಳ ಆದರ್ಶ ಉದಾತ್ತ.ವಿಚಾರ ಕ್ರಾಂತಿಕಾರಕ ಧೋರಣೆ, ಕರ್ತೃತ್ವ ಶಕ್ತಿಗಳೇ ವೀರಶೈವ ಧರ್ಮ, ಶರಣ ಪರಂಪರೆ ವ್ಯಾಪಕವಾಗಿ ಹರಡಲು, ಸಮಾಜದಲ್ಲಿ ಹಾಸುಹೊಕ್ಕಾಗಿ ಬೆರೆಯಲು ಕಾರಣವಾಯಿತೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಈಕೆ ಹನ್ನೆರಡನೆಯ ಶತಮಾನದ ಮೊದಲ, ಹಿರಿಯ ಶರಣೆ. ಈಕೆಯ ಪ್ರಭಾವದಿಂದ ಆಗಿನ ಅನೇಕ ಮಹಿಳೆಯರು ತಮಗೆ ತೊಡಿಸಿದ್ದ ಅನೇಕ ಶೃಂಖಲೆಗಳನ್ನು ಕಿತ್ತುಹಾಕಿ, ನಾಲ್ಕು ಗೋಡೆಗಳ ಒಳಗಿಂದ ಹೊರಬಂದು, ಸಮಾಜದ ಮುಂದೆ ತಮ್ಮ ಅನಿಸಿಕೆಗಳನ್ನು, ನಂಬಿಕೆಗಳನ್ನು ಧೈರ್ಯವಾಗಿ ಪ್ರತಿಪಾದಿಸಲು ಸಾಮರ್ಥ್ಯ ಪಡೆದರು, ದಿಟ್ಟತನದಿಂದ ಬದುಕಿದರು ಎಂದು ಹೇಳಬಹುದು.

**ಚನ್ನಬಸವಣ್ಣನ ಜನನ ಪ್ರಸಂಗ**

ಅಕ್ಕನಾಗಮ್ಮ ಬರೆದ ಹದಿನೈದು ವಚನಗಳು ದೊರೆತಿವೆ ಈಕೆಯ ವಚನಮುದ್ರಿಕೆ 'ಬಸವಣ್ಣ ಪ್ರಿಯ ಚೆನ್ನಸಂಗಯ್ಯ' ಎಂಬುದು. ಈ ವಚನಗಳಲ್ಲಿ ಹೆಚ್ಚಾಗಿ ಬಸವಣ್ಣನ ಬಗ್ಗೆ ಈಕೆಗಿದ್ದ ಮಮತೆ, ಮೆಚ್ಚುಗೆ ಪ್ರಶಂಸೆಗಳು ಎದ್ದು ಕಾಣುತ್ತವೆ. ಈಕೆಯೊಬ್ಬ ಅವುಭಾವಿ ಎಂಬ ಅಂಶವನ್ನೂ ವ್ಯಕ್ತ ಪಡಿಸುತ್ತವೆ. ಕೆಲವೊಂದು ಸಂದರ್ಭಗಳಲ್ಲಿ ಅವಳಿಗುಂಟಾದ ನೋವನ್ನೂ ವಚನಗಳ ಮೂಲಕ ಹೊರಹಾಕಿದ್ದಾಳೆ.

ಈಕೆಯ ವಿವಾಹ ಯಾವಾಗ ಯಾರೊಡನೆ ಆಯಿತೆಂಬುದನ್ನು ಸಿಂಗಿರಾಜನ ಪುರಾಣದ ಕಾಲದವರೆಗೆ ಯಾರೂ ಹೇಳಿಲ್ಲ. ಆದರೆ ಸಿಂಗಿರಾಜ ಪುರಾಣದಲ್ಲಿ ಶಿವಸ್ವಾಮಿ ನಾಗಲಾಂಬಿಕೆಯ ಗಂಡನೆಂದು ತಿಳಿದು ಬಂದಿದೆ. ಬಸವಣ್ಣನು ಉಪನಯನವನ್ನು ತಿರಸ್ಕರಿಸಿ, ವೀರಶೈವ ತತ್ವವನ್ನು ಪ್ರಸಾರಗೊಳಿಸುತ್ತಿದ್ದ, ವೀರಶೈವ ಕೇಂದ್ರವಾದ ಕೂಡಲಸಂಗಮಕ್ಕೆ, ಜಾತವೇದ ಮುನಿಗಳಿಂದ ಶಿಕ್ಷಣ ಪಡೆಯಲು ಹೋದ. ಆಗ ಆತನ ತಂದೆ–ತಾಯಿಗಳು ಅಲ್ಲಿಯೇ ಸಮೀಪದ ಗ್ರಾಮದಲ್ಲಿದ್ದ ಮಗಳು ನಾಗಲಾಂಬಿ ಮತ್ತು ಅಳಿಯ ಶಿವದೇವನಿಗೆ ಬಸವಣ್ಣನ ಯೋಗಕ್ಷೇಮವನ್ನು ನೋಡಿಕೊಳ್ಳುವ ಜವಾಬ್ದಾರಿ ವಹಿಸಿ ಹಿಂತಿರುಗಿದರೆಂದು ತಿಳಿಯಬರುತ್ತದೆ. ಹಿಂದಿನ ಗ್ರಂಥಕರ್ತರು ಚೆನ್ನಬಸವಣ್ಣನು ಅಕ್ಕನಾಗಮ್ಮನ ಮಗನೆಂದು ಹೇಳಿದರೇ ಹೊರತಾಗಿ ಅವನ ತಂದೆ ಯಾರು ಎಂಬುದನ್ನೂ ತಿಳಿಸಲೇಇಲ್ಲ. ಆದುದರಿಂದ, ಕವಿಗಳು ಚೆನ್ನಬಸವಣ್ಣನ ಜನ್ಮ ಪ್ರಸಂಗವನ್ನು ನಾನಾವಿಧವಾದ ಪವಾಡ ಸದೃಶ

ಕಟ್ಟುಕಥೆಗಳ ಮೂಲಕ ವರ್ಣಿಸಿದ್ದಾರೆ. ಕೆಲವರು ಬಸವನ ಪ್ರಸಾದದಿಂದ ಉದಯಿಸಿದನೆಂದೂ, ಮತ್ತೇ ಕೆಲವರು ಶಿವಪ್ರಸಾದ ಫಲದಿಂದ ಜನ್ಮತಾಳಿದನೆಂದು, ಮತ್ತೆ ಕೆಲವರುಶರಣರಲ್ಲೇ ಅತೀ ಶ್ರೇಷ್ಠನೆನ್ನಿಸಿದ ಕಕ್ಕಯ್ಯನ ಪ್ರಸಾದದಿಮದ ಹುಟ್ಟಿದನೆಂದು ಹೇಳಿದರೆ ಇನ್ನೂ ಮಹತ್ವ ಬರುವುದೆಂದು ಕಕ್ಕಯ್ಯನ ಪ್ರಸಾದದಿಂದ ಹುಟ್ಟಿದನೆಂದು ಹೇಳಿದ್ದಾರೆ. ಚೆನ್ನಬಸವಣ್ಣನು ಪ್ರತಿಭಾನ್ವಿತ ಜ್ಞಾನಿ, ವಯಸ್ಸಿಗೆ ಮೀರಿದ ಜ್ಞಾನ, ಬುದ್ಧಿವಂತಿಕೆ, ಅರ್ಥ ಗ್ರಹಣ ಶಕ್ತಿ, ನಿರ್ಣಯಿಸುವ ಸಾಮರ್ಥ್ಯ, ವೈರಾಗ್ಯಗಳನ್ನು ಪಡೆದುದರಿಂದ ಅಲೌಕಿಕ ರೀತಿಯಲ್ಲಿ ಅವನ ಜನ್ಮವಾಯಿತೆಂದು ಹೇಳುವ ಭರದಲ್ಲಿ ಗ್ರಂಥಕರ್ತರು ಪವಾಡ ಕಥೆಗಳನ್ನು ನಿರ್ಮಿಸಿದರು, ಜೊತೆಗೆ ಸಿಂಗಿರಾಜ ಪುರಾಣದಲ್ಲಿ ಬರುವ ವರೆಗೂ ಎಲ್ಲಿಯೂ ಅವನ ತಂದೆಯ ಹೆಸರು ಬರದಿದ್ದುದೂ ಇದಕ್ಕೆ ಕಾರಣ. ಶಿವದೇವನು ಶರಣರ ವಿಚಾರಗಳನ್ನು ಒಪ್ಪದೆ ದೂರಉಳಿದಿರಬಹುದು. ಹಾಗಾಗಿ ಶರಣರ ಜೀವನದಲ್ಲಿ ಒಡವೆರೆತ ತಾಯಿ ಶರಣೆ ಅಕ್ಕನಾಗಮ್ಮನ ಹೆಸರು ಮಾತ್ರ ಪ್ರಚಾರಕ್ಕೆ ಬಂದು ತಂದೆಯ ಹೆಸರಿಗೆ ಶರಣ ಜನಾಂಗ ಮಹತ್ವಕೊಟ್ಟಿರಲಿಕ್ಕಿಲ್ಲ. ಆದರೆ ಮುಂದೆ ಬಂದ ವಿದ್ವಾಂಸರು ಸಿಕ್ಕ ಸಾಹಿತ್ಯದ ಆಧಾರದ ಮೇಲೆ ತಮತಮಗೆ ತಿಳಿದಂತೆ ಚೆನ್ನಬಸವಣ್ಣನ ಜನ್ಮದ ಬಗ್ಗೆ ಅರ್ಥೈಸಲು ಪ್ರಾರಂಭಿಸಿದರು. (ರಾಜೀವ ಗಾಂಧಿ, ಸಂಜಯ ಗಾಂಧಿ ಇವರುಗಳು ಫಿರೋಜ್ ಗಾಂಧಿಯ ಮಕ್ಕಳೆಂದು ಪ್ರಸಿದ್ಧರಾಗಿರದೆ, ಇಂದಿರಾ ಗಾಂಧಿಯ ಮಕ್ಕಳೆಂದು ಪ್ರಸಿದ್ಧರಾಗಿರುವಂತೆ)

ಈ ಬಗ್ಗೆ ಶರಣ ಫ.ಗು. ಹಳಕಟ್ಟಿಯವರು ತರ್ಕಿಸಿರುವ ರೀತಿ ತುಂಬಾ ಶ್ಲಾಘನೀಯವೂ, ಸತ್ಯಕ್ಕೆ ಸಮೀಪವು ಆಗಿದೆ. ಈ ಕೂಡಲ ಸಂಗಮದ ಸಮೀಪವಿರುವ ಇಂಗಳೇಶ್ವರದಲ್ಲಿ, ನಾಗಲಾಂಬಿಕೆಯ ಗುಹೆ ಈಗಲೂ ಇದೆ. ಅಲ್ಲಿ ಒಂದು ಹೆಣ್ಣುಮೂರ್ತಿ ಇದೆ. ಅದು ನಾಗಲಾಂಬಿಕೆಯ ವಿಗ್ರಹವೆಂದು ಅಲ್ಲಿಯ ಜನರ ಹೇಳಿಕೆ. ಸಮೀಪದಲ್ಲಿ ರೇವಣ ಸಿದ್ಧೇಶ್ವರನ ಗುಹೆಯೂ ಇದೆ. ಸಾಮಾನ್ಯವಾಗಿ ಜನರು ಪ್ರಕಾಶನ ಪ್ರಸಿದ್ಧ ಸ್ಥಳಗಳನ್ನು ಮರೆಯುವುದಿಲ್ಲ. ಆದುದರಿಂದ ಆ ಗುಹೆಗಳಲ್ಲಿರುವ ವಿಗ್ರಹಗಳು ನಾಗಲಾಂಬಿಕೆ ಹಾಗೂ ರೇವಣ ಸಿದ್ಧೇಶ್ವರರದ್ದೇ ಇರಬೇಕೆಂದು ತರ್ಕಿಸಿದ್ದಾರೆ.

ಈ ಆಧಾರದಿಂದ ಅವಳ ಗಂಡನಾದ ಶಿವಸ್ವಾಮಿಯ ಗ್ರಾಮವು ಇಂಗಳೇಶ್ವರವಿರಬೇಕೆಂದೂ, ಚೆನ್ನಬಸವಣ್ಣ ಶಿವದೇವನ ಮಗನೆಂದೂ ಹೇಳುತ್ತಾರೆ. ಇಂಗಳೇಶ್ವರದಿಂದ ಕೂಡಲ ಸಂಗಮಕ್ಕೆ ಮಗನೊಡನೆ ಮೇಲಿಂದ ಮೇಲೆ ಹೋಗಿ, ಇವರುಗಳ ಹಾಗೂ ಬಸವೇಶ್ವರನ ಸಂಬಂಧ ಗಾಢವಾಗಿರಬೇಕೆಂದೂ ತರ್ಕಿಸಿದ್ದಾರೆ.

ಸಾಹಿತ್ಯದ ಆಧಾರದಿಂದ ತರ್ಕಿಸಿದರೆ ಬಸವಣ್ಣನಿಗೆ ಹನ್ನೆರೆಡು

ವರುಷಗಳಾದಾಗ ಎಂದರೆ ೧೧೪೪ರಲ್ಲಿ ಚೆನ್ನ ಬಸವಣ್ಣ ಹುಟ್ಟಿದ್ದಾನೆ. ಆಗ ಬಸವಣ್ಣ ಕಲ್ಯಾಣದಲ್ಲೂ ಇರಲಿಲ್ಲ; ಪ್ರಧಾನಿಯೂ ಆಗಿರಲಿಲ್ಲ ಕೂಡಲಸಂಗಮದಲ್ಲೇ ಇದ್ದ. ಆದುದರಿಂದ ಚೆನ್ನಬಸವಣ್ಣ ಕಲ್ಯಾಣದಲ್ಲಿ ಹುಟ್ಟಲಿಲ್ಲ ಎಂಬುದು ನಿರ್ವಿವಾದ.

ಶರಣರ ಕಕ್ಕಯ್ಯನವರ ಪ್ರಸಾದದಿಂದ ಹುಟ್ಟಿದನೆಂಬ ಮಾತು ಚೆನ್ನಬಸವಣ್ಣ ಕಕ್ಕಯ್ಯನವರ ಮಗ ಎಂಬ ಮಟ್ಟಿಗೆ ಜನ ತರ್ಕಿಸುವುದನ್ನು ಕುರಿತು ಫ.ಗು.ಹಳಕಟ್ಟಿಯವರು, ಬಸವಣ್ಣನು ಕಲ್ಯಾಣಕ್ಕೆ ಹೋಗಿ ಪ್ರಧಾನಿಯಾದಮೇಲೆ ಅಲ್ಲಿ ಕ್ರಾಂತಿಕಾರಕ, ಸಮಾಜ ಸುಧಾರಣ ಚಟುವಟಿಕೆಗಳನ್ನು ಮಾಡಿದ. ಆ ವಿಷಯಗಳು ದೇಶಾದ್ಯಂತ ಪಸರಿಸಿ, ನಾನಾಕಡೆಗಳಿಂದ ಭಕ್ತರು ಕಲ್ಯಾಣಕ್ಕೆ ಬಂದರು. ಹಾಗೆ ಬಂದವರಲ್ಲಿ ಮಾಳವ ದೇಶದಿಂದ ಬಂದ ಕಕ್ಕಯ್ಯನು ಒಬ್ಬ ಎಂದ ಮೇಲೆ ಬಸವಣ್ಣನು ಕಟ್ಟುಕತೆ ಬಂದಾಗ ಚೆನ್ನಬಸವಣ್ಣನು ಹುಟ್ಟಿ ಅನೇಕ ವರ್ಷಗಳಾಗಿದ್ದವು. ಆದುದರಿಂದ ಕಕ್ಕಯ್ಯನ ಪ್ರಸಾದದಿಂದ ಚೆನ್ನಬಸವಣ್ಣ ಹುಟ್ಟಿದ್ದು ಎಂಬುದು ಕೇವಲ ಕಟ್ಟು ಕಥೆ ಎಂದಿದ್ದಾರೆ. ಬಸವಣ್ಣನು ಕಲ್ಯಾಣದಲ್ಲಿದ್ದುದು ಕೇವಲ ಆರೆಂಟುವರ್ಷಗಳು. ಶರಣರ ಕ್ರಾಂತಿಯಾಗುವ ಹೊತ್ತಿಗೆ ಚೆನ್ನಬಸವಣ್ಣನಿಗಾಗಲೇ ಇಪ್ಪತ್ತನಾಲ್ಕು ವರ್ಷಗಳಾಗಿದ್ದವು. ಈ ಅಂಶಗಳಿಂದ ಚೆನ್ನಬಸವಣ್ಣ ಸಿಂಗಿರಾಜ ಪುರಾಣದಲ್ಲಿ ಹೇಳಿರುವಂತೆ ಶಿವಸ್ವಾಮಿ(ಶಿವದೇವ)ಯ ಮಗ ಎನ್ನುವ ವಿಚಾರ ಸ್ಥಿರವಾಗುತ್ತದೆ.

**ವಂಶಾವಳಿಯ ತಾಜಾ ದಾಖಲೆ**

ಈಚೆಗೆ ದೊರೆತಿರುವ ಇಂಗಳೇಶ್ವರದ ಕುಲಕರ್ಣಿಯವರ ವಂಶಾವಳಿಯ ನಕಲಿ (ಯಾವ ಸಂಶಯಕ್ಕೂ ಅವಕಾಶವಿಲ್ಲದಂತೆ, ಹತ್ತೊಂಬತ್ತನೆಯ ಶತಮಾನದ ಆದಿಯಲ್ಲೇ ಹಾಕಿರುವ ಮುದ್ದೇಬಿಹಾಳದ ಕೋರ್ಟಿನ ಮೋಹವಿರುವ ಪತ್ರದಿಂದ) ಶಿವದೇವನು ಬಸವಣ್ಣನ ತಾಯಿಯಾದ ಮಾದಲಾಂಬಿಕೆಯ ಅಣ್ಣ ಇಂಗಳೇಶ್ವರದ ನೀಲಕಂಠನ ಮಗನೆಂದೂ ಅವನಿಗೆ ಮಾದರಸ–ಮಾದಲಾಂಬೆಯರ ಮಗಳಾದ ನಾಗಕಲಾಂಬಿಕೆಯನ್ನು ತಂದುಕೊಂಡಿತ್ತೆಂದೂ, ಚೆನ್ನಬಸವಣ್ಣನು ನಾಗಲಾಂಬೆ ಹಾಗೂ ಶಿವರಾಯಿ(ಶಿವದೇವ))ನ ಮಗನೆಂದೂ ಬರೆಯಲಾಗಿದೆ. ಆದುದರಿಂದ ಈ ವಿಷಯದ ಚರ್ಚೆ, ತರ್ಕ, ಊಹೆ, ಸಂಶಯಗಳಿಗೆ ಆಸ್ಪದವಿಲ್ಲದೆ, ಚೆನ್ನಬಸವಣ್ಣನ ತಂದೆ ಶಿವದೇವ(ಶಿವರಾಯ, ಶಿವಸ್ವಾಮಿ)ಎಂದು ಯಾವ ಸಂಶಯವಿಲ್ಲದೆ ನಿರ್ಣಯಿಸಬಹುದು. ನಾಗಾಂಬಿಕೆಯ ಲಗ್ನವನ್ನೂ ಚಿಕ್ಕ ವಯಸ್ಸಿನಲ್ಲಿಯೇ ಮಾದಲಾಂಬೆಯು ತನ್ನ ತವರೂರಾದ ಇಂಗಳೇಶ್ವರದ ತನ್ನ ಅಣ್ಣನ ಮಗನಿಗೆ ಕೊಟ್ಟು ಮಾಡಿದ್ದಳು. ಬಸವಣ್ಣ ಕೂಡಲ ಸಂಗಮಕ್ಕೆ ಹೋದಾಗ ನಾಗಾಂಬಿಕೆ ಚಿಕ್ಕವನಾದ ತಮ್ಮನನ್ನು ನೋಡಲು ಹತ್ತಿರವಿದ್ದ ಸಂಗಮಕ್ಕೆ ಮೇಲಿಂದ ಮೇಲೆ

ಹೋಗುತ್ತಿದ್ದಳು. ನಂತರ ಚೆನ್ನಬಸವಣ್ಣ ನಾಗಾಂಬಿಕೆಯ ತವರೂರಾದ ಬಾಗೇವಾಡಿಯಲ್ಲೋ ಅಥವಾ ತನ್ನ ಗಂಡನ ಮನೆಯಾದ ಇಂಗಳೇಶ್ವರದಲ್ಲೋ ಹುಟ್ಟಿರಬೇಕು. ನಾಗಾಂಬಿಕೆಯು ಕೂಡಲ ಸಂಗಮಕ್ಕೆ ಮೇಲಿಂದ ಮೇಲೆ ಹೋಗುತ್ತಿದ್ದುದರಿಂದ ಜೊತೆಯಲ್ಲಿ ಮಗನಾದ ಚೆನ್ನಬಸವಣ್ಣನನ್ನು ಕರೆದುಕೊಂಡು ಹೋಗುತ್ತಿರಬೇಕು. ಹೀಗಾಗಿ ವೀರಶೈವದ ಪ್ರಭಾವ ಅತೀ ಚಿಕ್ಕ ವಯಸ್ಸಿನಿಂದಿಲೇ ದಟ್ಟವಾದ ಪರಿಣಾಮವನ್ನು ಚೆನ್ನಬಸವಣ್ಣನ ಮೇಲೆ ಬೀರಿರಬೇಕು. ಆದುದರಿಂದ ಆತನಿಗೆ ವಯಸ್ಸಿಗೆ ಮೀರಿದ ಆಧ್ಯಾತ್ಮ ಜ್ಞಾನ, ತಿಳುವಳಿಕೆ ಉಂಟಾಗುವುದು ಸಾಧ್ಯವಾಗಿದೆ. ನಂತರ ಇವರಿಬ್ಬರಿಗೂ ಬಸವಣ್ಣನ ಕಾರ್ಯದ ಬಗ್ಗೆ ಅತೀವ ಆಸಕ್ತಿ, ವೀರಶೈವ ತತ್ವದಲ್ಲಿ ಶ್ರದ್ಧೆ, ನಿಷ್ಠೆ ಬೆಳೆದು ಬಂದು, ಅವರಿಬ್ಬರೂ ಕೂಡಲ ಸಂಗಮದಲ್ಲೇ ಬಸವಣ್ಣನ ಜೊತೆ ಉಳಿದಂತೆ ಕಾಣುತ್ತದೆ. ಏಕೆಂದರೆ ಬಸವಣ್ಣನ ಲಗ್ನವು ಬಲದೇವ ಮಂತ್ರಿಯ ಮಗಳು ಗಂಗಾಂಬಿಕೆಯೊಡನೆ ಆದಾಗ ನಾಗಲಾಂಬಿಕೆ ಹಾಗೂ ಶಿವದೇವ ಕಲ್ಯಾಣಕ್ಕೆ ಹೋಗಿದ್ದರೆಂದು ಸಿಂಗಿರಾಜ ಪುರಾಣದಿಂದ ತಿಳಿದು ಬರುತ್ತದೆ. ಮದುವೆಯನ್ನು ತೀರಿಸಿಕೊಂಡ ಬಸವಣ್ಣನು ಪತ್ನಿ ಗಂಗಾಂಬಿಕೆ, ಅಕ್ಕ ನಾಗಲಾಂಬಿಕೆಯೊಡನೆ ಕೂಡಲ ಸಂಗಮಕ್ಕೆ ಹಿಂದಿರುಗಿದನೆಂದೂ ಉಲ್ಲೇಖವಿದೆ. ಬಸವಣ್ಣನು ತನ್ನ ವಾಸವನ್ನು ಕಲ್ಯಾಣಕ್ಕೆ ಸ್ಥಳಾಂತರಿಸಿ, ಅಲ್ಲಿ ನೆಲಸಿದಾಗ, ಅವನೊಡನೆ ಗಂಗಾಂಬಿಕೆ, ನಾಗಾಂಬಿಕೆ, ಚೆನ್ನಬಸವಣ್ಣ ಇದ್ದರೆಂದು ಸಾಹಿತ್ಯದಿಂದ ಅರಿವಾಗುತ್ತದೆ. ಬಹುಶಃ ಇವಳು ಯೋಗಿಣಿಯಾಗಿ, ಸಂಸಾರದಲ್ಲಿ ಸಂಪೂರ್ಣ ವಿರಕ್ತಿಯನ್ನು ಪಡೆದು, ಯೋಗ ಹಾಗೂ ಧಾರ್ಮಿಕ ಸಾಧನೆಗಳನ್ನು ಮಾಡತೊಡಗಿ ತನ್ನ ಗಂಡನ ಮನೆಯನ್ನೆ ತ್ಯಜಿಸಿ ಬಂದಿರಬಹುದು. ಆಕೆ ಎಲ್ಲೆಲ್ಲಿ ಕೆಲಕಾಲ ವಾಸವಾಗಿದ್ದಳೋ ಅಲ್ಲೆಲ್ಲಾ 'ಅಕ್ಕನಾಗಮ್ಮ ಗುಹೆ'ಗಳು ಈಗಲೂ ಇವೆ.

ಇಂಗಳೇಶ್ವರದಲ್ಲಿ ನಾಗಲಾಂಬಿಕೆಯ ಗುಹೆ ಇದೆ.ಅಲ್ಲಿ ಒಂದು ಮೂರ್ತಿಯನ್ನಿಟ್ಟು ಜನರು ಗುಡಿ ಕಟ್ಟಿದ್ದಾರೆ. ಅದು ನಾಗಲಾಂಬಿಕೆಯ ವಿಗ್ರಹವೆಂದು ಸ್ಥಳಪುರಾಣವಿದೆ.

ಕಲ್ಯಾಣದಲ್ಲಿ ಕ್ರಾಂತಿಯಾದಾಗ ರುದ್ರಮುನಿದೇವರ ಮಾರ್ಗದರ್ಶನದಲ್ಲಿ ಶರಣ ಸೈನ್ಯವೊಂದು ರೂಪುಗೊಂಡಿತು. ಅದರ ಮುಂದಾಳತ್ವವನ್ನು ಚೆನ್ನಬಸವಣ್ಣ ಮತ್ತು ಮಡಿವಾಳ ಮಾಚಿದೇವರು ವಹಿಸಿದ್ದರು. ಅವರೊಡನೆ ಗಂಗಾಂಬಿಕೆ, ನಾಗಲಾಂಬಿಕೆಯರೂ ಇದ್ದರು. ಅನೇಕ ಕಡೆ ಶರಣರಿಗೂ ಬಿಜ್ಜಳನ ಸೈನಿಕರಿಗೂ ಯುದ್ಧವಾಯಿತು. ಆಗ ಈ ಮಹಿಳೆಯರೂ ತಮ್ಮ ಶೌರ್ಯವನ್ನು ತೋರಿಸಿ ಹೋರಾಡಿದರೆಂದು ವೀರಶೈವ ಪುರಾಣಗಳಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ನಾಗಲಾಂಬಿಕೆಯು ಯೋಗಿನಿಯಾಗಿದ್ದರೂ, ತಪಸ್ವಿನಿಯಾಗಿದ್ದರೂ ಪ್ರಸಂಗ ಬಂದಾಗ

ವೀರವನಿತೆಯಾಗಿ ಮಿಂಚಿದ್ದಾಳೆ. ಆದರೆ ಯುದ್ಧ ಪ್ರಸಂಗದಲ್ಲಿಯೂ ತನ್ನ ತಾಯ್ತನವನ್ನು ಪ್ರದರ್ಶಿಸಿದ್ದಾಳೆ. ಶರಣರನ್ನು ನಿರ್ನಾಮ ಮಾಡಲುಬಂದ ಸೈನಿಕರು ಯುದ್ಧದಲ್ಲಿ ಸೋತು ಸೇನಾನಾಯಕನಾದ ಅಳಿಯ ಬಿಜ್ಜಳನೇ ಯುದ್ಧರಂಗದಲ್ಲಿ ಮೂರ್ಛಿತನಾಗಿ ಇವರ ಕೈಗೆ ಸಿಕ್ಕಾಗ ಶರಣರು ಒಂದೇ ಕ್ಷಣದಲ್ಲಿ ಅವನ ರುಂಡ ಹಾರಿಸುವವರಿದ್ದರು(ನಾಗಳಾಪುರದ ಯುದ್ಧದಲ್ಲಿ) ಆದರೆ ನಾಗಲಾಂಬಿಕೆಯು ಶರಣರನ್ನು ತಡೆದು ಅವನಿಗೆ ಪ್ರಾಣದಾನ ಮಾಡಿದಳು. ನಾಗಳಾಪುರದಲ್ಲಿ ನಾಗಲಾಂಬಿಕೆಯಬಹಳ ದಿನಗಳವರೆಗೆ ಇದ್ದಳಂತೆ. ಆದ್ದರಿಂದ ಯೋಗಿಣಿಯಾದ ಆಕೆಯ ಹೆಸರಿನಲ್ಲಿ ಅಲ್ಲಿಯ ಜನ ಒಂದು ದೇವಾಲಯವನ್ನು ನಿರ್ಮಿಸಿದರು. ಆ ಊರಿಗೂ ಬೇರೆ ಹೆಸರಿದ್ದಿತೆಂದು ತೋರುತ್ತದೆ. ಆದರೆ ಈಕೆಯ ಗುರುತಾಗಿ ಆ ಊರಿಗೆ ನಾಗಳಾಪುರವೆಂದು ಕರೆದರೆಂದು ಪ್ರತೀತಿ. ಆಗ ಕಟ್ಟಿಸಿದ ದೇವಸ್ಥಾನ ಇಂದಿಗೂ ಆ ಊರಲ್ಲಿ ಇದೆ. ಅದರಲ್ಲಿರುವ ಹೆಣ್ಣು ಮೂರ್ತಿಯು ಎರಡು ಅಡಿ ಎತ್ತರವಿದೆಯಂತೆ. ಅದಕ್ಕೆ ಇಳಿಬಿಟ್ಟ ಕೂದಲು ಭುಜದ ಮೇಲೆ ಪಸರಿಸಿವೆ. ಕೊರಳಲ್ಲಿ ರುದ್ರಾಕ್ಷಿ, ಕೈಯಲ್ಲಿ ಜಪ ಮಾಲೆ ಇದೆ. ಈ ರೀತಿಯ ಮೂರ್ತಿಯನ್ನು ಅಲ್ಲಿರುವ ಜನ ಸ್ಥಾಪಿಸಿದ್ದಾರೆಂದು ಮೇಲೆ ಆಕೆ ಒಬ್ಬ ತಪಸ್ವಿನಿಯಂತೆ ಬದುಕುತ್ತಿದ್ದಳೆಂದು ತೋರುತ್ತದೆ.

ಕಲ್ಯಾಣದಲ್ಲಿಯೂ ಕೂಡ ಸುಂದರವಾದ, ಶಾಂತ ವಾತಾವರಣದಿಂದ ಕೂಡಿದ ಅಕ್ಕನಾಗಮ್ಮನ ಗುಹೆ ಇದೆ.

ಉಳುವಿಯಲ್ಲಿಯೂ ಅಕ್ಕನಾಗಮ್ಮನ ಗುಹೆ ಇದೆ. ಎಂದಮೇಲೆ ಈಕೆ ಹೋದಲ್ಲೆಲ್ಲಾ ಗುಹೆಯನ್ನು ನಿರ್ಮಿಸಿಕೊಂಡು ಏಕಾಂಗಿನಿಯಾಗಿ ಯೋಗಸಾಧನೆ ಮಾಡುತ್ತಿರಬೇಕು; ತಪಸ್ಸನ್ನು ಆಚರಿಸುತ್ತಿರಬೇಕು ಎನ್ನಿಸುತ್ತದೆ. ಇಂತಹ ಪುಣ್ಯಾತ್ಮಳ ಬಗ್ಗೆ ಈಗಿನ ಅನೇಕ ವಿದ್ವಾಂಸರು ನಾನಾರೀತಿಯಾಗಿ ಊಹಾಪೋಹ ಮಾಡಿದ್ದಾರೆ. ಆಕೆ ಕನ್ಯೆಯೇ ಆಗಿದ್ದಳೆಂದೂ, ಕಕ್ಕಯ್ಯನ ಪ್ರಸಾದದಿಂದ ಚೆನ್ನಬಸವಣ್ಣ ಹುಟ್ಟಿದನೆಂದು ಹೇಳುತ್ತಾ ನಾನಾ ರೀತಿಯ ಸಂಶಯ ಉಂಟಾಗುವಂತೆ, ಜನ ತಪ್ಪು ಭಾವನೆ ತಳೆದಿದ್ದಾರೆ. ಈಗಿನ ಕಾಲದಲ್ಲೇ ಹೀಗಾದಮೇಲೆ, ಹನ್ನೆರಡನೆಯ ಶತಮಾನದಲ್ಲಿ, ಸಮಾಜವು ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿದ್ದಾಗ, ಮಹಿಳೆಯರ ಸ್ಥಾನ ಕೇವಲ ಮನೆಯಾಗಿದ್ದಾಗ ಈ ಮಹಾತಾಯಿ ಸ್ತ್ರೀ ಸ್ವಾತಂತ್ರಕ್ಕಾಗಿ ಧ್ವನಿ ಎತ್ತಿದಾಗ, ಮನೆಯಿಂದ ಹೊರಗೆ ಬಂದು ಸಾರ್ವಜನಿಕವಾಗಿ ಈ ಬಗ್ಗೆ ಹೋರಾಟ ನಡೆಸಿದಾಗ, ಉಳಿದ ಮಹಿಳೆಯರನ್ನು ಪ್ರೋತ್ಸಾಹಿಸಿ, ಸಂಪ್ರದಾಯದ ವಿರುದ್ಧ ಪ್ರತಿಭಟಸುವಂತೆ ಪ್ರಬೋಧಿಸಿದಾಗ, ಈ ಬಗ್ಗೆ ಅಸಮಾಧಾನಗೊಂಡ ಜನ ಬಹುಶಃ ಬಹಳ ತೀವ್ರವಾಗಿ ಟೀಕೆ ಮಾಡಿರಬೇಕು. ಆಗ ನಾಗಲಾಂಬಿಕೆಗೂ ಬಹು ನೋವಾಗಿರಬೇಕು. ಆ ಸಂದರ್ಭದಲ್ಲಿ

ಮನದೊಡೆಯ ಮಹಾದೇವ ಮನವ ನೋಡಿಹೆನೆಂದು
ಮನುಜರ ಕೈಯ್ಯಿಂದ ಒಂದೊಂದು ನುಡಿಸುವನು
ಇದಕ್ಕೆ ಕಳವಳಿಸದಿರು ಮನವೆ, ಕಾತರಿಸದಿರು ತನುವೆ
ನಿಜವ ಮರೆಯದಿರು ಕಂಡ್ಯಾ, ನಿಶ್ಚಿಂತನಾಗಿರು ಮನವೆ
ಬಸವಣ್ಣ ಪ್ರಿಯ ಚೆನ್ನ ಸಂಗಯ್ಯನು
ಬೆಟ್ಟದನಿತಪರಾಧವನು ಒಂದು ಬೊಟ್ಟಿನಲ್ಲಿ ತೊಡೆವನು

ಎಂದು ದೇವರ ಮೇಲೆ ಭಾರ ಹಾಕಿ, ಮನಸ್ಸಿನ ಕಳವಳಗೊಳ್ಳಬಾರದೆಂದು ಧೈರ್ಯ ಹೇಳಿಕೊಳ್ಳುತ್ತಾ ತಾನೇ ಸಮಾಧಾನ ಪಟ್ಟುಕೊಳ್ಳುತ್ತಾಳೆ.

## ಅಕ್ಕನಾಗಮ್ಮನಿಗೆ ಬೆಂಬಲವಾದ ಬಸವಣ್ಣ

ಗೃಹಿಣಿಯಾಗಿ ಬಾಳಬೇಕಾದ ಅಕ್ಕನಾಗಮ್ಮ ಶರಣರ ಆಂದೋಲನಕ್ಕೆ ಕೈಗೂಡಿಸಲು ಮನೆ ಬಿಟ್ಟು ಮಗನನ್ನು ಕರೆದುಕೊಂಡು ಹೋಗಿದ್ದಾಳೆ. ಅಂತಹ ಸಂದರ್ಭದಲ್ಲಿ ಮನೆಯವರು, ಬಂಧುಗಳು, ಸಾಮಾಜಿಕರು ಅವಳ ವರ್ತನೆಯನ್ನು ತೀಕ್ಷ್ಣವಾಗಿ ಖಂಡಿಸಿರಬಹುದು; ಅಪರಾಧಿಯಂತೆ ಕಂಡಿರಬಹುದು; ನಿರ್ಲಜ್ಜೆಯೆಂದು ಟೀಕಿಸಿರಬಹುದು. ಇದೆಲ್ಲ ನಡೆದುದು ಎಂಟುನೂರು ವರ್ಷಗಳ ಹಿಂದೆ ! ಆಗಿನ ಜನರ ಸ್ವಭಾವ, ವಿಚಾರ, ಹೇಗಿರಬೇಕೆಂಬುದನ್ನು ನಮ್ಮ ಕಣ್ಣ ಮುಂದೆ ತಂದುಕೊಳ್ಳಬೇಕಾಗುತ್ತದೆ. ಆಗ ಎಲ್ಲರ ಟೀಕೆ-ನಿಂದೆಗಳಿಗೆ ಗುರಿಯಾದಾಗ ಈಕೆಯ ಧೈರ್ಯವೂ ಒಮ್ಮೊಮ್ಮೆ ಉಡುಗಿ, ತಾನು ಮನೆ ಬಿಟ್ಟು ಬಂದು ತಪ್ಪು ಮಾಡಿದೆನೇನೋ ಎಂಬ ಅಪರಾಧೀ ಮನೋಭಾವ ಕಾಡಿಸಿ, ಆತ್ಮೀಯ ತಮ್ಮ ಬಸವಣ್ಣನೊಡನೆ ಹೇಳಿಕೊಂಡಾಗ, ಆತ ಸರಿಯಾದ ವಿವರಣೆ ಕೊಟ್ಟು ಸಮಾಧಾನಗೊಳಿಸಿರಬೇಕು. ಯಾವುದು ಮೈಲಿಗೆ, ಯಾವುದು ಪರಿಶುದ್ಧ ಎಂಬುದನ್ನು ವಿವರಿಸಿ ತಿಳಿಸಿದಾಗ, ದುಃಖದ ಆವೇಶದಲ್ಲಿ ಮುಸುಕಿದ ಅಜ್ಞಾನ ಸರಿದು, ಎಲ್ಲವೂ ನಿಚ್ಚಳವಾಗಿ ಕಾಣಿಸಿದಾಗ, 'ನಿಜದ ನಿರ್ವಯಲ ಬಾಗಿಲ ನಿಜವ ತೋರಿದಾಗ ಬಸವಣ್ಣ' ಎಂದು ಸಮಾಧಾನಪಟ್ಟುಕೊಂಡಿರಬೇಕು ಎಂಬ ಮಾತನ್ನು ಕೆಳಗಿನ ವಚನ ಸೂಚಿಸುತ್ತದೆ.

ಎನ್ನ ಕುಲ ಸೂತಕವ ಕಳೆದಾತ ಬಸವಣ್ಣ
ಎನ್ನ ಛಲ ಸೂತಕವ ಕಳೆದಾತ ಬಸವಣ್ಣ
ಎನ್ನ ತನು ಸೂತಕವ ಕಳೆದಾತ ಬಸವಣ್ಣ
ಎನ್ನ ಮನ ಸೂತಕವ ಕಳೆದಾತ ಬಸವಣ್ಣ
ಎನ್ನ ನೆನಹು ಸೂತಕವ ಕಳೆದಾತ ಬಸವಣ್ಣ

ಎನ್ನ ಭಾವ ಸೂತಕವ ಕಳೆದಾತ ಬಸವಣ್ಣ
ಎನ್ನ ಅರುಹು ಮರೆಹಿನ ಸಂದು ಸಂಶಯವನು ಬಿಡಿಸಿದಾತ ಬಸವಣ್ಣ
ಎನ್ನ ತನ್ನೊಳಗೆ ಇಂಬಿಟ್ಟುಕೊಂಡಾತ ಬಸವಣ್ಣ
ನಿಜದ ನಿರ್ವಯಲ ಬಾಗಿಲ ತೋರಿದಾತ ಬಸವಣ್ಣ
ಬಸವಣ್ಣ ಪ್ರಿಯ ಚೆನ್ನ ಸಂಗಯ್ಯನ ಹೃದಯ ಕಮಲದಲ್ಲಿ
ನಿಜವಾಸಿಯಾಗಿರಿಸಿದ ಎನ್ನ ತಂದೆ ಸಂಗನ ಬಸವಣ್ಣನು.

ಎಂಬ ವಚನದಿಂದ, ಆಕೆ ಸಂಪ್ರದಾಯಗಳ ಕಟ್ಟನ್ನು ಕಿತ್ತು ಬಿಸುಟು ಹೊರ ಬಂದಿದ್ದರೂ, ರೂಢಿಯಲ್ಲಿದ್ದ ಜಾತೀಯತೆ, ಸ್ತ್ರೀ–ಪುರುಷ ಅಸಮಾನತೆ ಮುಂತಾದ ನಡೆ–ನುಡಿಯನ್ನು ತಿರಸ್ಕರಿಸಿದುದು ತಪ್ಪಾಯಿತೆನೋ ಎಂಬ ಶಂಖೆ ಸುಳಿದಾಗ, ಬಸವಣ್ಣ ಅವುಗಳನ್ನು ನಿವಾರಿಸಿ ಆತ್ಮವಿಶ್ವಾಸ ತುಂಬಿರಬೇಕು. ಆಗ, 'ಎನ್ನ ಅರುಹು ಮರೆಹಿನ ಸಂದು ಸಂಶಯವನು ಬಿಡಿಸಿದಾತ ಬಸವಣ್ಣ' ಎನ್ನುತ್ತಾ, ಎಲ್ಲರೂ ತಿರಸ್ಕರಿಸಿದಾಗ, ಎತ್ತಿ ಹಿಡಿದ ಬಸವಣ್ಣನ ಬಗೆಗೆ ಎನ್ನ ತನ್ನೊಳಗೆ ಇಂಬಿಟ್ಟುಕೊಂಡಾತ ಬಸವಣ್ಣ ಎಂದಿದ್ದಾಳೆ.

ವೀರಶೈವ ದೀಕ್ಷೆಯನ್ನು ಕೊಟ್ಟು ತನ್ನ ಕುಲಸೂತಕವ ಬಸವಣ್ಣ ಕಳೆದಿದ್ದಾನೆ. ತನ್ನನ್ನು ನಿಂದಿಸಿದವರ ಬಗ್ಗೆ ತಾನು 'ಛಲ'ದಿಂದ ಅವರಿಗೆ ಬುದ್ಧಿ ಕಲಿಸುತ್ತೇನೆಂದಾಗ 'ಹಾಗೇನೂ ಮಾಡದೆ, ನಿನ್ನ ದಾರಿಯಲ್ಲಿ ನೀನಿರು. ಎಲ್ಲ ಸರಿ ಹೋಗುತ್ತದೆ' ಎಂದು ಬಸವಣ್ಣ ಮಾರ್ಗದರ್ಶನ ಮಾಡಿರಬೇಕು. ಆಗ ಎನ್ನ ಛಲ ಸೂತಕವ ಕಳೆದಾತ ಬಸವಣ್ಣ ಎಂದಿದ್ದಾಳೆ. ಈಗ ಆಕೆ ಲಿಂಗದೀಕ್ಷೆಯನ್ನು ಪಡೆದು 'ಶರಣ ಸತಿ ಲಿಂಗಪತಿ'ಯಾಗಿ, ಇಂತಹವರ ಮಗಳು ಅಥವಾ ಅಂತಹವರ ಸೊಸೆ ಎಂಬ ಸಂಬಂಧವನ್ನು ಕಳೆದುಕೊಂಡುದರಿಂದ, 'ಎನ್ನ ತನು ಸೂತಕವ ಕಳೆದಾತ ಬಸವಣ್ಣ' ಎಂದಿದ್ದಾಳೆ. ಹೀಗೆ ಆಕೆ ಬಸವಣ್ಣನನ್ನು ರೂಪಿಸಿದ ರೂವಾರಿ ಯಾಗಿದ್ದರೂ, ಸ್ವರ್ಗ, ಮರ್ತ್ಯ, ಪಾತಳದಲ್ಲಿಯ ಭಕ್ತಿಯ ಬೆಳವಣಿಗೆಗೆ ಬಸವಣ್ಣನೇ ಕಾರಣ ಎನ್ನುತ್ತಾಳೆ. ಬಸವಣ್ಣನಿಲ್ಲದಿದ್ದರೆ ಈ ಮರ್ತ್ಯದಲ್ಲಿ ಭಕ್ತಿ, ಸದಾಚಾರಿಗಳಿಲ್ಲವಾಗುತ್ತವೆ. ಮಹಾಮನೆಯಲ್ಲಿ ಮಹಾಮಣಿಹಗಳು ನಿಂತು ಎಲ್ಲಾ ಬರಿದಾಗುತ್ತವೆ ಎಂದು ಭಾವಿಸುತ್ತಾಳೆ. ಎಲ್ಲಾ ಒಳಿತಿಗೂ, ಸತ್ಕಾರ್ಯಕ್ಕೂ ಸನ್ನಡತೆಗೂ ಬಸವಣ್ಣನ ಇದುವೇ ಕಾರಣ ಎಂಬಷ್ಟು ದೊಡ್ಡದಾಗಿ ಬಸವಣ್ಣನ ಬಗ್ಗೆ ಗೌರವ ಭಾವನೆ ಹೊಂದಿದ್ದಾಳೆ, ತಾನು ಬಸವಣ್ಣನಿಗಾಗಿ ಮಾಡಿದುದನ್ನೆಲ್ಲಾ ಮರೆತು, ಬಸವಣ್ಣನೇ ತನ್ನನ್ನು ಪಾವನ ಮಾಡಿದ ಎಂದು ಹೇಳುವಷ್ಟು ಅಭಿಮಾನ, ಮಮತೆ, ಮೆಚ್ಚುಗೆ, ಹೆಮ್ಮೆ ಬಸವಣ್ಣನ ಬಗೆಗೆ ಆಕೆಗಿದ್ದುವು. ಬಹುಶಃ ಬಸವಣ್ಣನು ಐಕ್ಯನಾದ ವಿಷಯ ಕೇಳಿದಾಗ ಹೇಳಿರಬಹುದಾದ ವಚನಗಳು ಹೀಗಿವೆ.

ಪ್ರಸಾದವನಿಕ್ಕಿದ ಪ್ರವಾದಿ ಬಸವಣ್ಣ

ಭಕ್ತಿಯ ತದನಿಧಿಯೆ ಬಸವಾ
ಮುಕ್ತಿಯ ಮೂರುತಿಯೆ ಬಸವಾ
ಲಿಂಗ ಜಂಗಮದ ಚೈತನ್ಯವೇ ಬಸವಾ
ನಿಮ್ಮನಗಲಿಯಾನೆಂತು ಸಹಿಸುವೆನು ಎಲೆ ಬಸವಾ
ಎಲೆ ಪರಮಗುರುವೆ ಬಸವಾ
ನಿಮ್ಮ ಒಕ್ಕು ಮಿಕ್ಕ ಶೇಷ ಪ್ರಸಾದವನಿಕ್ಕಿ
ಎನ್ನ ಪಾವನವ ಮಾಡಿ ಉಳುಹಿದೆಯಲ್ಲಾ ಬಸವಲಿಂಗಾ॥

ಮತ್ತೊಂದು ವಚನ:

ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದಡೆ
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತ್ತಲ್ಲಾ
ಅಯ್ಯಾ, ಸ್ವರ್ಗ, ಮರ್ತ್ಯ, ಪಾತಾಳದೊಳಗೆಲ್ಲಾ
ನಿಮ್ಮ ಭಕ್ತಿಯ ನಟ್ಟಿದ ಮಣಿಹ ಪೂರೈಸಿತ್ತೆಂದು ನೀವು ಲಿಂಗಕ್ಯವಾದೊಡೆ
ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ
ನಿಮ್ಮೊಡನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣಾ
ಮರ್ತ್ಯ ಲೋಕದ ಮಹಾಮನೆ ಶೂನ್ಯವಾಯಿತ್ತಲ್ಲಾ ಬಸವಣ್ಣಾ
ಎನ್ನನೊಯ್ಯದೆ ಹೋದೆಯಲ್ಲಾ ಪಂಚ ಪರುಷಮೂರ್ತಿ ಬಸವಣ್ಣಾ
ಬಸವಣ್ಣ ಪ್ರಿಯ ಚನ್ನಸಂಗಯ್ಯಂಗೆ,
ಪ್ರಾಣಲಿಂಗವಾಗಿ ಹೋದೆಯಲ್ಲಾ ಸಂಗನ ಬಸವಣ್ಣಾ॥

ಈ ವಚನಗಳಿಂದ ಅಕ್ಕನಾಗಮ್ಮನಿಗೆ ಬಸವಣ್ಣನ ಬಗೆಗೆ, ಅವನ ಔನ್ನತ್ಯದ ಬಗ್ಗೆ ಎಂತಹ ಮೆಚ್ಚುಗೆ ಇತ್ತು, ಎನ್ನುವುದು ವ್ಯಕ್ತವಾಗುತ್ತದೆ. ಇವಳು ಬಸವಣ್ಣನ ಬಗ್ಗೆ ಹೇಳುವ ಮಾತುಗಳು ಭಕ್ತನೊಬ್ಬ ದೇವರ ಸ್ತುತಿಯನ್ನು ಮಾಡುವಂತಿವೆ. ತನ್ನ ಬದುಕಿಗೆ, ಇರುವಿಕೆಗೆ ಬಸವನೇ ಆಧಾರ ಎಂದು ನಂಬಿರುವುದು ಇವಳ ಅನೇಕ ವಚನಗಳಿಂದ ವ್ಯಕ್ತವಾಗಿದೆ. ಕಾಲಿಲ್ಲದವನಿಗೆ ಕೋಲಿನ ಆಸರೆ ಇದ್ದಂತೆ, ತನಗೆ ಬಸವನೆಂಬ ಊರುಗೋಲಿಲ್ಲದೆ ಬದುಕಲಸಾಧ್ಯ ಎಂದು ನಂಬಿದವಳು. ಎಳೆಗರುವಿಗೆ, ತಾಯಿಯಾದ ಹಸು ಇಲ್ಲದೆ ಬದುಕುವುದು ಹೇಗೆ ಅಸಾಧ್ಯವೋ ಹಾಗೆ ತನಗೆ ಬಸವಣ್ಣನಿಲ್ಲದೆ ಬದುಕುವುದು ದುಸ್ತರ ಎಂದೂ ಭಾವಿಸಿದ್ದಾಳೆ. ಶರಣವೈರಿಗಳು ಕಲ್ಯಾಣದಲ್ಲಿ ಗಲಭೆ ಎಬ್ಬಿಸಿದಾಗ ಬಹುಶಃ ಭಕ್ತರೆಲ್ಲಾ ಬಸವಣ್ಣನನ್ನು

ಅಲ್ಲಿಂದ ಕರೆದೊಯ್ಯಲು ಪ್ರಯತ್ನಿಸಿರಬಹುದು ಆಗ ಹೇಳಿರಬಹುದೆನ್ನಿಸುವ ವಚನ ಹೀಗಿದೆ:-

ಅಯ್ಯಾ ನಾನಧವೆ ಕಾಲಿಲ್ಲ ಅದುವು ಉಳ್ಳವಳು (ವಿಧವೆ?) ಅಯ್ಯಮ್ಮಾ ಕೈಯ ಕೋಲಕೊಂಬರೆ?

ಅಯ್ಯಾ, ಎಳೆಗರುವಿನ ಎಳೆಗಂತಿಯನೆಳೆದೊಯ್ದರೆ ಭಕ್ತರು?

ಅಯ್ಯೋ, ಅಯ್ಯೋ ಎನಲೊಯ್ವರೆ ಬಸವಣ್ಣ ಪ್ರಿಯ ಚನ್ನ ಸಂಗಯ್ಯಾ?

ಎಂದು ಹಲುಬಿದ್ದಾಳೆ

**ಆಧುನಿಕ ಸಂಶೋಧಕರು ಮಾಡಿದ ಗೋಜಲು**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಪ್ರಕಟಿಸಿದ ಶಿವಶರಣೆಯರ ವಚನ ಸಂಪುಟದಲ್ಲಿ ಸಣ್ಣ ಪುಟ್ಟ ಶರಣರ ಬಗ್ಗೆ ಸೂಚಿಸಿರುವ ಹರಿಹರ, ನಾಗಲಾಂಬಿಕೆಯನ್ನು ಆಕೆಯ ಮಗ ಚನ್ನಬಸವಣ್ಣನನ್ನು ತನ್ನ ಬರಹದಲ್ಲಿ ಸೂಚಿಸದಿರುವ ಬಗ್ಗೆ ಗಮನ ಸೆಳೆಯಲಾಗಿದೆ. ಭೀಮಕವಿ ಮೊದಲಾದವರು 'ಪ್ರಾಸಂಗಿಕವಾಗಿ ಇವರೀರ್ವರ ಬಗ್ಗೆ' ಸೂಚಿಸಿದ್ದಾರೆ ಅಷ್ಟೆ. ಅಂತಹ ಮಹತ್ವ ಕೊಟ್ಟಿಲ್ಲದಿರುವುದೂ ಗಮನಿಸಬೇಕಾದ ಅಂಶವೇ. ಆದರೆ ಹದಿನಾಲ್ಕನೆ ಶತಮಾನದಲ್ಲಿ ವಿರೂಪಾಕ್ಷ ಪಂಡಿತ ಚನ್ನಬಸವ ಪುರಾಣವನ್ನೇ ಬರೆದಿದ್ದಾನೆ. ಸಿಂಗಿರಾಜ ಪುರಾಣದಲ್ಲಿ ಶಿವದೇವ, ಅಕ್ಕನಾಗಮ್ಮ ಚನ್ನಬಸವಣ್ಣ ಇವರುಗಳ ವಿವರ, ಸಮಸ್ಯೆ ಪರಿಹಾರವಾಗುವ ರೀತಿಯಲ್ಲಿ ಪ್ರಸ್ತಾಪಿಸಲಾಗಿದೆ. ಈಗ ಸಿಕ್ಕಿರುವ ವಚನಗಳ ಆಧಾರದಿಂದ ಚನ್ನಬಸವಣ್ಣ ಮತ್ತು ಅಕ್ಕನಾಗಮ್ಮನವರು ಹನ್ನೆರಡನೆಯ ಶತಮಾನದಲ್ಲಿ ಬಹು ಮಹತ್ವದ ಪಾತ್ರ ವಹಿಸಿರುವುದು ಸೂರ್ಯನ ಬೆಳಕಿನಷ್ಟೇ ಸತ್ಯ ಎಂದು ತಿಳಿಯಬರುತ್ತದೆ. ವಚನಗಳು ಎಲ್ಲಾ ಆಧಾರಕ್ಕಿಂತ ಸತ್ಯಕ್ಕೆ ಹತ್ತಿರವಾದ ಆಧಾರ. ಬಹುಶಃ ಪ್ರಾರಂಭದ ಗ್ರಂಥ ಕರ್ತರಿಗೆ ಸಾಕಷ್ಟು ಮಾಹಿತಿ ಆಗ ದೊರಕಿರಲಿಕ್ಕಿಲ್ಲ. ಲಭ್ಯವಿದ್ದ ಮಾಹಿತಿಯ ಆಧಾರದ ಮೇಲೆ ಗ್ರಂಥ ರಚಿಸಿಬಿಟ್ಟಿದ್ದಾರೆ. ಅವರಿಗೆ ಮತ್ತೇನಾದರೂ ಇರಬಹುದೆಂಬ ಅನುಮಾನವೂ ಇರಲಿಕ್ಕಿಲ್ಲ. ಆದರೆ ಮುಂದಿನ ಬರಹಗಾರರು ಇದನ್ನು ಆಧಾರವಾಗಿಟ್ಟುಕೊಂಡು ಬರೆಯುವಾಗ ಅಲ್ಲಲ್ಲಿ ಎದುರಾದ ಸಂದೇಹಗಳಿಗೆ ಉತ್ತರವನ್ನು ಸಂಗ್ರಹಿಸಲು ಪ್ರಯತ್ನಿಸಿರಬೇಕು. ಹೆಚ್ಚಿನ ಸಾಹಿತ್ಯ ಅವರಿಗೆ ದೊರೆತಿರಬೇಕು. ಅಂಥವುಗಳ ಆಧಾರದ ಮೇಲೆ ತಮ್ಮ ಸಾಹಿತ್ಯವನ್ನು ಸಿಕ್ಕಿದ್ದೇ ಸಾಕು ಎಂದು ಕಟ್ಟು ಕಥೆಗಳನ್ನು ಪೋಣಿಸುತ್ತಾ ಹೋಗಿದ್ದಾರೆ. ಆದರೆ ಹದಿನಾಲ್ಕನೆಯ ಶತಮಾನದಲ್ಲಿ ರಚನೆಯಾದ ಚನ್ನಬಸವ ಪುರಾಣ, ಸಿಂಗಿರಾಜ ಪುರಾಣದ ರಚನೆಯ ಹೊತ್ತಿಗೆ ಸಾಕಷ್ಟು ನೈಜ ಸಂಗತಿಗಳು ದೊರೆತಂತೆ ಕಾಣುತ್ತದೆ.

ಈಗ ಇಂಗಳೇಶ್ವರದಲ್ಲಿ ದೊರೆತಿರುವ ವಂಶಾವಳಿಯ ಮಾಹಿತಿಗೂ, ಸಿಂಗಿರಾಜನು ಅಕ್ಕನಾಗಮ್ಮನ ಬಗ್ಗೆ ಬರೆದ ಮಾಹಿತಿಗೂ ಸಂಪೂರ್ಣ ಹೋಲಿಕೆ ಇದೆ. ಅಲ್ಲದೆ ಅಕ್ಕನಾಗಮ್ಮನ ಗುಡಿಗಳು, ಗವಿಗಳು, ಸ್ಥಳ ಪುರಾಣಗಳು ಅಕ್ಕನಾಗಮ್ಮನ ಮಹತ್ವದ ಪಾತ್ರವನ್ನು ಎತ್ತಿಹಿಡಿಯುವ ಆಧಾರಗಳಾಗಿವೆ.

ಇನ್ನು ಅದೇ ಪುಸ್ತಕದಲ್ಲಿ 'ಅಕ್ಕನಾಗಮ್ಮ ಬಸವಣ್ಣನ ತಂಗಿ, ಅಕ್ಕನಲ್ಲ' ಎಂದು ಸ್ಪಷ್ಟವಾಗುತ್ತದೆಯೆಂದು ಹೇಳಲಾಗಿದೆ. ಸಾಹಿತ್ಯದ ಆಧಾರದಿಂದ, ಕೆಲವರು ನೀಲಾಂಬಿಕೆ ಬಸವಣ್ಣನ ಮೊದಲ ಹೆಂಡತಿ ಎಂದೂ, ಕೆಲವರು ಗಂಗಾಂಬಿಕೆಯೇ ಹಿರಿಯ ಪತ್ನಿಯೆಂದೂ ಪ್ರತಿಪಾದಿಸಿದ್ದಾರೆ. ಕೆಲವರು ಬಸವಣ್ಣನಿಗೆ ಇಬ್ಬರು ಹೆಂಡತಿಯರೆಂಬುದನ್ನು ಒಪ್ಪಲಾರದೆ ಒಬ್ಬಳೇ ಹೆಂಡತಿ ನೀಲಗಂಗಮ್ಮ ಎಂದು ಎರಡು ಹೆಸರಿನಿಂದ ಗ್ರಂಥಕರ್ತರು ಕರೆದು, ನಂತರ ಇಬ್ಬರು ಹೆಂಡಿರನ್ನಾಗಿ ಮಾಡಿದ್ದಾರೆಂದು ಊಹಿಸುತ್ತಾರೆ ಮತ್ತೆ ಒಬ್ಬರು ಮಾಯಿದೇವಿಯ ಹೆಸರೂ ಇರುವುದರಿಂದ ಬಸವಣ್ಣನಿಗೆ ಮೂರು ಜನ ಹೆಂಡರಿದ್ದರೆನ್ನಬಾರದೇಕೆ ಎಂದವರೂ ಇದ್ದಾರೆ. ಇದಕ್ಕೆಲ್ಲಾ ಕಾರಣ, ವೀರಶೈವ ಸಾಹಿತಿಗಳು ತಮ ತಮಗೆ ತಿಳಿದ ವಿಷಯಗಳನ್ನು ತಿಳಿದಂತೆಯೇ ಬರೆದು ಬಿಟ್ಟಿರುವುದು. ಅವುಗಳ ಆಧಾರದ ಮೇಲೆ ತರ್ಕಿಸುತ್ತಾ ಹೋದಂತೆ, ನಂಬುವ, ನಂಬಲಾರದ ಅಂಶಗಳು ಹೊರ ಬೀಳುವುದು ಸಹಜ.

ಇದೇನೇ ಇರಲಿ, ಸಂಶೋಧನಾತ್ಮಕ ದೃಷ್ಟಿಯಿಂದ ಇದನ್ನೂ ನೋಡಬಹುದಾಗಿದೆ. ಕ್ರಾಂತಿಯು ಮುಗಿದು ಶರಣರು ಬಯಲಾದ ವಿಚಾರಗಳನ್ನೂ, ಇತಿಹಾಸ, ಪುರಾಣ, ವಚನಗಳ ಆಧಾರದಿಂದ ತರ್ಕಿಸಿ, ಚನ್ನಬಸವಣ್ಣ ತೀರಿಹೋದಾಗ, ಆತನಿಗೆ ಸುಮಾರು ಇಪ್ಪತ್ತನಾಲ್ಕು ವರ್ಷಗಳಾಗಿರಬೇಕೆಂದೂ, ಬಸವಣ್ಣನು ಐಕ್ಯನಾದಾಗ ಮೂವತ್ತಾರು ವರ್ಷಗಳಾಗಿದ್ದವೆಂದೂ ತೀರ್ಮಾನಿಸಿದ್ದಾರೆ. (ಶಿವಶರಣೆಯರ ಚರಿತ್ರೆಗಳು–ಪುಟ ೧೬೭) ಚನ್ನಬಸವಣ್ಣನು ಬರೆದ ವಚನಗಳು, ನಿರ್ವಹಿಸಿದ ಕಾರ್ಯಗಳು ಉಳಿದ ಶರಣರ ವಚನಗಳಲ್ಲಿ ಅವನ ಬಗೆಗಿರುವ ಉಲ್ಲೇಖ, ಮತ್ತು ಚನ್ನಬಸವಣ್ಣನೇ ರಚಿಸಿರುವ 'ಕರಣ ಹಸಿಗೆ' ಇವುಗಳನ್ನೆಲ್ಲಾ ನೋಡಿದರೆ ಅವನಿಗೆ ಇಪ್ಪತ್ತನಾಲ್ಕು ವರ್ಷಗಳಾದರೂ ಆಗಿರಬೇಕೆಂಬುದನ್ನು ನಂಬಬೇಕಾಗುತ್ತಿದೆ. ಅವನ ಜ್ಞಾನಕ್ಕೆ, ಜಾಣ್ಮೆಗೆ ಆ ವಯಸ್ಸೂ ಕೂಡ ಚಿಕ್ಕದೆಂದೇ ಹೇಳಬೇಕು. ಅವನಿಗೆ ಇಪ್ಪತ್ತನಾಲ್ಕು ವರ್ಷವಾದಾಗ ಬಸವಣ್ಣನಿಗೆ ಮೂವತ್ತಾರು ವರ್ಷಗಳು (ಇತಿಹಾಸ ಸಾಹಿತ್ಯ ಹಾಗೂ ಶಾಸನಗಳ ಆಧಾರ) ಚನ್ನ ಬಸವಣ್ಣ ಹುಟ್ಟಿದಾಗ, ಅವರ ತಾಯಿಗೆ ಹದಿನೈದು ವರ್ಷಗಳಾದರೂ ಆಗಿರಬೇಕು. ಹಾಗಿದ್ದರೆ, ಬಸವಣ್ಣನಿಗೆ ಮೂವತ್ತಾರು ವರ್ಷಗಳಾಗಿದ್ದಾಗ, ಈಕೆಗೆ ಮೂವತ್ತೊಂಬತ್ತು

ವರ್ಷಗಳಾದರೂ ಆಗಿರಬೇಕು. ಎಂದಮೇಲೆ ಈಕೆ ಬಸವಣ್ಣನ ಅಕ್ಕ ಎಂದು ಹೇಳುತ್ತ ಬಂದಿರುವ ಮಾತಿನಲ್ಲಿ ಸತ್ಯಾಂಶವಿದೆಯೆನ್ನಿಸುತ್ತದೆ. ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಅವಶ್ಯಕ.

**ಪವಿತ್ರಾತ್ಮಳಾದ ಶರಣೆ**

ನಾಗಲಾಂಬಿಕೆಯು ಬಸವಣ್ಣನಿಗೆ ಅಕ್ಕನಾಗಿರಲಿ, ತಂಗಿಯಾಗಿರಲಿ ಆಕೆಯ ಬದುಕು, ಭಾವ, ಚಿಂತನೆ, ನಡೆ-ನುಡಿ ಉನ್ನತವಾದುವುಗಳಾಗಿವೆ. ಹನ್ನೆರಡನೆಯ ಶತಮಾನದ ಶರಣರ ಸಾಮಾಜಿಕ, ಧಾರ್ಮಿಕ ಆಂದೋಲನಕ್ಕೆ ಕಾರಣೀಭೂತನಾದ ಬಸವಣ್ಣನಿಗೆ, ಈಕೆ ಬೆನ್ನೆಲುಬಾಗಿ ಪ್ರಾರಂಭದಿಂದ ಕೊನೆಯವರೆಗೆ ಸಹಕರಿಸಿದಳು ಎಂದರೆ ಅತಿಶಯೋಕ್ತಿಯಲ್ಲ. "ಬಸವೇಶ್ವರನಿಗೆ ಯಾವ ಸ್ಥಾನವು ಪ್ರಾಪ್ತವಾಗಿದೆಯೋ ಅದಕ್ಕೆ ನಾಗಲಾಂಬಿಕೆಯೇ ಕಾರಣೀಭೂತಳಾಗಿದ್ದಳೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ" ಎಂದು ಫ.ಗು.ಹಳಕಟ್ಟಿಯವರು ಹೇಳಿರುವ ಮಾತಿನಲ್ಲಿ ಉತ್ಪ್ರೇಕ್ಷೆ ಇಲ್ಲ. ಹನ್ನೆರಡನೆಯ ಶತಮಾನದಲ್ಲಿ ಬದುಕಿ ಹೋದ ಆ ಮಹಾಮಹಿಮಳನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾಗಿದೆ. ಈ ಕೆಳಗಿನ ವಚನವು ಅವಳನ್ನು ಅರಿಯಲು ಸಹಾಯಕ-

ಶ್ರೀ ಗುರುವೆ ತಾಯಿ-ತಂದೆಯಾಗಿ, ಲಿಂಗವೆ ಪತಿಯಾಗಿ
ಜಂಗಮವೆ ಅತ್ತೆ-ಮಾವಂದಿರಾಗಿ, ಶಿವಭಕ್ತರೆ ಬಾಂಧವರಾಗಿ
ಸತ್ಯ ಸದಾಚಾರವೆಂಬ ಮನೆಗೆ ಕಳುಹಿದರಾಗಿ,
ಶರಣಸತಿ ಎಂಬ ನಾಮ ನಿಜವಾಗಿತ್ತು
ಅದರಂತೆ ಇರುವೆ ಹಿಂದು ಮುಂದರಿಯದೆ ನಡೆವೆ
ಮನಕ್ಕೆ ಮನ ಸಾಕ್ಷಿಯಾಗಿ ಮಾಡುವೆ
ಬಸವಣ್ಣ ಪ್ರಿಯ ಚನ್ನಸಂಗಯ್ಯ ನಿಮ್ಮಡಿಗಳಿಗೆ॥

ಎಂಬ ಅವಳ ಆತ್ಮಸಾಕ್ಷಿಯ ಈ ವಚನದಿಂದ ಅವಳು ಬಾಳಿದ ಪವಿತ್ರ ಬಾಳಿನ ಪರಿಚಯವಾಗುತ್ತದೆ.

"ಅಕ್ಕನಾಗಮ್ಮ ಬಸವಣ್ಣನನ್ನು ನೆರಳಿನಂತೆ ಹಿಂಬಾಲಿಸಿ, ತಾಯಿಯಂತೆ ಪಾಲಿಸಿ ಪೋಷಿಸಿ, ಅಕ್ಕನಾಗಿ ಅಕ್ಕರತೆಯ ಸಕ್ಕರೆಯನ್ನು ಉಣಿಸಿ ತಿನಿಸಿ, ಮುಂದೆ ಆತನನ್ನೇ ಗುರುವೆಂದು ಅಂಗೀಕರಿಸಿ ಅಧ್ಯಾತ್ಮದ ಅಮೃತ ಸರಸಿಯಲ್ಲಿ ಆತ್ಮಹಂಸನಾಗಿ, ಆನಂದದಿಂದ ಓಲಾಡಿ, ತೇಲಾಡಿ ಕೊನೆಗೆ ಬಸವನ ಬಳಗವನ್ನು ರಕ್ಷಿಸಲು ಖಡ್ಗಧಾರಿಯಾಗಿ, ಕಲಿಗಿಂತ ಕಲಿಯಾಗಿ ಕಾದಿದವೀರ ಮಾತೆಯಾಕೆ" ಎಂದು ಸಾಹಿತ್ಯ ಸೌರಭವನ್ನೇ ಡಾ॥ ಸಿದ್ದಯ್ಯ ಪುರಾಣಿಕರು ಸೂಸಿದ್ದಾರೆ. ಇದೇ ರೀತಿ

ಆಕೆ ಸರ್ವಶರಣರ ಗೌರವಕ್ಕೂ ಪಾತ್ರಳಾಗಿದ್ದುದು ಆಕೆಯ ಹಿರಿಮೆಯನ್ನು ತೋರಿಸುತ್ತದೆ.

**ಕೊನೆಯ ದಿನಗಳು**

ನಾಗಲಾಂಬಿಕೆಯು ಶರಣ ಸೈನ್ಯದೊಂದಿಗೆ, ಕಾದ್ರೊಳ್ಳಿಯ ಯುದ್ಧದ ನಂತರ ಶರಣರೊಡನೆ ಉಳುವಿಯ ಕಡೆ ಹೋದಳು. ಅಲ್ಲಿ ಶರಣರು ಹೊಳೆಯ ದಡದಲ್ಲಿ ಮಹಾಮನೆಯೆಂಬ ಅದ್ಭುತ ಗುಹೆಯನ್ನು ಮಾಡಿಕೊಂಡು ಅಲ್ಲಿ ತನ್ನ ರಕ್ಷಣೆಗಾಗಿ ಹೊಳೆಯ ಕೆಲಭಾಗವನ್ನು ತಿರುವಿ ಮಹಾಮನೆಗೆ ಒಂದು ಕಂದಕ ಮಾಡಿಕೊಂಡರು. ಅಲ್ಲಿಗೂ ಬಂದ ವೈರಿಗಳೊಡನೆ ಗುಹೆಯ ಸುತ್ತಲೂ ಕಾಳಗವಾಯಿತು. ಆಗ ಶರಣರೆಲ್ಲರೂ ಪರಲೋಕವನ್ನೈದಿದರು. ಆ ಸಂದರ್ಭದಲ್ಲಿ, ಅಕ್ಕನಾಗಮ್ಮ ಮತ್ತು ನುಲಿಯ ಚಂದಯ್ಯ ಮಾತ್ರ ಉಳಿದಿರಬಹುದೆಂದು ಊಹಿಸುತ್ತಾರೆ. ಶಿವಮೊಗ್ಗಾ ಪ್ರಾಂತವನ್ನು ವೀರಶೈವರಿಗೆ ಉಳಿಸಬೇಕೆಂಬ ಉದ್ದೇಶ ಶರಣರಿಗಿತ್ತು. ಬಹು ಪ್ರಸಿದ್ಧಳಾದ ಅಕ್ಕನಾಗಮ್ಮ ಅಲ್ಲಿಗೆ ಹೋದರೆ, ಜನರು ಸಹಕಾರ ನೀಡಬಹುದೆಂದು ಭಾವಿಸಿ, ಶರಣರ ಇಚ್ಛೆಯಂತೆ ಭದ್ರಾನದೀ ತೀರ ಪ್ರದೇಶಕ್ಕೆ ಅಕ್ಕನಾಗಮ್ಮ ಎಣ್ಣೆಹೊಳೆಗೆ ಬಂದಳು. ಅಲ್ಲಿ, ಶ್ರೀಶೈಲದಿಂದ ಸಹಾಯ ಬರುವವರೆಗೆ ಕಾಯಬೇಕೆಂದು ನಿಶ್ಚಯಿಸಿದಳು. ಆದರೆ ಇಲ್ಲಿ ಆಕೆ ಬಹಳ ದಿನ ಬದುಕಲಿಲ್ಲ. ಅಲ್ಲಿಯೇ ಸಮಾಧಿಸ್ಥಳಾಗಿ ಇಹಲೋಕವನ್ನು ತ್ಯಜಿಸಿದಳು. ಅವಳ ಸಮಾಧಿಯೂ ಈಗಲೂ ಇದೇ ಸ್ಥಳದಲ್ಲಿ ಇದೆ. "ಹೀಗೆ ವೀರಶೈವ ಸಮಾಜ ಮತ್ತು ಧರ್ಮಕ್ಕೋಸ್ಕರ ನಾಗಲಾಂಬಿಕೆಯು ತನ್ನ ತಮ್ಮ ಬಸವೇಶ್ವರನಂತೆ ಅದ್ಭುತ ಕಾರ್ಯಗಳನ್ನು ಮಾಡುತ್ತ ಮರಣ ಹೊಂದಿದ್ದಾಳೆ." ಇಂತಹ ಮಹಾಶಿವಶರಣೆಯ ಬಗ್ಗೆ ವೀರಶೈವರು ತುಂಬಾ ಗೌರವದಿಂದ, ಭಕ್ತಿಭಾವದಿಂದ ನುಡಿಯಬೇಕು. ನಡೆಯಬೇಕು ಬದುಕಬೇಕು. ಈಗ ಜನರು ಸಮಾಜದಲ್ಲಿ ಬಸವ, ಬಸವಣ್ಣ, ಬಸವರಾಜ, ಬಸಮ್ಮ ಎಂದು ಮಕ್ಕಳಿಗೆ ಹೆಸರಿಟ್ಟು ಬಸವಣ್ಣನಿಗೆ ಗೌರವ ತೋರಿಸುತ್ತಿರುವಂತೆ, ನಾಗಮ್ಮ, ನಾಗಲಾಂಬಿಕೆ, ನಾಗಪ್ಪ, ನಾಗಯ್ಯ ಎಂದು ಹೆಸರಿಟ್ಟು ಗೌರವ ತೋರಿಸುತ್ತಾ ಬಂದಿದ್ದಾರೆ. ವೀರಶೈವ ಧರ್ಮ ಸಮಾಜದಲ್ಲಿ ಇರುವವರೆಗೂ ಅಕ್ಕನಾಗಮ್ಮನ ಹೆಸರು ಶಾಶ್ವತವಾಗಿ ಉಳಿಯುತ್ತದೆ.

■

# ೩. ಸಂಯಕ್‌ಜ್ಞಾನಿ ಮುಕ್ತಾಯಕ್ಕ

ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಮಹಾ ಶರಣೆಯರಲ್ಲಿ ಮುಕ್ತಾಯಕ್ಕನೂ ಒಬ್ಬ ಬಹುಮುಖ್ಯ ಶರಣೆ. ಈಕೆಯ ವಿಷಯವಾಗಿ ನೀಲಾಂಬಿಕೆ, ನಾಗಲಾಂಬಿಕೆಯರಂತೆ ಕಾವ್ಯ ಹಾಗೂ ಪುರಾಣಗಳಲ್ಲಿ ಬಹಳಷ್ಟು ಸಂಗತಿಗಳು ತಿಳಿಯುವುದಿಲ್ಲ. ಸ್ವಲ್ಪಮಟ್ಟಿನ ಅಂಶಗಳು ಶೂನ್ಯಸಂಪಾದನೆ ಮತ್ತು ಆ ಪರಂಪರೆಗೆ ಸೇರಿದ ಕೆಲವು ಕೃತಿಗಳಲ್ಲಿ ದೊರೆಯುತ್ತವೆ. ಈಕೆಯು ಬರೆದ ೩೭ ವಚನಗಳು ದೊರೆತಿವೆ, ವಚನ ಮುದ್ರಿಕೆ 'ಅಜಗಣ್ಣ' 'ಅಜಗಣ್ಣ ತಂದೆ' ಎಂಬುದು.

ಕಾವ್ಯಗಳ ಆಧಾರದಿಂದ ಮುಕ್ತಾಯಕ್ಕನ ತವರೂರು ಲಕ್ಕುಂಡಿ, ಇವಳನ್ನು 'ಮಸಳಿಕಲ್ಲು' ಎಂಬ ಗ್ರಾಮಕ್ಕೆ ಕೊಟ್ಟು ಮದುವೆಯಾಗಿತ್ತು ಎಂದು ತಿಳಿದು ಬರುತ್ತದೆ. ಈಕೆಯ ತಂದೆ-ತಾಯಿಗಳು ಯಾರು ಎಂದು ಎಲ್ಲಿಯೂ ತಿಳಿದುಬಂದಿಲ್ಲ. ಆದರೆ ಅಜಗಣ್ಣ ಎಂಬ ಒಬ್ಬ ಸೋದರನಿದ್ದ. ಅವನು ಬಹು ದೊಡ್ಡ ಅನುಭಾವಿ. ಮುಕ್ತಾಯಕ್ಕನಿಗೆ ಅಣ್ಣನ ಬಗ್ಗೆ ಅತ್ಯಂತ ಪೂಜ್ಯತೆ, ಅವನ 'ಶಿವಯೋಗ'ದಿಂದ ಪ್ರಭಾವಿತಳಾಗಿ ಅವರನ್ನೇ ಗುರುವಾಗಿ ಸ್ವೀಕರಿಸಿದ್ದಳು. ಹಾಗಾಗಿ ತನ್ನ ವಚನಗಳಿಗೆ ಗುರುವಿನ ಹೆಸರನ್ನೇ ಅಂಕಿತವನ್ನಾಗಿ ಇಟ್ಟುಕೊಂಡಿದ್ದಾಳೆ. ಅಜಗಣ್ಣನೂ ಸಹ ಅನೇಕ ಉನ್ನತ ಮಟ್ಟದ ವಚನಗಳನ್ನು ಬರೆದಿದ್ದಾನೆಂದು, ಇತರ ಶರಣರ ವಚನಗಳಿಂದ ತಿಳಿದುಬರುತ್ತದೆ. ಆದರೆ ಆತನದಾದ ಯಾವ ವಚನವೂ ಇದುವರೆಗೂ ದೊರೆತಿಲ್ಲ. ಆತನ ವಚನ ಮುದ್ರಿಕೆ 'ಮಹಾಘನ ಸೋಮೇಶ್ವರ' ಎಂದು ಇತ್ತೀಚೆಗೆ ತಿಳಿದುಬಂದಿದೆ (ಅಜಗಣ್ಣನ ವಚನಗಳ ಅಭಿಜ್ಞೆ: ಡಾ॥ ಎಂ. ಚಿದಾನಂದಮೂರ್ತಿ ಮತ್ತು ಶಿವಣ್ಣ) ಈ ಹೆಸರಿನ ದೇವಾಲಯ ಲಕ್ಕುಂಡಿಯಲ್ಲಿ ಈಗಲೂ ಇದೆ.

ಅಜಗಣ್ಣ ಮತ್ತು ಮುಕ್ತಾಯಿಯರ ಹೆಸರುಗಳು ಶರಣ ಚರಿತ್ರೆಯಲ್ಲಿ ವಿಶಿಷ್ಟಸ್ಥಾನ ಪಡೆದಿದೆ. ಅಜಗಣ್ಣನು ಗುಪ್ತ ಭಕ್ತಿಯ ಮಹಾ ಅನುಭಾವಿ ಶರಣನಾದರೆ, ಮುಕ್ತಾಯಕ್ಕ ತನ್ನ ಸಾಧನೆಯ ಬಲದಿಂದ ಅಲ್ಲಮ ಪ್ರಭುವನ್ನೇ ಅಲ್ಲಾಡಿಸಿ ನೋಡಿದ ಕೆಚ್ಚುಳ್ಳ ಶರಣೆ. ಈ ಅಣ್ಣ-ತಂಗಿಯರ ಸಂಬಂಧ ಕೇವಲ ಲೌಕಿಕವಾಗಿರದೆ, ಅಧ್ಯಾತ್ಮಿಕವಾಗಿಯೂ ಇತ್ತು. ಅಜಗಣ್ಣ ಅಧ್ಯಾತ್ಮದ ಮಾರ್ಗದಲ್ಲಿ ಬಹುದೂರ ಸಾಗಿದ್ದ. ಮುಕ್ತಾಯಕ್ಕ ಆ ಪ್ರಭಾವಕ್ಕೆ ಒಳಗಾಗಿ ಪುನೀತಳಾಗಿದ್ದಳು; ಅಣ್ಣನನ್ನು

ಗುರುವಾಗಿ ಸ್ವೀಕರಿಸಿದ್ದಳು. ಈ ಗುರುವಿನ ಮಾರ್ಗದರ್ಶನ ಪಡೆದು ಶರಣ ಜೀವನದಲ್ಲಿ ಮುಂದುವರಿಯಬೇಕೆಂಬ ಹಂಬಲ ಉಳ್ಳವಳಾಗಿದ್ದಳು. ಆದರೆ ವಿವಾಹವಾಗಿ ಪತಿಯ ಮನೆಗೆ ಹೋಗಬೇಕಾದಾಗ, ಅವಳ ದುಃಖಕ್ಕೆ ಮಿತಿ ಇರಲಿಲ್ಲ. ಅಲ್ಲಿ ತನಗೆ ಅಧ್ಯಾತ್ಮಿಕ ಮಾರ್ಗದರ್ಶನ ನೀಡುವವರಿಲ್ಲವಾಗುತ್ತಾರೆ. ತನ್ನ ಶಿವಯೋಗ ಸಾಧನೆ ಅರ್ಧಕ್ಕೆ ನಿಂತುಬಿಡುತ್ತದೆ ಎಂಬ ಭಾವನೆಯಿಂದ ಅವಳಿಗೆ ದುಃಖ ತಡೆಯುವುದಾಗುವುದಿಲ್ಲ. ಆಗ ಅಜಗಣ್ಣ ಸಮಾಧಾನ ಪಡಿಸಿ, ಮುಂದೆ ಮಾರ್ಗದರ್ಶನ ನೀಡುವ ಭರವಸೆ ಕೊಟ್ಟು ಕಳಿಸುತ್ತಾನೆ.

### ಮುಕ್ತಾಯಕ್ಕನ ವ್ಯಾಕುಲತೆ

ಒಂದು ದಿನ ಅಜಗಣ್ಣ ಮನೆಯ ಒಳಗೆ ಹೋಗುವಾಗ ಬಾಗಿಲ ಚೌಕಟ್ಟು ತಲೆಗೆ ಬಡಿಯುತ್ತದೆ. 'ಓಂ ನಮಃ ಶಿವಾಯ' ಎಂದು ಉಚ್ಚರಿಸುತ್ತಾ ಲಿಂಗದಲ್ಲಿ ಒಂದಾಗುತ್ತಾನೆ! ಸುದ್ದಿ ಮಸಳಿಕಲ್ಲಿನಲ್ಲಿ ಇದ್ದ ಮುಕ್ತಾಯಿಗೆ ಮುಟ್ಟುತ್ತಲೇ, ಆಕೆ ದುಃಖತಪ್ತಳಾಗಿ ಓಡೋಡಿ ಲಕ್ಕುಂಡಿಗೆ ಬರುತ್ತಾಳೆ. ಅಣ್ಣನ ನಿರ್ಜೀವವಾಗಿದ್ದ ದೇಹವನ್ನು ನೋಡಿ ಎದೆ ಒಡೆದಂತಾಗುತ್ತದೆ. ಅವಳು ಅಣ್ಣನ ಮೇಲಿಟ್ಟ ಪ್ರೀತಿ, ಅವನಿಂದ ಆಧ್ಯಾತ್ಮ ಮಾರ್ಗದಲ್ಲಿ ಮುಂದುವರಿಯಬೇಕೆಂದಿದ್ದ ಆಸೆ ಯಾವುದಕ್ಕೂ ಈಗ ಅರ್ಥವಿಲ್ಲದಂತಾಗಿ, ಆಕೆಗೆ ಕುರುಡನ ಕೈಲಿದ್ದ ಊರುಗೋಲನ್ನು ಥಟ್ಟನೆ ಕಿತ್ತುಕೊಂಡಂತಾಗುತ್ತದೆ. ತನ್ನ ಅಣ್ಣನ ಕಳೇಬರವನ್ನು ತೊಡೆಯ ಮೇಲಿಟ್ಟುಕೊಂಡು, ನಾನಾವಿಧವಾಗಿ ಅವನ ಸಾಧನೆಗಳನ್ನು ಬಣ್ಣಿಸುತ್ತಾ ಸಾಮಾನ್ಯರಂತೆ ಗೋಳಾಡುತ್ತಿರುತ್ತಾಳೆ.

ಅದೇ ಸಮಯದಲ್ಲಿ ಅಲ್ಲಮ ಪ್ರಭುವು ಭಕ್ತರಲ್ಲಿದ್ದ ಅರೆ-ಕೊರೆಗಳನ್ನು ಗುರುತಿಸಿ, ಅದಕ್ಕೆ ಪೂರ್ಣ ಸ್ವರೂಪ ನೀಡಿ ತಮ್ಮ-ತಮ್ಮ ಮಾರ್ಗದಲ್ಲಿ ಮುಂದುವರಿಯುವಂತೆ ಮಾಡಲು, ಸಂಚಾರ ಹೊರಟಿರುತ್ತಾನೆ. ಆತನ ಹೃದಯಕ್ಕೆ ಈ ಶರಣೆಯ ನೋವಿನ ತರಂಗಗಳು ಮುಟ್ಟಿ ಆತನನ್ನು ಇತ್ತ ಸೆಳೆಯುತ್ತವೆ. ಅಲ್ಲಮ ಪ್ರಭುವಿನ ದಿವ್ಯ ದೀವಿಗೆಯ ಪ್ರಕಾಶಕ್ಕೆ ಒಳಗಾದ ಪ್ರಥಮ ಶರಣೆ ಮುಕ್ತಾಯಕ್ಕ, ಮಹಾ ಅನುಭಾವಿ. ಅಧ್ಯಾತ್ಮದ ಪೂರ್ಣ ಹಂತ ಏರುವ ಮೊದಲೇ ಗುರುವಾದ ಅಜಗಣ್ಣ ಐಕ್ಯವಾದುದರಿಂದ ಮುಂದುಗಾಣದವಳಾಗಿರುತ್ತಾಳೆ. ಹಾಗಾಗಿ ಬೆಳಕು ಮರೆಯಾಗಿ ಕತ್ತಲೆ ಆವರಿಸಿದಂತೆನಿಸಿರುತ್ತದೆ. 'ಕಣ್ಣನ್ನು ಕಟ್ಟಿ ಕನ್ನಡಿಯನ್ನು ಮುಂದೆ ಹಿಡಿದಾಗಿನ' ಸ್ಥಿತಿ ಅವಳದಾಗುತ್ತದೆ. ತೇಜಸ್ವಿ ಪುರುಷನಂತೆ ಕಾಣುವ ಕಳೇಬರವನ್ನು ತೊಡೆಯಮೇಲಿಟ್ಟುಕೊಂಡು ಶರಣೆಯಂತೆ ತೋರುವ ಒಬ್ಬ ಸ್ತ್ರೀ ಅಧ್ಯಾತ್ಮದ ಮಾತನಾಡುತ್ತಾ ದುಃಖದಿಂದ ರೋದಿಸುವುದನ್ನು ಅಲ್ಲಮ ಪ್ರಭು ನೋಡುತ್ತಾನೆ. ನೋಡಲು ಶರಣೆಯಂತೆ ಕಾಣುತ್ತಾಳೆ. ಆದರೆ ಎಲ್ಲವನ್ನೂ ಅರಿತೂ

ಅಧ್ಯಾತ್ಮವನ್ನರಿಯದ ಪಾಮರಳಂತೆ ದುಃಖಿಸುತ್ತಿದ್ದಾಳೆ. ಮರವೆಂಬ ಕತ್ತಲೆ ಆವರಿಸಿದ ಈ ಶರಣೆಗೆ ಅರಿವೆಂಬ ಬೆಳಕು ಕೊಟ್ಟು ಸರಿಯಾದ ಪಥ ದರ್ಶನ ಮಾಡಬೇಕು ಎಂದುಕೊಳ್ಳುತ್ತಾನೆ ಪ್ರಭುದೇವ. ಹಾಗಾಗಿ ಅವರ ಸಂಭಾಷಣೆ ಪ್ರಾರಂಭವಾಗುತ್ತದೆ. ಈ ಬಗೆಗೆ ಶೂನ್ಯಸಂಪಾದನೆಯಲ್ಲಿ ವರ್ಣನೆಯಿದೆ. ಇವರ ಸಂಭಾಷಣೆ ದಾರ್ಶನಿಕ ಕಾವ್ಯರೂಪದ್ದಾಗಿದೆ. ಅನುಭಾವದ ರೀತಿಯ ಪ್ರಭುದೇವರ ಪ್ರಶ್ನೆಗಳಿಗೆ ಅನುಭಾವ ರೀತಿಯ ಪರಿಭಾಷೆಯಲ್ಲಿ ಮುಕ್ತಾಯಕ್ಕ ವಿವರಿಸುತ್ತಾಳೆ ಎಂದು ಡಾ॥ ವಿ.ಎಸ್. ಕಂಬಿಯವರು ಹೇಳಿದ್ದಾರೆ. 'ಪ್ರಭುದೇವರ ಆಧ್ಯಾತ್ಮಿಕ ಪ್ರಶ್ನೆಗಳಿಗೆ ಅಷ್ಟೇ ಎತ್ತರದ ನಿಲುವಿನ ಉತ್ತರ ಕೊಟ್ಟಿದ್ದಾಳೆ ಮುಕ್ತಾಯಕ್ಕ. ಬಹುಶಃ ವಚನಕಾರ್ತಿಯರಲ್ಲೇ ಇಷ್ಟು ಎತ್ತರದ ಆನುಭಾವಿಕ ನಿಲುವಿನಲ್ಲಿ ನಿಂತು ಮಹಾಜ್ಞಾನಿಯಾದ ಅಲ್ಲಮನನ್ನು ಎದುರಿಸಿದವರು ಮತ್ತೊಬ್ಬರಿಲ್ಲ' ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಇಂತಹ ಉನ್ನತ ಮಟ್ಟದ ಶರಣೆ ಸಾಮಾನ್ಯ ಸ್ತ್ರೀಯಂತೆ ಸಾವಿನ ಬಗ್ಗೆ ಮೋಹಾವೃತಳಾಗಿ ದುಃಖಿಸುವುದನ್ನು ಕಂಡು ಅಲ್ಲಮಪ್ರಭುವು,

ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು
ಕಂಗಳ ಮುತ್ತ ಪದಣಿಸುವಾಕೆ ನೀನಾರು ಹೇಳಾ?
'ಸಂದ ಸಂಪಗೆಯರಳ ತುಂಬಿ ಬಂಡುಂಬ ಭೇದವನರಿಯದೆ
ಹಂಬಲಿಸುವ ಪರಿತಾಪವೇನು ಹೇಳಾ?
ಅರಿವಿನೊಳಗಣ ಮರವಿದೇನು ಹೇಳಾ,' ಎಂದು ಕೇಳುತ್ತಾನೆ.

ನಿನ್ನ ಅಂಗೈಯಲ್ಲಿ ಜ್ಞಾನದಿಂದ ಅರಳಿ ಪರಿಪಕ್ವಗೊಂಡಿರುವ ತಲೆಯನ್ನು ಹಿಡಿದುಕೊಂಡು ಮುತ್ತಿನಂತಹ ಕಣ್ಣೀರ ಹನಿಗಳನ್ನು ಉದುರಿಸುತ್ತಿರುವ ನೀನು ಯಾರು? ಸಂಪಗೆಯ ಹೂವು ಸಂಪೂರ್ಣ ಅರಳಿದಾಗ ಅದರಲ್ಲಿರುವ ಬಂಡನ್ನು ದುಂಬಿ ಬಂದು ಕುಡಿದು ಹೋಗುತ್ತದೆ, ಹಾಗೆಯೇ ದಿವ್ಯಾತ್ಮಗಳು ಪರಿಪೂರ್ಣತೆಯನ್ನು ಪಡೆದು ತಮ್ಮ ಜ್ಞಾನದ ಸಾಧನೆಯ ಪ್ರಭಾವವನ್ನು ಬೀರಿಯಾದ ಮೇಲೆ ಆತ್ಮ, ದೇಹವನ್ನು ತ್ಯಜಿಸಿ ಹೋಗುವುದು ಪ್ರಕೃತಿ ಸಹಜ. ಇದರಲ್ಲಿ ದುಃಖ ಪಡುವ ಸಂಗತಿಯೇ ಇಲ್ಲ. ಈ ವಿಷಯವೆಲ್ಲವೂ ಜ್ಞಾನಿಗಳಿಗೆ ತಿಳಿದದ್ದೇ ಆದರೂ, ಮರವೆಗೆ ಒಳಗಾಗಿ, ಏನೋ ಆಗಬಾರದುದು ಆಗಿ ಹೋಗಿದೆಯೆಂಬಂತೆ ದುಃಖಿಸುತ್ತಿರುವ ನೀನಾರು? ಎಂದು ಪ್ರಶ್ನಿಸುತ್ತಾನೆ. ಆಗ ಮುಕ್ತಾಯಕ್ಕ,

ಆರೆಂದು ಕುರುಹ ಬೆಸಗೊಳಲು ಏನೆಂದು ಹೇಳುವೆನಯ್ಯಾ?
ಕಾಯದೊಳಗೆ ಮಾಯವಿಲ್ಲ
ಭಾವದೊಳಗೆ ಭ್ರಮೆಯಿಲ್ಲ

ಕರೆದು ಬೆಸಗೊಂಬಡೆ ಕುರುಹಿಲ್ಲ
ಒಬ್ಬರಿಗೂ ಹುಟ್ಟದೆ, ಅಯೋನಿಯಲ್ಲಿ ಬಂದು
ನಿರ್ಬುದ್ಧಿಯಾದವಳನೇನೆಂಬೆನಣ್ಣಾ
ತಲೆಯಳಿದು ನೆಲೆಗೆಟ್ಟು ಬೆಳಗುವ ಜ್ಯೋತಿ
ಎನ್ನ ಅಜಗಣ್ಣ ತಂದೆಯ ಬೆನ್ನಬಳಿಯುವಳಾನಯ್ಯ

ಎಂದು ಉತ್ತರಿಸುತ್ತಾಳೆ.

(ಯಾರೆಂದು ಕೇಳಿದರೆ ಏನು ಹೇಳಲಿ? ನನ್ನ ದೇಹಕ್ಕೆ ಮಾಯದ ಮುಸಿಕಿಲ್ಲ. ನಾನು ಭ್ರಮೆಯ ಭಾವದಲ್ಲೂ ಮುಳುಗಿಲ್ಲ. ಆದರೆ ನಾನು ಯಾರು ಎಂದು ಹೇಳಲು ಯಾವ ಕುರುಹೂ ಉಳಿದಿಲ್ಲ. ನಾನು ಒಬ್ಬರಿಗೂ ಹುಟ್ಟದೆ, ಅಯೋನಿಯಲ್ಲಿ ಬಂದು (ಇಷ್ಟಲಿಂಗದ ಶಿಶುವಾಗಿ ಶರಣೆಯಾಗಿ) ಈಗ ಗುರುವನ್ನೂ ಕಳೆದುಕೊಂಡು ಬುದ್ಧಿಹೀನಳಂತಾಗಿರುವ ನಾನು, ಬಾಗಿಲಕಟ್ಟಿಗೆ ತಲೆಬಡಿಸಿಕೊಂಡು ಜ್ಯೋತಿ ಸ್ವರೂಪನಾಗಿ ಹೋದ ಅಜಗಣ್ಣನ ತಂಗಿ ಎಂದುತ್ತರಿಸುತ್ತಾಳೆ.)

ನಾನು ನಿನ್ನ ಭಾವ–ನೀನು ನನ್ನ ನಗೆಣ್ಣೆ!

ಅಜಗಣ್ಣನ ಹೆಸರು ಕೇಳುತ್ತಲೇ ಪ್ರಭುವು, ಶರಣ ಅಜಗಣ್ಣನ ದೇಹಕ್ಕೆ ಕೈ ಜೋಡಿಸಿ ನಮಿಸುತ್ತಾನೆ. ಇದನ್ನು ನೋಡಿದ ಮುಕ್ತಾಯಕ್ಕನು

ಸಚ್ಚಿದಾನಂದ ಸ್ವರೂಪನಾದ, ವಾಙ್ಮನಕ್ಕೆ ಗೋಚರವಾದ
ಜ್ಞಾನ ಕ್ರಿಯೆನೊಳಕೊಂಡು ನಿಂದ ಜಂಗಮವೆ ಅಂಗ ಪ್ರಾಣವಾದ,
ಶರಣರನೊಳಕೊಂಡು ಚಿದ್ಘನದೊಳಗೆ ಅವಿರಳೈಕ್ಯವಾದ
ಎನ್ನ ಅಜಗಣ್ಣ ತಂದೆಯನರಿದು ಶರಣೆಂಬಾತ
ನೀನಾರು ಹೇಳಯ್ಯಾ?

ಎಂದು, ಅಲ್ಲಮ ಪ್ರಭುವಿನ ಪರಿಚಯವಿಲ್ಲದ ಆಕೆ, (ಸಚ್ಚಿದಾನಂದ ಸ್ವರೂಪನಾದ, ಮಾತಿಗೂ ಮನಸ್ಸಿಗೂ ಗೋಚರವಾದ ಜ್ಞಾನ, ಕ್ರಿಯೆಗಳನ್ನು ಒಳಗೊಂಡು ದೇಹಧರಿಸಿರುವ ಜಂಗಮನಾದ ಶರಣರೊಡಗೂಡಿ ಚಿದ್ಘನದೊಳಗೆ ಒಂದಾಗಿರುವ ಅಜಗಣ್ಣ ತಂದೆಯೆಂಬ ಹೆಸರು ಕೇಳಿದ ಕೂಡಲೇ ನಮಸ್ಕರಿಸುವ ನೀನಾರು ಹೇಳಾ ಎಂದು) ಕೇಳುತ್ತಾಳೆ.

ಈ ಪ್ರಶ್ನೆಗೆ ಪ್ರಭುಕೊಟ್ಟ ಉತ್ತರ ಅದ್ಭುತವಾಗಿದೆ. ಶರಣರು ತಮ್ಮ ಶರಣ ಸಂಬಂಧವನ್ನು ಹೇಳಿಕೊಳ್ಳುವರೇ ವಿನಃ, ತಮ್ಮ ಪೂರ್ವಾಶ್ರಮದ ತಂದೆ–ತಾಯಿಗಳ ವಿವರವನ್ನು ಯಾವ ಸಂದರ್ಭದಲ್ಲೂ ಕೊಡುವುದಿಲ್ಲ. ಅಂತೆಯೇ ವೈರಾಗ್ಯ

ಚಕ್ರವರ್ತಿಯೂ, ಶರಣ ಶ್ರೇಷ್ಠನೂ ಆದ ಅಲ್ಲಮ ಪ್ರಭುವು ತನ್ನ ಪರಿಚಯವನ್ನು ಹೀಗೆ ಕೊಡುತ್ತಾನೆ:-

ಶರಣು, ಶರಣಾರ್ಥಿ ಎಲೆತಾಯೆ
ಧರೆಯಾಕಾಶ ಮನೆಗಟ್ಟದಂದು
ಹರಿವನಿಲ, ಅಗ್ನಿ, ಜಲ ಮೊಳೆದೋರದಂದು ಹುಟ್ಟಿದಳೆಮ್ಮವ್ವೆ
ಅದಕ್ಕೆ ಮೊದಲೇ ಹುಟ್ಟದೆ ಬೆಳೆನೆಮ್ಮಯ್ಯ
ಈ ಇಬ್ಬರ ಬಸುರಲಿ ಬಂದೆ ನಾನು
ಎನ್ನ ತಂಗಿಯರೈವರು ಮೊರೆಗೆಟ್ಟು ಹೆಂಡಿರಾದರೆನಗೆ
ಕಾಮ ಬಾಣವ ತಾಗದೆ, ಅವರ ಸಂಗವ ಮಾಡಿದೆನು
ನಾನಿಮ್ಮ ಭಾವನಲ್ಲಯ್ಯನು. ನೀನೆನಗೆ ನೆಗೆವೆಣ್ಣು ನಮ್ಮ ಗುಹೇಶ್ವರನ
ಕೈವಿಡಿದು ಪರಮ ಸುಖಿಯಾಗು
ಕಳವಳಕಂದರದೆಯೇನು ಹೇಳಾ? ಎನ್ನುತ್ತಾನೆ.

(ಭೂಮಿಯ ನೆಲವಾಗಿ ಆಕಾಶವು ಛಾವಣಿಯಾಗಿ ಇನ್ನೂ ಸೃಷ್ಟಿ ಆಕಾರ ಪಡೆಯದಿದ್ದಾಗ ಬೆಂಕಿ, ಗಾಳಿ, ನೀರು ಇನ್ನೂ ಉತ್ಪನ್ನವಾಗುವ ಮೊದಲೇ ಹುಟ್ಟಿದ ಆದಿಶಕ್ತಿಯೇ ನಮ್ಮ ತಾಯಿ, ಇದಕ್ಕೂ ಮೊದಲೇ, ಹುಟ್ಟದೇ ಸ್ವಯಂಭುವಾಗಿ ಆವಿರ್ಭವಿಸಿದ ಪರಮಾತ್ಮನೇ ನನ್ನ ತಂದೆ, ಅವರ ಹೊಟ್ಟೆಯಲ್ಲಿ ಹುಟ್ಟಿ ಬಂದೆ, ನನ್ನೊಡನೆಯೇ ಜನಿಸಿದ ಐವರು ತಂಗಿಯರು (ಪಂಚೇಂದ್ರಿಯಗಳು) ಬೇರೆ ದಾರಿಯಿಲ್ಲದೆ ನನ್ನ ಆಧೀನಕ್ಕೊಳಗಾದರು (ಹೆಂಡಿರಾದರು) ಎಲ್ಲರೂ, ಸಾಮಾನ್ಯವಾಗಿ ತಮ್ಮೊಡನೆಯೇ ಹುಟ್ಟುವ ಪಂಚೇಂದ್ರಿಯಗಳಿಗೆ ವಶರಾಗಿ ಮಾಡಬಾರದುದನ್ನೆಲ್ಲಾ, ಬೇಡವಾದುದನ್ನೆಲ್ಲಾ ಮಾಡುತ್ತಾರೆ. ದುರ್ಮಾರ್ಗಕ್ಕೆ ಎಳೆವ ಶಕ್ತಿ ಪಂಚೇಂದ್ರಿಯಗಳದ್ದು, ಅಂತಹ ಪಂಚೇಂದ್ರಿಯಗಳನ್ನು ನಾನು ದೃಢ ಮನಸ್ಸಿನಿಂದ ಹಿಡಿತದಲ್ಲಿ ಇಟ್ಟುಕೊಂಡೆನಾಗಿ ನನ್ನ ಹಿಡಿತದಲ್ಲಿ ಉಳಿದಿದೆ (ಮೊರೆಗೆಟ್ಟು ಹೆಂಡಿರಾದರೆನಗೆ) ಯಾವ ಆಸೆ, ಆಮಿಷಗಳಿಗೂ ಒಳಗಾಗದೆ, ಪಂಚೇಂದ್ರಿಯ ಗಳೊಂದಿಗೆ ಇದ್ದೇನೆ. (ಕಾಮಬಾಣವ ತಾಗದೆ ಅವರ ಸಂಗವ ಮಾಡಿದೆನು). ಹೀಗಿರುವ ನಾನು ನಿನ್ನ ಭಾವ (ಸೋದರಿಯರ ಗಂಡ) ಏಕೆಂದರೆ ನಿನ್ನೊಡನೆಯೂ ಅವೇ ಪಂಚೇಂದ್ರಿಯಗಳು ಹುಟ್ಟಿ, ನಿನ್ನ ಸೋದರಿಯರಾಗಿದ್ದಾರೆ. ಅವೇ ಪಂಚೇಂದ್ರಿಯಗಳು ನನ್ನ ಅಧೀನಕ್ಕೊಳಪಟ್ಟ ಹೆಂಡತಿಯರಾಗಿದ್ದಾರೆ. ಆದುದರಿಂದ ನಿನ್ನ ಸೋದರಿಯರ ಗಂಡನಾದ ನಾನು ನಿನಗೆ 'ಭಾವ' ಅಲ್ಲವೆ? ನೀನು ನನಗೆ ನಗೆವೆಣ್ಣು ಕೂಡ ಏಕೆಂದರೆ ನೀನು ಶರಣೆ-ಹಾಗಾಗಿ ನಿನ್ನ ಇಷ್ಟಲಿಂಗ ನಿನ್ನ ಪತಿ. ನಾನು ಶರಣ ಹಾಗಾಗಿ ನನ್ನ ಇಷ್ಟಲಿಂಗ ನನ್ನ ಪತಿ. ಇದರಿಂದ ನಾವಿಬ್ಬರೂ

ನಮ್ಮ ನಮ್ಮ ಲಿಂಗದ ಪತ್ನಿಯರಾಗಿ ನಗೆವೆಣ್ಣು (ನೆಗೆಣ್ಣೆ)ಯರಾಗಿದ್ದೇವೆ. ಹೀಗಿದೆ ನಮ್ಮಿಬ್ಬರ ಸಂಬಂಧ ಎಂದು ಹೇಳುವ ಮೂಲಕ ಅಲ್ಲಮ ಪ್ರಭುವು ಮುಕ್ತಾಯಕ್ಕನಿಗೆ, 'ಶರಣನಾದವನು ಇಂದ್ರಿಯಗಳಿಗೆ ವಶನಾಗದೆ, ಇಂದ್ರಿಯ ಜನ್ಯವಾದ ಆಸೆ, ಮೋಹ ಮುಂತಾದ ಮಾಯೆಗಳಿಗೆ ಒಳಗಾಗದೆ, ಲೌಕಿಕರಂತೆ ಸಾವು-ನೋವುಗಳಿಗೆ ದುಃಖಿಸದೆ ಇರಬೇಕು' ಎಂಬ ಅಂಶವನ್ನೂ ಪರೋಕ್ಷವಾಗಿ ತಿಳಿಸುತ್ತಾನೆ ಮತ್ತು ನೀನು ಗುಹೇಶ್ವರನನ್ನು ನಂಬಿ ಪರಮ ಸುಖಿಯಾಗು, ಸಾಮಾನ್ಯರಂತೆ ಕಳವಳಗೊಳ್ಳುವುದು, ದುಃಖಿಸುವುದು ಸರಿಯಲ್ಲವೆಂದು ಸಲಹೆ ನೀಡುತ್ತಾನೆ.

ಇಷ್ಟು ಹೇಳಿದರೂ ಮುಕ್ತಾಯಕ್ಕನಿಗೆ ತನ್ನ ಅಣ್ಣ ಅಜಗಣ್ಣನ ಸಾಧನೆ, ಯೋಗ ಮತ್ತು ಗುಪ್ತ ಭಕ್ತಿಗೆ ಸಮನಾದುದು ಯಾವುದೂ ಇಲ್ಲ. ಈ ಅಲ್ಲಮನ ಈ ಬೋಧೆ ತನ್ನ ಅಣ್ಣನ ಆಧ್ಯಾತ್ಮ ಶಕ್ತಿಯ ಮುಂದೆ ಏನೂ ಅಲ್ಲವೆನ್ನಿಸಿ, ಅವನ ಶಕ್ತಿ, ಸಾಮರ್ಥ್ಯಗಳ ವರ್ಣನೆಯನ್ನು ಮಾಡುತ್ತಾಳೆ.

ನೀರ ಬೊಂಬೆಗೆ ನಿರಾಳದ ಗೆಜ್ಜೆಯಕಟ್ಟಿ
ಬಯಲ ಬೊಂಬೆಯ ಕೈಯ್ಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ
ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ
ಅಗ್ನಿ ಕರಗಿ ಉಳಿದುದಕ್ಕೆ ಬೆರಗಾದೆನಯ್ಯಾ
ಎನ್ನ ಅಜಗಣ್ಣನ ಯೋಗಕ್ಕೆ

ಎನ್ನ ಅಜಗಣ್ಣ ಎಲ್ಲರಂತಲ್ಲ. ಸಾಮಾನ್ಯರಿಗೆ ಸಾಧ್ಯವಾಗದ ಅನೇಕ ಅಸಾಧ್ಯಗಳನ್ನೂ ಸಾಧಿಸಿದ ಮಹಾಯೋಗಿ. ನೀರಬೊಂಬೆಗೆ ನಿರಾಳವ ಕಟ್ಟಿದವನು. ಅದನ್ನು ಬಯಲು ಬೊಂಬೆಯ ಕೈಯ್ಯಲ್ಲಿ ಕೊಟ್ಟು ಮುದ್ದಾಡಿಸುವನು. ಕರ್ಪೂರಕ್ಕೆ ಅಗ್ನಿ ಸೋಕಿದೊಡನೆ ಗುರುತಿಲ್ಲದಂತೆ ಉರಿದು ಹೋಗುವುದು. ಆದರೆ ನನ್ನ ಅಜಗಣ್ಣನ ಯೋಗದ ಪ್ರಭಾವದಿಂದ ಕರ್ಪೂರದಿಂದ ಮಾಡಿದ ಬೊಂಬೆಯನ್ನು ಬೆಂಕಿಯಲ್ಲಿ ಮಾಡಿದ ಸಿಂಹಾಸನದ ಮೇಲೆ ಕೂರಿಸಿದರೆ, ಅಗ್ನಿ ಕರಗಿ ಹೋಗುತ್ತದೆ ಕರ್ಪೂರದ ಪುತ್ಥಳಿ ಉಳಿಯುತ್ತದೆ. ಇಂತಹ ಅದ್ಭುತವನ್ನು ಮಾಡುವ ಶಕ್ತಿ ಅಜಗಣ್ಣನ ಯೋಗಕ್ಕಿದೆ ಎಂದು ಪ್ರಭುವಿಗೆ 'ಅಜಗಣ್ಣನ ದೇಹ ಸಾವುಕಂಡರೂ, ಕರ್ಪೂರದಂತಹ ಅಜಗಣ್ಣ ನಾಶವಾಗದೆ ಉಳಿದಿದ್ದಾನೆ ಎಂದು ಬಣ್ಣಿಸುತ್ತಾಳೆ. ಆಗ ಪ್ರಭುವು, ಅಜಗಣ್ಣನು ಅಳಿಯುವವನು ಅಲ್ಲ ಉಳಿಯುವವನು ಅಲ್ಲ. ಅವನು ಇದನ್ನೆಲ್ಲಾ ಮೀರಿದ ಮಹಾಶಕ್ತಿ, ನೀನು ಆ ಶಕ್ತಿಯನ್ನು ಅರಿಯಲು ಮೊದಲು ನಿನ್ನ ಆತ್ಮಲಿಂಗವನ್ನು ಅರಿ. ಮರಹು ನಷ್ಟವಾಗಿ ಅರಿವು ಸ್ವಯವಾದರೆ ಗುಹೇಶ್ವರಲಿಂಗ ತಾನೇ ಸ್ಪಷ್ಟವಾಗುತ್ತಾನೆ. ಮೊದಲು ತನ್ನನ್ನು ತಾನು ಅರಿತುಕೊಳ್ಳಬೇಕು ಎಂದು ಮಾರ್ಗದರ್ಶನ ಮಾಡಲು, ಮುಕ್ತಾಯಕ್ಕನು

ಗುರುವಚನದಿಂದಲ್ಲದೆ ಲಿಂಗವನರಿಯಬಾರದು
ಗುರುವಚನದಿಂದಲ್ಲದೆ ಜಂಗಮವನರಿಯಬಾರದು
ಗುರುವಚನದಿಂದಲ್ಲದೆ ಪ್ರಸಾದವನರಿಯಬಾರದು
ಗುರುವಚನದಿಂದಲ್ಲದೆ ತನ್ನತಾನರಿಯಬಾರದು
ಹಿಂದಣ ಜನ್ಮದಲ್ಲಿ ಲಿಂಗವ ಪೂಜಿಸಿ ಇಂದು ಜ್ಞಾನೋದಯವಾದೊಡೆ
ಗುರುವಿಲ್ಲದ ಮುನ್ನ ಆಯಿತ್ತೆನ್ನಬಹುದೆ?
ತನ್ನಲ್ಲಿ ತಾನು ಸನ್ನಿಹಿತನಾದೆನೆಂದೊಡೆ ಗುರುವಿಲ್ಲದೆ ಆಗದು
ಕೇಳಾ, ಎನ್ನ ಅಜಗಣ್ಣನೆಂಬ ಗುರುವಿಲ್ಲದೆ
ಆರೂಢಿಯ ಕೂಟ ಸಮನಿಸದು ಕೇಳಾ ಎನ್ನುತ್ತಾ

**ಗುರು–ಲಿಂಗ–ಜಂಗಮ ಚಿಂತನೆ**

ಲಿಂಗ ಜಂಗಮ, ಪ್ರಸಾದವನರಿಯಲು ಗುರುವಿನ ಮಾರ್ಗದರ್ಶನ ಬೇಕು. ತನ್ನನ್ನು ತಾನೇ ಅರಿಯಲು ಸಹ ಗುರುವು ಬೇಕು. ಹಿಂದಿನ ಜನ್ಮದಲ್ಲಿ ಮಾಡಿದ ಪೂಜಾ ಫಲದಿಂದ ಈ ಜನ್ಮದಲ್ಲಿ ಸ್ವಲ್ಪ ತಿಳುವಳಿಕೆ ಬಂದಮಾತ್ರಕ್ಕೆ ಗುರುವಿಲ್ಲದೆ ನನ್ನಷ್ಟಕ್ಕೆ ನಾನೆ ತಿಳಿದುಕೊಂಡೆ ಎಂದು ಅಹಂಕಾರಪಟ್ಟುಕೊಳ್ಳದೆ, ಗುರುವು ಆಧ್ಯಾತ್ಮ ಸಾಧನೆಗೆ ಅವಶ್ಯಕವೆಂದರಿಯಬೇಕು. ನನಗಂತೂ ಅಜಗಣ್ಣನೆಂಬ ಗುರುವಿನ ಮಾರ್ಗದರ್ಶನವಿಲ್ಲದೆ, ಆರೂಢ ಸ್ಥಿತಿಗೆ ಬರುವುದು ಸಾಧ್ಯವಿಲ್ಲ ಎಂದು ಖಡಾ ಖಂಡಿತವಾಗಿ ನಿರ್ಭಿಡೆಯಿಂದ ನಿವೇದಿಸುತ್ತಾಳೆ.

ಆಗ ಪ್ರಭುವು ವಾದಕ್ಕೆ ಪ್ರತಿವಾದ ಕೊಡುವಂತೆ,
ಗುರುವಿಂಗೂ ಶಿಷ್ಯಂಗೂ ಆವುದು ದೂರ
ಆವುದು ಸಾರೆಂಬುದನಾರುಬಲ್ಲರು?
ಗುರುವೇ ಶಿಷ್ಯನಾದ ತನ್ನ ವಿನೋದಕ್ಕೆ
ಕರ್ಮವೆಂಬ ಕೌಟಿಲ್ಯ ಎಡೆವೊಕ್ಕಕಾರಣ
ಭಿನ್ನವಾಗಿದ್ದಿತೆಂದರೆ ಅದು ನಿಶ್ಚಯವಹುದೆ?
ಆದಿಯನಾದಿಯಿಂದತ್ತತ್ತ ಮುನ್ನವಾದ ಪರಮತತ್ವಮಂ
ತಿಳಿಯನಾದಿಯಿಂದತ್ತತ್ತ ಮುನ್ನವಾದ ಪರಮತತ್ವಮಂ
ತಿಳಿದುನೋಡಲು ನೀನೆ ಸ್ವಯಂ ಜ್ಯೋತಿ ಪ್ರಕಾಶನೆಂದರಿಯಲು
ನಿನಗೆ ನೀನೇ ಗುರುವಲ್ಲದೆ ನಿನ್ನಿಂದಧಿಕಮಪ್ಪ ಗುರುವುಂಟೆ
ಇದು ಕಾರಣ ಗುಹೇಶ್ವರಲಿಂಗವು ತಾನೆ ಎಂಬುದನರಿ ಎಂದು

ನೀನು ಗುರು ಶಿಷ್ಯರಲ್ಲಿ ಬಹಳ ಅಂಶವನ್ನು ಕಾಣುತ್ತಿರುವಿ. ಗುರುವಿಗೆ

ಎಲ್ಲಾ ಸಾಧ್ಯ. ಶಿಷ್ಯನಿಗೆ ಎಲ್ಲಾ ಅಸಾಧ್ಯ ಎಂದು ತಿಳಿದುಕೊಂಡಿರುವಂತಿದೆ. ನಿಜವಾದ ಶಿಷ್ಯ ಗುರುವಿನಷ್ಟೇ ಶಕ್ತ. ಇಬ್ಬರೂ ಸಮ. ಯಾರಿಗೆ ಯಾರೂ ಕಡಿಮೆಯಿಲ್ಲ. ಗುರು ಶಿಷ್ಯರಿಗೆ ಯಾವುದು ಅಸಾಧ್ಯ, ಯಾವುದು ಸಾಧ್ಯ ಎಂಬುದು ಯಾರಿಗೂ ತಿಳಿಯಲು ಆಗದು. ಏಕೆಂದರೆ ತನ್ನ ವಿನೋದಕ್ಕಾಗಿ ಗುರುವೇ ಶಿಷ್ಯನಾಗುತ್ತಾನೆ. ಶಿಷ್ಯನೇ ತನ್ನ ವಿನೋದಕ್ಕಾಗಿ ಗುರುವಾಗಬಲ್ಲ. ಇಬ್ಬರಿಗೂ ಅಂತಹ ಶಕ್ತಿ ಇದ್ದೇ ಇರುತ್ತದೆ. ಆದರೆ ಕರ್ಮ ಬೆಂಬತ್ತಿದ ಕಾರಣ, ನೋಡಲು ಗುರು–ಶಿಷ್ಯ ಬೇರೆ–ಬೇರೆಯಾಗಿ ಕಾಣುತ್ತಾರೆ ಅಷ್ಟೆ. ಆದಿ–ಅನಾದಿಯಿಂದಾಚೆಗಿರುವ ಪರಮ ತತ್ವವನ್ನು ಪರಾಮರ್ಶಿಸಿ ನೋಡಿದರೆ, ನಿನಗೆ ನೀನೇ ಗುರುವಾಗಬಲ್ಲೆ. ನಿನಗೆ ಅಧಿಕನಾದ ಗುರು ಬೇರೊಬ್ಬನಿಲ್ಲ ಎಂಬ ಅರಿವು ನಿನಗೇ ಉಂಟಾಗುತ್ತದೆ. ಆದುದರಿಂದ ಗುಹೇಶ್ವರ ಲಿಂಗದ ಅರಿವು ಸ್ವಯಂ ವೇದ್ಯವಾಗಬೇಕು. ಈ 'ಅರಿವೇ ಗುರು' ಬೇರೆ ಗುರು ಬೇಕಿಲ್ಲ ಎಂದು ಸಿದ್ಧಾಂತವನ್ನು ತಿಳಿಸುತ್ತಾನೆ ಅಲ್ಲಮಪ್ರಭು.

ಮುಕ್ತಾಯಕ್ಕ ಇಷ್ಟರಿಂದ ತೃಪ್ತಳಾಗುವುದಿಲ್ಲ. ಅಲ್ಲಮನನ್ನೂ ಕಟ್ಟಾಡಂಬರದ ಮಾತುಗಾರ ಎಂದು ಹೀಯಾಳಿಸುತ್ತಾಳೆ. ನೆರೆಯರಿತು ಮರೆಯಬಲ್ಲರೆ ಎನ್ನ ಅಜಗಣ್ಣನಂತೆ ಶಬ್ದಮುಗ್ಧವಾಗಿರಬೇಕಲ್ಲದೆ, ಶಬ್ದ ಸಂದಣಿಯ ಮಾತು ಸಮವಲ್ಲ ನೋಡಾ ಪ್ರಭುವೆ' ಎಂದು 'ನಿಜವಾದ ಜ್ಞಾನಿಯಾದರೆ ಮಾತು ಮೌನದಲ್ಲಿ ಕೊನೆಗೊಳ್ಳುತ್ತದೆ. ಶಬ್ದ ಜಾಲದಲ್ಲಿ ಮುಳುಗಿರುವ ನೀನಿನ್ನೂ ಆ ಮಟ್ಟ ಮುಟ್ಟಿಲ್ಲ. ನಿನ್ನ ಬಾಯಿ ಬಡುಕತನ ಸಾಕು. ಮಾತಿನ ಮಲ್ಲನಾದ ನೀನೇತರ ಜ್ಞಾನಿ? ಎಂದು ತಿರಸ್ಕಾರ ತೋರಿಸುತ್ತಾ,

ಕೈಯ್ಯದು ಕುರುಹು, ಬಾಯದು ಬೊಬ್ಬೆ
ಉಲಿಯದಿರೋ, ಭಾವ ಉಲಿಯದಿರೊ
ವಾರಿಕಲ್ಲಕೊಡನಲ್ಲಿ ಮುತ್ತು ಮಾಣಿಕವತುಂಬಿ
ಎತ್ತುವರಿಲ್ಲದೆ ಸಖಿಯರನರಸುತ್ತಿಪ್ಪೆ,
ಮನದ ತನುವಿನಲ್ಲಿ, ಆ ತನುವಿನ ಮನದಲ್ಲಿ
ತನಗೆ ತಾನೆತ್ತಿಕೊಂಡಡೆ,
ಮನ ಮೇರೆದಪ್ಪಿ ಕರಗಿ ಉಕ್ಕಿತ್ತು
ನಮ್ಮ ಅಜಗಣ್ಣನ ಯೋಗ ಎಂದು ಹೇಳುವಲ್ಲಿ,

ಅಜಗಣ್ಣನ ಗುಪ್ತ, ಸುಪ್ತ ಯೋಗದೊಡನೆ ಅಲ್ಲಮಪ್ರಭುವಿನ ಉಕ್ತ ಬೋಧೆಯನ್ನು ಹೋಲಿಸಿ, ನಿನ್ನ ಶಬ್ದಾಡಂಬರದ ಬೋಧೆಯಿಂದ ಏನೂ ಆಗದು. ಈ ಬಾಯಿ ಬಡುಕ ಮಾತುಗಳನ್ನು ನಿಲ್ಲಿಸು ಎಂದು ಹೇಳುತ್ತಾಳೆ. ಶ್ರೇಷ್ಠ ಶರಣೆಯೊಬ್ಬಳು ಸರಿಯಾಗಿ ವಿಚಾರದ ಮಾರ್ಗದಲ್ಲಿ ಇಲ್ಲದೆ, ಶರಣ ಮಾರ್ಗದಿಂದ

ವಿಮುಖಳಾಗುತ್ತಿದ್ದಾಳೆ. ಇವಳನ್ನು ಹೇಗಾದರೂ ಮಾಡಿ ನಿಜಮಾರ್ಗದಲ್ಲಿ ನಿಲ್ಲಬೇಕೆಂಬ ದೃಢ ಸಂಕಲ್ಪದಿಂದ, ಹೀಯಾಳಿಸಿದರೂ ಅಸಮಾಧಾನಗೊಳ್ಳದೆ, ಈಕೆ ಮಹಾಜ್ಞಾನಿಯಾದರೂ ತಾತ್ಕಾಲಿಕ ದುಃಖಕ್ಕೀಡಾಗಿದ್ದಾಳೆಂದು ಬಗೆದು ಅಲ್ಲಮ ಪ್ರಭು

ಶರಣರು ನುಡಿಯ ಸೂತಕಿಗಳಲ್ಲ

ಮಾತೆಂಬುದು ಜ್ಯೋತಿರ್ಲಿಂಗ
ಸ್ವರವೆಂಬುದು ಪರತತ್ವ
ತಾಳೋಷ್ಟ ಸಂಪುಟವೆಂಬುದೇ ನಾದಬಿಂದುಕಳಾತೀತ
ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲಾ ಕೇಳಾ ಮರುಳೆ॥

ಎಂಬ ವಚನದ ಮೂಲಕ, 'ಏ ಹುಚ್ಚವ್ವಾ ನಾನು ನನ್ನ ಜಾಣ್ಮೆಯನ್ನು ನಿನ್ನ ಮುಂದೆ ಪ್ರದರ್ಶಿಸಲು ಇದನ್ನೆಲ್ಲಾ ನಿನ್ನ ಮುಂದೆ ಹೇಳಲಿಲ್ಲ. ಶರಣರು ಬಾಯ್ದೆರೆದರೆ ಪರತತ್ವವನ್ನೇ ನುಡಿಯುತ್ತಾರೆ. ಅದರ ಮಾತು ಜ್ಯೋತಿರ್ಲಿಂಗದಂತೆ ಪ್ರಕಾಶಮಾನ. ಪ್ರಭಾವಶಾಲಿ ಅವರಿಂದ ಉದುರಿದ ಮುಕ್ತಾ ಫಲಗಳು ವ್ಯರ್ಥವಾದ ಅರ್ಥವಿಹೀನ ಶಬ್ದಗಳಲ್ಲ. ಅವು ನಾದಬಿಂದು ಕಳಾತೀತನಾದ ಪರಶಿವನ ತತ್ವಗಳು. ತಮ್ಮ ದೊಡ್ಡಸ್ತಿಕೆಯನ್ನು ಬಿಚ್ಚಿಕೊಳ್ಳಲು ಶರಣರು ಮಾತಾಡುವ ಮೂರ್ಖರಲ್ಲ, ಎಂದು ವಿವರಿಸಿದರೂ ತೃಪ್ತಿಗೊಳ್ಳದ ಮುಕ್ತಾಯಕ್ಕ, ನಿನಗಿನ್ನೂ ಮಾತಿನಿಂದ ಮೋಡಿ ಹಾಕುವ ಹುಚ್ಚು ಬಿಟ್ಟಿಲ್ಲ ಎನ್ನುತ್ತಾಳೆ.

ನುಡಿಯ ಹಂಗಿನ್ನೂ ನಿಮಗೆ ಹಿಂಗದು
ನಡೆಯನೆಂತು ಪರರಿಗೆ ಪೇಳುವಿರೆ?
ಒಡಲ ಹಂಗಿನ ಸುಳುಹು ಬಿಡದು
ಎನ್ನೊಡನೆ ಮತ್ತೇತರ ಅನುಭಾವವಣ್ಣಾ?
ತಾನಾದಲ್ಲದೆ ಇದಿರಿಂಗೆ ಹೇಳಬಹುದೆ?
ಅರಿವ ತೋರಬಲ್ಲರೆ ತನ್ನನರುಹದೆ
ಅರುಹುದನು ಕಾಣಾ ಎನ್ನ ನಿಜಗಣ್ಣದೇವರು ಎಂದು ವ್ಯಂಗ್ಯವಾಡುತ್ತಾಳೆ.

ಅನುಭಾವಿಯಾದವನಿಗೆ ಶಬ್ದಾಡಂಬರವಾಗಲೀ, ತನ್ನನ್ನೇ ಹೊಗಳಿಕೊಳ್ಳುವ ಜಂಬಕೊಚ್ಚಿಕೊಳ್ಳುವ ಸ್ವಭಾವವಾಗಲೀ ಇರುವುದಿಲ್ಲ. ಮಾತಿನ ಮೋಹ, ನಿಮ್ಮನ್ನು ಬಿಡದಿರುವಾಗ, ಇನ್ನೊಬ್ಬರಿಗೆ ಉಪದೇಶಮಾಡಲು ಹೇಗೆ ಸಾಧ್ಯ? ನೀವೇ ಹೆಚ್ಚೆಂಬ ಅಹಂಕಾರ ನಿಮ್ಮನ್ನು ಆವರಿಸಿರುವಾಗ ನನ್ನೊಡನೆ ಅನುಭಾವದ ಮಾತನ್ನೇಕೆ ಹೇಳಲು ಬರುತ್ತೀರಿ. ತಾನು ಮೊದಲು ಸರಿಯಾಗಿದ್ದು ನಂತರ ಬೇರೆಯವರಿಗೆ

ಉಪದೇಶ ಮಾಡಬೇಕು. ಇನ್ನೊಬ್ಬರಿಗೆ ಬೋಧಿಸುವ ಮೊದಲು, ನನ್ನ ಅಣ್ಣನಾದ ಅಜಗಣ್ಣ ದೇವರಂತೆ, ತನ್ನ ಬಗ್ಗೆ ಹೇಳಿಕೊಳ್ಳದೇ, ತನ್ನ ನಡೆಯಿಂದಲೇ ಇತರರು ತಿಳಿದುಕೊಳ್ಳುವಂತೆ ಮಾಡಬೇಕು. ನಿನ್ನಂತೆ ತನ್ನ ಬಗ್ಗೆ ಜಂಬ ಕೊಚ್ಚಿಕೊಳ್ಳುವವರು ಶರಣರಾಗುವುದು ಸಾಧ್ಯವಿಲ್ಲವೆಂದು ಪ್ರಭುವನ್ನು ಹೀಯಾಳಿಸುತ್ತಾಳೆ. ಆಗಲೂ ಸಹ ಪ್ರಭುದೇವರು, ಅಣ್ಣನ ಅಗಲುವಿಕೆಯ ಶೋಕದ ಮಾಯೆಯಲ್ಲಿ ಸಿಲುಕಿ ತಾತ್ಕಾಲಿಕ ಅಜ್ಞಾನದಿಂದ ಆವರಿಸಲ್ಪಟ್ಟು ಹೀಗೆ ಮಾತನಾಡುತ್ತಾಳೆಂದು ಸಿಟ್ಟುಗೊಳ್ಳದೆ,

ನಿನ್ನ ಮನದ ಕಳವಳವ ತಿಳಹಲೆಂದು ಮಾತನಾಡಿಸಿ ನೋಡಿದೆ
ಎನ್ನ ಮನದೊಳಗೆ ಕುಂದುಕಲೆ ಎಂಬುದಿಲ್ಲಾ ನೋಡಾ
ನಮ್ಮ ಗುಹೇಶ್ವರ ಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ
ಬಾಯ್ದೆಗೆದೆನಲ್ಲದೆ ಭಿನ್ನ ಉಂಟೆ ಹೇಳಾ ಮರುಳೆ

"ನನ್ನಲ್ಲಿ ಯಾವ ದೋಷವು ಇಲ್ಲ. ದೊಡ್ಡ ವ್ಯಕ್ತಿಯಾಗದಿದ್ದರೂ ದೊಡ್ಡ ವ್ಯಕ್ತಿಯಂತೆ ಕಾಣಿಸಿಕೊಳ್ಳುವ ಮೂರ್ಖನಲ್ಲ ನಾನು. ನೀನು ಆಧ್ಯಾತ್ಮದ ದಾರಿಯಲ್ಲಿದ್ದು ಗುಹೇಶ್ವರ ಲಿಂಗದ ಶಿಶುವಾದ ಕಾರಣ, ನಿನ್ನ ದುಃಖವೇನೆಂದು ತಿಳಿದುಕೊಳ್ಳಲು ಹಾಗೆಲ್ಲಾ ಮಾತನಾಡಿಸಿದೆ. ಅಷ್ಟೇ ಹೊರತು, ಬೇರೆ ಕಾರಣವಿಲ್ಲ ಹುಚ್ಚವ್ವಾ" ಎಂದು ತನ್ನ ಬಗ್ಗೆ ಆದರೂ ಮುಕ್ತಾಯಿ ತನ್ನ ಗುರು ಅಜಗಣ್ಣನು ಬ್ರಹ್ಮ, ಪರಬ್ರಹ್ಮವೆಂಬುದನ್ನೂ ದಾಟಿದವನು. ಅವನು ಪ್ರಕಾಶಮಯ. ಅಂತಹವನಿಗೆ ಬೆಳಕು ಕೊಡುವ ಅಗತ್ಯವಿಲ್ಲವೆಂದು ಹೇಳುತ್ತಾ,

ಸಿಡಿಲು ಹೊಯ್ದ ಬಾವಿಗೆ ಸೋಪಾನವದೇಕೋ
ನೆರೆಯರಿದ ಬಳಿಕ ಮತ್ತೆ ಮತಿ ಹುಟ್ಟಲುಂಟೆ?
ಸೊಡರುಳ್ಳಮನೆಗೆ ಮತ್ತೆ ತಮಂಧವೆಂಬುದೇನೂ?
ತನ್ನಲ್ಲಿ ತಾನು ತದ್ಗತವಾದ ಬಳಿಕ
ಬಹ್ಮ ಪರಬೊಮ್ಮ ನಾನೆಂಬುದಿಲ್ಲ ನೋಡಾ
ಎನ್ನ ಅಜಗಣ್ಣಾ ತಂದೆ

ಎಂದು ಅಜಗಣ್ಣನ ಬಗೆಗೆ ಪ್ರಶಂಸೆಯ ಮಾತುಗಳನ್ನೇ ಮುಂದುವರಿಸುತ್ತಾಳೆ. ಅದಕ್ಕೆ ಪ್ರತಿಯಾಗಿ ಪ್ರಭುವು,

ಅಂಗ ಅನಂಗವೆಂಬೆರಡೂ ಅಳಿದು, ನಿದಲ್ಲಿನಿಂದ ಲಿಂಗೈಕ್ಯನ
ಅಂಗದ ಮೇಲುಳ್ಳ ಕ್ರೀಗಳೆಲ್ಲವೂ ಲಿಂಗಕ್ರೀಗಳು, ನೋಡಾ,
ತನ್ನಲ್ಲಿ ತಾನು ತದ್ಗತವಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲಾ

ಎಂದು ಅಜಗಣ್ಣನ ಶಿವಯೋಗ ಸಾಧನೆಯ ಬಗ್ಗೆ ವಿವರಿಸಿದಾಗ

ಮುಕ್ತಾಯಕ್ಕನಿಗೆ, ಮುಸುಕಿದ ಮಬ್ಬು ಸರಿಯುತ್ತದೆ. ಪ್ರಭುವಿನ ಬಗೆಗಿದ್ದ ಭಾವನೆ ಬದಲಾಗುತ್ತದೆ. ಅಜಗಣ್ಣನ ನಿಲುವೂ, ಪ್ರಭುವಿನ ಬೋಧೆಯೂ ಒಂದೇ ಎಂಬುದನ್ನರಿಯುತ್ತಾಳೆ.

ಅವಳನ್ನು ನೋಡುತ್ತಲೇ ಪ್ರಭುವಿಗೆ ಅವಳಲ್ಲಾದ ಪರಿವರ್ತನೆ ಗೋಚರವಾಗಿ, ಇನ್ನೂ ಆಕೆ ಶೂನ್ಯ ಸಂಪಾದನೆಗೆ ಪರಿಪಕ್ವವಾದಳೆಂದು ಕಂಡುಕೊಂಡ 'ಅಜಗಣ್ಣ ಬಯಲ ಬೆರಸಿದ ಮರೀಚಿಯಂತೆ ಬಯಲೇ ಆಗಿದ್ದಾನೆ. ನೀನೂ ಆ ಬಯಲಲ್ಲಿ ಬೇರಿಲ್ಲದಂತೆ ಬೆರೆಯಲು ಪ್ರಯತ್ನಿಸು' ಎಂದು ಉಪದೇಶಿಸಿ, ಮುಂದೆ ಸಾಗುತ್ತಾನೆ. ಅದೇ ರೀತಿ ಮುಂದೆ ಸಾಗಿ ಲಿಂಗದಲ್ಲಿ ಸಾಮರಸ್ಯ ಪಡೆಯುತ್ತಾಳೆ ಮಹಾಶರಣೆ ಮುಕ್ತಾಯಕ್ಕ. ಮುಕ್ತಾಯಕ್ಕನ ಬಗೆಗೆ ಶ್ರೀ ಸಿದ್ಧಯ್ಯ ಪುರಾಣಿಕರು (ಶರಣ ಚರಿತಾಮೃತ-ಪುಟ ೩೬೨) "ಮುಕ್ತಾಯಕ್ಕ ಅಂಗನೆಯರ ಇತಿಹಾಸದಲ್ಲಿಯೇ ಅಪೂರ್ವ ವ್ಯಕಿ. ಗಾರ್ಗಿಯ ಸಂವಾದ ಶಕ್ತಿ, ಮಹಾದೇವಿಯ ವಿರಕ್ತಿ, ದ್ರೌಪದಿಯ ಅಗ್ರಜಾನುರಕ್ತಿ, ಮೈತ್ರೇಯಿಯ ಆತ್ಮದರ್ಶನಾಸಕ್ತಿ, ಏಕಲವ್ಯನ ಗುರುಭಕ್ತಿಗಳೆಲ್ಲ ಸೇರಿ ಮುಕ್ತಾಯಿಯಾಗಿ ಮೂರ್ತೀಭವಿಸಿದಂತಿದೆ" ಎಂದಿದ್ದಾರೆ. ಅಂತಹ ಮುಕ್ತಾಯಕ್ಕ ಬಸವಣ್ಣನ ಕಾಲದ ಮಹಾಶಿವಶರಣೆ ಸಂಯಕ್ ಜ್ಞಾನಿ.

■

## ೪. ಗಂಗಾಂಬಿಕೆ–ನೀಲಾಂಬಿಕೆಯರು

ಮಹಾನುಭಾವಿ ಬಸವಣ್ಣನವರಿಗೆ ಇಬ್ಬರು ಧರ್ಮಪತ್ನಿಯರು ಅವರು ಗಂಗಾಂಬಿಕೆ–ನೀಲಾಂಬಿಕೆಯರು. ಹೇರಳವಾದ ಸಾಹಿತ್ಯ ಬಸವಣ್ಣನವರ ಬಗೆಗೆ, ಶರಣ–ಶರಣೆಯರ ಬಗೆಗೆ, ವಚನ ಸಾಹಿತ್ಯದ ಬಗೆಗೆ ಹದಿಮೂರನೆ ಶತಮಾನದಿಂದ ಇಂದಿನವರೆಗೆ ರಚಿತವಾಗಿದ್ದರೂ, ಇಂದೂ ರಚಿತವಾಗುತ್ತಿದ್ದರೂ, ಬಸವಣ್ಣನವರಿಗೆ ಒಬ್ಬಳೇ ಹೆಂಡತಿ ಇದ್ದಳೋ, ಇಬ್ಬರು ಹೆಂಡತಿಯರಿದ್ದರೋ, ಒಬ್ಬಳ ಹೆಸರೇ ನೀಲಾಂಬಿಕೆ ಹಾಗೂ ಗಂಗಾಂಬಿಕೆಯೇ, ಹರಿಹರ ಹಾಗೂ ಭೀಮಕವಿ ಹೆಸರಿಸಿರುವ ಮಾಯಾದೇವಿ ಯಾರು? ಗಂಗಾಂಬಿಕೆಗೇ ಮಾಯಾದೇವಿ ಎಂದು ಹೆಸರಿಸಿರಬೇಕೆ? ನೀಲಾಂಬಿಕೆಯ ಮೊದಲ ಹೆಸರು ಮಾಯಾದೇವಿಯಾಗಿರಬೇಕೆ ಎಂದು ಇಂದೂ ಜಿಜ್ಞಾಸೆ ನಡೆಯುತ್ತಲೇ ಇದೆ. ವಿದ್ವಾಂಸರು ತಮ್ಮ, ತಮ್ಮ ಅನಿಸಿಕೆಗಳನ್ನಿಟ್ಟುಕೊಂಡು ದೊರೆಯುವ ಆಧಾರವನ್ನು ಉಪಯೋಗಿಸಿಕೊಂಡು ಚರ್ಚೆಮಾಡುತ್ತಲೇ ಇದ್ದಾರೆ. ಆದರೆ, ಅನೇಕ ಆಧಾರಗಳು ಬಸವಣ್ಣನವರಿಗೆ ಗಂಗಾಂಬಿಕೆ–ನೀಲಾಂಬಿಕೆಯರೆಂಬ ಇಬ್ಬರು ಹೆಂಡರಿದ್ದರು ಎಂಬ ಅಂಶವನ್ನು ದೃಢೀಕರಿಸುತ್ತವೆ. ಗಂಗಾಂಬಿಕೆಯು ಮೊದಲಪತ್ನಿ ಎಂಬುದೂ ನಿರ್ವಿವಾದ. ಕಾವ್ಯ, ಪುರಾಣ, ರಗಳೆ, ಜನಪದ ಸಾಹಿತ್ಯ, ಸ್ತೋತ್ರಪದ್ಯ, ತ್ರಿವಿಧಿ ವಚನ, ವಂಶಾವಳಿಯ ನಕಲು ಮುಂತಾದವುಗಳನ್ನು ಪರಮಾರ್ಶೆಮಾಡಿ ಕೆಲವೊಂದು ಖಚಿತ 'ನಿಲುವುಗಳಿಗೆ ಇಂದು ಬರಲು ಸಾಧ್ಯವಾಗಿದೆ.

### ಇಬ್ಬರು ಶರಣಸತಿಯರ ಇತಿವೃತ್ತ

ಗಂಗಾಂಬಿಕೆ–ನೀಲಾಂಬಿಕೆಯರು, ಮೊದಲು ಮಂಗಳವೇಡೆಯಲ್ಲಿ ಸಾಮಂತರಾಜನಾಗಿದ್ದ ಪೆರ್ಮಾಡಿಯ ಮಂತ್ರಿಗಳಾದ ಬಲದೇವ ಮಂತ್ರಿ ಹಾಗೂ ಸಿದ್ಧರಸ ಮಂತ್ರಿಯ ಮಕ್ಕಳು. ಎಂದರೆ ಗಂಗಾಂಬಿಕೆಯು ಬಲದೇವ ಮಂತ್ರಿಯ ಹಾಗೂ ನೀಲಾಂಬಿಕೆಯು ಸಿದ್ಧರಸ ಮಂತ್ರಿಯ ಮಗಳು. ಸಿದ್ಧರಸ ಹಾಗೂ ಬಲದೇವ ಇಬ್ಬರೂ ಅಣ್ಣ ತಮ್ಮಂದಿರು. ಇವರಿಬ್ಬರೂ ಕೂಡಲ ಸಂಗಮದ ಸಮೀಪವಿರುವ ಇಂಗಳೇಶ್ವರದ ಕುಲಕರ್ಣಿ ಮನೆತನದ ವಾಸುದೇವನ ಮಕ್ಕಳು. ವಾಸುದೇವನಿಗೆ ಬಲದೇವ, ನೀಲಕಂಠ, ಸಿದ್ಧರಸ ಮತ್ತು ಮಾದಲಾಂಬೆ ಎಂಬ

ನಾಲ್ಕು ಮಕ್ಕಳಿದ್ದರು. ಅವರಲ್ಲಿ ಬಲದೇವ ಮತ್ತು ಸಿದ್ಧರಸ ಮಂಗಳವೇಡೆಗೆ ಹೋದರು. ನೀಲಕಂಠ ಊರಲ್ಲೇ ಉಳಿದಿದ್ದ. ಆತನಿಗೆ ಶಿವದೇವನೆಂಬ ಒಬ್ಬನೇ ಮಗ. ಮಾದಲಾಂಬಿಕೆಯನ್ನು ಬಾಗೇವಾಡಿಯ ಕಾಶ್ಯಪಗೋತ್ರದ ಮಾದರಸನಿಗೆ ವಿವಾಹಮಾಡಿ ಕೊಟ್ಟಿತ್ತು. ಆಕೆಗೆ ಬಸವಣ್ಣ ಮತ್ತು ಅಕ್ಕನಾಗಾಂಬಿಕೆ ಎಂಬ ಇಬ್ಬರು ಮಕ್ಕಳಿದ್ದರು. ಅಕ್ಕನಾಗಮ್ಮನನ್ನು ಮಾದಲಾಂಬಿಕೆಯ ಅಣ್ಣ ನೀಲಕಂಠನ ಮಗನಾದ ಶಿವದೇವನಿಗೆ ಕೊಟ್ಟು ಲಗ್ನವಾಗಿತ್ತು. ಶಿವದೇವ ಮತ್ತು ನಾಗಲಾಂಬಿಕೆಯ ಮಗನೇ ಚನ್ನಬಸವಣ್ಣ–ಇದಿಷ್ಟು ಸಂಗತಿಗಳು ಇಂಗಳೇಶ್ವರದ ಕುಲಕರ್ಣಿ ಮನೆತನದವರ ಬಳಿ ದೊರೆಯುವ ವಂಶಾವಳಿಯ ದಾಖಲೆಯಲ್ಲಿ ದಾಖಲಾಗಿರುವ ಪತ್ರದ ಸಹಾಯದಿಂದ ತಿಳಿಯಬಹುದಾಗಿದೆ. ಈ ಪತ್ರದ ಮೇಲೆ ಮುದ್ದೇಬಿಹಾಳ ಕೋರ್ಟಿನ ಹತ್ತೊಂಬತ್ತನೆಯ ಶತಮಾನದ ಮೊಹರು ಇದೆ (ತಮ್ಮ ಆಸ್ತಿಯ ವ್ಯವಹಾರದಲ್ಲಿ ಅದನ್ನು ಬಳಸಿಕೊಂಡಿದ್ದುದರಿಂದ). ಆ ದಾಖಲೆಯಲ್ಲಿ ಬಲದೇವ ಹಾಗೂ ಸಿದ್ಧರಸನ ಮಕ್ಕಳ ಬಗ್ಗೆ ಉಲ್ಲೇಖವಿಲ್ಲ. ಬಹುಶಃ ಅವರು ಬಹಳ ಬೇಗನೇ ಊರು ಬಿಟ್ಟು ಮಂಗಳವೇಡೆಗೆ ಹೋದಮೇಲೆ ಹೆಚ್ಚಿನ ಸಂಪರ್ಕ ತಮ್ಮ ಮನೆತನದೊಂದಿಗೆ ಇಲ್ಲದೇ ಇರಬಹುದು.

ಒಟ್ಟಿನಲ್ಲಿ ಗಂಗಾಂಬಿಕೆ ಮತ್ತು ನೀಲಾಂಬಿಕೆ ಬಸವಣ್ಣನ ಸೋದರ ಮಾವಂದಿರಾದ ಬಲದೇವ ಹಾಗೂ ಸಿದ್ಧರಸನ ಮಕ್ಕಳು; ಇವರಿಬ್ಬರೂ ಬಸವಣ್ಣನನ್ನೇ ಮದುವೆಯಾಗಲು ಕೂಡಿಬಂದ ಪರಿಸ್ಥಿತಿ ಸಹಜವಾಗಿದೆ. ಬಸವಣ್ಣನಿಗೆ ಎಂಟು ವರ್ಷವಾದಾಗ ಮುಂಜಿಯನ್ನು ಬಾಗೇವಾಡಿಯಲ್ಲಿ ಮಾಡುವ ವ್ಯವಸ್ಥೆ ಆಗಿತ್ತು. ತಂಗಿಯ ಮಗನ ಮುಂಜಿಗೆ ಬಲದೇವ ಮಂತ್ರಿಯು ಬಂದಿದ್ದ. ಯಜ್ಞೋಪವೀತ ಧರಿಸುವಾಗ ಬಸವಣ್ಣನು ತರ್ಕಮಾಡಿ ಅದನ್ನು ತಿರಸ್ಕರಿಸಿದನು. ಆ ಸಂದರ್ಭದಲ್ಲಿ ಬಲದೇವನು ಬಾಗೇವಾಡಿಯ ಮಹಾಮನೆಯಲ್ಲಿ ಬಸವಣ್ಣನಿಗೆ ತನ್ನ ಮಗಳಾದ ನೀಲಾಂಬಿಕೆಯನ್ನು ಕೊಟ್ಟು ಲಗ್ನಮಾಡಿದನು ಎಂದು ಭೀಮಕವಿಯ ಬಸವ ಪುರಾಣದಲ್ಲಿ ಬರೆದಿದೆ. ಬಸವಣ್ಣನಿಗೇ ಎಂಟು ವರ್ಷವಾಗಿದ್ದರೆ, ಗಂಗಾಂಬಿಕೆಯ ವಯಸ್ಸೆಷ್ಟಾಗಿರಬೇಕು? ಎಂಬುದನ್ನು ಊಹಿಸಿದರೆ, ಭೀಮಕವಿಯು ವಿವಾಹ ವರ್ಣನೆಯನ್ನು ಮಾಡುವಾಗ ಗಂಗಾಂಬಿಕೆಯ ಬಗೆಗೆ

ಕ್ಷಿತಿಗೆ, ಲಕ್ಷ್ಮಿಗೆ, ರೋಹಿಣಿಗೆ, ಭಾ
ರತಿಗೆ, ರತಿಗೆ, ಪುಲೋಮಜೆಗೆ ಅರುಂ
ಧತಿಗೆ, ಸೀತೆಗೆ, ಜಾಹ್ನವಿಗೆ, ರವಿಸತಿಗೆ, ನೂರುಮಡಿ
ಧೃತಿ, ಸಿರಿ, ಪ್ರಭೆ, ಜಾಣ್ಮೆ, ರೂಪು
ನ್ನತಿ, ಪತಿವ್ರತಾಚರಣೆ ಸಂ

ತತೆ ಪತಿವ್ರತೆ ತೇಜವೆಂಬವರಿಂದ ಗಂಗಾಯಿ

ಮತ್ತು

ಕನ್ನೆಯಂ ಪತಿಭಕ್ತಿಗುಣ ಸಂ
ಪನ್ನೆಯಂ ಗುರುಲಿಂಗ ಭಜನಾ
ಸನ್ನೆಯಂ ಶೃಂಗಾರ ರಸೋತ್ಪನ್ನೆಯಂಕೂರ್ಪ
ತನ್ನ ಮಗಳು ಮೂಜಗಂಗಳ
ಚೆನ್ನೆಯಂ ಗಂಗಾಂಬೆಯಂ ವಿಭ

ಮೋನ್ನತಿಯೊಳಗೊಂಡು ಬಂದು ಸಮಸ್ತ ಭಕ್ತರಿಗೆ ಎಂಬ ವರ್ಣನೆಯನ್ನು ನೋಡಿದರೆ ಗಂಗಾಂಬಿಕೆ ಐದು ವರ್ಷದ ಮಗುವಾಗಿರಲಿಲ್ಲವೆನ್ನಿಸುತ್ತದೆ. ಅಲ್ಲದೆ ಮಂತ್ರಿಯಾಗಿದ್ದ ಅವನು, ಮುಂಜಿಗಾಗಿ ಬಂದಾಗ, ಅದೂ ಮುಂಜಿಯ ಸಮಯದಲ್ಲಿ ವಿರಸ, ಅಸಮಾಧಾನಗಳುಂಟಾದಾಗ ಗಡಿಬಿಡಿಯಿಂದ ಮಹಾಮನೆಯಲ್ಲಿ ಮಗಳ ಲಗ್ನವನ್ನು ಇದ್ದಕ್ಕಿದ್ದಂತೆ ಮಾಡುವುದು ಸಾಧ್ಯವೆ? ಎಂದು ಯೋಚಿಸಬೇಕಾಗುತ್ತದೆ. ನಂತರ ಬಸವಣ್ಣನು ಮಾವನಿಂದ ಬೀಳ್ಕೊಂಡು ಪತ್ನಿಯಾದ ಗಂಗಾಂಬಿಕೆ, ಅಕ್ಕ ನಾಗಾಂಬಿಕೆಯೊಡನೆ ಕೂಡಲ ಸಂಗಮಕ್ಕೆ ಹೋದನೆಂಬ ವರ್ಣನೆಯೂ ಬರುತ್ತದೆ. ಆದುದರಿಂದ, ಮುಂದೆ ಹದಿನಾಲ್ಕನೇ ಶತಮಾನದಲ್ಲಿ ಸಿಂಗಿರಾಜನು ಸಿಂಗಿರಾಜ ಪುರಾಣದಲ್ಲಿ ಬರೆದಿರುವ ಅಂಶಗಳು ಜಾತವೇದ ಮುನಿಗಳಿಂದ ಶಿಕ್ಷಣ ಪಡೆಯುತ್ತಿದ್ದನೆಂದೂ, ಆಗ ಅವನು ತರ್ಕಶಾಸ್ತ್ರ, ತತ್ವಶಾಸ್ತ್ರ, ವೇದಾಗಮ ಉಪನಿಷತ್ತುಗಳಲ್ಲಿ ಪರಿಣಿತನಾಗಿ ತುಂಬಾ ಖ್ಯಾತಿ ಪಡೆದಿದ್ದನೆಂದೂ ತಿಳಿದುಬರುತ್ತದೆ. ಆ ಸಮಯದಲ್ಲಿ ಗಂಗಾಂಬಿಕೆಯು ವಿವಾಹದ ವಯಸ್ಸಿಗೆ ಬಂದಿದ್ದು ಬಲದೇವ ಮಂತ್ರಿಯು ವರಾನ್ವೇಷಣೆಯಲ್ಲಿರುತ್ತಾನೆ. ಆಗ ಬಸವೇಶ್ವರನ ಖ್ಯಾತಿಯ ಬಗ್ಗೆ ತಿಳಿದು ಅನುರೂಪನಾದ ವರನೆಂದು ಸುದ್ದಿ ಬರಲು, ವಿವರವಾಗಿ ವಿಚಾರಿಸುತ್ತಾನೆ. ಆತ ತನ್ನ ಸೋದರಿ ಮಾದಲಾಂಬೆಯ ಮಗನೆಂದು ತಿಳಿದು ಸಂತೋಷವಾಗುತ್ತದೆ. ಇಷ್ಟರಲ್ಲಿ ಮಾದಲಾಂಬೆ ಮಾದರಸರು ಕಾಲವಾಗಿದ್ದರೆಂದು ತೋರುತ್ತದೆ. ಜಾತವೇದ ಮುನಿಗಳ ಮೂಲಕ ಪ್ರಯತ್ನಿಸುತ್ತಾನೆ. ಗುರುಗಳ ಸಲಹೆಯಂತೆ ಬಸವಣ್ಣನು ಗಂಗಾಂಬಿಕೆಯನ್ನು ಮದುವೆಯಾಗಲು ಸಮ್ಮತಿಸುತ್ತಾನೆ. ಆಗ ಬಲದೇವ ಮಂತ್ರಿಯು ತುಂಬಾ ವಿಜೃಂಭಣೆಯಿಂದ ಮಗಳ ಮದುವೆಯನ್ನು ಕಲ್ಯಾಣದಲ್ಲಿ ಬಸವಣ್ಣನೊಡನೆ ಮಾಡುತ್ತಾನೆ. ನಂತರ ಬಸವಣ್ಣ, ನಾಗಲಾಂಬಿಕೆ, ಗಂಗಾಂಬಿಕೆ, ಚನ್ನಬಸವಣ್ಣ ಇವರೆಲ್ಲಾ ಕೂಡಲ ಸಂಗಮದಲ್ಲಿ ವಾಸಿಸುತ್ತಿರುತ್ತಾರೆ ಎಂದು ಸಿಂಗಿರಾಜ ಪುರಾಣದಿಂದ ತಿಳಿಯಬರುತ್ತದೆ. ನಾಗಲಾಂಬಿಕೆ ಬಸವಣ್ಣನ ಜೊತೆ ಏಕೆ ಇದ್ದಳು ಎಂಬ ಪ್ರಶ್ನೆ ಏಳುತ್ತದೆ.

ನಾಗಲಾಂಬಿಕೆಯು ಹತ್ತಿರದ ಇಂಗಳೇಶ್ವರದಲ್ಲಿ ಇದ್ದುದರಿಂದ ಚಿಕ್ಕ ವಯಸ್ಸಿನಲ್ಲಿಯೇ ವಿದ್ಯಾಭ್ಯಾಸಕ್ಕೆ ಸಂಗಮಕ್ಕೆ ಬಂದ ಬಸವಣ್ಣನ ಯೋಗಕ್ಷೇಮವನ್ನು ವಿಚಾರಿಸುತ್ತಿರುತ್ತಾಳೆ. ಅವಳೂ ಜ್ಞಾನಪಿಪಾಸುವೂ, ವಿಚಾರವಂತಳೂ ಆದುದರಿಂದ ಅಕ್ಕ ತಮ್ಮಂದಿರು ಅನೇಕ ವಿಷಯಗಳ ಬಗ್ಗೆ ಅರ್ಥಪೂರ್ಣವಾದ ಚರ್ಚೆ ಮಾಡುತ್ತಿರುತ್ತಾರೆ. ಕೂಡಲ ಸಂಗಮ ವಿದ್ಯಾಕೇಂದ್ರವಾದುದರಿಂದ ಅಲ್ಲಿಗೆ ಎಲ್ಲೆಡೆಯಿಂದ ವಿದ್ವಾಂಸರು ಬಂದು, ಅನೇಕ ವಿಷಯಗಳ ಬಗೆಗೆ ವಿದ್ವತ್ಪೂರಿತ ಚರ್ಚೆಗಳೂ, ವಿಚಾರ ಮಂಡನ, ವಿಚಾರ ವಿನಿಮಯಗಳೂ ನಡೆಯುತ್ತಿದ್ದುದರಿಂದ ಅಕ್ಕನಾಗಮ್ಮನಿಗೂ ಅವುಗಳ ಉದ್ದಗಲಗಳು ತಿಳಿದಿರುತ್ತವೆ. ತಮ್ಮನ ಪಾಂಡಿತ್ಯ, ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುತ್ತಿರುತ್ತಾಳೆ. ಅವನ ಹೊಸ ವಿಚಾರಗಳನ್ನು ಪ್ರಶಂಸಿಸಿ ಉತ್ಸಾಹಪೂರಿತನನ್ನಾಗಿ ಮಾಡುತ್ತಿರುತ್ತಾಳೆ. ಹೀಗಾಗಿ, ಬಸವಣ್ಣನಿಗೆ ಆಕೆ ಅಕ್ಕನಿಗಿಂತ ತಾಯಿಯೋಪಾದಿಯಲ್ಲಿ ಮಮತೆ, ಗುರುವಿನೋಪಾದಿಯಲ್ಲಿ ಮಾರ್ಗದರ್ಶನ ನೀಡುತ್ತಿರುತ್ತಾಳೆ. ಅಕ್ಕತಮ್ಮ ಒಬ್ಬರನ್ನೊಬ್ಬರು ಪ್ರೀತಿ, ಗೌರವದಿಂದ ಕಾಣುತ್ತಿರುತ್ತಾರೆ. ತಮ್ಮನ ಪ್ರತಿಭೆಯ ಬಗ್ಗೆ ಮೆಚ್ಚಿದ್ದ ನಾಗಲಾಂಬಿಕೆ ತನಗೆ ಚನ್ನಬಸವಣ್ಣ ಹುಟ್ಟಿದಮೇಲೆ ಇಲ್ಲಿಯ ಪಾಂಡಿತ್ಯದ ಪ್ರಭಾವ ಮಗನಮೇಲೂ ಆಗಲೆಂದು ಅವನನ್ನು ಕರೆದುಕೊಂಡು ಇಂಗಳೇಶ್ವರದಿಂದ ಸಂಗಮಕ್ಕೆ ಬರುತ್ತಿರುತ್ತಾಳೆ. ಚಿಕ್ಕ ವಯಸ್ಸಿನಿಂದಲೇ ಇಂತಹ ಪರಿಸರ, ಪ್ರಭಾವಗಳಲ್ಲಿ ಬೆಳೆದ ಚನ್ನಬಸವಣ್ಣ, ಎಲ್ಲರನ್ನೂ ಮೀರಿಸಿದ, ಅಗ್ರಗಣ್ಯ ಪ್ರತಿಭಾನ್ವಿತ ಶರಣನಾಗುತ್ತಾನೆ. ಮುಂದೆ ಅಕ್ಕನಾಗಮ್ಮ, ಚನ್ನಬಸವಣ್ಣ ಸಹ ಬಸವಣ್ಣ, ಗಂಗಾಂಬಿಕೆಯರೊಡನೆ ಕೂಡಲ ಸಂಗಮದಲ್ಲೀ ವಾಸವಾಗಿದ್ದುದು ಕಂಡು ಬರುತ್ತದೆ. ತನ್ನ ಗಂಡನ ಮನೆಯಾದ ಇಂಗಳೇಶ್ವರವನ್ನು ಬಿಟ್ಟು ತಮ್ಮನೊಡನೆ ವಾಸಮಾಡಲು ಏಕೆ ಬಂದಳು ಎಂಬ ಬಗ್ಗೆ ಎಲ್ಲೂ ಉಲ್ಲೇಖವಿದ್ದಂತೆ ಕಾಣುವುದಿಲ್ಲ. ಇದರಿಂದ, ಬಸವಣ್ಣನ ಕ್ರಾಂತಿಕಾರಕ ಹೊಸ ವಿಚಾರಗಳನ್ನು ಮೆಚ್ಚುತ್ತಿದ್ದ ಈಕೆಯ ಬಗೆಗೆ ಸಂಪ್ರದಾಯಸ್ಥ ಮನೋಭಾವದ, ಆಕೆಯ ಗಂಡನ ಮನೆಯವರಿಗೆ ಅಸಮಾಧಾನವಾಗಿ, ಈಕೆ ಬೇಸರಗೊಂಡು ಮಗನೊಡನೆ ತಮ್ಮನ ಬಳಿಗೆ ಬಂದಿರಬಹುದೇ ಎಂಬ ಊಹೆ ಒಂದಾದರೆ, ತಮ್ಮನನ್ನೂ ಮಗನಂತೆ ಪ್ರೀತಿಸುತ್ತಿದ್ದ ಆಕೆ, ಬಸವಣ್ಣನ ಮದುವೆಯಾಗಿ ಚಿಕ್ಕವಳಾದ ಗಂಗಾಂಬಿಕೆಯು ಒಗೆತನ ಮಾಡಲು ಬಂದಾಗ, ಅವಳಿಗೆ ಮನೆಯಲ್ಲಿ ಹಿರಿಯಳಾಗಿ ಮಾರ್ಗದರ್ಶನ ಮಾಡಲು ಬಂದಿರಬಹುದೆ? ಗಂಗಾಂಬಿಕೆ ಬೇರೆ ಯಾರೂ ಆಗಿರದೆ ನೀಲಾಂಬಿಕೆಯ ಮಾವ ನೀಲಕಂಠನ ಅಣ್ಣನ ಮಗಳೇ (ಶಿವದೇವನ ದೊಡ್ಡಪ್ಪನ ಮಗಳೇ) ಆದುದರಿಂದ ನಾಗಾಂಬಿಕೆಯ ಗಂಡನಮನೆಯವರು

(ನಾಗಾಂಬಿಕೆಯೂ ನೀಲಕಂಠನ ಸೋದರಿಯ ಮಗಳು) ನಾಗಲಾಂಬಿಕೆ ಮಗನೊಡನೆ ತಮ್ಮನ ಮನೆಯಲ್ಲಿರಲು ಸಮ್ಮತಿಸಿರಬಹುದು ಎಂದೂ ತರ್ಕಿಸಲು ಎಡೆಮಾಡಿಕೊಡುತ್ತದೆ. ಅಂತೂ ಇನ್ನು ಮುಂದೆ ನಾಗಲಾಂಬಿಕೆ ಮತ್ತು ಚನ್ನಬಸವಣ್ಣ ಕಡೆಯವರೆಗೂ ಬಸವಣ್ಣನ ಜೊತೆಯಲ್ಲೇ ಇರುತ್ತಾರೆ.

### ಕಲ್ಯಾಣದಲ್ಲಿ ಬಸವಣ್ಣನ ಸಂಸಾರ

ಕೆಲಕಾಲನಂತರ ಬಲದೇವ ಮಂತ್ರಿಯು ಕಾಲವಾಗುತ್ತಾನೆ. ಇಷ್ಟರಲ್ಲಿ ಬಿಜ್ಜಳನು ಕಲ್ಯಾಣದ ಅರಸನಾಗಿರುತ್ತಾನೆ. ಆದುದರಿಂದ ಬಿಜ್ಜಳನೊಂದಿಗೇ ಬಲದೇವ ಮಂತ್ರಿಯೂ ಮಂಗಳವೇಡೆಯಿಂದ ಬಂದು ಕಲ್ಯಾಣದಲ್ಲಿ ಬಿಜ್ಜಳನ ಮಂತ್ರಿಯಾಗಿರುತ್ತಾನೆ. ಬಲದೇವನ ಕಾಲಾನಂತರ ಆ ಸ್ಥಾನಕ್ಕೆ ಒಬ್ಬ ದಕ್ಷ ವ್ಯಕ್ತಿಯನ್ನು ಮಂತ್ರಿಯನ್ನಾಗಿ ನೇಮಿಸಬೇಕಾಗಿರುತ್ತದೆ. ಆಗ ಆಸ್ಥಾನದ ಎಲ್ಲರೂ ಆತನ ಅಳಿಯನಾದ ಬಸವಣ್ಣನೆ ಸಮರ್ಥ ವ್ಯಕ್ತಿ ಎಂದು ಸಲಹೆ ಕೊಡಲು ರಾಜನು ಅವನ ಒಪ್ಪಿಗೆ ಪಡೆದು, ಕರೆಸಿ ಮಂತ್ರಿಸ್ಥಾನ ಕೊಡುತ್ತಾನೆ. ಆಗ ಗಂಗಾಂಬಿಕೆ, ನಾಗಲಾಂಬಿಕೆ, ಚನ್ನ ಬಸವಣ್ಣನೂ ಕಲ್ಯಾಣಕ್ಕೆ ಬಂದು ಬಸವಣ್ಣನೊಡನೆ ಇರುತ್ತಾರೆ. ಗಂಗಾಂಬಿಕೆಯು ನಾಗಲಾಂಬಿಕೆಯ ಮಾರ್ಗದರ್ಶನದಲ್ಲಿ ಸದ್ಗೃಹಿಣಿಯಾಗಿ ಬಸವಣ್ಣನಿಗೆ ತಕ್ಕ ಪತ್ನಿಯಾಗಿ, ಗೃಹಕೃತ್ಯದ ಕೆಲಸಗಳನ್ನು, ಅತಿಥಿ ಅಭ್ಯಾಗತರ ಸತ್ಕಾರವನ್ನೂ ಮಾಡಿಕೊಂಡು ಚನ್ನಾಗಿ ಎಲ್ಲರೂ ಮೆಚ್ಚುವಂತೆ ಬಾಳುವೆ ಮಾಡುತ್ತಿರುತ್ತಾಳೆ.

### ಕಲ್ಯಾಣದಲ್ಲಿ ನೀಲಾಂಬಿಕೆಯ ಬಾಲ್ಯ-ಹಿನ್ನೆಲೆ

ಮಂಗಳವೇಡೆಯಲ್ಲಿ ಬಿಜ್ಜಳನ ತಂದೆ ಸಾಮಂತರಾಜನಿದ್ದಾಗ ಬಲದೇವನೊಡನೆ, ಆತನ ತಮ್ಮ ಸಿದ್ಧರಸನೂ ಮಂತ್ರಿಯಾಗಿದ್ದ ಆ ಸಮಯದಲ್ಲಿ ಬಿಜ್ಜಳನ ತಂದೆ ತೀರಿಹೋಗಲು, ತಾಯಿಯು ಸತಿ ಹೋದಳು. ಆಗ ಬಿಜ್ಜಳನ ತಮ್ಮನಾದ ಕರ್ಣದೇವನು ಚಿಕ್ಕಮಗುವಾಗಿದ್ದನು. ಆದುದರಿಂದ ಬಿಜ್ಜಳನು ಸಿದ್ಧರಸನಿಗೆ ಕರ್ಣದೇವನನ್ನು ಸಾಕಲು ಕೇಳಿಕೊಳ್ಳುವನು. ಅದೇ ಸಮಯದಲ್ಲಿ ನೀಲಾಂಬಿಕೆಯೂ ಚಿಕ್ಕ ಮಗುವಾಗಿರುತ್ತಾಳೆ. ಆಕೆಯ ತಾಯಿಯಾದ ಪದ್ಮಗಂಧಿಯು ಎರಡು ಮಕ್ಕಳಿಗೂ ತನ್ನ ಮೊಲೆ ಹಾಲನ್ನು ಕೊಟ್ಟು ಸಾಕುತ್ತಾಳೆ. ಹೀಗಾಗಿ ಬಿಜ್ಜಳನು ಮೊದಲಿನಿಂದಲೂ ನೀಲಾಂಬಿಕೆಯನ್ನು ತನ್ನ ತಂಗಿಯೋ ಪಾದಿಯಲ್ಲಿಯೂ, ನೀಲಾಂಬಿಕೆಯೂ ಬಿಜ್ಜಳನನ್ನು ಅಣ್ಣನಂತೆಯೂ ಕಾಣುತ್ತಿರುತ್ತಾರೆ. ತಂದೆ ಸತ್ತಾಗ ಬಿಜ್ಜಳನು ಚಿಕ್ಕವನಿದ್ದುದರಿಂದ, ಅವನ ತಂದೆಯ ಇಷ್ಟದಂತೆ, ದಂಡಾಧಿಪನಾದ ಸಿದ್ಧರಸನೇ ತಂದೆಯಂತೆ ಬಿಜ್ಜಳನಿಗೆ ಬೆಂಬಲವಾಗಿ ನಿಂತು

ಆಡಳಿತವನ್ನು ನಿರ್ವಹಿಸುತ್ತಿರುತ್ತಾನೆ. ಹೀಗಾಗಿ ಸಿದ್ಧರಸನ ಕುಟುಂಬವು ಅರಮನೆಯಲ್ಲಿ ಮನೆಯವರಂತೆ ಸಂಬಂಧ ಸಂಪರ್ಕಗಳಿಟ್ಟುಕೊಂಡಿದ್ದಿತು. ನೀಲಾಂಬಿಕೆಯಂತೂ ಬಿಜ್ಜಳ ಕರ್ಣದೇವರ ಸೋದರಿಯಂತೆ, ಅರಮನೆಯಲ್ಲಿ ರಾಜಕುಮಾರಿಯಂತೆ ಬೆಳೆಯುತ್ತಿದ್ದಳು. ಸಿದ್ಧರಸನಿಗೆ ಗಂಡು ಸಂತಾನವಿರಲಿಲ್ಲ. ನೀಲಾಂಬಿಕೆಯೊಬ್ಬಳೇ ಮಗಳು, ಹೀಗಾಗಿ ಸಿದ್ಧರಸ ತಾನು ಸಾಯುವ ಮೊದಲು ತನ್ನ ಆಸ್ತಿ ಹಾಗೂ ಮಗಳನ್ನು ಬಿಜ್ಜಳನಿಗೆ ಒಪ್ಪಿಸಿ, ವ್ಯವಸ್ಥೆ ಮಾಡುವ ಜವಾಬ್ದಾರಿಯನ್ನು ಅವನಿಗೇ ಬಿಡುತ್ತಾನೆ. (ಹರಿಹರನು, ಸಿದ್ಧರಸನ ಆಸ್ತಿಗೆ ಬಸವಣ್ಣನೇ ಒಡೆಯನಾದನೆಂದು ಹೇಳಿದ್ದಾನೆ. ಬಹುಶಃ ಬಿಜ್ಜಳನು ನೀಲಾಂಬಿಕೆಯ ಗಂಡನಾದ ಬಸವಣ್ಣನಿಗೆ, ಗಂಡು ಸಂತಾನವಿಲ್ಲದ ಸಿದ್ಧರಸನ ಆಸ್ತಿಯನ್ನು ಒಪ್ಪಿದಂತೆ ಕಾಣುತ್ತದೆ).

ಬಿಜ್ಜಳನು ಕಲ್ಯಾಣದಲ್ಲಿ ಅರಸನಾದ ಮೇಲೆ ಕರ್ಣದೇವ ಮತ್ತು ನೀಲಾಂಬಿಕೆಯರು ಅರಮನೆಯಲ್ಲಿ ಇರುತ್ತಾರೆ. ರಾಜನ ಪ್ರೀತಿಯ ಸಾಕುತಂಗಿ, ತಾಯಿ ಇಲ್ಲದ ನೀಲಾಂಬಿಕೆ, ಅಣ್ಣ ತಮ್ಮಂದಿರೊಡನೆ ಒಬ್ಬ ಬಾಲಕ ಬೆಳೆದಂತೆಯೇ ಬೆಳೆಯುತ್ತಾಳೆ. ದಕ್ಷತೆ, ದಿಟ್ಟತನ, ಚಟುವಟಿಕೆ ಸ್ವತಂತ್ರ ವಿಚಾರಗಳು, ಒಬ್ಬ ರಾಜಕುಮಾರನಲ್ಲಿ ವಿಕಸನಗೊಳ್ಳುವಂತೆ ಇವಳಲ್ಲಿ ಒಡಮೂಡಿದವು. ಅದೇ ಸಮಯದಲ್ಲಿ ಬಸವಣ್ಣನು ಮಂತ್ರಿಯಾಗಿ ನಂತರ ದಂಡಾಧೀಶನಾಗಿ ಕಲ್ಯಾಣದಲ್ಲಿಯೇ ತನ್ನ ಪತ್ನಿ ಗಂಗಾಂಬಿಕೆ, ಅಕ್ಕ ನಾಗಲಾಂಬಿಕೆಯೊಡನೆ ವಾಸವಾಗಿದ್ದ. ಅಪೂರ್ವ ಲಿಪಿಯ ಪತ್ರವನ್ನು ಬಸವಣ್ಣ ಓದಿದ ಮೇಲೆ, ಅತುಲವಾದ ನಿಧಿಯು ಆ ಲಿಪಿಯಲ್ಲಿ ಉಲ್ಲೇಖಿಸಿದಂತೆ ರಾಜನಿಗೆ ದೊರೆಯಲು, ಬಿಜ್ಜಳನು ಸಂತುಷ್ಟನಾಗಿ ಬಸವಣ್ಣನಿಗೆ ವಾಸಿಸಲು ಅರಮನೆಯನ್ನೂ ಕಟ್ಟಿಸಿಕೊಟ್ಟಿದ್ದ. ಅರಮನೆಗೂ ದಂಡಾಧೀಶನ ಮನೆಗೂ ನೀಲಾಂಬಿಕೆ ತಾಯಿಬೇರೆ ಇರಲಿಲ್ಲ. ಸೋದರತ್ತೆಯ ಮಗಳಾದ ನಾಗಲಾಂಬಿಕೆ ಹಿರಿಯ ಮಹಿಳೆ. ಆಕೆಗೆ ಸೋದರಮಾವನ ಮಗಳಾದ ತಾಯಿ ಇಲ್ಲದ, ರಾಜನ ಸಾಕುತಂಗಿಯಾದ ನೀಲಾಂಬಿಕೆಯ ಬಗ್ಗೆ ಅತೀವ ಮಮತೆ ಗಂಗಾಂಬಿಕೆಗೂ ಅಷ್ಟೆ. ತನ್ನ ಚಿಕ್ಕಪ್ಪನ ಮಗಳು-ಸೋದರಿ ಜೊತೆಗಾತಿಯಾಗಿ ಇಬ್ಬರೂ ಹೆಚ್ಚಾಗಿ ಕೂಡಿಯೇ ಇರುತ್ತಿದ್ದರು. ಆಗ ನೀಲಾಂಬಿಕೆ ಅಣ್ಣ ಬಿಜ್ಜಳನಿಂದ ಬಸವಣ್ಣನ ಪ್ರಶಂಸೆ ಕೇಳುತ್ತಿದ್ದಳು. ಇಲ್ಲಿ ಮನೆಯಲ್ಲಿ ಅವನ ಬಿಡುವಿಲ್ಲದ ಕೆಲಸ, ದಕ್ಷತೆಯ ವ್ಯಕ್ತಿತ್ವ ಎಲ್ಲರ ಗಮನವನ್ನು ಸೆಳೆಯುವಂತಹ ಚಾಕಚಕ್ಯತೆಯನ್ನು ನೋಡಿ, ಮೆಚ್ಚಿ, ಗಂಗಾಂಬಿಕೆಯ ಅದೃಷ್ಟವನ್ನು ಕೊಂಡಾಡುವಳು. ಗಂಗಾಂಬಿಕೆಗೂ ತಂದೆ-ತಾಯಿ ಇಲ್ಲದ ಚಿಕ್ಕಪ್ಪನ ಮಗಳ ಬಗ್ಗೆ ಬಹು ಕಾಳಜಿ. ಅವಳಿಗೆ ಒಳ್ಳೆಯ ಮನೆ ಸಿಕ್ಕಬೇಕು. ಅವಳು ಸುಖವಾಗಿ ಇರಬೇಕು ಎಂಬ ಹಂಬಲ ಮಮತೆಯ ವಯಸ್ಸಿಗೆ ಬಂದ ಅವಳನ್ನು ನೋಡಿದಾಗಲೆಲ್ಲಾ ಬಿಜ್ಜಳ ರಾಜನಿಗೆ, ಅವಳಿಗೆ ಅನುರೂಪನಾದ

ವರನನ್ನು ನೋಡಿ ಸರಿಯಾದ ಕಡೆ ಸೇರಿಸಿ, ಸಿದ್ಧರಸನಿಗೆ ಕೊಟ್ಟ ತನ್ನ ಮಾತನ್ನು ಉಳಿಸಿಕೊಳ್ಳಬೇಕು ಎಂದು ಒಂದು ವಿಚಾರ, ಆಕೆ ಸಾಕು ತಂಗಿಯಾದರೂ. ಆಕೆಯನ್ನು ಸ್ವಂತ ತಂಗಿಯಂತೆ ತುಂಬಾ ಪ್ರೀತಿಸುತ್ತಿದ್ದ. ಅವಳನ್ನು ಒಳ್ಳೆಯ ವರನಿಗೆ ಕೊಡಬೇಕೆಂಬ ಗಾಢವಾದ ಆಸೆ ಅವನಲ್ಲಿತ್ತು. ಹೀಗಾಗಿ ಅವನಿಗೆ ತನ್ನ ದಂಡಾಧೀಶನಾದ, ನೀಲಾಂಬಿಕೆಯ ಸೋದರತ್ತೆಯ ಮಗನಾದ ಬಸವಣ್ಣನಿಗೆ ಅವಳನ್ನೂ ಕೊಟ್ಟರೆ, ತನ್ನ ಸಂಬಂಧವೂ ದಂಡಾಧೀಶನೊಡನೆ ಹತ್ತಿರವಾಗುತ್ತದೆ. ನೀಲಾಂಬಿಕೆಗೂ ಒಳ್ಳೆಯ ವರ ಸಿಕ್ಕಂತಾಗುತ್ತದೆ ಎಂದು ಬಸವಣ್ಣನ ಮುಂದೆ ಅಭಿಪ್ರಾಯ ಸೂಚಿಸಿದ.

ಆಗಿನ ಕಾಲದಲ್ಲಿ ಪುರುಷ ಒಂದಕ್ಕಿಂತ ಹೆಚ್ಚು ಮದುವೆಯಾಗುವುದು ಸಮಾಜದಲ್ಲಿ ಸಾಮಾನ್ಯ ಸಂಗತಿಯಾಗಿತ್ತು. ಈಗಿನಂತೆ ಅದನ್ನು ಯಾರೂ ತಪ್ಪೆಂದು ತಿಳಿಯುತ್ತಿರಲಿಲ್ಲ. ಮೊದಲು ಹೆಂಡತಿ ಸಹ ಅನೇಕ ಸಾರಿ ತಾನೇ ವಧುವನ್ನು ಹುಡುಕಿ ಗಂಡನೊಡನೆ ಮದುವೆ ಮಾಡಿದ ಉದಾಹರಣೆಗಳಿಗೂ ಲೆಕ್ಕವಿಲ್ಲ. ಹೆಂಡತಿಯರೂ ಸಹ ಒಬ್ಬರಿಗೊಬ್ಬರು ಅಕ್ಕ-ತಂಗಿಯರಂತೆ ಪ್ರೀತಿಯಿಂದ ಇದ್ದ ಉದಾಹರಣೆಗಳೂ ಹೇರಳ. ಪುರುಷ ತನಗೆ ಬೇಕಾದಾಗ ಇನ್ನೊಂದು ಲಗ್ನವಾಗುವುದು ಸರ್ವೇಸಾಧಾರಣ ಸಂಗತಿಯಾಗಿತ್ತು. ಯಾರೂ ಆ ವಿಷಯಕ್ಕೆ ಮಹತ್ವಕೊಡುತ್ತಿರಲಿಲ್ಲ. ಆ ವಿಷಯದಲ್ಲಿ ಈಗಿನ ಮೌಲ್ಯಗಳೇ ಬೇರೆ. ಯಾವುದೇ ವಿಚಾರದ ಬಗ್ಗೆ ನಾವು ತರ್ಕಿಸುವಾಗ ಆಯಾ ಕಾಲದ ಸ್ಥಿತಿ-ಗತಿಗಳ ಹಿನ್ನೆಲೆಯಲ್ಲಿ ತರ್ಕಿಸುವುದು, ವಿವೇಚಿಸುವುದು ಸೂಕ್ತವಾಗುತ್ತದೆ.

## ಬಸವಣ್ಣನಿಗೆ ಎರಡನೆಯ ಮದುವೆ

ಈಗ ಬಸವಣ್ಣನು ಎರಡನೆಯ ಲಗ್ನ ಮಾಡಿಕೊಳ್ಳುವ ಪ್ರಸಂಗ ಬಂದಿತು. ಸಾಮಾಜಿಕ ದೃಷ್ಟಿಯಿಂದ ಇದನ್ನೂ ಯಾರೂ ತಪ್ಪೆನ್ನುವಂತಿಲ್ಲ. ಆದರೆ ಬಸವಣ್ಣ ಆದರ್ಶವಾದಿ, ಯಾವುದೋ ರಾಜಕೀಯ ಕಾರಣಕ್ಕಾಗಿ ಪುನಃ ಮದುವೆಯಾಗುವಂತಹ ವ್ಯಕ್ತಿಯಲ್ಲ. ತನಗೆ ನಂಬಿಕೆ ಇಲ್ಲದ ಮುಂಜಿಯನ್ನು ಮಾಡಿಕೊಳ್ಳಲು ಸಮಾಜಕ್ಕೇ ಸವಾಲು ಹಾಕಿ ನಿರ್ದಾಕ್ಷಿಣ್ಯವಾಗಿ ಪ್ರತಿಭಟಿಸಿದ ಬಸವಣ್ಣ, ಇಂದು ರಾಜನ ಸಲುವಾಗಿ ಮತ್ತೊಂದು ಮದುವೆಯಾದ ಎಂಬ ಮಾತನ್ನು ಒಪ್ಪಲಾಗುವುದಿಲ್ಲ. ಅವನು ಒಪ್ಪಲು ಇಲ್ಲಿ ಇನ್ನೊಂದು ಬಲವಾದ ಕಾರಣವಿದೆ. ಅದೆಂದರೆ ಹೆಂಡತಿ ಮತ್ತು ಅಕ್ಕನ ಸಲಹೆ. ರಾಜನ ಇಂಗಿತವನ್ನು ಸಹಜವಾಗಿಯೇ ಬಸವಣ್ಣ ಅಕ್ಕನ ಮುಂದೆ ತಿಳಿಸುತ್ತಾನೆ. ಗಂಗಾಂಬಿಕೆಯ ಕಿವಿಗೂ ಬೀಳುತ್ತದೆ. ನೀಲಾಂಬಿಕೆಯ ಬಗ್ಗೆ ಅತ್ಯಂತ ಕಳಕಳಿ ಇದ್ದ ಅವರಿಬ್ಬರು (ಆಗಿನ ಕಾಲದಲ್ಲಿಯ ಮನೋಭಾವವನ್ನೆ ಹೊಂದಿದ್ದ ಅವರು) ಈ ಸಲಹೆ ಸೂಕ್ತವಾಗಿ

ಕಂಡಿರಬೇಕು. ನೀಲಾಂಬಿಕೆಯ ನಡೆ-ನುಡಿ, ದಕ್ಷತೆಗಳಿಂದ ಪ್ರಭಾವಿತರಾದ ಆಕೆಯ ಹಿತೈಷಿಗಳಾದ ಅವರು ಈ ಬಗ್ಗೆ ಬಸವಣ್ಣನಿಗೆ ಒತ್ತಾಯ ಮಾಡಿರುವ ಸಾಧ್ಯತೆ ಇದೆ. ಅದರಿಂದಾಗುವ ಒಳಿತುಗಳ ಬಗ್ಗೆ ಅವನ ಮನ ಒಲಿಸಿರಬೇಕು. ಮೇಲಿಂದ ಮೇಲೆ ಮನೆಗೆ ಬರುತ್ತಿದ್ದ, ಗಂಗಾಂಬಿಕೆಗೆ ಪ್ರಿಯಳಾಗಿದ್ದ ನೀಲಾಂಬಿಕೆಯ ಬಗ್ಗೆ ಒಂದು ರೀತಿಯ ಅಭಿಮಾನ, ಮಮತೆ, ಬಸವಣ್ಣನಿಗೆ ಬೆಳೆದಿದ್ದರೆ ಸ್ವಾಭಾವಿಕವೇ ಹೊರತು ಅತಿಶಯವೇನಲ್ಲ. ತಂದೆ-ತಾಯಿ ಇಲ್ಲದ ತನ್ನ ಸೋದರ ಮಾವನ ಮಗಳಿಗೆ ಒಂದು ಉತ್ತಮ ನೆಲೆ ಕೊಟ್ಟಂತಾಗುವುದೆಂದು ಎಲ್ಲರ ಸಲಹೆಗೆ ಒಪ್ಪಿಗೆ ಕೊಟ್ಟಿರಬೇಕೆನ್ನಿಸುತ್ತದೆ. ಬಸವಣ್ಣನನ್ನು ದಿನ ನಿತ್ಯವೂ ಗಮನಿಸಿ ಅವನ ಬಗ್ಗೆ ಅತ್ಯಂತ ಮೆಚ್ಚುಗೆಯನ್ನು ಹೊಂದಿದ್ದ, ನೀಲಾಂಬಿಕೆಗೆ ಈ ಬೆಳವಣಿಗೆ 'ಸ್ವರ್ಗ ಮೂರೇಗೇಣು' ಎನ್ನುವಂತೆ ಮಾಡಿದ್ದರೆ, ಆಶ್ಚರ್ಯ ಪಡಬೇಕಿಲ್ಲ. ಎಲ್ಲರ ಸಲಹೆ ಪಡೆದ ನಂತರ, ಬಸವಣ್ಣ ತನ್ನ ಒಪ್ಪಿಗೆಯನ್ನು ಬಿಜ್ಜಳನಿಗೆ ತಿಳಿಸಿದಾಗ ಅವನಿಗೆ ಒಂದು ರೀತಿಯ ಹೊರೆ ಇಳುಹಿ ಹಗುರಾದ ಮನಸ್ಥಿತಿ ಉಂಟಾಗಿರಬೇಕು. ನೀಲಲೋಚನೆ ಒಳ್ಳೆಯಗಂಡ ದೊರೆತನೆಂದು ನೆಮ್ಮದಿ ಉಂಟಾಗಿರಬೇಕು.

**ಸವತಿಯರಲ್ಲ-ಸಹಜೀವಿಗಳು**

ಹೀಗೆ ನೀಲಾಂಬಿಕೆ-ಗಂಗಾಂಬಿಕೆಯರು ಬಸವಣ್ಣನ ಧರ್ಮಪತ್ನಿಯರಾದರೂ. ಅವರಿಬ್ಬರೂ ಬಸವಣ್ಣನ ಜೀವನದಲ್ಲಿ ಒಂದೇ ನಾಣ್ಯದ ಎರಡು ಮುಖದಂತೆ, ಒಬ್ಬರಿಗೊಬ್ಬರು ಪೂರಕವಾಗಿ ಬದುಕಿದರು. ಸಂಪ್ರದಾಯ ವಾತಾವರಣ ಬಾಲ್ಯದಿಂದಲೂ ಹಿರಿಯರ ಮಾರ್ಗದರ್ಶನದಲ್ಲಿ ಶೈವ ಸುಸಂಸ್ಕೃತ ಸಂಪ್ರದಾಯ ಮನೆತನದಲ್ಲಿ ರೂಪುಗೊಂಡ ಗಂಗಾಂಬಿಕೆಯು, ಭಾರತೀಯ ಪತಿವ್ರತಾ ಮಹಿಳೆಯರಲ್ಲಿರಬೇಕಾದ ಎಲ್ಲಾ ಮೌಲ್ಯಗಳನ್ನೂ ಅಳವಡಿಸಿಕೊಂಡು ಬಸವಣ್ಣನ ಗೃಹ ಕೃತ್ಯದಲ್ಲಿ ಸದ್ಗೃಹಿಣಿಯಾಗಿ, ಪತಿಗೆ ವಿಧೇಯಳಾಗಿದ್ದಳು. ಪತಿಯ ಹೆಜ್ಜೆಯನ್ನು ಹಿಂಬಾಲಿಸುವುದೇ ಪತ್ನಿಯ ಕರ್ತವ್ಯವೆಂದು ತಿಳಿದಿದ್ದಳು. ಜೀವನದಲ್ಲಿಯ ಎಲ್ಲಾ ಕೆಲಸಗಳಿಗಿಂತ ಪತಿಯಾಜ್ಞೆಯನ್ನು ಪಾಲಿಸುವುದೇ ಪತ್ನಿಯ ಪ್ರಥಮ ಕೆಲಸವೆಂದು ನಂಬಿದ್ದಳು. ಗೃಹಕೃತ್ಯದ ಜವಾಬ್ದಾರಿಗಳೇ ಗೃಹಿಣಿಯ ಪರಮ ಕರ್ತವ್ಯವೆಂದು ಬಗೆದಿದ್ದಳು. ನೀಲಾಂಬಿಕೆಯಾದರೋ ಬಾಲ್ಯದಲ್ಲಿ ತಾಯಿ-ತಂದೆಗಳ ಪ್ರೀತಿಯನ್ನು ಅನುಭವಿಸಿದರೂ ನಂತರ ಅರಮನೆಯಲ್ಲಿ ಅರಸನ ಸಾಕುತಂಗಿಯಾಗಿ, ರಾಜಕುಮಾರನ ಸಹವರ್ತಿಯಾಗಿ ಬೆಳೆದವಳು. ಅಲ್ಲಿ ಆಕೆಗೆ ಮಾರ್ಗದರ್ಶನ ಮಾಡಬಲ್ಲ ಅತಿ ಸಮೀಪದ ಮಹಿಳಾ ಬಂಧುಗಳಿಲ್ಲದೆ, ಸ್ವಂತ ವಿಚಾರದಲ್ಲಿ, ಸ್ವತಂತ್ರವಾಗಿ, ರಾಜಪರಿಸರದಲ್ಲಿ ರೂಪುಗೊಂಡವಳು. ಆದುದರಿಂದ ಗೃಹಕೃತ್ಯವೇ ಮಹಿಳೆಯ ಕ್ಷೇತ್ರವೆಂದು ತಿಳಿಯದೆ, ಗಂಡನ ಎಲ್ಲಾ ಕೆಲಸದಲ್ಲೂ, ಒಳ-ಹೊರಗೆ

ಒಂದಾಗಿ ಸಹಕರಿಸುವುದರ ಬಗ್ಗೆ ಆಸ್ಥೆ ಹೊಂದಿದ್ದವಳು. ಹಾಗಾಗಿ ಇವಳು ಬಸವಣ್ಣನ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಲ್ಲಿ, ಮನೆಯಿಂದ ಹೊರಗೆ, ಬಸವಣ್ಣನೊಡನೆಯೂ, ಸ್ವತಂತ್ರವಾಗಿಯೂ ಚಟುವಟಿಕೆಯಿಂದ ಕೆಲಸ ನಿರ್ವಹಿಸುತ್ತಿದ್ದಳು. ಹೀಗೆ ಇಬ್ಬರು ಪತ್ನಿಯರೂ ಕೂಡಿ, ಬಸವಣ್ಣನ ಎಲ್ಲಾ ಕ್ಷೇತ್ರಗಳಲ್ಲಿ ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿದ್ದರು. ಆದುದರಿಂದಲೇ ನೀಲಾಂಬಿಕೆ ಬಸವಣ್ಣನಿಗೆ ವಿಚಾರಪತ್ನಿ, ಗಂಗಾಂಬಿಕೆ ಆಚಾರಪತ್ನಿ ಎನ್ನುವ ಮಾತು ಅರ್ಥಪೂರ್ಣವಾಗಿದೆ. ಈ ಇಬ್ಬರೂ ವಚನಕಾರ್ತಿಯರಾಗಿದ್ದರು. ಗಂಗಾಂಬಿಕೆಯ ವಚನಾಂಕಿತ ಗಂಗಾಪ್ರಿಯ ಕೂಡಲ ಸಂಗಮನೆಂದಾದರೆ, ನೀಲಾಂಬಿಕೆಯ ವಚನಾಂಕಿತ ಬಸವಪ್ರಿಯ ಕೂಡಲಸಂಗಮದೇವಾ ಎಂದು ೧೯೫೪ರಲ್ಲಿ ಫ.ಗು. ಹಳಕಟ್ಟಿಯವರು ಬರೆದು ಪ್ರಕಟಿಸಿದ ಶಿವಶರಣೆಯರ ಚರಿತ್ರೆಗಳು ಎಂಬ ಪುಸ್ತಕದಲ್ಲಿ ಬರೆದಿದೆ. ಇದುವರೆಗೆ ಗಂಗಾಂಬಿಕೆಯ ಒಂಬತ್ತು ವಚನಗಳೂ, ನೀಲಾಂಬಿಕೆಯ ನೂರಿಪ್ಪತ್ತಾರು ವಚನಗಳಾಗಿ ದೊರೆತಿವೆಯೆಂಬುದು ಸಂಶೋಧಕರ ಹೇಳಿಕೆ. ನೀಲಾಂಬಿಕೆಯ ಇತರ ಹೆಸರುಗಳು ನೀಲಮ್ಮ, ನೀಲಲೋಚನೆ ಎಂದಾದರೆ ಗಂಗಾಂಬಿಕೆಗೆ, ಗಂಗಮ್ಮ, ಗಂಗಾಯಿ ಎಂಬ ಹೆಸರುಗಳೂ ಇವೆ. ಇಬ್ಬರೂ ವಚನಕಾರ್ತಿಯರು ಹಾಗೂ ಬಸವಣ್ಣನ ಎಲ್ಲಾ ಕಾರ್ಯಗಳಲ್ಲಿ ಸಹಕರಿಸಿ ನಡೆಯುತ್ತಿದ್ದ ಧರ್ಮಪತ್ನಿಯರು, ಮಹಾಮನೆಯಲ್ಲಿ ಅತಿಥಿಗಳ, ಭಕ್ತರ, ಜಂಗಮರ ಸೇವೆಯನ್ನು ಮನಸಾ ಶ್ರದ್ಧೆಯಿಂದ ಮಾಡುತ್ತಾ ಬಸವಣ್ಣನ ವ್ಯವಸ್ಥೆ ಸುಸೂತ್ರವಾಗಿ ನಡೆದುಕೊಂಡು ಹೋಗಲು ಸಹಾಯಕರಾಗಿದ್ದರು. ಗಂಗಾಂಬಿಕೆಗೆ ಚನ್ನ ಸಂಗನೆಂಬ ಮಗನೂ, ನೀಲಾಂಬಿಕೆಗೆ ಬಾಲಸಂಗನೆಂಬ ಮಗನೂ ಇದ್ದರೆಂದೂ ಗಂಗಾಂಬಿಕೆಯ ವಚನದಿಂದ ತಿಳಿದುಬರುತ್ತದೆ. ಇಬ್ಬರೂ ಬಾಲ್ಯದಲ್ಲಿಯೇ ತೀರಿಹೋದದ್ದು ಕಂಡು ಬರುತ್ತದೆ.

### ಸ್ವವಚನದಲ್ಲಿ ಗಂಗಾಂಬಿಕೆ–ನೀಲಾಂಬಿಕೆ

ಗಂಗಾಂಬಿಕೆಯ ವಚನಗಳು ಆಕೆಯ ವ್ಯಕ್ತಿತ್ವವನ್ನು ನಿರೂಪಿಸುತ್ತವೆ. ಹೆಚ್ಚಾಗಿ ಮಗನನ್ನು ಕುರಿತ ಮಮತೆ, ಅವನನ್ನು ಕಳೆದುಕೊಂಡಿದುದರಿಂದಾದ ದುಃಖದ ಅಭಿವ್ಯಕ್ತಿ ಕಾಣಿಸುತ್ತದೆ. ಆಕೆ ಪತಿವ್ರತಾ ಪತ್ನಿಯಾಗಿದ್ದಳೆಂಬುದೂ, ಬಸವಣ್ಣನ ಇನ್ನೊಬ್ಬ ಪತ್ನಿಯೂ ಆಧ್ಯಾತ್ಮ ವಿಷಯದಲ್ಲೂ ಆಸಕ್ತಿ ಹೊಂದಿದ್ದಳೆಂಬ ಅರಿವಾಗುತ್ತದೆ. ನೀಲಾಂಬಿಕೆಯ ವಚನಗಳಲ್ಲಿ ಹೆಚ್ಚಾಗಿ ಬಸವಣ್ಣನು ಐಕ್ಯವಾದನಂತರ ಬರೆದವುಗಳಂತೆ ತೋರುತ್ತವೆ. ಹಾಗಾಗಿ ಆ ದುಃಖವನ್ನು ವ್ಯಕ್ತಪಡಿಸುತ್ತದೆ. ದುಃಖವನ್ನು ತೋಡಿಕೊಳ್ಳುವಾಗ, ಬಸವಣ್ಣನ ಸಾಧನೆ, ಸಿದ್ಧಿ, ಕಾರ್ಯ, ಪ್ರಭಾವ, ಪರಿಣಾಮ, ಶರಣರ ಸಾಧನೆ ಸ್ವಭಾವ ಮುಂತಾದ ವಿಷಯಗಳನ್ನು ವ್ಯಕ್ತಪಡಿಸಿದ್ದಾಳೆ.

ಇವುಗಳಿಂದ ಬಸವಣ್ಣನ ಕಾರ್ಯ, ವ್ಯಕ್ತಿತ್ವದ ಬಗ್ಗೆ ಅವಳಿಗಿದ್ದ ಮೆಚ್ಚುಗೆ, ಶ್ರದ್ಧೆಗಳೂ, ಅವುಗಳ ಪ್ರಭಾವದಿಂದ ಇವಳ ಮೇಲಾದ ಪರಿಣಾಮವೂ ವ್ಯಕ್ತವಾಗಿದೆ.

ವೀರಶೈವ ಗ್ರಂಥಕಾರರು ನೀಲಮ್ಮನ ಲಿಂಗಭಕ್ತ ಹಾಗೂ ಬಸವ ಪ್ರೇಮದ ಬಗ್ಗೆ ಬಹಳ ಹೊಗಳಿದ್ದಾರೆ. ನೀಲಾಂಬಿಕೆಯ ಬಗೆಗೆ ನಾಂದ್ಯಗಳು, ಅಷ್ಟಕಗಳು, ಸಾಂಗತ್ಯಗಳು, ಸ್ತೋತ್ರಪದ್ಯಗಳು, ಕಾಲಜ್ಞಾನ ಹೀಗೆ ಆ ಬಹಳಷ್ಟು ಸಾಹಿತ್ಯ ರಚಿತವಾಗಿದೆ. ಈಕೆ ಅನುಭಾವದಲ್ಲಿ ಬಹು ಎತ್ತರವನ್ನು ಮುಟ್ಟಿದವಳು. ಬಸವಣ್ಣನ ಕ್ರಾಂತಿಕಾರಕ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದವಳು.

**ಕಲ್ಯಾಣದ ಕೊನೆಯ ದಿನಗಳು**

ಶಿವಭಕ್ತರಾದ ಮಧುವರಸ ಮತ್ತು ಹರಳಯ್ಯ ಇವರಲ್ಲಿ ಬೀಗತನ ನಡೆಯಲು ಜನರ ಆಕ್ರೋಶದಿಂದ ಸಿಟ್ಟಿಗೆದ್ದ ಬಿಜ್ಜಳ ದೊರೆಯು ಅವರಿಬ್ಬರನ್ನು ಆನೆಯ ಕಾಲಿಗೆ ಕಟ್ಟಿಸಿ ಕ್ರೂರತನದಿಂದ ಕೊಲ್ಲಿಸಿದನು. ಇದರಿಂದ ಶರಣರು ರೊಚ್ಚಿಗೆದ್ದರು. ಬಸವಣ್ಣನು ಅಧಿಕಾರವನ್ನು ತ್ಯಜಿಸಿ ಕೂಡಲ ಸಂಗಮದ ಕಡೆಗೆ ಹೋದನು. ಶಿವಶರಣರ ಹಾಗೂ ಬಿಜ್ಜಳನ ಸೈನಿಕರ ನಡುವೆ ಹೋರಾಟವಾಯಿತು. ಆಗ ಅನೇಕ ಶರಣರು ಕಲ್ಯಾಣಬಿಟ್ಟು ನಾನಾಮುಖವಾಗಿ ಹೊರಟರು. ನೀಲಾಂಬಿಕೆಯು ಕಲ್ಯಾಣದಲ್ಲೇ ಉಳಿದು ತನ್ನ ಇಷ್ಟಲಿಂಗದಲ್ಲಿ ಐಕ್ಯಳಾದಳು ಎಂದು ಹೇಳುವವರೂ ಇದ್ದಾರೆ. ಆದರೆ ಸ್ಥಳಪುರಾಣ, ಕುರುಹುಗಳ ಆಧಾರದ ಮೇಲೆ ಆಕೆಯು ನಂತರ ಕಲ್ಯಾಣದಿಂದ ಕಪ್ಪಡಿ ಸಂಗಮಕ್ಕೆ ಹೊರಟಾಗ ದಾರಿಯಲ್ಲಿ ತಂಗಡಿಗೆಯ ಸಮೀಪ ಐಕ್ಯಳಾದಳು ಎಂಬ ಅಭಿಪ್ರಾಯವನ್ನು ಕೆಳಗಿನ ಅಂಶಗಳು ಪುಷ್ಟೀಕರಿಸುತ್ತವೆ.

ಕಲ್ಯಾಣವನ್ನು ಬಿಟ್ಟು ಕೂಡಲ ಸಂಗಮಕ್ಕೆ ಹೋದ ಬಸವಣ್ಣನು ನೀಲಾಂಬಿಕೆ ಕೂಡಲ ಸಂಗಮಕ್ಕೆ ಬರಬೇಕೆಂದು ಅಪ್ಪಣ್ಣನವರೊಡನೆ ಹೇಳಿ ಕಳುಹಿಸುತ್ತಾನೆ. ಮೊದಲು, ಸಂಗಯ್ಯನು ಎಲ್ಲಾ ಕಡೆಯೂ ಇರುವಾಗ ಸಂಗಮಕ್ಕೇ ಬರಬೇಕೆಂದು ಜ್ಞಾನಿಗಳಾದ ಬಸವಣ್ಣನವರು ಹೇಳಿಕಳುಹಿಸುವುದು ಸರಿಯೇ ಎಂದು ತಾನು ನಂಬಿದ ವೀರಶೈವ ಧರ್ಮದ ತತ್ವಕ್ಕನುಸಾರವಾಗಿ ಚಿಂತಿಸಿದರೂ, ಅಪ್ಪಣ್ಣನವರೊಡನೆ ಸಂಗಮದ ಕಡೆಗೆ ಹೊರಡುತ್ತಾಳೆ. ಸಂಗಮದಿಂದ ಎರಡು ಮೈಲು ದೂರದಲ್ಲಿರುವ ತಂಗಡಿಗಿಗೆ ಬರುವಷ್ಟರಲ್ಲಿ ಬಸವಣ್ಣನವರು ಸಂಗಮದಲ್ಲಿ ಐಕ್ಯರಾದ ಸುದ್ದಿ ತಿಳಿಯುತ್ತದೆ. ಈ ಸುದ್ದಿ ತಿಳಿಯುತ್ತಲೇ ಅವಳು ಮುಂದೆ ಹೋಗದೆ ಅಲ್ಲೇ ಉಳಿದಳೆಂದೂ ಅಲ್ಲೇ ಬಯಲಾದಳೆಂದೂ ಹೇಳುತ್ತಾರೆ. ಈ ಅಭಿಪ್ರಾಯವನ್ನು ಅನುಮೋದಿಸುವಂತೆ ತಂಗಡಿಗೆಯಲ್ಲಿ ಇಂದಿಗೂ ನೀಲಮ್ಮನ ಸಮಾಧಿ ಇದೆ. ಅದನ್ನು ನೀಲಮ್ಮನ ಗುಡಿ ಎಂದು ಅಲ್ಲಿಯ ಜನ ಕರೆಯುತ್ತಾರೆ. ಮತ್ತೆ ಪೂಜ್ಯತೆಯಿಂದ

ನಡೆದುಕೊಳ್ಳುತ್ತಾರೆ. ಅವಳು ಐಕ್ಯಳಾಗುವ ಮುನ್ನ, ಬಸವಣ್ಣನವರು ಸಂಗಮಕ್ಕೆ ಬರಲು ಹೇಳಿ ಕಳಿಸಿದಾಗ ನೀಲಾಂಬಿಕೆ

ನೋಡು, ನೋಡು ಲಿಂಗವೆ,
ನೋಡಾ ಬಸವಣ್ಣನವರಾಡಿದಾಟವ ನೋಡು

ಎಂಬ ಹಾಡನ್ನು ಹಾಡುತ್ತ ಐಕ್ಯಳಾದಳೆಂದೂ ತಂಗಡಿಗೆಯ ಜನ ಹೇಳುತ್ತಾರೆ ಅಲ್ಲದೆ ಅಲ್ಲಿಯ ಜನರು ಈಗಲೂ ಈ ಹಾಡನ್ನೂ ಹಾಡುತ್ತಾರೆ ಎಂದು ಶ್ರೀ. ಫ.ಗು. ಹಳಕಟ್ಟಿಯವರು ತಮ್ಮ ಬರಹದಲ್ಲಿ ತಿಳಿಸಿದ್ದಾರೆ. ತಂಗಿ ಅಡಗಿದ್ದರಿಂದ ಈ ಗ್ರಾಮಕ್ಕೆ ತಂಗಡಿಗೆ ಎಂಬ ಹೆಸರು ಬಂದಿತೆಂದೂ ಬರೆದಿದ್ದಾರೆ.

ನೀಲಾಂಬಿಕೆ ಈ ರೀತಿ ಬಯಲಾದರೆ ಗಂಗಾಂಬಿಕೆಯ ಕೊನೆಯ ದಿನಗಳು, ಇನ್ನೊಂದು ರೀತಿಯವಾಗಿವೆ. "ನೀಲಾಂಬಿಕೆ ಲಿಂಗಪ್ರಾಣಿ, ಬಸವಣ್ಣ ಜಂಗಮಪ್ರಾಣಿ ಗಂಗಾಂಬಿಕೆ ಗುರುಪ್ರಾಣಿ" ಎಂದು ಶಿವಶರಣರಲ್ಲಿ ಈ ಮೂರುಜನ ಪ್ರಸಿದ್ಧರಾಗಿದ್ದಾರೆ. ಕಲ್ಯಾಣದಲ್ಲಿ ಕ್ರಾಂತಿಯಾದಮೇಲೆ ಬಸವಣ್ಣನು ಸಂಗಮಕ್ಕೆ ಹೋದನಂತರ ಗಂಗಾಂಬಿಕೆಯು ತನ್ನ ಗುರುವಾದ ರುದ್ರಮುನಿ ದೇವರನ್ನು ಮುಂದಿನ ಮಾರ್ಗಕ್ಕಾಗಿ ಸಲಹೆ ಕೇಳಿದಳು. ಅವರ ಸಲಹೆಯ ಮೇರೆಗೆ, ಶರಣರ, ವೀರಶೈವ ಧರ್ಮದ ರಕ್ಷಣೆಗಾಗಿ ರುದ್ರಮುನಿದೇವರು, ಯುದ್ಧಕ್ಕಾಗಿ ಶರಣರು ಅಣಿಮಾಡಿ ತಾವೇ ಮುಂದಾಳಾಗಿದ್ದರು. ಕಾಲಜ್ಞಾನ ವಚನಗಳಲ್ಲಿ ನಿರೂಪವಾಗಿರುವಂತೆ ಈ ಶರಣ ಸೈನ್ಯಕ್ಕೆ ಚನ್ನಬಸವಣ್ಣ ಮತ್ತು ಮಡಿವಾಳ ಮಾಚಿದೇವ ಮುಖ್ಯಸ್ಥರಾಗಿದ್ದರೆಂದು ತಿಳಿಯಬರುತ್ತದೆ. ಆಗ ಗಂಗಾಂಬಿಕೆಯು ತನ್ನ ಗುರುವಿನ ಸಹಾಯಕಳಾಗಿ, ಯುದ್ಧರಂಗಕ್ಕೆ ಹೋಗಲು ಸನ್ನದ್ಧಳಾಗಿ ಅವರೊಂದಿಗೆ ಹೋದಳು. ಬಸವಣ್ಣನ ಅಕ್ಕ ನಾಗಲಾಂಬಿಕೆಯೂ ಇವರೊಂದಿಗೆ ಇದ್ದಳು. ಈ ಸಂದರ್ಭದಲ್ಲಿ ಈ ಇಬ್ಬರು ಮಹಿಳೆಯರೂ ವೀರವನಿತೆಯರಂತೆ ಹೋರಾಡಿದರು.

ಅನೇಕ ಸ್ಥಳಗಳಲ್ಲಿ ಬಿಜ್ಜಳನ ಸೈನ್ಯಕ್ಕೂ ಶರಣರಿಗೂ ಘೋರ ಯುದ್ಧಗಳು ನಡೆದವು. ಕೊನೆಯಲ್ಲಿ ಕಾದರವಳ್ಳಿಯ ಸಮೀಪ (ಈಗಿನ ಕಾದ್ರೊಳ್ಳಿ) ಘನ ಘೋರ ಯುದ್ಧವಾಗಿ ಬಿಜ್ಜಳನ ಸೈನ್ಯಕ್ಕೆ ಸೋಲಾಯಿತು. ನಂತರ ಶರಣರು ಉಳುವಿಯ ಅರಣ್ಯ ಪ್ರದೇಶದ ಕಡೆಗೆ ಪಯಣಿಸಿದರು.

ಗಂಗಾಂಬಿಕೆಯು ಕಾದರವಳ್ಳಿಯ ಸಮೀಪವಿರುವ ಮುಗುಟಗಾನ ಹುಬ್ಬಳ್ಳಿ ಎಂದು ಈಗ ಕರೆಯುವ ಗ್ರಾಮದಲ್ಲಿ ಇದ್ದಾಗ್ಗೆ ಅಲ್ಲಿಯೇ ಲಿಂಗೈಕ್ಯಳಾದಳೆಂದು ತಿಳಿಯಬರುತ್ತದೆ (ಶಿವಶರಣೆಯರ ಚರಿತ್ರೆ–ಪುಟ ೧೫೦) ಈಗಲೂ ಆಕೆಯ ಸಮಾಧಿ ಅಲ್ಲಿಯೇ ಇದೆ. ಗಂಗಮ್ಮನ ಗುಡಿ ಎಂದು ಜನರು ಈಗ ಕರೆಯುತ್ತಾರೆ.

ಆಕೆಯು ಕೊನೆಯಲ್ಲಿ ಒಬ್ಬ ವೀರವನಿತೆಯಂತೆ ಬದುಕಿದಳು. ಇದು ಶಾಂತಸ್ವಭಾವದಿಂದ ಇದುವರೆಗೂ ಬದುಕಿದ ಅವಳ ಶೌರ್ಯ-ಧೈರ್ಯ-ಸಾಹಸದ ಇನ್ನೊಂದು ಮುಖವನ್ನು ತೋರಿಸುತ್ತದೆ. ನೀಲಾಂಬಿಕೆಯ ಸಮಾಧಿಯು ಕೃಷ್ಣಾ ನದಿಯ ದಡದಲ್ಲಿದ್ದರೆ, ಗಂಗಾಂಬಿಕೆಯ ಸಮಾಧಿಯು ಮಲಪ್ರಭಾ ನದಿಯ ದಂಡೆಯಲ್ಲಿದೆ. ಇಬ್ಬರ ಸಮಾಧಿಗಳೂ ಭಕ್ತರಿಂದ ದೇವಾಲಯಗಳಾಗಿ ಪೂಜೆಗೊಳ್ಳುತ್ತಲಿವೆ. ವೀರಶೈವ ಇತಿಹಾಸದಲ್ಲಿ ಬಸವಣ್ಣನವರ ಪತ್ನಿಯರಾದ ಗಂಗಾಂಬಿಕೆ ನೀಲಾಂಬಿಕೆಯರ ಹೆಸರುಗಳು ಚಿರಸ್ಥಾಯಿಯಾಗಿ ಉಳಿದಿವೆ.

■

## ೫. ಕಾಯಕ ದರ್ಶಿನಿ ಮೋಳಿಗೆ ಮಹಾದೇವಿ

ಬಸವಣ್ಣನವರ ಕ್ರಾಂತಿಕಾರಕ ಸುಧಾರಣೆಗಳಲ್ಲಿ ಸ್ತ್ರೀ ಸಮಾನತೆ ಒಂದು ಪ್ರಮುಖ ಅಂಶ. ನೂತನ ವಿಚಾರಗಳ ಪ್ರಭಾವದಿಂದ ಅನೇಕ ಮಹಿಳೆಯರು ಧಾರ್ಮಿಕ ಹಾಗೂ ಸಾಮಾಜಿಕ ಜೀವನದಲ್ಲಿ ಸಾಮಾಜಿಕವಾಗಿ ಮುಂದೆ ಬಂದರು. ತಮ್ಮದೇ ಆದ ವ್ಯಕ್ತಿತ್ವವನ್ನು ಮೆರೆದರು. ಪುರುಷರ ಮಾರ್ಗದರ್ಶನ ಪ್ರೋತ್ಸಾಹಗಳನ್ನು ಪಡೆದು ಮುಂದೆ ಬಂದ ಅವರು, ಮುಂದೆ ಪುರುಷರಿಗೇ ಮಾರ್ಗದರ್ಶನ ಮಾಡಿದ, ಅವರನ್ನು ಪ್ರೋತ್ಸಾಹಿಸಿ, ಮೇಲೆ ತಂದ ಘಟನೆಗಳು ಬಸವಣ್ಣನವರ ಕಾಲದಲ್ಲಿಯೇ ನಡೆದು ಹೋದವು. ಮಹಿಳೆಗೆ ಸ್ಥಾನ ಮಾನವೇ ಇಲ್ಲದಂತೆ ಕಾಣುತ್ತಿದ್ದ. ಅವಳನ್ನು ನಡೆಸಿಕೊಳ್ಳುತ್ತಿದ್ದ ಪುರುಷರೇ ಮಹಿಳೆಯರ ಸಲಹೆ ಸೂಚನೆಗಳನ್ನು, ಮಾರ್ಗದರ್ಶನದ ಮಾತುಗಳನ್ನು ಮಾನ್ಯ ಮಾಡಿದ ಉದಾಹರಣೆಗಳನ್ನು ಇಲ್ಲಿ ಕಾಣುತ್ತೇವೆ. ತಮ್ಮ ಪತಿಯೊಡನೆ ಜೊತೆ-ಜೊತೆಯಾಗಿ ಶರಣ ಜೀವನವನ್ನು ಆದರ್ಶವಾಗಿ ಬಾಳಿದ ದಂಪತಿಗಳು ಅಂದು ಮೂಡಿಬಂದರು. ಇಂದೂ ಮಾದರಿಯಾಗಿ ಉಳಿದಿದ್ದಾರೆ. ಇಂತಹ ಮಹತ್ತರ ಪರಿವರ್ತನೆಗೆ ಶರಣರು ಹಾಕಿದ ಬುನಾದಿ ಅತ್ಯಂತ ಭದ್ರ. ಬಸವಣ್ಣನ ಕಾಲದಲ್ಲಿಯೇ, ಬಸವ ತತ್ತ್ವವನ್ನು ಬಾಳಿದ ಶರಣ ದಂಪತಿಗಳ ಬದುಕು ಮೈ ನವಿರೇಳಿಸುವಂತಹುದು.

ರಾಣಿ ಮಹಾದೇವಿ ಮತ್ತು ಮೋಳಿಗೆ ಮಾರಯ್ಯ ಅಂತಹ ಆದರ್ಶ ದಂಪತಿಗಳಲ್ಲಿ ಪ್ರಮುಖರೆನಿಸಿದ್ದಾರೆ. ಇವರದು ಆಧ್ಯಾತ್ಮಿಕವಾದ ಆದರ್ಶ ದಾಂಪತ್ಯ. ಮಹಾದೇವಿ ಕಾಶ್ಮೀರದ ಮಾಂಡವ್ಯಪುರದ ಅರಸು ಮಹಾದೇವ ಭೂಪಾಲನ ಧರ್ಮಪತ್ನಿ. ದಂಪತಿಗಳಿಬ್ಬರೂ ಶಿವನ ಪರಮ ಭಕ್ತರು. ಶಿವಾನುಭವಿಗಳು, ಜಂಗಮ ಪ್ರೇಮಿಗಳು, ದಕ್ಷಿಣದ ಕಲ್ಯಾಣದಲ್ಲಿ ಬಸವಣ್ಣನ ಪ್ರಖ್ಯಾತಿ, ವಿಖ್ಯಾತಿ, ಕೀರ್ತಿ ವಾರ್ತೆಗಳಿಂದ ಆಕರ್ಷಿತರಾಗಿ ಕಲ್ಯಾಣಕ್ಕೆ ಬಂದರು. ಅರಸೊತ್ತಿಗೆಯನ್ನು, ರಾಜ ಭೋಗಗಳನ್ನು, ಸುಖ-ಸಂಪತ್ತುಗಳನ್ನು ಕಡೆಗಣಿಸಿ, ಅವನ್ನೆಲ್ಲಾ ಬಿಟ್ಟು ಅಧ್ಯಾತ್ಮ ಜೀವನಕ್ಕೆ ಮನಸೋತು ಬಸವಣ್ಣನಲ್ಲಿಗೆ ಬಂದರು. ಇತಿಹಾಸದಲ್ಲಿ ಮಹಾದೇವ ಭೂಪಾಲನ ಬಗ್ಗೆ ಯಾವ ಮಾಹಿತಿ ದೊರೆಯದಿದ್ದರೂ, ವೀರಶೈವ ಕಾವ್ಯದಲ್ಲಿ ಈ ವಿಷಯವಾಗಿ ತಿಳಿದು ಬರುತ್ತದೆ. ಮೊಟ್ಟ ಮೊದಲು ಮೋಳಿಗೆ ಮಾರಯ್ಯ

ಮತ್ತು ಮಹಾದೇವಿಯ ವಿಚಾರ ತಿಳಿದು ಬರುವುದು ಭೀಮಕವಿಯ ಬಸವಪುರಾಣದಲ್ಲಿ ನಂತರ, ಶೂನ್ಯ ಸಂಪಾದನೆ, ಗೌರವಾಂಕನ ಮೋಳಿಗೆಯ್ಯನ ಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಮೊದಲಾದ ಕೃತಿಗಳಲ್ಲಿ ಇವರ ಜೀವನಕ್ಕೆ ಸಂಬಂಧಿಸಿದ ಕೆಲವು ವಿವರಗಳು ದೊರಕುತ್ತವೆ ಎಂದು 'ಶಿವ ಶರಣೆಯರ ವಚನ ಸಂಪುಟದ' ಪ್ರಸ್ತಾವನೆಯಲ್ಲಿ ಬರೆಯಲಾಗಿದೆ.

ಮಹಾದೇವಿಯಮ್ಮನ ಮೊದಲ ಹೆಸರು ಗಂಗಾದೇವಿ. ಪತಿಯಾದ ಮಹಾದೇವ ಭೂಪಾಲನೊಡನೆ ರಾಜವೈಭವವನ್ನು ಅನುಭವಿಸಿದವಳು. ಮಹಾದೇವ ಭೂಪಾಲನೂ ಆತನ ತಂಗಿಯಾದ ನಿಜದೇವಿ (ಬೊಂತಾದೇವಿ) ಶಿವಭಕ್ತಿಸಂಪನ್ನರು. ಹಾಗಾಗಿ ಆ ಪರಿಸರದ ಪ್ರಭಾವ ಸಹಜವಾಗಿಯೇ ಗಂಗಾದೇವಿಯ ಮೇಲೂ ಪರಿಣಾಮ ಬೀರಿರಬೇಕು. ಅಲ್ಲದೆ ಅವಳಲ್ಲಿಯೂ ಅಂತಹ ಸಂಸ್ಕಾರ ಮೊದಲಿನಿಂದಲೂ ಇದ್ದಿರಬಹುದಾದ ಅಂಶವನ್ನು ಅಲ್ಲಗಳೆಯಲಾಗದು. ಮಹಾದೇವ ಭೂಪಾಲನು ಕಲ್ಯಾಣದ ಆಧ್ಯಾತ್ಮದ ಚಟುವಟಿಕೆಗಳಿಂದ ಆಕರ್ಷಿತನಾಗಿ ರಾಜ್ಯ ಸುಖಭೋಗಗಳನ್ನೆಲ್ಲಾ ತ್ಯಜಿಸಿ, ಕಲ್ಯಾಣಕ್ಕೆ ಹೊರಟಾಗ ಈಕೆಯೂ ಗಂಡನ ಭಾವನೆಗಳನ್ನು ಒಪ್ಪಿ, ಅರಸೊತ್ತಿಗೆಯನ್ನು ಕಡೆಗಣಿಸಿ, ಶರಣ ಜೀವನಕ್ಕೆ ಮನಸೋತು, ಮಹಾದೇವ ಭೂಪಾಲನೊಡನೆ ಕಲ್ಯಾಣಕ್ಕೆ ಬಂದಳು.

**ಮಾರ್ಗದರ್ಶಿ ಧರ್ಮಪತ್ನಿ**

ಶರಣ ಜೀವನದಲ್ಲಿ ಸಮರಸ ದಾಂಪತ್ಯಕ್ಕೆ ತುಂಬಾ ಗೌರವವಿದೆ. ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದಿದ್ದಾರೆ ಶರಣರು. 'ಗಂಡಹೆಂಡಿರ ಮನಸ್ಸು ಒಂದಾಗಿ ಬಾಳಿದರೆ ಅದು ದೇವರ ಮುಂದೆ ಜೋಡು ನಂದಾದೀಪ ಹಚ್ಚಿದಂತೆ' ಎಂಬುದು ಶಿವಭಕ್ತರ ನಂಬಿಕೆ. ಜೋಡು ನಂದಾದೀಪದಂತಹ ಅಪರೂಪ ದಾಂಪತ್ಯ ಮಹಾದೇವ ಭೂಪಾಲ ಮತ್ತು ಗಂಗಾದೇವಿಯರದ್ದು. ಇಬ್ಬರೂ ಒಂದೇ ಮನಸ್ಸಿನಿಂದ ಅನುಭವಮಂಟಪಕ್ಕೆ ಬಂದು, ಮೋಳಿಗೆ ಕಾರ್ಯವನ್ನು ಸ್ವೀಕರಿಸಿದರು. ಮೋಳಿಗೆ ಮಾರಯ್ಯ ಹಾಗೂ ಮಹಾದೇವಿ ಎಂದು ವೀರಶೈವ ಕಾರ್ಯದಲ್ಲಿ ಶರಣರಾದ ಇವರು ಪ್ರಸಿದ್ಧರಾಗಿದ್ದಾರೆ. ಅಂದಿನ ಶರಣರಲ್ಲಿ ಪ್ರತಿಯೊಬ್ಬರೂ ಒಂದೊಂದು ಕಾರ್ಯವನ್ನು ಕೈಗೊಂಡು ಜೀವನ ಮಾಡಬೇಕಿತ್ತು. ಯಾರೂ ಉದ್ಯೋಗವಿಲ್ಲದೆ ಇರುವಂತಿರಲಿಲ್ಲ. ರಾಜನಾಗಿ ಬದುಕಿದ್ದ ಮಾರಯ್ಯನ ಪಾಲಿಗೆ ಬಂದ ಕಾರ್ಯವೆಂದರೆ, ದಿನವೂ ಕಾಡಿಗೆ ಹೋಗಿ ತಾನೇ ಕಟ್ಟಿಗೆಯನ್ನು ಕಡಿದು, ಕಡಿದ ಕಟ್ಟಿಗೆಯ ಹೊರೆಯನ್ನು ತಂದು ಪೇಟೆಯಲ್ಲಿ ಮಾರಿ ಬಂದ ಹಣದಿಂದ ಅಂದಂದಿನ ಜೀವನಕ್ಕೆ ಬೇಕಾದ ಧಾನ್ಯವನ್ನು ಕೊಂಡುತರಬೇಕಿತ್ತು. ನಂತರ ಆ ಧಾನ್ಯದಿಂದ ಹೆಂಡತಿಯಾದ ಮಹಾದೇವಿಯ

ತೆಳುವಾದ ಅಂಬಳಕ (ಅಂಬಲಿ)ಯನ್ನು ಮಾಡಿ, ತಮ್ಮ ದೇವರಾದ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಿಗೆ ನಿವೇದಿಸಿ, ಜಂಗಮರಿಗೆ ಉಣಬಡಿಸಿ, ಉಳಿದ ಪ್ರಸಾದವನ್ನು ತಾವು ಸೇವಿಸುತ್ತಿದ್ದರು. ಆ ಮಹಾತಾಯಿ ಮಾಡುತ್ತಿದ್ದ ಅಂಬಲಿಯ ರುಚಿಯು ಎಲ್ಲೆಡೆ ಪ್ರಸಿದ್ಧಿ ಪಡೆದಿತ್ತು. ಬಸವಣ್ಣನ ಮನೆಯಲ್ಲಿ ಭಕ್ಷ್ಯ, ಭೋಜ್ಯಗಳನ್ನು ಉಂಡರೂ, ಜಂಗಮರು ಮಹಾದೇವಿಯ ಕೈಯ ಅಂಬಲಿಯ ರುಚಿಗೆ ಮನಸೋತು, ಇನ್ನೊಂದು ಊಟಕ್ಕೆ ಅವರ ಮನೆಗೆ ಹೋಗುತ್ತಿದ್ದರಂತೆ!

### ಅಂಬಲಿ ಪ್ರಸಾದ–ಹೊನ್ನಜಾಳಿಗೆ ಪವಾಡಿ

ಈ ಅಂಬಲಿಯ ರುಚಿಯ ಪ್ರಖ್ಯಾತಿ ಬಸವಣ್ಣನ ಕಿವಿಗೂ ತಟ್ಟಿತು. ಅದರ ರುಚಿಯನ್ನು ಸವಿಯಬೇಕೆಂಬಾಸೆ ಮೂಡಿತು ಬಸವಣ್ಣನಿಗೆ. ಅಲ್ಲದೆ ಕಾಶ್ಮೀರದ ಅರಸು ಮಹಾದೇವ ಭೂಪಾಲ ಇಂದು, ಮೋಳಿಗೆಯ ಕಾಯಕದಿಂದ ಸ್ವಲ್ಪ ಹಣ ಸಂಪಾದಿಸಿ, ಅಂಬಲಿ ಮಾಡಿಕೊಂಡು ಪ್ರಸಾದಕ್ಕೆ ಅದನ್ನೇ ಬಳಸಿಕೊಳ್ಳುತ್ತಿದ್ದಾರೆಂಬ ವಿಷಯದಿಂದ ಬಸವಣ್ಣಗೆ ಬೇಜಾರಾಯಿತೋ ಏನೋ ಎನ್ನುವಂತೆ, ಒಂದುದಿನ ಬಸವಣ್ಣ ಜಂಗಮನಂತೆ ವೇಷ ಧರಿಸಿಕೊಂಡು ಮಾರಯ್ಯನವರ ಮನೆಗೆ ಹೋಗುತ್ತಾನೆ. ಮಾರಯ್ಯ ಮನೆಯಲ್ಲಿರುವದಿಲ್ಲ. ಮಹಾದೇವಿಯಮ್ಮನನ್ನು, ತನಗೆ ಹಸಿವಾಗಿದೆಯೆಂದೂ ಪ್ರಸಾದ ನೀಡಬೇಕೆಂದು ಕೇಳುತ್ತಾನೆ. ವೀರಶೈವ ಸಂಸ್ಕೃತಿಗೆ ತಕ್ಕಂತೆ, ಮನೆಗೆ ಬಂದ ಅತಿಥಿಯನ್ನು ಭಕ್ತಿ ಪೂರ್ವಕ ಸ್ವಾಗತಿಸಿ ಅಂಬಲಿಯನ್ನು ಬಡಿಸುತ್ತಾಳೆ ಮಹಾದೇವಮ್ಮ. ಬಸವಣ್ಣ ರುಚಿಯಾದ ಅಂಬಲಿಯನ್ನು ತೃಪ್ತಿಯಿಂದ ಸೇವಿಸುತ್ತಾನೆ. ರಾಜನು ಅನುಭವಿಸಬೇಕಾದ ಬಡತನದ ಸ್ಥಿತಿಯನ್ನು ನೋಡಿ, ಕನಿಕರದಿಂದಲೋ ಅಥವಾ ದೇಶ–ಕೋಶಗಳನ್ನೆಲ್ಲಾ ತ್ಯಜಿಸಿ ಬಂದ ರಾಜನಿಗೆ, ಧನದ ಮೇಲಿನ ವ್ಯಾಮೋಹ ಸಂಪೂರ್ಣವಾಗಿ ಅಳಿದಿದೆಯೋ ಅಥವಾ ಇನ್ನೂ ಉಳಿದಿದೆಯೋ ಎಂಬುದನ್ನು ಪರೀಕ್ಷೆ ಮಾಡಬೇಕೆಂದೋ ಏನೋ ಎನ್ನುವಂತೆ, ಊಟ ಮುಗಿಸಿ ಹೋಗುವಾಗ, ಮಹಾದೇವಿಯಮ್ಮನಿಗೆ ತಿಳಿಯದಂತೆ, ಬಚ್ಚಲು ಮನೆಯಲ್ಲಿ, ಚಿನ್ನದ ನಾಣ್ಯಗಳನ್ನು ತುಂಬಿದ ಎರಡು ಜಾಳಿಗೆಗಳನ್ನು ಇಟ್ಟು ಹೋಗುತ್ತಾನೆ. ಇದಾದ ಸ್ವಲ್ಪ ಹೊತ್ತಿ ನಂತರ, ತನ್ನ ಕಾಯಕ ಮುಗಿಸಿಕೊಂಡು ಮನೆಗೆ ಬಂದ ಮಾರಯ್ಯ, ಕೈ–ಕಾಲು–ಮುಖ ತೊಳೆದುಕೊಳ್ಳಲೆಂದು ಬಚ್ಚಲು ಮನೆಗೆ ಹೋದಾಗ ಜಾಳಿಗೆಗಳನ್ನು ನೋಡಿ, ಮನೆಗೆ ಯಾರು ಬಂದಿದ್ದರೆಂದು ಪತ್ನಿಯನ್ನು ಕೇಳಿದ. ಆಗ ಮಹಾದೇವಿ, ಒಬ್ಬ ಜಂಗಮಯ್ಯನು ಪ್ರಸಾದಕ್ಕೆ ಬಂದು ಹೋದ ಸುದ್ದಿ ತಿಳಿಸುತ್ತಾಳೆ. ತಕ್ಷಣ, ಮಾರಯ್ಯನಿಗೆ, ತಮ್ಮ ಜೀವನವನ್ನು ನೋಡಿ, ಕನಿಕರಿಸಿ, ತಮ್ಮ ಸಹಾಯಕ್ಕಾಗ ಎಂದು ಬಸವಣ್ಣನೇ ಜಂಗಮವೇಷದಲ್ಲಿ ಬಂದು ಹೊನ್ನಜಾಳಿಗೆಗಳನ್ನು ಇಟ್ಟು

ಹೋಗಿರಬೇಕೆಂದು ಹೊಳೆಯುತ್ತದೆ. ಬೇರೆಯವರಿಗೆ ಶರಣ ತತ್ತ್ವವನ್ನು ಬೋಧಿಸುವ ಬಸವಣ್ಣ, ಈ ರೀತಿ ನಮ್ಮನ್ನು ಬಡವರೆಂದು ತಿಳಿಯಬಹುದೇ. ಶರಣರನ್ನು ಬಡವರು ಬಲ್ಲಿದರು ಎಂದು ಗುರುತಿಸಬಹುದೆ. ಶರಣರಲ್ಲೇ ಒಬ್ಬರು ಕೊಡಬಲ್ಲವರು ಮತ್ತೊಬ್ಬರು ಪಡೆಯಬಲ್ಲವರು ಎಂದು ಮೇಲು ಕೀಳೆಂದು ಪರಿಗಣಿಸುವುದು ಯುಕ್ತವೆ? ಈ ಹೆಚ್ಚು ಕಡಿಮೆಯ ಭಾವ ಬಸವಣ್ಣನವರಲ್ಲಿ ಬಂದು ತಾವು ಕೊಡಲು ಸಮರ್ಥರು ಎಂದು ತಿಳಿದು ನಮ್ಮನ್ನು ಹೀನಾಯ ಮಾಡಿ ಬಸವಣ್ಣ ಹೀಗೆ ಅವಮಾನಿಸಬಹುದೆ? ಶರಣರಲ್ಲಿ ಬಡವರ್ಯ್ಯಾರು; ಬಲ್ಲಿದರ್ಯ್ಯಾರು, ಶರಣರೆಲ್ಲಾ ಸಮಾನರು ಎಂಬ ತತ್ತ್ವವನ್ನು ಮರೆತು ನಡೆದ ಬಸವಣ್ಣನವರ ಬಗ್ಗೆ ಮಾರಯ್ಯಗೆ ಬೇಸರವಾಯಿತು. ಸುಲಭವಾಗಿ ಅನ್ಯರ ಸಂಪತ್ತು ದೊರೆತಾಗ ಅದನ್ನು ಬೇಡವೆನ್ನದೆ ಅನುಭವಿಸುವುದು ಶರಣತತ್ತ್ವಕ್ಕೆ ವಿರೋಧವೆಂದು ತಿಳಿದಿದ್ದ ಮಾರಯ್ಯ, ಹೊರಗೆ ಹೋಗುತ್ತಿದ್ದ ಜಂಗಮರಿಬ್ಬರನ್ನು ಕರೆಸಿ, ಆ ಜಾಳಿಗೆಗಳನ್ನು ದಾನಮಾಡಿ ಬಿಟ್ಟ. ಅಷ್ಟರಿಂದಲೂ ಸಮಾಧಾನ ದೊರೆಯಲಿದೆ, ತನ್ನನ್ನು ಬಡವನೆಂದು ತಿಳಿದ ಬಸವಣ್ಣಗೆ ಸರಿಯಾದ ಉತ್ತರ ಕೊಡಬೇಕೆಂದು ಯೋಚಿಸಿ, ಬಸವಾದಿ ಪ್ರಮಥರನ್ನೆಲ್ಲಾ ಪ್ರಸಾದಕ್ಕೆ ಆಹ್ವಾನಿಸುತ್ತಾನೆ. ಬಂದಂತಹ ಪ್ರಮಥರಿಗೆಲ್ಲಾ ಪ್ರಸಾದವಿತ್ತು ಅವರ ಪಾದೋಪಕವನ್ನು ತಾನು ತಂದ ಕಟ್ಟಿಗೆಯ ಮೇಲೆ ಭಕ್ತಿಯಿಂದ ಚುಮುಕಿಸುತ್ತಾನೆ. ಕೂಡಲೇ ಅವು ಬಂಗಾರದ ತುಂಡುಗಳಾಗುತ್ತವೆ! ಪ್ರಸಾದ ಮಾಡಿದ ಶರಣರಿಗೆಲ್ಲಾ ಒಂದೊಂದು ತುಂಡನ್ನು ದಕ್ಷಿಣೆಯಾಗಿ ಕೊಡುತ್ತಾನೆ. ಆಗ ಬಸವಣ್ಣ ಮಾರಯ್ಯನ ದೊಡ್ಡಸ್ತಿಗೆಯನ್ನು ಕಂಡು ಆಶ್ಚರ್ಯದಿಂದ

ಧನದಲ್ಲಿ ಶುದ್ಧ, ಪ್ರಾಣದಲ್ಲಿ ನಿರ್ಭಯ
ಇದಾರಿಂಗಳವಡುವುದಯ್ಯಾ?
ನಿಧಾನ ತಪ್ಪಿ ಬಂದರೆ, ಒಲ್ಲೆನೆಂಬುವವರಿಲ್ಲ
ಪ್ರಮಾದವಶದಿಂದ ಬಂದರೆ ಹುಸಿ ಎಂಬುವರಿಲ್ಲ
ನಿರಾಶೆ, ನಿರ್ಭಯ ಕೂಡಲ ಸಂಗಮದೇವಾ
ನೀನೊಲಿದ ಶರಣಂಗಲ್ಲದಿಲ್ಲವಯ್ಯಾ

ಎಂದು ಮಾರಯ್ಯನಿಗೆ ಧನದಬಗ್ಗೆ ಇದ್ದ ವೈರಾಗ್ಯವನ್ನು ಕಂಡು ಆಶ್ಚರ್ಯ ಪಡುತ್ತಾನೆ. ಕೂಡಲಸಂಗಯ್ಯನೊಲಿದ ಶರಣನೆಂದು ಮೆಚ್ಚುಗೆ ಸೂಸುತ್ತಾನೆ. ತಾನು ಬಡತನದಲ್ಲಿದ್ದೆನೆಂದು ಬಸವಣ್ಣ ತಿಳಿದು ತನ್ನನ್ನು ಹಣದಾಸೆಗೆ ಒಳಪಡುವಂತೆ ಮಾಡಬಾರದಿತ್ತು. ಅವರಂತಹವರೇ ಹೀಗೆಲ್ಲಾ ಮಾಡಿದರೆ, ಉಳಿದ ಸಾಮಾನ್ಯರಿಗೆ ಹೇಳುವುದೇನಿದೆ ಎನ್ನಿಸಿ, ಮಾರಯ್ಯ ಶರಣ,

ಬಯಲು ಬತ್ತಲೆಯಾದಡೆ ಹೊದಿಸುವವರಿನ್ನಾರು?

ಏರಿ ನೀರು ಕುಡಿದರೆ ಬಿಡಿಸುವವರಿನ್ನಾರು?
ಮಹಾಮೇರು ನಡೆವಡೆ, ಪದಕಿಂಬುಕೊಡುವವರಾರು?
ಅರಿದವ ಮರೆದನಾದಡೆ ಅರಕೆಯ ಹೇಳುವವರಾರು?
ನಿಮ್ಮ ನಿಜವ ನೀವೇ ಬಲ್ಲಿರಿ ನಾನಂಜುವೆ

ನಿಃಕಳಂಕ ಮಲ್ಲಿಕಾರ್ಜುನಾ, ಎಂದು ಸುಂದರವಾದ ಸಾದೃಶ್ಯಗಳ ಮೂಲಕ ಇನ್ನು ಇಷ್ಟದೈವವಾದ ಮಲ್ಲಿಕಾರ್ಜುನನ್ನೇ ಪ್ರಶ್ನಿಸುತ್ತಾನೆ.

### ಮಾರಯ್ಯನ ಕಾಯಕನಿಷ್ಠೆ–ಬಸವಣ್ಣನ ಪರೀಕ್ಷೆ

ಬಸವಣ್ಣನವರಂತಹ ಜ್ಞಾನಿಗಳೇ, ತಿಳಿವಳಿಕೆ ಇಲ್ಲದವರಂತೆ ವರ್ತಿಸಿದರೆ, ಅವರಿಗೆ ಅರಿವನ್ನು ಹೇಳಲು ಯಾರಿಗೆ ತಾನೆ ಸಾಧ್ಯ? ಎಂದು ಭಗವಂತನನ್ನು ಮೊರೆ ಹೋಗುತ್ತಾನೆ. ಈ ಮಾತುಗಳನ್ನು ಕೇಳಿದ ಬಸವಣ್ಣನಿಗೆ ತಾನು ಮಾಡಿದ ತಪ್ಪಿನ ಅರಿವಾಗುತ್ತದೆ. ಮಾರಯ್ಯನವರ ಕಷ್ಟದ ಕೆಲಸ, ಶರಣ ತತ್ತ್ವಕ್ಕೇ ವಿರುದ್ಧ ಮಾಡಿದಂತಾದುದಲ್ಲದೇ ಮಾರಯ್ಯನವರ ಶ್ರದ್ಧೆ, ನಿಷ್ಠೆಯಿಂದ ಕೂಡಿದ ಪವಿತ್ರ ಜೀವನಕ್ಕೆ ಅಪಮಾನ ಮಾಡಿದಂತಾಯ್ತು ಎನ್ನಿಸಿ, ಮಾರಯ್ಯನನ್ನು ಕ್ಷಮೆ ಕೇಳುತ್ತಾನೆ. ಮಾರಯ್ಯನು ಅತಿವಿನಯದಿಂದ ನಡೆದುದನ್ನು ಕಡೆಗಣಿಸಿ, ಬಸವಣ್ಣನನ್ನು ಬೀಳ್ಕೊಡುತ್ತಾನೆ. ಈ ಎಲ್ಲ ಘಟನೆಯ ಹಿಂದೆ ಮಾರಯ್ಯನಿಗೆ ಸತಿ ಶಿರೋಮಣಿ ಮಹಾದೇವಮ್ಮನ ಸಹಕಾರ, ಬೆಂಬಲ, ಮೆಚ್ಚುಗೆಗಳಿರುವುದನ್ನು ನಾವು ಮನಗಾಣಬೇಕು. ಇಂತಹ ಸತಿಯನ್ನು ಪಡೆದ ಮಾರಯ್ಯನ ಕಾಯಕನಿಷ್ಠೆ, ವೀರಶೈವರ ತತ್ತ್ವದ ಬಗ್ಗೆ ಶ್ರದ್ಧೆ, ಭಕ್ತಿ–ಜ್ಞಾನ–ವೈರಾಗ್ಯಗಳ ಸಿದ್ಧಿಯನ್ನು ನೋಡಿ ಚನ್ನಬಸವಣ್ಣನು, ಮಾರಯ್ಯನನ್ನು ಕುರಿತು,

ಹಸಿವು, ತೃಷೆ, ವಿಷಯವೆಂಬ ಕರ್ಮಂಗಳನೆ ಕಂಡು,
ಪರಿಣಾಮವೆಂಬ ಕೊಡಲಿಯಲ್ಲಿ ತತ್ತರಿದರಿದು
ಕಾಮ, ಕ್ರೋಧ, ಲೋಭ, ಮದ, ಮೋಹ, ಮತ್ಸರಂಗಳ
ತರಿದೊಟ್ಟಿದನೊಂದೆಡೆಯಲ್ಲಿ
ಪಂಚೇಂದ್ರಿಯ, ಷಡುವರ್ಗ, ಸಪ್ತಧಾತು
ಅಷ್ಟಮದವೆಂಬ ಬಳ್ಳಿಯ ನೇಳಿ
ಏಳುಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ,
ಮೋಳಗೆ ಮಾರಯ್ಯ, ಆ ಮಾರಿ ತಂದೆಗಳ ಶ್ರೀಪಾದಕ್ಕೆ
ನಮೋ, ನಮೋ,

ಎಂದು ಮಾರಯ್ಯ ತನ್ನ ಕಾರ್ಯ ಜೀವನ ಅವನ ಶರಣ ಜೀವನಕ್ಕೆ ಹೇಗೆ ಸಹಾಯಕ ಮಾಡಿ ಕೊಂಡಿದ್ದಾನೆಂದು ಅರಿದು, ಆತನಿಗೆ ನಮಸ್ಕರಿಸಿದ್ದಾನೆ.

ಇಂಥಹ ನ್ಯಾಯನಿಷ್ಠುರಿಯೂ, ಶರಣ ಜೀವಿಯೂ ಆದ ಪತಿಗೆ ತಕ್ಕ ಸತಿ ಮಹಾದೇವಿ ಇಬ್ಬರದೂ ಒಂದೇ ಮನೋಭಾವ. ಇಂತಹ ಆದರ್ಶ ದಾಂಪತ್ಯಕ್ಕೆ, ಮಹಿಳೆಯರೂ, ಈ ರೀತಿ ವಿಚಾರವಂತೆಯರಾಗಿ ಬಾಳುವುದಕ್ಕೆ ಬಸವಣ್ಣನವರು ಸ್ತ್ರೀ ಸಮಾನತೆಯನ್ನು ಬಿತ್ತಿ ಬೆಳೆಸಿದುದೇ ಕಾರಣ. ಅವರು ಬಿತ್ತಿದ ಬೀಜ ಮೊಳೆತು ಗಿಡವಾಗಿ ಹೂ ಬಿಟ್ಟು, ಅದರ ಕಾಲದಲ್ಲೇ ಸತ್‌ಫಲ ಕೊಟ್ಟುದುದೊಂದು ಸೋಜಿಗದ ಸಂಗತಿ. ಪತಿಯು ಒಳ್ಳೆಯವನಿರಲಿ ಕೆಟ್ಟವನಿರಲಿ, ದುಷ್ಟನಿರಲಿ, ನೀಚನಿರಲಿ, ಪ್ರತಿಯಾಡದೆ ಅವನು ಹೇಳಿದಂತೆ ಕೇಳಿಕೊಂಡಿರುವುದೇ ಸತಿಧರ್ಮ ಎಂದು ತಿಳಿದುಕೊಂಡಿದ್ದ ಆ ಕಾಲದಲ್ಲಿ, ಬಸವೇಶ್ವರರ ಬೋಧೆಯ ಪರಿಣಾಮವಾಗಿ ಶರಣರಂತೆ ಶರಣೆಯರೂ, ಧಾರ್ಮಿಕ, ಸಾಮಾಜಿಕ ವಿಷಯಗಳ ಜ್ಞಾನ ಪಡೆದು, ಅವುಗಳನ್ನು ಮನನ ಮಾಡಿಕೊಂಡ, ವೈಚಾರಿಕವಾಗಿ ವಿಮರ್ಶಿಸಿ, ವೈಚಾರಿಕ ಘಟ್ಟದಲ್ಲಿಯೂ ಪುರುಷರಿಗೆ ಸಮಾನವಾಗಿ ಬದುಕಿದರು. ಅಲ್ಲದೆ, ಪುರುಷರು ತಪ್ಪಿ ನಡೆದಾಗ, ಅವರಿಗೆ ತಿಳಿಹೇಳಿ, ತಿದ್ದಿ ಸರಿಯಾದ ಮಾರ್ಗದಲ್ಲಿ ಮುನ್ನಡೆಯುವಂತೆ ಮಾಡಿದ ಉದಾಹರಣೆಗಳೂ ಹನ್ನೆರಡನೆಯ ಶತಮಾನದಲ್ಲಿಯೇ ದೊರೆಯುತ್ತವೆ. ಮಹಿಳೆಯನ್ನು ತೊತ್ತಿನಂತೆ ನಡೆಸಿಕೊಳ್ಳುತ್ತಿದ್ದ ಪುರುಷನೂ, ಆಕೆಯ ಮಾರ್ಗದರ್ಶನದ ಮಾತುಗಳಿಗೆ ಮಹತ್ವನಿತ್ತು ಅದರಂತೆ ತಮ್ಮ ನಡೆಯನ್ನು ಬದಲಾಯಿಸಿಕೊಳ್ಳುವಷ್ಟು, ಹೆಣ್ಣಿನ ಮಾತೆಂದು ಧಿಕ್ಕರಿಸದಿರುವಷ್ಟು ಸಂಸ್ಕಾರವನ್ನು ಪಡೆಯುವಂತೆ ಮಾಡಿದುದು, ಒಂದು ದೊಡ್ಡ ಸುಧಾರಣೆ. ಬಸವಣ್ಣನವರ ಸುಧಾರಣಾ ಕ್ರಮದ ಫಲವನ್ನು ಮೋಳಿಗೆ ಮಾರಯ್ಯ ಹಾಗೂ ಮಹಾದೇವಿಯವರ ಜೀವನದಲ್ಲಿ ಕಾಣಬಹುದಾಗಿದೆ. ಇಂತಹ ಇನ್ನೂ ಅನೇಕ ಉದಾಹರಣೆಗಳು ಹನ್ನೆರಡನೆಯ ಶತಮಾನದಲ್ಲಿ ನಡೆದು ಹೋದುದು ಖಂಡಿತಾ ಆಶ್ಚರ್ಯ ಪಡುವಂತಹ ಘಟನೆಗಳು.

ಕಲ್ಯಾಣದಲ್ಲಿ ಕ್ರಾಂತಿಯಾದ ಮೇಲೆ ಬಹಳಷ್ಟು ಶರಣ-ಶರಣೆಯರು ಶ್ರೀಶೈಲದ ಕಡೆಗೆ, ಉಳುವಿಯ ಕಡೆಗೆ ಕೂಡಲ ಸಂಗಮದ ಕಡೆಗೆ ಹೋಗಿಬಿಡುತ್ತಾರೆ. ಬಸವಣ್ಣನವರ ಕಾರ್ಯಕ್ರಮಗಳು ಕಲ್ಯಾಣದಲ್ಲಿ ನಿಂತು ಬಿಡುತ್ತವೆ. ಉಳಿದ ಶರಣರು ತಮ್ಮ, ತಮ್ಮಷ್ಟಕ್ಕೆ ತಮ್ಮ, ತಮ್ಮ ಕಾರ್ಯಗಳನ್ನು ಮಾಡಿಕೊಂಡು ತಮ್ಮ ಧರ್ಮದ ತತ್ತ್ವಗಳಿಗೆ ಅನುಗುಣವಾಗಿ ಬದುಕುತ್ತಿರುತ್ತಾರೆ. ಆದರೆ ಬಸವಣ್ಣ ಕಲ್ಯಾಣದಲ್ಲಿ ಇದ್ದಾಗಿನ ಸ್ಥಿತಿ ಅಲ್ಲಿ ಉಳಿದಿರುವುದಿಲ್ಲ. ಅಕ್ಕನಾಗಮ್ಮನು ಆ ಸ್ಥಿತಿಯನ್ನು ತನ್ನ ವಚನದಲ್ಲಿ ಹೀಗೆ ವರ್ಣಿಸಿದ್ದಾಳೆ:

ಬಸವಣ್ಣಾ, ನೀವು ಮರ್ತ್ಯಕ್ಕೆ ಬಂದು ನಿಂದಡೆ
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತ್ತಲ್ಲಾ!
ಅಯ್ಯಾ, ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲಾ
ನಿಮ್ಮ ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರು?
ಅಣ್ಣ, ಶಶಿಧರನಟ್ಟಿದ ಮಣಿಹ ಪೂರೈಸಿತ್ತೆಂದು
ನೀವು ಲಿಂಗೈಕ್ಯವಾದೊಡೆ, ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ
ನಿಮ್ಮೊಡನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣಾ
ಮರ್ತ್ಯ ಲೋಕದ ಮಹಾಮನೆ ಶೂನ್ಯವಾಯಿತಲ್ಲಾ ಬಸವಣ್ಣಾ

ಈ ರೀತಿಯಾಗಿ ಕಲ್ಯಾಣವೆಲ್ಲಾ ಶೂನ್ಯವೆನ್ನಿಸಿದಾಗ ಮಾರಯ್ಯನಿಗೂ ಲಿಂಗದಲ್ಲಿ ಐಕ್ಯನಾಗಬೇಕೆನ್ನಿಸುತ್ತದೆ. ಈ ಮೋಳಿಗೆಯ ಕಾಯಕವನ್ನು ಇನ್ನೆಷ್ಟು ದಿನ ಮಾಡುತ್ತಾ ಬದುಕಿರಬೇಕು ಎನ್ನುವಷ್ಟು ಬೇಸರ ಬಂದು

ಕಾಯಕವೇ ಕೈಲಾಸ

ಎನಗೆ ಮರ್ತ್ಯದ ಮಣಿಹ ಕರ್ತವ್ಯವಿನ್ನೆಷ್ಟು ಪರಿಯಂತರ,
ಎನಗೆ ಕಟ್ಟಾಗುತ್ತಿಗೆಯ
ನಾಕಟ್ಟಿಗೆಯ ಹೊತ್ತು ಶಿವಭಕ್ತರ ಮನೆಗೆ
ನೀವು ಕೊಟ್ಟ ಕಾಯಕದ ಕೃತ್ಯ ಇನ್ನೆಷ್ಟು

ದಿನ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ಎಂದು ಕೇಳುತ್ತಾನೆ. ಗುರಿ ಇಲ್ಲದವನಂತೆ ಹಲುಬುತ್ತಾನೆ.

ಬಸವಣ್ಣನವರು ವೀರಶೈವ ತತ್ತ್ವಕ್ಕೆ ವಿರುದ್ಧವಾಗಿ ಹೊನ್ನ ಜಾಳಿಗೆಗಳನ್ನಿಟ್ಟು ಹೋದಾಗ, ಬಸವಣ್ಣನವರೇ ತತ್ತರಿಸಿ ಹೋಗುವಂತೆ ಮಾಡಿದ ಮಾರಯ್ಯ ಇಂದು ವೀರಶೈವ ಧರ್ಮದ ತತ್ತ್ವಕ್ಕೆ ವಿರುದ್ಧವಾದ ರೀತಿಯಲ್ಲಿ ತಾ ಬೇರೆ-ಪರಮಾತ್ಮ ಬೇರೆ ಕೈಲಾಸ ಬೇರೆ ಎಂದೂ, ತಾನು ಕೈಲಾಸಕ್ಕೆ ಹೋಗಬೇಕೆಂದು ಆಶಿಸುವುದನ್ನು ಕಂಡು ದಿಗ್ಭ್ರಮೆಗೊಳ್ಳುತ್ತಾಳೆ ಮಹಾದೇವಿ. ತಾನು ಮಾಡಿದ ಭಕ್ತಿಗೆ ಪ್ರತಿಯಾಗಿ ಕೈಲಾಸಪದವನ್ನು, ಮಾಡಿದ ಕೆಲಸಕ್ಕೆ ಕೂಲಿಯನ್ನು ಕೇಳುವಂತೆ ಎನ್ನ ಪತಿ ಇಷ್ಟುದಿನ ಬಾಳಿಬಂದ ತತ್ತ್ವವನ್ನೇ ಮರೆತು ಅಜ್ಞಾನಿಯಂತೆ ಹಪಹಪಿಸುತ್ತಿದ್ದಾನಲ್ಲಾ ಎಂದು ಅವಳಿಗೆ ನಾಚಿಕೆ ಎನ್ನಿಸಿ, ಸಿಟ್ಟು ನಾಚಿಕೆಗಳನ್ನು ತಡೆದುಕೊಳ್ಳಲಾರದೆ, ಈ ವಚನ ನುಡಿದಂತೆ ತೋರುತ್ತದೆ, ಮೋಳಿಗೆ ಮಹಾದೇವಿ.

ಕಾಷ್ಠವ ಸುವರ್ಣವ ಮಾಡಿದೆನೆಂಬ ಘಾತುಕತನವೇ ನಿಮ್ಮ ಭಕ್ತಿ
ಸಕಲ ದೇಶಕೋಶವಾಸ ಭಂಡಾರ ಸವಾಲಕ್ಷ ಮುಂತಾದ ಸಂಬಂಧ
ಸ್ತ್ರೀಯರ ಬಿಟ್ಟುಬಂದೆನೆಂಬ ಕೈಕೂಲಿಯೆ ನಿಮ್ಮ ಭಕ್ತಿ?
ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು ಮುಂತಾದ
ಎಂದು ಕೇಳಿದುದಲ್ಲದೆ, ನಿಮ್ಮ ಅರಿವಿಂಗೆ ಇದಿರಿನಲ್ಲಿ
ಕೂಡಿಹೆನೆಂಬ ಭಿನ್ನಭಾವವುಂಟೆ ಅಯ್ಯಾ
ಕರ್ಪುರದ ಅರಣ್ಯ ಕಿಚ್ಚುಹತ್ತಿ ಬೆಂದಲ್ಲಿ ಭಸ್ಮ ಇದ್ದಿತೆಂದು ಲಕ್ಷಿಸಲುಂಟೆ
ನಿಮ್ಮ ಭಾವವ ನೀವೇ ತಿಳಿದುಕೊಳ್ಳಿ
ನಿಮ್ಮ ಕೂಟಕ್ಕೆ ಎನ್ನ ನಾಚಿಕೆಯ ಬಿಡಿಸಿದ ತೆರನ ತಿಳಿದುಕೊಳ್ಳಿ
ಶಕ್ತಿಯ ಮಾತೆಂದು ಧಿಕ್ಕರಿಸಬೇಡಿ
ಹೊರಗೆ ಕೂಡಿಹೆನೆಂಬುದು ನಿಮ್ಮ ಅರಿವಿಂಗೆ ಹಾನಿ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ
ನಿಮ್ಮ ಶರಣರ ನೆಲೆಯ ನೀವೇ ನೋಡಿಕೊಳ್ಳಿ

ಎಂದು ಮಾರಯ್ಯನ ವಿಚಾರಗಳಿಂದ ಮಹಾದೇವಿಯಮ್ಮನಿಗೆ ಎಲ್ಲಿಲ್ಲದ ಸಿಟ್ಟು, ನೋವು, ನಾಚಿಕೆಯುಂಟಾಯಿತು. ಇಷ್ಟು ವರ್ಷಗಳು ಶರಣ ಜೀವನವನ್ನು ಬದುಕಿ, ಶರಣ ತತ್ತ್ವವನ್ನೇ ಅರಿಯದ ಪಾಮರನಂತೆ, ಲಿಂಗಾಂಗ ಸಾಮರಸ್ಯವನ್ನು ತಿಳಿಯದವರಂತೆ, ಕಾಯಕವಿಲ್ಲದ ಜ್ಞಾನ ವ್ಯರ್ಥ ಎಂಬ ತಿಳಿವಳಿಕೆ ಇಲ್ಲದಂತೆ ವರ್ತಿಸಿದಾಗ, ಕೈಲಾಸ ತನ್ನ ಸದ್ಭಾವ, ಸತ್ಕ್ರಿಯೆಯಲ್ಲಿದೆಯೇ ಹೊರತು, ಅದು ಬೇರೊಂದು ಠಾವಿನಲ್ಲಿದ್ದು ನಾವಲ್ಲಿಗೆ ಹೋಗಿ ಸೇರಿಕೊಳ್ಳುವಂತಹುದಲ್ಲ. ಶರಣ ಜೀವನದ ಸಾಧನೆಯ ಮೂಲಕ ಮಹಾ ಬಯಲಲ್ಲಿ ಮಹಾ ಬೆಳಗನ್ನು ಕಾಣುವುದೇ ನಿಜಕೂಟ, ಅದನ್ನು ತಿಳಿದುಕೊಳ್ಳುವುದೇ ನಿರಂಗತ್ವ, ಎಂಬ ವೀರಶೈವ ತತ್ತ್ವದ ಗಂಧವೇ ಇಲ್ಲದೆ ಲಿಂಗ ಬೇರೆ ತಾನು ಬೇರೆ ಎಂದು ಉಭಯ ಉಂಟೆಂಬ ಅಜ್ಞಾನಿಯಂತೆ ಮಾತನಾಡುವುದನ್ನು ಕಂಡು ಕೋಪಗೊಂಡ ಆಕೆ,

"ಏನು! ಕಟ್ಟಿಗೆಯನ್ನು ಬಂಗಾರದ ತುಂಡುಗಳನ್ನಾಗಿ ಮಾಡಿರುವ ನಾನೊಬ್ಬ ದೊಡ್ಡ ಭಕ್ತ ಎಂಬ ಅಹಂಕಾರ ನಿಮ್ಮನ್ನು ಮುಸುಕಿತೆ? ರಾಜ್ಯ ಭಂಡಾರ, ಸುಖ-ಸಂಪತ್ತುಗಳನ್ನೆಲ್ಲಾ ತ್ಯಜಿಸಿ ಬಂದು, ಕಟ್ಟಿಗೆ ಮಾರುವ ಕಾಯಕಮಾಡಿ ಶಿವನಿಗೆ ಸೇವೆ ಸಲ್ಲಿಸುತ್ತಿರುವುದರಿಂದ ಅದಕ್ಕೆ ಕೂಲಿಯಾಗಿ ಶಿವನನ್ನು ಕೈಲಾಸಪದವನ್ನು ಕೊಡೆಂದು ಬೇಡುತ್ತಿದ್ದೀರಾ? ಬಸವಣ್ಣ, ಚನ್ನಬಸವಣ್ಣ ಪ್ರಭುದೇವರು ಮುಂತಾದ ಏಳುನೂರೆಪ್ಪತ್ತು ಅಮರಗಣಂಗಳು ತಮ್ಮನ್ನೆ ತಾವು ಅರ್ಪಿಸಿಕೊಂಡು ತ್ಯಾಗಶೀಲರಾಗಿ ಬದುಕುತ್ತಿರುವಾಗ, ನಿಮ್ಮ ಈ ಅಹಂಕಾರ ಅವಿವೇಕದ ಮಾತುಗಳು ನನಗೆ

ನಾಚಿಕೆಯನ್ನುಂಟು ಮಾಡುತ್ತಿವೆ. ಹೊರಗಿರುವ ಲಿಂಗವನ್ನು ಕೂಡಿಕೊಳ್ಳುತ್ತೇನೆ. ಎಂಬ ನಿಮ್ಮ ಮಾತು, ನಿಮ್ಮ ಶರಣ ಧರ್ಮದ ಬಗೆಗಿರುವ ನಿಮ್ಮ ಅಜ್ಞಾನವನ್ನು ಸೂಚಿಸುತ್ತದೆ. ಸರಿಯಾಗಿ ವಿಚಾರಮಾಡಿ ನಡೆಯಿರಿ. ಕರ್ಪೂರದ ಅರಣ್ಯಕ್ಕೆ ಬೆಂಕಿ ಹತ್ತಿದರೆ, ಕೊನೆಯಲ್ಲಿ ಇದ್ದಿಲೂ ಇರುವುದಿಲ್ಲ ಬೂದಿಯೂ ಇರುವುದಿಲ್ಲ. ಏನೂ ಇರುವುದಿಲ್ಲ. ಹಾಗೆ ಶರಣ ಜೀವನವನ್ನು ಬದುಕಿದ ಶರಣನಿಗೆ ನಾನು ನೀನು ಎಂಬ ಭಾವನೆಗಳೆಲ್ಲ ಅಳಿದಿರಬೇಕು. ಅಲ್ಲಿ ಬೇಕು-ಬೇಡಗಳಿಗೆ ಎಡೆ ಇರುವುದಿಲ್ಲ. ನಿತ್ಯ-ಅನಿತ್ಯಗಳ ಭಾವನೆ ಉಳಿಯುವುದಿಲ್ಲ. ಯಾವ ಭಾವನೆಯೂ ಇಲ್ಲದ ಒಂದು ಶಾಂತ, ಸಮಾಧಾನ, ತೃಪ್ತಿಯಿಂದೊಡಗೂಡಿದ ಭಾವವಷ್ಟೇ ನಿಲ್ಲುತ್ತದೆ. ಒಬ್ಬ ಹೆಣ್ಣು ಹೇಳುತ್ತಾಳೆಂದು ಅಲಕ್ಷಿಸಬೇಡಿ ನೀವು ಆಶಿಸುವ, ಯೋಚಿಸುವ ವಿಷಯ ಸರಿಯೇ ಎಂಬುದನ್ನು ಪರಾಮರ್ಶಿಸಿ ನೋಡಿ. ಆಗ ನಿಮಗೇ ತಿಳಿಯುತ್ತದೆ" ಎಂದು ಮಾರಯ್ಯನನ್ನು ವಿಚಾರಕ್ಕೆ ಹಚ್ಚಲು ಪ್ರಯತ್ನಿಸುತ್ತಾಳೆ.

ಆದರೂ ಮಾರಯ್ಯ, 'ನನಗೇನೂ ತಿಳಿಯದಾಗಿದೆ. ಮನಸ್ಸು ಗೊಂದಲದಲ್ಲಿ ಸಿಲುಕಿ ತೊಳಲಾಡುತ್ತಿದೆ. ನನಗೆ ಸರಿಯಾದ ಮಾರ್ಗವನ್ನು ಯಾರು ತೋರಿಸುತ್ತಾರೆ ಎಂದು ಚಡಪಡಿಸುತ್ತಾನೆ.

### ಮಹಾದೇವಿಯ ಮಹದುಪದೇಶ

ಆಗ ಮಹಾದೇವಿಯು,

ಕೈಯ್ಯಲ್ಲಿ ಜ್ಯೋತಿಯ ಹಿಡಿದುಕೊಂಡು ಕತ್ತಲೆಯೆನಲೇತಕ್ಕೆ?
ಪರುಷರಸ ಕೈಯಲ್ಲಿದ್ದು ಕೂಲಿಯ ಮಾಡಲೇತಕ್ಕೆ?
ಕ್ಷುತ್ತು ನಿವೃತ್ತಿಯಾದಾವಂಗೆ ಕಟ್ಟೋರಗದ ಹೊರೆಯ ಹೊರಲೇತಕ್ಕೆ?
ನಿತ್ಯ ಅನಿತ್ಯವ ತಿಳಿದು ಮರ್ತ್ಯ ಕೈಲಾಸವೆಂಬುದು
ಭಕ್ತರಿಗೆ ನಿಶ್ಚಯವ ತಾನರಿದು
ಅತ್ತಣ ಇತ್ತಣ ಗೊತ್ತು ನಿಶ್ಚಯವಾಗಿ ಯುಕ್ತಿಯಲ್ಲಿ ನಿಂದಲ್ಲಿ
ಆ ಬಚ್ಚ ಬಯಲು ಬೆಳಗ
ನಿನ್ನ ನೀನೇ ನೋಡಿಕೊ ಎನ್ನಯ್ಯಪ್ರಿಯ
ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ

ಎನ್ನುತ್ತಾಳೆ.

ನಿನಗೆ ಜ್ಞಾನದ ಬೆಳಕನ್ನು ಕೊಡಲು ಬೇರೆ ಯಾರನ್ನು ಏಕೆ ಅರಸುತ್ತೀಯೆ. ನಿನ್ನ ಕೈಯ್ಯಲ್ಲಿ ಇಷ್ಟಲಿಂಗವೆಂಬ ಜ್ಯೋತಿಯನ್ನಿಟ್ಟುಕೊಂಡು ಕತ್ತಲೆಂದು ತಡಕಾಡುವಿಯೇಕೆ. ಅದು ಕೂಟಕ್ಕೆ ಒಂದು ಕುರುಹು (ನಿನ್ನ ಮನಸ್ಸನ್ನು ಭಗವಂತನಲ್ಲಿ

ಲೀನಗೊಲಿಸುವ ಒಂದು ಸಾಧನೆ) ಮನಸ್ಸನ್ನು ಇಷ್ಟಲಿಂಗದಲ್ಲಿ ನೆಲೆಗೊಳಿಸಿ, ಸ್ವಸ್ಥ ಚಿತ್ತದಿಂದ ಧ್ಯಾನವ ಮಾಡಿದರೆ, ಎಲ್ಲಾ ಅಂಶಗಳೂ ನಿನ್ನ ಆತ್ಮಕ್ಕೇ ಅರಿವಾಗುತ್ತವೆ. ನಿನಗೆ ಬೇಕಾದುದೆಲ್ಲಾ ಅಲ್ಲೇ ದೊರೆಯುತ್ತದೆ. ಹೊರಗಡೆಯಲ್ಲಿ ಪಡೆಯಲು ಹುಡುಕಾಡಬೇಕಿಲ್ಲ. ಅದು ಬೇಕಾದುದನ್ನೆಲ್ಲ ನೀಡುವ ಪರುಷರಸ ನಿನ್ನ ಸಂದೇಹಗಳಿಗೆಲ್ಲಾ ಪರಿಹಾರವು ನಿನ್ನಲ್ಲೇ ದೊರೆಯುತ್ತದೆ. ನೀನು ಜ್ಞಾನ ಸಿಂಧುವಾಗುವೆ. ಇನ್ನೊಬ್ಬರಿಂದ ಜ್ಞಾನ ಪಡೆಯುವ ಅಗತ್ಯ ಬೀಳುವುದಿಲ್ಲ. ಹಸಿವು ಅಡಗಿದವನು ಅಡಿಗೆಯ ಗಂಟನ್ನು ಹೊತ್ತುಕೊಳ್ಳಬೇಕಾಗುವುದಿಲ್ಲ. ಹಾಗೆಯೇ ನಿನಗೆ ನೀನೇ ಗುರುವಾದಲ್ಲಿ ನಿತ್ಯ-ಅನಿತ್ಯವ ತಿಳಿಯಬಲ್ಲೆ. ಅತ್ತ ಇತ್ತಣ ಗೊತ್ತು ನಿಶ್ಚಯವಾಗುತ್ತದೆ. ಆ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿನ್ನ ನೀನೇ ನೋಡಿಕೊಂಡರೆ, ಬಚ್ಚಬಯಲಿನಲ್ಲಿ ಬೆಳಗು ಗೋಚರವಾಗುತ್ತದೆ ಎಂದು ಲಿಂಗಾಂಗ ಸಾಮರಸ್ಯದ ರಹಸ್ಯವನ್ನು ಪತಿಗೆ ಪುನರ್‌ಜ್ಞಾಪಿಸುತ್ತಾಳೆ. ಆಗ ಮಾರಯ್ಯನು,

ಮರ್ತ್ಯವೆಂಬುದು ನಾಬಲ್ಲ ಕರ್ಕಶದ ಜಗ
ಇದು ಕಾರಣ ಕೈಲಾಸದ ಬಟ್ಟೆಯನರಸಬೇಕು.
ಎನ್ನಸತ್ಯಕ್ಕೆ, ಎನ್ನಭಕ್ತಿಗೆ ಎನ್ನ ಮನಕ್ಕೆ ಮುತ್ಯಾಂಗನೆ
ಎನ್ನ ನಿಶ್ಚಯಕ್ಕೆ ಒಂದು ಗೊತ್ತುತೋರಾ।
ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿಹನು ಹೇಳಾ

ಎಂದು ಮತ್ತೆ ಕೈಲಾಸಕ್ಕೆ ಹೋಗುವ ಆಸೆಯನ್ನೇ ವ್ಯಕ್ತಪಡಿಸುತ್ತಾನೆ. ಇದರಿಂದ ದಿಕ್ಕು ಕಾಣದವಳಾಗಿ ಮಹಾದೇವಿಯು, ಕಾಯವೆರಸಿ ಕೈಲಾಸಕ್ಕೆ ಹೋಹನೆಂಬರು

ಇದು ಕ್ರಮವಲ್ಲ

ಘನಲಿಂಗ ಕರಸ್ಥಲದೊಳಗಿಪ್ಪ ಅನುವನರಿಯದೆ
ಇಲ್ಲಿ ಕರ್ಮ, ಅಲ್ಲಿ ನಿಃಕರ್ಮವೆ?
ಹೇಮದ ಮಾಟ ಒಳಹೊರಗಿನಂತೆ
ಮರ್ತ್ಯ ಕೈಲಾಸವೆಂಬ ಕಟ್ಟಳೆಯಿಲ್ಲ
ಆತ್ಮ ನಿಶ್ಚಯವಾದಲ್ಲಿಯೆ ಕೈವಲ್ಯ
ಮತ್ತತ್ವವಾದಲ್ಲಿಯೆ ಮರ್ತ್ಯದೊಳಗು
ಈ ಗುಣ ಸದಮಲಭಕ್ತನಯುಕ್ತಿ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಿಕ್ಕದ ಗೊತ್ತಾ

ಎನ್ನುತ್ತಾಳೆ. ಎಂದರೆ, ಕೈಯಲ್ಲಿರುವ ಘನಲಿಂಗದಲ್ಲಿಯೇ ಎಲ್ಲಾ ದೊರೆವಾಗ ಮರ್ತ್ಯ-ಕೈಲಾಸವೆಂದು ಹಲುಬಿ ಇಲ್ಲಿ ಕಾಯಕ ಇರುತ್ತದೆ. ಕೈಲಾಸದಲ್ಲಿ ಎಲ್ಲಿ

ಎಂಬ ಅರಿವು ಅಜ್ಞಾನ. ನಾವಿರುವ ತಾವಿನಲ್ಲೇ ಎರಡೂ ಇವೆ. ಸತ್ಯದ ನುಡಿವುದೇ ಸ್ವರ್ಗ (ಕೈಲಾಸ) ಮಿಥ್ಯವ ನುಡಿವುದೇ ನರಕ (ಮರ್ತ್ಯ) ಹೇಗೆ ಚಿನ್ನದ ವಸ್ತು ಮಾಡಿದಾಗ, ನೋಟಕ್ಕೆ ಹೊರಗೆ ಒಂದು ರೂಪ ಕಂಡರೂ, ಒಳಗಿರುವುದೂ ಹೊರಗಿರುವುದೂ ಒಂದೇ ಚಿನ್ನ. ಹಾಗೆ ಮರ್ತ್ಯ ಕೈಲಾಸವೆಂಬುದು ಬೇರೆ ಬೇರಲ್ಲ. ಆತ್ಮ ನಿಶ್ಚಯವಾದವರು ಕೈಲಾಸ ಹಾಗಿಲ್ಲದಿದ್ದರೆ ಮರ್ತ್ಯ-ಅದನ್ನೂ ಬೇರೆಲ್ಲಿ ಕಾಣಬೇಕಿಲ್ಲ. ನಮ್ಮ ನಮ್ಮ ಬದುಕಿನಲ್ಲೇ ಅದನ್ನು ಕಾಣಬಹುದು. ಎಂಬ ವೀರಶೈವ ತತ್ತ್ವವನ್ನು ವಿವರಿಸುತ್ತಾಳೆ. ಇನ್ನು ಮುಂದೆ ಹೋಗಿ,

ಕಾಯಭ್ರಮೆಯಿಂದ ಕೈಲಾಸ,
ಜೀವಭ್ರಮೆಯಿಂದ ಮಹದ ಕೂಟವೆಂಬುದು
ಕಾಯದ ಜೀವದ ಭೇದವನರಿತಲ್ಲಿ
ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ
ಇದು ನಿಶ್ಚಯದ ಕೂಟ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ

ಎಂದು ಮತ್ತಷ್ಟು ವಿವರವಾಗಿ ವಿವರಿಸುತ್ತಾಳೆ. ಕಾಯದ ಭ್ರಮೆ, ಮೋಹವನ್ನಿಟ್ಟುಕೊಂಡು, ಈ ಕಾಯ ಆತ್ಮದ ಕರ್ತವ್ಯಗಳನ್ನು ನಿರ್ವಹಿಸಲೊಂದು ಸಾಧನವೆಂದು ಮರೆತು, ಈ ಕಾಯದ ಕರಣಗಳು ಸಮರ್ಪಕ ರೀತಿಯಲ್ಲಿದ್ದಾಗ ಜೀವವಿದ್ದು ಕಾಯಕೆಲಸ ಮಾಡಲು ಸಾಧ್ಯವಾಗುತ್ತದೆ ಎಂಬ ಅರಿವನ್ನು ಮರೆತು ದೇಹ ಹಾಗೂ ಜೀವಕ್ಕೇ ಪ್ರಾಶಸ್ತ್ಯ ಕೊಟ್ಟಾಗ ಕೈಲಾಸಕ್ಕೆ ಹೋಗಬೇಕು ಮಹದೊಳಗೆ ಐಕ್ಯವಾಗಬೇಕು ಎಂಬ ಉಭಯಭಾವ ಇರುತ್ತದೆ. ಆದರೆ ಕಾಯ-ಜೀವದ ಭೇದವನರಿತಾಗ ಇವೆಲ್ಲಾ ಭಾವನೆಗಳು ಇಂಗಿಹೋಗಿ ಕೈಲಾಸಕ್ಕೆ ಹೋಗಬೇಕು. ಲಿಂಗದಲ್ಲಿ ಬೆರೆಯಬೇಕು ಎಂಬ ಹಲುಬಾಟ ಇಲ್ಲವಾಗುತ್ತದೆ. ಲಿಂಗಾಂಗ ಸಾಮರಸ್ಯಭಾವ ಪುಟಿದೇಳುತ್ತದೆ ಎಂದು ಹೇಳುತ್ತಾಳೆ.

ಕಾಯ-ಆತ್ಮ, ಸತಿ-ಪತಿ ಭೇದ, ಅಂಗ-ನಿರಂಗಳಗಳ ಬಗೆಗೆ,
ಕಾಯಉಳ್ಳನ್ನಕ್ಕಾ ಲಿಂಗಪೂಜೆ, ಆತ್ಮಉಳ್ಳನ್ನಕ್ಕ ಅರಿವಿನ ಭೇದ
ಪುರುಷ ನೀ, ಸತಿ ನಾನೆಂಬಲ್ಲಿ
ಉಭಯದ ಬೀಜ ನಾ-ನೀನೆಂಬನ್ನಕ್ಕ
ಅಂಗದ ಲಿಂಗದಲ್ಲಿಯೇ ನಿರಂಗವಾಗಬೇಕು
ಎನ್ನಯ್ಯಪ್ರಿಯ ನಿಃಕಳಂಕ ಮಲ್ಲಿಕಾರ್ಜುನಾ ಎಂಬ

ವಚನದ ಮೂಲಕ, ದೇಹವಿರುವವರೆಗೆ ಲಿಂಗಪೂಜೆ, ಆತ್ಮದ

ಪರಿಜ್ಞಾನವಿರುವವರೆಗೆ ಒಳಿತು ಕೆಡಕುಗಳ ಅರಿವು, ನಾನು–ನೀನು ಎಂಬ ದ್ವೈತ ಭಾವನೆ ಇರುವವರೆಗೆ ನಾನು ಸತಿ–ನೀನು ಪತಿ ಎಂಬ ಭಾವ, ಆದರೆ ಅದನ್ನೆಲ್ಲಾ ದಾಟಿ ಅಂಗದಲ್ಲಿರುವ ಲಿಂಗದಲ್ಲಿಯೇ ನಿರಂಗವಾಗಿ ದೇಹ, ಆತ್ಮ, ನಾನು–ನೀನು ಎಂಬ ಭಾವನೆಗಳೆಲ್ಲಾ ಅಗ್ನಿ ಮುಟ್ಟಿದ ಕರ್ಪೂರದಂತೆ, ಬರಿದಾಗ ಬೇಕು ಎಂಬ ಅರಿವನ್ನು ಮಹಾದೇವಿ ಅರುಹಿದಾಗ, ಮಾರಯ್ಯನಿಗೆ ತಾತ್ಕಾಲಿಕವಾಗಿ ಕವಿದ ಮಾಯೆ ಸರಿದು,

ಕಾಯಸಮಾಧಿಯನೊಲ್ಲೆ, ನೆನಹು ಸಮಾಧಿಯನೊಲ್ಲೆ
ಕೈಲಾಸವೆಂಬ ಭವಸಾಗರವನೊಲ್ಲೆ
ಎನ್ನ ಅಲ್ಲಿಗೆ ಇಲ್ಲಿಗೆ ಎಂದೆಳೆಯದೆ ಎನ್ನ ನಿನ್ನಲ್ಲಿ ಕೂಟಸ್ಥನ
ಮಾಡು ನಿಃಕಳಂಕ ಮಲ್ಲಿಕಾರ್ಜುನ ಎನ್ನುತ್ತಾ, ಪತ್ನಿ ಮಹಾದೇವಿಯನ್ನು,
ಈಗ ನನಗೆ ಒಂದು ಗೊತ್ತು ತೋರು ಎಂದು ಕೇಳುತ್ತಾನೆ.

ಆಗ ಮಹಾದೇವಿಯು, ತಾನು ಪತಿಗೇ ಜ್ಞಾನಮಾರ್ಗ ತೋರಿಸಬಲ್ಲ ಜ್ಞಾನಿ ಎಂದು ಬೀಗದೆ, ಪತಿ ಪರಾಯಣೆಯಾದ ಧರ್ಮಪತ್ನಿಯಾಗಿ ನಿಮ್ಮ ಸಾನ್ನಿಧ್ಯ ಮಾರ್ಗದರ್ಶನದಿಂದಲೇ ನಾನು ತತ್ತ್ವಗಳನ್ನೆಲ್ಲಾ ಅರಿಯುವಂತಾದೆ. ನನ್ನ ಸದಾಚಾರ ಸದ್ಭಕ್ತಿಗೆ ನೀವೇ ಕಾರಣ. ನಾನು ನಿಮಗೆ ಮಾರ್ಗದರ್ಶನ ಮಾಡುವುದು ಸಾಧ್ಯವೆ? ಎಲ್ಲ ಅರಿತ ಜ್ಞಾನಿಗಳು ನೀವಿರುವಾಗ, ನಾನು ಬೋಧಿಸುವುದೇ ಎನ್ನುತ್ತಾ,

ಕಾಲಿದ್ದಂತೆ ತಲೆ ನಡೆದುದುಂಟೆ ಅಯ್ಯಾ?
ಕಣ್ಣಿದ್ದಂತೆ ಕರ್ಣ ನೋಡಿದುದುಂಟೆ ಅಯ್ಯಾ?
ಬಾಯಿದ್ದಂತೆ ನಾಸಿಕ ಉಂಡುದುಂಟೆ ಅಯ್ಯಾ?
ನಿಮ್ಮ ಸೇವೆಯ ತೊತ್ತಿನ ಭಾವವ ಕೇಳಲೇತಕ್ಕೆ?
ಪಟದೊಳಗಣ ಬಾಲಗಸಕ್ಕೆ ಪ್ರತಿಸೂತ್ರ ನೇಣುಂಟೆ?
ನಿಮ್ಮಲ್ಲಿಯೆ ಎನ್ನಭಾವ ಲೇಪ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿಯೆ

ಎಂದು ಮಾರಯ್ಯನ ಮುಂದೆ ತಾನೆಷ್ಟರವಳು. ತಾನು ಮಾರಯ್ಯನ ಸೇವೆಯ ತೊತ್ತು. ಅವನ ಭಕ್ತಿ ಸೂತ್ರದಿಂದ ಅವಳ ಸ್ತ್ರೀಜಾತಿ ತನ್ನ ಪತಿಯ ಶ್ರೀಪಾದದಲ್ಲಿ ಅಡಗಿತ್ತು ಎಂದು ವಿನೀತ ಭಾವದಿಂದ ನುಡಿಯುತ್ತಾಳೆ. ಮಾರಯ್ಯನೂ ಪತ್ನಿಯ ಶರಣ ಸಾಧನೆಯನ್ನೂ ಗುರುತಿಸಿ, 'ನಿನ್ನ ಭಕ್ತಿಯ ಬೆಳೆಯೇ ಎನಗೆ ಸತ್ಯದ ಹಾದಿ' ಎಂದು ಅವಳ ಔನ್ನತ್ಯದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾನೆ. ನೀನು

ನಿಜವಾದ ಪತಿಪರಾಯಣೆಯಾದ ಧರ್ಮಪತ್ನಿ ನನ್ನ ಸದಾಚಾರ ಸದ್ಭಕ್ತಿಗೆ ನೀನು ಒಳಗಾಗಿರುವ ಕಾರಣ. ನಿನಗೂ ನನಗೂ ಬೇಧವಿಲ್ಲ. ನೀನು ಕಡಿಮೆ, ನಿನಗೆ ಸ್ವತಂತ್ರವಿಲ್ಲವೆಂದು ತಿಳಿಯಬಾರದು. ನಿನ್ನ ಭಕ್ತಿಯ ಬೆಳೆಯೆ ಎನ್ನ ಸತ್ಯದ ಹಾದಿ; ಎನ್ನ ಭಕ್ತಿಗೆ ನೀನೇ ಶಕ್ತಿ ಎನ್ನುತ್ತಾನೆ.

ಹೀಗೆ ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂಬ ಶರಣ ಸಿದ್ಧಾಂತಕ್ಕೆ ಉದಾಹರಣೆಯಾಗಿ ಬದುಕಿದರು. ಇವರ ಜೀವನ, ಶರಣರು ಸ್ತ್ರೀಗೆ ಎಷ್ಟು ಮಹತ್ವದ ಸ್ಥಾನ ನೀಡಿದ್ದರು ಎಂಬುದನ್ನು ಎತ್ತಿ ಹಿಡಿಯುವ ನಿದರ್ಶನವಾಗಿದೆ. ಪುರುಷ ಪ್ರಧಾನ ಸಮಾಜದ ನಡುವೆ ಸ್ತ್ರೀ ಸಮಾನತೆಯನ್ನು ಬಾಳಿ ತೋರಿಸಿದ ಮಹೋನ್ನತ ಮಾದರಿಯಾಗಿದೆ ಇವರ ಜೀವನ, ಇಬ್ಬರಿಗೂ ಒಂದೇ ರೀತಿಯ ಶಿವಭಕ್ತಿ ಇಬ್ಬರೂ ಅಪರೂಪದ ಶರಣ ಸಾಹಿತಿಗಳು. ಅನುಭವ ಮಂಟಪದ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದ ವಿಚಾರವಂತರು. ಇಬ್ಬರೂ ವಚನಗಳನ್ನು ರಚಿಸಿದ್ದಾರೆ. ಮಹಾದೇವಿಯಮ್ಮನು ಬರೆದ ಅರುವತ್ತೊಂಬತ್ತು ವಚನಗಳು ದೊರೆತಿವೆ. 'ಎನ್ನಯ್ಯ ಪ್ರಿಯ ನಿಃಕಳಂಕ ಮಲ್ಲಿಕಾರ್ಜುನಾ' ಎಂಬುದು ಈಕೆಯ ವಚನಾಂಕಿತ. ಈಕೆಯ ವಚನಗಳಲ್ಲಿ ಹೆಚ್ಚಾಗಿ ಕ್ರಿಯಾ ಜ್ಞಾನಗಳ ಸಂಬಂಧ, ಇಷ್ಟಲಿಂಗ, ಪ್ರಾಣಲಿಂಗಗಳಲ್ಲಿ ಇರುವ ಷಟ್‌ಸ್ಥಲಗಳ ಸ್ವರೂಪಗಳು ಪ್ರಸ್ತಾಪಗೊಂಡಿವೆ. ಕೆಲವು ವಚನಗಳಲ್ಲಿ, ಕೈಲಾಸವನ್ನು ಹೊಂದಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದ ಮಾರಯ್ಯನಿಗೆ ನಾನಾರೀತಿಯಿಂದ, ಅಂತಹದು ಸರಿಯಲ್ಲ ಎಂಬುದನ್ನು ಏಕೆ ಸರಿಯಲ್ಲವೆಂಬುದನ್ನು ತಿಳಿಹೇಳಿದ ವಿಷಯಗಳು ವ್ಯಕ್ತವಾಗಿವೆ. ಹೀಗೆ ಎಲ್ಲಂದದಲ್ಲೂ ಮಾರಯ್ಯನಿಗೆ ಯೋಗ್ಯ ಜೀವನ ಸಂಗಾತಿಯಾಗಿ ಬಾಳಿದ ಮಹಾದೇವಿ ತನ್ನ ಪತಿಯೊಡನೆ ಶರಣ ತತ್ತ್ವವೇ ಜೀವನದ ಉಸಿರಾಗಿ ಬಾಳಿದಳು. ಕೊನೆಯಲ್ಲಿ ಕಲ್ಯಾಣ ಸಮೀಪವಿರುವ ಮೋಳಿಗೆ ಕೇರಿಯಲ್ಲಿದ್ದು (ಬಹುಶಃ ಅವರಿದ್ದ ಆ ಕೇರಿಯನ್ನು ಜನ ಹಾಗೆ ಕರೆದಿರಬೇಕು) ಅಲ್ಲಿಯೇ ಕೊನೆಯಲ್ಲಿ ಐಕ್ಯರಾದರು.

■

## ೬. ಕಾಯಕದ ಮಹಾಶರಣೆ ಆಯ್ದಕ್ಕಿ ಲಕ್ಕಮ್ಮ

ಬಸವ ಪ್ರಧಾನರಾದ ಶಿವಶರಣರು ವರ್ಗ–ವರ್ಣ–ರಹಿತ, ಸರ್ವ ಸಮಾನತೆಯ ಸಮಾಜವನ್ನು ರೂಪಿಸಿದರು. ಹೆಣ್ಣು–ಗಂಡೆನ್ನದೆ ಮಾನವರೆಲ್ಲಾ ಸಮಾನರು. ಅವರನ್ನು ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆಂದು ವಿಂಗಡಿಸಿ, ಮೇಲು–ಕೀಳು ಭಾವನೆಯಿಂದ ನೋಡುವುದು ಸರಿಯಲ್ಲ. ಸಮಾಜದ ಜನರು ಜೀವನ ನಿರ್ವಹಣೆಗಾಗಿ ಒಬ್ಬೊಬ್ಬರು ಒಂದೊಂದು ವೃತ್ತಿಯನ್ನು ಅನುಸರಿಸುತ್ತಾರೆ. ಜೀವನಕ್ಕೆ ಆ ಎಲ್ಲಾ ವೃತ್ತಿಗಳೂ ಅಗತ್ಯ ಮತ್ತು ಮಹತ್ವ. ಆದ್ದರಿಂದ ಯಾವ ವೃತ್ತಿಯೂ ಮೇಲಲ್ಲ; ಯಾವ ವೃತ್ತಿಯೂ ಕೀಳಲ್ಲ. ಪ್ರತಿಯೊಬ್ಬರೂ ತಮಗೆ ಸಾಧ್ಯವಾದ ಒಂದೊಂದು ವೃತ್ತಿಯನ್ನು ಕೈಗೊಂಡು ದುಡಿದುಣಬೇಕು; ದುಡಿಯದೇ ಯಾರು ಪರಾವಲಂಬಿಗಳಾಗಿ ಬದುಕಬಾರದು ಎಂಬುದು ಅವರ ನಿಲುವು. ದುಡಿಮೆಗೆ ಶರಣರು 'ಕಾಯಕ'ವೆಂಬ ಪವಿತ್ರ ಶಬ್ದವನ್ನು ನೀಡಿದರು ಕಾಯಕವೆಂದರೆ ಜೀವನೋಪಾಯಕ್ಕಾಗಿ, ಸತ್ಯ, ಶುದ್ಧ ಚಿತ್ತದಿಂದ ಮಾಡುವ ದೈಹಿಕ ದುಡಿಮೆ. ಅದು ದುಡಿದವನ ಹೊಟ್ಟೆ ತುಂಬುವ ಸಂಕುಚಿತ ಕೆಲಸವಲ್ಲ. ಆ ಕೆಲಸ ಸತ್ಯಶುದ್ಧವಾಗಿದ್ದು ವ್ಯಕ್ತಿಯ ಹೃದಯವನ್ನು ಅರಳಿಸಿ, ಆತ್ಮವಿಕಾಸ ಮಾಡುವುದಲ್ಲದೆ, ಸಮಾಜದ ಕಲ್ಯಾಣಕ್ಕೂ ಪೂರಕವಾಗಿರುತ್ತದೆ. ಏಕೆಂದರೆ 'ಕಾಯಕ'ದ ಪ್ರಕಾರ ವ್ಯಕ್ತಿಯು ತನಗಾಗಿ, ಸಮಾಜಕ್ಕಾಗಿ 'ಕಾಯ'ವನ್ನು ಸವೆಸಬೇಕು. ಅಂದಂದಿನ ಕಾಯಕವನ್ನು ಅಂದಂದಿಗೇ ಮಾಡಿ, ಅಂದಂದಿನ ಫಲವನ್ನು ಗುರು–ಲಿಂಗ–ಜಂಗಮವೆಂಬ ಸಮಾಜಕ್ಕೆ ಅರ್ಪಿಸಿ, ಉಳಿದ ಭಾಗವನ್ನು ತಾನು ಉಪಯೋಗಿಸಿಕೊಳ್ಳಬೇಕು. ಇಂದಿಂಗೆ, ನಾಳಿಂಗೆ ಎಂದು ಚಿಂತಿಸಿ, ಸಂಗ್ರಹಮಾಡಿ ಸಾಮಾಜಿಕ ಸಮಸ್ಯೆಗೆ ಕಾರಣವಾಗಬಾರದೆಂಬುದು ಶರಣ ತತ್ತ್ವ. ಇತರರ ಶೋಷಣೆ ಶರಣ ತತ್ತ್ವಕ್ಕೆ ವಿರೋಧ, ಇತರರನ್ನು ಹರಿದು ತಿನ್ನದೆ, ಇತರರೊಡನೆ ಹಂಚಿತಿನ್ನಬೇಕು. ಎಲ್ಲರೂ ದುಡಿದುಣ್ಣುವ, ಎಲ್ಲರಿಗಾಗಿ ದುಡಿಯುವ ಸಾಮಾಜಿಕ ಹಿತಸಾಧನೆ ಶರಣರ ಗುರಿಯಾಗಿತ್ತು. ಅವರು ಹೇಳಿದಂತೆ ಮಾಡಿ ತೋರಿಸಿದರು ನುಡಿದಂತೆ ನಡೆದರು.

ಮೋಳಿಗೆ ಮಾರಯ್ಯ (ಮಾಂಡವ್ಯಪುರದ ಅರಸು–ಮಹಾದೇವ ಭೂಪಾಲ)

ಸೌದೆ ಒಡೆದು ಮಾರುವ ಕಾಯಕವನ್ನು, ಆಯ್ದಕ್ಕಿ ಮಾರಯ್ಯ ವ್ಯರ್ಥವಾಗಿ ಬಿದ್ದಿದ್ದ ಅಕ್ಕಿಯನ್ನು ಆಯ್ದು ತರುವ ಕಾಯಕವನ್ನು, ದನಗಾಹಿ ರಾಮಣ್ಣ ದನಕಾಯುವ ಕಾಯಕವನ್ನು, ಮಾಚಿದೇವ ಶರಣರ ಬಟ್ಟೆಗಳನ್ನು ಮಡಿಮಾಡುವ ಕಾಯಕವನ್ನು ನುಲಿಯ ಚಂದಯ್ಯ ಹಗ್ಗ ಹೊಸೆಯುವ ಕಾಯಕವನ್ನು, ಮಾದಾರ ಚನ್ನಯ್ಯ ಪಾದರಕ್ಷೆಗಳನ್ನು ಮಾಡುವ ಕಾಯಕವನ್ನು, ಕುಂಬಾರ ಗುಂಡಯ್ಯ ಮಡಿಕೆ ಮಾಡುವ ಕಾಯಕವನ್ನು, ದೇವರ ದಾಸಿಮಯ್ಯ ಬಟ್ಟೆ ನೇಯುವ ಕಾಯಕವನ್ನು ಮೇದಾರ ಕೇತಯ್ಯ, ಬುಟ್ಟಿ, ಮೊರ ಮುಂತಾದವುಗಳನ್ನು ಬಿದಿರಿನಿಂದ ಹೆಣೆಯುವ ಕಾಯಕವನ್ನು ಮಾಡುತ್ತಿದ್ದರು. ಹೀಗೆ ಶರಣರು ಒಬ್ಬೊಬ್ಬರು ಒಂದೊಂದು ಕಾಯಕ ಹಿಡಿದು, ಕಾಯಕ ತತ್ತ್ವ ಮೀರದೆ ಬದುಕುತ್ತಾ ಇದ್ದ ಉದಾಹರಣೆಗಳು ಲೆಕ್ಕವಿಲ್ಲದಷ್ಟು. ಶರಣರು ಕಾಯಕದಿಂದ ಗಳಿಸಿಕೊಂಡು ಬಂದುದನ್ನು ಅವರ ಪತ್ನಿಯರಾದ ಶರಣೆಯರು ಅದರಿಂದ 'ಪ್ರಸಾದ' ತಯಾರಿಸಿ, ಗುರು-ಲಿಂಗ, ಜಂಗಮಕ್ಕೆ ಅರ್ಪಿಸಿ ಪತಿಯೊಡನೆ ಸೇವಿಸಿ, ಕಾಯಕ ತತ್ತ್ವದ ಪೂರೈಕೆಗೆ ಸಹಕರಿಸಿ ಪೂರಕವಾಗುತ್ತಿದ್ದರು. ಇಂತಹವರಲ್ಲಿ ಗಂಗಾಂಬಿಕೆ-ನೀಲಾಂಬಿಕೆಯರು ಹಡಪದ ಲಿಂಗಮ್ಮ, ಮೋಳಿಗೆ ಮಹಾದೇವಿ, ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ನಾಗಿದೇವಯ್ಯಗಳ ಪುಣ್ಯಸ್ತ್ರೀ ಮಸಣವ್ವೆ, ಕೇತಲೆ, ರೇಚವ್ವೆ ಲಕ್ಷ್ಮಮ್ಮ, ಕಾಯಕದ ತತ್ತ್ವವನ್ನು ಚಾಚೂ ತಪ್ಪದೆ ಅನುಸರಿಸಿದವರು. ಕಾಯಕದ ಕಟ್ಟು ನಿಟ್ಟಾದ ನಿಯಮಗಳಿಂದ ಒಮ್ಮೊಮ್ಮೆ ಹಳಿತಪ್ಪಿದ ಮಾರಯ್ಯನನ್ನು ಕೈಹಿಡಿದು ಹಳಿಯಮೇಲೆ ನಿಲ್ಲುವಂತೆ ಮಾಡಿ ಮುನ್ನಡೆಸಿದ ಮಹಾ ಸಾಧ್ವಿ ಆಯ್ದಕ್ಕಿ ಲಕ್ಕಮ್ಮ.

**ಕಾಯಕಜೀವಿ-ದಂಪತಿಗಳು**

ಆಯ್ದಕ್ಕಿ ಲಕ್ಕಮ್ಮ ಅಪರೂಪ ಜೀವನ ನಡೆಸಿದ ಮಹಾಶರಣೆ-ಆಯ್ದಕ್ಕಿ ಮಾರಯ್ಯನೊಂದಿಗೆ ಶ್ರೇಷ್ಠ ದಾಂಪತ್ಯವನ್ನು ಬದುಕಿದ ಧರ್ಮಪತ್ನಿ. ಈ ದಂಪತಿಗಳ ಊರು ರಾಯಚೂರು ಜಿಲ್ಲೆಯ ಅಮರೇಶ್ವರ ಗ್ರಾಮ. ಬಸವಣ್ಣನವರ ಕೀರ್ತಿ, ಧಾರ್ಮಿಕ, ಸಾಮಾಜಿಕ ಕ್ರಾಂತಿಯ ವಾರ್ತೆಗಳನ್ನು ಕೇಳಿ, ಆಕರ್ಷಿತರಾಗಿ ಕಲ್ಯಾಣದಲ್ಲಿ ವ್ಯರ್ಥವಾಗಿ ಬಿದ್ದ ಅಕ್ಕಿಯನ್ನು ಆರಿಸುವ ಕಾರ್ಯ ಕೈಕೊಂಡು ಜೀವಿಸುತ್ತಿದ್ದರು.

ತನ್ನ ಪತಿಯಾದ ಮಾರಯ್ಯನು ಒಮ್ಮೆ ಆಸೆಗೆ ಒಳಗಾಗಿ ನಿಯಮಕ್ಕೆ ವಿರುದ್ಧವಾಗಿ ನಡೆದಾಗ ಲಕ್ಕಮ್ಮ ಅವನಿಗೆ ಸರಿಮಾರ್ಗ ತೋರಿಸಿ, ತಪ್ಪು ಮಾಡದಂತೆ ತಡೆದ ಘಟನೆ ಬಹು ಮಾರ್ಮಿಕವಾಗಿದೆ.

ಆಯ್ದಕ್ಕಿ ಮಾರಯ್ಯ ಪ್ರತಿದಿನವೂ ಒಂದೊಂದು ಓಣಿಗೆ ಹೋಗಿ ಅಲ್ಲಿ ವ್ಯರ್ಥವಾಗಿ ಬಿದ್ದಿದ್ದ ಅಕ್ಕಿಯನ್ನು ಆರಿಸಿ ತಂದು ಪತ್ನಿ ಲಕ್ಕಮ್ಮಗೆ ಕೊಡುತ್ತಿದ್ದನು.

ಆಕೆ ಅದರಿಂದ ಪ್ರಸಾದವನ್ನು ತಯಾರಿಸಿ, ಅಮರೇಶ್ವರ ಲಿಂಗಕ್ಕೆ ಎಡೆಮಾಡಿ, ನಂತರ ಪತಿ-ಪತ್ನಿಯರಿಬ್ಬರೂ ಪ್ರಸಾದ ಸೇವಿಸುತ್ತಿದ್ದರು. ಅಕ್ಕಿ ಆರಿಸಲು ಯಾವಾಗ ಬೇಕೋ ಆಗ ಹೋಗಬಹುದೆಂಬುದಿಲ್ಲ. ಏಕೆಂದರೆ 'ಕಾಯಕ' ಎಂಬುದು ಕರ್ತವ್ಯ. ಹೀಗಾಗಿ ಅದು ಮಹತ್ವದ್ದು. ಕಾಯಕವನ್ನು ಸಮಯಕ್ಕೆ ಸರಿಯಾಗಿ ಸತ್ಯ, ಶುದ್ಧ ಮನಸ್ಸಿನಿಂದ ಮಾಡಬೇಕು. ಈ ಕರ್ತವ್ಯಕ್ಕೆ ಮೊದಲ ಪ್ರಾಶಸ್ತ್ಯ ಶರಣ ತತ್ತ್ವದ ಪ್ರಕಾರ ಕಾಯಕವನ್ನು ಕಾಲಕ್ಕೆ ಸರಿಯಾಗಿ ಮಾಡಬೇಕು. ಆ ಕಾಯಕ ಮಾಡುವಾಗ ಮತ್ತಾವುದೂ ಮಹತ್ವವಲ್ಲ.

ಕಾಯಕದಲ್ಲಿ ನಿರುತನಾದೊಡೆ ಗುರುದರ್ಶನವಾದರೂ ಮರೆಯಬೇಕು
ಜಂಗಮ ಮುಂದಿದ್ದರೂ ಹಂಗುಹರಿಯಬೇಕು
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು

ಎಂದು ಮಾರಯ್ಯನೇ ಹೇಳಿದ್ದಾನೆ. ಅಂತಹ ಮಾರಯ್ಯ ಒಂದು ದಿನ ಅನುಭವ ಮಂಟಪದಲ್ಲಿ ಕಾಯಕದ ಬಗ್ಗೆ ಚರ್ಚಿಸುತ್ತಾ ಇರುವಾಗ ಹೊತ್ತು ಸರಿದುದೇ ಗೊತ್ತಾಗಲಿಲ್ಲ. ಕಾಯಕದ ವೇಳೆಯಾಯಿತು ಮನೆಯಲ್ಲಿ ಕಾಯುತ್ತಿದ್ದ ಲಕ್ಕಮ್ಮನಿಗೆ ಚಡಪಡಿಕೆ, ಕಾಯಕದ ವೇಳೆಯಾದರೂ ಬರಲಿಲ್ಲವೇಕೆ? ಹೊತ್ತುಮಾಡಿ ಕಾಯಕಕ್ಕೆ ಹೋಗುವುದು ಅಪರಾಧವೆಂದು ಅವಳ ಮನಸ್ಸು ತಳಮಳಗೊಳ್ಳುತ್ತಿತ್ತು. ಆಕೆಗೆ ಮತ್ತೆ ಕಾಯುವುದಾಗಲಿಲ್ಲ. ಅನುಭವ ಮಂಟಪದ ಕಡೆಗೆ ಲಗುಬಗೆಯಿಂದ ಹೋದಳು, ಚರ್ಚೆಯಲ್ಲಿ ನಿರತನಾಗಿದ್ದ ಮಾರಯ್ಯನನ್ನು ಕಂಡು,

ಕಾಯಕ ನಿಂದಿತ್ತು ಹೋಗಯ್ಯಾ, ಎನ್ನಾಳ್ದನೆ
ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು
ನಿಶ್ಚೈಸಿ ಮಾಡಬೇಕು ಮಾರಯ್ಯ ಪ್ರಿಯ
ಅಮರೇಶ್ವರ ಲಿಂಗಕ್ಕೆ, ಬೇಗ ಹೋಗು ಮಾರಯ್ಯ
ಎಂದಳು ಅಲ್ಲದೆ,
ಅಂಗವರತ ಅರಿವೆಯ ಅಂಗದಲ್ಲಿ
ಬಯಕೆಯರತ ಕೈಯ್ಯಲ್ಲಿ ಬೇಗ ಹೋಗಿ ಕೊಂಡುಬಾ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಮಾರಯ್ಯಾ,

ಎಂದು, ಆಸೆಯನ್ನು ಮರೆತು, ಅರಿವಿನಿಂದ ಅವಶ್ಯವಾದಷ್ಟನ್ನು ಮಾತ್ರ ತಾ ಎಂಬ ಎಚ್ಚರಿಕೆಯನ್ನೂ ಇತ್ತು ಕಳುಹಿದಳು. ಮಾರಯ್ಯನೂ ಶುದ್ಧ ಮನಸ್ಸಿನಿಂದ, ಎಂದಿನ ನಿಯಮದಂತೆ ಹೋಗುತ್ತಾನೆ. ಆ ದಿನ ಬಸವಣ್ಣನ ಅಂಗಳಕ್ಕೆ ಹೋಗುವ ಪಾಳಿ ಇತ್ತು. ಮಾರಯ್ಯನ ಬಡತನ, ಮತ್ತು ಆತನ ಶ್ರಮಭರಿತ ಕಾಯಕ ಬಗ್ಗೆ

ತಿಳಿದಿದ್ದ ಬಸವಣ್ಣ, ಆತನಿಗೆ ನೆರವಾಗಲೆಂದು ಆದಿನ ಮಾರಯ್ಯ ಅಕ್ಕಿ ಆರಿಸಲು ಬರುತ್ತಾನೆಂದು ತಿಳಿದು, ಬೇಕೆಂದೇ ಬಹಳಷ್ಟು ಅಕ್ಕಿಯನ್ನು ಅಂಗಳದಲ್ಲಿ ಚಲ್ಲಿದ್ದನು ಮಾರಯ್ಯನಿಗೆ ಬಹಳ ಅಕ್ಕಿಯನ್ನು ನೋಡಿ ಸಂತೋಷವಾಯಿತು. ಅವನಿಗೆ ಒಂದು ದಿನ ಜಂಗಮರನ್ನು ಪ್ರಸಾದಕ್ಕೆ ತಮ್ಮ ಮನೆಗೆ ಬಿನ್ನವಿಸಬೇಕೆಂಬ ಬಹಳ ದಿನಗಳಿಂದ ಇತ್ತು. ಇದುವರೆಗೂ ಸಾಧ್ಯವಾಗಿರಲಿಲ್ಲ; ದಿನವೂ ದೊರೆಯುತ್ತಿದ್ದ ಅಕ್ಕಿ ಅವರಿಗೇ ಸಾಕಾಗುತ್ತಿರಲಿಲ್ಲ. ಇಂದು ಸಾಕಷ್ಟು ಬಿದ್ದಿದೆ. ತೆಗೆದುಕೊಂಡು ಹೋದರೆ, ಜಂಗಮ ಪ್ರಸಾದ ಮಾಡಿಸಬಹುದು' ಎಂದು ಎಲ್ಲವನ್ನು ಆರಿಸಿ ಗಂಟು ಕಟ್ಟಿಕೊಂಡು ಮನೆಗೆ ಬಂದನು. ಆ ಗಂಟನ್ನು ನೋಡಿಯೇ ಲಕ್ಕಮ್ಮನಿಗೆ ಇದೇನೋ ಪ್ರಮಾದವಾಗಿದೆ ಎನ್ನಿಸಿತು.

ಇದೇನು? ಇಷ್ಟೊಂದು ಅಕ್ಕಿ ಎಲ್ಲಿ ಸಿಕ್ಕಿತು? ಏಕೆ ತಂದಿರಿ? ಎಂದು ಪ್ರಶ್ನಿಸುತ್ತಾಳೆ. ಮಾರಯ್ಯನು ಬಸವಣ್ಣನವರ ಅಂಗಳದಲ್ಲಿ ಬಹಳ ಅಕ್ಕಿ ಚಲ್ಲಿದ್ದುದನ್ನು, ತಾನು ಹೆಚ್ಚಾಗಿ ಆರಿಸಿಕೊಂಡು ಬರಲು ಕಾರಣವನ್ನೂ ತಿಳಿಸಿದನು. ಗಂಡನ ಈ ದುಡುಕಿನ ನಡವಳಿಕೆ ಅವಳನ್ನು ಮಿಡುಕುವಂತೆ ಮಾಡಿತು. ಹೆಚ್ಚು ಸಿಕ್ಕಿದರೆ ಹೆಚ್ಚು ತರುವ ಆಸೆಗೆ ಗಂಡ ಬಿದ್ದುದನ್ನು ಕಂಡು ಅವಳಿಗೆ ನೋವಾಯ್ತು; ದುಃಖವಾಯಿತು. ಸಿಟ್ಟುಬರುತ್ತದೆ. ಆಗ,

ಸಂದಣಿಗೊಂಡು ಮನ ಹರುಷದಿಂದ ಬಸವಣ್ಣನ ಅಂಗಳಕ್ಕೆ ಹೋಗಿ
ತಿಪ್ಪೆಯ ತಪ್ಪಲಲ್ಲಿ ಬಿದ್ದಿದ್ದ ತಂಡುಲವ ಕಟ್ಟಿಕೊಂಡು,
ಎಯಿದಾಗಿ ತರಲು, ಎಯಿದಾಗಿ ಬಂದಿತ್ತಲ್ಲಾ
ನಮಗೆ ಎಂದಿನಂದವೆ ಸಾಕು ಮತ್ತೆಕೊಂಡು ಹೋಗಿ ಅಲ್ಲಿಯೇ
ಸುರಿದು ಬನ್ನಿ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕೊಟ್ಟ,
ಕಾಯಕವೇ ಸಾಕು ಮಾರಯ್ಯಾ,

ಎಂದು ಖಡಾಖಂಡಿತವಾಗಿ ಹೇಳಿ ಹೆಚ್ಚಿನ ಅಕ್ಕಿಯನ್ನು ಇದ್ದಲ್ಲೇ ಸುರಿದು ಬರಲು ತಿಳಿಸುತ್ತಾಳೆ. ಈ ಮಾತು ಮಾರಯ್ಯಗೆ ಸಮ್ಮತವಾಗದೆ,

ಬಸವಣ್ಣನವರು ನಮ್ಮ ಬಡತನದ ಬಗ್ಗೆ ತಿಳಿದೇ ಹೆಚ್ಚು ಅಕ್ಕಿ ಸುರಿಸಿರಬೇಕು. ನಮ್ಮ ಮೇಲೆ ಕನಿಕರ ತೋರಿಸಿದ ಅವರಿಗೆ ಅವಮಾನವಾಗುವಂತೆ ಮತ್ತೆ ಸುರಿದು ಬರುವುದೆ? ನನ್ನಿಂದ ಸಾಧ್ಯವಿಲ್ಲ ಎನ್ನಲು ಆಕೆ,

ದಿನಕ್ಕೆ ಬೇಕಾದಷ್ಟು ಮಾತ್ರ ಆರಿಸಿ ತರಬೇಕು. ಸಂಗ್ರಹ ಕಾರ್ಯ ಶರಣ ತತ್ತ್ವಕ್ಕೆ ವಿರುದ್ಧ 'ಬಸವಣ್ಣನವರು ತಾವು ಶ್ರೀಮಂತರು ನಾವು ಬಡವರು ಎಂದು

ಭೇದ ಎಣಿಸಬಹುದೆ? ಶರಣರಲ್ಲಿ ಯಾರು ಬಲ್ಲಿದರು? ಯಾರು ಬಡವರು? ಅವರ ಈ 'ಕನಿಕರ' ಸರಿಯಾದುದಲ್ಲ. ನಮಗೆ ಒಂದು ಮಾನ ಅಕ್ಕಿಯೇ ಸಾಕು. ಉಳಿದುದನ್ನು ಅಲ್ಲಿಯೇ ಸುರಿದುಬನ್ನಿ

ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ
ಇದು ನಿಮ್ಮ ಮನವೊ, ಬಸವಣ್ಣನ ಅನುಮಾನದ ಚಿತ್ತವೊ
ಈ ಮಾತು ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ
ಅಲ್ಲಿಯೇ ಸುರಿದು ಬನ್ನಿ ಮಾರಯ್ಯ,

ಎಂಬ ವಚನದಲ್ಲಿ ಧ್ವನಿತವಾಗಿದೆ. ಆದರೆ ಈ ಮಾತು ಮಾರಯ್ಯಗೆ ಹಿಡಿಸಲಿಲ್ಲ. ಏಕೆಂದರೆ, ಬಹಳ ದಿನಗಳಿಂದಲೂ ಆತನಿಗೆ ಕಲ್ಯಾಣದ ಜಂಗಮರನ್ನು ಪ್ರಸಾದಕ್ಕೆ ತಮ್ಮ ಮನೆಗೆ ಬಿನ್ನವಿಸಬೇಕೆಂಬಾಸೆ ಇತ್ತು. ಇಂದು ಅದು ಕೈಗೂಡಲಿರುವಾಗ ಈಗ ಲಕ್ಕಮ್ಮ ಹಠದಿಂದ ಹೆಚ್ಚಿನ ಅಕ್ಕಿಯನ್ನು ಇದ್ದಲ್ಲಿಯೇ ಚಲ್ಲಿ ಬರಲು ಹೇಳಿದಾಗ, ತನ್ನ ಇಚ್ಛೆಯನ್ನು ವಿವರಿಸಿದ ಮಾರಯ್ಯನ ಈ ಮಾತನ್ನು ಕೇಳಿದ ಲಕ್ಕಮ್ಮಗೆ ದಿಗ್ಭ್ರಮೆಯಾಯಿತು.

ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿ ತಂದು
ದಾಸೋಹವ ಮಾಡಬಹುದೆ?
ಒಮ್ಮನದಿ ತಂದು, ಒಮ್ಮನದಲ್ಲಿಯೇ ಮಾಡಿ
ಇಮ್ಮನವಾಗದ ಮುನ್ನವೇ
ಮಾರಯ್ಯನಪ್ರಿಯ ಅಮರೇಶ್ವರ ಲಿಂಗಕ್ಕೆ ಸಲ್ಲಬೇಕು ಮಾರಯ್ಯಾ.

ಭಕ್ತಿಭಾವದಿಂದ ದೃಢಮನಸ್ಸಿನಿಂದ, ಮನಸ್ಸು ಸ್ಥಿರವಾಗಿದ್ದಾಗ, ಅದು ಬೇರೆ ವಿಚಾರಗಳನ್ನು ಮಾಡುವ ಮೊದಲೇ ಪರಮಾತ್ಮನಿಗೆ ಅರ್ಪಿಸಬೇಕು. ಇಲ್ಲದ ವಿಚಾರ ಮಾಡಿ ಸಲ್ಲದ ಕೆಲಸ ಮಾಡುವುದು ಸರಿಯಿಲ್ಲವೆಂದು ಎಚ್ಚರಿಸುತ್ತಾಳೆ. ಆದರೂ ಮಾರಯ್ಯ ತನ್ನ ಆಸೆಯನ್ನು ನೀನೇಕೆ ಅರ್ಥ ಮಾಡಿಕೊಳ್ಳಲೊಲ್ಲೆ. ನಾನೇನು ದುರಾಸೆಯಿಂದ ಅಕ್ಕಿ ತಂದಿದ್ದೇನೆಯೆ? ಸಮದ್ದೇಶದಿಂದ ತಂದರೆ ತಪ್ಪೇನು? ನೀನೇಕೆ ಇಷ್ಟು ಹಟ ಮಾಡುತ್ತೀ ಎಂದು ಸಿಟ್ಟಿಗೆದ್ದಾಗ, ಲಕ್ಕಮ್ಮನು,

ಆಸೆಯೆಂಬುದು ಅರಸಿಂಗಲ್ಲದೆ
ಶಿವಭಕ್ತರಿಗುಂಟೇ ಅಯ್ಯಾ?
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೇ ಅಯ್ಯಾ
ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ

ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ

ಎಂದು, ಮಾರಯ್ಯನು ಕಾಮ, ಕ್ರೋಧವನ್ನು ವ್ಯಕ್ತಪಡಿಸಿದಾಗ, ಶಿವಭಕ್ತರು ಪಂಚೇಂದ್ರಿಯಗಳನ್ನು ಆಧೀನದಲ್ಲಿಟ್ಟುಕೊಂಡು ಆಸೆ-ರೋಷಗಳಿಂದ ದೂರವಿರಬೇಕೆಂಬ ಅಂಶವನ್ನು ಸಮಾಧಾನದಿಂದಲೇ ಎಚ್ಚರಿಸಲು ಪ್ರಯತ್ನಿಸುತ್ತಾಳೆ. ಆಗಲೂ ಮಾರಯ್ಯ ಎಚ್ಚರಗೊಳ್ಳದೆ, ಬಡವರಾದ ನಾವು ಇಷ್ಟು ನಿರ್ದಾಕ್ಷಿಣ್ಯವಾಗಿ ವರ್ತಿಸಿದರೆ, ನಮ್ಮ ಸೊಕ್ಕು ನಮ್ಮನ್ನೇ ತಿನ್ನುತ್ತದೆ. ಬಸವಣ್ಣನವರು ಏನೆಂದುಕೊಂಡಾರು ಎಂದು ಮತ್ತೆ ತನ್ನ ಅಭಿಪ್ರಾಯಕ್ಕೆ ಪೋಷಕವಾಗಿಯೇ ವಾದಿಸುತ್ತಾನೆ. ಇದರಿಂದ ನೊಂದ ಲಕ್ಕಮ್ಮನು

ಅಂಗಕ್ಕೆ ಬಡತನವಲ್ಲದೆ, ಮನಕ್ಕೆ ಬಡತನವುಂಟೆ?
ಬೆಟ್ಟ ಬಲ್ಲಿತ್ತೆಂದರೆ, ಉಳಿಯಮೊನೆಯಲ್ಲಿ ಬಡತನವಿದ್ದರೆ ಒಡೆಯದೆ?
ಘನ ಶಿವಭಕ್ತರಿಗೆ ಬಡತನವಿಲ್ಲ; ಸತ್ಯರಿಗೆ ದುಷ್ಕರ್ಮವಿಲ್ಲ
ಎನಗೆ ಮಾರಯ್ಯ ಪ್ರಿಯ ಅಮರೇಶ್ವರಲಿಂಗ ಉಳ್ಳನಕ್ಕ
ಆರ ಹಂಗಿಲ್ಲ ಮಾರಯ್ಯ ಎಂದು ಹೇಳಿ'

'ಬಡತನ! ಯಾರಿಗೆ ಬಡತನ! ಶಿವಭಕ್ತರು ಬಡವರಾಗಿರಲು ಸಾಧ್ಯವೆ? ಸದ್ಭಕ್ತನಾದ ಶರಣನು ಏನನ್ನು ಬೇಕಾದರೂ ಸಾಧಿಸಬಲ್ಲ. ಬೆಟ್ಟ ದೊಡ್ಡದಿರಬಹುದು, ಉಳಿಯಮೊನೆ ಸಣ್ಣದಿರಬಹುದು. ಆದರೆ ಸಣ್ಣದಾದ ಉಳಿಯಿಂದ ದೊಡ್ಡದಾದ ಬೆಟ್ಟವನ್ನು ಒಡೆಯುವುದಿಲ್ಲವೆ? ನನಗೇ ಈ ತತ್ತ್ವಗಳನ್ನೆಲ್ಲಾ ಬೋಧಿಸುತ್ತಿದ್ದ ನೀವು ಇಂದೇಕೆ ತತ್ತ್ವವಿರುದ್ಧವಾಗಿ ನಡೆಯುತ್ತಿರುವಿರಿ? ಎಂದು ನೋವಿನಿಂದ ನುಡಿದಳು. ಇಷ್ಟಾದರೂ ಮಾರಯ್ಯನಿಗೆ ಜಂಗಮರಿಗೆ ದಾಸೋಹ ಮಾಡಬೇಕೆಂಬ ಆಸೆ ಅಳೆಯದಿದ್ದಾಗ ಲಕ್ಕಮ್ಮನು ನಿಮಗೆ ಜಂಗಮ ದಾಸೋಹ ಮಾಡಲೇಬೇಕೆಂಬ ಆಸೆ ಇದ್ದಲ್ಲಿ ಮೊದಲು ಅಕ್ಕಿಯನ್ನು ಮೊದಲಿದ್ದಲ್ಲಿಯೇ ಸುರಿದು, ನಂತರ

ಬಸವಣ್ಣ, ಚನ್ನಬಸವಣ್ಣ ಪ್ರಭುದೇವರು ಮೊದಲಾದ
ನೇಮ ನಿತ್ಯ, ಕೃತ್ಯ ಸಕಲ ಸಮೂಹ ನಿತ್ಯನೇಮದ
ಜಂಗಮಭಕ್ತರು, ಗಣಂಗಳು ಮುಂತಾದ ಸಮೂಹಸಂಪದಕ್ಕೆ
ನೈವೇದ್ಯಕ್ಕೆ ವೇಳೆಯೆಂದು ಹೇಳಿಬಾರಯ್ಯ,
ಅಮರೇಶ್ವರಲಿಂಗದ ಮನೆಯಲ್ಲಿ ಆದಿಹಿತೆಂದು ಹೇಳಿಬನ್ನಿ
ಎಂದು ಹೇಳುತ್ತಾಳೆ.

ಎಲ್ಲಾ ಜಂಗಮರಿಗೆ, ಭಕ್ತರಿಗೆ, ಗಣಂಗಳಿಗೆ ನೈವೇದ್ಯಕ್ಕೆ ಬರಲು ಹೇಳಿ ಎಂದಾಗ ಮಾರಯ್ಯಗೆ ದಿಗ್ಭ್ರಮೆ ಎನ್ನಿಸಿ 'ಏನಿದು ಲಕ್ಕಾ, ಬಡವರಾದ ನಾವು

ಅಂತಹ ದೊಡ್ಡ, ದೊಡ್ಡ ಮಹಿಮರನ್ನೆಲ್ಲಾ ಹೇಗೆ ಕರೆಯುವುದು? ಏನು ಪ್ರಸಾದ ಮಾಡುವುದು ಇಷ್ಟೊಂದಕ್ಕೆಲ್ಲಾ ಹಣ ಎಲ್ಲಿಂದ ತರುವುದು, ಇದ್ದ ಅಕ್ಕಿಯನ್ನು ಸುರಿದು ಬಾ ಎನ್ನುತ್ತಿರುವೆ, ಹುಡುಗಾಟ ಮಾಡುತ್ತಿರುವೆಯಾ? ಎಂದು ಗಾಬರಿಗೊಂಡು ಪ್ರಶ್ನಿಸಿದನು. ಆಗ, ಲಕ್ಕಮ್ಮ

ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ
ಚಿತ್ತ ಶುದ್ಧದಿಂದ ಕಾಯಕವ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು

ಮಾರಯ್ಯಪ್ರಿಯ ಅಮಲೇಶ್ವರಲಿಂಗದ ಸೇವೆಯುಳ್ಳನ್ನಕ್ಕರ ಎಂದು ಹೇಳುತ್ತಾಳೆ. ಶುದ್ಧ ಮನಸ್ಸಿನಿಂದ ಬಾಳಿದ ಶರಣನು ಸತ್ಸಂಕಲ್ಪದಿಂದ, ಸನ್ಮಾರ್ಗದಿಂದ ಏನು ಮಾಡಬೇಕೆಂದರೂ ಮಾಡಬಲ್ಲ. ಅದಕ್ಕೆ ಬೇಕಾದುದು ಎಲ್ಲವೂ ತಾನೇ ತಾನಾಗಿ ಎಲ್ಲಿಂದಲಾದರೂ ಬಂದು ಒದಗುತ್ತದೆ. ದ್ರವ್ಯದ ಬಡತನ ಮನಶುದ್ಧವಿಲ್ಲದವನಿಗೆ ಮಾತ್ರ. ಸದ್ಭಕ್ತನಿಗೆ ಎಲ್ಲಿ ನೋಡಿದಲ್ಲಿ ಸಂಪತ್ತು. ಸತ್ ಶರಣರು ಸಂಕಲ್ಪಿಸಿದ್ದುದು ಎಲ್ಲವೂ ಆಗಿಯೇ ತೀರುತ್ತದೆ ಎಂಬ ಸತ್ಯವನ್ನು ಹೇಳಿದುದಲ್ಲದೇ ಮಾಡಿ ತೋರಿಸುತ್ತಾಳೆ. [ಮೃತ್ಯುಂಜಯಪ್ಪಗಳು, ಅಥಣಿ ಶಿವಯೋಗಿಗಳು ಮುಂತಾದ ಮಹಾ ಶರಣರು, ಕೈಯ್ಯಲ್ಲಿ ಏನೂ ಇಲ್ಲದೆ, ದೊಡ್ಡ ದೊಡ್ಡ ಸತ್ಕಾರ್ಯಗಳನ್ನು ಹಮ್ಮಿಕೊಂಡಾಗ, ಎಲ್ಲೆಲ್ಲಿಂದಲೋ ಅದಕ್ಕೆ ಬೇಕಾದ ವಸ್ತು, ಸಹಾಯ, ಸಹಕಾರ, ಹಣ ಎಲ್ಲ ತಾನೇ ತಾನಾಗಿ ಸಕಾಲದಲ್ಲಿ ದೊರೆತು, ಸುಲಭವಾಗಿ ಕಾರ್ಯಗಳು ನೆರವೇರಿದ ಅನೇಕ ಘಟನೆಗಳನ್ನು ಅದರ ಸಮಕಾಲೀನರು ಕಣ್ಣಾರೆ ಕಂಡು ವರ್ಣಿಸಿದುದನ್ನು ಕೇಳಿದ್ದೇವೆ.] ಹಾಗೆಯೇ ಲಕ್ಕಮ್ಮನೂ ಗಂಡನಿಗೆ ಹೇಳಿ, ಶರಣಸಮೂಹವನ್ನು ನೈವೇದ್ಯಕ್ಕೆ ಬರಬೇಕೆಂದು ಬಿನ್ನವಿಸಿದಳು. ಆಗ ಮಾರಯ್ಯನು 'ಬಸವಣ್ಣ ಹಾಗೂ ಎಲ್ಲಾ ಶರಣರಿಗೂ, ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು ಸಕಲ ಸಂಪದ ಪ್ರಮಥರು ಮುಂತಾಗಿ ಅಮರೇಶ್ವರಲಿಂಗದ ಆಶ್ರಯದಲ್ಲಿ ಪ್ರಸಾದವ ಕೊಂಬುದಕೆ ಬಾರಾ ಸಂಗನಬಸವಣ್ಣಾ' ಎಂದು ಬಿನ್ನವಿಸಿ ಬರುತ್ತಾನೆ.

ಮರುದಿನ ಶರಣರೆಲ್ಲರೂ ಮಾರಯ್ಯನ ಮನೆಗೆ ದಯಮಾಡಿಸಿದರು. ಲಕ್ಕಮ್ಮನು ಅಮರೇಶ್ವರ ಲಿಂಗದ ಕೃಪೆಯಿಂದ ಪವಾಡ ಸದೃಶ ರೀತಿಯಲ್ಲಿ ದಯಮಾಡಿಸಿದ ಪ್ರಮಥರಿಗೆಲ್ಲಾ ಎಡೆ ಮಾಡಿದಳು. ಎಲ್ಲರೂ ಆರೋಗಿಸಿ ತೃಪ್ತರಾದರು. ಇಷ್ಟು ದೊಡ್ಡ ಶರಣ ಸಮೂಹಕ್ಕೆ ಆರೋಗಣೆ ಮಾಡಿದುದನ್ನು ನೋಡಿ ಸ್ವತಃ ಪ್ರಭುದೇವರಿಗೇ ಆಶ್ಚರ್ಯವಾಗಿ,

ಆಕಾರ ನೇಮಕ್ಕೆ ಸಂದಿತ್ತು, ಇಚ್ಛಾಭೋಜನಕ್ಕೆ ಕೃತ್ಯವಾಯಿತ್ತು
ಮಹಾಘನದೊದಗ ಕಂಡೆಯಾ ಸಂಗನ ಬಸವಣ್ಣ
ಗುಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು!
ಎನ್ನುತ್ತಾ ಎಲ್ಲರೂ ಲಕ್ಕಮ್ಮನನ್ನು ಕೊಂಡಾಡುತ್ತಾರೆ.

ಶರಣೆ ಲಕ್ಕಮ್ಮ ವಿನೀತಳಾಗಿ, 'ಇದೆಲ್ಲಾ ನಿಮ್ಮ ಆಶೀರ್ವಾದದ ಫಲ. ನಾನೇ ಮಾಡಿದೆನೆಂದರೆ, ಅದು ಅಹಂಕಾರದ ಮಾತಾದೀತು ಗರ್ವದಿಂದ ಮಾತನಾಡಿದರೆ, ಅದು ಅರಿವಿಲ್ಲದ ವರ್ತನೆಯೇ ಸರಿ ಎಂದು ಹೇಳುತ್ತಾ,

ಗರ್ವದಿಂದ ಮಾಡುವ ಭಕ್ತಿ ದ್ರವ್ಯದಕೇಡು
ನಡೆಯಿಲ್ಲದ ನುಡಿ, ಅರಿವಿಂಗೆ ಹಾನಿ
ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ
ದೃಢವಿಲ್ಲದ ಭಕ್ತಿ, ಅಡಿ ಒಡೆದ ಕುಂಭದಲ್ಲಿ ಸುಜಲದ ತುಂಬಿದ
ಮಾರಯ್ಯಪ್ರಿಯ ಅಮರೇಶ್ವರಲಿಂಗದ ಭಕ್ತಿ. ಇದು ಕಾರಣ,
ನಿಮ್ಮ ಕರುಣೆಯಿಂದ ನಮಗಿಂದು ಮಹಾಯೋಗ ಲಭಿಸಿತು

ಎಂದು ಅವರು ದಯಮಾಡಿಸಿ ಆಶೀರ್ವದಿಸಿದುದಕ್ಕೆ ಕೃತಜ್ಞತೆ ಅರ್ಪಿಸುತ್ತಾಳೆ. ಆಕೆಯ ದೊಡ್ಡತನವನ್ನು ಮಾರಯ್ಯನ ವಿನಯವನ್ನು ಗಮನಿಸಿದ ಬಸವಣ್ಣ,

ಮನೆನೋಡಾ ಬಡವರು ಮನ ನೋಡಾ ಸಂಪನ್ನರು
ಧನ ನೋಡಾ ಬಡವರು ಘನ ಮನ ಸಂಪನ್ನರು
ಕೂಡಲ ಸಂಗನ ಶರಣರು ಕರುಳಿಲ್ಲದ ಕಲಿಗಳು
ಇವರನಾರಿಗೆ ಉಪಮಿಸಬಹುದು ಕೂಡಲ ಸಂಗಮದೇವಾ

ಎಂದು ಕೊಂಡಾಡುತ್ತಾನೆ. ಭಕ್ತಿಯ ಶಕ್ತಿಯಿಂದ ಅಮರೇಶ್ವರ ಲಿಂಗಕ್ಕೆ ಬೇಕಾದುದನ್ನು ಸಲ್ಲಿಸಬಲ್ಲವರು ನೀವು ಎನ್ನುತ್ತಾನೆ. ಆಗ ಮಾರಯ್ಯ ನಮ್ಮಿಂದ ಅದು ಸಾಧ್ಯವೇ ಬಸವಣ್ಣ. ಎಲ್ಲವನ್ನು ಲಿಂಗಾರ್ಪಿತ ಮಾಡಿದ ನನಗೆ ನನ್ನದೆಂಬುದಿಲ್ಲ.

ತನುವ ನೀವಡೆ ತನುವೆನಗಿಲ್ಲ, ಮನವನೀವಡೆ ಮನವೆನಗಿಲ್ಲ
ಧನವನೀವಡೆ ಧನವೆನಗಿಲ್ಲ, ಸಕಲ ಸಂಪತ್ತುಳ್ಳ ನಿಮ್ಮ ಶರಣರ
ತಪ್ಪಲಕ್ಕಿಯನಾಯ್ದು ತಂದು, ಎನ್ನೊಡಲ ಹೊರೆದೆನಾಗಿ
ಅಮರೇಶ್ವರ ಲಿಂಗಕ್ಕೆ ನೀಡುವ ಬಯಕೆ ನನಗಿಲ್ಲ ಸಂಗನ ಬಸವಣ್ಣಾ

ಎನ್ನುತ್ತಾನೆ. ಆಗ ಎನಗಿಂತ ಕಿರಿಯರಿಲ್ಲ ಎಂಬ ನಮ್ರ ಭಾವದಿಂದ ಮೆರೆದ ಬಸವಣ್ಣನು ಲಕ್ಕಮ್ಮ ಮತ್ತು ಮಾರಯ್ಯನ ಸತ್ಯ, ಶುದ್ಧ, ವಿನಯ ಸಂಪನ್ನ

ಭಕ್ತಿಭಾವದ ವ್ಯಕ್ತಿತ್ವನೋಡಿ ಬೆರಗಾಗುತ್ತಾನೆ. ಅವರಿಬ್ಬರೂ ತನಗಿಂತ ದೊಡ್ಡವರು ಎನ್ನಿಸಿ,

ಎನ್ನ ಹೊಗಳಿ, ಹೊಗಳಿ ಹೊನ್ನಶೂಲಕ್ಕೇರಿಸಿದಿರಿ
ನಾ ನಡೆವುದೆಲ್ಲಾ ಅವಿಚಾರ, ನುಡಿವುದೆಲ್ಲಾ ಅಪಚಾರ
ನಡೆ-ನುಡಿ ಶುದ್ಧವಿಲ್ಲದ ಅಪವಿತ್ರನ ತಂದು ನಿಮ್ಮೊಕ್ಕುದನಿಕ್ಕು ನೀಡಿದಿರಿ
ಎನಗಿನ್ನಾವ ಭಯವೂ ಇಲ್ಲ.
ಕೂಡಲ ಸಂಗಮ ದೇವರು ಸಾಕ್ಷಿಯಾಗಿ
ಆಯ್ದಕ್ಕಿ ಮಾರಯ್ಯನ ಮನೆಯ ಮಗ ನಾನು

ಎಂದು ಆಯ್ದಕ್ಕಿ ಮಾರಯ್ಯನ ದೊಡ್ಡತನವನ್ನು ಹಾಡಿ ಹೊಗಳುತ್ತಾನೆ ಮತ್ತು ಲಕ್ಕಮ್ಮನ ಪವಾಡ ಸದೃಶವಾದ ಶಕ್ತಿಯನ್ನು ಭಕ್ತಿಯನ್ನು ಕೊಂಡಾಡಿ, ಅಂತಹ ಪತ್ನಿಯನ್ನು ಪಡೆದ ಮಾರಯ್ಯನ ಪುಣ್ಯಕ್ಕೆ ಎಣೆಯಲ್ಲವೆನ್ನುತ್ತಾನೆ. ತನ್ನ ಹೊಗಳಿಕೆಯನ್ನು ಕೇಳಿದ ಲಕ್ಕಮ್ಮಗೆ ಸಂಕೋಚವೆನ್ನಿಸಿ, ತನ್ನ ತನು, ಮನ ಪರಿಶುದ್ಧತೆಗೆ ಆ ಮಹಾಮಹಿಮರ ಪ್ರಸಾದವೇ ಕಾರಣವೆಂದು ಹೇಳುತ್ತಾ

ಬಸವಣ್ಣನ ಪ್ರಸಾದವಕೊಂಡು ಎನ್ನ ಕಾಯಶುದ್ಧವಾಯಿತ್ತಯ್ಯ
ಚನ್ನಬಸವಣ್ಣನ ಪ್ರಸಾದವಕೊಂಡು ಎನ್ನ ಜೀವ ಶುದ್ಧವಾಯಿತ್ತಯ್ಯ
ಮಡಿವಾಳಯ್ಯನ ಪ್ರಸಾದವ ಕೊಂಡು ಎನ್ನಭಾವ ಶುದ್ಧವಾಯಿತ್ತಯ್ಯಾ
ಶಂಕರ ದಾಸಿಮಯ್ಯನ ಪ್ರಸಾದವ ಕೊಂಡು, ಎನ್ನ ತನು ಶುದ್ಧವಾಯಿತ್ತಯ್ಯಾ
ಘಟ್ಟಿವಾಳಯ್ಯನ ಪ್ರಸಾದವ ಕೊಂಡು ಎನ್ನ ಪ್ರಾಣ ಶುದ್ಧವಾಯಿತ್ತಯ್ಯ
ಅಕ್ಕನಾಗಮ್ಮನ ಪ್ರಸಾದವಕೊಂಡು ಎನ್ನ ಅಂತರಂಗ ಶುದ್ಧವಾಯಿತ್ತಯ್ಯಾ
ಮುಕ್ತಾಯಕ್ಕಗಳ ಪ್ರಸಾದವ ಕೊಂಡು ಎನ್ನ ಬಹಿರಂಗ ಶುದ್ಧವಾಯಿತ್ತಯ್ಯಾ.
ಇವರು ಮುಖ್ಯವಾದ ಏಳುನೂರ ಎಪ್ಪತ್ತು ಅಮರಗಣಂಗಳ
ಪ್ರಸಾದವ ಕೊಂಡು ಬದುಕಿದೆನಯ್ಯಾ.
ಮಾರೇಶ್ವರ ಪ್ರಿಯ ಅಮರೇಶ್ವರಾ

ಆ ನಿಮ್ಮ ಶರಣರ ಪಾದಕ್ಕೆ ಅಹೋರಾತ್ರಿಯಲ್ಲಿ ನಮೋನಮೋ ಎಂಬ ವಚನದಿಂದ ತನ್ನ ತನು-ಮನ, ಭೇದ-ಭಾವ, ಅಂತರಂಗ-ಬಹಿರಂಗ, ಪ್ರಾಣ-ಕಾಯವೆಲ್ಲಾ ಶುದ್ಧವಾದುದು ಮಹಾ-ಮಹಾ ಶರಣ-ಶರಣೆಯರ ಕೃಪೆಯಿಂದ ಎಂದು ಭಕ್ತಿಪೂರ್ಣವಾಗಿ ನಮಿಸಿ ಹೇಳುತ್ತಾರೆ. ಆಗ ಎಲ್ಲ ಶರಣರೂ, ದಂಪತಿಗಳನ್ನು ಹರಸಿ ಹಿಂತಿರುಗುತ್ತಾರೆ.

## ಕಣ್ಣು ತೆರೆಯಿತು–ಭಕ್ತಿ ಅರಳಿತು

ಲಕ್ಕಮ್ಮನು ಭಕ್ತಿಯ ಶಕ್ತಿಯಿಂದ ಪ್ರಭುದೇವ, ಬಸವಣ್ಣನವರುಗಳೇ ನಿಬ್ಬೆರಗಾಗುವಂತೆ, ಶರಣರೆಲ್ಲರೂ ತೃಪ್ತಿಪಡುವಂತೆ ಆರೋಗಣೆ ಮಾಡಿ ಅವರೆಲ್ಲಾ ಕೊಂಡಾಡುವಂತೆ ಮಾಡಿದುದನ್ನು ನೋಡಿದ ಮಾರಯ್ಯನ ಕಣ್ಣು ತೆರೆದವು. ಮನಸ್ಸು ಎಚ್ಚರಗೊಂಡಿತು. ಲಕ್ಕಮ್ಮನು ತನಗೇ ಗುರುವಾಗುವಂತಹ ಎತ್ತರ ಮುಟ್ಟಿದ್ದಾಳೆ ಎನ್ನಿಸಿತು. ಆಕೆ ಸಕಾಲದಲ್ಲಿ ತನಗೆ ಮಾರ್ಗದರ್ಶನ ಮಾಡಿ, ಎಚ್ಚರಿಸದಿದ್ದರೆ, ಇಷ್ಟು ದಿನ ತಾನು ಮಾಡಿದ ಸಾಧನೆಯೆಲ್ಲಾ ವ್ಯರ್ಥವಾಗುವ ರೀತಿಯಲ್ಲಿ ವರ್ತಿಸಿಬಿಡುತ್ತಿದೆ. ಹಾದಿ ತಪ್ಪಿ ಹೋಗುತ್ತಿದ್ದ ನನ್ನನ್ನು ಕೈ ಹಿಡಿದು ನಡೆಸಿದ ಈಕೆ ನನ್ನ ಗುರುವಲ್ಲದೆ ಬೇರಲ್ಲ ಎಂದು ಅವಳನ್ನು ಕುರಿತು, 'ಲಕ್ಕಾ, ನೀನು ಮಾಯೆಯಿಂದಾವೃತನಾಗಿದ್ದ ನನ್ನ ಕಣ್ಣನ್ನು ತೆರೆಸಿದ ಮಹಾಗುರು' ಎಂದು ಕೊಂಡಾಡುತ್ತಾನೆ! ಆಗ ಆಕೆ ತಾನು ಮಾರಯ್ಯನಿಗೆ ಮಿರಿದ ತತ್ತ್ವಜ್ಞಾನಿ ಎಂದು ತಿಳಿದು ಬೀಗದೆ, ವಿನೀತ ಭಾವದಿಂದ, 'ನಾನು ಏನುಗೊತ್ತಿಲ್ಲದೆ ಅಜ್ಞಳಾಗಿದ್ದೆ. ಅಂತಹವಳಿಗೆ ನೀವು ಧರ್ಮಬೋಧೆ ಮಾಡಿ, ನನಗೆ ಜ್ಞಾನ ಕೊಟ್ಟಿರಿ. ನೀವು ಮರೆತಾಗ, ನಾನು ಜ್ಞಾಪಿಸಿರುವೆ ಅಷ್ಟೆ. ನಿಮಗೆ ಗೊತ್ತಿಲ್ಲದುದನ್ನು ನಾನೇನೂ ಹೇಳಿಲ್ಲ' ಎನ್ನುತ್ತಾ, ನನಗೂ ನಿಮಗೂ ಭೇದವೆಲ್ಲಿಯದು ನೀವೇ ಬಿತ್ತಿದ ಬೀಜ, ಆ ಬೀಜದಿಂದಲೇ ಮೊಳಕೆಯೊಡೆದಾಗ ಮೂಲಬೀಜ ನಷ್ಟವಾಗುತ್ತದೆ. ಅದು ನಷ್ಟವಾದರೂ ಅದರಿಂದೊಡೆದ ಅಂಕುರ ಬೀಜದ ಭಾಗವೇ ಅಲ್ಲವೆ? ಆ ಚಿಗುರು ಬೀಜದಿಂದ ಬಂದದ್ದಲ್ಲವೆ? ಅದು ಬೇರೆ ಹೇಗಾದೀತು? ಹಾಗೆ ನೀವು ತಿಳಿಸಿಕೊಟ್ಟದನ್ನು ನಿಮ್ಮಲ್ಲಿ ಆ ವಿಚಾರ ನಷ್ಟವಾದಾಗ ನಾನು ಜ್ಞಾಪಿಸಿರಬಹುದು. ಆದರೆ ಆ ವಿಚಾರ ನಿಮ್ಮದೇ ತಾನೆ? ಸಂಸಾರಿಕ ಜೀವನಕ್ಕೆ ನಾವು ಸತಿ–ಪತಿ ಎಂದು ಬೇರೆ–ಬೇರೆ ಆದರೆ ಉಳಿದೆಲ್ಲಾ ರೀತಿಯಿಂದ ನಾವಿಬ್ಬರು ಒಂದೆ ಎಂಬ ಮಾತನ್ನು

ನೀ ಮರೆತಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ?
ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು
ಕೂಟಕ್ಕೆ ಸತಿ–ಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೆ
ಬೇರೊಂದಡಿಯಿಡದಿರು
ಮಾರಯ್ಯಪ್ರಿಯ ಅಮರೇಶ್ವರಲಿಂಗವನರಿಯಬಲ್ಲಡೆ

ಎಂಬ ವಚನದ ಮೂಲಕ ಮಾರಯ್ಯನಿಗೆ ತಾವಿಬ್ಬರೂ ಒಂದೇ ಎಂದು ಮನದಟ್ಟು ಮಾಡಿದಳು. ತನ್ನಲ್ಲಿರುವ ಅರಿವು ಮಾರಯ್ಯ ಸದ್ಯದಲ್ಲಿ ಮರೆತ ಮುನ್ನಿನ

ಜ್ಞಾನವೇ ಎಂದು ಹೇಳಿದರೂ, ಮಾರಯ್ಯನಿಗೆ ಈ ಜೀವನದ ಬಗ್ಗೆ ವೈರಾಗ್ಯ ಹುಟ್ಟಿ, ಕೈಲಾಸಕ್ಕೆ ಹೋಗಬೇಕು, ದೇವರಲ್ಲಿ ಒಂದಾಗಬೇಕು ಎಂಬ ಆಸೆ ಉದಯಿಸುತ್ತದೆ.

**ಸುಜ್ಞಾನ ಬೋಧಕ ಸತಿ ಶಿರೋಮಣಿ**

ಆಗಲೂ ಲಕ್ಕಮ್ಮನನ್ನು ಮಾರಯ್ಯನ ಕಣ್ಣು ತೆರೆಯಿಸುತ್ತಾಳೆ. ನೀನು ನಿನ್ನ ಎದುರಿಗೇ ಇರುವ ಅಮಲೇಶ್ವರಲಿಂಗವನ್ನು ಅರಿಯಲು ಪ್ರಯತ್ನಿಸು. ಅದಕ್ಕೆ ಬೇಕಾದ ಭಕ್ತಿಯ ನಡೆಯನ್ನು ನಡೆ. ಕಾರಣ ಕೈಲಾಸಕ್ಕೆ ಎಳಸಬೇಡ

ಸಸಿಗೆ ನೀರೆರೆದಡೆ ಎಳಕುವುದಲ್ಲದೆ
ನಷ್ಟಮೂಲಕ್ಕೆ ಹೊತ್ತು ನೀರ ಹೊಯಿದಡೆ ಎಳರುವುದೆ ಮಾರಯ್ಯ
ನಿನ್ನ ವಿರಕ್ತಿ ನಷ್ಟವಾಗದ ಮುನ್ನವೆ
ಮಾರಯ್ಯಪ್ರಿಯ ಅಮಲೇಶ್ವರ ಲಿಂಗವನರಿಯಿರಯ್ಯಾ

ಎಂದು ಎಚ್ಚರಿಸುತ್ತಾಳೆ. ಆದರೂ ಮಾರಯ್ಯನು 'ಇಲ್ಲಿಯ ಮಣಿಹ ಸಾಕು, ಕೈಲಾಸ ಬೇಕು' ಎಂಬ ಆಸೆ ವ್ಯಕ್ತಪಡಿಸಿದಾಗ, ಮಾಡವ ಕೆಲಸವಿನ್ನೂ ಇರುವಾಗ, ಅದನ್ನು ಬಿಟ್ಟು ಕೈಲಾಸಕ್ಕೆ ಹೋಗುವೆನೆನ್ನುವುದು ಫಲಾಯನವಾದ ಎನ್ನುವಂತೆ,

ಮಾಡುವ ಮಾಟವುಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ?
ದಾಸೋಹವೆಂಬ ಸೇವೆಯಬಿಟ್ಟು ನೀಸಲಾರದೆ
ಕೈಲಾಸವೆಂಬ ಆಸೆ ಬೇಡ
ಮಾರಯ್ಯಪ್ರಿಯ ಅಮರೇಶ್ವರಲಿಂಗವಿದ್ದ ಠಾವೆ ಕೈಲಾಸವೆಂದು

ಬೇರೆ ಕೈಲಾಸದ ಆಸೆಗೆ ಒಳಗಾಗದೆ, ಇರುವ ತನ್ನ ಕಾಯಕವನ್ನು ನಿಷ್ಠೆಯಿಂದ ಮಾಡುತ್ತಾ ತಾನಿರುವ ಅಮರೇಶ್ವರ ಲಿಂಗದ ಸನ್ನಿಧಿಯೆ ಕೈಲಾಸವೆಂದು ತಿಳಿಯಲು ಉಪದೇಶಿಸುತ್ತಾಳೆ. ಪರಿಶುದ್ಧ ಜೀವನದ ಮೂಲಕ, ಭಕ್ತಿಭಾವನೆಯಿಂದ ಬದುಕುವ ಮೂಲಕ ಕೈಲಾಸಕ್ಕೆ ಹೋಗಬೇಕು. ಮುಕ್ತಿಪಡೆಯಬೇಕೆಂಬುದು ಭಾರತೀಯಭಾವ. ಆದರೆ ಶರಣರು 'ಕಾಯವೇ ಕೈಲಾಸ'ವೆಂದರು. ಅದರಂತೆ ಬದುಕಿದ ಲಕ್ಕಮ್ಮನಿಗೆ ತನ್ನ ಪತಿಯೇ ಕಾಯಕ ದಾಸೋಹದ ಕ್ರಿಯಾಚರಣೆಗಳಿಂದ ಬಿಡುಗಡೆ ಪಡೆದು ಕೈಲಾಸ ಪದವನ್ನು ಪಡೆಯಲು ಸಮಯವಾವುದೆಂದು, ತಾನು 'ಗುರು'ವೆಂದು ಭಾವಿಸಿದ ಪತ್ನಿಯನ್ನು ಕೇಳಿದಾಗ, ಬೇಸರವಾಗುತ್ತದೆ ಪ್ರತಿಫಲಾಪೇಕ್ಷೆ ಇಲ್ಲದೆ ಮಾಡುವ ಕಾಯಕವೇ ಕೈಲಾಸ. ಬೇರೊಂದು ಕೈಲಾಸವಿಲ್ಲವೆಂದು ತಿಳಿಹೇಳಿ ಅವನನ್ನು ಆವರಿಸಿದ್ದ ತಾತ್ಕಾಲಿಕ ಅಜ್ಞಾನದಿಂದ ಜ್ಞಾನದೆಡೆಗೆ ತಿರುಗಿಸುತ್ತಾಳೆ. ಮಾರಯ್ಯ ಪತ್ನಿಯ ಅರಿವಿನ ಆಳವನ್ನು ಅರಿತು ಪತ್ನಿಯ ಸಲಹೆಯನ್ನು ಮಾನ್ಯ

ಮಾಡುತ್ತಾನೆ. ಅವಳಿಂದ ನಿಜೈಕ್ಯದ ನಿಲುವನ್ನು ಪಡೆಯುತ್ತಾನೆ. ಪುರುಷನು ಹೆಚ್ಚು ಹೆಣ್ಣು ಪುರುಷನಾಣತಿಯಂತೆ ಬದುಕಬೇಕೆಂಬ ಸಾಮಾಜಿಕ ವ್ಯವಸ್ಥೆ ಇದ್ದ ಕಾಲದಲ್ಲಿ, ಶರಣರು, ಪುರುಷ–ಸ್ತ್ರೀ ಎಂಬ ಭೇದವಿಲ್ಲದೆ, ಅವರ ಅರಿವಿಗೆ ಬೆಲೆ ಕೊಟ್ಟರು. ಪತಿ ಹೇಳಿದಂತೆ ಸತಿ ಕೇಳಬೇಕೆಂಬ ನಿಲುವನ್ನು ಮೀರಿ, ಯೋಗ್ಯವಿಚಾರಗಳು ಸತಿಯಿಂದ ಬಂದಾಗ ಪತಿ ತಲೆಬಾಗಿ ಸ್ವೀಕರಿಸಿದ ಉದಾಹರಣೆಯನ್ನು ಶರಣ ಜೀವನದಲ್ಲಿ ಕಾಣಬಹುದು. ಆಯ್ದಕ್ಕಿ ಲಕ್ಕಮ್ಮ ಅಂತಹ ಸುಜ್ಞಾನಿಯಾದ ಶರಣೆಯಾಗಿದ್ದವಳು.

ಅಮರೇಶ್ವರ ಲಿಂಗ ಲಕ್ಕಮ್ಮನ ಆರಾಧ್ಯದೈವ. ಹೀಗಾಗಿ ಈಕೆಯ ವಚನಾಂಕಿತ 'ಮಾರಯ್ಯ ಪ್ರಿಯ ಅಮರೇಶ್ವರಲಿಂಗ' ಎಂದಿದೆ. ಈಕೆ ಬರೆದ ಇಪ್ಪತ್ತೈದು ವಚನಗಳು ಮಾತ್ರ ದೊರೆತಿವೆ. ಇವುಗಳಲ್ಲಿ ಹದಿನಾಲ್ಕು ವಚನಗಳು, ಮಾರಯ್ಯನು ಬಸವಣ್ಣನ ಮನೆಯ ಅಂಗಳದಲ್ಲಿ ಬಿದ್ದಿದ್ದ ಹೇರಳವಾದ ಅಕ್ಕಿಯನ್ನು ಹೇರಳವಾಗಿ ಆರಿಸಿಕೊಂಡು ಬಂದ ಸಂದರ್ಭದಲ್ಲಿ ಹೇಳಿರಬಹುದಾದ ವಚನಗಳೆಂದು ತೋರುತ್ತವೆ. ಉಳಿದವು ಒಂಭತ್ತು ವಚನಗಳಲ್ಲಿ ಕೈಲಾಸ, ದಾಸೋಹ, ಶರಣತತ್ತ್ವ ಕುರಿತಾದ ಅಂಶಗಳಿವೆ. ಇನ್ನೆರಡು ವಚನಗಳಲ್ಲಿ ಶರಣ ಶ್ರೇಷ್ಠರ ಬಗೆಗೆ ತನ್ನ ಭಕ್ತಿಭಾವವನ್ನು ವ್ಯಕ್ತಪಡಿಸಿದ್ದಾಳೆ.

ಒಟ್ಟಿನಲ್ಲಿ ಆಯ್ದಕ್ಕಿ ಲಕ್ಕಮ್ಮ ಅರಿವಿನ ಆಗರವಾಗಿ ಶರಣ ತತ್ತ್ವವನ್ನು ಮೈಗೂಡಿಸಿಕೊಂಡ ಮಹಾಶರಣೆಯಾಗಿ, ಪತಿಯು ತನ್ನ ಆಚಾರ ವಿಚಾರಗಳಲ್ಲಿ ತಪ್ಪಿ ನಡೆಯಬಹುದಾಗಿದ್ದ ಸಂದರ್ಭಗಳಲ್ಲಿ ದಿಟ್ಟತನದಿಂದ, ಖಡಾಖಂಡಿತವಾದ ಮಾತುಗಳಿಂದ ಎಚ್ಚರಿಸುತ್ತಾಳೆ. ಆಯ್ದಕ್ಕಿ ಮಾರಯ್ಯನನ್ನು ತತ್ತ್ವವಿಮುಖನಾಗಿ ಬದುಕಬಹುದಾಗಿದ್ದ ದುರಂತದಿಂದ ಪಾರು ಮಾಡುತ್ತಾಳೆ. ಜಾಣ್ಮೆಯಿಂದ ಅವನನ್ನು ತಿದ್ದುತ್ತಾಳೆ. ಹೀಗೆ ಶರಣ ಮಾರ್ಗದಲ್ಲಿ ತತ್ತ್ವನಿಷ್ಠಳಾಗಿ ಬದುಕಿದ ಲಕ್ಕಮ್ಮ ಬಸವಯುಗದ ಒಂದು ಪ್ರಕಾಶಮಾನ ಜ್ಯೋತಿಯಾಗಿ ಉಳಿದಿದ್ದಾಳೆ.

■

## ೭. ಧೀರ ಶರಣೆ ಗುಡ್ಡಾಪುರದ ದಾನಮ್ಮದೇವಿ

ಗುಡ್ಡಾಪುರದ ದಾನಮ್ಮ, ವರದಾನಿ ಗುಡ್ಡಮ್ಮ, ಗುಡ್ಡಾದೇವಿ, ದಾನಚಿಂತಾಮಣಿ ದಾನಮ್ಮ ಮುಂತಾದ ಹೆಸರುಗಳಿಂದ ಜನ-ಮನದಲ್ಲಿ ದೇವರ ಸಮಾನವಾಗಿ ನೆಲಸಿರುವ ದಾನಮ್ಮದೇವಿಯ ಹುಟ್ಟು ಹೆಸರು ಲಿಂಗಮ್ಮ. ಈಕೆಯ ತಂದೆತಾಯಿಗಳು ಪತ್ತಾರನಾದ ಅನಂತರಾಮ ಮತ್ತು ಶಿವನಮ್ಮನ ಮಗಳು. ಶರಣ ಸಮಾಜದಲ್ಲಿ ಈಕೆ ಬಸವಣ್ಣನವರ ಮಾನಸ ಪುತ್ರಿ. ಹನ್ನೆರಡನೆಯ ಶತಮಾನದ ಶರಣರ ಸಮಕಾಲೀನಳು. ಶರಣ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಸೊನ್ನಲಾಪುರದಲ್ಲಿ ಸಿದ್ಧರಾಮೇಶ್ವರನಿಂದ ದೃಷ್ಟಿಯೋಗ ಮತ್ತು ಅಮನಸ್ಕಯೋಗ ತಿಳಿದುಕೊಂಡವಳು. ಅಲ್ಲದೆ ಶಿವಯೋಗಿನಿ. ಬಸವ ತತ್ತ್ವವನ್ನು ಕನ್ನಡ ನಾಡಿನ ಹೊರಗೂ ಪ್ರಚಾರ ಮಾಡಿದ ಹರಿಕಾರಳು. ಮಾನವೀಯತೆಯ ಸಾಕಾರಮೂರ್ತಿಯಾದ ಈಕೆ ನೊಂದವರ, ದೀನದಲಿತರ, ಬಡವರ ಕಣ್ಣೀರೊರಸಿ, ಸಂಸಾರಸಾಗರದಿಂದ ಮೇಲೆತ್ತಿ, ಅವರ ಬಾಳಿಗೆ ಶರಣ ಸಂದೇಶದ ಸುಧೆಯನ್ನು ಹರಸಿದವಳು. ಈಕೆಯ ಆರಾಧ್ಯ ದೇವತೆ ಗುಡ್ಡಾಪುರದ ಸೋಮನಾಥ ದೇವರು. ವಚನಗಳನ್ನು ಬರೆಯದಿದ್ದರೂ, ರಾಮೇಶ್ವರದವರೆಗೂ ವೀರಶೈವ ಧರ್ಮವನ್ನು ಪ್ರಸಾರಮಾಡಿದುದಲ್ಲದೆ, ರಾಮೇಶ್ವರದಲ್ಲಿ ಬಸವೇಶ್ವರರ ಗುಡಿ ಪ್ರತಿಷ್ಠಾಪನೆ ಮಾಡಿ ಬಂದಿದ್ದಾಳೆ. ಸಾವಿರಾರು ಜನರಿಗೆ ಲಿಂಗದೀಕ್ಷೆಯನ್ನು ಕೊಟ್ಟು ಬಸವಣ್ಣನವರು, ಮಹಿಳೆಯರು ಎಲ್ಲ ವಿಧದಲ್ಲೂ ಪುರುಷರಿಗೆ ಸಮಾನರು ಎಂಬುದನ್ನು ಧಾರ್ಮಿಕ ಕ್ಷೇತ್ರದಲ್ಲಿ ಪುರುಷನಿಗೆ ಸಮಾನವಾಗಿ ಕೆಲಸ ನಿರ್ವಹಿಸಿ ಬಸವತತ್ತ್ವವನ್ನು ಬದುಕಿ ತೋರಿಸಿದಳು. ಲಕ್ಕಣ ದಂಡೇಶನ ಶಿವತತ್ತ್ವಚಿಂತಾಮಣಿಯಲ್ಲಿ ಈಕೆಯ ಚರಿತ್ರೆಯು ಉಲ್ಲೇಖಿಸಲ್ಪಟ್ಟಿದೆ. ಆಕೆಯದಾದ ಒಂದು ಪುರಾಣವನ್ನೂ ಬರೆದಿದ್ದಾರೆ. ಸಿದ್ಧೇಶ್ವರ ಪುರಾಣ ಮುಂತಾದ ಕಾವ್ಯಗಳಲ್ಲಿ ಆಕೆಯ ಕುರಿತಾದ ಚರಿತ್ರಾಂಶಗಳಿವೆ. ಗಣ ಸಹಸ್ರದಲ್ಲಿ ಆಕೆಯ ನಾಮ ನಿರ್ದೇಶನವಿದೆ. ಅಲ್ಲದೆ ಆಕೆಯನ್ನೂ ಕುರಿತು ಅನೇಕ ಶಿಲಾ ಶಾಸನಗಳಿವೆ. ಅವುಗಳಲ್ಲಿ ಕ್ರಿ.ಶ. ೧೧೮೪ರ ಇಂಗಳಿಗಿ ಶಾಸನ ೧೨೦೯ ತಾಳಿಕೋಟಿ ಶಾಸನ, ಅಲಂಪುರದ ೧೨೮೪-೧೩೩೪ರ ಅವಧಿಯ ಶಾಸನಗಳನ್ನು ಹೆಸರಿಸಬಹುದು. ಗುಡ್ಡಾಪುರದ ಶಾಸನಗಳು, ಆಂಧ್ರಪ್ರದೇಶದ ವರ್ಧಮಾನಪುರದ ಶಾಸನ ಮುಂತಾದ

ಶಾಸನಗಳು ಗುಡ್ಡವೆಯ ನಾಮನಿರ್ದೇಶನವನ್ನು ಗಮನಾರ್ಹವಾಗಿ ಮಾಡಿವೆ' ಆದರೂ ದಾನಮ್ಮನ ಸಮಗ್ರವಾದ ಚಿತ್ರವು ಶ್ರೀಮತಿ ಶಾಂತಾದೇವಿ ಮಾಳವಾಡರು 'ದಾನದಾಸೋಹಿ ದಾನಮ್ಮ' ಪುಸ್ತಕ ಪ್ರಕಟಿಸುವ ತನಕ ಎಲ್ಲಿಯೂ ದೊರೆತಿರಲಿಲ್ಲ. ಈ ಕೃತಿ ಇತಿಹಾಸ ಮತ್ತು ಕಾದಂಬರಿಗಳ ಹೆಗಲಮೇಲೆ ನಿಂತಿದೆಯೆಂದು, ಡಾ|| ಆರ್.ಸಿ.ಹಿರೇಮಠರು ಉಲ್ಲೇಖಿಸಿದ್ದಾರೆ.

ಅನಂತರಾಮ ಮತ್ತು ಶಿರಸಮ್ಮ ಭಕ್ತಿವಂತರಾದ ವಿಶ್ವಕರ್ಮ ದಂಪತಿಗಳು. ಅವರಿಗೆ ಬಹುಕಾಲದವರೆಗೆ ಮಕ್ಕಳಿರಲಿಲ್ಲ. ಹೀಗಾಗಿ ಅವರ ದುಃಖ ಹೇಳಲಾರದು. ತಮ್ಮ ಮನೆದೇವರಿಗೆ ಹರಕೆ ಹೊತ್ತರು, ಬೇಡಿಕೊಂಡರು ಹೆಣ್ಣಾಗಲಿ, ಗಂಡಾಗಲಿ, ಒಂದು ಮಗುವಾದರೆ ಸಾಕೆಂದು ಹಂಬಲಿಸುತ್ತಿದ್ದರು. ಶಿರಸಮ್ಮ ನಾಲ್ಕು ಜನ ಹೆಂಗಳೆಯರೊಡನೆ ಕೂಡಿದಾಗೆಲ್ಲಾ ತನಗೆ ಮಕ್ಕಳಿಲ್ಲದ ಪ್ರಸ್ತಾಪ ಬರುತ್ತಿತ್ತು. ಆಗ ಆ ತಾಯಿಯ ಮನಸ್ಸು ನೋವಿನಿಂದ ಮುದುಡಿ ಮುದ್ದೆಯಾಗುತ್ತಿತ್ತು. ಅವರ ಭಕ್ತಿಯ ಫಲವೋ ಎಂಬಂತೆ ವಿವಾಹವಾಗಿ ಹತ್ತು ವರುಷಗಳಾದ ನಂತರ ಶಿರಸಮ್ಮ ಗರ್ಭಿಣಿಯಾದಳು. ನವಮಾಸ ತುಂಬಿ ಒಂದು ದಿನ ಹೆಣ್ಣುಮಗುವಿಗೆ ಜನ್ಮವಿತ್ತಳು. ಹರಿದಾಟ ಓಡಾಟ ನಿಂತು ಮನ ನಂದನವನವಾಯಿತು. ಬಾಲ್ಯದಿಂದಲೇ ತಂದೆ-ತಾಯಿಗಳು ಮಗಳಿಗೆ ಶಿವಾನುಭವವನ್ನು ಅರುಹುತ್ತಾ ಬೆಳೆಸಿದರು.

ಸ್ವಲ್ಪ ದೊಡ್ಡವಳಾದನಂತರ ಬಸವೇಶ್ವರನಿಂದ ಶಿವಾನುಭವವನ್ನು ಅರಿಯಬೇಕೆಂದು ಕಲ್ಯಾಣಕ್ಕೆ ಹೋದಳು. ಅಲ್ಲಿ ಶಿವಯೋಗದ ಸಾಧನೆ ಮಾಡಿ ಅದರ ಬಲದಿಂದ ಜನ ಕಷ್ಟ, ಚಿಂತನೆಗಳನ್ನು ದೂರ ಮಾಡುತ್ತಿದ್ದಳು. ನಂತರದ ದಿನಗಳಲ್ಲಿ ಕಲ್ಯಾಣದಲ್ಲಿ ಮಧುವರಸ ಮತ್ತು ಹರಳಯ್ಯನಲ್ಲಿ ಬೀಗತನವಾದ ಕಾರಣದಿಂದಾಗಿ, ರಾಜನು ಅವರನ್ನು ಕೊಲ್ಲಿಸಿದನು. ಇದರ ಫಲವಾಗಿ ದಂಗೆಯುಂಟಾಗಲು ಶರಣರೆಲ್ಲರು ಕಲ್ಯಾಣಬಿಟ್ಟು ಹೊರಟರು. ಆಗ ಲಿಂಗಮ್ಮನೂ ಸಹ (ದಾನಮ್ಮನೆಂಬ ಹೆಸರನ್ನು ಪಡೆದು) ತನ್ನ ಊರಾದ ಉಮರಾಣಿಗೆ ಹಿಂತಿರುಗಿ ಬಂದಳು.

ಶರಣರಿಗೆ ವಿವಾಹ ನಿಷಿದ್ಧವಲ್ಲ. ವಿವಾಹ ಮಾಡಿಕೊಳ್ಳುವುದು ಅಥವಾ ಬಿಡುವುದು ಅವರವರ ಇಷ್ಟ, ಅದು ಶರಣ ಸಾಧನೆಗೆ ಅಡ್ಡಿಯಲ್ಲ ಅಥವಾ ಪ್ರೋತ್ಸಾಹಕರವೂ ಅಲ್ಲ ಎಂದು ತಿಳಿದಿದ್ದ ಆಕೆ ತಮ್ಮ ಊರಿನ ಸಮೀಪದ ಸಂಕಗ್ರಾಮದ ಸಂಗಮನಾಥನೆಂಬ ಶಿವಶರಣನನ್ನು ವಿವಾಹವಾದಳು. ನಂತರ ಸಂಕದ ಸಮೀಪವಿರುವ ಗುಡ್ಡಾಪುರ ಸೋಮೇಶ್ವರನ ದೇವಸ್ಥಾನದ ಹತ್ತಿರದ ಸ್ಥಳವು ಲಿಂಗಾನುಸಂಧಾನಕ್ಕೆ ಯೋಗ್ಯವಾದ ಸ್ಥಳವೆಂದು ಗುರುತಿಸಿ, ಪತಿ-ಪತ್ನಿಯರು ಅಲ್ಲಿ ವಾಸಿಸಹತ್ತಿದರು.

## ಧರ್ಮಪ್ರಸಾರ–ಭಕ್ತಿಸೇವೆ

ಇದೇ ಸಮಯದಲ್ಲಿ ಕಲ್ಯಾಣದ ಸ್ಥಿತಿ ಮತ್ತು ಹದಗೆಟ್ಟಿತು. ಪರವಾದಿಗಳೂ ಶರಣರಿಗೂ ಹೋರಾಟವಾಗಿ, ಪರವಾದಿಗಳು ಶರಣ ತತ್ತ್ವ ಪ್ರಚಾರಕ್ಕೆ ಅಡ್ಡಿ ಮಾಡಿದರು. ಶಿವದೇವಾಲಯಗಳನ್ನು ಭ್ರಷ್ಟಗೊಳಿಸಿದರು. ಇದರಿಂದ ಸಿಟ್ಟಿಗೆದ್ದ ಶರಣರು ಧರ್ಮಪ್ರಸಾರ ಕಾರ್ಯವನ್ನು ಚುರುಕುಗೊಳಿಸಿದರು. ಯುದ್ಧಗಳನ್ನು ಸಹ ಮಾಡಿದರು. ಆಗ ದಾನಮ್ಮನೂ ಸಹ ಸಾಹಸದಿಂದ ಹೋರಾಡಿದಳು.

ಪತಿ–ಪತ್ನಿಯರಿಬ್ಬರೂ ಶ್ರೀಶೈಲ, ಆದಿವಾಸಿಗಳ ಕಡೆ ಹೋಗಿ ತತ್ತ್ವ ಪ್ರಸಾರ ಮಾಡಿದುದಲ್ಲದೆ, ದಾನಮ್ಮನು ತನ್ನ ಶಿವಾನುಭವ ಬಲದಿಂದ ಪವಾಡ ಸದೃಶ ಕಾರ್ಯಗಳನ್ನು ಎಸಗಿ, ಜನರ ಮೆಚ್ಚುಗೆಗೆ, ಪೂಜ್ಯತೆಗೆ ಒಳಗಾದಳು. ಅನೇಕರು ಆಕೆಯಿಂದ ಶಿವದೀಕ್ಷೆಯನ್ನು ಪಡೆದರು. ಶರಣರು ದೀಕ್ಷೆಕೊಡುವ ಅಧಿಕಾರವನ್ನು ಮಹಿಳೆಯರಿಗೂ ಕೊಡಮಾಡಿದ್ದರು. ಅದನ್ನು ದಾನಮ್ಮ ಕಾರ್ಯಗತ ಮಾಡಿ ತೋರಿಸಿದಳು. ಅನೇಕರಿಗೆ ಲಿಂಗಧಾರಣೆಯನ್ನು ಸಹ ಮಾಡಿದಳು.

ಆಲಂಪುರದಲ್ಲಿ ಪರವಾದಿಗಳು ಬಾಲಬ್ರಹ್ಮೇಶನ ವಿಗ್ರಹವನ್ನು ಕಿತ್ತೊಗೆದು, ಅಲ್ಲಿ ವಿಷ್ಣುವಿನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಇದನ್ನು ತಿಳಿದ ದಾನಮ್ಮ ರಥಾರೂಢಳಾಗಿ ಸಾವಿರಾರು ಭಕ್ತರನ್ನು ಕೂಡಿಸಿಕೊಂಡು, ಸೇನೆಕಟ್ಟಿಕೊಂಡು ಬಂದು, ಪರವಾದಿಗಳೊಡನೆ ಕಾದಿ, ಜಯಹೊಂದಿ ಗರ್ಭಗುಡಿಯಲ್ಲಿ ಪುನಃ ಬಾಲಬ್ರಹ್ಮೇಶಲಿಂಗದ ಪ್ರತಿಷ್ಠಾಪನೆ ಮಾಡಿದಳು. ದಕ್ಷಿಣದ ಮೈಸೂರು, ರಾಮೇಶ್ವರ, ಕಂಚಿ ಪ್ರದೇಶಗಳಿಗೂ ಹೋಗಿ, ಧರ್ಮಪ್ರಚಾರ ಮಾಡಿರುವುದಲ್ಲದೇ, ಅನೇಕರಿಗೆ ಲಿಂಗ ದೀಕ್ಷೆಯನ್ನು ಕೊಟ್ಟಳೂ. ರಾಮೇಶ್ವರಕ್ಕೆ ಎಲ್ಲಾ ಕಡೆಯಿಂದಲೂ ಲೆಕ್ಕವಿಲ್ಲದಷ್ಟು ಭಕ್ತಾದಿಗಳು ಬರುವುದರಿಂದ ಅವರಿಗೆಲ್ಲಾ ಬಸವೇಶ್ವರನ ಪರಿಚಯವಾಗಲಿ ಎಂದು ಅಲ್ಲಿ ಬಸವಣ್ಣನ ಗುಡಿಯನ್ನು ಕಟ್ಟಿಸಿದಳು.

ಸೊನ್ನಲಾಪುರಕ್ಕೆ ಹೋಗಿ ಸಿದ್ಧರಾಮಯ್ಯನಿಂದ ಶಿವಯೋಗದ ವಿಚಾರಗಳನ್ನು ಪತಿ–ಪತ್ನಿಯರಿಬ್ಬರು ತಿಳಿದುಕೊಂಡರು. ನಂತರ ಕೂಡಲಸಂಗವು, ಬಾಗೇವಾಡಿಗಳಿಗೂ ಬಂದು ಬ್ರಾಹ್ಮಣರನ್ನೊಳಗೊಂಡು ಎಲ್ಲರಿಗೂ ಶಿವಾನುಭವದ ಉಪದೇಶ ಮಾಡಿದಳು. ಎಲ್ಲಾ ಕಡೆ ಧರ್ಮಪ್ರಸಾರಮಾಡಿ, ಲಿಂಗಧಾರಣೆ ಮಾಡುತ್ತಾ, ಅವಶ್ಯಕವಿದ್ದವರಿಗೆ ದೀಕ್ಷೆ ಕೊಡುತ್ತಾ ಕೊನೆಗೆ ತಾವು ಮೊದಲು ಲಿಂಗಾನುಸಂಧಾನ ಮಾಡಿದ ಗುಡ್ಡಾಪುರಕ್ಕೆ ಬಂದರು. ಕೆಲಕಾಲನಂತರ ಅಲ್ಲಿಯೇ ಐಕ್ಯಳಾದಳು.

ದಾನಮ್ಮ ಜನರ ಕಷ್ಟಗಳನ್ನು ಪವಾಡವೆಂಬಂತಹ ರೀತಿಯಲ್ಲಿ ಪರಿಹರಿಸುತ್ತಿದ್ದುದರಿಂದ ಜನರು ಆಕೆಯ ಬಗ್ಗೆ ದೇವರಲ್ಲಿ ಇಟ್ಟಿದ್ದ ಭಕ್ತಿ

ಶ್ರದ್ಧೆಯನ್ನಿಟ್ಟಿದ್ದರು. ಹೀಗಾಗಿ ಆಕೆಯ ಸಮಾಧಿ ಇರುವ ಕಡೆ ಒಂದು ದೇವಸ್ಥಾನವನ್ನು ಗುಡ್ಡಾಪುರದಲ್ಲಿ ಕಟ್ಟಿದ್ದಾರೆ. ಈಗಲೂ ಈಕೆಗೆ ಸಹಸ್ರಾರು ಜನ ಭಕ್ತರು ನಡೆದುಕೊಳ್ಳುತ್ತಾ; ದಿನಕ್ಕೆ ಮೂರು ವೇಳೆ ಪೂಜೆಯಾಗುತ್ತದೆ. ಬೆಳಗಿನ ಪೂಜೆಗೆ ಯುವತಿಯ ಅಲಂಕಾರವನ್ನು ಮಧ್ಯಾಹ್ನದಲ್ಲಿ ಮಧ್ಯವಯಸ್ಸಿನ ಮಹಿಳೆಯ ಅಲಂಕಾರವನ್ನು ಸಂಜೆಗೆ, ವೃದ್ಧಾಪ್ಯದ ಅಲಂಕಾರವನ್ನು ಮಾಡಿ ಪೂಜಿಸುತ್ತಾರೆ. ಭಕ್ತಿಯಿಂದ, ನಿಷ್ಠೆಯಿಂದ, ಶ್ರದ್ಧೆಯಿಂದ, ಮಡಿಯಿಂದ ನಡೆದುಕೊಳ್ಳುವ ಭಕ್ತರ ಸಂಖ್ಯೆ ದಿನ–ದಿನಕ್ಕೂ ಹೆಚ್ಚುತ್ತಿದೆ.

■

## ೮. ಹಡಪದಪ್ಪಗಳ ಪುಣ್ಯ ಸ್ತ್ರೀ ಲಿಂಗಮ್ಮ

ಕ್ಷೌರಿಕ ಕಾಯಕದ ಹಡಪದ ಅಪ್ಪಣ್ಣಗಳ ಸತಿ ಲಿಂಗಮ್ಮ. ಅಪ್ಪಣ್ಣ ಮತ್ತು ಲಿಂಗಮ್ಮ ಶರಣರಾಗಿ ಬಾಳಿದರು ಎಂಬುದು ವಿಷಯಗಳು ಅವರುಗಳೇ ಬರೆದ ವಚನಗಳಿಂದಲೂ ಅವರ ಬಗ್ಗೆ ಬೇರೆ ಶರಣರು ಬರೆದ ವಚನಗಳಲ್ಲಿ ಕಾಣಬರುವ ಅಂಶಗಳಿಂದಲೂ ತಿಳಿದು ಬರುತ್ತವೆ. ಬೇರೆ ಯಾವ ವೀರಶೈವ ಕಾವ್ಯದಲ್ಲೂ ಈಕೆಯ ಬಗ್ಗೆ ಮಾಹಿತಿ ಸಿಕ್ಕುವುದಿಲ್ಲವಾದರೂ ಗುರುರಾಜ ಚರಿತ್ರೆಯಲ್ಲಿ 'ಚಾರುಗುರು ಭಕ್ತಿಲಿಂಗಮ್ಮ' ಎಂಬ ಹೇಳಿಕೆ ಮಾತ್ರ ಇದೆ. ಈಕೆಯು ಗುರು ಚನ್ನಮಲ್ಲೇಶನೆಂಬುದನ್ನು ಈಕೆಯು ಬರೆದ ವಚನಗಳ ಆಧಾರದಿಂದ ತಿಳಿದುಕೊಳ್ಳಬಹುದಾಗಿದೆ.

ಹಡಪದ ಲಿಂಗಮ್ಮ ಸಮಾಜದ ದೃಷ್ಟಿಯಲ್ಲಿ ಕೀಳೆಂದು ಪರಿಗಣಿಸಲ್ಪಟ್ಟ ಕುಲದಲ್ಲಿ ಹುಟ್ಟಿ, ಶರಣರ ಪ್ರಭಾವದಿಂದ ಉತ್ತಮ ಮಟ್ಟವನ್ನು ಮುಟ್ಟಿದಳೆಂದು ಆಕೆಯ ವಚನದಿಂದ ಗ್ರಹಿಸಬಹುದಾಗಿದೆ. ಆಕೆ, ಒಂದು ವಚನದಲ್ಲಿ,

ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ,
ಸತ್ಯ ಶರಣರ ಪಾದವಿಡಿದೆ, ಆ ಶರಣರ ಪಾದವಿಡಿದು
ಗುರುವ ಕಂಡೆ, ಲಿಂಗವ ಕಂಡೆ, ಜಂಗಮವ ಕಂಡೆ,
ಪಾದೋದಕವ ಕಂಡೆ, ಪ್ರಸಾದವ ಕಂಡೆ ಇಂತಿವರ ಕಂಡೆನ್ನ
ಕಂಗಳ ಮುಂದಣ ಕತ್ತಲೆ ಹರಿಯಿತ್ತು ಕಂಗಳ ಮುಂದಣ ಕತ್ತಲೆ
ಹರಿಯಲೊಡನೆ ಮಂಗಳದ ಮಹಾಬೆಳಗಿನಲ್ಲಿ
ಲೋಲಾಡಿ ಸುಖಿಯಾದೆನಯ್ಯಾ

ಎಂದು ಹೇಳಿ, ತನ್ನ ಬಗೆಗೆ ಸ್ವಲ್ಪ ವಿಷಯ ತಿಳಿವಂತೆ ಮಾಡಿದ್ದಾಳೆ. ಈಕೆಯ ವಚನಗಳ ಸಹಾಯದಿಂದ ಆಕೆಯ ಶರಣ ಮನೋಭಾವವನ್ನು, ಶರಣ ನೀತಿಯನ್ನು, ಶರಣರಾಗಲು ಆವಶ್ಯವಾದ ಅಂಶಗಳೇನು ಎಂಬುದನ್ನು ಅರಿತುಕೊಳ್ಳಬಹುದಾಗಿದೆ. ಆಕೆಯು ಬರೆದ ೧೧೩ ವಚನಗಳು ಒಂದು ಮಂತ್ರಗೋಪ್ಯ ಹಾಗೂ ಒಂದು ಸ್ವರವಚನ ದೊರೆತಿವೆ. 'ಅಪ್ಪಣ್ಣ ಪ್ರಿಯ ಚನ್ನಬಸವಣ್ಣ' ಎಂಬುದು ಈಕೆಯ ವಚನಾಂಕಿತ; ಈಕೆಯ ವಚನಗಳಲ್ಲಿ ತತ್ವಬೋಧೆಯೇ

ಪ್ರಧಾನವಾಗಿ ಕಾಣುವುದರಿಂದ ಈಕೆಯ ವಚನಗಳನ್ನು ಲಿಂಗಮ್ಮನ ಬೋಧನೆಯ ವಚನಗಳು ಎಂದೇ ಕರೆಯುವುದು ವಾಡಿಕೆಯಾಗಿದೆ.

ಶರಣರಲ್ಲಿ ಲಿಂಗಪತಿ ಎಂಬ ಭಾವನೆ ಇದೆ. ಆದುದರಿಂದ ಈಕೆ ಪತಿಯನ್ನೇ ಲಿಂಗವಾಗಿ ಭಾವಿಸಿ, 'ಹಡಪದಪ್ಪಣ್ಣನೇ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡನೆಂದು ಹೇಳಿರುವ ಆಕೆ, ತನ್ನ ಪತಿ ಮತ್ತು ತನ್ನ ಇಷ್ಟಲಿಂಗ ಇಬ್ಬರೂ ಒಂದೇ ಎಂಬ ಭಾವವನ್ನು ವ್ಯಕ್ತಪಡಿಸಿದ್ದಾಳೆ. ಆಕೆ ಅಂದಿನ ಸ್ತ್ರೀಯ 'ಪತಿಯೇ ಸರ್ವಸ್ವ ಭಾವವನ್ನೂ ಉಳಿಸಿಕೊಂಡು, ಶರಣರಿಗೆ ಲಿಂಗವೇ ಪತಿ' ಎಂಬ ತತ್ತ್ವವನ್ನು ಅದರಲ್ಲಿ ಅಳವಡಿಸಿಕೊಂಡ ಸದ್ಗೃಹಿಣಿ ಹಾಗೂ ಸತ್‌ಶರಣೆ.

**ಸಾಧನೆಯ ಹಾದಿಯಲ್ಲಿ**

ಸಾಧನೆಯ ಪ್ರಾರಂಭದೆಸೆಯಲ್ಲಿ ಲಿಂಗಮ್ಮನಿಗೂ ಮನಸ್ಸನ್ನು ಹಿಡಿತಕ್ಕೆ ತಂದುಕೊಳ್ಳುವುದು ಸುಲಭದ ಮಾತಾಗಿಲ್ಲ. ಪಂಚೇಂದ್ರಿಯಗಳು ತಮ್ಮ ಸಹಜಗುಣದಂತೆ ಮೇರೆದಪ್ಪಿ ಹೋಗಿ ವಿಷಯ ಸುಖಕ್ಕೆ ಎಳೆಸಿದಾಗ, ಅವಳು ತಾನು ಮನಸ್ಸನ್ನು ನಿಗ್ರಹಿಸಿ, ಶರಣ ಜೀವನ ಬದುಕಿದ ಬಗೆಯನ್ನು,

ನೆನೆವುತ್ತಿದೆ ನನ್ನ ಮನ ದುರ್ವಾಸನೆಗೆ ಹರಿವುತ್ತಿದೆ ಮನ,
ಕೊನೆಗೊಂಬೆಗೆ ಎಳೆವುತ್ತಿದೆ ಮನ,
ಕಟ್ಟಿಗೆ ನಿಲ್ಲಲು ಮನ, ಬಿಟ್ಟಡೆ ಹೋಗದು ಮನ
ತನ್ನಿಚ್ಛೆಯಲ್ಲಾಡುವ ಮನವ ಕಟ್ಟಿಗೆ ತಂದು, ಗೊತ್ತಿಗೆ ನಿಲಿಸಿ,
ಬಚ್ಚಬರಿಯ ಬಯಲಿನೊಳಗೆ ಓಲಾಡುವ
ಶರಣರ ಪಾದದಲ್ಲಿ ನಾ ಬೆಚ್ಚಂತಿದ್ದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.

ಎಂಬ ವಚನದಲ್ಲಿ ತಿಳಿಸಿದ್ದಾಳೆ. ತನ್ನ ಅನುಭವವನ್ನು ಆಧರಿಸಿ 'ಘನ'ವನ್ನು ಕಾಣಲು ಮನವು ಹೇಗಿರಬೇಕೆಂಬುದನ್ನು, ಬಹಳ ಹೃದಯಂಗಮವಾಗಿ,'

"ಗಾಳಿ ಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ,
ಬೆಳಗಿದ ದರ್ಪಣದಂತೆ, ನಿರ್ಮಲವಾದಲ್ಲದೆ
ಆ ಘನವ ಕಾಣಬಾರದು" ಎಂದು ವಿವರಿಸಿದ್ದಾಳೆ.

ಅಲ್ಲದೆ, ಮನವು ಪರಿಶುದ್ಧವಾಗಲು, ಪ್ರಕಾಶಮಾನವಾಗಲು, ದೋಷಮುಕ್ತವಾಗಲು, ಆ ಮೂಲಕ ಮಹಾಮಂಗಳದ ಬೆಳಗನ್ನು ಕಾಣಬೇಕಾದರೆ, ಹೇಗಿರಬೇಕು ಏನು ಮಾಡಬೇಕೆಂಬುದನ್ನು ಬಹಳ ಸರಳವಾಗಿ ಆದರೆ ದೃಢವಾಗಿ,

ಅಯ್ಯಾ ಈ ಮಹಾಘನವ ಕಾಂಬುದಕ್ಕೆ
ಹಸಿವು ಕೆಡಬೇಕು; ತೃಷೆಯಡಗಬೇಕು; ವ್ಯಸನ ನಿಲ್ಲಬೇಕು;
ನಿದ್ರೆ ಹರಿಯಬೇಕು; ಜೀವನ ಬುದ್ಧಿ ಹಿಂಗಬೇಕು;
ಮನ ಪವನ ಬಿಂದು ಒಡಗೂಡಬೇಕು
ಚಿತ್ತ ಒತ್ತಟ್ಟಿಗೆ ಹೋಗದಿರಬೇಕು.
ಹೊತ್ತು ಹೊತ್ತಿಗೆ ಉತ್ತರವನೇರಿ ಬೆಚ್ಚು ಬೇರಿಲ್ಲದೆ
ಲಿಂಗದೊಳಗೆ ಅಚ್ಚೊತ್ತಿದಂತೆ ಬೆರೆದೊಡೆ,
ಕತ್ತಲೆ ಹರಿವುದು. ಮರವೆ ಹಿಂಗುವುದು, ನಿದ್ರೆ ಹರಿವುದು
ಹಸಿವು ಕೆಡುವುದು, ತೃಷೆಯಡಗುವುದು, ವ್ಯಸನ ನಿಲುವುದು
ಇವೆಲ್ಲವನು ಹಿಂಗಿಸಿ, ತಾ ಲಿಂಗವ್ಯಸನಿಯಾಗಬಲ್ಲಡೆ,
ಮುಂದೆ ಮಹಾಮಂಗಳದ ಬೆಳಗು ಕಾಣಿಪುದೆಂದ
ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ ಎಂದು ಹೇಳಿದ್ದಾಳೆ

ಇದೇ ರೀತಿ ಅನೇಕ ವಿಧದಲ್ಲಿ ಲಿಂಗಮ್ಮನು ಸಾಧಕರಿಗೆ ತತ್ತ್ವಬೋಧೆಯ ವಚನಗಳ ಮೂಲಕ ಮಾರ್ಗದರ್ಶನ ಮಾಡಿದ್ದಾಳೆ. ಹೀಗೆ ಮಾರ್ಗದರ್ಶನ ಮಾಡಿರುವ ವಚನಗಳು ಹಲವಾದರೆ, ಟೀಕಾತ್ಮಕವಾದ ವಚನಗಳನ್ನು ಬರೆದು ಅಂತರಂಗದಲ್ಲಿ ಒಂದು ವಿಧವಾದ ಭಾವನೆಯನ್ನಿಟ್ಟುಕೊಂಡು ಬಹಿರಂಗದಲ್ಲಿ ಸಾತ್ವಿಕರಂತೆ ನಟಿಸುವವರ, ತಾವು ತುಂಬಾ ಕಲಿತವರೆಂದು ಅಹಂಕಾರದಿಂದ ನಡೆಯುವ ಗರ್ವಿಗಳು, 'ಆಸೆ-ರೋಷಗಳಿಗೆ ಒಳಗಾದ ಹೇಸಿಗಳು, ಶರಣಗುಣವಿಲ್ಲದ ಅವಿವೇಕಿಗಳ ಬಗ್ಗೆ ಬೇಸರದ ಮಾತನ್ನಾಡಿದ್ದಾಳೆ. ಈಕೆಯ ವಚನಗಳಲ್ಲಿ ಜ್ಞಾನ ಪರಭಾಷೆಯನ್ನು, ಬೆಡಗಿನ ಭಾಷೆಯನ್ನು, ಸರಳ ಹಾಗೂ ನೇರಭಾಷೆಯನ್ನು, ಪರಿಸರ ಪ್ರೇರಿತ ನಾದ ಸಹಜ ಸುಂದರ ಉಪಮೆಗಳನ್ನು ಆಕರ್ಷಕವಾದ ಶೈಲಿಯನ್ನು ಕಾಣಬಹುದು.

ಲಿಂಗಮ್ಮನದೊಂದು ವಿಶಿಷ್ಟ ವ್ಯಕ್ತಿತ್ವ; ಸಾಮಾನ್ಯತ್ವದಿಂದ ಅಸಮಾನ್ಯತ್ವಕ್ಕೆ ಏರಿರುವ ಅಂಶವನ್ನು ಅವಳ ವಚನಗಳೇ ನಮಗೆ ಮನದಟ್ಟು ಮಾಡಿಕೊಡುತ್ತವೆ. ಅವಳ ಈ ಅಪರೂಪದ ವ್ಯಕ್ತಿತ್ವ ಬಹಳ ಕಾಲದವರೆಗೆ ಜನಸಾಮಾನ್ಯರ ಗಮನಕ್ಕೆ ಬಂದಿರಲಿಲ್ಲ. ಜನ ಸಾಮಾನ್ಯರಿಗೂ ಸುಲಭ ಗ್ರಾಹ್ಯವಾಗುವಂತಹ ರೀತಿಯಲ್ಲಿ ಆಕೆಯ ವಚನಗಳಿರುವುದರಿಂದ ಸಾಮಾನ್ಯರೂ ಸಹ ಓದಿ ಅವುಗಳ ಲಾಭ ಪಡೆಯಬಹುದಾಗಿದೆ.

## ೯. ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ

ಕಾಳವ್ವೆಯು ದಲಿತ ಶರಣನಾದ ಉರಿಲಿಂಗಪೆದ್ದಿಗಳ ಪತ್ನಿ. ಏಕೈಕ ದಲಿತ ವಚನಕಾರ್ತಿಯೆಂದು ಸಂಶೋಧಕರು ಗುರುತಿಸಿದ್ದಾರೆ. ಉರಿಲಿಂಗಪೆದ್ದಿಯು ಕಳವು ಮಾಡುತ್ತಾ ಬದುಕುತ್ತಿದ್ದ. ಒಂದು ದಿನ ಕಳ್ಳತನಕ್ಕೆಂದು ಒಂದು ಮನೆಗೆ ಹೋದಾಗ ಅಲ್ಲಿ ದೀಕ್ಷಾಕಾರ್ಯಕ್ರಮವು ನಡೆಯುತ್ತಿತ್ತು. ತಾನು ಬಂದ ಕೆಲಸವನ್ನು ಮರೆತು, ಮರೆಯಲ್ಲಿ ಕುಳಿತು ಆಸಕ್ತಿಯಿಂದ ಅದನ್ನೆಲ್ಲಾ ಗಮನಿಸಿದನು. ಅದರಿಂದ ಪ್ರಭಾವಿತನಾಗಿ ಮುಂದೆ ಕಳ್ಳತನವನ್ನು ಬಿಟ್ಟು, ಗುರು ಸೇವೆ ಮಾಡಿ, ಅವರ ಮನ ಒಲಿಸಿ ಅವರಿಂದ ವೀರಶೈವ ದೀಕ್ಷೆಯನ್ನು ಪಡೆದನು. ಪತಿಯ ಪ್ರಭಾವದಿಂದ ಕಾಳವ್ವೆಯೂ ಶರಣ ಜೀವನಕ್ಕೆ ಒಳಗಾಗಿ ಶರಣೆಯಾದುದು ಒಂದು ವಿಶೇಷ. ಈಕೆಯು ಬರೆದ ಹದಿಮೂರು ವಚನಗಳು ದೊರೆತಿವೆ. ಈಕೆಯ ವಚನಾಂಕಿತ, 'ಉರಿಲಿಂಗ ಪೆದ್ದಿಗಳರಸ' ಎಂಬುದು, ಹುಟ್ಟುತ್ತ ಶೂದ್ರ ಕುಲಜಳಾದ ಈಕೆ ಪರಿಸರದ ಮತ್ತು ಪತಿಯ ಪ್ರಭಾವದಿಂದ ಶರಣೆಯಾದಳು; ಕನ್ನಡ, ಸಂಸ್ಕೃತ ಭಾಷೆಗಳೆರಡಲ್ಲೂ ಪರಿಣಿತಳಾದಳು.

ಕಾಳವ್ವೆಯು ತನ್ನ ವಚನಗಳಲ್ಲಿ 'ವ್ರತಕ್ಕೆ' ಬಹಳಷ್ಟು ಮಹತ್ವವನ್ನು ಕೊಟ್ಟಿರುವುದನ್ನು ಕಾಣಬಹುದು. ವ್ರತವು ಬಹಳ ಮಹತ್ವವಾದುದು ಅದಿಲ್ಲದೆ, ಲಾಂಛನಗಳು ವ್ಯರ್ಥ. ವ್ರತಹೀನನ ಬದುಕು ಪ್ರಾಣವಿಲ್ಲದ ದೇಹದಂತೆ ವ್ಯರ್ಥವೆಂಬುದು ಅವಳ ನಿಲುವು.

ಆಗಿನ ಕಾಲದಲ್ಲಿ ಉತ್ತಮಕುಲ, ಕನಿಷ್ಟಕುಲ ಎಂಬ ಭಾವನೆ ಬಹಳ ದಟ್ಟವಾಗಿತ್ತು. ಮೇಲ್ಜಾತಿಯವರು ಕೀಳುಜಾತಿಯವರನ್ನು ಬಹು ಅನಾದರಿಂದ, ನಿಕೃಷ್ಟರೀತಿಯಲ್ಲಿ ಕಾಣುತ್ತಿದ್ದರು. ಆಗಿನ ಜಾತಿಯ ವ್ಯವಸ್ಥೆಯಲ್ಲಿ ಬ್ರಾಹ್ಮಣರು ಅತಿ ಉತ್ಕೃಷ್ಟರೂ, ಹೊಲೆಯರೆಂಬುವರು ಅತಿ ನಿಕೃಷ್ಟರೆನ್ನಿಸಿದುದರಿಂದ ಅವರ ಬದುಕು ಉತ್ತಮಕುಲದವರ ಅರ್ಥವಿಲ್ಲದ ನಡವಳಿಕೆಯಿಂದ ತುಂಬಾ ನೋವಿನಿಂದ ಕೂಡಿರುತ್ತಿತ್ತು. ಅಂತಹ ಪರಿಸ್ಥಿತಿಯನ್ನು ಕಾಳವ್ವೆ ಅನುಭವಿಸಿರಬೇಕು ಅಥವಾ ನೋಡಿ ನೊಂದುಕೊಂಡಿರಬೇಕು. ಎಂದು ಅವಳು ಉಚ್ಛ ಕುಲದವರ ಬಗೆಗೆ, ತನ್ನ ವಚನಗಳಲ್ಲಿ ವ್ಯಕ್ತ ಮಾಡಿರುವ ಅಭಿಪ್ರಾಯಗಳಿಂದ ವ್ಯಕ್ತವಾಗುತ್ತದೆ. ಬ್ರಾಹ್ಮಣರ

ಬಗೆಗೆ ಅವಳ ಅಸಮಾಧಾನ ಎಷ್ಟಿತ್ತು ಎಂಬುದನ್ನು ಈ ಕೆಳಗಿನ ವಚನದಿಂದ ಊಹಿಸಿಕೊಳ್ಳಬಹುದಾಗಿದೆ.

ಶಿವಭಕ್ತಹೊತ್ತಾರೆದ್ದು ಗುರುಲಿಂಗ ಜಂಗಮಕ್ಕೆ ಶರಣೆನ್ನದೆ
ಮುಂದೆ ಒಂಟಿ ಬ್ರಾಹ್ಮಣನಕಂಡು ಶರಣಾರ್ಥಿ ಎಂದಡೆ
ಎಂಬತ್ತು ನಾಲ್ಕು ಲಕ್ಷ ಯೋನಿಯಲ್ಲಿ, ಹಂದಿಯ ಬಸುರಲ್ಲಿ
ಒಪ್ಪುದು ತಪ್ಪುದು ಕಾಣಾ ಉರಿಲಿಂಗಪೆದ್ದಿಗಳರಸ ಬಲ್ಲನವ್ವಾ

ಎಂಬ ವಚನ ಉತ್ತಮ ಕುಲದವರ ಆಚರಣೆಗಳು ಕೆಳಮಟ್ಟದವರಲ್ಲಿ ಎಂತಹ ಕಿಚ್ಚನ್ನು ಎಬ್ಬಿಸಿತ್ತು ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು. ಈಕೆಯ ಅಭಿಪ್ರಾಯವನ್ನು ನೋಡಿ ಸಂಶೋಧಕರು ಹೀಗೆ ಹೇಳುವ ಕಾಳವ್ವೆಯ ಮಾತಿನಲ್ಲಿ ಶತಮಾನಗಳಿಂದ ತುಳಸಿಕೊಳ್ಳುತ್ತ ಬಂದ ನೊಂದವರ ನೋವಿನ ಧ್ವನಿ ಅಡಗಿದೆ. ಒಬ್ಬ ಸಾಮಾನ್ಯ ಹೆಣ್ಣು ಮಗಳು ಸ್ಥಾಪಿತ ವ್ಯವಸ್ಥೆಯ ಎದುರು ಹೀಗೆ ದಿಟ್ಟತನದಿಂದ ಧ್ವನಿ ಎತ್ತಿ ನಿಂತುದು ಶರಣರ ಚಳುವಳಿಯ ಸಾರ್ಥಕತೆಗೆ ಒಂದು ಜೀವಂತ ಸಾಕ್ಷಿಯಾಗಿದೆ ಎಂದು ಬರೆದಿರುವುದು ಅತ್ಯಂತ ಸಮಂಜಸವಾಗಿದೆ.

ಡಾ॥ ವಿಜಯ ಶ್ರೀ ಸಬರದ ಅವರು 'ಕಾಳವ್ವೆಯ ನುಡಿಗಳಲ್ಲಿ ಬರೀ ರೊಚ್ಚಿಲ್ಲ; ಬೇರೆಯವರನ್ನು ಟೀಕಿಸುವುದೇ ಆಕೆಗೆ ಪ್ರಮುಖವಲ್ಲ. ಶತ ಶತಮಾನಗಳಿಂದಲೂ ತಮ್ಮ ಪಾಂಡಿತ್ಯ ಪ್ರದರ್ಶಿಸಿದ ವೈದಿಕರಿಗೆ ಹೊಳೆಯದ ಹೊಸ ವಿಚಾರಗಳು ಕಾಳವ್ವೆಯಲ್ಲಿವೆ. ಆಕೆ ಯಾವುದರ ಬಗೆಗೆ ಪ್ರಸ್ತಾಪಿಸಿದರೂ ಆಧಾರ ಸಹಿತವಾಗಿಯೇ ಹೇಳುತ್ತಾಳೆ. ನಿಜವಾದ ಸಂಶೋಧನಾತ್ಮಕ ಗುಣ ಆಕೆಯ ವಚನದಲ್ಲಿ ಎದ್ದು ಕಾಣುತ್ತದೆ. ನೊಂದುಬೆಂದ ನುಡಿಯಲ್ಲಿ ಯಾರೂ ಅಳಿಸಲಾರದ ದಟ್ಟ ಸತ್ಯವಡಗಿದೆ. ಇದು ಕಾಳವ್ವೆಯ ವಚನಗಳ ವೈಶಿಷ್ಟ್ಯ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಹುಟ್ಟಿನಿಂದ ಕೆಳ ದರ್ಜೆಯವಳೆನ್ನಿಸಿದ ಕಾಳವ್ವೆ ಅನುಭವದಿಂದ ಅನುಭಾವಿಯಾಗಿ ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವನ್ನು ಹನ್ನೆರಡನೆಯ ಶತಮಾನದಲ್ಲಿ ಪಡೆದ 'ಶೂದ್ರ ಮಹಿಳೆ' ಪ್ರತಿಭಟನೆ, ವೈಚಾರಿಕತೆ, ನಿರ್ಭಿಡೆ, ಚಿಂತನಾಶೀಲ ಗುಣಗಳನ್ನು ಮೈಗೂಡಿಸಿಕೊಂಡು, ಧೈರ್ಯವಾಗಿ ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಿಸಿದ ಶರಣೆ ಎಂದು ಈಕೆಯನ್ನು ಗುರುತಿಸಬಹುದು.

■

## ೧೦. ಸತ್ಯಾನ್ವೇಷಕಿ ಸತ್ಯಕ್ಕ

ಏಕ ದೇವತಾ ನಿಷ್ಠೆಯ ಸತ್ಯಕ್ಕ ವಿಶಿಷ್ಟ ಶರಣೆ. 'ಶಿವಪಾರಮ್ಯ, ಸದ್ಭಕ್ತರ ಮಹಿಮೆ, ಸತಿಪತಿಭಾವ, ಸದಾಚಾರದಲ್ಲಿ ನಡೆಯುವ ಗುರು-ಶಿಷ್ಯ-ಜಂಗಮರ ಗುಣಲಕ್ಷಣವರ್ಣನೆ, ಡಾಂಬಿಕ ಗುರು-ಶಿಷ್ಯ-ಜಂಗಮರು ಮತ್ತು ಭವಿಗಳ ಟೀಕೆ, ಸ್ತ್ರೀ-ಪುರುಷ ಸಮಾನತೆ' ಇವು ಸತ್ಯಕ್ಕನ ವಚನಗಳಲ್ಲಿ ಅಳವಟ್ಟ ವಿಷಯಗಳು ಈಕೆಯ ನಿಷ್ಠಾಭಕ್ತಿಯ ಕಥೆ ಶಿಷ್ಟ ಹಾಗೂ ಜನಪದ ಸಾಹಿತ್ಯಗಳೆರಡರಲ್ಲೂ ಪ್ರಸಿದ್ಧವಾಗಿದೆ. ಶರಣ ಆದಯ್ಯನೂ ಈಕೆಯ ಬಗ್ಗೆ ಮೆಚ್ಚುಗೆ ಸೂಸಿದ್ದಾನೆ. ಹರಿಹರ ತನ್ನ ಲಿಂಗಾರ್ಚನೆಯ ರಗಳೆಯಲ್ಲಿ ಈಕೆಯನ್ನು ಸ್ತುತಿಸಿದ್ದಾನೆ. ಭೈರವೇಶ್ವರ ಕಾವ್ಯ, ಶಿವತತ್ತ್ವಚಿಂತಾಮಣಿ, ಚನ್ನಬಸವ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಬಸವರಾಜ ವಿಜಯಂ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ, ಪುರಾತನ ದೇವಿಯರ ತ್ರಿವಿಧಿ, ಸರ್ವಜ್ಞನ ವಚನ, ಮುಪ್ಪಿನ ಷಡಕ್ಷರಿಯ ಹಾಡು ಹಾಗೂ ಜನಪದ ಗರತಿಯರು ಈಕೆಯ ಬಗೆಗೆ ಜನ ಸಾಮಾನ್ಯರಿಗೆ ಆಕೆಯ ಹೆಸರಿನ ಹೊರತು ಹೆಚ್ಚಿನ ವಿಚಾರಗಳು ಗೊತ್ತಿಲ್ಲ. ಶರಣತತ್ತ್ವವನ್ನು ಕರತಲಾಮಲಕ ಮಾಡಿಕೊಂಡ ಸುಜ್ಞಾನಿ ಸಂಸ್ಕೃತವೂ ಈಕೆಗೆ ಗೊತ್ತಿರುವಂತೆ ಕಾಣುತ್ತದೆ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ". ಮಂತ್ರ ಮಧ್ಯೇ ಭವೇಲಿಂಗಂ ಲಿಂಗಮಧ್ಯೆ ಭವೇನ್ಮಂತ್ರಂ, ಮಂತ್ರಲಿಂಗ ದ್ವಯೋರ್ಐಕ್ಯಂ ಇಷ್ಟಲಿಂಗಂತು ಶಾಂಕರೀ ಮುಂತಾಗಿ ಅಲ್ಲಲ್ಲೇ ಸಂಸ್ಕೃತ ಪ್ರಯೋಗವನ್ನು ತನ್ನ ವಚನಗಳಲ್ಲಿ ಮಾಡಿದ್ದಾಳೆ. ಅನೇಕ ವಚನಗಳಲ್ಲಿ ದೇವರನ್ನು ಕುರಿತು ಸಮ್ಮುಖದಲ್ಲಿ ಮಾತನಾಡಿದಂತೆ ಮಾತನಾಡಿದ್ದಾಳೆ. ತನ್ನನ್ನು ಈ ಘೋರ ನರಕದಲ್ಲಿ ಏಕೆ ಹುಟ್ಟಿಸಿದೆ ಎಂದು ದೇವರನ್ನು ಕರುಣೆ ಬರುವಂತೆ ಕೇಳಿಕೊಂಡರೆ, ನೀನು ಹೀಗೆ ಮಾಡಿದುದು ಸರಿಯೆ, ಹಾಗೆ ಮಾಡಿದುದು ಸರಿಯೆ ಎಂದು ಭಗವಂತನನ್ನೇ ತರಾಟೆಗೆ ತೆಗೆದುಕೊಂಡಿದ್ದಾಳೆ. ಈಕೆಯ ಬಹಳಷ್ಟು ವಚನಗಳು ತುಂಬಾ ಸರಳ ಹಾಗೂ ನೇರವಾಗಿವೆ. ಕೆಲವು ವಚನಗಳಲ್ಲಿ ಇತರ ವಚನಕಾರರು ಅನುಕರಣೆಯೂ ಕಾಣಬರುತ್ತದೆ.

ಸತ್ಯಕ್ಕನ ಬಗೆಗೆ ದೊರೆತಿರುವ ಮಾಹಿತಿ ಎಂದರೆ ಈಕೆಯ ಸ್ಥಳ ಶಿವಮೊಗ್ಗಾ

ಜಿಲ್ಲೆಯ ಶಿರಾಳಕೊಪ್ಪ ಸಮೀಪದ ಹಿರೇಜಂಬೂರು. ಈಕೆ ಅನುಸರಿಸುತ್ತಿದ್ದ ಕಾರ್ಯ ಶಿವಭಕ್ತರ ಮನೆಯ ಅಂಗಳದ ಕಸಗುಡಿಸುತ್ತಾ ಶಿವಭಕ್ತಿಯನ್ನು ಆಚರಿಸುವುದು. ಈಕೆ 'ಶಿವ'ನನ್ನು ಬಿಟ್ಟು ಅನ್ಯ ದೈವದ ಹೆಸರು ಕೇಳುವುದೂ ಮಹಾಪಾಪವೆಂದು ಬಗೆದಿದ್ದಳು. ಈ ಬಗ್ಗೆ ಒಂದು ಕಥೆ ಈ ರೀತಿ ಇದೆ.

ಒಂದು ದಿನ ಇವಳ ಏಕದೇವೋಪಾಸನಾ ನಿಷ್ಠೆಯನ್ನು ಪರೀಕ್ಷಿಸಲು ಶಿವ ಒಬ್ಬ ಭಿಕ್ಷುಕನ ವೇಷದಿಂದ ಈಕೆಯ ಮನೆಗೆ ಭಿಕ್ಷೆ ಬೇಡಲು ಬಂದನಂತೆ. ಆಗ ಈಕೆ ಅವನ ಜೋಳಿಗೆಗೆ ಧಾನ್ಯವನ್ನು ನೀಡಿದಾಗ, ಹರಿದ ಜೋಳಿಗೆಯಿಂದ, ಧಾನ್ಯ ಕೆಳಗೆ ಬಿದ್ದು ಹೋಯಿತಂತೆ. ಆಗ ಭಿಕ್ಷುಕನು, 'ಹರಿದ ಹರಿಯಿಂದ ಕಾಳು ಹರಿದುಹೋಯ್ತು' ಎಂದನಂತೆ 'ಹರಿ' ಶಬ್ದ ಕಿವಿಗೆ ಬೀಳುತ್ತಲೇ ಸತ್ಯಕ್ಕ ಸಿಟ್ಟಾಗಿ ಕೈಯ್ಯಲ್ಲಿದ್ದ ಸಟ್ಟುಗದಿಂದ ಆ ಭಿಕ್ಷುಕನನ್ನು ಹೊಡೆದಳಂತೆ, ಆಗ ಶಿವನು ಅವಳ ನಿಷ್ಠೆಗೆ ಮೆಚ್ಚಿ ಪ್ರಸನ್ನನಾದನಂತೆ.

ಈ ಕಥೆ, ಅವಳ ಏಕೋದೇವ ನಿಷ್ಠೆಯನ್ನು ಧ್ವನಿಸುತ್ತೆಂಬುದರಲ್ಲಿ ಸಂಶಯವಿಲ್ಲ.

ಸತ್ಯಕ್ಕನು ಇಪ್ಪತ್ತೊಂಬತ್ತು ವಚನಗಳನ್ನು ಬರೆದಿದ್ದಾಳೆ. 'ಜಂಬುಕೇಶ್ವರಾ' ಎಂಬುದು ಈಕೆಯ ವಚನಾಂಕಿತ.

■

## ೧೧. ಅರಿವೇ ಗುರು ಎಂದರಿತ ಅಮುಗೆ ರಾಯಮ್ಮ

ಅಮುಗೆಯ ರಾಯಮ್ಮ ಅತ್ಯಂತ ಹೆಚ್ಚು ವಚನಗಳನ್ನು ರಚಿಸಿದ ವಚನಕಾರ್ತಿಯರಲ್ಲಿ ಒಬ್ಬಳು. ಈಕೆ ೧೧೫ ವಚನಗಳನ್ನು ರಚಿಸಿದ್ದಾಳೆ. ಈಕೆಯ ವಚನಾಂಕಿತ 'ಅಮುಗೇಶ್ವರ' ಮತ್ತು ಅಮುಗೇಶ್ವರಲಿಂಗ' ಎಂಬುದು, ಇದೇ ವಚನಾಂಕಿತದಲ್ಲಿ ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮನ ವಚನ ಎಂಬ ಶೀರ್ಷಿಕೆಯಲ್ಲಿ ವಚನಗಳು ದೊರೆತಿವೆ. ಅಮುಗೆ ದೇವಯ್ಯಗಳ ಪುಣ್ಯಸ್ತ್ರೀಯ ಹೆಸರಿನಲ್ಲಿ ಒಂದು ವಚನ ದೊರೆತಿದೆ. ಅಮುಗೆ ರಾಯಮ್ಮನ ಹೆಸರಿನಲ್ಲಿ ೧೧೪ ಪ್ರತ್ಯೇಕ ವಚನಗಳನ್ನು ಪಂಡಿತರು ಗುರುತಿಸಿದ್ದಾರೆ. ಹೀಗಾಗಿ ಮೂವರೂ ಬೇರೆ-ಬೇರೆಯೇ ಅಥವಾ ಒಬ್ಬರೇ ಈ ವಚನಗಳನ್ನೆಲ್ಲಾ ಬರೆದಿದ್ದಾರೆಯೇ ಎಂಬ ಸಂಶಯಕ್ಕೆ ಗೊಂದಲಕ್ಕೆ ಆಸ್ಪದವಾಗಿದೆ. ಆದರೆ ಶಿವಶರಣೆಯರ ವಚನ ಸಂಪುಟದ ಪ್ರಸ್ತಾವನೆಯಲ್ಲಿ, 'ಇಬ್ಬರು ರಾಯಮ್ಮನ ಹೆಸರಿನ ಶರಣೆಯರಿದ್ದಾರೆ. ಒಬ್ಬಳು ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ, ಮತ್ತೊಬ್ಬಳು ಅಮುಗೆ ದೇವಯ್ಯಗಳ ಪುಣ್ಯಸ್ತ್ರೀ ರಾಯಮ್ಮ. ಈಕೆಗೇ ಅಮುಗೆ ರಾಯಮ್ಮನೆಂದೂ ಕರೆಯಲಾಗುತ್ತದೆ ಎಂದು ಸಮಸ್ಯೆಯನ್ನು ಬಗೆಹರಿಸಲಾಗಿದೆ. ಅಲ್ಲಿ ಹೇಳಿರುವಂತೆ ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀಯ ಹೆಸರಿನಲ್ಲಿ ಒಂದು ವಚನ ಹಾಗೂ ಅಮುಗೆ ರಾಯಮ್ಮನ ಹೆಸರಿನಲ್ಲಿ ೧೧೫ ವಚನಗಳು ದೊರೆತಿವೆ. ಅಮುಗೆ ರಾಯಮ್ಮಗೆ 'ವರದಾನಿಯಮ್ಮ' ಎಂಬ ಇನ್ನೊಂದು ಹೆಸರು ಇದೆಯೆಂದು ಗುರುತಿಸಿದ್ದಾರೆ.

ಈಕೆಯ ಪತಿ ಅಮುಗೆ ದೇವಯ್ಯನಿಗೆ ಸಂಬಂಧಿಸಿದಂತೆ ವೀರಶೈವ ಕಾವ್ಯ-ಪುರಾಣಗಳಲ್ಲಿ ಒಂದು ಪವಾಡಕಥೆ ಇದೆ. ಅದರ ಪ್ರಕಾರ ಇವರ ಊರು ಸೊನ್ನಲಾಪುರ. ಅಲ್ಲಿ ನಿಷ್ಠಾವಂತ ಶಿವಭಕ್ತರಾಗಿ ನೇಯ್ಗೆಯ ಕಾರ್ಯ ಮಾಡಿಕೊಂಡು ಇದ್ದರು. ಒಂದು ದಿನ ಸಿದ್ಧರಾಮಯ್ಯನು ಕಪಿಲಸಿದ್ಧ ಮಲ್ಲಿನಾಥನ ಪರ್ವಕ್ಕೆಂದು ಊರವರಿಗೆಲ್ಲ ಭತ್ತಕುಟ್ಟಲು ಭತ್ತವನ್ನು ಕೊಡಮಾಡಿದ. ಯೋಗಿ ಸಿದ್ಧರಾಮನು ಲಿಂಗಧರಿಸುತ್ತಿರಲಿಲ್ಲ. ಅದಕ್ಕಾಗಿ ಈ ದಂಪತಿಗಳು ಭವಿಯ ಸೇವೆ ಮಾಡುವುದಿಲ್ಲವೆಂದು ಕೆಲಸವನ್ನು ನಿರಾಕರಿಸಿದರು. ಕೋಪಗೊಂಡ ಸಿದ್ಧರಾಮಯ್ಯ ಅವರಿಗೆ ಊರು ಬಿಟ್ಟು ಹೋಗಲು ಆಜ್ಞೆ ಮಾಡಿದ. ಆಗ ಅಮುಗೆ ದೇವಯ್ಯನು

ತಮ್ಮ ಸಾಮಾನುಗಳನ್ನೆಲ್ಲಾ ಮೂರುಗಂಟನ್ನಾಗಿ ಕಟ್ಟಿ ತಾವಿಬ್ಬರೂ ಒಂದೊಂದನ್ನು ಹೊತ್ತುಕೊಂಡರು, ಉಳಿದ ಒಂದು ಗಂಟನ್ನು ಮಲ್ಲಿನಾಥನ ಮೇಲೆ ಹೊರಿಸಿಕೊಂಡು ಹೋದರಂತೆ. ಈ ವಿಷಯವನ್ನು ಮಲ್ಲಿನಾಥನಿಂದಲೇ ತಿಳಿದ ಸಿದ್ಧರಾಮಯ್ಯ ಪಶ್ಚಾತ್ತಾಪಗೊಂಡು ಅವರನ್ನು ಅಲ್ಲೇ ಉಳಿಯಲು ವಿನಂತಿಸುತ್ತಾನೆ. ಆದರೆ ಅದಕ್ಕೊಪ್ಪದೆ ಕಲ್ಯಾಣಕ್ಕೆ ಹೋಗುತ್ತಾರೆ. ಅಲ್ಲಿ ತಮ್ಮ ಕಾಯಕವನ್ನು ಮುಂದುವರಿಸಿಕೊಂಡು ನಿಷ್ಠಾವಂತ ಶಿವಭಕ್ತರಾಗಿ ಇರುತ್ತಾರೆ. ಕಲ್ಯಾಣ ಕ್ರಾಂತಿಯನಂತರ ಪುಳಜೆ ಎಂಬ ಗ್ರಾಮಕ್ಕೆ ಬಂದು ವಾಸಿಸುತ್ತಿರುತ್ತಾರೆ. ಕಡೆಗೆ ಅಲ್ಲಿಯೇ ಐಕ್ಯರಾಗುತ್ತಾರೆ ಎಂದು ತಿಳಿದುಬರುತ್ತದೆ. ಪತಿಯೊಡನೆ ಶರಣ ಜೀವನ ನಡೆಸುತ್ತಾ ಬದುಕಿದ ರಾಯಮ್ಮ, ಅನುಭವಮಂಟಪದಲ್ಲಿ ಶಿವಾನುಭವ ಮಾಡುತ್ತಾ, ಅಲ್ಲಿಯ ಗುರು-ಲಿಂಗ-ಜಂಗಮ, ವಿರಕ್ತ, ಭಕ್ತರುಗಳನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸುತ್ತಿರುತ್ತಾಳೆ. ತಾನು ಮಾತ್ರ ಸಾಧನೆಯಲ್ಲಿ ದಿನದಿನಕ್ಕೂ ಮುಂದುವರಿಯುತ್ತಾ ಅರಿವು ಪಡೆದು, ಅರಿವೇಗುರು ಎಂದು ಅರಿತು ಸಾಧನೆ ಗೈಯ್ಯುತ್ತಿರುತ್ತಾಳೆ. ಅರಿವಿನ ಹಂತ ಮುಟ್ಟಿದ ಮೇಲೆ ಗುರು-ಲಿಂಗ, ಜಂಗಮ, ಪ್ರಸಾದ, ಪಾದೋದಕದ ಹಂಗಿಲ್ಲವೆಂದು ನಂಬಿದ ಆಕೆ,

ಅರಿವುಳ್ಳವರಿಗೆ ಗುರುವಿನ ಹಂಗೇಕೆ?
ಅರಿವುಳ್ಳವರಿಗೆ ಲಿಂಗದ ಹಂಗೇಕೆ?
ಅರಿವುಳ್ಳವರಿಗೆ ಜಂಗಮದ ಹಂಗೇಕೆ?
ಅರಿವುಳ್ಳವರಿಗೆ ಪಾದೋದಕ ಪ್ರಸಾದದ ಹಂಗೇಕೆ?
ಅರಿವುಳ್ಳವರಿಗೆ ಅಮುಗೇಶ್ವರಲಿಂಗವರಿದೆನೆಂಬ ಸಂದೇಹವೇಕೆ?

-ಎಂಬ ವಚನ ಬರೆದಿದ್ದಾಳೆ.

ರಾಯಮ್ಮ ವಿರಕ್ತರ ಬಗ್ಗೆ, ಢೋಂಗಿ ಭಕ್ತರ ಹಾಗೂ ಜಂಗಮರ ಬಗೆಗೆ ನಿಷ್ಠುರವಾದ ಮಾತನಾಡಿದ್ದಾಳೆ. ಇವರನ್ನೆಲ್ಲಾ ಟೀಕಿಸಲು ಆಕೆ ಉಪಯೋಗಿಸಿರುವ ಭಾಷೆಯ ಚಾಟಿ ಏಟಿನಂತಿದೆ. ಡೋಂಗಿಗಳು ಆಕೆಯ ವಚನಗಳನ್ನೋದಿದರೆ, ತಮ್ಮ ಆತ್ಮನಿರೀಕ್ಷಣೆ ಮಾಡಿಕೊಳ್ಳಬೇಕಾಗುವಂತಿವೆ. ಉದಾ:

ಬೆಟ್ಟದ ನೆಲ್ಲಿಕಾಯಿಯ ಪಟ್ಟಣಕ್ಕೆ ಹೊತ್ತುಕೊಂಡುಹೋಗಿ
ಹೊಟ್ಟೆಯ ಹೊರೆವವನಂತೆ,
ಉತ್ತಮ ತೇಜಿಯ ಹೆಸರ ಕೇಳಿಕಡಲೆಯಲೆಂಬ ಗಾವಕನಂತೆ
ಅತ್ತೆಯ ಹೆಸರ ಹೇಳಿ ಹೊಟ್ಟೆಯ ಹೊರವ ತೊತ್ತಿನಂತೆ
ಆದ್ಯರ ವಚನಂಗಳ ಅಲ್ಲಿಗಲ್ಲಿಗೆ ಉಸುರಿ,

ಅನ್ನ ಕೂಳಿಂಗೆ ಹರಿದಾಡುವ ಅಜ್ಞಾನಿಗಳ
ಅನುಭಾವಿಗಳೆಂಬೆನೆ? ಅಯ್ಯಾ, ವಿರಕ್ತರೆಂಬೆನೆ?
ವೇಷವ ಹೊತ್ತು ತಿರುಗುವ ಡೊಂಬನಂತೆ
ಬಲ್ಲೆ ಬಲ್ಲೆನೆಂಬ ಅಹಂಕಾರದಿ ನುಡಿವ ಭವಿಗಳ
ಅನುಭಾವಿಗಳೆಂಬೆನಲ್ಲದೆ ವಿರಕ್ತರೆಂಬೆನೆ?
ವಿಷಯವ ಮುಂದುಗೊಂಡು ತಿರುಗುವ ಅನುಭಾವಿಗಳನೆಂತು
ವಿರಕ್ತರೆಂಬೆನಯ್ಯಾ ಅಮುಗೇಶ್ವರ ಲಿಂಗವೆ?

ಮತ್ತೊಂದು ವಚನಗಳಲ್ಲಿ ಅನುಭಾವಿಗಳೆಂಬ ಸೋಗುಹಾಕಿಕೊಂಡು ಪಂಚೇಂದ್ರಿಯಗಳಿಗೆ ವಶರಾಗಿದ್ದು, ಹೊಟ್ಟೆ ಹೊರೆಯುವ ಕಳ್ಳ ಗುರುಗಳನ್ನು ಕಂಡು,

ಅನುಭಾವಿ ಅನುಭಾವಿಗಳೆಂಬ ಅಜ್ಞಾನಿಗಳ
ಮುಖವ ನೋಡಲಾಗದು.
ಕಂಗಳ ಮುಂದಣ ಕಾಮ, ಮನದ ಮುಂದಣ ಆಸೆ
ಅಂಗದಲ್ಲಿ ಅಹಂಕಾರವಾಗಿಪ್ಪವರ ಅನುಭಾವಿಗಳೆಂಬೆನೆ?
ಸೂಳೆಯ ಮನೆಯಲಿಪ್ಪ ಗವುಡಿಯಂತೆ
ತಮ್ಮ ತಮ್ಮ ಹಿರಿಯತನವ ಮುಂದುಗೊಂಡು
ಕುರಿಗಳಂತೆ ತಿರುಗುವ ಜಡರುಗಳ ಅನುಭಾವಿಯೆಂಬೆನೆ?
ಹತ್ತೈದ ಕೂಡಿಕೊಂಡು ಇಕ್ಕಿ ಎರೆವವರ ಮನೆಗೆ ಹೋಗಿ,
ಭಕ್ತಿ ಬಿನ್ನಹವ ಕೈಕೊಂಡಡೆ, ಬೆಕ್ಕು ಹಾಲು ಕುಡಿದಂತೆ
ಅತ್ಯತಿಷ್ಠದ್ದಶಾಂಗುಲನೆಂದು ಘಟವ ಹೊರೆವ ಮಿಟ್ಟಿಯ ಭಂಡರು
ಕಟ್ಟಿಗೆ ಮಣ್ಣಹಾಕಿ ಹೊಟ್ಟೆಯ ಹೊರೆವವನಂತೆ
ಇಷ್ಟಲಿಂಗವನರಿಯದೆ ಸತ್ಯರೆಂದು ಘಟವ ಹೊರೆವ
ಘಟಕರ್ಮಿಗಳ ಮುಖವ ನೋಡಲಾಗದು ಅಮುಗೇಶ್ವರಲಿಂಗವೆ

ಎಂದು ಹೊಟ್ಟೆಹೊರೆಯಲು ವೇಷಧಾರಿಗಳಾಗಿ ಬದುಕುವ ಜನರನ್ನು 'ಭಂಡರು' ಎಂದು ಜರೆದಿದ್ದಾಳೆ.

ರಾಯಮ್ಮನು ನಿಷ್ಠಾವಂತ ಶರಣೆಯಾಗಿದ್ದಳು. ಶ್ರೇಷ್ಠವಚನಕಾರರಲ್ಲಿ ಒಬ್ಬಳಾಗಿದ್ದಳು. ಅವಳ ವಚನಗಳಲ್ಲಿ ವ್ರತ, ನಿಯಮ, ತತ್ತ್ವಪಾಲನೆ ಆಚಾರ ಸಂಹಿತೆ ಏಕದೇವೋಪಾಸನೆ, ಢೋಂಗಿತನದ ಖಂಡನೆ, ಅಂತರಂಗ-ಬಹಿರಂಗ ಶುದ್ಧಿಯ ಮಹತ್ವ ಮುಂತಾದವುಗಳ ಬಗೆಗೆ ನಿರ್ಭಿಡೆಯಿಂದ, ಸಹಜ ರೀತಿಯಲ್ಲಿ

ಸುಂದರವಾದ ಅಷ್ಟೇ ಪರಿಣಾಮಕಾರಿಯಾದ ಭಾಷೆ ಉಪಯೋಗಿಸಿ ಬರೆದಿರುವುದನ್ನು ಕಾಣಬಹುದು. ಆಕೆಯ ವಚನಗಳು ಈಚೆಗೆ ಪ್ರಚಾರಕ್ಕೆ ಬಂದಿವೆ. ಆದರೆ ಇತ್ತೀಚಿನವರೆಗೆ ಅವು ವಿದ್ವಾಂಸರ ಮಟ್ಟದಲ್ಲೇ ಉಳಿದಿದ್ದವು. ಈ ದಶಕದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಲೇಖನಗಳನ್ನು ಬರೆದಿದ್ದಾರೆ. ವಚನಗಳನ್ನು ಬಿಟ್ಟರೆ. ಹೆಚ್ಚಿನ ಮಾಹಿತಿ ದೊರೆತಿಲ್ಲವಾಗಿ ಈ ಶರಣೆಯ ಪ್ರಚಾರ ಅಷ್ಟಾಗಿ ಆದಂತಿಲ್ಲ. ಮಾತೋಶ್ರೀ ಎಂಬ ಗ್ರಂಥದಲ್ಲಿ ಶ್ರೀಮತಿ ಎಚ್.ಎಂ.ಬೀಳಗಿಯವರು 'ಅಮುಗೆ ರಾಯಮ್ಮ ಹಾಗೂ ಅಕ್ಕಮ್ಮ' ಎಂಬ ಲೇಖನದಡಿಯಲ್ಲಿ ತುಂಬಾ ವಿವರವಾದ ಹಾಗೂ ಸಂಶೋಧನಾತ್ಮಕವಾದ ಲೇಖನ ಬರೆದಿದ್ದಾರೆ. ಇದರಲ್ಲಿ ರಾಯಮ್ಮನನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗುವ ಸಲಕರಣೆಗಳು ದೊರೆಯುತ್ತವೆ. 'ಶಿವಶರಣೆಯ ವಚನ ಸಂಪುಟ'ದ ಪ್ರಸ್ತಾವನೆಯಲ್ಲಿ ಕೊಟ್ಟಿರುವ ಅಂಶಗಳು ರಾಯಮ್ಮನ ಬಗೆಗೆ ಹೆಚ್ಚಿನ ಮಾಹಿತಿಯನ್ನು ಪಡೆಯಲು ಸಹಾಯಕವಾಗಿವೆ. ಒಟ್ಟಿನಲ್ಲಿ ರಾಯಮ್ಮ ಬಸವಕಾಲದ ನಿಷ್ಠಾವಂತ ಶಿವಶರಣೆ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ವಚನಗಳನ್ನು ರಚಿಸಿದ ವಚನಕಾರ್ತಿ ಎನ್ನಬಹುದು. ಆಕೆ ತನ್ನ ಹೆಸರಿಗೆ ತಕ್ಕಂತೆ, ಸತ್ಯಾನ್ವೇಷಿಯಾದ ಸತ್ಯಕ್ಕ!!

■

## ೧೨. ಆಚಾರ ನಿಷ್ಠೆಯ ಅಕ್ಕಮ್ಮ

ವಚನಕಾರ್ತಿಯರಲ್ಲಿ ಅತ್ಯಂತ ಹೆಚ್ಚಿನ ವಚನಗಳನ್ನು ಅಕ್ಕಮಹಾದೇವಿಯು ರಚಿಸಿದ್ದಾಳೆ. ಆಕೆಯ ನಂತರದ ಹೆಸರು ಅಕ್ಕಮ್ಮನದು. ಈಕೆ ನೂರಾ ಐವತ್ಮೂರು ವಚನಗಳನ್ನು ರಚಿಸಿದ್ದಾಳೆ. ಈಕೆಯ ವಚನಗಳ ಅಂಕಿತ 'ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ' ಎಂಬುದು. ವಚನಾಂಕಿತವೇ ಸೂಚಿಸುವಂತೆ, ಈಕೆಯು ಆಚಾರ, ನಿಯಮ, ಶೀಲ, ವ್ರತಗಳಿಗೆ ಮಹತ್ವ ಕೊಟ್ಟು ವಚನಗಳನ್ನು ರಚಿಸಿದ್ದಾಳೆ. ಈಕೆಯ ವಚನಗಳ ಹೊರತು, ಅಕ್ಕಮ್ಮನ ಬಗ್ಗೆ ಬೇರಾವ ವಿಷಯವೂ ಸಿಕ್ಕಿಲ್ಲ. 'ಅಕ್ಕಮ್ಮನ ವಚನಗಳು ಏಕಸ್ಥಲ ಪ್ರಧಾನವಾಗಿದ್ದು, "ಮಾಹೇಶ್ವರ ಸ್ಥಲದ ನಿಷ್ಠೆಯನ್ನು ಹೆಚ್ಚಾಗಿ ಪ್ರಕಟಿಸುತ್ತದೆ" ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ವ್ರತ, ನಿಯಮಗಳಿಗೆ ನಿಷ್ಠಾವಂತಳಾಗಿ ಬದುಕಿದ ಆಕೆಗೆ ವ್ರತಭ್ರಷ್ಟರನ್ನು, ಅನಾಚಾರಿಗಳನ್ನು ಕಂಡರೆ ತುಂಬಾ ತಿರಸ್ಕಾರ. ಢೋಂಗಿ ಜನರನ್ನು, ಸೋಗುಹಾಕಿ ಹೊಟ್ಟೆಹೊರೆಯುವವರನ್ನು ಬಹು ತೀಕ್ಷ್ಣವಾಗಿ ಖಂಡಿಸಿದ್ದಾಳೆ.

ವ್ರತದ ಬಗ್ಗೆ ಅಕ್ಕಮ್ಮನು,
ತನುವ್ರತ ಮನವ್ರತ ಮಹಾಜ್ಞಾನವ್ರತ
ತ್ರಿಕರಣದಲ್ಲಿ ಶುದ್ಧವಾಗಿಯಲ್ಲದೆ ಮನಃಶುದ್ಧವಿಲ್ಲ
ತನು ಶುದ್ಧವಾಗಿಯಲ್ಲದೆ ಮನ ಶುದ್ಧವಿಲ್ಲ
ಮನ ಶುದ್ಧವಾಗಿಯಲ್ಲದೆ ಜ್ಞಾನ ಶುದ್ಧವಿಲ್ಲ
ಜ್ಞಾನ ಶುದ್ಧವಾಗಿ ನಿಂದು, ಮಾಡಿಕೊಂಡನೇಮ ತಪ್ಪದೆ,
ಶರಣರಿಗೆ ದೂರಿಲ್ಲದೆ, ಮನಕ್ಕೆ ಮರವೆ ಇಲ್ಲದೆ,
ಮಹಾಜ್ಞಾನವೇ ವ್ರತ ನೇಮಲಿಂಗವಾಗಿ
ಶ್ರುತ ದೃಷ್ಟ ಅನುಮಾನಕ್ಕೆ ಅಗೋಚರವಾಗಿನಿಂದ

ಶೀಲದಂತರಂಗದ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದ ಅಂಗ ಎಂಬ ವಚನದಲ್ಲಿ ತಿಳಿಸಿದ್ದಾಳೆ. ವ್ರತಿಯಾದ ಶೀಲವಂತನ ತ್ರಿಕರಣ ಶುದ್ಧಿಯಿಂದ ತನು, ಮನ, ಜ್ಞಾನ ಶುದ್ಧನಾಗಿ, ಆಚಾರವೇ ಪ್ರಾಣವಾಗಿ ಬದುಕಿದರೆ ಭಗವಂತನ ಸಾಕ್ಷಾತ್ಕಾರ ಎಂದಿದ್ದಾಳೆ.

ಅರಿವು ಮುಖ್ಯ ಆಚಾರವೇ ಪ್ರಾಣವಾಗಿಲ್ಲದೆ ಕೇವಲ ಬಾಹ್ಯನೋಟಕ್ಕೆ ಶೀಲವಂತರಂತೆ, ಅನುಭಾವಿಗಳಂತೆ ಕಾಣಿಸಿಕೊಳ್ಳುತ್ತಾ, ಮನಸ್ಸಿನಲ್ಲಿ ಪರಿಶುದ್ಧತೆ ಇಲ್ಲದವರನ್ನು ಕಂಡು ಹೇಸಿ, ಕೋಪಗೊಂಡ ಅಕ್ಕಮ್ಮ,

ಬತ್ತಲೆ ಇದ್ದವರೆಲ್ಲಾ ಕತ್ತೆಯ ಮಕ್ಕಳು
ತಲೆ ಬೋಳಾದವರೆಲ್ಲಾ ಮುಂಡೆಯ ಮಕ್ಕಳು
ತಲೆ ಜಡೆಗಟ್ಟಿದವರೆಲ್ಲಾ ಹೊಲೆಯರ ಸಂತಾನ
ಆವ ಪ್ರಕಾರವಾದಡೇನು? ಅರಿವೆ ಮುಖ್ಯವಯ್ಯ
ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ

ಎಂದು ಢೋಂಗಿಗಳನ್ನು ಬಹು ಕಟುವಾಗಿ ಖಂಡಿಸಿದ್ದಾಳೆ.

ವಿರಕ್ತ ಹೇಗಿರಬೇಕು ಮತ್ತು ಹೇಗಿರಬಾರದೆಂಬುದನ್ನು ಅಕ್ಕಮ್ಮನು,
ಮಾಡಿ ನೀಡುವ ಭಕ್ತನನರಸಿಕೊಂಡು ಹೋಗಿ
ಗಡ್ಡ ಮಂಡೆ ಬೋಳಿನ ಕುರುಳ ತೋರಿ,
ಬಲ್ಲವರಂತೆ ಆಧ್ಯಾತ್ಮವ ನುಡಿದು
ಉಪಾಧಿಯಿಂದ ಒಡಲ ಹೊರೆವಾತ ವಿರಕ್ತನೆ? ಅಲ್ಲ
ವಿರಕ್ತನ ಪರಿ ಎಂತೆಂದಡೆ
ಆಚಾರ ಸಹಿತವಾಗಿ ಭಕ್ತಿಭಿಕ್ಷವ ತೆಗೆದುಕೊಂಡು
ಉಪಾಧಿರಹಿತವಾಗಿಪ್ಪ ವಿರಕ್ತನ ತೋರಿ ಬದುಕಿಸಯ್ಯಾ
ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವೆ

ಎಂಬ ವಚನದಲ್ಲಿ ಉಲ್ಲೇಖಿಸಿದ್ದಾಳೆ.

ವೇಷ ಹಾಕಿಕೊಂಡು, ಮೋಸ ಮಾಡಿ ಹೊಟ್ಟೆಹೊರೆಯುವ ಡಾಂಭಿಕರಲ್ಲಿ ನಿಜವಾದ ಭಕ್ತಿ ಇರಲು ಸಾಧ್ಯವೇ ಇಲ್ಲ. ಅಲ್ಲಿ ಹೊಟ್ಟೆ ಹೊರೆಯುವ ಮೋಸಗಾರಿಕೆಯಷ್ಟೆ ಎಂಬ ಮಾತನ್ನು, ಅಕ್ಕಮ್ಮ,

ವೇಷ ಎಲ್ಲರದು?
ಸೂಳೆಯಲ್ಲಿ, ಡೊಂಬನಲ್ಲಿ, ಭೇರೂಪನಲ್ಲಿರದೆ?
ವೇಷವ ತೋರಿ ಒಡಲ ಹೊರೆವ
ದಾಸಿ ವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದೋ

ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ಎಂದು ಪ್ರಶ್ನೆಯಲ್ಲಿಯೇ ನಿಜಭಕ್ತಿ ಇಲ್ಲ ಎಂಬರ್ಥ ಬರುವಂತೆ ಹೇಳಿದ್ದಾರೆ.

'ಒಟ್ಟಾರೆ ಶೀಲ, ವ್ರತ, ಆಚಾರ ಹಾಗೂ ಏಕದೈವ ನಿಷ್ಠೆಗಳನ್ನು ಪ್ರತಿಪಾದಿಸುವುದೇ ಅಕ್ಕಮ್ಮನ ಮೂಲ ಉದ್ದೇಶ' ಎಂದು ವಿದ್ವಾಂಸರ ಅಭಿಪ್ರಾಯ. ಅಕ್ಕಮ್ಮ ಬಸವಣ್ಣರ ಸಮಕಾಲೀನ ಶರಣೆ ಮತ್ತು ಅನುಭವ ಮಂಟಪದಲ್ಲಿ ನಿರ್ಭಿಡೆಯಿಂದ ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಿಸುತ್ತಿದ್ದ ವಚನಕಾರ್ತಿ. ಅವಳ ವಚನಗಳೆಲ್ಲಾ ಶೀಲ, ವ್ರತ, ತತ್ವ, ಏಕದೈವ ನಿಷ್ಠೆ ಹಾಗೂ ಸೋಗು ಹಾಕುವವರ ಟೀಕೆಗಳಿಂದ ಕೂಡಿವೆ. ನಿಷ್ಠೆಯ ಶಿವಭಕ್ತಿ ಸಾಧಕವಾದ ಅಂದಿನ ಮಹಿಳೆಯರು ಇಷ್ಟು ಧೈರ್ಯವಾಗಿ ಟೀಕಾತ್ಮಕ ನುಡಿಗಳನ್ನು ಆಡಿರುವುದು. ಇಂದಿನ ಪ್ರಗತಿಶೀಲ ಮಹಿಳೆಯರನ್ನೂ ಸೂಚಿಸುವಂತಿದೆ.

■

# ಮುನಿದೆ ಏಕಮ್ಮಾ ನೆಲದಾಯಿ

ಲೇಖಕರು
ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ

ಪ್ರಸಾದ ಪ್ರಕಾಶನ
'ಶಿವಪ್ರಸಾದ' ೮ನೇ ಕ್ರಾಸ್, ಕಲ್ಯಾಣನಗರ,
ಧಾರವಾಡ - ೫೮೦ ೦೦೭

**MUNIDE YEKAMMA NELADAYI-**

Collection of Peoms by Smt. Latithamba Vrushabendra Swamy-M.Ed, DTE. (Rtd. Professor of Education) Published by Prasad Publication 'Shiva Prasad' - 8th Cross, Kalyan Nagar, Dharwad-580 007.

Pages: 47 + IX

Author

ಬೆಲೆ : ಇಪ್ಪತ್ತೈದು ರೂಪಾಯಿಗಳು

ಛಾಯಾಕ್ಷರ ಜೋಡಣೆ:

ವರ್ಷಿಣಿ ಗ್ರಾಫಿಕ್ಸ್
೧೮೬, ಪರ್ಲ್ ಕಾಂಪ್ಲೆಕ್ಸ್
೭ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ
ಬೆಂಗಳೂರು-೫೬೦ ೦೪೦

ಮುದ್ರಣ :

ಸ್ನೇಹ ಪ್ರಿಂಟರ್ಸ್
೨೨, ೨ನೇ ಮೈನ್, ಅತ್ತಿಗುಪ್ಪೆ
ವಿಜಯನಗರ ೨ನೇ ಹಂತ
ಬೆಂಗಳೂರು-೫೬೦ ೦೪೦

## ಮುನ್ನುಡಿ

'ಮುನಿದೆ ಏಕಮ್ಮಾ ನೆಲದಾಯಿ' ಮೂಲಕ ಕಾವ್ಯಲೋಕಕ್ಕೆ ಪದಾರ್ಪಣ ಮಾಡಲು ಸಿದ್ಧರಾಗಿರುವ ಪ್ರೊ.ಲಲಿತಾಂಬ ವೃಷಭೇಂದ್ರಸ್ವಾಮಿಯವರು ಉತ್ತರ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾಗಿ, ಸಂಘಟನಾ ಶಕ್ತಿಗೆ ಹೆಸರಾದವರು. ಅವರು ಈ ಸಂಕಲನಕ್ಕೆ ನನ್ನ 'ಮುನ್ನುಡಿ'ಯನ್ನು ಅಪೇಕ್ಷಿಸಿದ್ದಾರೆ.

ಒಂದು ಕಾಲದಲ್ಲಿ ಕವಿ ಅಥವಾ ಲೇಖಕನನ್ನು ಸಾಹಿತ್ಯಲೋಕಕ್ಕೆ ಪರಿಚಯಿಸುವ ಕಾರ್ಯ ನಿರ್ವಹಿಸುತ್ತಿತ್ತು ಮುನ್ನುಡಿ. ಆಚಾರ್ಯ ಬಿ.ಎಂ.ಶ್ರೀ ಅಂಥವರು ಅದನ್ನು ಕವಿಗಳ ಬೆನ್ನುತಟ್ಟಿ ಹುರಿದುಂಬಿಸುವ ಕಾರ್ಯಕ್ಕೆ ಬಳಸಿಕೊಂಡದ್ದುಂಟು. ಇನ್ನೂ ಕೆಲವರು ಮುನ್ನುಡಿಯಲ್ಲಿ ಕಾವ್ಯವನ್ನು ವಿಮರ್ಶಿಸಿ, ಹಿನ್ನುಡಿ ಬರೆದು, ಅದೇ ಕಾವ್ಯವನ್ನು ವಿಶ್ಲೇಷಿಸಿ, ತಮ್ಮ ವಿಮರ್ಶೆಗೆ ಸಮರ್ಥನೆಯನ್ನೊದಗಿಸಿಕೊಂಡದ್ದೂ ಉಂಟು. ಈಗೀಗ ಮುನ್ನುಡಿ-ಹಿನ್ನುಡಿಗಳ ಜೊತೆಗೆ ಬೆನ್ನುಡಿಯೂ ಸೇರಿಕೊಂಡು, ಕೃತಿಯ ಹಾಗೂ ಕೃತಿಕಾರರ ವಿಶಿಷ್ಟತೆಗಳನ್ನು ಸೂಚಿಸುವ ಕಾರ್ಯ ನಿರ್ವಹಿಸುತ್ತಿರುವುದೂ ಉಂಟು. ಕೆಲವರು ಮುನ್ನುಡಿಯೆಂದು ಪ್ರಕಟಿಸಲು ಸಂಕೋಚಗೊಂಡು 'ಪ್ರವೇಶ' ವೆಂಬ ಪರ್ಯಾಯ ನಾಮವಿತ್ತದ್ದೂ ಉಂಟು.

ಮುನ್ನುಡಿ, ಹಿನ್ನುಡಿ, ಬೆನ್ನುಡಿ, ಪ್ರವೇಶಗಳೂ ಏನನ್ನೇ ಹೇಳಲಿ, ಅವು ಕೃತಿಯ ಕಡೆಗೆ ನಮ್ಮ ಲಕ್ಷ್ಯವನ್ನು ಸೆಳೆಯುವ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆಯೆಂಬುದು ನನ್ನ ಭಾವನೆ. ನನ್ನ ಈ ನುಡಿಗಳು ಆ ಜವಾಬ್ದಾರಿಯನ್ನು ನಿರ್ವಹಿಸುವ ಒಂದು ನಮ್ರ ಯತ್ನ ಸೂಚಿಸ ಬಯಸುತ್ತೇನೆ ಇಪ್ಪತ್ತೆಂಟು ಕವಿತೆಗಳನ್ನು ಒಳಗೊಂಡಿರುವ ಈ ಸಂಕಲನಕ್ಕೆ ಅದರಲ್ಲಿಯ ಒಂದು ಕವಿತೆ 'ಮುನಿದೆ ಏಕಮ್ಮಾ ನೆಲದಾಯಿ' ಎಮಬ ಹೆಸರನ್ನೇ ಇಟ್ಟಿದ್ದಾರೆ ಶ್ರೀಮತಿ ಲಲಿತಾಂಬ.

ವೃತ್ತಿಯಲ್ಲಿ ಶಿಕ್ಷಕರ ಕಾಲೇಜಿನ ಪ್ರಾಧ್ಯಾಪಕಿಯಾಗಿದ್ದು ನಿವೃತ್ತರಾಗಿರುವ ಶ್ರೀಮತಿಯವರು ಸಾಹಿತ್ಯಾಸಕ್ತಿಯನ್ನು ಬೆಳೆಸಿಕೊಂಡೇ ಬಂದವರು. ಶಿಕ್ಷಣ, ಸಾಮಾಜಿಕ ಸಮಸ್ಯೆಗಳು, ಮಹಿಳಾ ಸಮಸ್ಯೆಗಳು, ಧಾರ್ಮಿಕ ವಿಚಾರಗಳು-ಹೀಗೆ ನಾನಾ ವಿಷಯಗಳಲ್ಲಿ ತೀವ್ರ ಆಸಕ್ತಿ ತಾಳಿದವರು. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ವಿವಿಧ

ವಿಷಯಗಳ ಮೇಲೆ ವೈಚಾರಿಕ ಪ್ರಬಂಧಗಳನ್ನು ಬರೆದು ಪ್ರಕಟಿಸಿದವರು. ಕೆಲವು ಶರಣರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. 'ಮನದ ಮಲ್ಲಿಗೆ' ಎಂಬ ವೈಚಾರಿಕ ಲೇಖನಗಳ ಸಂಕಲನವನ್ನು ಪ್ರಕಟಿಸಿದ್ದಾರೆ. ಬಾನುಲಿಯ ಮುಖಾಂತರವೂ ವಿವಿಧ ಪ್ರಕಾರಗಳ ಸಾಹಿತ್ಯ ಸೇವೆಯನ್ನು ಮಾಡುತ್ತಾ ಬಂದಿರುವ ಪ್ರೊ.ಲಲಿತಾಂಬ ಅವರು ಇಲ್ಲಿ ಕವಿತೆಗಳ ಮೂಲಕ ಕಾವ್ಯಲೋಕವನ್ನು ಪ್ರವೇಶಿಸಿದ್ದಾರೆ. ಇದು ಅವರ ಮೊದಲ ಕವನ ಸಂಕಲನ.

ನಿಸರ್ಗದ ಕೋಪರೂಪವಾದ ಭೂಕಂಪ, ಹಿಮಾಲಯದ ಸೊಗಸು, ಆಷಾಢಭೂತಿಗಳ ಬೂಟಾಟಿಕೆ, ಸ್ತ್ರೀಯ ಶೋಷಣೆ, ಅಮೆರಿಕ ಇರಾಕ್ ಯುದ್ಧ ಪ್ರಸಕ್ತಿಗಳ ಹಿನ್ನೆಲೆಯಲ್ಲಿ ನಡೆಯುವ ಕುಟಿಲೋಪಾಯಗಳ ಜಾಲ, ಇತಿಹಾಸದ ಪುಟಗಳು ಕಲಿಸುವ ಪಾಠ, ಮಕ್ಕಳ ಪ್ರೇಮಲೋಕದ ಕನಸುಗಾರಿಕೆ – ಹೀಗೆ ಇವರ ಕವಿತೆಗಳ ದೃಷ್ಟಿ ಕನಸುಗಾರಿಕೆಯನ್ನು ಕಳೆದುಕೊಳ್ಳದೆ, ಇಂದಿನ ಬದುಕಿನ ವಿಷಮತೆಗಳನ್ನು, ರಾಷ್ಟ್ರಪ್ರೇಮದ ಟೊಳ್ಳನ್ನು ಮನಗಾಣಿಸುವ ಪ್ರಯತ್ನದಲ್ಲಿ ಲೀನವಾಗಿರುವುದನ್ನು ನೋಡಬಹುದು. ವಿಡಂಬನೆಯ ದೃಷ್ಟಿಯಿಂದ ನೋಡುವುದಾದರೆ,

ಮಾಡುವುದು ಭ್ರಷ್ಟಾಚಾರ
ಬೋಧಿಸುವುದು ಶಿಷ್ಟಾಚಾರ
ಇವರೆಲ್ಲ ಹಿಪೋಕ್ರೇಟಪ್ಪಾ ಹಿಪೋಕ್ರೇಟ್ಸು

ಎಂದು ಸರಳವೂ, ನೇರವೂ ಆದ ಉಕ್ತಿಗಳಿಂದ ಹಿಪ್ರೋಕ್ರೇಟ್ಸ್ ಕವಿತೆ– ಲಲಿತಾಂಬ ಅವರ ಬರವಣಿಗೆಯ ಒಂದು ಮಾದರಿಯಾಗುತ್ತದೆ. ಅಮೆರಿಕ ಮತ್ತು ಇರಾಕ್ ಯುದ್ಧ ಸಂದರ್ಭದಲ್ಲಿ ಬರೆದ ಕವಿತೆಯಲ್ಲಿ, ಇವರ ಮಾತು ಹೆಚ್ಚು ಕಾವ್ಯಮಯವಾಗುತ್ತ ರೂಪುಗೊಳ್ಳುವುದು ಹೀಗೆ.

ಸದ್ದಾಂ, ಮುದ್ದಾಂ ಗುದ್ದಾಟ ಬಯಸಿದಾಗ
ಸ್ಕಡ್ ಕ್ಷಿಪಣಿಗಳು, ಸುದ್ದು ಹೊಡೆದು ಸಿಡಿಸಿದಾಗ

ಶಾಂತ ಸಾಗರದಲ್ಲಿ ಅಶಾಂತಿಯ ಎಣ್ಣೆ ಕೆಸರಾಗಿ
ಜೀವಿಗಳ ಉಸಿರಾಟಕೇ ಉಂಟಾಯ್ತು ಕಷ್ಟ.

ಈ ಸಾಲುಗಳು ದೇಶರಕ್ಷಣೆಯ ಮುಖವಾದ ಧರಿಸಿದ ಕ್ರಿಯೆ, ಎಂಥ ಪೈಶಾಚಿಕ ವರ್ತನೆಗೆ ಕಾರಣವಾಗುತ್ತದೆಂಬುದನ್ನು ಮನವರಿಕೆ ಮಾಡಿಕೊಡುತ್ತವೆ. ಲೇವಡಿ ಮಾಡುವ ರೀತಿಯಲ್ಲಿಯೇ ರಚಿತವಾದ 'ಆಮೇಲೆ ಆಗೋ ತಮಾಷೆ ನೋಡು' ಎಂಬ ಕವಿತೆ ಆರೋಗ್ಯಕರವಾದ ವೈನೋದಿಕ ಲಹರಿಗೆ ದ್ಯೋತಕವಾಗಿದೆ.

'ಶರ್ವಾಣಿ' ಮತ್ತು 'ಬರಿಗನಸು' ಕವಿತೆಗಳು ಒಂದಕ್ಕೊಂದು ಪೂರಕವಾದ ಕವಿತೆಗಳೆನ್ನುವಂತಿದ್ದು ಅಲ್ಲಿ ಮೂಡಿರುವ ವಾತ್ಸಲ್ಯಭಾವ ಹೃದ್ಯವಾದದ್ದು. ನಿದ್ದೆಯಲ್ಲಿ ನೋಡುವ 'ಹೃದಯವನ್ನು ಉಕ್ಕೇರಿಸುವ' ಸಕ್ಕರೆಯಂತೆ ನುಡಿಯುವ, ಮುಗಿಲ ಮಲ್ಲಿಗೆಯಾಗುವ ವಾತ್ಸಲ್ಯದ ಲೋಕವನ್ನು ನಿರ್ಮಿಸುವ ರೀತಿ ನೋಡಿ,

ನನ್ನ ನೀ ಹಿಡಿದದ್ದು, ನಾ ನಿನ್ನ ಹಿಡಿಯಬಂದದ್ದು
ಒಂದೂ ನಿಜವಲ್ಲಾ
ಎಲ್ಲಾ ಬರಿ ಕನಸು, ಬರಿ ಕನಸು

ಬೇರೆ ಬೇರೆ ಕಡೆ ಇರುವ ಈ ಎರಡೂ ಕವಿತೆಗಳನ್ನು ಒಟ್ಟಾಗಿಯೇ ಓದಿ ಸವಿಯಬೇಕು. ಹಿಮಾಲಯದ ಸೊಗಸಿಗೆ ಇವರ ಹೃದಯ ಸ್ಪಂದಿಸಿರುವುದು ಹೀಗೆ:

ಮರುಭೂಮಿಯಂತಹ
ಹೃದಯದಲ್ಲೂ ಅರಳಿಸಬಲ್ಲುವು
ಸಂತಸದ ಮಲ್ಲಿಗೆ.
ಈ ಹಸುರು ಆ ಹಸುರಿಗಿಂತ ಬೇರೆ
ಆ ಹಸುರು ಮತ್ತೊಂದು ಹಸುರಿಗಿಂತ ಭಿನ್ನ
ಹಸುರಿನಲೆ ಎಷ್ಟೊಂದು ವೈವಿಧ್ಯ !?

ಎಲ್ಲಿಯವರೆಗೆ ಬರೆಯುವವರಲ್ಲಿ ಇಂಥ ಸೌಂದರ್ಯವನ್ನು ಕುರಿತ ಸೂಕ್ಷ್ಮ ಸಂವೇದನೆ ಹಾಗೂ ಬೆರಗುಗೊಳ್ಳುವ ಗುಣಗಳು ಸೃಜನಶೀಲವಾಗುತ್ತವೆಯೋ ಅಲ್ಲಿಯವರೆಗೆ ಕಾವ್ಯದ ಗುಣಕ್ಕೆ ಲೋಪವೆಂಬುದೆಲ್ಲಿ?

ಸಾಮಾಜಿಕ ವಿಷಮತೆಗಳತ್ತ ಹೊರಳಿದ ತೀಕ್ಷ್ಣವಿಚಾರ ದೃಷ್ಟಿ ಶೋಷಣೆಯಾದುದು, ಕೆರಳಿ ನಿಲ್ಲುವ ಆಕ್ರೋಶ, ಸೌಂದರ್ಯವನ್ನು ಕುರಿತು ಕುತೂಹಲ, ಮೌಲ್ಯಗಳನ್ನು ಕುರಿತ ಗೌರವ, ಇವು ಎಷ್ಟೆಷ್ಟು ಸೃಜನಶೀಲವಾಗುತ್ತದೆಯೋ ಕವಿತೆ ಕೂಡ ಅಷ್ಟಷ್ಟು ಗಟ್ಟಿಗೊಳ್ಳುತ್ತ ಸಾರ್ಥಕವಾಗುತ್ತ ಹೋಗುತ್ತದೆ.

ಕವಿತೆಗೆ ಪ್ರತಿಭೆ ಮತ್ತು ವ್ಯುತ್ಪತ್ತಿಗಳು ರೆಕ್ಕೆಗಳಾದರೆ ಜೀವನ ಪ್ರೀತಿ ಹಾಗೂ ಸೂಕ್ಷ್ಮ ಸಂವೇದನೆಗಳು ಪ್ರಾಣವಿದ್ದಂತೆ. ಇವು ಎಷ್ಟೆಷ್ಟು ಕ್ರಿಯಾ ಮುಖವಾಗುತ್ತವೆಯೊ. ಅಷ್ಟಷ್ಟು ಕವಿತೆ ಗೆಲ್ಲುತ್ತದೆ.

ಪ್ರಾಧ್ಯಾಪಕಿಯಾದ ಶ್ರೀಮತಿ ಲಲಿತಾಂಬ ಅವರ ಕವಿತೆಗಳಲ್ಲಿ ಸ್ವಲ್ಪ ಮಟ್ಟಿಗೆ

ಮಾಸ್ತರಿಕೆಯ ದನಿ ಇದೆ. ಆದರೆ ಅವರ ಕವಿ ಹೃದಯದ ದನಿ ಗಟ್ಟಿಗೊಳ್ಳುತ್ತ ಹೋಗುವ ಎಲ್ಲ ಸೂಚನೆಗಳು ಈ ಸಂಕಲನದಲ್ಲಿ ಇವೆ.

ಒಳ್ಳೆಯ ಭಾವನೆಗಳ ಲೋಕಕ್ಕೆ ಓದುಗನನ್ನು ಕರೆದೊಯ್ಯುವ ಪ್ರೊ.ಲಲಿತಾಂಬ ಅವರಿಂದ ಇನ್ನೂ ಹೆಚ್ಚಿನ ಲಾಭ ಕನ್ನಡಕ್ಕೆ ಆಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಜಿ.ಎಸ್.ಸಿದ್ಧಲಿಂಗಯ್ಯ

ಬೆಂಗಳೂರು

೧೨-೫-೧೯೯೫

# ನನ್ನ ನುಡಿ

'ಮುನಿದೆ ಏಕಮ್ಮಾ ನೆಲದಾಯಿ' ಇದು ನನ್ನ ಮೊದಲ ಕವನ ಸಂಕಲನ. ಈಗ ನಾಲ್ಕಾರು ವರ್ಷಗಳಿಂದ ಆಗಾಗ್ಗೆ ನನ್ನ ಅನಿಸಿಕೆಗಳನ್ನು ಕವನ ರೂಪದಲ್ಲಿ ಹಿಡಿದಿಟ್ಟಿದ್ದೆ. ಇದರಲ್ಲಿ "ಓ ಭಾರತೀಯ ಹೆಣ್ಣೆ' ಮತ್ತು 'ಅಂಜದಿರು ಮೌಲ್ಯವೆ' ಎಂಬ ಕವನಗಳು ಬಳ್ಳಾರಿ ಜಿಲ್ಲೆಯ ಕವನ ಸಂಗ್ರಹದಲ್ಲಿ ಪ್ರಕಟವಾಗಿವೆ. 'ಮುನಿದೆ ಏಕಮ್ಮಾ ನೆಲದಾಯಿ' ಮತ್ತು 'ಮೊಸಳೆ ಕಣ್ಣೀರು' ಕವನಗಳು 'ಕನ್ನಡಮ್ಮ' ಪತ್ರಿಕೆಯಲ್ಲಿ ಬೆಳಕು ಕಂಡಾಗಿದೆ. 'ಕಾದು ನಿಂತಿಹರು ನಿಮಗಾಗಿ' ಎಂಬ ಕವನ, ಧಾರವಾಡ ಮುರುಘಾಮಠದ ಮಹಾಂತಸ್ವಾಮಿಗಳವರಿಗೆ ಅರ್ಪಿಸಿದ ಗ್ರಂಥದಲ್ಲಿ ಪ್ರಕಟವಾಗಿದೆ. ಉಳಿದವು ಈಗ ಪ್ರಕಟಗೊಳ್ಳುತ್ತಿವೆ. ಒಟ್ಟು ಇಪ್ಪತ್ತೆಂಟು ಕವನಗಳ ಸಂಗ್ರಹ ಇಲ್ಲಿದೆ.

ಇವುಗಳನ್ನು ಬರೆದು ಕೆಲವು ವರ್ಷಗಳೇ ಸುಂದಿದ್ದರೂ ಪ್ರಕಟಗೊಳಿಸಲು ಸ್ವಲ್ಪ ಹಿಂಜರಿಯುತ್ತಿದ್ದೆ. ಆದರೆ ನನ್ನ ಗೆಳತಿಯರನೇಕರು ಕೆಲವನ್ನು ಓದಿ, 'ತುಂಬಾ ಚೆನ್ನಾಗಿದೆ ಖಂಡಿತ ಪ್ರಕಟಮಾಡಿ' ಎಂದು ಒತ್ತಾಯಿಸಿದಾಗ, ಪ್ರಕಟಿಸಬೇಕೆಂಬ ಇಚ್ಛೆ ಮೂಡಿತು. ಅದಕ್ಕಾಗಿ ಸಿದ್ಧಗೊಳಿಸಿದೆ.

ಇದಕ್ಕೆ ಮುನ್ನುಡಿ ಬರೆಯಬೇಕೆಂದು ಪ್ರಸಿದ್ಧ ಕವಿಗಳೂ, ವಿಮರ್ಶಕರೂ, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ಅದ ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯ ನವರನ್ನು ಕೇಳಿದಾಗ ಅವರು ಆತ್ಮೀಯತೆಯಿಂದ ಬರೆದುಕೊಟ್ಟರು. ಅವರಿಗೆ ನನ್ನ ಕೃತಜ್ಞತೆಗಳು

ಮುಖಪುಟವನ್ನು ಬರೆದುಕೊಟ್ಟ ಶ್ರೀ

ವಿಜಯಕುಮಾರ್ ಅವರಿಗೆ ನಮನಗಳು. ನನ್ನ ಈ ಕೃತಿ ಮುದ್ರಿಸಲಾಗುವ ಎಲ್ಲ ಹಂತಗಳಲ್ಲಿ ತುಂಬ ಆಸೆಯಿಂದ ನೆರವಾದ ಡಾ॥ ವಿದ್ಯಾಶಂಕರರಿಗೆ ನನ್ನ ಕೃತಜ್ಞತೆಗಳು. ಅಂದವಾಗಿ, ಅತ್ಯಂತ ಕಡಿಮೆ ಅವಧಿಯಲ್ಲಿ ಮುದ್ರಿಸಿಕೊಟ್ಟ ಸ್ನೇಹಾ ಪ್ರಿಂಟರ್ಸ್‌ನ ಚಿ॥ ವಿ.ಮಹೇಶ್‌ರವರಿಗೆ ಅನಂತ ವಂದನೆಗಳು.

ಧಾರವಾಡ ಲಲಿತಾಂಬ ವೃಷಭೇಂದ್ರಸ್ವಾಮಿ

೧-೮-೧೯೯೫

■

## ಅಂತರಂಗ

೨೨. ಗುಂಪುಗಾರಿಕೆ

೨೩. ಸೂತ್ರಧಾರ

೨೪. ಆಷಾಢಭೂತಿಗಳು

೨೫. ಬರಿಕನಸು

೨೬. ಹಿಮಾಲಯದ ಬದಿಯಲ್ಲಿ

೨೭. ಚೆಂಗುಲಾಬಿಯ ಚೆಲುವು

೨೮. ಧಗೆಯಿಂದ ಪಾರಾದ ಬಗೆ

## ನಮ್ಮ ಮನೆತನದ ಮಹಾರಾಣಿ



ಮಮತೆಯ ಗೀರ್ವಾಣಿ

ಮುದ್ದಿನ ಮೊಮ್ಮಗಳು

ಚಿ॥ ಶರ್ವಾಣಿ ಯ

ಆರು ವಸಂತಗಳ ಪ್ರಿಯ ನೆನಪಿನ

ಪ್ರಕಟಣೆ.

೧೯೯೫

## ವಿಶ್ವಶಾಂತಿ

'ವಿಶ್ವಕ್ಕೆ ಶಾಂತಿ', 'ವಿಶ್ವಶಾಂತಿ' ಎಂದು ಎಲ್ಲೆಲ್ಲೂ ಗುಲ್ಲೋ ಗುಲ್ಲು
ಆದರೆ ಅದರ ಸುಳಿವು ಮಾತ್ರ ಹತ್ತದು ಎಲ್ಲೆಲ್ಲೂ
ವಿಶ್ವಕೆಲ್ಲಕೂ ಬೇಕಾಗಿದೆ ನಿಜಕೂ ಶಾಂತಿ.
ಆದರೆ ಹೃದಯಗಳಲಿ ಹಾಲಾಹಲ ತುಂಬಿದೆಯಾಗಿ
ಶಾಂತಿಯ ಬಯಸುವುದು ಬರಿ ಭ್ರಾಂತಿ'

ಇಲ್ಲಿ ಭಾಷೆಯ ಸಲುವಾಗಿಯಾದರೆ,
ಅಲ್ಲಿ ಗಡಿಯ ಗೆರೆಗಾಗಿ,
ಮತ್ತೊಂದೆಡೆಯಲ್ಲಿ ಸ್ಥಾನ–ಮಾನಗಳಿಗಾಗಿ
ಇನ್ನೊಂದು ಕಡೆ, ಸ್ವತಂತ್ರ ರಾಜ್ಯದೊಳು
ಅಟ್ಟಹಾಸದಿ ಮೆರೆವಾಸೆಗಾಗಿ,
ಅಲ್ಲೊಂದೆಡೆ ಜಾತಿಯ ಸೂತ್ರವೇ ಆಧಾರವಾಗಿ
ಅಶಾಂತಿ ತಾಂಡವವಾಡುತ್ತಿರುವಾಗ
ಕೈಗೆಟುಕದ ಪ್ರಾಪ್ತಿ ಈ ವಿಶ್ವಶಾಂತಿ.

ವಿಶ್ವಶಾಂತಿಗಾಗಿ ಹೋರಾಡಿ, ಬಳಲಿ ಬೆಂಡಾದದ್ದೇನೂ ಸುಳ್ಳಲ್ಲ
ಗೊರ್ಬಚೇವ್ ಗುರುಬಸವನಂತೆ ಹೆಣಗಿದುದೂ
ದಿಟವಹುದು
ಸೆಕ್ವೇರಾ ಶಾಂತಿದೂತನಾಗಿ ಪರದಾಡಿದುದೂ
ಸತ್ಯಕ್ಕೆ ದೂರವಲ್ಲ.
ಆದರೆ ಏನೂ ಆಗಲಿಲ್ಲ. ಗುರಿ ಮುಟ್ಟಲೇ ಇಲ್ಲ
ಜಗಕೇನೋ ಬೇಕಿದೆಯಾದರೂ ಶಾಂತಿ ಯಾವುದಕೂ
ಒಂದಿನಿತೂ ಹಿಂದೆ ಮುಂದೆ ಸರಿಯದೆ. ನಮ್ಮ ನಿಲುವೇ
ಸರಿ ಎಂದು ನಿಂತಾಗ

ಎಷ್ಟೇ ಬೊಬ್ಬಿಟ್ಟರೂ ಅದು ಗಗನ ಕುಸುಮ!
ವಿಶ್ವಶಾಂತಿಗಾಗಿ ಪಾರಿತೋಷಕ ಪಡೆದವರೂ

ತಲೆತಗ್ಗಿಸಿ, ಬೆನ್ನು ತಿರುಗಿಸಿ ಸುಮ್ಮನಾಗಬೇಕಾಯ್ತು
ಸದ್ದಿಲ್ಲದಂತೆ.!!

ಸದ್ದಾಂ, ಮುದ್ದಾಂ ಗುದ್ದಾಟ ಬಯಸಿದಾಗ
ಸ್ಕಡ್ ಕ್ಷಿಪಣಿಗಳ ಸಡ್ಡು ಹೊಡೆದು ಸಿಡಿಸಿದಾಗ
ಶಾಂತ ಸಾಗರದಲ್ಲಿ ಅಶಾಂತಿಯ ಎಣ್ಣೆ ಕೆಸರಾಗಿ
ಜೀವಿಗಳ ಉಸಿರಾಟಕ್ಕೆ ಉಂಟಾಯಿತು ಕಷ್ಟ
ಮಾನವನ ಸ್ವಾರ್ಥ. ಪ್ರಕೃತಿಯ ಜೀವಕೇ ತಂದಿತು ಕುತ್ತ

ಕೊಲ್ಲಿಯ ತುಂಬಾ ಕೊಲ್ಲುವಾಟ ನಡೆದು
ಹೊತ್ತಿ ಉರಿದ ಎಣ್ಣೆ ಬಾವಿಗಳು ವಿಶ್ವಶಾಂತಿಯ ಕೂಗನ್ನು
ಸುಟ್ಟು ಬೂದಿ ಮಾಡಿದಾಗ
ದಟ್ಟಹೊಗೆಯ ಜನ ದಟ್ಟಣೆಯ ಮುಸುಕಿ
ನೀರು, ಗಾಳಿ, ಭೂಮಿಯನೆಲ್ಲಾ ಕಲುಷಿತಗೊಳಿಸಿದಾಗ
ಮನವೆಲ್ಲಾ ಕಲಕು ಮಲಕಾಗಿ, ಮಲಿನವಾಯಿತು ಮನುಕುಲ!

ವಿಶ್ವಶಾಂತಿ ಬೇಕೆಂಬ ಚೀರಾಟ, ಹೋರಾಟ
ಖಡಲ್-ಖಡಲ್ ಎಂದು ಸಿಡಿವ ಕ್ಷಪಣಿಗಳ ನಡುವೆ
ಭುಗಿಲ್-ಭುಗಿಲ್ ಎಂದು ಉರಿವ ಅಗ್ನಿಯ ಮಧ್ಯೆ
ಪಟಾಕಿಯೊಂದು 'ಟುಸ್'ಎಂದಂತಾಯ್ತು.
ಶಾಂತಿ ಎದುರು ಅಶಾಂತಿ ಗರಿಗೆದರಿ ನರ್ತನ
ಮಾಡಿದಂತಾಯ್ತು.

ಕೊನೆಗೊಮ್ಮೆ ಕೊಲ್ಲಿಯಲ್ಲಿ ಕೊಲ್ಲುವಾಟ ನಿಂತಿತೇನೋ
ಹೌದು

ಆದರೆ, ದ್ವೇಷಾಗ್ನಿಯಲಿ ಸಿಡಿದ ಕಿಡಿ, ಹಾರಿ,
ಎಣ್ಣೆ ಬಾವಿಗಳ ಒಳಸೇರಿ, ಭುಗಿಲೆದ್ದ ಉರಿ
ದುಷ್ಟರ ಹೊಟ್ಟೆಯುರಿಯಂತೆ, ಅನಾಗರಿಕತೆಯ
ಕೆನ್ನಾಲಿಗೆಯಂತೆ
ವಿಶ್ವಶಾಂತಿಗಾಗಿ ಛಡಪಡಿಸುವವರ ನಿಟ್ಟುಸಿರಿನಂತೆ
ಬಹಳ ಕಾಲ ಉರಿಯಿತು ಕಾಳ್ಗಿಚ್ಚಿನಂತೆ.

ನಮ್ಮ ನಡೆ-ನುಡಿಯಲಿ ಮಾಡಿಕೊಳ್ಳದಿರೆ ಮಾರ್ಪಾಟ
'ವಿಶ್ವಶಾಂತಿ' ಬೇಕೆಂದು ಹಾಕುವ ಬೊಬ್ಬಾಟ

ಅದಕಾಗಿ, ಎಲ್ಲರೊಂದಿಗೆ ಹೆಣಗಿದರೂ, ಚೀರಿದರೂ
'ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ' ಎಂಬ
ಗಾದೆಯು ನೆನಪಿಗೆ ಬರುವುದಲ್ಲ.!

(೧೯೯೨ರಲ್ಲಿ ಅಮೆರಿಕ ಮತ್ತು ಇರಾಕ್‌ಗಳ ನಡುವೆ ಯುದ್ಧವಾದ ಸನ್ನಿವೇಶದಲ್ಲಿ ಬರೆದದ್ದು.)

■

## ಶಹಭಾಸ್ ವಂಚಕಾ

ವಂಚಕಾ,
ನೀ ಸ್ವಾರ್ಥಿಯಾಗಿ
ದ್ರೋಹಿಯಾಗಿ
ಮೋಸಗಾರನಾಗಿ
ವಿಷಜಂತುವಾಗಿ
ತತ್ವಭ್ರಷ್ಟನಾಗಿದ್ದರೂ
ನಿಸ್ವಾರ್ಥಿಯಂತೆ
ಉದಾರಿಯಂತೆ
ವಿನಯಶೀಲನಂತೆ
ಸೌಜನ್ಯವೇ ಮೂರ್ತಿವೆತ್ತಂತೆ
ಸ್ನೇಹದಿಂದ ಎಲ್ಲರನೂ
ಬಾಚಿ ತಬ್ಬಿಕೊಳ್ಳುವಂತೆ ಕಾಣಿಸಿಕೊಳ್ಳುತ್ತಾ
ಇದೇ ನಿಜವೆಂದು
ಜನರು ನಂಬುವಂತೆ
ನಿನ್ನನವರು ಮೆಚ್ಚುವಮತೆ
ನಾನಾ ಸೋಗು ಹಾಕಬಲ್ಲ ನಯವಂಚಕಾ
ನಿನ್ನ ಮುಂದೆ
ನಿಜವಾದ ನಿಸ್ವಾರ್ಥಿಗಳು,
ಉದಾರಿಗಳು,
ಸ್ನೇಹಪರರು,
ತ್ಯಾಗಶೀಲರು
ದಿಕ್ಕೆಟ್ಟು ಓಡಿಹೋಗುವಂತೆ
ಯಾರೂ ಅವರ ನಂಬದಂತೆ
ಪರಿಸ್ಥಿತಿಯ ನಿರ್ಮಿಸುವ, ನಿನ್ನ ಜಾಣ್ಮೆಗೆ

'ಶಹಭಾಸ್' ಎಂದು ಹೇಳುವುದು ಬಿಟ್ಟು
ಮತ್ತೇನೂ ಮಾಡಲಾರೆ! ಮತೇನೂ
ಮಾಡಲಾರೆ!!

(ಇಂದಿನ ಸಮಾಜದಲ್ಲಿ ಹಾಸು-ಹೊಕ್ಕಾಗಿ ಹಬ್ಬಿರುವ ಜನರನ್ನು ನೋಡಿ-ಮೂಡಿದ ಭಾವನೆ.)

■

## ಹಿಪೊಕ್ರೆಟ್ಸ್

ಹೇಳುವುದು ಸಜ್ಜನಿಕೆ
ಬದುಕುವುದು ಭಂಡತನದಿಂದ!
ಇವರೆಲ್ಲಾ ಹಿಪೊಕ್ರೆಟ್ಸಪ್ಪಾ ಹಿಪೊಕ್ರೆಟ್ಸ್
ಹೇಳುವುದೊಂದು, ಮಾಡುವುದು ಇನ್ನೊಂದು
ಒಳಗೆ ಹುಳುಕು, ಹೊರಗೆ ಥಳುಕು
ಇವರೆಲ್ಲಾ ಹಿಪೊಕ್ರೆಟ್ಸಪ್ಪಾ ಹಿಪೊಕ್ರೆಟ್ಸ್.

ವೇದಿಕೆಯಲಿ ಕಾಣಿಸಿಕೊಳ್ಳುವರು ಸರ್ವೋತ್ತಮರಂತೆ
ಜೀವನದಲಿ ಬದುಕುವರು ಅಧಮಾಧಮರಂತೆ
ಹಿಪೊಕ್ರೇಟ್ಸಪ್ಪಾ ಇವರೆಲ್ಲಾ ಹಿಪೊಕ್ರೆಟ್ಸ್
ಎಲ್ಲರನು ಟೀಕಿಸುವ ಇವರ ಬದುಕು
ಇರುವುದು ಎಲ್ಲರೂ ಟೀಕಿಸುವಂತೆ
ಇವರೆಲ್ಲಾ ಹಿಪೊಕ್ರೆಟ್ಸಪ್ಪಾ ಹಿಪೊಕ್ರೆಟ್ಸ್.

ಮಾಡುವುದು ಭ್ರಷ್ಟಾಚಾರ
ಬೋಧಿಸುವುದು ಶಿಷ್ಟಾಚಾರ
ಇವರೆಲ್ಲಾ ಹಿಪೊಕ್ರೆಟ್ಸಪ್ಪಾ ಹಿಪೊಕ್ರೆಟ್ಸ್
ನಾಟಕವಾಡುವರಿವರು ಎಲ್ಲರೂ ಹೊಗಳುವಂತೆ
ಒಳಹೊಕ್ಕು ನೋಡಿದರೆ ಇರುವುದಿವರ ಬದುಕು
ಉಗುಳುವಂತೆ.
ಇವರೆಲ್ಲಾ ಹಿಪ್ರೊಕ್ರೆಟ್ಸ್.
ದಾನಮಾಡುವರು 'ದಾನಿ' ಎಂಬ ಬಿರುದಿಗಾಗಿ
ಆ ಹಣವೆಲ್ಲಾ ಪಡೆದುದು ಇನ್ನೊಬ್ಬರ ಬೆವರಿನಿಂದಾಗಿ
ಇವರೆಲ್ಲಾ ಹಿಪೊಕ್ರೆಟ್ಸಪ್ಪಾ ಹಿಪೊಕ್ರೆಟ್ಸ್.
ನೋಟದಲ್ಲಿ, ಮಾತಿನಲಿ ಕಾಣುವರು ನಾಗರಿಕರಂತೆ
ನಡೆಯುವರು, ಬದುಕುವರು, ಅನಾಗರಿಕರಂತೆ
ಹಿಪೊಕ್ರೆಟ್ಸಪ್ಪಾ ಹಿಪೊಕ್ರೆಟ್ಸ್.

■

## ಓ ಭಾರತೀಯ ಹೆಣ್ಣೆ!

ಓ ಭಾರತೀಯ ಹೆಣ್ಣೆ! ನಿನಗೆಂತಹ ಬಿರುದು ಬಾವಲಿಗಳು!
ಗೃಹಲಕ್ಷ್ಮಿ, ಸಹನೆಯಲಿ ಭೂತಾಯಿ, ತಾಳ್ಮೆಯ
ಪ್ರತಿಮೂರ್ತಿ
ಎಂಬ ಪ್ರಸಂಶೆಗಳಿಗೆ ಮರುಳಾಗುತ್ತಾ
ಹೊಗಳುತ್ತಲೇ ತುಳಿದವರ ತುಳಿತಕ್ಕೆ ಸಿಕ್ಕು ಬಸವಳಿದು
ಬೆಂಡಾದೆ
ಚಂದದ ಮಾತಾಡಿ ಸ್ವಚ್ಛಂದವಾಗಿ ಶೋಷಿಸಿದರು ನಿನ್ನ
ಆದರಿನ್ನೂ ಎಚ್ಚತ್ತುಕೊಳ್ಳದಿರುವಿ ಏಕೆ?

ಬೇರೆಯವರ ಅನುಭವದಿ ಪಾಠಕಲಿಯಲು
ಬಾರದೆ ನಿನಗೆ?
ನಿನ್ನಂತೆ, ಹಿಂದಿನಿಂದಲೂ ತುಳಿತಕ್ಕೆ ಒಳಗಾದವರು,
ಎಲ್ಲಡೆ, ಎಲ್ಲದಕೂ ವಂಚಿತರಾಗಿ ಬದುಕಿದವರು
'ಶೂದ್ರ' 'ದಸ್ಯು' 'ದಲಿತ' ಎಂದು ಹೀನಾಯಗೊಂಡಿದ್ದವರು
ಬಿದ್ದುಮಲಗಿದವರೆದ್ದು ನಿಂದಿಹರಿಂದು
ತುಳಿದವರ ಕಾಲನೇ ಕಚ್ಚುವ ಮಿಡಿನಾಗರಾಗಿಹರು
ತುಳಿದವರ ತಲೆ ಮೆಟ್ಟಿ ನಡೆಯುತಿಹರು
ಬೀಸುವ ಬಿರುಗಾಳಿಯಂತೆ, ಅಬ್ಬರದಿ ಸುರಿವ
ಮಳೆಯಾಗಿ
ಎಸಗಿದ ಅನ್ಯಾಯಕೆ ಬಸವಳಿವಂತೆ ಮಾಡುವೆವೆಂದು
ಪಣತೊಟ್ಟುನಿಂದಿಹರು.
'ಹಳೆಯ ಕೊಳೆಯನೆಲ್ಲಾ ತೊಳೆದು
ಶುಭ್ರವಾಗಿಸುವೆವೆಂದು
ಮೈಕೊಡವಿ ನಿಂದಿಹರು; ಮೈದುಂಬಿ ನಡೆಯುತಿಹರು
ಅವರ ನೋಡೊಮ್ಮೆ ನೋಡಿಯಾದರೂ ಎದ್ದೇಳು.
ಮುನ್ನುಗ್ಗು.

ಮುನಿದೆ ಏಕಮ್ಮಾ ನೆಲದಾಯಿ/೩.೨೫

ನಿನ್ನ ತುಳಿದವರ ಬಗ್ಗುಬಡಿದು, ಸಗ್ಗ ಮಾಡಿಕೊ ನಿನ್ನ
ಜೀವನವ.

'ಓ ಭಾರತೀಯ ಹೆಣ್ಣೆ! ಮುಗಿಯಲಿಲ್ಲವೆ ಇನ್ನೂ ನಿನ್ನ ನಿದ್ದೆ?
ಬುದ್ಧ, ಬಸವ, ಗಾಂಧಿ ಬಂದು ಹೋದರೂ,
ಎಚ್ಚರಾಗಲಿಲ್ಲವೆ ನಿನಗೆ?
ಈಗಲಾದರೂ ಮೇಲೇಳು! ಇನ್ನೂ ತಡವಾಗಿಲ್ಲ
ಹೇಡಿತನವ ಹೊಡೆದಟ್ಟಿ ಹೊರಗೆ ಬಾ.
ನಿನ್ನ ಅಕ್ಷಿಗಳಲ್ಲಿ ನೀರ ತರಿಸಿದವರ ಕಣ್ಣಲ್ಲಿ ನೆತ್ತರು ಬರುವಂತೆ
ಮಾಡು ಬಾ.

ಏನೆಂದೆ? ನಾನೊಲ್ಲೆ ಎನ್ನುತಿರುವೆಯಾ?
ಅದೆಲ್ಲಾ ಸರಿಯಲ್ಲವೆಂದು ನುಡಿಯುತಿಹೆಯಾ?
ಏ ಪೆದ್ದೆ! ನಿನ್ನ ಕಾಡಿ, ದೂಡಿ ಕಣ್ಣೀರ ಕೋಡಿ
ಹರಿಸಿದವರನೇ
ಬೇಡಿಕೊಂಡು ಬದುಕಬೇಕೆಂದು ಬಗೆದಿರುವೆಯಾ?
ನೀನೊಬ್ಬ ಹೇಡಿ! ನಿನ್ನ ಮೂರ್ಖತನಕ್ಕೆ ಕೊನೆ ಇಲ್ಲ.

'ಇಲ್ಲ! ನಾ ಮೂರ್ಖಳಲ್ಲ ನನ್ನ ನಿಲುವೇ ಜಗಕೆ ಸುಖವು
ಮಿಗೆ ಶಾಂತಿಯ ಜಲವು. ನನಗೇಕೆ ಸೇಡು? ನನಗೇಕೆ ಛಲ?
ಬರಲಿಹುದು ಹೊಸ ಬದುಕು, ಮೂಡಿಹುದು ನವ್ಯ
ವಿಚಾರಧಾರೆ.
ಸಮಾಜ ನಿಂತ ನೀರಲ್ಲ, ಹರಿವ ಹೊಳೆಯಹುದು
ಕಾಲವೇ ಇದಕೆಲ್ಲ ಮದ್ದು, ಇದಕ್ಕೆ ಸಂಶಯವಿಲ್ಲ.
ಶತಮಾನಗಳ ಶೋಷಣೆ ಅದಂದಿನ ಯುಗಧರ್ಮ
ಇಂದು ರಾಜಕಾರಣಿಗಳಿಂದ, ಕುತಂತ್ರಿಗಳಿಂದ ಶೋಷಣೆ
ನಡೆಯುತಿಲ್ಲವೆ?
ಅಂದಿನ ಕಾರಣಕೆ ಇಂದೇಕೆ ಸೇಡು?
ಯಾರೋ ಮಾಡಿದ ತಪ್ಪಿಗೆ ಮತ್ತಾರೋ ಶಿಕ್ಷಿಪುದೆ?
ಹೊಸಕಾಲ ಬಂದಿಹುದು; ಹೊಸದೃಷ್ಟಿ ಹರಿದಿಹುದು
ಸುದಿನಗಳು ಬರುವಲ್ಲಿ ಸಂಶಯವಿಲ್ಲ
ಆದರೆ ಕಾಯಬೇಕು ಕೆಲಕಾಲ ಅಷ್ಟೆ, ಕಾಯುವುದ ಬಿಟ್ಟು
ಸೇಡ ತೀರಿಸ ಹೊರಟೆನಾದರೆ ಆ ದಳ್ಳುರಿಯಲ್ಲಿ

ಕೆಡುಕಿನೊಡನೆ ಒಳಿತೂ ಹೋದಾವು ಉರಿದು
ಬೆಂಕಿ ಬಿದ್ದಾಗ ಅವರೇನು! ಇವರೇನು! ನಾವೇನು!
ಎಲ್ಲರೊಂದಾಗಿ ಸುಟ್ಟು ಕರಕಾದೇವು!
ಅದಕಾಗಿ ಎಲ್ಲರೊಡನೊಂದಾಗಿ ಸಹಬಾಳ್ವೆ ನಡೆಸಿ.
ತಪ್ಪ ಮಾಡಿದವರು ತಾವೇ ಅರಿತು ನಾಚುವಂತೆ

ಮಾಡಲೆಳಸಿರುವೆಯಾ?
ಅಂತು ಮಾಡಿದೊಡೆ ಅಂದು ಕಣ್ಣಲಿ ನೀರತರಿಸಿದವರು
ಇಂದು ಆನಂದಬಾಷ್ಪ ಸುರಿವಂತೆ ಮಾಡಿಯಾರೆಂಬ ನಿನ್ನ
ನಂಬುಗೆಯಲಿ ನನಗೂ ಏಕೋ ವಿಶ್ವಾಸ ಮೊಳೆಯುತಿದೆ!
ಹೌದು,..............
ನೀ ಬಗೆದಂತೆ 'ಕಾಲ'ವೆಲ್ಲವ ಸರಿಹೊಳಿಸುವಲ್ಲಿ ಸಂಶಯವಿಲ್ಲ!

ನಿನ್ನ ದೂರಾಲೋಚನೆಗೆ, ನಿನ್ನ ಜಾಣ್ಮೆಗೆ, ನಿನ್ನ ತಾಳ್ಮೆಗೆ
ಯಾವ ಬಹುಮಾನ ಕೊಟ್ಟು ಸನ್ಮಾನಿಸಲಿ ಓ. ಭಾರತೀಯ
ಹೆಣ್ಣೆ!

(ಸ್ತ್ರೀ ವಾದಿಗಳ ಭಾವನೆಗಳಿಗುತ್ತರವಾಗಿ ಮೂಡಿದ ವಿಚಾರಗಳು.)

■

## ಕರುಳಲ್ಲಿ ಕತ್ತಿಯಾಡಿಸಬೇಡ

ಯಾರಿಗೂ ಕಾಣದ ದೇವರೆಲ್ಲಿಹನು?
ಕೈಗೂ ಸಿಗ ದೆ, ಕಣ್ಣಿಗೂ ಕಾಣದೆ
ಮಾಡುವಾಟ ಮಾಡುತ್ತಾ, ಆಡುವಾಟವಾಡುತ್ತಾ
ನಿನ್ನಾಟದ, ನಿನ್ನ ಮಾಟದ ಫಲವ ನಮಗುಣಿಸುತ್ತಾ
ಎಲ್ಲಿ ಅವಿತು, ನಮ್ಮ ಬವಣೆಯ ನೋಡುತ್ತಾ
ಕಿಲಾಡಿ ನಗು-ನಗುತ್ತಾ ಅಡಗಿ ಕುಳಿತಿರುವೆ ನೀನು?
ಯಾರೋ ದೀರ್ಘದಂಡ ಹಾಕಿ,
ನಿನಗಾಗಿ ಹಂಬಲಿಸುತಲಿಹರು;
ಮತ್ತೋರ್ವರು ಜಪ-ತಪದಿ
ನಿನ್ನ ಕಾಣಲೆತ್ನಿಸುತಲಿಹರು;
ಇನ್ನೋರ್ವರು ತೀರ್ಥಯಾತ್ರೆಯಲಿ
ನಿನ್ನನರಸುತಲಿಹರು;
ಮಗುದೋರ್ವರು ವ್ರತಪೂಜೆಗಳಿಂ
ನಿನ್ನ ಒಲಿಸಲು ತೊಡಗಿಹರು.
ಇವೆಲ್ಲಾ ಹಲುಬಿ, ಹಲುಬಿ ಹಣ್ಣಾದರೂ
ನೀನೆಲ್ಲೂ ಕಾಣಲೊಲ್ಲೆ, ಸಿಗಲೊಲ್ಲೆ.
ತಲೆತಪ್ಪಿಸಿಕೊಂಡು ತಿರುಗುತಿಹೆ ಏಕೆ?
ಧೈರ್ಯವಿದ್ದರೆ ಎದುರು ಬಂದು,
ಆಡಿಸು, ಕುಣಿಸು, ನಲಿಸು, ಅರಳಿಸು;
ಆದರೆ ಹೇಡಿಯಂತೆ ಹಿಂದಿನಿಂದ ಬಂದು
ಬೆನ್ನಲಿರಿಯಬೇಡ
ಧೂರ್ತನಂತೆ ಸಜ್ಜನರ
ಕರುಳಲ್ಲಿ ಕತ್ತರಿಯಾಡಿಸಬೇಡ ಪ್ರಭುವೆ!

-೧೯೯೧

■

## ಪಡೆದು ಬಂದವರು

ಪಡೆದು ಬಂದವರು, ಪಡೆದು ಬಂದವರೆನ್ನುವರಲ್ಲಾ
ಯಾರು ಪಡೆದು ಬಂದವರು?
ಏನ ಪಡೆದು ಬಂದವರವರು?
ಪಡೆದವರವರು ಬೇಕಾದುದನೆಲ್ಲಾ, ಅವರಿಗಿಲ್ಲದಾವುದರ
ಕೊರತೆ.
ಚಂದಮ್ಮನು ಪಡೆದು ಬಂದವಳೆಂಬರೆಲ್ಲರೂ
ಅವಳ ನೋಡಿದರೆ ತಿಳಿವುದು ಪಡೆದು
ಬಂದವರೆಂದರೇನೆಂದು!

ಬಹು ಜನರಿಗಾಗಿಹುದು ಸಂಸಾರ ನಿಸ್ಸಾರ,
ತಂದಿಹುದು ಬೇಸರ
ಆದರದೇ ಸಂಸಾರ ಚಂದಮ್ಮಗಾಗಿಹುದು ಬಹುಸಾರ!
ಅವಳ ಗಂಡನಿಗುಂಟು ಎಲ್ಲ ಹಂತದ ನಂಟು,
ಹಾಗಾಗಿ ದೊಡ್ಡದಾಗಿದೆ ಅವರ ಹಣದ ಗಂಟು;
ಮಕ್ಕಳೋ ಸೂರ್ಯ–ಚಂದ್ರಮರಂತೆ
ಕೊಡುವವರವಳಿಗೆ ಬೆಳಕ ತಂಪ
ಸೊಸೆಯೋ ನೋಡಲು ಬಲು ಅಂದ,
ಕೆಲಸ ನೋಡಿದರಾಗುವುದಾನಂದ
ತಿಳಿವುದವಳ ನೋಡಿದರೆ,
ಚಂದಮ್ಮನೇಕೆ ಪಡೆದು ಬಂದವಳೆಂದು!
ಸೊಸೆಯ ನಡೆ–ನುಡಿಯಲಿ ಕಾಣುವುದು ಒಪ್ಪ–ಓರಣ
ಅವಳು ಸೂಸುವ ಮಂದಹಾಸ,
ಓಡಿಸುವುದು ಮನೆಯಲೆಲ್ಲರ ತ್ರಾಸ
ಮನೆ ತುಂಬ ಬೀಸುವುದವಳ ನಲುಮಾತು ತಂಗಾಳಿಯಂತೆ
ಓಡಾಡುವಳು ಜಿಂಕೆಯಂತೆ,
ಪರಿಹರಿಸುವಳು ತೊಂದರೆಗಳ ದಕ್ಷಳಾಗಿ

ಹಿರಿಯರಿಗೆ ರಕ್ಷಕಿಯಾಗಿ, ಕಿರಿಯರಿಗೆ ತಾಯಿಯಾಗಿ
ಮಕ್ಕಳಿಗೆ ಶಿಕ್ಷಕಿಯಾಗಿ, ರೋಗಿಗಳಿಗೆ ದಾಯಿಯಾಗಿ
ಸೋಗಿನವರಿಗೆ ಭೈರವಿಯಾಗಿ, ಪತಿಗೆ ಶಾಂತಲೆಯಾಗಿ
ಮನೆಗೆ ಮಹಾಲಕ್ಷ್ಮಿಯಾಗಿ, ಭಾಗ್ಯವ ಬೆಳಸಿ, ಆಲಸ್ಯವ
ಓಡಿಸಿ
ಮನೆಯ ಮುಂದೆ ಬರುವಂತೆ ಮಾಡುತಿಹಳು
ಅವಳಿರುವಲ್ಲಿ ಕಸುರಿನಿತಿಲ್ಲ, ನೋವಿಗೆ ಸ್ಥಳವಿಲ್ಲ
ಅವಳಲ್ಲಿ ಮರೆ, ಮೋಸ ಕೊಂಕುಗಳ ಸುಳಿವಿಲ್ಲ
ಆನಂದವೆಂಬೈಶ್ವರ್ಯದಿ ಪಸರಿಸಿಹುದು ನಗೆ ಮನೆ ತುಂಬ
ಕಣ್ಣೀರ ಹರಿಸುವ ಕಾರಣವಾರಿಗೂ ಇಲ್ಲ
ಅದಕಾಗಿ ಎನ್ನುತಿಹರೆಲ್ಲರೂ
ಚಂದಮ್ಮ ಪಡೆದು ಬಂದವಳೆಂದು!

■

## ದುಡಿಯಬೇಕು ಒಳಿತಿಗಾಗಿ

ನಮ್ಮ ದೇನಿಲ್ಲ, ಎಲ್ಲ ವಿಧಿವಿಲಾಸ, ನಮ್ಮ ಕೈಲೇನಿಲ್ಲ,
ಅವನಾಟವಿದೆಲ್ಲಾ ಎಂದರೆ ಇಂದಿನವರು ಒಪ್ಪುವುದೇ ಇಲ್ಲ.
ಅಲ್ಲದೆ, ನೀವೆಲ್ಲಾ ಮೂರ್ಖರು, ಹಣೆಯ ಬರಹವೆಂಬ
ಹೆಸರ ಕೊಟ್ಟು, ವಿಧಿಯನು ದೂರಿ, ನಿಮ್ಮ
ಜವಾಬ್ದಾರಿಯಿಂದ
ಜಾರಿಕೊಂಬುವಿರಿ ಎಂದು ದೂರುವರಲ್ಲ!

ಇಂದಿನ ಮಾನವಗೆ ಅಸಾಧ್ಯವೆಂಬುದಿಲ್ಲ
ಒಂದು ಸಣ್ಣ ಊರನೆ ನೀರಲಿ ಮುಳಗಿಸದಂತೆ ತೇಲಿಸಿ
ಮುನ್ನಡೆಸುವರು!
ಭುವಿಯ ಒಂದು ತುದಿಯಲ್ಲಿದ್ದವನು ಇನ್ನೊಂದು
ತುದಿಯಲಿರುವವನೊಡನೆ
ಎದುರು-ಬದುರು ಕುಂತು ಸಲ್ಲಾಪ (ಮಾಳ್ಪಂತೆ) ಮಾಡಿಹನು!
ಸಾವಿರಾರು ಮೈಲಿ ದೂರದಲಿರುವವನ ಇಲ್ಲೇ, ಮನೆಯಲ್ಲೇ
ನೋಡುವಂತೆ ಮಾಡಿಹನು!
ಸೇತುವೆ ಮುರಿದು ದಾರಿ ಕಟ್ಟಾಗಿ, ವಿದ್ಯುತ್ ಲೈನು ಹರಿದು
ದೂರವಾಣಿಗೂ ದಾರಿ ಸಿಗದಿರಲು,
ಯಾವ ಮಾರ್ಗವೂ ಊರ ತಲುಪದಾಗ,
ಮಾನವ ಹಕ್ಕಿಯಂತೆ ಪಕ್ಕಉಳ್ಳ ಯಂತ್ರದಲಿ ಹಾರಿಹೋಗಿ,
ಆ ಊರ ಜನಕೆ ಉಣಿಸಬಲ್ಲ, ತೊಡಿಸಬಲ್ಲ, ತಣಿಸಬಲ್ಲ,
ರೋಗ ಮದ್ದು ನೀಡಬಲ್ಲ!

ಇದ ನೋಡಿದಾಗ ಅನಿಸುವುದು
ಇಂದಿನವರ ಮಾತು ನಿಜವೆಂದು;
ಆದರೂ ಮಾನವಗೆ ಅಸಾಧ್ಯವಾದವು ಇಹವು ಇಂದೂ
ತನ್ನ ಇತಿ-ಮಿತಿಗಳ ಮರೆಯಬಾರದು ಅವನೆಂದೂ.

ಎಲ್ಲವೂ ಅವನ ಕೈಲಿದ್ದರೆ, ತಡೆಯನೇಕೆ
ಅತಿವೃಷ್ಟಿ-ಅನಾವೃಷ್ಟಿ?
ನಿಲಿಸನೇಕೆ ಭೂಕಂಪ! ತೋರಿಸುವರು ಬರಿ ಅನುಕಂಪ!
ಕೊಟ್ಟನೆ ಇವನು ಮಲ್ಲಿಗೆಗೆ ಬಿಳಿಯನು?
ಮನೋರಂಜನಕೆ ಹಸುರನು?

ಬೆಂಡೆ, ಬದನೆ, ಹೀರೆ, ಹಾಗಲಗಳಿಗಿಟ್ಟನೆ ಇವನು
ಬೇರೆ-ಬೇರೆ ರುಚಿಯನು?
ಮಗುವೊಂದು ಹುಟ್ಟಿದಾಗ,
ಅದಕೆ ನಾಲ್ಕು ಕೈ, ಎರಡು ತಲೆ, ಒಂದೇ ಹೊಟ್ಟೆ;
ಆದರದಕೆ ಕಾಲೇ ಇಲ್ಲ!
ಮತ್ತೊಂದ ಬೆರಗ ಕೇಳು,
ಒಂದು ಕರುವಿಗೆ ಆರುಕಾಲು ಜೊತೆಗೆ
ಬೆನ್ನ ಮೇಲೊಂದು ಜೋತಾಡುತಿಹುದು
ಹೀಗೇಕಾಯಿತೆಂದು ಕೊಡುವನು ವಿವರ ವಿಜ್ಞಾನಿ;
ಆದರೆ ಹಾಗಾಗದಂತೆ ತಡೆಯುವನೇನವನು?
ಮಗುವೊಂದು ವರುಷವೈದರಲೆ ಗಣಿತದಲಿ ಪರಿಣತನು,
ಪುಟ್ಟನೊಬ್ಬ ಹಲವು ರಾಗಗಳ ಆಲಾಪಿಸುವನು,
ವೈದ್ಯರೇ ಕೈ ಕಟ್ಟಿ ಕುಳಿತಾಗ, ರೋಗಿ ಪಾರಾಗಿಹನು
ಮರಣದಿಂದ, ಎಲ್ಲರೂ ನಿಬ್ಬೆರಗಾಗುವಂತೆ.
ಇದಕಾವ ವಿವರಣೆ ಕೊಡಬಲ್ಲ ವಿಜ್ಞಾನಿ?
ಇದ ನೋಡಿ ಮಾನವ ಸೊಕ್ಕಿ ಮೆರೆವುದ ನಿಲ್ಲಿಸಿ
ತನ್ನ ಅಹಂಕಾರಕ್ಕೆ ಹಾಕಬೇಕು ಬ್ರೇಕು!
ಹಾಗೆಂದು ಎಲಲವನು ವಿಧಿಯ ಮೇಲೆ ಹಾಕಿ
ಕೈ ಚಲ್ಲಿ ಕುಳ್ಳಿರ ಬೇಕೆಂದೇನೂ ಅಲ್ಲ; ತನಗೆ
ಮೀರಿದುದೂ, ಅಸಾಧ್ಯವಾದುದೂ ಸಾಕಷ್ಟು ಇದೆ ಎಂದು
ನಿರಹಂಕಾರದಿ, ದುಡಿಯಬೇಕು ಮಾನವತೆಯ ಒಳಿತಿಗಾಗಿ.

■

# ಮುನಿದೆ ಏಕಮ್ಮಾ ನೆಲದಾಯೆ?

ಓ ಆಯಿ, ಮಾತಾಯಿ, ಶ್ರೀಶಂಕರಿ
ನೀನಿಂದು ಏಕಾದೆ ಮಹಾ ಭಯಂಕರಿ
ಅನುದಿನವೂ ನಿನ್ನ ಹಸುಳೆಗಳಿಗೆ ಅನ್ನ ನೀರಿಕ್ಕಿ ಸಲಹುವ
ನೀನು

ಮಮತೆಯ ನಿನ್ನ ತೋಳ್ತೆಕ್ಕೆಯಲಿ ಲಾಲಿಹಾಡಿ
ಮಲಗಿಸಿಕೊಂಡವಳು
ಬೆಳಗಾಗೇಳಲು ಬಿಡದೆ, ಮೃತ್ಯುಕೂಪಕೆ ತಳ್ಳಿದೆ ಏಕೆ
ಎಲ್ಲರನು?
ಹಾಲನುಣಿಸುವ ತಾಯಿ ಉಣ್ಣಿಸಬಹುದೆ ಹಾಲಾಹಲವನು?
ನೋಡಿಲ್ಲಿ ಮಾತೆ! ಸಾಸಿರ, ಸಾಸಿರ ಸಂಖ್ಯೆಯಲಿ ನಿನ್ನ
ಕಂದಮ್ಮಗಳು
ಸತ್ತು ಮಲಗಿಹರು ಕಲ್ಲುರಾಶಿಯ ಕೆಳಗೆ!
ಒಂದೊಂದು ಮನೆಯಲಿ ಉಸಿರಾಡಿಸುವ ಒಬ್ಬರೂ
ಉಳಿದಿಲ್ಲವಲ್ಲಾ!
ಅಲ್ಲಿ ನೋಡು ತಾಯೆ, ತಿಂಗಳ ಕಂದ ಸಂದಿಯಲಿ
ಬಂಧಿಯಾಗಿ ಅಳುತಿಹುದು.
ಮತ್ತಲ್ಲಿ, ಎಲ್ಲರನು ಕಳಕೊಂಡು ಬಾಲೆಯು ಮಿಡಿಯುತಿಹಳ
ಕಣ್ಣೀರ.
ಇವನ ಅಪ್ಪ ಕಾಣಲೊಲ್ಲ, ಅವನ ಮಗ ಸಿಕ್ಕಲೊಲ್ಲ
ಆ ಮುದುಕಿಯ ನೋಡು, ಎದೆ-ಎದೆ ಬಡಕೊಂಡು
ಅಳುತಿಹಳಲ್ಲಿ
ನೀ ಒಂದು ಕ್ಷಣ ಮುನಿದರೆ ಆಗುವ ಅನಾಹುತ ನೋಡು
ಇಲ್ಲಿ.
ಇತ್ತ ಕಡೆ ಬಾ ತಾಯಿ, ಇವಳ ಕಾಲುಗಳು ಮುರಿದಿಹವು!

ಅವಳ ಕೈ ಗಳೇ ಇಲ್ಲವಲ್ಲ! ಮತ್ತವನ ಕಣ್ಣುಗಳಲಿ ನೆಟ್ಟಿಹವು ಗಾಜಿನಾ ಚೂರುಗಳು.

ಕೇಳು, ಇವರೆಲ್ಲರ ಆಕ್ರಂದನ!
ಇಂದೇನೋ ಎಲ್ಲರೂ ಬದುಕುಳಿದವರಿಗೆ ನೀಡುವರು ಸಾಂತ್ವನ
ಆದರೆ ಮುಂದೆ ಅವರಿಗೆ ಕೊಡುವರು ಯಾರು ಜೀವನ?
ಜಗದಗಲ, ಮುಗಿಲಗಲ ಹರಡಿದೆ ಅನುಕಂಪನ!
ನಿನ್ನ ದುರ್ದೈವಿ ಮಕ್ಕಳ ಸನಿಹಕೆ ಹರಿದು ಬರುತಿಹುದು
ಹಣವಾಗಿ, ಅನ್ನವಾಗಿ, ನೀರಾಗಿ, ನೆಳಲಾಗಿ
ಎಲ್ಲೆಲ್ಲಿಂದಲೊ ಬಂದು ಬೀಳುತಿಹುದು ನಿಲ್ಲಿಸಲು ಆಕ್ರಂದನ.

ಓ ತಾಯಿ, ಭೂತಾಯಿ ಎಂದೆಂದೂ ಮಮತೆಯ
ತೋರುತಿದ್ದ ನೀನು
ಅಂದೇಕೆ ಕರುಣೆಯ ಕಳಕೊಂಡು ಕ್ರೂರಿಯಾದೆ?
ನಿನ್ನ ಕಂದಗಳ ಕಚ್ಚಾಟ, ಬಡಿದಾಟ, ದೌರ್ಜನ್ಯ ನೋಡಿ
ಬೇಸತ್ತು, ಸಿಟ್ಟಿಗೆದ್ದು ಬುದ್ಧಿಗಲಿಸಲು ಇಂತು
ಮಾಡಿದೆಯಾ?
ಕಾಯುವವಳೇ ಕೊಂದರೆ ಉಳಿಸಿಕೊಳ್ಳುವರಾರು?
ಈಗ ನೋಡಿಲ್ಲಿ ತಾಯಿ, ಈ ಕ್ಷಣದಿ ನಿನ್ನ ಮಕ್ಕಳು
ಭೇದವ ಮರೆತು, ಮಾನವತೆಯೇ ಒಂದಾದಂತೆ
ದುಃಖಿಸುತಿಹರು ಘಟನೆಗಾಗಿ
ಪೌರ್ವಾತ್ಯ-ಪಾಶ್ಚಾತ್ಯದ ವ್ಯತ್ಯಾಸ ಅಳಿಸಿಹುದು
ದಾಯಾದಿಗಳ ದ್ವೇಷ ಆರಿ, ಕಣ್ಣೀರು ಬಸಿದಿಹುದು
ಬಡವ-ಬಲ್ಲಿದನೆಂಬ ಭೇದ ಅಳಿದಿಹುದು
ಈ ನಿನ್ನ ಸಿಟ್ಟಿನ ಕಟ್ಟಿನಲಿ, ಎಲ್ಲರೊಂದೆಂಬಂತೆ
ನಿಂದು, ಬಂದು ನೆರವ ನೀಡುತಿಹರು ತಾಯಿ.
ಮಾಯಿ ಇನ್ನೆಂದಿಗೂ ಹೀಗೆ ಮುನಿಯಬೇಡ
ನಿನ್ನ ಕಂದಮ್ಮಗಳ ಕೊಂದುಹಾಕಬೇಡ ಮಾತೆ.

(೧೯೯೩ನೇ ಇಸವಿ ಸೆಪ್ಟೆಂಬರ್ ತಿಂಗಳಲ್ಲಿ ಮಹಾರಾಷ್ಟ್ರದಲ್ಲಿ ಉಂಟಾದ ಭೂಕಂಪದ ಪರಿಣಾಮ ಓದಿದಾಗ ಬರೆದದ್ದು.)

## ಸ್ತ್ರೀವಾದಿ ದನಿ

ಎಲ್ಲೆಲ್ಲೂ ಕೇಳುತಿವೆ ಸ್ತ್ರೀವಾದಿಗಳ ದನಿಗಳು
ನಡೆಯುತಿವೆ ಚಳವಳಿಗಳು, ವಿಚಾರಸಂಕಿರಣಗಳು
ಮಹಿಳೆಯ ಶೋಷಣೆ, ಅವಳತನದ ಭಕ್ಷಣೆ
ಇವುಗಳೆಲ್ಲವುಗಳ ಹಿಂದಿರುವ ಪ್ರಚೋದನೆ.

ತಲೆತಲಾಂತರದಿಂದ ಮಹಿಳೆ ಶೋಷಣೆ ಒಳಗಾಗಿ
ಪುರುಷನ ದಬ್ಬಾಳಿಕೆಗೆ ಈಡಾಗಿ
ಅವನಧಿಕಾರ ದಾಹಕ್ಕೆ ಗುರಿಯಾಗಿ
ಮುದುಡಿ ಬಿದ್ದಿದ್ದಳು ಈವರೆಗೆ ಮಣ್ಣು ಮುದ್ದೆಯಾಗಿ.

ಪುರುಷಪ್ರಧಾನ ಸಮಾಜದ ಸ್ತ್ರೀಗೊಂದು ನೀತಿಯಾದರೆ.
ಪುರುಷನಿಗಿನ್ನೊಂದು!
ವಿಧುರ ವಿವಾಹ ಸಮ್ಮತ, ವಿಧವಾ ವಿವಾಹ ನಿಷಿದ್ಧ!
ಪುರುಷನಿಗಿರಬಹುದು ಅನೇಕ ಪತ್ನಿಯರು!
ಆದರಾಕೆ ಪರಪುರುಷನೊಡನೆ ಮಾತನಾಡಿದರೂ ಅಪರಾಧ!!

ಮಹಿಳೆ ಮನೆಯೊಳಗೇ ಬಂಧಿಯಾದರೆ
ಪುರುಷ ಸ್ವೇಚ್ಛಾಚಾರಿ,
ಅವನಿಗಿಲ್ಲ ಯಾವ ಕಟ್ಟು-ಕಟ್ಟಳೆ
ಮಹಿಳೆ ಹೊರಗೆ ದುಡಿದು ಬಂದರೂ, ಮನೆಯ
ಕೆಲಸಕೂ ಅವಳೇ ಜವಾಬ್ದಾರಿ!
ದುಡಿದು ಮನೆಗೆ ಬಂದ ಪುರುಷ, ಮನೆಯಲ್ಲಿ
ಪಡೆಯಬೇಕು ವಿಶ್ರಾಂತಿ!!

ಈ ತಾರತಮ್ಯಗಳು ಸಿಡಿದೆಬ್ಬಿಸಿವೆ ಕಿಡಿಗಳ
ಮಹಿಳೆಯೊಡಲಿನಲಿ
ಕಿಡಿಗೆದರಿ, ಉರಿಹತ್ತಿ ಜ್ವಾಲೆಯಾಗಿ ಹಬ್ಬುತಲಿದೆ ಎಲ್ಲೆಲ್ಲೂ

ಈ ಜ್ವಾಲೆ ಕೆಟ್ಟುದನು ಸುಟ್ಟು ಬೂದಿ ಮಾಡುವಾಗ
ಒಳ್ಳೆಯದನು ನುಂಗಿ ನೀರು ಕುಡಿಯಬಾರದಲ್ಲ!
ಏನ ಬಯಸುವೆನೆಂದು ಆಕೆ ಅರಿತು
ಮುನ್ನಡೆಯಬೇಕು,

ತನ್ನ ಗುರಿಯ ಸ್ಪಷ್ಟ ಚಿತ್ರವಿಲ್ಲದಿರೆ,
ಕಲ್ಲು ಮುಳ್ಳಿನ ದಾರಿ ಎದುರಾಗಿ,
ಒಂದು ತೊಂದರೆ ಅಳಿಸಿ ಮತ್ತೊಂದು ಮುಂದೆ ಬಂದೀತು!
ಕುಟುಂಬದ ತೋಟದಲಿ ಬೆಳೆದ ಹೂಗಳು
ಕಮರಿಹೋದಾವು!!

ಎಚ್ಚರೆಚ್ಚರ ಮಹಿಳೆ ಎಚ್ಚರ! ನಿನಗೇನು ಬೇಕು?
ಪುರುಷನಿಗೂ ನಿನಗಿರುವ ಕಟ್ಟು-ಕಟ್ಟಳೆ ಹಾಕಬೇಕು
ಮೌಲ್ಯಗಳ ನೀ ಪಾಲಿಸುವಂತೆಯೇ ಅವನೂ ಬದುಕಬೇಕು.
ವಿಧುರ ವಿವಾಹ ಒಪ್ಪಿತವಾದಂತೆ, ವಿಧವಾ ವಿವಾಹಕ್ಕೂ
ಸಮ್ಮತಿ ಬೇಕು,

ಅಲ್ಲವೆ?
ನೀತಿ ನಿಯಮಗಳು ಗಂಡ-ಹೆಂಡಿರಿಗೆ
ಸಮನಾಗಿರಬೇಕು
ಸೌಲಭ್ಯಗಳಲ್ಲಿ ಅವಕಾಶಗಳಲಿ ಎಲ್ಲೂ
ಭಿನ್ನ-ಭೇದವಿರಬಾರದು
ಯಾರು ಹೆಚ್ಚು? ಯಾರು ಕಡಿಮೆ ಎಂಬುದಿಲ್ಲ, ಕೆಲಸ
ಇದು
ನನ್ನದು ಅದು ನಿನ್ನದು ಎಂಬ ತಾರತಮ್ಯವಿಲ್ಲದ
ಸಮಾನತೆ ಇರಬೇಕು.
ಆದರಿದನೆಲ್ಲಾ ತಿಳಿಸುವ, ಪ್ರಶ್ನಿಸುವ ಭರಾಟೆಯಲ್ಲಿ
ದನಿ ಏರಿ, ಗುರಿ ಮೀರಿ, ಗೊಂದಲವೋ ಗೊಂದಲ!!
ಅದರಲ್ಲಿ ತಾರತಮ್ಯ ತಿಳಿಯದ ನವಜವ್ವನೆಯರು ದಿಕ್ಕು
ತಪ್ಪುತಿಹರು
ಹಾಗಾಗಿ ಸ್ತ್ರೀವಾದಿ ದನಿಗಳು, ಹೆಜ್ಜೆಗಳು ಎಚ್ಚರದಿ
ಮುನ್ನಡೆಯಬೇಕು.

■

## ಪ್ರಜಾಪ್ರಭುತ್ವದ ಪ್ರಜೆಗಳು

ಇವರು ಯಾರು ಗೊತ್ತಿಲ್ಲವೆ? ಇವರು ಪ್ರಜಾಪ್ರಭುತ್ವದ
ಪ್ರಜರು!
ದಿನ ಬೆಳಗೆದ್ದರೆ, ಒಂದಲ್ಲ ಒಂದು ಸ್ಟ್ರೈಕು, ಇವರ ಕಸಬು
ಯಾಕೀ ಸ್ಟ್ರೈಕು ಎಂದರೆ 'ನಮ್ಮ ಲೀಡರ್‌ಗೆ ಗೊತ್ತು'
ಎಂಬರು!
ಪುಕ್ಕಟೆ ಸಿಕ್ಕಿದುದನೆಲ್ಲ ಬಾಚುವವರು ಇವರು.

ಸ್ಟ್ರೈಕೆಂಬ ಹೆಸರಿನಲ್ಲಿ ಸುಡುವರು ಸಾರಿಗೆ ಬಸ್ಸುಗಳ!
ನಿಲ್ಲಿಸುವರು ಊರಿಗೆ ಹೋಗುವ ಜನರಿದ್ದ ರೈಲುಗಳ!
ಕಿತ್ತುಹಾಕುವರು ರೈಲೋಡುವ ಲೈನುಗಳ
ಇವರೆಲ್ಲಾ ಯಾರಪ್ಪಾ? ಇವರೇ ಪ್ರಜಾಪ್ರಭುತ್ವದ ಪ್ರಜರು!
'ಸಂಬಳ ಜಾಸ್ತಿ ಕೊಡಿ, ಗಿಂಬಳ ಸಿಕ್ಕುವಂತೆ ಮಾಡಿ'
ಎಂಬ ಕೂಗು ಮುಂದೆ ಮಾಡಿ,
ಕೆಲಸಬಿಟ್ಟು ಸ್ಟ್ರೈಕು ಮಾಡುವರು!
ಡೊನೇಷನ್ ಹೆಸರಿನಲಿ ಜನರ ಸುಲಿಗೆಯ ಮಾಡುವರು
ಇವರೂ ಪ್ರಜಾಪ್ರಭುತ್ವದ ಪ್ರಜರೇ ಆಗಿಹರು!
ದುಡಿಯುವ ಗಿರಣಿಗಳ ಮುಚ್ಚಿಸುವರು
ಶಾಲಾ-ಕಾಲೇಜುಗಳಲಿ ಪಾಠಗಳು ನಡೆಯದಂತೆ
ನೋಡುವರು
ಲೈಟುಗಳ ಒಡೆಯುವರು, ಪೈಪುಗಳ ಕದಿಯುವರು
ಆದರೂ ಪ್ರಜಾಪ್ರಭುತ್ವದ ಪ್ರಜರಿವರು!

ಲಂಚವನು ಬೇಡುವರು, ವಂಚನೆಯ ಮಾಡುವರು
ನಿರ್ವಂಚನೆಯಿಂದ ಮಂಚದಲಿ ಓಲಾಡುವರು
ದುಡಿಯದೇ ಉಂಡು ಕುಡಿದು ಮೆರೆದಾಡುವರು
ಪ್ರಜಾಪ್ರಭುತ್ವದ ಪ್ರಜೆಗಳಲ್ಲದಿನ್ನಾರು?

ನೋಟು ಕೊಟ್ಟವರಿಗೆ ಓಟ ಹಾಕುವರು
ಬಾಟ್ಲಿ ಕೊಡಿಸದವರಿಗೆ ಜಾಡ್ಸಿ ಒದೆಯುವರು
ಬೊಕ್ಕಸ ಬರಿದು ಮಾಡಿ, ತಮ್ಮ ಬ್ಯಾಂಕಿನ ಲೆಕ್ಕವ
ಹೆಚ್ಚಿಸುವರು
ಪ್ರಜಾಪ್ರಭುತ್ವದ ಪ್ರಜೆಗಳಿವರು ಪ್ರಜಾಪ್ರಭುತ್ವದ
ಪ್ರಜೆಗಳು!

# ಅಂಜದಿರು ಮೌಲ್ಯವೆ

ಮೌಲ್ಯವೆ, ಮಾನವ ಸಮಾಜದ ಜೀವ ಜೀವಾಳವೆ
ಎಲ್ಲಿ ಕುಳಿತಿರುವೆ ಅವಿತು ನೀನು?
ಸೌಜನ್ಯದ ಮುಖವಾಡ ಹಾಕಿದ ದುರ್ಯೋಧನರ
ನಯವಂಚನೆಗೆ ಬೆದರಿ ಬದಿಗೆ ಸರಿದಿಹೆಯಾ?
ಎಲ್ಲಿ ಅಡಗಿರುವೆ ನೀನು? ಹೆದರಿ ಅಡಗಿರುವೆಯಾ?
ನೀ ಹೆದರಿದರೆ ನಾವು ಉಳಿವುದೆಂತು?

ನಿನ್ನ ಮಾತು ಒಮ್ಮೊಮ್ಮೆ ನಯವಿರುವುದಿಲ್ಲ ನಿಜ,
ಆದರೆ ಒಳಗೆ ಹಾಲಾಹಲ ತುಂಬಿಕೊಂಡು, ಹೊರಗೆ
ಹಾಲಿನಂತಹ ಮಾತಿನಲಿ ವಂಚಿಪ, ನಯವಂಚಕರ
ವಂಚನೆಗೆ ಬೆರಗಾಗಿ ಹೌಹಾರಿ ಹೋದೆಯಾ?
ಅಂಜದಿರು ಮೌಲ್ಯವೇ ನಮಗಾಗಿ ಅಂಜದಿರು.
ವಂಚಕರು, ದ್ರೋಹಿಗಳು, ಕುಟಿಲನೀತಿಯ ಪರಿಣತರು
ನಯ, ನೀತಿ, ಪ್ರೀತಿ, ಭೀತಿ ಎಂಬ ಸೋಗಿನ ಮಾತಿನಲಿ
ನಿನ್ನ ಮುಖಕೆ 'ಮಂಗಳಾರತಿ ಎತ್ತುವರೆಂಬ' ಅಳುಕೇ ನಿನಗೆ?
ಮೌಲ್ಯವೇ ನೀ ಅಳುಕದಿರು, ಅಳುಕಿದರೆ ಪಾಂಡವರಿಗೆಲ್ಲಿದೆ
ಉಳಿಗಾಲ?
ಅಲ್ಲದೆ ಮೀರಸಾಧಕ, ಮಲ್ಲಪ್ಪಶೆಟ್ಟಿಗಳದೇ ಆದೀತು ಕಾರಭಾರ!

ಉಚ್ಛ್ವಾಸ ನಿಶ್ವಾಸದಲ್ಲೂ ಕುತಂತ್ರವನೆ ತುಂಬಿಕೊಂಡು,
ಶಕುನಿಯ ಕುತಂತ್ರದ ಹಿಡಿಯಲ್ಲಿ ನಿನ್ನನೂ ವಂಚಕ
ವಂಚಿಸಬಹುದೆಂದು ಕೈಗೊಂಡಿರುವೆಯಾ
ಅಜ್ಞಾತವಾಸವನು?
ಅದಕಾಗಿ ಮಲಗಿಹೆಯಾ ಮುಸುಕ ಮುಖಕೆ
ಮುಚ್ಚಿಕೊಂಡು?
ಮಲಗದಿರು ಮೌಲ್ಯವೆ? ನೀ ಮಲಗಿದರೆ ಸಜ್ಜನಕೆ

ಗತಿಇನ್ನಾರು?
ಅನ್ಯಾಯ. ದ್ರೋಹ, ವಂಚನೆ, ಮೋಸ–ದ್ವೇಷಗಳು
ಜಗದೊಡನೆಯಾ ಹುಟ್ಟಿ ಬಂದಿರುವುದೇನೋ ನಿಜ.
ಅಂದಿನಿಂದಿನವರೆಗೂ ಅವು ಬದುಕಿ ಉಳಿದಿರುವುದೂ ಸತ್ಯ;
ಮುಂದೂ ಬದುಕುವುವು, ಪೂರ್ಣ ಸಾಯುವುದಿಲ್ಲ.
ಅದಕ್ಕಾಗಿಯೇ ನೀನಿರಬೇಕು, ನೀನಂಜದಿರು ಮಹಾರಾಯ.
ನೀನಿಲ್ಲದಿರೆ ತಂತ್ರ–ಕುತಂತ್ರಗಳ, ವಂಚನೆ–ಸಂಚುಗಳ,
ಮೋಸ–ದ್ವೇಷಗಳ ಮೇಲಾಟದಲಿ
ಒಳ–ಹೊರಗೆ ಒಂದಾಗಿ ನುಡಿವ, ನಡೆವ, ಬರೆವ
ನಯವಂಚಕತನವಿರದ ಹರಿಶ್ಚಂದ್ರ–ಧರ್ಮರಾಯರ ಗತಿ ಏನು?
ನೀನೇ ಹಿಂದೆ ಸರಿದರೆ, ಅವರನೆದುರಿಸುವವರು ಯಾರು?
ಸಜ್ಜನಿಕೆ, ಸೌಜನ್ಯ, ವಿಶಾಲತೆಗಳನೆಲ್ಲಾ ಒಡಗೊಂಡ
ಮೌಲ್ಯವೆ
ಮುಸುಕ ಸರಿಸಿ, ಬೆದರಿಕೆಯ ಬದಿಗಿಟ್ಟು
ಗಾಬರಿಯ ಬಿಟ್ಟು, ಧೀರನಂತೆ ಹೊರಗೆ ಬಾ
ನೀ ಗಟ್ಟಿಯಾಗಿ ನಿಂತರೆ ಕುತಂತ್ರಿಯ ಮುಖವಾಡ
ಕಳಚೀತು!
ಬಿಂಕದ ಮಾಯಾ ಜಿಂಕೆಯ ಗುಟ್ಟು ರಟ್ಟಾದೀತು!
ಮೋಸಗಾರಿಕೆ ಮೌನತಾಳಿ, ಅನ್ಯಾಯ ಮುಕ್ಕೀತು ಮಣ್ಣು;
ದಕ್ಕೀತು ನ್ಯಾಯ, ಉಳಿದೀತು ಜೀವ!

ಮೌಲ್ಯವೇ ಮುನ್ನುಗ್ಗಿ ಬಾ, ಬಿಡು ನಿನ್ನ ರಾಮಬಾಣ
ಸುಳ್ಳು ಸತ್ತು, ಮೇಲೆದ್ದು ನಿಲ್ಲಲಿ ನಿಜ ಸ್ವರೂಪ
ಆಗ ಅಪಮೌಲ್ಯ ಬದುಕಿದರೂ ಸತ್ತಂತೆ
ಸಾಯುವುದಿಲ್ಲೆಂದೂ ಚೀರಿದರೂ ನಾಶವಾದಂತೆ
ಬಾ, ಮಹಾರಾಯ, ನೀ–ಅಂಜಬೇಡ.
ಅಳುಕಬೇಡ–ತಡಮಾಡಲೂ ಬೇಡ.
ನೀ ಮುಂದೆ ಬಂದರೆ ಮಾತ್ರ ಸತ್ಯಕುಂಟು ಬದುಕು!

■

## ಕಪಟ ನಾಟಕ ಸೂತ್ರಧಾರಿ

ಅಬ್ಬಾ! ಈ ಜನರೆಷ್ಟು ಕಪಟನಾಟಕ ವಾಡುವರಯ್ಯಾ
ಕಪಟನಾಟಕ ಸೂತ್ರಧಾರಿ!
ಸೂತ್ರವಿಡಿದು, ನೀನಾಡಿಸುವಾಟ ಇದೇ ಏನಯ್ಯಾ
ಕೈಗೂ ಸಿಗದೆ, ಕಣ್ಣಿಗೂ ಕಾಣದೆ,
ಕುಣಿಸುವೆಯಯ್ಯಾ ಭಕ್ತವತ್ಸಲಯ್ಯಾ!

ಈ ಜನರ ನಡುವೆ ಬೆರೆತಷ್ಟೂ ಗೊಡವೆಯೇ ಬೇಡೆನ್ನಿಸುವ
ಕುಹಕ–ಕುತಂತ್ರವ ನೋಡಿ ಬೆರಗಾಗುತಿಹೆನಯ್ಯಾ!
ದೂರದಿಂ ನೋಡೆ, ಪ್ರಖ್ಯಾತ, ಸುಖ್ಯಾತ, ಸುವಿಖ್ಯಾತರಯ್ಯಾ
ಸನಿಹಕೆ ಹೋದಡೆ ಇವರೆಷ್ಟು ಕುಖ್ಯಾತರೆಂದು
ಅರಿವಾಗುವುದಯ್ಯಾ!

ಅಕ್ಕ, ಅಣ್ಣ, ಸೋದರಿ, ಸೋದರ ಎಂಬ ವೇದಿಕೆಯ
ಪದಗಳೆಲ್ಲಾ
ಅವರೊಳಗಿನ ಕುಹಕವ ಮುಚ್ಚುವ ಮುಸುಕುಗಳಯ್ಯಾ;
ಒಳಿತಾಡುತಲೆ, ನಗುನಗುತಲೆ ಕೆಡುಕ ಮಾಡುವರಯ್ಯಾ;
ಬೇಕಾದವರ ಏರಿಸುವರಯ್ಯಾ,
ಬ್ಯಾಡದವರ ಇಳಿಸುವರಯ್ಯಾ
ಇದು ಇಂದಿನ ಮೋಜಿನಾಟವಯ್ಯಾ–ದೇವದೇವಯ್ಯಾ.

ಇವರ ದೊಡ್ಡಸ್ತಿಕೆ ಎಷ್ಟೆಂಬುದ ಅರಿಯಲಾರೆ ಏನಯ್ಯಾ
ಇವರ ನುಡಿಗೆ ಕುರಿಗಳಂತೆಲ್ಲರೂ ಹಳ್ಳಕೆ ಬೀಳುವರಯ್ಯಾ
ಸಮೂಹ ಮಾಧ್ಯಮಗಳೂ ಇವಕೆ ಹೊರತಲ್ಲವಯ್ಯಾ
ಸೋಗಿನಾಟದ ಮುಂದೆ ಮುಗ್ಧರು ಮಾರುಹೋಗುವರಯ್ಯಾ.

ಒಳ್ಳೆಯದ ಒಳ್ಳೆಯದೆಂದು ಕಾಣಿಸಲಾರೆ ಏನಯ್ಯಾ?
ಕೆಟ್ಟದ ಕೆಟ್ಟುದಾಗಿ ತೋರಿಸಬಾರದೇನಯ್ಯಾ?
ನೀನೂ ಆ ಬಲೆಯಲಿ ಬಿದ್ದಿಹೆ ಏನಯ್ಯಾ?
ಹಾಗಿದ್ದರೆ ಹೇಳಿಬಿಡು,
ನಿನ್ನ ಕಾಡಿಸುವುದನೆ ಬಿಟ್ಟುಬಿಡುವೆನಯ್ಯಾ.

## ಮಮತೆ

ತಾಯಿ ಹಕ್ಕಿ ಗುಟುಕನಿಕ್ಕಿ
ಸಾಕಿತೊಂದು ಪುಟ್ಟಹಕ್ಕಿ
ಹಕ್ಕಿಗಾಗಿ–ಅಕ್ಕಪಕ್ಕ ಕಾಳಹೆಕ್ಕಿ
ಕೊಕ್ಕಿನಲ್ಲಿ ಕೊಕ್ಕನಿಟ್ಟು ಸಲಹಿತು.

ಚಿಕ್ಕಹಕ್ಕಿ ಪುಟ್ಟಪುಟ್ಟ ಹೆಜ್ಜೆ ಇಟ್ಟು
ಅಲ್ಲಿಗಿಲ್ಲಿ ನಡೆಯಿತು, ಕುಣಿಯಿತು.
ದೊಡ್ಡಹಕ್ಕಿ ತನ್ನ ಕೊಕ್ಕ ಎತ್ತಿ ಮೇಲೆ
ಸುತ್ತ (ಮುತ್ತ) ನೋಡಿ ನಲಿಯಿತು

ರೆಕ್ಕೆ ಬಲಿತ ಪುಟ್ಟ ಹಕ್ಕಿ, ತಾನೆ ಹೆಕ್ಕಿ
ಕಾಳತಂದು ತಿಂದಿತು.
ದೊಡ್ಡ ಹಕ್ಕಿ ಬಿಟ್ಟ ಕಣ್ಣು ನೋಡಿ ನಲಿಯಿತು!
ಸಣ್ಣ ಹಕ್ಕಿ ಖುಷಿಯಲಿ ಉಬ್ಬಿ ಉಬ್ಬಿ ಕುಣಿಯಿತು!
ಅಮ್ಮ ತಂದು ಇತ್ತ ಕಾಳನೆಷ್ಟು ಕಾಲ ತಿನ್ನಲಿ?
ನಾನೆ ಹುಡುಕಿ ಹೊಟ್ಟೆ ಹೊರೆವೆನೆಂದು
ತಾನೇ ಕಾಳ ತರುವೆನೆಂದು
ಪುಟ್ಟಕಂದ ಪಕ್ಕಬಿಚ್ಚಿ ಹಾರಿದಾಗ
ತಾಯಿಹಕ್ಕಿ ಮೇಲೆ ನೋಡಿ ಎಂದಿತು 'ಇದುವೆ ಜೀವನ'
ಎಂದು ತಿಳಿದು 'ಕಂದಾ ನೀನೂ ಎಲ್ಲೇ ಇರು
ಚಂದವಾಗಿ ಬದುಕು' ಎಂದು ಹರಸಿ, ಗೂಡು ಸೇರಿತು.

■

## ಒಳಿತಿಗೆ ಕೆಡುಕಿಲ್ಲ

ಒಳಿತಿಗೆ ಕೆಡುಕಿಲ್ಲ
ಒಳಿತಿಗೆ ಕೆಡುಕಿಲ್ಲ
ಭಕ್ತಿಯ ಶಕ್ತಿಗೆ ಕೊನೆ ಇಲ್ಲ
ಕೇವಲ ಕುಯುಕ್ತಿಗೆ ಜಯವಿಲ್ಲ.

ವಿಭೀಷಣಗೆ ಕೆಡುಕಿಲ್ಲ
ರಾವಣಗೆ ಒಳಿತಾಗಲ್ಲ
ಸಾವಿತ್ರಿ ಸಾವನೆ ಗೆದ್ದಳಲ್ಲ
ದುರ್ಯೋಧನ ಡಬ್ಬಾಗಿ ಬಿದ್ದನಲ್ಲ!

ಕುಚೇಲಗೆ ಕೆಡುಕಿಲ್ಲ
ಕಂಸಗೆ ಒಳಿತಿಲ್ಲ
ಮೀರಾಗೆ ವಿಷವೆ ಅಮೃತವಾಯಿತಲ್ಲ!
ಮಾರೀಚ ನೀಜನಾಗಿ ನಾಶವಾದನಲ್ಲ!

ಸುನೀತಿಗೆ ಕೆಡುಕಿಲ್ಲ
ಸುರುಚಿಗೆ ಒಳಿತಿಲ್ಲ
ಪ್ರಹಲ್ಲಾದನಿಗಾಗಿ ನರಸಿಂಹ ಕಂಬ ಸೀಳಿ ಬಂದನಲ್ಲಾ
ಹಿರಣ್ಯಕಶಿಪುವಿನ ಹೊಟ್ಟೆ ಬಗೆದನಲ್ಲಾ!

# ಶರ್ವಾಣಿ

ಎಲ್ಲರಿಗೂ ನೀನು ಶರ್ವಾಣಿ
ಶರ್ವಾಣಿಯಾಗು ಇಲ್ಲವೇ ಆಗು ಗೀರ್ವಾಣಿ
ನನಗೆ ಮಾತ್ರ ನೀ ಹೃದಯದ ಅಂತರ್ವಾಣಿ
ಕುವರಿಯೇ ಇಲ್ಲದಿದ್ದ ನಮ್ಮ ಮನೆಗೆ ನೀ ಮಹಾರಾಣಿ.

ಎಲ್ಲರೂ ನಿನ್ನ ಕರೆವರು 'ಶರೂ'
ಮುಂದೆ ನೀನಾಗುವೆ ಫಲತೀವಿದ ತರು
ಇಂದು ನಿನ್ನದಾದೀಮನೆಯಲೆ ನೀನಪರೂಪ!
ಎಲ್ಲೆಲ್ಲೋ ಹಾರಿ ಹೋಗುತಿರುವೆಯಲ್ಲೇ ನಮ್ಮ ಗೃಹದೀಪ!

ಬಾರದಿಹುದೇನು ನಿನಗೆ ನಮ್ಮೆಲ್ಲರ ನೆನಪು?
ಕಾಡದಿಹುದೇನು ನಮ್ಮಾಸೆಯ ಸೆಳಕು?
ಬರದಿರಬಹುದು, ಕಾಡದಿರಬಹುದು,
ಬಾಂಧವ್ಯಕೆ ಬೆಸುಗೆಯೇ ಇಲ್ಲದಿರುವಾಗ
ಇದ್ದ ಕೊಂಡಿಯೂ ಬಾಯ್ಬಿಟ್ಟುಕೊಂಡಿರಲು,
ಸರಪಳಿ ಸರಿದು ಜಾರುತಿಹುದು.

ಕೊಂಡಿ ಬಿಗಿ ಮಾಡಿದರೆ ಗೊಣಸುಗಳು
ಒಂದಕ್ಕೊಂದು ಹಿಡಿದುಕೊಂಡು
ಅಂದವಾಗಿ ಚಂದವಾದ ಸರವಾಗುವುದು.
ಆ ಸರ ಹಾಕಿಕೊಂಡರೊಂದು ಚಂದ.
ಆಗ ನೋಡುವವರಿಗೂ ಕಾಣುವುದು ಬಲುಚಂದ.

ಬೇಕೇನು ಬಿಗಿಮಾಡಿದ ಕೊಂಡಿಯ್ಳು ಸರ?
ಬೇಕೆಂದರೆ ಮಾಡಿಕೊಡುವೆನು ಕಂದ
ಅದ ನೀ ಹಾಕ್ಕಿಕೊಂಡರೊಂದು ಚಂದ,
ಆಗ ನನಗಾಗುವುದು ಸಂತಸ ತುಂಬ-ತುಂಬ.

■

## ಆಮೇಲೆ ಅಗೊ ತಮಾಷೆ ನೋಡು

ಈಗ ಸಮಯಸಾಧಕರ ಬಾಲ ಬಡುಕರ ಕಾಲ
ಚಂಚಾಗಿರಿ ಮಾಡಿ, ಬೆಣ್ಣೇ ಹಚ್ಚೋದು ಕಲಿ
ಪರಾಕು ಹೇಳೋದು ಪ್ರಾಕ್ಟೀಸ್ ಮಾಡು
ನಂತರ ನಿನ್ಗೆ ಸಿಕ್ಕೋ ಸ್ಥಾನ ನೋಡು
ಆಮೇಲೆ ನಡ್ಯೋ ತಮಾಷೆ ನೋಡು !

ಮಾನ ಇರ್‍ಬಾರ್‍ದ್ಧಿ. ಮರ್ಯಾದಿ ಕೇಳ್ಬಾರ್‍ದು
ದಯಾ-ದಾಕ್ಷಿಣ್ಯಾನ ಮರ್‍ತೇ ಬಿಡ್ಬೇಕು, ಯಾಕಂದ್ರೆ
'ಆತ್ಮಾಭಿಮಾನ' ಎಂದ್ರೆ, 'ದುರಭಿಮಾನಿ' ಅಂತ ದೂಡ್ತಾರೆ
ಅದೆಲ್ಲಾ ಬಿಟ್ಟು 'ಕಾರ್ಯವಾಸಿ ಕತ್ತೆ ಕಾಲ್ಕಟ್ಟು'
ಕತ್ತೆ ಕಾಲ್ಕಟ್ಟಿದ್ರೆ, ಕುದ್ರೆ ಮೇಲೆ ಕೂಡಬಹ್ದು
ಆಮೇಲೆ ಆಗೋ ತಮಾಷೆ ನೋಡು!

ಮೇಲೆ ಹೋಗ್ಬೇಕೂಂದ್ರೆ, ಅವಾರ್ಡು-ಗಿವಾರ್ಡು
ಯೋಗ್ಯತೆ ಇಲ್ದೆ ಇದ್ರೂ ಸಿಗ್ಬೇಕೂಂದ್ರೆ
ಅದ ಕೊಡೋವ್ರಹತ್ರ ಬೆಲ್ದಂಗೆ ಮಾತಾಡು;
ಅವ್ರ ಚಾಕ್ರಿ ಮಾಡ್ತಾ ಹಿಂದೆ, ಹಿಂದೆ ಓಡಾಡು
ನಿನ್ಗೆ ಮಾನ ಇಲ್ಲ ಅಂತ ತಿಳ್ಕೊಂಡು
ಅವ್ರ ಮಾನ-ಸನ್ಮಾನದ ಏರ್ಪಾಟು ಮಾಡು
ಆಮೇಲೆ ಆಗೋ ತಮಾಷೆ ನೋಡು!

ಎಲ್ಲಿ ಲಾಭ ಸಿಗ್ತೈತೋ ಅಲ್ಲಿ ಡವಾಲಿಕಟ್ಟು
ಕುರ್ಚಿ ಇರೋಕಡೆ ಚರ್ಚೆಮಾಡ್ದೆ ಹೇಳ್ದಂಗೆ ಕೇಳು.
ಗುಣ ಇಲ್ದಿದ್ರೆ ಏನಂತೆ, ಝಣ-ಝಣ ಸುರಿದ್ರೆ ಸಾಕು.
ಹಾಂಗಿಲ್ದಿದ್ರೆ ನೋಡು ಎಲ್ಲಾ ಆಗ್ತದೆ ಭಣ-ಭಣ
ಹಿಂಗೆಲ್ಲಾ ಮಾಡಿ ಮೆರ್‍ಯೋಕೆ ಭಂಡ್ತನ ಸಾಕು
ಮೊಂಡಾಟ ಮಾಡ್ದೆ, ಗುಂಡಾ ಆಟ ಆಡ್ತಿರು
ಆಮೇಲೆ ನಡ್ಯೋ ತಮಾಷೆ ನೋಡು.

## ಪ್ರಶಸ್ತಿ

ಇವರಿಗೆ ಆ ಪ್ರಶಸ್ತಿ, ಅವರಿಗೆ ಈ ಪ್ರಶಸ್ತಿ
ಕೊರತೆ ಏನಿಲ್ಲ ಸಾಹಿತ್ಯ-ಸಂಗೀತ
ನಾಟಕವಾಟಗಳ ಪರಿಣತರಿಗೆ, ಮಿಗೆಯಾಗಿ
ಪ್ರಶಸ್ತಿಗಳು ದೊರೆಯುವುದು, ಆಶ್ಚರ್ಯದ ಮೇಲಾಶ್ಚರ್ಯ!

ಬೊಬ್ಬೆಯಿಟ್ಟರೆ ಒಂದು ಪ್ರಶಸ್ತಿ,
ಮಾತಿನಲಗಿನಲಿ ಇರಿದರೆ ಮತ್ತೊಂದು,
ರಾಡಿಯುನು ಹೊರಗೆಳೆದು ಚಲ್ಲಿದರೆ,
ಕೈಬೆಚ್ಚಗೆ ಮಾಡುವರು ಪ್ರಶಸ್ತಿಯ ಪುಕ್ಕಹಚ್ಚಿ!
ಬುದ್ಧಿಜೀವಿಗಳು ಸುದ್ಧಿಜೀವಿಗಳಾಗಿ ಮೆರೆಯುತಿಹರು
ಅದಕ್ಕಾಗಿಯೇ ಹಾಕುವರು ಬೊಬ್ಬಾಟ, ಆಡುವರು ಗಬ್ಬಾಟ,
ಆ ಗಬ್ಬು ಕಾರಣದಿರಲೆಂದು, ಉಳಿದವರ ಮೇಲೆ ಎರಚುವರು
ರಾಡಿ

ತಿರುಗಿ ಕೆಸರ ತಮಗೆ ಎರಚದವರ ನೋಡಿ!
ತಮ್ಮ ಬಾಲಬಡುಕರ, ಏರಿಸುವವರ, ಇಳಿಸುವವರ
ಹಿಂದೆ-ಮುಂದೆ
ಅಡ್ಡಾಡಿ ಅವರ ಬೂಟ ನೆಕ್ಕುವವರಿಗೆ ದಕ್ಕುವುದು ಪ್ರಶಸ್ತಿ
ಆತ್ಮಾಭಿಮಾನವನೆ ಮಾಡಿಕೊಂಡು ಡೊಗ್ಗಿದವರ್ಗೆ
ಏನುಂಟು ಏನಿಲ್ಲ, ಎಂಥೆಂಥದೋ ಪ್ರಶಸ್ತಿ!

ಎಲ್ಲ ರೀತಿಯ ನ್ಯಾಯ ಸಹಿಸುವಿಯಾದೊಡೆ ನಿನಗಿಲ್ಲ ಪ್ರಶಸ್ತಿ!
ಅಲ್ಲದೆ ನಿನ್ನ ಪ್ರತಿಭೆಯ ಮುಚ್ಚಿ ಮಾಡುವರು ಮೂಲೆಗುಂಪು,
ಹಿಂದೆ ಹಿಂದೆ ಸುತ್ತುವ ಬಾಲಬಡುಕರ ಏರಿಸುವರು ಮೇಲೆ,
ಅಧಿಕಾರದಲ್ಲಿ ಇದ್ದವರ, ಗುಂಪುಗಾರಿಕೆ ಮಾಡುವವರ
ಅದಕ್ಕಾಗಿಯೆ ಹಿಡಿದಿಹುದು ಸಮಾಜ ಅವನತಿಯ ಹಾದಿ.

ಈಗೀಗ ಮಳೆಜಾಸ್ತಿ ಭೂಮಿ ಫಲವತ್ತು
ಫಸಲು ಬಂದಿಹುದು, ಮನೆಯ ಚೀಲಗಳೆಲ್ಲಾ
ತುಂಬಿ ಮಿಗುವಷ್ಟು, ಆದರೆ ಅದರಲ್ಲೆಲ್ಲಾ
ಜೊಳ್ಳೇ ಹೆಚ್ಚು, ಗಟ್ಟಿಕಾಳು ಅಲ್ಲೊಂದು-ಇಲ್ಲೊಂದು.

## ಸಹಜ

ಕುಟುಂಬದ ಕೊಂಡಿಗಳು ಕಳಚುವುವು
ಒಂದೊಂದಾಗಿ ಸವೆದು, ಸವೆದು
ಅರಳಿದ ಹೂ ಬಾಡಿ ಉದುರುವಂತೆ,
ಉದಯವಾದ ಸೂರ್ಯ ಅಸ್ತನಾಗುವಂತೆ
ನೌಕರಿದಾರ ನಿವೃತ್ತನಾಗುವಂತೆ
ಕಾಲಾನುಕ್ರಮದಲಿ, ಕೊಂಡಿ ಸವೆಯುವುದ,
ಹೂವು ಉದುರುವುದ,
ಸೂರ್ಯ ಅಸ್ತನಾಗುವುದ,
ನೌಕರಿದಾರ ನಿವೃತ್ತನಾಗುವುದ,
ತಡೆಯುವುದು ಅಸಾಧ್ಯವಾದರೂ,
ಮಾನವನ ಬಯಕೆ
ಸಹಜತೆಯ ಮೀರಿ, ತನಗೆ ಬೇಕಾದುದ
ಬಯಸುತ್ತಲೇ ಬಳಲುವುದು
ಹಳೆಕೊಂಡಿ ಕಳಚಿತಲ್ಲಾ ಎಂದು
ಹಂಬಲಿಸಿ ಹಳಹಳಿಸುವುದೂ
ಸಹಜತೆಯ ಒಂದು ರೂಪವಲ್ಲದೆ ಮತ್ತಿನ್ನೇನು!

■

## ಕಾದು ನಿಂತಿಹರು ನಿಮಗಾಗಿ

ನೀವದೆಲ್ಲಿ ಹೋದಿರಿ ಮಹಾಂತರೆ,
ನಾವೆಲ್ಲಾ ಇಲ್ಲೇ ಇರುವಾಗಲೇ ಜೀವಂತ?
ನಿಮಗೇನಿತ್ತು ಅಲ್ಲಿ ಅಂಥ ಧಾವಂತ?
ಯೊಚಿಸಬಾರದಿತ್ತೆ ನಂಮ್ಮೆಲ್ಲರ ಗತಿ ಏನು ಅಂತ?

ಇಂದು ಜಗದ ದಳ್ಳುರಿಯಲ್ಲಿ
ಎಲ್ಲವೂ ಧಗ-ಧಗ ಉರಿದು ಹೋಗುತ್ತಿರುವಾಗ,
ಅದಕೆ ನೀರು ಹಾಕಿ ಆರಿಸುವವರಿಲ್ಲದೆ
ಎಲ್ಲವು ಆಗಿ ಹೋಗುತ್ತಿವೆ ಬೂದಿಯಾಗಿ.

ಬಸವ, ಚನ್ನಬಸವ, ನೀಲಾಂಬಿಕೆ, ನಾಗಲಾಂಬಿಕೆಯರೇ
ಆ ಉರಿಯಲಿ ಸಿಕ್ಕಿಹಾಕಿಕೊಂಡಿರುವಾಗ,
ಸಾಮಾನ್ಯರದೇನು ಉಳಿಯುವುದದರಲ್ಲಿ!
ಅದಕೇ ನೀವ್ ಉಳಿಯಬೇಕಿತ್ತು, ಎಲ್ಲರಿಗಾಗಿ.

ಇಲ್ಲಿ ನೀವಿದ್ದಲ್ಲೇ
ನೀವು ಮಾಡಿದ ಈ ತೋಟದಲ್ಲೇ
ಸೆದೆ ತುಂಬಿ, ಕಳೆ ಬೆಳೆದಿಹುದು
ಅದರ ತುಂಬ ಕ್ರಿಮಿ-ಕೀಟ ವಿಷಜಂತುಗಳು ಸೇರಿಹವು!

ಒಂದಲ್ಲ, ಎರಡಲ್ಲ, ನೂರಾರು ಕಾರಣಗಳು
ನಿಮ್ಮ ನಿರೀಕ್ಷೆಯಲಿ ಕಾದು ನಿಂತಾಗ
ಅವೆಲ್ಲವುಗಳ ಬದಿಗೊತ್ತಿ, ನೀವು ಹೀಗೆ
ಎಲ್ಲ ಕಡೆಗಣಿಸಿ ದೂರ ಸರಿಯಬಹುದೆ?

ಹೋದಂತು ಹೋದಿರಿ. ಮತ್ತಾವಾಗ ಬರುವಿರಿ?
ಬೇಗಬಂದು ಕ್ರಿಮಿ-ಕೀಟಗಳಿಗೆ
ಕ್ರಿಮಿನಾಶಕ ಸಿಂಪಡಿಸಿ, ಕಳೆಯ ಕಿತ್ತೊಗೆಯಿರಿ.

ವಿಷಜಂತುಗಳ ಓಡಿಸಿ, ಈ ತೋಟ ಹಸನುಗೊಳಿಸ ಬನ್ನಿ!
ನೋಡಿರಿಲ್ಲಿ. ನಿಮ್ಮ ಬರವಿಗಾಗಿ
ಶಿಷ್ಯಕೋಟಿ ಕಾದು ನಿಂತಿಹುದು;
ಅವರ ಮುಂದಾಳಾಗಿ ಶಿವಯೋಗಿ
ಸ್ವಾಮಿಗಳು ಸ್ವಾಗತಕೆ ಕಾದುನಿಂತಿಹರು.

ಈಗಲೇ ಬನ್ನಿ, ತಡಮಾಡಬೇಡಿ
ತಡಮಾಡಿದಷ್ಟೂ ಕಳೆ ಹೆಚ್ಚಿ ಬೆಳೆ ನಷ್ಟವಾದೀತು
ಬರುವಾಗ ಮರೆಯದೆ ಮೃತ್ಯುಂಜಯಪ್ಪಗಳನ್ನು
ಕರೆದು ತನ್ನಿ.
ಅವರಿಂದು ಅಗತ್ಯಬೇಕು.

(ಮಹಂತಸ್ವಾಮಿಗಳ ಪುಣ್ಯತಿಥಿಯ ಸಂದರ್ಭದಲ್ಲಿ ಬರೆದದ್ದು.)

■

## ಮೊಸಳೆ ಕಣ್ಣೀರು

ಇಲ್ಲಿ ಭೂಕಂಪ, ಅಲ್ಲಿ ಅಪಘಾತ ಮತ್ತು ಹಿಂಸಾಚಾರ.
ಮತ್ತೊಂದೆಡೆ ಮನೆ ಕುಸಿತ, ಬಾಂಬುಸಿಡಿತ
ಇನ್ನೊಂದೆಡೆ ವಾಹನ ದುರಂತ, ಮಗದೊಂದೆಡೆ ಅತ್ಯಾಚಾರ.
ಇನ್ನು ಏನೇನೋ ಸಾಮಾನ್ಯರ ಸಾವುನೋವಿಗೆಣೆ ಇಲ್ಲ.

ಯಾವುದೇ ಕಾರಣದಿ ಜನ ಸತ್ತರೂ, ನೊಂದರೂ
ನಮ್ಮ ರಾಜಕಾರಣಿಗಳು
ವಿಮಾನದಲಿ ಹಾರಿಹೋಗಿ, ಕಾರಿನಲಿ ಊರಸೇರಿ,
ಸ್ಥಳಕೆ ಭೇಟ್ಟಿಕೊಟ್ಟು, ಸುರಿಸುವರು ಮೊಸಳೆಕಣ್ಣೀರ
ಮಸಣಕೆ ಹೋದವರಿಗಾಗಿ!
ಮತ್ತೆ ಆಸ್ಪತ್ರೆಯಲಿ ಗಾಯಗೊಂಡವರ ಕಂಡು
ಕಳಕಳಿಯ ತೋರುವರು; ಇಷ್ಟಕ್ಕೂ ಮುಗಿಸದೆ
ಕಳಿಸುವು ಸಾಂತ್ವನದ ಸಂದೇಶ,
ಸತ್ತವರ - ಗಾಯಗೊಂಡವರ ಬಂಧುಗಳಿಗೆ
ಮತ್ತೆ ಘೋಷಿಪರು, ಬೊಕ್ಕಸದಿ ಅಷ್ಟಿಷ್ಟು ಪರಿಹಾರ.
ತಾವು ಕೂತ ಕುರ್ಚಿಗಾಗಿ, ಪಡೆದ ಸ್ಥಾನಕಾಗಿ
ಈ ನಾಟಕವಾಡಲೇಬೇಕು ಪಾಪ!
ದುಃಖಸೂಚನೆಯ ಮಾತು, ಕಳಿಸುವ ಸಾಂತ್ವನ
ಸಂದೇಶ
ತೋರುವ ಅನುಕಂಪ, ಮತ್ತೆ ನೀಡುವ ಪರಿಹಾರದ
ಹಿಂದೆ
ಹೃದಯ ಸ್ಪಂದನವಿನಿತೂ ಇಲ್ಲವಲ್ಲ!
ಎಲ್ಲ ಸಾಗುವುದು, ಸಾಗುವುದು ಯಾಂತ್ರಿಕವಾಗಿ,
ಪಾಶ್ಚಾತ್ಯರು ದಾರಿಯಲಿ ಸಿಕ್ಕಾಗ ತುಟಿಗಳನು ಹಿಗ್ಗಿಸುವಂತೆ
ನಮ್ಮ ಹಬ್ಬಗಳ ಸಂಪ್ರದಾಯಗಳಿದ್ದಂತೆ

ವಿಜಯದಶಮಿಯ ದಿವಸ ಶಮೀಪತ್ರವನಿತ್ತು
'ಬನ್ನಿಕೊಟ್ಟು ಬಂಗಾರದಂಗೆ ಇರೋಣ' ಎಂದಂತೆ,
ಸಂಕ್ರಾಂತಿಯಂದು ಎಳ್ಳುಬೆಲ್ಲವನ್ನೆಲ್ಲರಿಗೆ ಇತ್ತು 'ಎಳ್ಳು
ಬೆಲ್ಲದಂಗಿರೋಣ' ಎಂದು ಉಲಿದಂತೆ
ಸಂಪ್ರದಾಯ– ಶಿಷ್ಟಾಚಾರ, ಅಷ್ಟೆ.

ಇವೆಲ್ಲ ಯಾಂತ್ರಿಕ; ಸದ್ಭಾವನೆ ಶೂನ್ಯ.
ಸದಿಚ್ಛೆಯೂ ಸೊನ್ನೆ!
ಆದರೂ ನಮಗೀ ಬಗ್ಗೆ ಒಣಹೆಮ್ಮೆ.
ಇದರಂತೆ ನಮ್ಮ ನಾಯಕರೂ ಸಂಭ್ರೋಚಿತ
ಸುರಿಸುವರು ಮೊಸಳೆ ಕಣ್ಣೀರ, ತೋರುವರು ಕೃತಕ
ಅನುಕಂಪ.
ಋಜುವಡೆದ ಅಪರೂಪ ನಾಯಕರು ಅಲ್ಲಲ್ಲಿ ಇಲ್ಲವೆಂದರೆ
ಸತ್ತೆ!
ಬಂಜೆ ಮೋಡದ ನಡುವೆ. ಅಲ್ಲಲ್ಲೆ ಮಳೆಮೋಡ,
ಕಾಣದಿರುವುದೆ ಮತ್ತೆ!

■

## ಬಾಳದಾರಿ

ಜೀವನವ ದೀರ್ಘ ದಾರಿಯಲಿ
ಆಸೆ, ಆಮಿಷ, ಹುರುಪು, ಹರ್ಷ
ಏನೇನೋ ಕನಸುಗಳು!
ಕನಸ ನನಸ ಮಾಡುವಾಸೆಯಲಿ
ಬಿದ್ದು-ಎದ್ದು, ನೆಗೆದು-ಜಿಗಿದು
ಸೋತು-ಗೆದ್ದು, ನಕ್ಕು-ಅತ್ತು
ನಡೆದು-ಓಡಿ, ದೂರ ಕ್ರಮಿಸಿ
ಸುಸ್ತಾಗಿ, ಬಾಯಾಗಿ ಬಾಯ್ಬಿಡುವಾಗ
ಗುರಿಗಂಬ ಎದುರಾಗಿ, ಏದುಸಿರು ಬಿಡುವಾಗ
ಕೇಳಿಸುವುದು ನಿರ್ಣಾಯಕನ ಸೀಟಿ.

# ಗುಂಪಗಾರಿಕೆ

ಪ್ರಚಾರಕರ ಗುಂಪೊಂದನ್ನು ಕಟ್ಟಿಕೊಂಡರೆ ಸಾಕು
ಸ್ವಪ್ರಚಾರಕ್ಕೂ ಇತರರ ಅಪಪ್ರಚಾರಕ್ಕೂ ಇದು ಬಹು
ಸಹಕಾರಿ!
ಕೈಲೊಂದು ಪತ್ರಿಕೆ ಇದ್ದರಂತೂ, ನಿಮಗೆ ಬೇಡ ಇತರರ
ಉಸಾಬರಿ!!
ಏನಿಲ್ಲದೆ ಮೇಲೇರಲು, ಇದ್ದವರ ಮೂಲೆಗುಂಪಾಗಿಸಲು,
ಇದು ಬಹು ಉಪಕಾರಿ.
ಇಂದಿನ ದಿನಮಾನದಲಿ ಗುಂಪುಗಾರಿಕೆಯ ಕಂಪನತಿರವರು
ಸೊಂಪಾಗಿ ಎಲ್ಲೆಲ್ಲೂ ಬೆಳೆಯುತಿಹರು, ಮೆರೆಯುತಿಹರು
ಗುಂಪುಗುಳಿತನವು ಎಲ್ಲಿಲ್ಲ! ಅದು ಇರದಿರುವ ಸ್ಥಳವಿಲ್ಲ.
ಒಬ್ಬರ ನೋಡಿ ಒಬ್ಬರು ಅದರ ಬೆನ್ನಹತ್ತುತಿಹರು.
ಸಂಗೀತ, ಸಾಹಿತ್ಯ, ಸಮಾಜ; ಶಿಕ್ಷಣದಲ್ಲೂ ಇದು
ಹಾಕಿದೆ ದಾಪುಗಾಲು.
ರಾಜಕೀಯದಲ್ಲಂತೂ ಕೇಳುವುದೇ ಬೇಡವಿದರ
ಮೇಲುಗೈ.
ಇಷ್ಟರಲೇ ಸಂತುಷ್ಟರಾಗಿದ್ದರೆ ಸಾಕಿತ್ತು, ಸಜ್ಜನರ
ಬೇಗುದಿಗೆ
ಧರ್ಮದಲ್ಲೂ ತಲೆಹಾಕಿ ಅಳಿಸಿಹಾಕಿದೆ ಬೆಳೆದದ್ದನ್ನು
ಕಷ್ಟಪಟ್ಟು,
ಸ್ವಾರ್ಥಸಾಧನೆ, ಗುಂಪು ಪ್ರಚೋದನೆ ಗಾಳಿ ಧೂಳನೆಬ್ಬಿಸಿದೆ

ಎಲ್ಲೆಲ್ಲೂ.
ಆ ದಟ್ಟಧೂಳಿನಲಿ ತೂಕವಾದುದೆಲ್ಲಾ ಕೆಳಗುಳಿದು
ಹಗುರಾದವುಗಳೆಲ್ಲಾ ಹಾರಾಡುತ್ತಿವೆ. ಎಲ್ಲರ ಗಮನ ಸೆಳೆವಂತೆ
ಗಾಳಿಬೀಸಿ, ಧೂಳಿಗೆ ಧೂಳು ಸೇರಿ, ಗಟ್ಟಿಯೋ ಜೊಳ್ಳೋ
ಯಾವುದೂ ಅರ್ಥವಾಗುತ್ತಿಲ್ಲ!

■

## ಸೂತ್ರಧಾರ

ಜಗವೊಂದು ರಂಗಮಂಟಪವಂತೆ
ಜೀವನ ಒಂದು ನಾಟಕವಂತೆ
ನಾವೆಲ್ಲ ನಾಟಕದ ಪಾತ್ರಧಾರಿಗಳಂತೆ
ಪರಶಿವನು ಸೂತ್ರಧಾರನಂತೆ
ಅವನಾಡಿಸಿದಂತೆ ನಾವಾಡುವೆವಂತೆ
ನಮ್ಮ ಪಾತ್ರ ಮುಗಿದ ಮೇಲೆ ಪರಂಧಾಮವನ್ನೈದುವೆವಂತೆ.

ಅಂತಿದ್ದರೆ ಇಂತೇಕೆ ಆಡಿಸುವನು?
ಹಲವರನು ಖಳನಾಯಕರಂತೆ ಮೆರೆಸುತ್ತಾ,
ಅನೇಕರನು ಹಲುಬಿ ಹಲ್ಕಿರಿವಂತೆ ಮಾಡುತ್ತಾ,
ಮತ್ತೆ ಹಲಬರನು ನರಳಿ ಸಾಯುವಂತೆ ಗಯ್ಯುತ್ತಾ
ಸತ್ತಂತೆ ಬದುಕಿ ಸಾವುದರಲ್ಲಿ ಅವನಿಗೆಂತಹುದಪ್ಪಾ ಆನಂದ!

ಇವನೇ ಇಂತು ಆಡಿಸುವಾಗ ಯಾರದದು ತಪ್ಪು?
ತಪ್ಪು ಮಾಡುವವರೊಬ್ಬರಾದರೆ ಶಿಕ್ಷೆಪಡೆವವರಿನ್ನೊಬ್ಬರೆ?
ನ್ಯಾಯಾಧೀಶನೇ ಅಪರಾಧಿ ಇದ್ದರೂ ತೀರ್ಪು ನೀಡಬಲ್ಲನೆ?

ಮರ್ತ್ಯ ಲೋಕದಲ್ಲಿ ಹಾಸು-ಹೊಕ್ಕಾಗಿರುವ ನ್ಯಾಯ?
ಅಮೃತಲೋಕದಲೂ ಇರುವೊಡೆ
ತಾಯಿಹಾಲು ವಿಷವೆನ್ನಲಡ್ಡಿ ಇಲ್ಲವಲ್ಲವೆ?

ಇಲ್ಲ; ಇಲ್ಲ; ಅವನಾಟವಾರಿಗೂ ತಿಳಿದೇ ಇಲ್ಲ.
ತಿಳಿಯಲೆಂದೇ ಸಾಧುಗಳಾದರು, ಸಂತರಾದರು
ಸ್ವಾಮಿಗಳಾದರು, ಸತ್ಪುರುಷರೂ ಆಗಿಹೋದರು.
ದೇವರಾದರು-ದಿಂಡರಾದರು
ಕಾರಣಿಕ ಹೇಳಿದರು, ವಾಣಿಗೆ ಮಣಿದರು.

ಒಬ್ಬೊಬ್ಬರೊಂದೊಂದ ನುಡಿದರು

ಎಲ್ಲರೂ ಎಲ್ಲೆಡೆ ತಡಕಾಡಿದರು
ಹೊತ್ತುಗೆಗಳನ್ನು ಬಿಚ್ಚಿ ಜಾಲಾಡಿದರು
ಯೋಚಿಸಿದರು–ಯೋಚಿಸಿದರು.

ಜಪವಗ್ಯೆದರು, ತಪವಗ್ಯೆದರು
ಏನೆಲ್ಲಾ ಮಾಡಿದರು ಏನೇನೋ ಹೇಳಿದರು
ಕಡೆಯತನಕ ಹುಡುಕಾಟ– ತಿಣುಕಾಟ
ನೆಲೆಗಾಗಿ ಅಲೆದಾಟ, ಈ ಅಲೆದಾಟದಲಿರುವಾಗಲೇ
ಅಂಕದ ಪರದೆ ಜಾರುವಾಟ! ಈ ಅವನಾಟ
ಬಿಡಿಸಲೂ ಬಾರದ ಒಗಟು–ಕಗ್ಗಂಟು.

■

## ಆಷಾಡಭೂತಿಗಳು

ಬಸವಣ್ಣನ ಹೆಸರ ಮುಂದೆ ಮಾಡಿ ಹೊಟ್ಟೆಹೊರೆದು
ಕೊಳ್ಳುವ ಅಣ್ಣಗಳು
ಬಸವಣ್ಣನ ಹೆಸರಿಗೆ ಮಸಿಬಳಿವಂತೆ ಬದುಕುತ್ತಾ
ತಮ್ಮುಸಿರಿನಲೆ ಬಸವತತ್ವಗಳು ತುಂಬಿದಂತೆ ನಟಿಸುತ್ತಾ
ಮೋಸಗಾರಿಕೆಯ ಬದುಕು ಬದುಕುವ
ಇವರು ಆಷಾಡಭೂತಿಗಳು!

ಮೂರು ಬಟ್ಟಿನ ವಿಭೂತಿಯನು ಢಾಳಾಗಿ ಧರಿಸಿಕೊಂಡು
ಬಸವಣ್ಣನ ತುಂಡೇನೋ ಎಂಬಂತೆ ವೇದಿಕೆಯಲಿ
ಮೆರೆಯುತ್ತಾ
ಅವನ ಅನುವರ್ತಿಗಳೆಂಬಂತೆ ಭಾಷಣ ಬಿಗಿಯುತ್ತಾ
ಬಸವಣ್ಣನ ತತ್ವಗಳನು ನಿಜಜೀವನದಲಿ ಗಾಳಿಗೆ ತೂರುವ
ಇವರು ಆಷಾಡಭೂತಿಗಳು!!

ಇವರಲಿ ಸ್ವಜನ ಪಕ್ಷಪಾತ, ಭಟ್ಟಂಗಿತನ,
ಪಟ್ಟಭದ್ರಹಿತಾಸಕ್ತಿಗಳು ತುಂಬಿ ತುಳುಕುವುವು.
ಅದರ ಬಲದಲೇ ಮೆರೆವ ಇವರಿಗೆ,
ನಾಚಿಕೆ ಎಂಬುದಿಷ್ಟೂ ಇಲ್ಲದಾಗಿರಲು,
ಅವರೊಳಗಿನ ಅಂತರಾತ್ಮ
ಸುಟ್ಟು ಬೂದಿಯಾಗಿ ಅವರನೆಚ್ಚರಿಸದೆ ಆಗಿಹರು
ಇವರು ಆಷಾಡಭೂತಿಗಳು!!!

■

## ಬರಿ ಕನಸು

ಮುದ್ದು ಮಣಿ, ಅರಗಿಣಿ, ಬಲುದೂರ ಇರುವ ಶರ್ವಾಣಿ
ಅಜ್ಜಿಯ ಹೃದಯದಿ ನೀ ಉಕ್ಕಿಸಿರುವ ಅಕ್ಕರೆಯು
ಕಕ್ಕುಲಾತಿಯಾಗಿ ಹೊಮ್ಮುತಿರಲು ಅದಹೆಂಗೆ ಹತ್ತಿಕ್ಕಲೆ
ನಿನ್ನ ಸಕ್ಕರೆಯಂಥ ಮಾತ ಕೇಳೆ,
ಈ ಜೀವಕೆ ಅದಕೂ ಇಲ್ಲ ವೇಳೆ.
ಕಣ್ಣ ಬಿಟ್ಟರೆಲ್ಲೆಲ್ಲೂ ನೀನೆ,
ಸರ್ವಾಂತರ್ಯಾಮಿಯಾದರೂ ಸಿಕ್ಕಲೊಲ್ಲೆಯಲ್ಲೆ
ಕಣ್ಣಮುಚ್ಚಿದಾಗಲಾದರೂ ಬಿಡಲೊಲ್ಲೆಯಲ್ಲೆ
ನಿದ್ದೆಯಲೂ ನುಗ್ಗಿ ಬಂದು,
ಹಿಗ್ಗಾ-ಮುಗ್ಗಾ ಎಳೆಯುವಾಗ
ನಾ ತಿರುಗಿ ನಿನ್ನ ಹಿಡಿಯಲೆಂದು ಬಂದರೆ,
ನೀ ಮುಂದೆ ಓಡುವಿ
ಕೈಗೆಟುಕದ ಕುಸುಮವ ಕೀಳಲೆಂದು, ಹಿಂಬಡಿ ಎತ್ತಿ
ಮುಂಬೆರಳೂರಿ, ತುದಿಗಾಲಲಿ ನಿಂತು
ಕೈ ಮೇಲಕೆ, ಉದ್ದಕೆ ಚಾಚಿ,
ರೆಂಬೆಯ ತುದಿಯ ಹಿಡಿದು
ನನ್ನ ಕಡೆಗೆ ಜಗ್ಗಿಕೊಂಡು,
ಹೂವ ಹಿಡಿಯಲೆಂದು ಎಳೆದಾಗ
ಎಲೆಯ ತುದಿ ಹರಿದು, ರೆಂಬೆ ಗಸಕ್ಕನೆ ಸರಿದು
ಮೇಲೆ ಹೋಗುವಂತೆ
ನೀ ಫಕ್ಕನೆ ದೂರ ಸರಿದಾಗ, ನೀ ಸಿಗದ ನಿರಾಸೆಯಲಿ
ಮನಸ್ಸು ಮುದುಡಿ, ನಿದ್ದೆ ಹರಿದು, ತಟಕ್ಕನೆ ಕಣ್ಬಿಟ್ಟಾಗ
ಕಂಡಿದ್ದು, ನಾನಿಲ್ಲಿ-ನೀನಲ್ಲಿ ಬಲುದೂರ.
ನನ್ನ ನೀ ಹಿಡಿದದ್ದು, ನಾನಿನ್ನ ಹಿಡಿಯ ಬಂದದ್ದು
ಒಂದೂ ನಿಜವಲ್ಲಾ
ಎಲ್ಲಾ ಬರಿ ಕನಸು, ಬರೀ ಕನಸು!

■

## ಹಿಮಾಲಯದ ಬದಿಯಲ್ಲಿ

ಎಂಥ ಚೆಲುವಿದು! ಇದನಾವ ಚಿತ್ರಗಾರ
ಚಿತ್ರಿಸಿದನು! ಎಲ್ಲಿ ನೋಡಿದಲ್ಲಿ ಬನದ ಐಸಿರಿ
ಕಣ್ಣು ಹಾಯಿಸಿದಲ್ಲೆಲ್ಲಾ ಉತ್ತುಂಗ ಶಿಖರಗಳ ವೈಖರಿ
ತಳದಾಳದಿಂದ ಗಿರಿಶಿಖರದವರೆಗೂ
ಆಗಿಹುದು ಪ್ರಕೃತಿಯ ವೈಭವೀಕರಣ
ಕಣ್ತಣಿಯೆ, ಮನದಣಿಯೆ, ಅನುಭವಿಸಿರಿ
ಸೌಂದರ್ಯದ ರಸದೌತಣ.

ಏನಿದು! ಸೊಬಗೆಲ್ಲೆಲ್ಲೂ ಪಸರಿಸಿಹುದು.
ಒಂದೊಂದು ಕಡೆಗೊಂದೊಂದು ಅಲಂಕಾರ
ಹಸುರಿನಲೇ ಕುಸುರಿ ಕೆಲಸ
ಈ ಹಸುರು ಆ ಹಸುರಿಗಿಂತ ಬೇರೆ
ಆ ಹಸುರು ಮತ್ತೊಂದು ಹಸುರಿಗಿಂತ ಭಿನ್ನ
ಹಸುರಿನಲೆ ಎಷ್ಟೊಂದು ವೈವಿಧ್ಯ?!
ವೃಕ್ಷಗಳೂ ವಿವಿಧತೆಯಲಿ ಹಿಂದೆ ಬಿದ್ದಿಲ್ಲ
ಪರ್ವತದ ದೇಹದ ಬಯಲ ಮೇಲೆ
ಪ್ರಕೃತಿ ಮೂಡಿಸಿರುವ ಚಿತ್ರಕಲೆಯ
ಈ ಸೊಬಗೂ ಈ ಬೆಡಗೂ
ನೋಡುವವರ ನಿಬ್ಬೆರಗಾಗುವಂತೆ ಮಾಡಿ
ಮನದ ಮೇಲೆ ಹಾಕುವುದು ಮೋಡಿ!

ಮಾನವಾ ನಿನ್ನಹಂಕಾರಕ್ಕೆ ಇದೊಂದು ಸವಾಲು
ನಿನ್ನ ಸೊಕ್ಕು, ಅಹಂಭಾವಗಳ ಕುಟ್ಟಿ
ಪುಡಿ, ಪುಡಿ ಮಾಡಿಹವು ನೋಡೆಲೆ ಖೋಡಿ.
ಹಿಮಾಲಯದ ಚಲುವ ಅಭಿವ್ಯಕ್ತಿಗೆ
ನಿನ್ನ ಶಬ್ದ ಭಾಂಡಾರವೇ ಬರಿದು;

ಉಪಮೆಗಳು ಶಕ್ತಿಗುಂದಿ ಕುಸಿಯುವುವು.
ಶಬ್ದಗಳು, ಉಪಮೇಗಳು ಸೋತು ಸೋಲನೊಪ್ಪಿ
ಹಿಂದೆ ಸರಿದಾಗ, ಅದ್ಭುತ! ಆಶ್ಚರ್ಯ!
ವರ್ಣನಾತೀತ! ಉಪಮಾತೀತ ಎಂಬ ಪದಗಳು
ಮುಂದೆ ಬಂದಿಹವು ನೆರವಿಗಾಗಿ.

ಹಿಮಕರಗಿ, ಧಾರೆಯಾಗಿ ಹರಿಯುತಿಹುದು
ಹಿಮಾಚ್ಛಾದಿತ ಹಿಮಾಲಯ ವರ್ಣಿಸಲಸದಳ!
ಗರಿಗೆದರಿ ಸೊಬಗ ಬಿಚ್ಚಿಹ ವೃಕ್ಷರಾಶಿ!
ಚಿಲಿಪಿಲಿ ರವಗೈಯ್ಯುವ ಪಕ್ಷಿರಾಶಿ!!
ಕಾಣುವುದೆಲ್ಲೆಲ್ಲೂ ಚೆಲುವು ರಾಶಿ ರಾಶಿ!!!

ಇದ ಕಂಡು ಮರುಭೂಮಿಯಂತಹ
ಹೃದಯದಲೂ ಅರಳಬಲ್ಲುದು ಸಂತಸದ ಮಲ್ಲಿಗೆ
ಇಲ್ಲಿಯೂ ಅರಳದ ಹೃದಯ,
ಮುದಗೊಳ್ಳದ ಮನ, ಮತ್ತೆಲ್ಲೂ ವಿಕಸಿಸದು!
ಆ ಹೃದಯ ಬೆಂಗಾಡು, ಸುಡುಮರಳುಕಾಡು
ಅಲ್ಲಿ ಯಾವ ಕುಸುಮವೂ ಅರಳದು ದೇವಾ!

## ಚೆಂಗುಲಾಬಿಯ ಚೆಲುವೆ

ಆರು ವಸಂತಗಳ ಮುಗಿಸಿರುವೆ
ಮುದ್ದಿನ ಮಣಿಯೆ ನಿನಗಾರು ಸರಿಯೆ
ಚೆಂಗುಲಾಬಿಯ ಚೆಲುವೆ
ನೀ, ಬೆಳಗು, ಬಾಳು ಅಪರೂಪದಪರಂಜಿಯಾಗಿ!
ನಿನ್ನ ಬಳಿ ಸುಳಿಯದಿರಲಿ
ಕೆಟ್ಟ ಕ್ರಿಮಿ-ಕೀಟಗಳು
ಕಳೆ, ಕೀಟಗಳ ಕಾಟವಿಲ್ಲದೆ

ಕಾಲ-ಕಾಲಕ್ಕೆ ನೀರು ಗೊಬ್ಬರವನುಂಡು
ಹುಲುಸಾಗಿ ಬೆಳೆದು
ನಳನಳಿಪ ಕುಸುಮಲತೆಯಂತೆ,
ಸುವಾಸನೆ ಬೀರುವ ಸಂಪಿಗೆಯಂತೆ,
ಫಲತೀವಿದಾ ಮಾಮರದಂತೆ,
ಸಂತೋಷದಿ ಉಲಿವ ಕೋಗಿಲೆಯಂತೆ,
ನಲುಮೆಯಿಂ ನಲಿವ ನವಿಲಿನಂತೆ
ಆನಂದ ಸಾಗರದಿ ಓಲಾಡುವ ಲಕುಮಿಯಂತೆ
ಜ್ಞಾನದ ನಿಧಿಯೇ ಆಗಿರುವ ಸರಸತಿಯಂತೆ
ಗಾಂಭೀರ್ಯವೇ ಮೈ ತಳೆದಿರುವ ಪರಶಿವನ ಸತಿಯಂತೆ
ನೀ ಬೆಳಗಿ, ಬಾಳೆಲೆ ನಮ್ಮೊಲವೆ
ಚೆಂಗುಲಾಬಿಯ ಚೆಲುವೆ.

(ಜಪಾನಿನಲ್ಲಿದ್ದ ಮೊಮ್ಮಗಳು ಶರ್ವಾಣಿಗೆ ಆರು ವರುಷಗಳು ತುಂಬಿದಾಗ ಹರುಷದಿ ಹರಸಿದ ಹರಕೆ; ಆಶಿಸಿದ ಆಶಯ. ೨೧-೧೨-೯೪ಳರಂದು ೬-೧-೯೫ರ ಹುಟ್ಟಿದ ಹಬ್ಬಕ್ಕಾಗಿ ರಚಿಸಿದ್ದು.)

■

## ಧಗೆಯಿಂದ ಪಾರಾದ ಬಗೆ

ಅಬ್ಬಬ್ಬಾ! ಇದು ಎಂಥ ಧಗೆ!
ಈ ವರ್ಷ ರವಿಗೆ ನಮ್ಮ ಮೇಲೇಕಿಷ್ಟು ಹಗೆ?
ಉಸಿರುಕಟ್ಟಿಸುವಾ ಧಗೆಯಲಿ, ಎಲ್ಲೂ ಇಲ್ಲವಾಗಿದೆ ನಗೆ!
ಪವನನೀಗ ತೋರಿಸಬೇಕು ಇದರಿಂದ ಪಾರಾಗುವ ಬಗೆ!

ಕರೆಯಿರಿ ವಿಜಯಳ ತ್ವರಿತದಿ, ನೀಡಲಿ ತಂಪನು,
ಅವಳಿಗಾಗದಿರೆ ಹುಡುಕಿ ಕಳುಹಿರಿ ಉಷೆಯನು,
ಅವಳಿಲ್ಲದಿದ್ದರೆ ಬರಲಿ ಕ್ರಾಂಪ್ಟನ್ ಅಥವಾ ಕೈಥಾನನು.
ಇವರಿಗೂ ಸಾಧ್ಯವಾಗದೆ ಕಡಿಮೆ ಮಾಡಲು
ಉರಿಬೇಸಿಗೆಯ ಧಗೆಯನು!

ವೀಡಿಯೋಕಾನಿನ ಲಿಟ್ಲ್ ಕೂಲರ್‌ಗೆ ಕೊಡಿರಿ ಅರ್ಜಂಟ್
ಕರೆಯನು
ಅವನಿಗಿಂತಲೂ ಸಿಂಫನಿ ಚತುರನಂತೆ, ನೀಡಿರವಗೆ
ಆಹ್ವಾನವನು
ಯಾರು ಬಂದರೂ ನಿಲ್ಲದಲ್ಲ ಈ ಧಗೆ!
ಯಾರಿಗೆ ಗೊತ್ತು ಇದರಿಂದ ಪಾರಾಗಿಸುವ ಬಗೆ?

ಅಲ್ಲಿ ನೋಡಿ ದಿಗಂತದಿ ಏಳುತಿವೆ ಕರಿಯ
ಮೋಡಗಳು
ನೀಲಾಕಾಶದಿ ಮರೆಯಾಗಿವೆ ಚಂದಿರ, ಚುಕ್ಕೆಗಳು.
ಬದಲಿಗೆ ಕೋರೈಸುತಿದೆ ಮಿಂಚಿನ ಸೆಳಕು, ಕಣ್ಗಳನು
ಕೇಳಿರಿ ಮೈನಡುಗಿಸುವ ಗುಡುಗು ಸಿಡಿಲಿನ
ಆರ್ಭಟವನು!

ಆಹಾ! ಏನಿದು ಆಹ್ಲಾದ! ಬೀರುತಿಹುದೆಲ್ಲೆಡೆ ಕಂಪಿನ ವಾಸನೆ
ಬೀಸುತಿಹುದು ನವುರಾದ ಗಾಳಿಯು ತಣ್ಣನೆ.

ಮುನಿದೆ ಏಕಮ್ಮಾ ನೆಲದಾಯಿ/೩೬೩

ಹನಿಯುತ್ತಿಹವು ಮಳೆಯ ಮುತ್ತಿನ ಹನಿಗಳು ಕೊರೆದು
ಮುಗಿಲನೆ.

ಧಗೆ ಹಾರಿಸಿ, ಹಗೆ ಸರಿಸಿ, ನಗೆ ಹರಿಸಿ
ಮುದಗೊಳಿಸುತಿಹವು
ಮನವನೆ.

ಮಾನವ ನಂಬು, ನೀನೊಂದು ಸಿಂಧುವಿನ ಬಿಂದು.
ಪ್ರಕೃತಿಯ ಶಕ್ತಿಯ ಮುಂದೆ ತಲೆಬಾಗಬೇಕು ಎಂದು.
ಆದರೂ ನಿನ್ನ ಜಾಣ್ಮೆಗೆ ಬೆಲೆ ಇದ್ದೇ ಇಹುದು
ಎಂದೆಂದೂ.

# ಹಣತೆ ಹಚ್ಚಿ ಹುಡುಕುತಿರುವೆ

ಲೇಖಕರು
ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ

ಪ್ರಕಾಶಕರು
ಪ್ರಸಾದ ಪ್ರಕಾಶನ
'ಶಿವಪ್ರಸಾದ'
೮ನೇ ಕ್ರಾಸ್, ಕಲ್ಯಾಣನಗರ,
ಧಾರವಾಡ - ೫೮೦ ೦೦೭

**HANATE HACHHI HUDUKUTIRUVE-**
(*A Collection of Poems*)
by Prof. (Smt.) Lalithamba Vrushabhendra Swamy M.Ed., DTE, Rtd. Reader in Education University College of Education, Dharwad-580 007 Published by Prasad Prakashana, 'Shivaprasad' Kalyana Nagar, 8th Cross, Dharwad-580 007. Ph: 448570

Author

ಪುಟಗಳು : ೧೦೪

ಪ್ರಥಮ ಮುದ್ರಣ : ಡಿಸೆಂಬರ್ ೨೦೦೨

ಕಲೆ : ಮೋನಪ್ಪ

ಬೆಲೆ : ೪೫-೦೦

ಮುದ್ರಕರು
ರವಿ ಪ್ರಿಂಟರ್ಸ್
ಅತ್ತಿಗುಪ್ಪೆ, ವಿಜಯನಗರ
ಬೆಂಗಳೂರು-೫೬೦ ೦೪೦.

ಸಂಪುಟ : ೧ ವಚನಾಂಜಲಿ - ಕಾವ್ಯಾಂಜಲಿ / ೩೬೬

ಅನಿಸಿಕೆ – ೧

## ನಲ್ನುಡಿ

### ಡಾ॥ ಸಾ.ಶಿ.ಮರುಳಯ್ಯ

ಕವಿ, ಸಂಬೇದನಾಶೀಲ ವ್ಯಕ್ತಿ. ಅವನು ಸದಾ ತನ್ನ ಪರಿಸರಕ್ಕೆ ಸ್ಪಂದಿಸುತ್ತಲೇ ಇರುತ್ತಾನೆ. ಲೋಕದೊಡನೆ ಸಂವಾದಿಸುತ್ತಲೇ ಇರುತ್ತಾನೆ. ಅನೇಕ ವೇಳೆ ಲೋಕದ ಸಂಕಟಕ್ಕೆ ತಾನು ಸಾಂತ್ವನವಾಗುತ್ತಾನೆ. ಅದರ ಹಿಗ್ಗಿಗೆ ಬುಗ್ಗೆಯಾಗುತ್ತಾನೆ. ಅದೆ ದೋಷಕ್ಕೆ ರೋಷವೂ ಆಗುತ್ತಾನೆ. ಲೋಕದ ಡೊಂಕನ್ನು ತಿದ್ದಬಾರದು ಎಂದುಕೊಂಡರೂ, ತಿದ್ದುವುದನ್ನು ಮರೆತವನಲ್ಲ. ಬದುಕನ್ನು ಹಸನುಗೊಳಿಸುವಲ್ಲಿ ಅವನದು ಪ್ರಮುಖ ಹಾಗೂ ಪ್ರಭಾವಶಾಲಿ ಪಾತ್ರ. ಅವನು ಅಜ್ಞಾತ ಶಾಸಕನಾಗಿ, ಸದಾ ಜನಮನವನ್ನು ತಿದ್ದುತ್ತಲೇ ಇರುತ್ತಾನೆ. ಮಾರ್ಗದರ್ಶನ ಮಾಡುತ್ತಲೇ ಇರುತ್ತಾನೆ.

ಇಂತಹ ಸುದಾರಣೆಯ ಸೂತ್ರವಿಡಿದ ನಮ್ಮೆಲ್ಲರ ಭರವಸೆಯ ಕವಯಿತ್ರಿ ಲಲಿತಾಂಬ ವೃಷಭೇಂದ್ರಸ್ವಾಮಿಯವರು. ಅದ್ಯತನ ಜೀವನದ ಅಸಾಂಗತ್ಯಗಳನ್ನು ಕಂಡು ಕೆಂಡಮಂಡಲವಾಗಿದ್ದಾರೆ ತಮ್ಮ 'ಹಣತೆ ಹಚ್ಚಿ ಹುಡುಕುತಿಹೆನು' ಎಂಬ ಕವನ ಸಂಕಲನದಲ್ಲಿ. ಅದು ಕವಿಚೇತನಕ್ಕೆ ಸಹಜವೂ ಹೌದು. ಪ್ರಕೃತಿ ಒಮ್ಮೆ ಬನಶಂಕರಿಯಾದರೆ, ಮತ್ತೊಮ್ಮೆ ರಣಭಯಂಕರಿಯೂ ಆಗುತ್ತಾಳೆ. ಕವಿಮನೋಧರ್ಮ ಅಂತಹುದು. ತಮ್ಮ ಈ ಹಿಂದಿನ 'ಮುನಿದೆ ಏಕಮ್ಮಾ ನೆಲದಾಯಿ' ಎಂಬ ಕವನ ಸಂಕಲನದಲ್ಲಿ 'ಕಣ್ಣಣಿಯೆ, ಮನದಣಿಯೆ ಸೌಂದರ್ಯದ ರಸದೌತಣವನ್ನು ಅನುಭವಿಸಿದ ಮಾತಿನಲ್ಲಿ ಹರಿಶ್ಚಂದ್ರನ ತುಂಡೇನೋ ಎಂಬಂತಿದ್ದು, ಕೃತಿಯಲ್ಲಿ ಶಕುನಿಯ ಪ್ರತಿರೂಪವಾಗಿರುವ, ದುಶ್ಯಾಸನನ ಪಾಪದ ಪಿಂಡದಂತಿರುವ, ಗೋಮುಖವ್ಯಾಘ್ರಗಳನ್ನು ಕಂಡು ವ್ಯಗ್ರರಾಗಿದ್ದಾರೆ. 'ಧೈರ್ಯವಿದ್ದರೆ ಎದುರುನಿಂತು, ಬೇಕಾದಂತೆ ಆಡಿಸು–ಕುಣಿಸು, ಆದರೆ ಹೇಡಿಯಂತೆ ಬೆನ್ನಲ್ಲಿರಿಯಬೇಡ, ಧೂರ್ತನಂತೆ ಸಜ್ಜನರ ಕರುಳಿನಲ್ಲಿ ಕತ್ತರಿಯಾಡಿಸಬೇಡ' ಎಂದು ದೇವರಿಗೂ ಎಚ್ಚರಿಕೆ ನೀಡಿದ್ದಾರೆ. ಕಡೆಯ ಪಕ್ಷ ಈ ದೇಶದಲ್ಲಿ ಯಾರಾದರೂ ಸಜ್ಜನರಿದ್ದಾರಾ ಎಂದು ಹಣತೆ ಹಚ್ಚಿ ಹುಡುಕಿದರಂತೆ! ಆದರೆ ಇಲ್ಲಿ ಎಲ್ಲೆಲ್ಲೂ ಇಲ್ಲವಾಗಿ, ಸತ್ಯದ ಸೊಲ್ಲೇ ಅಸಗಿದ್ದುದು ವೇದ್ಯವಾಯಿತಂತೆ! ಹಿಂದಿನ ಕಾಲದಲ್ಲಿ ಅಕ್ಕಿಯ ರಾಶಿಯಲ್ಲಿ ಕಲ್ಲು ಆಯುತ್ತಿದ್ದರು,

ಈಗಿನ ಕಾಲದಲ್ಲಿ ಕಲ್ಲಿನ ರಾಶಿಯಲ್ಲಿ ಅಕ್ಕಿ ಹುಡುಕಬೇಕಾಗಿದೆ. ಎಲ್ಲೆಲ್ಲೂ ಬರಿಕಲ್ಲು, ಅಕ್ಕಿ ಆಕಾರದ ಬೆಣಚುಕಲ್ಲುಗಳೇ! ಕೆಲವು ವೇಳೆ.

ತುಳಿವವರೆ ಹೆಚ್ಚಾಗಿ ಈ ಸುಲಭ ಮಾರ್ಗ
ಸಾಚಾಜನಕೆ ಓಡಾಡಲು ಹಾದಿಯೇ ಇಲ್ಲವಾಗಿ
ಅವರೆಲ್ಲ ಮೂಲೆಗುಂಪಾಗಿ
ದೀಪಹಚ್ಚಿ ಹುಡುಕಿದರೂ ಕಾಣದಾಗಿಹರು!

ಎಂಬ ಕಟುಸತ್ಯವು ಅಭಿವ್ಯಕ್ತಿಗೊಂಡಿದೆ. ಕವಿಯಿತ್ರಿಯ ಯೋಧ್ಯವಾಣಿ ಇಂತಿದ್ದರೂ, 'ಹೊಸದಾಗಿ ಬಂದಿಹೆನು' ಮತ್ತು 'ಬಾ ಮಗು ಒಳಗೆ ಬಾ' ಎಂಬ ಅವಳ ಕವನಗಳಲ್ಲಿ (Comapnion poems) ತಾಯಿಯ ಕರುಳು ಮಿಡಿದಿರುವುದನ್ನು ಕಾಣುತ್ತೇವೆ. ಹೊಸದಾಗಿ ಹಸೆಮಣೆಯನ್ನೇರಿ, ಮಡದಿಯಾಗಿ ಮಡಿಲು ತುಂಬಿಕೊಂಡು, ಹುಟ್ಟಿದ ಮನೆ ತೊರೆದು, ಕೊಟ್ಟ ಮನೆಗೆ ಕಾಲಿರಿಸಿದ ಹೆಣ್ಣಿನ ಅಂತರಾಳವನ್ನು ಎಳೆ ಎಳೆಯಾಗಿ ಒಂದು ಕವನದಲ್ಲಿ ಬಿಡಿಸಿ ತೋರಿಸಿದ್ದರೆ, ಮತ್ತೊಂದರಲ್ಲಿ ತಾವು ಅತ್ತೆಯಾಗದೆ ತಾಯಿಯಾಗುವ ಭರವಸೆಯನ್ನು ಮೂಡಿಸಿದ್ದಾರೆ. ಇವು ನನಗೆ ತುಂಬಾ ಖುಷಿಕೊಟ್ಟ ಕವಿತೆಗಳು. ಮತ್ತೆ ಕೆಲವೆಡೆ ರಾಷ್ಟ್ರದ ಬಗ್ಗೆ ಕಾಳಜಿ, ಪ್ರಕೃತಿ ಪ್ರೇಮ, ನೊಂದವರ ಬಗ್ಗೆ ಅನುಕಂಪ ಅಭಿವ್ಯಕ್ತಿಸಿದ್ದಾರೆ. ಕೃಷಿಪ್ರತಿಮೆಗಳ ಬಳಕೆ ಕೃತಿಯ ಹೆಗ್ಗಳಿಕೆ/

ಕನ್ನಡದ ಶ್ರೇಷ್ಠ ಗದ್ಯ ಶಿಲ್ಪಿಗಳಲ್ಲಿ ಒಬ್ಬರಾದ ಪ್ರೊ.ಲಲಿತಾಂಬ ವೃಷಭೇಂದ್ರ ಸ್ವಾಮಿಯವರು ಪದ್ಯರಚನೆಯಲ್ಲಿ ತಮ್ಮ ದೇ ಛಾಪು ಮೂಡಿಸಿದ್ದಾರೆ. ಗದ್ಯದಲಿ ಹೇಗೋ ಹಾಗೆ ಪದ್ಯದಲ್ಲೂ ಕವಯಿತ್ರಿಯ ಪ್ರಸಾದ ಗುಣ, ಓತಪ್ರೋತ ಶೈಲಿ, ಸರಳ ಆದರೆ ಅಷ್ಟೇ ಪರಿಣಾಮಕಾರಿ ನಿರ್ಭಿಡೆಯ ನುಡಿ ಸಿಡಿದರೂ, ಮಾತು ಮಧುರ, ಭಾವ ಬಂಧುರ. ಶ್ರೋತೃವನ್ನು ಎಲ್ಲೂ ದಣಿಸದ, ತಣಿಸುವ ಕ್ರಿಯಾಶೀಲತೆ ಇವರ ವಿಶಿಷ್ಟ ಕಾವ್ಯಗುಣ. ಇದು ಕವಯಿತ್ರಿಯ ಮನೋಧರ್ಮಕ್ಕೆ ಹಿಡಿದ ಕನ್ನಡಿ. ಮುಖವನ್ನು ನೋಡಿದರೆ ಮನಸ್ಸನ್ನು ಓದಬಹುದು. ಕವಿತೆಯನ್ನು ಓದಿದರೆ ಕವಯಿತ್ರಿಯನ್ನು ಕಾಣಬಹುದು. ಅಂತಹ ಪಾರದರ್ಶಕ ಪ್ರಕ್ರಿಯೆ ಪ್ರತಿಕವನದಲ್ಲೂ ಸ್ಪಷ್ಟ ಗೋಚರ. ಇದು ಲಲಿತಾಂಬರವರ ಕಾವ್ಯಸಿದ್ಧಿ. ಇದು ಶ್ರೀಮಂತವಾಗಲಿ, ಧೀಮಂತವಾಗಲಿ ಎಂದು ಹಾರ್ದಿಕವಾಗಿ ಹಾರೈಸಿ ವಿರಮಿಸುವೆ.

'ರಾಗಿಣಿ'
ಸ್ವರ್ಣಗೌರೀವ್ರತ
೯-೯-೨೦೦೨

ಸಾ.ಶಿ.ಮರುಳಯ್ಯ

ಅನಿಸಿಕೆ – ೨

## ಚೆನ್ನುಡಿ

### ಶ್ರೀ ಚೆನ್ನವೀರ ಕಣವಿ

ನಿನ್ನ ಕಿವಿಯಲಿ ಪಿಸುಮಾತು ಉಸುರಿ
ಹಗುರ ಮಾಡಿಕೊಳಳುವೆನೆನ್ನ ಮನವ,
ಇಳುಹಿಕೊಳ್ಳುವೆನು ತಲೆಭಾರ

ಈ ಸಾಲುಗಳು ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿಯವರ ಇಲ್ಲಿಯ ಪದ್ಯಗಳ ಒಟ್ಟು ಆಶಯವನ್ನು ಸೂಚಿಸುವಂತಿದೆ. ಆಧುನಿಕತೆಯಲ್ಲಿರ ಬಹುದಾದ ಅಪಾಯಗಳನ್ನು ಹೋಗಲಾಡಿಸಿಕೊಂಡು, ಸಂಪ್ರದಾಯದಲ್ಲಿಯ ಒಳಿತಿನ ಅಂಶಗಳನ್ನು ಕಾಪಾಡಿಕೊಂಡು ಬದುಕು ಸಾಗಿಸಬೇಕೆಂಬ ಹಂಬಲದ ಅಭಿವ್ಯಕ್ತಿ ಇಲ್ಲಿಯ ಮತ್ತೊಂದು ಮಹತ್ವದ ಅಂಶವಾಗಿದೆ. ಸುಸಂಸ್ಕೃತ ಗೃಹಣಿಯೋರ್ವಳ ಕುಟುಂಬ ವಾತ್ಸಲ್ಯ, ಮಾಗಿದ ಮನಸ್ಸಿನ ಹಿತೋಪದೇಶ (ಯುವ ಪೀಳಿಗೆಗೆ), ಸಾಮಾಜಿಕ ರೀತಿ–ನೀತಿಗಳ ಬಗೆಗಿನ ಕಾಳಜಿ, ಸಂದಿಗ್ಧ ಕಾಲದ ಮಹಿಳೆಯರ ಛಡಪಡಿಕೆ, ದೇಶದ ದುಸ್ಥಿತಿಯ ಬಗ್ಗೆ ಕೊರಗು ಇವೇ ಮೊದಲಾದವು ಪದ್ಯರೂಪದ ವಿಚಾರಲಹರಿಗಳಾಗಿ ಸರಳವಾದ ಭಾಷಾ ಶೈಲಿಯಲ್ಲಿ ಮೂಡಿಬಂದಿವೆ.

'ಹೊಸದಾಗಿ ಬಂದಿಹೆನು', 'ಬಾ ಮಗು ಒಳಗೆ ಬಾ', 'ಕನಸು ನಮ್ಮದು ನೋವು ನಿನ್ನದು', 'ದೇವರಿಲ್ಲಿಹನು ನೋಡು', 'ದುಡುಕದಿರು', 'ಗುರಿ ಇಲ್ಲದ ನಡಿಗೆ' ಮೊದಲಾದವು ಆತ್ಮೀಯ ಭಾವದಿಂದ ಓದುಗರ ಗಮನ ಸೆಳೆಯುವಂತಿದ್ದರೆ, 'ಪಾರಿವಾಳವೆ ಬಾ', 'ಮುಳ್ಳುಕಂಟಿ', 'ಸಲ್ಲ ಅವಸರ ಸಲ್ಲ' ಪದ್ಯಗಳನ್ನು

ಸಾಂಕೇತಿಕವಾಗಿಯೂ ಪರಿಭಾಪಿಸಬಹುದಾಗಿದೆ. 'ಸವೆದ ಯಂತ್ರ', 'ಮನಸ್ಸೆಲ್ಲಾ ಬತ್ತಲೆ', 'ಹಳೆಯ ಹೊತ್ತಗೆ' ಇವು ಮುಪ್ಪಾವಸ್ಥೆಯ ಕಳವಳದ ಸ್ಥಿತಿಗೆ ಕನ್ನಡಿ ಹಿಡಿದಂತಿವೆ. ರಾಜಕೀಯ ದುರವಸ್ಥೆಯ ಕಳವಳದ ಸ್ಥಿತಿಗೆ ಕನ್ನಡಿ ಹಿಡಿದಂತಿವೆ. ರಾಜಕೀಯ ದುರವಸ್ಥೆಯ ಕಳವಳದ ಸ್ಥಿತಿಗೆ ಕನ್ನಡಿ ಹಿಡಿದಂತಿವೆ. ವಾಚ್ಯಕ್ಕಿಂತ ಆಚೆಗೆ ಹೋಗದೆ. ಸಾರ್ವಜನಿಕ ಭಾಷಣದ ಸಾಲಿನಲ್ಲಿ ನಿಲ್ಲುತ್ತವೆ. ಆದರೆ, ಸಹಜಾನುಭವ ಹಾಗೂ ಹಸನಾದ ಮನಸ್ಸಿನ ನೇರ ನಿರೂಪಣೆಯಿಂದ ವಚನ-ಕವನಗಳಂತೆ ಓದುಗರ ಮನಸ್ಸಿನಲ್ಲಿ ನಿಲ್ಲಬಲ್ಲವು.

ಧಾರವಾಡ
೨೪-೯-೨೦೦೨ ಚನ್ನವೀರ ಕಣವಿ

## ಡಾ.ಕಮಲಾ ಹೆಮ್ಮಿಗೆ
## ಕನ್ನಡಿ

ಇತ್ತೀಚಿನ ದಿನಗಳಲ್ಲಿ ವಸಂತಕ್ಕಿಂತ ಗ್ರೀಷ್ಮದ ಮ್ಲಾನತೆ–ದುಗುಡಗಳೇ ಪರಿಸರವನ್ನು ತುಂಬಿವೆ ಎಂಬುದನ್ನು ನಾಡಿನ ಹಿರಿಯ ಚಿಂತಕರಾದ, ಶಿಕ್ಷಣ ತಜ್ಞರಾದ ಪ್ರೊ.ಲಲಿತಾಂಬ ವೃಷಭೇಂದ್ರಸ್ವಾಮಿಯವರು ಕಾವ್ಯಮುಖೇನ ಪ್ರಕಟ ಪಡಿಸಿದ್ದಾರೆ. ನೈತಿಕತೆಯ ನೆಲೆಗಟ್ಟಿಲ್ಲದ, ಸಜ್ಜನಿಕೆಯ ಸುಳಿವೂ ಇಲ್ಲದ ಇಂದಿನ ದಿನಮಾನ, ವಿದೇಶೀ ಸಂಸ್ಕೃತಿಗೆ ಮಾರುಹೋದ ಭಾರತೀಯರಿಂದ ವಿಷಾದ ಹುಟ್ಟಿಸಿದೆ. ವಾರ್ಧಕ್ಯ, ಯುದ್ಧೋತ್ತರ ಕುರುಕ್ಷೇತ್ರವೆನ್ನಿಸಿದೆ. ಮುಖಹೀನರ, ಮೌಲ್ಯವಿಹೀನರ, ದ್ವಿಮುಖ ಬದುಕು, ಬೆನ್ನು ತಿರುವಿದ ಮಾನವೀಯತೆ, ಮೃದುಮಾತಿನ ಹಿಂದೆ ನಿಧಾನ ವಿಷಪ್ರಾಶನ ಇವೆಲ್ಲ ಈ ಪಕ್ವಚೇತನವನ್ನು ಅಲ್ಲಾಡಿಸಿವೆ.

ಇಂದೇನಾಗಿದೆ ಈ ಭಾರತೀಯರಿಗೆ? ಎಂಬ ಪ್ರಶ್ನೆಯೇ ಬೇರೆ ಬೇರೆ ದಿರಿಸು ಧರಿಸಿ ಎಡೆಬಿಡದೇ ಎದುರಾಗುವುದು ಈ ಸಂಕಲನದ ವೈಶಿಷ್ಟ್ಯ. 'ಬಾಳದಾರಿ', 'ಸಂಶೋಧನೆ' ಇವು ಸಂಸ್ಕೃತಿಯ ಕುರಿತ ಕಾಳಜಿಗಳಾದರೆ, ಮಾದರಿ ಅತ್ತೆ–ಸೊಸೆಯರ ಸ್ವಗತಗಳು ಆಕರ್ಷಿಸುವ ಸಶಕ್ತ ಕವನಗಳು. ಒಳಿತಿಗೆ ಕೆಡುಕೆದುರಾದರೆ ನಾನೇನೂ ಸುಮ್ಮನಿರುವಳಲ್ಲ ಬಿಡಿ! ಎನ್ನುವ ದಿಟ್ಟ ಸೊಸೆಯ ಚಿತ್ರವೂ ಇದೆ. ಬಾ ಮಗಳೆ ಎನ್ನುವ ಅತ್ತೆ ಇದ್ದಾಳೆ. ಔದಾರ್ಯವನ್ನೇ ದೌರ್ಬಲ್ಯ ಎಂದುಕೊಂಡು ಬೆಂದಮನೆಯಿಂದ ಹಿರಿದುಕೊಂಡು ಹೋಗುವ ಚಾಣಾಕ್ಷರೂ ಈ ಕಾವ್ಯ ಭೂಮಿಕೆಯಲ್ಲಿ ಕಾಣಸಿಗುತ್ತಾರೆ.

'ಸಹವಾಸ', 'ಹೊಟ್ಟೆ ಕಿಚ್ಚು', 'ದೇಹಬೇಕಯ್ಯ' ಎಂಬಂತಹ ಕಿರುಗವನಗಳ ವಿಷಾದಪೂರ್ಣ ಮೂಡುಗಳನ್ನು, ಆಶಾವಾದಿತ್ವವನ್ನು ಪ್ರತಿಪಾದಿಸುತ್ತವೆ.

ಲಲಿತಾಂಬ ಅವರ ಆಧ್ಯಾತ್ಮ, ಕುರುಡು ಭಕ್ತಿಗಳಲ್ಲಿ ಲೌಕಿಕ ಜೀವನದ ವೈರುದ್ಧ್ಯವನ್ನು ಪ್ರಶ್ನಿಸುತ್ತಲೇ ಅಲ್ಲಮನನ್ನು ನೆನಪಿಸುವಂತೆ 'ಹೇಡಿಯಂತೆ ಬೆನ್ನಲಿರಿಯಬೇಡ' ಎಂದು ದೇವರಿಗೇ ಆದೇಶಿಸ ಬಲ್ಲರು! ಜಪ-ಮಂತ್ರಗಳ ಜಡತೆಯನ್ನು ತಿರಸ್ಕರಿಸಬಲ್ಲರು. ಬಸವಣ್ಣನವರ ಹೆಸರನ್ನು ಇಂದಿನವರು ಬೇಕಾದಂತೆ ಬಳಸಿಕೊಳ್ಳುತ್ತಿರುವುದನ್ನು ಖಂಡಿಸುವಷ್ಟು ನಿರ್ದಾಕ್ಷಿಣ್ಯ ವ್ಯಕ್ತಿತ್ವ ಅವರದ್ದು, ಅಲ್ಲಲ್ಲಿ ಕಾವ್ಯ ಕೊಂಚ ಗದ್ಯಾತ್ಮಕವೆನ್ನಿಸಿದರೂ, ತಾವು ಕಂಡ ಸತ್ಯಗಳನ್ನು ನಿರ್ಭಿಡೆಯಿಂದ ತಿಳಿಸಿ ಯುವಕ-ಯುವತಿಯರಿಗೆ ಮಾರ್ಗದರ್ಶನ ಮಾಡುವಿಕೆ, ಕೆಲಸದ ಹೆಣ್ಣುಮಗಳ ಕುರಿತ ಕಳಕಳಿ, ಮೇಧಾ ಪಾಟ್ಕರರಂತಹ ಕೃಷ್ಣಾಗಸದ ಕೋಲ್ಮಿಂಚುಗಳ ಕುರಿತ ಆದರ, ಸ್ತ್ರೀ ಪರವಾದ ಧೋರಣೆಗೆ ಹಿಡಿದ ಕನ್ನಡಿ. 'ಪ್ರಕೃತಿ', 'ಬಿತ್ತಿದವನೆಲ್ಲಿ ಹೋದ' ಇವು ಕಾವ್ಯಾತ್ಮಕವಾಗಿ ಮನಸೆಳೆಯುತ್ತವೆ. ಒಟ್ಟಾರೆ ಹೇಳಬೇಕೆಂದರೆ, ಅವರ ವ್ಯಕ್ತಿತ್ವದಂತೆಯೇ ಕಾವ್ಯಕ್ಕೂ ಮುಲಾಜುಗಳಿಲ್ಲ.

ಧಾರವಾಡ

ಕಮಲಾ ಹೆಮ್ಮಿಗೆ

## ಹಣತೆ ಹಚ್ಚಿ ಹುಡುಕುತಿಹೆನು

## ನನ್ನನುಡಿ

'ಹಣತೆ ಹಚ್ಚಿ ಹುಡುಕುತಿರುವೆ' ಎನ್ನುವ ಕೃತಿ ನನ್ನ ಎರಡನೆಯೆ ಕವನ ಸಂಕಲನ, ಮೊದಲನೆಯದಾದ, 'ಮುನಿದೆ ಏಕಮ್ಮಾ ನೆಲದಾಯಿ' ಎಂಬ ಕವನ ಸಂಕಲನ ಹತ್ತೊಂಬತ್ತು ನೂರಾ ತೊಂಬತ್ತೈದರಲ್ಲಿ ಪ್ರಕಟವಾಗಿತ್ತು. ಅದನ್ನು ಸಹೃದಯ ಓದುಗರು ಆದರದಿಂದ ಬರಮಾಡಿಕೊಂಡುದರಿಂದ, ಅದರ ಪ್ರತಿಗಳೆಲ್ಲಾ ಮುಗಿದು ಹೋಗಿವೆ. ಅದೇ ರೀತಿ ಈ ಕೃತಿಯನ್ನು ಸ್ವಾಗತಿಸಿ ಪ್ರೋತ್ಸಾಹಿಸಬೇಕಾಗಿ ಆಶಿಸುತ್ತೇನೆ.

ಈ ಕವನಗಳನ್ನು ಉದ್ದೇಶ ಪೂರ್ವಕ ಬರೆಯಲಿಲ್ಲ. ಯಾವುದೇ ಒಂದು ಘಟನೆ ಮನಸ್ಸನ್ನು ತಟ್ಟಿ ವಿಷಯ ಪ್ರಚೋದನೆ ಮಾಡಿದಾಗ, ಆ ಆಲೋಚನೆ ಕವನ ರೂಪವಾಗಿ ಅಭಿವ್ಯಕ್ತಿಗೊಂಡಿದೆ. ಕೆಲವು ಸಾರಿ ಒಂದೇ ದಿನದಲ್ಲಿ ಎರಡು ಮೂರು ಕವನ ಬರೆದುದೂ ಉಂಟು. ಕೆಲವು ಬಾರಿ, ತಿಂಗಳುಗಳು ಕಳೆದರೂ ಒಂದನ್ನೂ ಬರೆಯದಿದ್ದುದೂ ಉಂಟು. ಪ್ರಾರಂಭದಲ್ಲಿ ವಿಚಾರಗಳು, ವೈಚಾರಿಕ ಲೇಖನದಲ್ಲಿ ಹೊರಹೊಮ್ಮಿದರೆ, ಅನಂತರ ಸಣ್ಣಕಥೆಯಲ್ಲಿ ಅಭಿವ್ಯಕ್ತಿಗೊಂಡವು. ಈಗೀಗ ವಿಚಾರಗಳೆಲ್ಲಾ ಕವನ ರೂಪ ತಾಳುತ್ತಿರುವುದನ್ನು ನೋಡಿದರೆ ನನಗೇ ಆಶ್ಚರ್ಯವಾಗುತ್ತದೆ. ಕವನಗಳಲ್ಲಿ ಒಂದು ದೊಡ್ಡ ವಿಚಾರವನ್ನು ಒಂದು ಸಣ್ಣ ಉಪಮೆಯ ಮೂಲಕ ಅತ್ಯಂತ ಪ್ರಭಾವಯುತವಾಗಿ ಬಿತ್ತರಿಸಬಹುದಾದುದು, ಈ ರೀತಿಯ ಅಭಿವ್ಯಕ್ತಿಗೆ ಕಾರಣವಿರಬಹುದೇನೋ ಅನ್ನಿಸುತ್ತದೆ.

ಅಲ್ಲಲ್ಲಿ ಬರೆದ ಕವನಗಳನ್ನು ಒಂದುಗೂಡಿಸಿ, ಒಮ್ಮೆ ನಾಡಿನ ಹಿರಿಯ ಕವಿ, ಚನ್ನವೀರ ಕಣವಿಯವರಿಗೆ ತೋರಿಸಿದಾಗ, ಪ್ರಕಟಿಸಬೇಕೆಂಬ ನಿರ್ಧಾರ ಬಂದಿತು. ಹಾಗೆ ನಿರ್ಧಾರ ಮಾಡಿದರೂ, ನನ್ನ ಕವನಗಳ ಬಗೆಗೆ ಹಿರಿಯ ಕವಿಗಳ ಅಭಿಪ್ರಾಯ ತಿಳಿದುಕೊಳ್ಳಬೇಕೆಂಬ ಆಕಾಂಕ್ಷೆಯಿಂದ ಇನ್ನೊಬ್ಬ ಶ್ರೇಷ್ಠ ಕವಿಗಳಾದ ಡಾ. ಸಾ.ಶಿ.ಮರುಳಯ್ಯನವರಿಗೆ ತಮ್ಮ ಅಭಿಪ್ರಾಯ ಕಳಿಸಲು ವಿನಂತಿಸಿದಾಗ, ಅವರ ಅನಾರೋಗ್ಯ, ಬಿಡುವಿಲ್ಲದ ಕೆಲಸಗಳ ನಡುವೆಯೂ ನನ್ನ ಕವನಗಳಿಗೆ 'ನಲ್ನುಡಿ' ಬರೆದು ಕಳುಹಿಸಿದರು, ಅವರ ನುಡಿಗಳು ನನ್ನಲ್ಲಿ ಉತ್ಸಾಹ ಮೂಡಿಸಿದೆವು, ಮೆಚ್ಚುಗೆಯ ಮಾತುಗಳು ಸಂತಸ ನೀಡಿದವು. ಹೀಗೆ

ನನ್ನಲ್ಲಿ ಉತ್ಸಾಹ ಮತ್ತು ಸಂತಸವನ್ನು ಉಂಟುಮಾಡಿ ಪ್ರೋತ್ಸಾಹಿಸಿದ ಸೋದರ ಸಾ.ಶಿ.ಮರುಳಯ್ಯನವರಿಗೆ ಗೌರವಪೂರ್ವಕ ವಂದನೆಗಳು.

ನಂತರ, ಹೆಸರಾಂತ ಕವಿಗಳಲ್ಲೊಬ್ಬರಾದ ಹಿರಿಯ ಕವಿ ಚನ್ನವೀರ ಕಣವಿಯರ ಅನಿಸಿಕೆಯನ್ನು ಅರಿಯಬೇಕೆಂದಾಸೆಯಿಂದ, ಅವರಿಗೆ 'ಅನಿಸಿಕೆ'ಯನ್ನು ಬರೆದುಕೊಡಲು ಕೇಳಿದೆ. ಅವರೂ ಅಷ್ಟೆ, ಬಿಡುವಿಲ್ಲದ ಕಾರ್ಯಕ್ರಮಗಳು. ಈ ವಯಸ್ಸಿನಲ್ಲಿ ಇಷ್ಟೊಂದು ಕೆಲಸಗಳನ್ನು ಹಚ್ಚಿಕೊಂಡಿರುವ ಅವರಿಗೆ, ತೊಂದರೆ ಕೊಡಲು ಮನಸ್ಸು ಹಿಂಜರಿದರೂ, ಅಂಥವರ ಅನಿಸಿಕೆಗಳ ಮೂಲಕ ನನ್ನ ಕವನಗಳ ಮಟ್ಟ ತಿಳಿದುಕೊಳ್ಳುವ ತವಕದಿಂದ ಅವರಿಗೂ ತೊಂದರೆ, ಕೊಡಬೇಕಾಯ್ತು. ಅಷ್ಟು ಕೆಲಸಗಳ ಮಧ್ಯೆಯೂ ಬಿಡುವು ಮಾಡಿಕೊಂಡು 'ಚೆನ್ನುಡಿ'ಯ ಮೂಲಕ ಮೆಚ್ಚುಗೆ ತೋರಿದ ಅವರಿಗೂ ನನ್ನ ಅಭಿಮಾನ ತುಂಬಿದ ಅಭಿನಂದನೆಗಳು.

ಇನ್ನು ಕವಯಿತ್ರಿಯರು ನನ್ನ ಕವನಗಳಿಗೆ ಹೇಗೆ ಸ್ಪಂದಿಸಬಹದು ಎಂಬ ಆಲೋಚನೆ ಮೂಡಿದಾಗ, ಜನಪ್ರಿಯ ಸಾಹಿತಿ ಕಮಲಾ ಹೆಮ್ಮಿಗೆ ಒಂದು ಸಂದರ್ಭದಲ್ಲಿ ಕಣ್ಣಿಗೆ ಬಿದ್ದರು. ಅವರಿಗೆ ನಿಮ್ಮ ಅಭಿಪ್ರಾಯ ತಿಳಿಸಿ ಎಂದಾಗ ಅವರೂ ಸಮತೋಷದಿಂದ ತಮ್ಮ ವಿಚಾರಗಳನ್ನು ಬರೆದುಕೊಟ್ಟರು. ಅವರಿಗೂ ನನ್ನ ಆದರದ ಅಭಿನಂದನೆಗಳು.

ನಾನು ಕವನ ಬರೆದು ಮುಗಿಸಿದಾಗ, ಮೊದಲ ಕೇಳುಗರು, ನನ್ನ ಬಾಳ ಸಂಗಾತಿ, ಡಾ.ವೃಷಭೇಂದ್ರಸ್ವಾಮಿಯವರು ಅವರು ಕೆಲವೊಮ್ಮೆ ಟೀಕಿಸಿ, ಮಗುದೊಮ್ಮೆ ಪ್ರೋತ್ಸಾಹಿಸಿ ಕವನ ಸಂಗ್ರಹ ಹೊರತರಲು ಕಾರಣರಾಗಿದ್ದಾರೆ. ಅವರಿಗೆ ನಮನಗಳನ್ನೊಪ್ಪಿಸದಿದ್ದರೆ ತಪ್ಪಾದೀತು!

ಈ ಕವನ ಸಂಗ್ರಹ ಅಚ್ಚುಮಾಡುವಲ್ಲಿ ನೆರವಾದ ಶ್ರೀ ಎ.ಎಸ್. ಭಟ್ ಅವರಿಗೆ ಹಾಗೂ ಕು. ವೀಣಾ ಕುಲಕರ್ಣಿ ಅವರಿಗೆ, ಅಂದವಾಗಿ ಮುಖಪುಟವನ್ನು ರಚಿಸಿದ ಮೋನಪ್ಪ, ಅಕ್ಷರ ಜೋಡಣೆ ಮಾಡಿದ ಶ್ರೀ ನಾಡಿಗ ಮತ್ತು ಅಂದವಾಗಿ ಮುದ್ರಿಸಿರುವ ರವಿ ಪ್ರಿಂಟರ್ಸ್ ಅವರನ್ನು ಮೆಚ್ಚುಗೆಯಿಂದ ನೆನೆಯಲೇಬೇಕು.

೧೫-೧೨-೨೦೦೨ ಲಲಿತಾಂಬ ವೃಷಭೇಂದ್ರ ಸ್ವಾಮಿ
ಧಾರವಾಡ

■

ಪರಿವಿಡಿ

೨೬. ಅದೃಷ್ಟ
೨೭. ಸೇರುವುದೆಂತು ಗುರಿಯ?
೨೮. ಒಕ್ಕಟ್ಟಿಲ್ಲದೆ ಬಿಕ್ಕಟ್ಟು
೨೯. ಅಂದು–ಇಂದು
೩೦. ಮನಸ್ಸೆಲ್ಲಾ ಬತ್ತಲೆ
೩೧. ಘನ ಸರ್ಕಾರ
೩೨. ಇಂದೇನಾಗಿದೆ ಈ ಭಾರತೀಯರಿಗೆ?
೩೩. ದುಡುಕದಿರು
೩೪. ಏಳು–ಬೀಳು
೩೫. ಭಾರತದ ರಾಜಕಾರಣ
೩೬. ಕೊಟ್ಟಿದು ತನಗೆನ್ನಬೇಡ
೩೭. ಭಾರತೀಯ ಮೌಲ್ಯ
೩೮. ಸಹವಾಸ ಪರದೇಶಿ ಕೈ ತುಂಬಾ ಬೇಕು
೩೯. ಬವಣೆಯ ನೀಗಿಸುವವರು ಯಾರು?
೪೦. ಹುಟ್ಟು ಹಬ್ಬದ ಶುಭಾಶಯಗಳು
೪೧. ಬಹುಜನರ ಬದುಕಂತೆ
೪೨. ಪಾರಿವಾಳವೆ ಬಾ!
೪೩. ಕನಸು ನಮ್ಮದು–ನೋವು ನಿನ್ನದು
೪೪. ಸಮಯಸಾಧಕರು
೪೫. ನುಣ್ಣನೆಯ ಬೆಣ್ಣೆ
೪೬. ಗುರಿ ಇಲ್ಲದಾ ನಡಿಗೆ
೪೭. ಬಿತ್ತಿದವನೆಲ್ಲಿ ಹೋದ
೪೮. ಓ ರೈತ!
೪೯. ಪ್ರಕೃತಿ
೫೦. ನಂಗೊಂದು ಸಂಸ್ಕೃತಿ–ನಿಂಗೊಂದು ಸಂಸ್ಕೃತಿ
೫೧. ಹಾಲಿಗೆ ಹಾಲಾಹಲ

## ಹಣತೆ ಹಚ್ಚಿ ಹುಡುಕುತಿರುವೆ

ಹುಡುಕುತಿರುವೆ ಹಣತೆ ಹಚ್ಚಿ
ಈ ದೇಶದೆಲ್ಲೆಲ್ಲಿಯಾದರೂ
ಸಾಚಾ ಜನರಿಹರೆ ಎಂದು.

ಅಲ್ಲೊಬ್ಬರಿಲ್ಲೊಬ್ಬರು ಸಂದಿ–ಗೊಂದಿಗಳಲಿ
ಅವಿತು ಭಯದಿ
ಗಟ್ಟಿಯಾಗಿ ಉಸಿರಾಡಲೂ ಹೆದರಿ ಹಿಂದೆ ಕುಳಿತಿಹರು

ಎಲ್ಲೆಲ್ಲಿಯೂ ಮೋಸಗಾರರು,
ದ್ವೇಷ ಮಾಡುವವರು, ಕೊಲೆ–ಸುಲಿಗೆ ಮಾಡಿ
ಕೋಟಿ–ಕೋಟಿ ಗಳಿಸುವವರೆ ತುಂಬಿಹರು

ಗುಂಪುಗಾರಿಕೆಯ ತಂಪಿನಲಿ ಸೊಂಪಾಗಿ ಇರುವವರು,
ಒಂದಾದ ಮೇಲೊಂದು ಗದ್ದುಗೆಯನೇರುತ್ತಾ
ಏರಿದ ನಂತರ ತಮ್ಮ ತುತ್ತೂರಿ ಊದಿಕೊಳ್ಳುತ್ತಾ
ಮೆರೆವವರೆ ಹೆಚ್ಚಾಗಿ ಕಾಣುತಿಹರು

ಒಂದು ಮೆಟ್ಟಿಲ ಹೇಗಾದರೂ ಏರಿದರೆ ಸಾಕು;
ಪರಾಕು ಹೇಳುವವರು, ಪರಾಕು ಹೇಳುತ್ತಾ
ಒಂದೊಂದೆ ಮೆಟ್ಟಿಲ ಏರಿಸುತ್ತಾ ಹೋಗುವರು

ಏರಿದ ಮೇಲೆ ಮುಗಿಯಿತು!
ಛತ್ರ–ಚಾಮರಗಳು, ವಂದಿ–ಮಾಗಧರು
ಹಾರ–ತುರಾಯಿಗಳು, ಸ್ಥಾನಮಾನಗಳು
ಬೇಡೆಂದರೂ ಸಾಲು–ಸಾಲಾಗಿ ಬೆನ್ನುಹತ್ತುವುವು!

ಪ್ರಾರಂಭದಲಿ ಅವರಿವರ ಕಾಲು ಹಿಡಿಯಬೇಕು;
ದೂಡಿ ಝಾಡಿಸಿದರೂ ಬಾಲ ಅಲ್ಲಾಡಿಸುತ್ತಾ
ಹಿಂದೆ, ಹಿಂದೆ ಅಲೆವುದ ಕಲಿತರೆ ಸಾಕು

ದೊಡ್ಡ ಸ್ಥಾನದಲಿರುವ ದಡ್ಡರು
ಕಾಲಲ್ಲಿ ತೋರಿಸಿದುದ ತಲೆಯಲ್ಲಿ ಹೊತ್ತು ಮಾಡಬೇಕು;
ಮಾನ ಬಿಟ್ಟು, ಹೇಳಿದ್ದಂತೆ ಕೇಳಿದರೆ ಸಾಕು;
ಆಗ ನೀನು ಏರುವ ಸ್ಥಾನ ನೋಡಬೇಕು!

ಈ ಸುಲಭ ಮಾರ್ಗ ತುಳಿವವರೆ ಹೆಚ್ಚಾಗಿ,
ಸಾಚಾ ಜನಕೆ ಓಡಾಡಲು ದಾರಿಯೇ ಇಲ್ಲವಾಗಿ
ಅವರೆಲ್ಲಾ ಮೂಲೆಗುಂಪಾಗಿ, ದೀಪ ಹಚ್ಚಿ ಹುಡುಕಿದರೂ
ಅವರು ಕಾಣದಾಗಿಹರು

# ದೇವರಿಲ್ಲಿಹನು ನೋಡು

ಎಲ್ಲೆಲ್ಲೂ ಇರುವ ದೇವರ
ಎಲ್ಲೆಲ್ಲೋ ಹುಡುಕುವಿ ಏಕೆ? ಅಲ್ಲಿ ನೋಡಿದರೂ ಅವನೆ
ಇಲ್ಲಿ ನೋಡಿದರೂ ಅವನೆ ಇಹನಲ್ಲ
ನಿನ್ನ ಹೃದಯ ತೆರೆದು ನೋಡಿದರೆ ಕಾಣುವನಲ್ಲ!

ತಾಯಿಯ ಮಮತೆಯಲಿ ಅಡಗಿಹನು
ತಂದೆಯ ಸ್ನೇಹದಲಿ ಅವಿತಿಹನು
ಹೃದಯವಂತರ ಪ್ರೀತಿಯಲಿ ತುಂಬಿಹನು
ಕಷ್ಟದಲಿ ಬೆನ್ನ ಹಿಂದೆ ನಿಲ್ಲುವ ಸಜ್ಜನರಲಿ ಕಾಣುವನು
ಒಳಗಣ್ಣ ತೆರೆದು ನೋಡಬಾರದೆ ನೀನು?

ಹರಿವ ನೀರಿನಲಿ, ಉರಿವ ಬೆಂಕಿಯಲಿ
ಸುರಿವ ಮಳೆಯಲಿ ಅಡಗಿ ಕುಳಿತಿಹನು
ಮಿನುಗು ತಾರೆಯಲಿ, ಭೋರ್ಗರೆವ ಅಂಬುಧಿಯಲಿ
ಮಗುವ ನಗುವಲಿ, ಅರಳಿದ ಹೂವಲಿ,
ಹೊರಗಣ್ಣ ಮುಚ್ಚಿ, ಒಳಗಣ್ಣ ತೆರೆದು ಕಾಣುವನು

ನಿನಗೆ ನೋಡಲು ಬಾರದಿರೆ,
ಸುಮ್ಮ-ಸುಮ್ಮನೆ ದೇವರಿಲ್ಲೆಂದು ದೂರಬೇಡ,
ಮನದಾಳದಿ ಹುದುಗಿರುವ ಸಹೃದಯತೆಯ
ಎಚ್ಚರಿಸಿ, ಮನವ ಹದಗೊಳಿಸಿದೊಡೆ
ಕಾಣುವನು, ಆ ದೇವ ನಿನಗೆ.

■

## ಚಾಟಿ ಏಟು

ನಿಲ್ಲಿ, ನಿಲ್ಲಿ, ಸ್ವಲ್ಪ! ಹಣ ಮಾತಾಡುತ್ತಿದೆ ಇಲ್ಲಿ
ಹೀಗಿರಲು ಗುಣಕೆ ಸ್ಥಾನವಿರಲು ಸಾಧ್ಯವೆಲ್ಲಿ?
ಮುತ್ತಿನಂತ ಮಾತಿಗೆ ಬೆಲೆ ಸಿಗದಿಲ್ಲಿ

ಗುಣವಿಲ್ಲದಿದ್ದರೂ ಹಣಕ್ಕೆ ಸಿಕ್ಕುವ ಮಾನ,
ಹಣವಿಲ್ಲದ ಗುಣಕ್ಕೆ ಸಿಕ್ಕದು ಸಮ್ಮಾನ
ಗುಣವಿಲ್ಲದಿರೆ ಹಣಕೆ ಕಣ್ಣು ಕಾಣುವುದಿಲ್ಲ;
ಕಿವಿ ಕೇಳುವುದಿಲ್ಲ; ಹೃದಯವಂತೂ ಇರುವುದೇ ಇಲ್ಲ.
ಹಾಗಾಗಿ ವಿವೇಕಕ್ಕೆ ಎಡೆಯೇ ಇರುವುದಿಲ್ಲ!

ವಿವೇಕವಿಲ್ಲದಾ ಕಾಲುಗಳು ಹೋಗುವಾ ದಾರಿ ಹೊಲಸು;
ಕೈಗಳು ಮಾಡುವ ಕೆಲಸ, ತಂದಿರಿಸುವುದೆಲ್ಲರಿಗೆ ಮುನಿಸು,
ಹತೋಟಿ ಇಲ್ಲದಾ ಬಾಯಿ; ಬಕಾಸುರನ ಹೊಟ್ಟೆ;
ಅದಕ್ಕೆ ಬೇಕು ಇತಿಮಿತಿ ಇಲ್ಲದಾ ಉಣಿಸು–ತಿನಿಸು.
ಇದೆಲ್ಲಾ ಸೇರಿ, ಹಿಡಿತವಿಲ್ಲವಾಗಿ, ಮಾನವೀಯತೆ ಸೊನ್ನೆಯಾಗಿಹ ಮನಸು.

ಮಾನವೀಯತೆ ಇಲ್ಲದಾ ಹಣಕೆ, ಲಂಗು–ಲಗಾಮಿಲ್ಲದಿರೆ,
ಅದು ಆಗುವುದು ಕಡಿವಾಣವಿಲ್ಲದಾ ಕುದುರೆ,
ಅಂಕೆದಪ್ಪಿದ ಕುದುರೆ ಅಗುಳು ದಾಟಿದಂತೆ
ಮೇರೆದಪ್ಪಿ ಮೆರೆಯುವುದು.
ತನ್ನ ಸವಾರನನ್ನೇ ಕೆಳಗುರುಳಿಸಿ ತೊನೆದಾಡುವುದು,

ಅನ್ನ ಹಾಕಿದ ದಣಿಯನ್ನು ಹೊಸಕಿ ಹಾಕಬಲ್ಲದು ಕಾಲಕೆಳಗೆ
ಸವಾರನದಕೆ ಕಡಿವಾಣ ಹಾಕಿ,
ಚಾಟಿ ಏಟು ಕೊಟ್ಟಾಗ, ಹಿಡಿತಕ್ಕೆ ಸಿಕ್ಕೀತು;
ಜವಾಬ್ದಾರಿ ಅರಿತು ನಡೆದೀತು;
ಆಗ ಹಣವು ಹೆಣವಾಗಿ, ಗುಣವು ಗಣನೆಗೆ ಬಂದೀತು!

■

## ಸಲ್ಲ–ಅವಸರ–ಸಲ್ಲ

ಎಷ್ಟು ಒಳ್ಳೆಯ ಫಲ ಬಿಡುವ ಗಿಡವ ನೆಟ್ಟಿಹರಲ್ಲ!
ಆದರೇನು ನೆಲ ಫಲವತ್ತಾಗಿಲ್ಲವಲ್ಲ
ಇಲ್ಲಿ ಬರಿ ಚರಲು ಕಲ್ಲು, ನೀರೂ ನಿಲ್ಲುವುದಿಲ್ಲ
ಇಲ್ಲಿ ಗಿಡ ಹುಲುಸಾಗಿ ಬೆಳೆದೀತೆ? ಸತ್ಫಲವ ಬಿಟ್ಟೀತೇ?
ಇದೆಲ್ಲಾ ಕನಸಿನ ಮಾತು.

ಸಸಿ ಬೆಳೆದು ಗಿಡವಾದರೂ ಟಿಸಿಲೊಡೆದಿಲ್ಲ;
ಮೊಗ್ಗು ಬಿಟ್ಟಿಲ್ಲ. ಹಾಗಿರುವಾಗ
ಫಲವನೆಂತು ಕಾಣಲು ಸಾಧ್ಯ?
ಗಿಡವನಗೆದು ತೆಗೆದು ಹಚ್ಚ ಬೇಕಿನ್ನೊಂದೆಡೆಯಲ್ಲಿ;
ಭೂಮಿ ಫಲವತ್ತಾಗಿರುವಲ್ಲಿ; ಗಿಡಕೆ ಬೇಕಾದ
ಅಂಶಗಳೆಲ್ಲಾ ಸಿಗುವಲ್ಲಿ; ನೀರೆರೆದರೆ ನಿಲ್ಲುವಲ್ಲಿ.

ಏಯ್; ಎಚ್ಚರೆಚ್ಚರ: ಗಿಡ ಕಿತ್ತು ಬೇರೆಡೆ ಹಚ್ಚುವ ಉತ್ಸಾಹದಲಿ
ಹಡಿಬಿಡಿಬೇಡ, ಅವಸರ ಸಲ್ಲ.
ಬಹುದಿನಗಳಗಿಡ ಆಳವಾಗಿ ಬೇರು ಬಿಟ್ಟಿಹದು
ದೂರ ದೂರ, ಬೇರುಗಳು ವ್ಯಾಪಿಸಿ,
ನೆಲದಲ್ಲೆಲ್ಲಾ ಪಸರಿಸಿ ಗಟ್ಟಿಯಾಗಿ ಕಚ್ಚಿಹವು ನೆಲವ.

ನೀ ರಭಸದಲಿ ಗಿಡವ ಎಳೆದೆಯಾದರೆ
ಬೇರು ಭೂಮಿಯಲೀ ಉಳಿದು
ಗಿಡವಷ್ಟೇ ಸಿಕ್ಕುವುದು ಕೈಗೆ,
ಬೇರು ಹರಿದ ಗಿಡ ಬದುಕುವುದು ಹೇಗೆ?
ಅದು ಕ್ಷಣದಲೇ ಸತ್ತು ಗಿಡದ ಹೆಸರಿಲ್ಲವಾಗುವುದು.
ಗಿಡ ಚೆನ್ನಾಗಿ ಬೆಳೆಸುವಾಸೆ, ನಿನಗಿದ್ದುದೇ ಆದರೆ,
ಬಹಳ ಎಚ್ಚರದಿ, ಬಹು ನಿಧಾನವಾಗಿ
ಬೇರುಗಳ ಒಂದೊಂದನೆ ನೆಲದಿಂದ ಬಿಡಿಸು

ಯಾವ ಬೇರೂ ಹರಿಯದಂತೆ ವಹಿಸು ಕಟ್ಟೆಚ್ಚರ;
ತಾಯಿ ಬೇರಿಗಂತೂ ಆಗದಿರಲಿ ಇನಿತು ನೋವು
ಇಡೀ ಗಿಡವ ನೋಯಿಸದೆ, ಎಳೆಕೂಸ
ತಾಯೊಡಲಿಂದ ಸಿಸೆರಿಯನ್ ಮಾಡಿ ತೆಗೆವಂತೆ
ಸೂಕ್ಷ್ಮವಾಗಿ ನೆಲದಿಂದ ಬೇರ್ಪಡಿಸು.

ಮೂಲದಿಂದ ಕಿತ್ತು ತಂದ ಗಿಡವ ಜತನವಾಗಿ
ಹಸನಾಗಿಸಿಹ ಹೊಸ ನೆಲದಲ್ಲಿ,
ಜತನದಿಂದ ಬೇರುಗಳನೆಲ್ಲ ಭೂತಾಯ
ಒಡಲೊಳಗಿಳಿಸಿ, ಗಿಡವಷ್ಟೆ ಮೇಲ್ಕಾಣುವಂತಿರಿಸು,
ನಿನ್ನೊಲವಿನ ರಕ್ಷಣೆ ಬೇಕದಕೆ
ಸಸಿ ಚೆನ್ನಾಗಿ ಬೆಳೆಯಲು
ಕಾಲ-ಕಾಲಕೆ ನೀರು ಗೊಬ್ಬರ ನೀಡು
ಕಳೆ ಬೆಳೆಯದಂತೆ ನೋಡು
ಊರ ದನ ಮೇದು ನಾಶವಾಗದಂತೆ ಕಾಯಿ
ಆಗ ಗಿಡ ತಳ ಊರಿ ಹೊರಗೆ ಚಿಗುರಿ ನಳ ನಳಿಸುವುದು.

ಹೀಗಾಗಲು ಬೇಕು ಸಾಕಷ್ಟು ಕಾಲ
ಇದಕೂ ಗಿಡ ಕಿತ್ತಷ್ಟೇ ಎಚ್ಚರ, ತಾಳ್ಮೆ ಬೇಕು
ಮೊದಲು ಬಿಟ್ಟ ಬೇರು ಬಿಡಿಸಿ ಬೇರೊಂದೆಡೆ
ಬೇರಿಳಿಸಿ, ಬೆಳೆಸಿ ಸತ್ಫಲ ಪಡೆಯುವುದು
ನೀನಂದುಕೊಂಡಂತೆ ಸುಲಭದ ಮಾತಲ್ಲ
ಬೇರು ಬಿಟ್ಟುದು ಸಡಿಲವಾಗಲು ಸಮಯ ಬೇಕು
ಹೊರಗೆ ಬಂದ ಬೇರು ಮತ್ತೆ ಭೂಮಿಯಲಿ ಊರಿ
ಗಟ್ಟಿಯಾಗಲು ಅಷ್ಟೇ ಕಾಲ ಪುನಃ ಬೇಕು
ಸಲ್ಲ-ಅವಸರಸಲ್ಲ
ಅವಸರಿಸಿದರೆ, ಪಟ್ಟ ಶ್ರಮವೆಲ್ಲಾ ವ್ಯರ್ಥವಾಗುವುದಲ್ಲ!
ಬದುಕಿನೆಲ್ಲ ಸಂಗತಿಗಳಲ್ಲಿ
ಸಲ್ಲ-ಅವಸರ-ಸಲ್ಲ

■

## ಸವೆದ ಯಂತ್ರ

ಅಬ್ಬಬ್ಬಾ!
ಸವೆದ ಯಂತ್ರ ರಿಪೇರಿ ಮಾಡಿ, ಮಾಡಿ ಸಾಕಾಯ್ತು.
ಕಾಲಿಗೆ ಕಾವು ಕೊಟ್ಟರೂ ಮೊದಲಿನಂತೆ ನಡೆಯದು
ಚಷ್ಮವನಿತ್ತರೂ ಕಣ್ಣು ಸರಿಯಾಗಿ ನೋಡದು
ಕಿವಿ ಸರಿಯಾಗಿ ಕೇಳಲೆಂದು, ಕೇಳುವ ಯಂತ್ರ ಹಾಕಿದರೂ
ತನಗದು ಬೇಡೆಂದು ಕಿರಿ-ಕಿರಿ ಮಾಡುವುದು.

ರುಚಿ-ರುಚಿಯಾದ ಚಕ್ಕುಲಿ-ಉಂಡೆ ಸವಿಯಲೆಂದು
ಕಟಕ ರೊಟ್ಟಿ ಕಡಿಯಲೆಂದು. ಸೆಟ್ ಹಾಕಿಸಿದರದು
ಹೊಂದಿಕೊಳ್ಳದು ಒಸಡಿಗೆ; ತಿನ್ನದಿದ್ದರೂ ಅಡ್ಡಿಯಿಲ್ಲ
ಈ ನೋವ ಸಹಿಸಲಸದಳ ಎನ್ನಿಸುವುದಲ್ಲ!
ಹಲ್ಲಿಲ್ಲದ ಬಾಯಿಯ ನಾಲಿಗೆಗೆ ಏನೂ ರುಚಿಸದಲ್ಲ!

ರಕ್ತದೊತ್ತಡ ಹಿಡಿತದಲ್ಲಿ ಇಡುವುದು, ತುಂಟ ಹುಡುಗನ
ಹತೋಟಿಗೆ ತರುವುದಕ್ಕಿಂತ ಕಷ್ಟ
ಒಂದು ದಿನ ಏರಿತೆಂದು ಮಾತ್ರೆ ನುಂಗಿದರೆ,
ಮತ್ತೊಂದು ದಿನ ಇಳಿದೇ ಬಿಡುವುದು ಕೆಳಕ್ಕೆ;
ತಳ್ಳಿ ಬಿಡುವುದೇನೋ ಹಳ್ಳಕ್ಕೆ ಎನ್ನಿಸಿ
ಗಾಬರಿಯಾಗುವುದು ಮನಕ್ಕೆ.

ತುಪ್ಪ ತಿನ್ನದೆ ತೆಪ್ಪಗೆಷ್ಟು ದಿನವಿರಬೇಕು?
ಸಿಹಿ ತಿಂದರೆ ಮಧುಮೇಹ ಹಿಡಿತಕ್ಕೆ ಸಿಕ್ಕದಂತೆ!

ಕರಿದ ತಿಂಡಿಯ ಬಿಟ್ಟು ಎಣ್ಣೆ ಇರುವುದನೇ ಮರೆಯಬೇಕಂತೆ
ಆಸೆಯೆಂದು ಕಡ್ಲೆ ಹಿಟ್ಟಿನ ಜುಣುಕ ತಿಂದರೆ
ಹೊಟ್ಟೆ ತುಂಬಾ ಗ್ಯಾಸು ತುಂಬಿ ಹೃದಯದ ಮೇಲೆ ಒತ್ತಡ ತರುವುದಂತೆ
ಒಂದು ತಿಂದರೆ ಹೆಚ್ಚಂತೆ; ಮತ್ತೊಂದು ತಿಂದರೆ ಕಡಿಮೆಯಂತೆ
ಹಾಗಾದರೇನು ತಿನ್ನಬೇಕೇ ಸಗಣಿಯನ್ನು!

ಇಷ್ಟೆಲ್ಲಾ ಸವೆದ ಯಂತ್ರಕೆ ಮಾಡಿದರೂ
ಯಂತ್ರ, ಹೊಸದರಂತೆ ಕೆಲಸ ಮಾಡಿತೇ?
ಅದು ಅಸಾಧ್ಯ, ನಾಲ್ಕು ದಿನ ಜೀವನ ಮುಂದೂಡಲಷ್ಟೇ ಸಾಧ್ಯ
ಎನ್ನುವರಲ್ಲಾ! ಎಷ್ಟೋ ಸಾರಿ, ಅದಕ್ಯಾಕಿಷ್ಟು ಉಸಾಬರಿ
ಎಂದು ಬೇಸರಗೊಂಡು, ಅಪಾಯದ ಗಂಟೆ
ಬಾರಿಸುವಂತೆ ಮಾಡುವುದೋ ಉಂಟು.

## ಪಿಸುಮಾತ ಉಸುರಿ, ಖುಷಿಯಾಗಿ ಹೋಗುವೆನು

ಬಾರಮ್ಮ, ಬಾ ಇಲ್ಲಿ; ನಿನ್ನ ಕಿವಿಯಲ್ಲಿ,
ಪಿಸುದನಿಯಲ್ಲಿ ನನ್ನೊಂದು ಗುಟ್ಟ ಹೇಳುವೆನು.
ಆ ಗುಟ್ಟು ನನ್ನ ಹೃದಯ ಹಿಂಡುತಿಹುದು
ತಲೆ ತಿಂದು, ತಲೆ ಮೊಸರಾಗಿಹುದು.....
ಮನಸಿನಲ್ಲಾಗುವ ಚಡಪಡಿಕೆ, ಹೊಟ್ಟೆಯಲ್ಲಾಗುವ
ತಳಮಳ, ತಾಳಲಾರೆನು ನಾನು.
ನಿನ್ನ ಕಿವಿಯಲಿ ಪಿಸುಮಾತು ಉಸುರಿ
ಹಗುರಮಾಡಿಕೊಳ್ಳುವೆನೆನ್ನ ಮನವ;
ಇಳುಹಿಕೊಳ್ಳುವೆನು ತಲೆಭಾರ.

ಚಡಪಡಿಕೆಯಿಂದ ಬಿಡುಗಡೆ ಪಡೆದು, ಕರುಳು ಹಿಂಡುವ ನೋವಿನಿಂದ
ಪಾರಾಗಲೆಳೆಸಿಹೆನು
'ನೀ ನನಗೆ ಗೊತ್ತಿಲ್ಲ: ನಿನ್ನ ನೋವ ತಿಳಿದರೆ
ನನಗೇನು ಲಾಭ? ನನಗೆ ಬೇಕಿಲ್ಲ ನಿನ್ನ ಗೋಳು'
ಎನ್ನದಿರು ಎಲೆ ತಂಗಿ.
ನಿನ್ನ ಸಾಂತ್ವನ ನನಗೆ ಬೇಕಿಲ್ಲ.
ಒಮ್ಮೆ ಉಸುರಿ, ಒಳಗಿನದನೆಲ್ಲ ಹೊರಗೆ ಸುರಿದು
ಭಾರವನಿಳುಹಿಸಿಕೊಳಬೇಕಾಗಿಹುದು.
ಪರಿಚಿತರಿಗೆ ಹೇಳದರದು, ಕಡ್ಡಿ ಹೋಗಿ ಗುಡ್ಡವಾಗಿ
ಬೀಜವೊಂದು ಬಳ್ಳಿಯಾಗಿ
ಎಲ್ಲೆಡೆ ಹಬ್ಬಿ, ಶಾದರೆಯಾಗುವುದು.

ಆಗ ಹುಳು-ಹುಪ್ಪಟೆ, ಹಾವು-ಚೇಳು
ಸೇರಿಕೊಂಡು, ನನ್ನ ಜೀವಕೇ ಕುತ್ತ ತರಬಹುದು.
ಹೀಗೆಂದು, ಅಪರಿಚಿತಳಾದ ನಿನಗೆ ಹೇಳಿ
ಹೊರೆಯ ಇಳುಹಿ, ಹಗುರ ಮಾಡಿಕೊಳ್ಳಲೆಳೆಸಿಹೆನು,

ಕೇಳುವುದರಿಂದ
ನಿನಗಾಗದು ಯಾವುದೇ ಕೆಡಕು.
ಈ ಕಿವಿಯಲಿ ಕೇಳಿ, ಆ ಕಿವಿಯಲಿ ಬಿಡು, ಸಾಕು.
ನನಗೆ ಮಾತ್ರ ನೀ ಕೇಳುವುದು ಬೇಕು.
ನಿನ್ನ ಕಿವಿಯಲಿ ಉಸಿರಿದರೆ ಪಿಸುಮಾತ,
ತಲೆಭಾರ ಇಲ್ಲವಾಗಿ, ತಲೆ ಕೆಟ್ಟೀತೆಂಬ ಭಯ ಹೋಗಿ,
ಹೃದಯದೊತ್ತಡ ಕಡಿಮೆಯಾಗಿ,
ಹೃದಯಾಘಾತದ ಭಯ ದೂರವಾಗುವುದು.

ನೀ ಬರಿ ಕೇಳುವುದರಿಂದ, ನಿನಗಾಗದೆ ಕೆಡಕು
ನನಗಾಗುವುದಿದ್ದರೆ ಒಳಿತು,
ಬೇಡವೆನ್ನುವಿ ಏಕೆ? ಬಾ ಹತ್ತಿರಕೆ
ಪಿಸುಮಾತ ಉಸುರಿ, ಖುಷಿಯಾಗಿ ಹೋಗುವೆನು.
.............................................................!

## ಪ್ರಸ್ತುತ

ಇಂದಿಗೆ ಪ್ರಸ್ತುತವಾಗಿರುವ ಬಸವಣ್ಣ
ಅಂದೇ, ಎಂಟು ಶತಮಾನಗಳ ಹಿಂದೇ
ಜನರ ಒಳಿತು ಕೆಡಕುಗಳ ಬಗ್ಗೆ ಎಣಿಕೆ ಹಾಕಿದ್ದ.
ಎಲ್ಲರೂ ಹಿಂದಿದ್ದಾಗ, ತಾ ಮುಂದಿದ್ದ!

ಜನರನೆಲ್ಲಾ ಮುನ್ನಡೆಸಬೇಕೆಂದು ಹೊರಟಿದ್ದ
ತಾರತಮ್ಯಗಳ ಅಳಿಸಬೇಕೆಂದು ಬಯಸಿದ್ದ
ಅದಕೆ ಭೇಕಾದ ದಾರಿಯನು ಹುಡುಕಿ, ಅಲ್ಲಿಯ
ಕಲ್ಲು-ಮುಳ್ಳುಗಳ ಸವರಿ ಹಸನು ಮಾಡಲೆಳಸಿದ್ದ.

ಅವನಾಮಾರ್ಗದಲಿ ತಮ್ಮ ಗುರಿ ಇದೆಯಂದರಿತ ಜನ
ಅವನ ನೆರಳಾಗಿ ಹಿಂಬಾಲಿಸಿದಾಗ
ಅಂದೂ ಇದ್ದರೂ, ಇಂದೂ ಇರುವಂತಹ
ವಿಶ್ವಾಸಘಾತುಕರು. ಆದೂರ ದೃಷ್ಟಿಯವರು!

ಕೊಂಡಿ ಮಂಚಣ್ಣಗಳು ಹುಟ್ಟಿ, ಬೆಳೆದ ಬೆಳೆಗೆ
ಬೆಂಕಿ ಇಟ್ಟು, ಸುಟ್ಟು ಕರಕ ಮಾಡಲೆಳಸಿದರು
ಕೈಗೆ ಬಂದ ಫಸಲು ಮನೆ ಸೇರುವ ಮೊದಲೇ
ಚಲ್ಲಾಪಿಲ್ಲಿ! ಉಣಲುಳಿಯಲಿಲ್ಲ, ತಿನಸಿಗಲಿಲ್ಲ.

ಆದರೂ ಅಲ್ಲೊಂದು ಇಲ್ಲೊಂದು ಚಲ್ಲಾಡಿದ ಬೀಜ
ಫಲವತ್ತಾದ ಭೂಮಿಯ ಮೇಲೆ ಬಿದ್ದು
ಮಳೆರಾಯ ಬಂದಾಗ, ಮೊಳಕೆಯೊಡೆದು
ಚಿಗುರಾಗಿ, ಬಲಿತು, ರೆಂಬೆ-ಕೊಂಬೆಗಳೊಡೆದಿಹವು.

ಹೂ, ಹೀಚು, ಕಾಯಿ ಹಣ್ಣಾಗಿ,
ಇಪ್ಪತ್ತನೆಯ ಶತಮಾನದಿ ಕೊಡುತಿಹವು, ಅಲ್ಪಸ್ವಲ್ಪ ಫಲವ
ಅದ ತಿಂದವರಿಗುಂಟು ಫಲದ ಸವಿ
ಇಲ್ಲದವರಿಗಿಲ್ಲೇ ಇಲ್ಲ. ಅವರಿಗೆ ಕೇವಲ ಕಹಿ

■

## ಬಾಳದಾರಿ

ಜೀವನದ ದೀರ್ಘ ದಾರಿಯಲಿ
ಆಸೆ, ಆಮಿಷ, ಹುರುಪು, ಹರ್ಷ
ಏನೇನೋ ಕನಸುಗಳು!
ಕನಸು ನನಸು ಮಾಡುವಾಸೆಯಲಿ
ಎದ್ದು-ಬಿದ್ದು, ನೆಗೆದು-ಜಿಗಿದು
ಸೋತು-ಗೆದ್ದು, ನಕ್ಕು-ಅತ್ತು
ನಡೆದು-ಓಡಿ ದೂರಕ್ರಮಿಸಿ,
ಸುಸ್ತಾಗಿ, ಬಾಯಾರಿ ಬಾಯ್ಬಿಡುವಾಗ
ಗುರಿಗಂಬ ಎದುರಾಗಿ, ಏದುಸಿರು ಬಿಡುವಾಗ
ಕೇಳಿಸುವುದು ನಿರ್ಣಾಯಕನ ಸೀಟಿ.

## ದೇಹ ಬೇಕಯ್ಯಾ ದೇಹ ಬೇಕು

ನಡೆಯದಿರೆ ಎಡಹುವುದೆಂತು?
ಹುಟ್ಟದಿರೆ ಸಾವುದೆಂತು?
ಬದುಕದಿರೆ ಬವಣೆ ಪಡುವುದೆಂತು?
ಕಣ್ಣಿಲ್ಲದಿರೆ ಕಾಣುವುದೆಂತು?
ಕಿವಿಯಿಲ್ಲದಿರೆ ಕೇಳುವುದೆಂತು?
ನಾಲಿಗೆ ಇಲ್ಲದಿರೆ ನುಡಿಯುವುದೆಂತು?
ಕರಗಳಿಲ್ಲದೆ ಕಾರ್ಯವೆಸಗುವುದೆಂತು?
ಕಾಯವಿಲ್ಲದೆ ಕಾಯಕ ಮಾಡಲಾಗದಯ್ಯಾ
ದುಷ್ಟ ಕಾರ್ಯಕ್ಕೂ, ಶಿಷ್ಟ ಕಾರ್ಯಕ್ಕೂ
ಕಾಯವೇ ಸಾಧನವಯ್ಯಾ, ಅದು
ನಾವು ಹೇಗೆ ಮಾಡಿಸಿದರೆ ಹಾಗೆ ಮಾಡುವುದಯ್ಯಾ
ಶಿಷ್ಟ ಕಾರ್ಯವೆಸಗಲು ಕಾಯವ ಎಚ್ಚರದಿ ಕಾಯಯ್ಯಾ
ಭಕ್ತನಿಧಿ ಕೊಟ್ಟೂರ ಬಸವಯ್ಯ!

■

## ಹೊಟ್ಟೆಯ ಕಿಚ್ಚು

ಒಂದೇ ಒಡಲಿಂದ ಬಂದವರು, ಒಡಹುಟ್ಟಿದವರು,
ಇಲಿ–ಬೆಕ್ಕುಗಳಾಗಿಹರು,
ಹಾವು–ಮುಂಗುಸಿಗಳಾಗಿಹರು,
ಎಣ್ಣೆ–ಸೀಗೇಕಾಯಿಯಂತಿಹರು

ಇಂತಿರಲು,
ಜಗವೆಲ್ಲಾ ಒಂದು, ಜಗದ ಜನಕೆಲ್ಲಾ
ಒಬ್ಬನೇ ತಂದೆ ಎಂದು ತಿಳಿದು,
ಭ್ರಾತೃಭಾವದಿ ಬದುಕಬೇಕೆನ್ನುವಾ ಆಸೆ
ಈಡೇರುವುದು ಹೇಗೆ ಸಾಧ್ಯ?

ಹೊಟ್ಟೆ ಕಿಚ್ಚು, ಪೈಪೋಟಿ, ದ್ವೇಷ, ಅಸಹನೆಗಳು
ಕರುಳ ಕಡಿದು ಹಾಕುವುವು;
ಮಮತೆಯ ಬಂಧನವ ಹರಿದು ತುಂಡರಿಸುವುವು,
ತಾ ಹೆಚ್ಚು ಎಂಬ ಅಹಂಕಾರದಲಿ ಮುಳುಗಿ
ಪ್ರೀತಿಯ, ಉಪಕಾರವ, ಮಮತೆಯ ಮರೆತು,
ಸೊಕ್ಕಿನಲಿ ಮಿಕ್ಕಿ ಮೆರೆಯುವಂತೆ ಮಾಡುವುವು.

■

## ಸಂಶೋಧನೆ

ಅಬ್ಬಾ ಎಂತಹ ಶೋಧನೆ! ಎಂತೆಂತಹ ಸಂಶೋಧನೆ!
ನೋಡಿದರೆ, ಕೇಳಿದರೆ, ಬೆರಳು ಮೂಗಿನ ಮೇಲೆ ಹೋಗುವುದು;
ಕಣ್ಣರಳಿ ಅದ್ಭುತವ ಕಂಡಂತೆ ಬೆರಗ ಸೂಸುವುದು.

ಹೃದಯ ಚಲನೆ ನಿಲ್ಲುವಂತಾದರೆ, ಇನ್ನೊಂದ ಅಳವಡಿಸುವರು
ಮೂತ್ರಪಿಂಡ ಕೆಲಸ ಮಾಡೆನೆಂದರೆ, ಮಾಡುವಂಥದ ಜೋಡಿಸುವರು
ಕಣ್ಣು ಕಾಣಿಸದಿರೆ, ಬೇರೊಂದು ಗುಡ್ಡೆ ಕಸಿಮಾಡಿ
ಕಣ್ಣು ಕಾಣಿಸುವಂತಾಗಿಸುವರು
ಕಾಲು ಮುರಿದರೆ ಕೃತಕ ಕಾಲು:
ಕೈಮುರಿದರೂ ಅಷ್ಟೆ.
ಯಾವುದಿಲ್ಲದಿರಲು ಅದರ ಜಾಗದಿ,
ಹಲ್ಲುಗಳುದುರಲು ಕೃತಕ ಹಲ್ಲು ಜೋಡಿಸುವಂತೆ
ಮತ್ತೊಂದ ಜೋಡಿಸುವರು!

ವಾಹನಗಳ ವೇಗವಂತೂ ಹೇಳಬಾರದು!
ಬಾಣ ಬಿಟ್ಟಂತೆ, ಸುಯ್ಯೆಂದು ಹೋಗುವವು;
ಸಮುದ್ರದಾಳಕ್ಕೂ ಇಳಿದು,
ತಳಮಟ್ಟ ಜಾಲಾಡಿ ಬರುವರು;
ಚಂದ್ರಲೋಕದಿ ಮನೆಯ ಕಟ್ಟಲು ಸನ್ನಾಹ ನಡೆಸಿಹರು
ಇಲ್ಲಿ ಬಿಟ್ಟ ಕ್ಷಿಪಣಿ, ಬೇಕಾದಲ್ಲಿಗೆ ಹೋಗಿ ಭಸ್ಮ ಮಾಡುವುದೆಲ್ಲವನು
ಈ ಮಾನವ ಬರು-ಬರುತ್ತಾ ಭಸ್ಮಾಸುರನಂತಾಗುತಿಹನು!

ಈ ವಿಜ್ಞಾನ, ಈ ಸಂಶೋಧನೆ, ಈ ಪ್ರಗತಿಗೆ
ಮೌಲ್ಯಗಳ ಬುನಾದಿ ಹಾಕಿಲ್ಲವಾಗಿ
ಮಾಡುತಿಹವು ಮಾನವನ ಅಮಾನವೀಯನನ್ನಾಗಿ!

ಪ್ರಗತಿಯ ನೋಡಿ ಬೀಗುತ್ತಾ, ಅಹಂಕಾರದಲಿ ಮೆರೆಯುತ್ತಾ
ಮಾನವೀಯತೆಯ ಮರೆತು, ಮೋಹಕ್ಕೆ, ಮೋಜಿಗೆ

ಮಾರುಹೋಗಿ, ಮಾನವ ಮೆರೆದಾಡುತ್ತಿರುವಾಗ
ಸಂಸ್ಕೃತಿ–ಸಂಪ್ರದಾಯಗಳು ಅಳಿಸಿ
ಗುರು–ಹಿರಿಯರ ಮಮತೆಯನ್ನೆಲ್ಲಾ ಒರಸಿ,
ರಾಕ್ಷಸನಂತೆ ಸೊಕ್ಕಿ ನಡೆಯುತಿಹನು!

ಅಂಕೆ–ಶಂಕೆ ಇಲ್ಲದಾ ಮದಗಜದಂತೆ
ಅಡೆ–ತಡೆ ಇಲ್ಲದೆ ಭೋರ್ಗರೆಯುತ್ತಾ ಹರಿವ ನದಿಯಂತೆ
ಒಳಿತಾದುದನೆಲ್ಲಾ ಕೊಚ್ಚಿ ಹೋಗುವಂತೆ ಮಾಡುತಿಹನು!
ಎಲ್ಲೆಲ್ಲೂ ಕೊಚ್ಚೆ ಹರಡಿ, ಹೊಲಸೆಲ್ಲಾ ಪಸರಿ
ಕೊಚ್ಚೆ ತುಂಬಿದ ಕೊರಕಲುಗಳಾಗಿ
ಹೊಲಸೆಲ್ಲಾ ಒಳ–ಹೊರಗೆ ತುಂಬಿ
ಮೂಗು ಮುಚ್ಚಿಕೊಂಡು ಓಡಾಡುವಂತಾಗಿಹುದು,
ಒಳಿತಿಗಾಗಿ ಮಾಡಿದ ಸಂಶೋಧನೆ
ಮಾನವತೆಗಿಂದು ಮುಳುವಾಗಿ ನಿಂತಿಹುದು!

## ಪೂರ್ವವೇಕೆ ಭಿನ್ನ ಪಶ್ಚಿಮಕೆ?

ಜೋಪಡಿಯಲಿ ಜನಿಸಿದ ರಂಗ,
ಬೆಳೆದ ಬೀದಿಯ ಗಟಾರದ ಸಂಗ!
ಸ್ನಾನಕ್ಕೆ ಸೋಪಿಲ್ಲ, ಕುಡಿಯಲು ಸ್ವಚ್ಛ ನೀರಿಲ್ಲ
ದೇಹವೆಲ್ಲಾ ಗಬ್ಬುವಾಸನೆ
ಬಟ್ಟೆಯಂತೂ ಹರಿದ, ಕೊಳಕು ಚಿಂದಿ
ಹೊಟ್ಟೆಗೆ-ಬಟ್ಟೆಗೆ ಪರದಾಡುವ ಸ್ಥಿತಿಯಲ್ಲಿ,
ಹಸನು-ಹೊಲಸುಗಳ ಅಂತರವೇ ಅವನಿಗೆ ತಿಳಿಯದಲ್ಲ!

ಬೀದಿಯಲಿ ಬಿದ್ದ ರೊಟ್ಟಿ ಚೂರ
ಹಸಿವ ಹಿಂಗಿಸಿಕೊಳ್ಳಲು, ಬಾಯಿಗಿಟ್ಟುಕೊಳ್ಳುವ ಶೂರ,
ಕಸ ಚೆಲ್ಲಿದ ಗಲ್ಲಿಯ ಮೂಲೆಯಲ್ಲಿ
ಹಂಸತೂಲಿಕಾತಲ್ಪದಲ್ಲಿಯಂತೆ ನಿಶ್ಚಿಂತನಾಗಿ ಮಲಗಬಲ್ಲ!

ಒಮ್ಮೆ, ಇವನೊಬ್ಬ ಆದರ್ಶ ಬ್ರಹ್ಮಚಾರಿಯ
ಕಣ್ಣಿಗೆ ಬಿದ್ದದ್ದೆ ಆಯ್ತವಗೆ ಹಬ್ಬ,
ರಂಗನ ಕಂಡ ಬ್ರಹ್ಮಚಾರಿ, ಕರುಣೆಯಲಿ
ಕೈ ಹಿಡಿದು ಕರೆದೊಯ್ದ ತನ್ನ ಕುಟೀರಕ್ಕೆ
ಹೊಟ್ಟೆ-ಬಟ್ಟೆಗೆ ಇತ್ತು
ವಿದ್ಯೆ-ಬುದ್ಧಿಗೂ ಕೊಟ್ಟ ಸವಲತ್ತು;
ಇದಕಂಡು ಖುಷಿಗೊಂಡ ರಂಗ
ಬಲು ಶ್ರದ್ಧೆಯಿಂದ ಕಲಿತು ಮುಂದೆ ಬಂದ.

ವೈದ್ಯನಾಗಿ ಅರಿತ, ಹಸನು ಹೊಲಸಿನ ಪರಿಣಾಮ
ದುಡಿದು, ಗಳಿಸಿ, ಬಂಗಲೆಯ ಕಟ್ಟಿ
ಗೃಹಸ್ಥನಾಗಿ ಕುಟುಂಬ ಜೀವನಕೆ ಕಾಲಿಟ್ಟ!

ಈಗವನ ಮಕ್ಕಳಿಗೆ ಹೊಲಸ ಕಂಡರೆ ಆಗದು,
ಕೊಳಕು ಊಟ ಉಣ್ಣರು: ಹೊಲಸು ಬಟ್ಟೆ ತೊಡರು

ಅವರಿಗೆ ಕುಡಿಯಲು ಬೇಕು 'ಬಿಸ್ಲೇರಿ ವಾಟರ್'
ಆದರಿಂದಿಗೂ ಹಳ್ಳಿಯಲ್ಲಿರುವ ಅವರ ಸಂಬಂಧಿಗಳು
ಇರುವವರು ರಂಗ ಮೊದಲಿದ್ದ ಹಂಗೆ
ಹೀಗೇಕೆ ರಂಗ? ಎಂದವನ ಕೇಳಿದರೆ
ಪಾಶ್ಚಾತ್ಯರ ಹಾಗೂ ಭಾರತೀಯರ
ಅಂತರಕಿರುವ ಕಾರಣವೇ, ನನಗೂ
ನನ್ನ ಬಂಧುಗಳಿಗೂ ಇರುವ
ವ್ಯತ್ಯಾಸಕೆ ಕಾರಣ, ಎನಬೇಕೆ ಅವನು?

ಭಾರತವ ತಿಪ್ಪೆಗುಂಡಿ ಎಂದು ಹಳಿಯದಿರಿ
ಪಾಶ್ಚಾತ್ಯರಿಗೆ ಹೋಲಿಸಿ ಅಗ್ಗ ಮಾಡದಿರಿ
ಕಲಿತವರು, ಉಳ್ಳವರು ಆದರ್ಶ ಬ್ರಹ್ಮಚಾರಿಯಂತಾಗಿ
ಉತ್ತಮ ಭಾರತದ ನಿರ್ಮಾಣಕೆ
ತಮ್ಮ ಕೊಡುಗೆಯನಿತ್ತರೆ
ತಿಪ್ಪೆಯಂತಿರುವ ಭಾರತ ಉಪ್ಪರಿಗೆಗಳ ನೆಲೆಯಾದೀತು!

■

## ಜನ

ಅರರೆ, ಎಂತೆಂತಹ ಜನರಿರುವರಲ್ಲಾ ಬಂಧುಗಳಲ್ಲಿ ಸ್ನೇಹಿತರಲ್ಲಿ,
ಸಹೋದ್ಯೋಗಿಗಳಲ್ಲಿ, ಎಲ್ಲರಲಿ.
ಹಣಕ್ಕಾಗಿ ಮೋಸ–ದ್ವೇಷ
ಅಧಿಕಾರಕ್ಕಾಗಿ ವೈಮನಸ್ಸು,
ಅಷ್ಟೇ ಅಲ್ಲ ಸುಮ್ಮ–ಸುಮ್ಮನೆ
ಕಾರಣವಿಲ್ಲದೆಯೂ ಮೈಮೇಲೆ
ಕೆಸರ ಎಸೆಯುವರಲ್ಲ!
ಇವರು ಹೊಲಸು, ಕೊಳಕು,
ಎಂದು ಅಣಕವಾಡುವರಲ್ಲ!
ತಮ್ಮ ಕೊಳಕಿನ ಕಡೆಗೆ ದೃಷ್ಟಿ ಹರಿಯದಿರಲೆಂದು
ಸಜ್ಜನರ ಮೇಲೆ ರಾಡಿ ಎರಚಿ
ಅವರೇ ಕೊಳಕರೆಂಬಂತೆ ಕಾಡುವರಲ್ಲ!
ಇಂತಹ ದುಷ್ಟ ಜನರ ನಾಲಿಗೆ ಹರಿತ,
ಬುದ್ಧಿ ಚುರುಕು, ನಟನೆ
ನಿಜದ ತಲೆಯ ಮೇಲೆ ಹೊಡೆದಂತೆ
ಇಂತಹ ಜನ, ಇತರರ ನೋಯಿಸಿ
ಆನಂದಪಡುವರಲ್ಲ! ಈ ಪರಿಯ
ಜನರಿದ್ದ ಕಡೆ ನೆಮ್ಮದಿಗೆ ನೆಲೆಯಿಲ್ಲ
ಸಜ್ಜನರಿಗೆ ಬೆಲೆಯಿಲ್ಲ ದುಷ್ಟರ
ಚಾಣಾಕ್ಷತನದ ದೊಂಬರಾಟದಲ್ಲಿ
ಗೊಂದಲ ಉಂಟಾಗಿ, ಒಳ್ಳೆಯವರು
ಕೆಟ್ಟವರಂತೆ, ಕೆಟ್ಟವರು ಒಳ್ಳೆಯವರಂತೆ
ಕಾಣಿಸಿ, ಕೆಟ್ಟವರು ಅಟ್ಟಹಾಸದಿ
ಮೆರೆದರೆ, ಒಳ್ಳೆಯವರು ಆತ್ಮ
ವಿಶ್ವಾಸವನೇ ಕಳೆದುಕೊಂಡು
ಮೂಲೆಗುಂಪಾಗುವ ಸ್ಥಿತಿ ಬಂದಿದೆಯಲ್ಲಾ

■

## ನಿನ್ನ ಒಂಟಿ ಮಾಡುತಿಹವಲ್ಲೆ!

ಒಳಗಿನದು ಹೊರ ಬರಲಾರದೆ,
ಹೊರಗಿನದು, ಒಳಹೋಗಲಾರದೆ
ಗಂಟಲೊಣಗುತಿದೆ ಬಾಯಾರಿ!

ನುಂಗಲಾಗದ, ಉಗುಳಲೂ ಬಾರದ
ಬಿಸಿತುಪ್ಪ, ಬಾಯನೆಲ್ಲಾ ಬೇಯಿಸಿ
ಹಾಯ್‌ಗುಡುವಂತೆ ಮಾಡಿದರೂ
ತುಪ್ಪ ಚೆಲ್ಲುವಂತಿಲ್ಲವಾಗಿ,
ಕರುಳೆಲ್ಲಾ ಕುದಿದು,
ಹೊಟ್ಟೆಯೆಲ್ಲಾ ಬರಿದಾಗಿ
ಮಮತೆಯಲ್ಲಾ ಕಮರಿದಂತಾಗಿದೆ.

ಇಂತೆಲ್ಲಾ ಬೇಗೆಯ ಹಚ್ಚಿ
ಅದರ ನಡುವೆ ನಿಂತು
ನೀನೆಂತು ನಳ-ನಳಸಿ, ಹೂವ ಅರಳಿಸಿ
ಕೊಡುವೆ, ಓ ಗಿಡವೆ?
ಧಗೆ ಬಿಟ್ಟು ತಂಪು ನೀರಲಿ ನಿಂತು
ಕಂಪನೀವಕುಸುಮ, ಕೊಡಲು
ಆಗದೆ ನಿನಗೆ?

ನಗುವ ನೀರೆಯ ಅಳಿಸಿ,
ಸಂತಸ ಪಡುವಿ ಏಕೆ?
ಅಳುವ ಹೋಗಿಸಿ, ನಗುವ ಬರಿಸಿ
ಆನಂದಿಸುವ ಹಿರಿಯೊಡಲು
ನಿನ್ನದಾಗದಿರಲು, ನಾಶವಾದುದು
ಯಾವುದು ನಿನ್ನ ಆಸೆ?

ಸಸಿಯಾದಾಗ, ನಿನ್ನ ಸುತ್ತ ಬೆಳೆದ
ಕಳೆಗಳು, ಮುಳ್ಳುಗಳು ಇಂದು,
ಹೆಮ್ಮರವಾಗಿ, ನಿನ್ನಲ್ಲಿ
ಪರಿಮಳ ಬೀರುವ ಹೂವು
ಸವಿಯನೀವ ಫಲಗಳು
ಬಿಡಲು ಅಡ್ಡಿಯಾಗಿ ನಿಂತಿಹವಲ್ಲೆ!

ಮುಳ್ಳುಗಳು ಬಿರುಸಾಗಿ,
ಕಳೆಗಳು ದಟ್ಟವಾಗಿ, ಉಳಿದ್ಯಾರೂ,
ನಿನ್ನ ಸನಿಹಕೆ ಸಾಗದಂತೆ ಅಡೆ-ತಡೆಯಾಗಿ
ನಿನ್ನ ಒಂಟಿ ಮಾಡುತಿಹವಲ್ಲೆ?
ಫಲ ಪುಷ್ಪ ನೀಡಿ,
ಎಲ್ಲರೊಡಗೂಡಿ,
ನಲಿಯಬೇಕಾದ ನಲ್ಲೆ

■

## ಮುಳ್ಳುಕಂಟಿ

ಮುಂದಾಲೋಚನೆ ಇಲ್ಲದ ಮಾಲಿಯೊಬ್ಬ
ಸುಂದರವಾದೊಂದು ಮುಳ್ಳುಕಂಟಿಯ ತಂದು,
ಅಂದವಾದ ಉದ್ಯಾನದಲಿ ನೆಟ್ಟು,
ಪಾತಿ ಮಾಡಿ, ನೀರು ಗೊಬ್ಬರ ನೀಡಿ
ಬಲು ಎಚ್ಚರದಿ ಸಲಹಿದ.

ನೀರು ಗೊಬ್ಬರವನುಂಡು ಅದು,
ದಿನ-ದಿನಕ್ಕೂ ಸೊಂಪಾಗಿ ಚಿಗಿತು,
ಮೈತುಂಬಿಕೊಂಡು, ಹಸಿರು
ಎಲೆಗಳ ನಡುವೆ, ಸಣ್ಣ-ಸಣ್ಣ
ಮುಳ್ಳುಗಳೊಂದಿಗೆ ದೊಡ್ಡದಾಯ್ತು ರೆಂಬೆ ಹಾಯ್ದು.

ದಿನಗಳೆದಂತೆ, ವರುಷ ಉರುಳಿದಂತೆ
ಸಸಿ ಮರವಾಗಿ, ಹೆಮ್ಮರವಾಗಿ
ಬೆಳೆಯಿತುದ್ಯಾನದಲಿ, ಎಲ್ಲರ ಗಮನ ಸೆಳೆಯುತ್ತ.
ಉದ್ಯಾನಕಾರು ಬಂದರೂ, ಅವರ ಗಮನ
ಸೆಳೆದು, ತನ್ನಿರವ ಮೆರೆಯುತ್ತಿತ್ತು.

ದೂರದಿಂದ ನೋಡಿದವರ್ಗದು
ಮೇತುಮಬಿ ಬೆಳೆದು, ಹಸಿರು ಹರಡಿ
ಮನೋಹರವಾಗಿ ತೋರುತ್ತಿದ್ದರೂ
ಹಸಿರಿನೊಳಗೊಳಗೇ ಬೆಳೆದ ಮುಳ್ಳುಗಳು,
ಸನಿಹ ಹೋದವರನೆಲ್ಲಾ ಚುಚ್ಚುತಿದ್ದವು ನಿರ್ದಯವಾಗಿ

ಬರು-ಬರುತ್ತಾ ಮುಳ್ಳು ಬಲಿತು,
ಬರು ಹೋಗುವವರ ಚುಚ್ಚುತ್ತಾ
ಮರದ ಕೆಳಗೆ ನೆರಳಿಗೆಂದು ನಿಂದವರ ಕಾಲನೂ
ಕಚ್ಚಿ ಚುಚ್ಚಿ ರಕ್ತ ಸುರಿವಂತೆ ಮಾಡುತ್ತಿತ್ತು.

ಇದಕಂಡ ಮಾಲಿ ಮರ ಕಡಿದು,
ತುಂಡರಿಸ ಬೇಕೆಂದು ಹೋದಾಗ,
ಮರದ ಬೇರು ಉದ್ಯಾನವನ್ನೆಲ್ಲಾ
ಒಳಗೊಳಗೇ ವ್ಯಾಪಿಸಿ, ಒಂದು ಕಡೆ ಕಡಿದರೆ
ಇನ್ನೊಂದು ಕಡೆ ಚಿಗುರುವಂತೆ ಬೇರು ಹರಡಿತ್ತು

■

# ಸ್ವತಂತ್ರ ಭಾರತಕೆ ಅರ್ಧ ಶತಮಾನ

ಭಾರತವನೆಲ್ಲ ಸುತ್ತಿ, ಸ್ವಾರ್ಥವನೆಲ್ಲ ಬದಿಗೊತ್ತಿ
ಜನತೆಯಲ್ಲಿ ಒಕ್ಕಟ್ಟಿನ ಮಂತ್ರವ ಬಿತ್ತಿ
ಬಾಪೂಜಿ ಕರೆಯಿತ್ತರು ಹೋರಟಕೆ, ಕಹಳೆಯ ಊದಿ;
ಭಾರತೀಯರೊಡಗೂಡಿ ಹೋರಾಟವ ಮಾಡಿ
ತಂದಿತ್ತರು ಸ್ವಾತಂತ್ರ್ಯವ ಭಾರತಕೆ.

ಸ್ವತಂತ್ರ ಭಾರತಕೀಗ ಮುಗಿದಿದೆ ಐವತ್ತು
ನಡೆಯುತಿದೆ ಸ್ವರ್ಣ ಮಹೋತ್ಸವ ಈ ಹೊತ್ತು
ಈ ಐವತ್ತು ವರುಷ ನಾವು ಮಾಡಿದ್ದೇನು ಕರಾಮತ್ತು
ಎಂದು, ಅಂದಿನಿಂದಿನವರೆಗೆ ಲೆಕ್ಕವ ಹಾಕುತಿಹರಿವತ್ತು.

ಆಗಿರುವುದು ನಿಜ, ಬಹಳ ಪ್ರಗತಿ,
ಅವುಗಳ ಲೆಕ್ಕ ನಮಗೆ ಸಾಕಷ್ಟು ಸಿಗತೈತಿ
ಲೆಕ್ಕ ನೋಡಿದರಂತೂ ಅದ್ಭುತ ಅನ್ನಿಸ್ತೈತಿ
ಆದರೆ ಪರಿಸ್ಥಿರಿ ನೋಡಿದರೆ ಗಾಬರ ಆಗ್ತೈತಿ.

ಬೇರೆಯವರದ್ನೆಲ್ಲಾ ಪಡ್ಕೊಂಡಿದ್ದೀವಿ
ನಮ್ಮದ್ನೆಲ್ಲಾ ಕಳ್ಕೊಂಡಿದ್ದೀವಿ
ಮೋಜು ಮಾಡಿ ಮೆರ್ಯೋದನ್ನು ಕಲ್ತಿದೀವಿ
ಮಾನ–ಮರ್ಯಾದೇನೂ ಬಿಟ್ಟಿದೀವಿ.

ಇಂದು ಸಂಸ್ಕೃತಿ–ಸಂಸ್ಕಾರಗಳ ಅರ್ಥ ನಮಗಾಗ್ತಾ ಇಲ್ಲ.
ಪರದೇಶದವರ್ನ ಅನುಸರಿಸೋದು ನಮಗೆಲ್ಲ ಬೇಕಾಗಿದ್ಯಲ್ಲ
ಅದ್ಕಾಗಿ ನಾವೇನ್ಬೇಕಾದ್ರೂ ಮಾಡೋಕೆ ರೆಡಿ ಇದ್ದೀವಲ್ಲ!
ಅದರಿಂದಾಗಿ ನಾವೆಲ್ಲಿ ಹೋಗ್ತೀವೋ ದೇವ್ರೆ ಬಲ್ಲ.

ನೋಡೋರ್ಗಂತೂ ಎಲ್ಲಾ ರಂಗು–ರಂಗಾಗಿ ಕಾಣೋದು ನಿಜ
ಇದನ್ನೆಲ್ಲಾ ಜಂಬದಿಂದ ಹೇಳೋಕೆ ನಮ್ಗೂ ಆಗ್ಯದೆ ಮಜ.
ಆದರೆ ಇದರೊಳಗೆ ಇರೋದೆಲ್ಲಾ ಸಾಲ ತುಂಬಿದ ರಜ.

ಸಾಲ ಕೊಟ್ಟೋರು ಮೇಲೆ ಬಿದ್ದಾಗ ತಾನೆ, ಸಿಗೋದು ಸಜ.
ಅಲ್ಲಿವರ್ಗೂ ಕೆಲವರ್ಗೆ, ಮಜವೋ ಮಜ.
ಸ್ವತಂತ್ರ ಭಾರತಕ್ಕೆ ಅರ್ಧ ಶತಮಾನ!!

■

## ಹೊಸದಾಗಿ ಬಂದಿಹೆನು

ಹೊಸದಾದಿ ಬಂದಿಹೆನು ನಾನಿಂದು ಈ ಮನೆಗೆ
ಹುಟ್ಟಿ ಬೆಳೆದು, ಇಷ್ಟು ದಿನವಿದ್ದ ಮನೆಯ
ಬಿಟ್ಟು ಬಂದಿಹೆ ನಾನು, ನನ್ನೊಡನಿದ್ದವರೆಲ್ಲರೂ
ಅಲ್ಲಿಯೇ ಉಳಿದಿಹರು.
ನಾನೊಬ್ಬಳೇ ಏಕಾಂಗಿಯಾಗಿ
ನಿಮ್ಮೊಡನೆಲ್ಲಾ ಬೆರೆದು ಒಂದಾಗಿ, ಬದುಕ ಬಂದಿಹೆನು.

ಇಲ್ಲಿಯದೆಲ್ಲ ಹೊಸದು ನನಗೆ;
ಇಲ್ಲಿಯವರೂ ಹೊಸಬರೆನಗೆ,
ಆದರಿವರೆಲ್ಲ ಚಿರಪರಿಚಿತರಂತೆ ಅನಿಸುತಿಹರು
ಅಲ್ಲಿಂದ ಬರುವಾಗ, ಅಲ್ಲಿಯ ಒಳಿತುಗಳ ತಂದಿಹೆನು.
ಇಲ್ಲಿಯ ಒಳಿತುಗಳೊಡನೆ ಬೆರೆಸಿ,
ಮತ್ತಷ್ಟು ಒಳಿತು ಮಾಡಲೆಳೆಸಿಹೆನು;

ನೂರಾರು ಆಸೆಗಳ ಹೊತ್ತು ಬಂದಿರುವೆನಿಲ್ಲಿಗೆ,
ಆ ಆಸೆಗಳು ಗುರಿ, ಟಿಸಿಲೊಡೆದು
ಹೂ ಬಿಟ್ಟು ಕಾಯಾಗಿ, ಹಣ್ಣಾಗಬಯಸಿಹವು
ನನ್ನಾಸೆಗಳ ಕಮರಿಸದೆ ನೀರು ಗೊಬ್ಬರ ನೀಡಿ
ಬೆಳೆಯಲಿಂಬುಗೊಡಿರೆಂದು ಬೇಡುವೆನು.

ನನ್ನ, ನಿಮ್ಮಲ್ಲೊಬ್ಬಳಾಗಿ ಕಾಣಿರೆಂದು ಬಯಸುವೆನು
ನಾನು ಹೊರಗಿನವಳೆಂದು ಕಾಣದಿರಿ
ನನ್ನೊಬ್ಬಳನ್ನೇ ಏಕಾಂಗಿ ಮಾಡದಿರಿ
ನನ್ನಿನಿಯನ ನಡುವೆ ಕಂದರವಾಗಿ ನಿಲ್ಲದಿರಿ
ನಾ ನಿಮ್ಮೆಲ್ಲರೊಡನೊಂದಾಗಿ ಬಾಳ ಬಂದಿಹೆನು.

ಇಂತು ನೀವೆಲ್ಲಾ ಇರಲು, ನಾನೆಂತು ಬೇರಾಗಿ ಬಾಳಲಿ?
ಅಂತಹ ಕುಹಕ ಕುತಂತ್ರ ನನಗಿಲ್ಲ.
ಉತ್ತಮ ಸಂಸ್ಕಾರ ಇತ್ತಿಹಳು ನನ್ನಮ್ಮ
ಒಳಿತಾದುದಕೆ ಮಣಿಯುವೆನು ತಲೆಬಾಗಿ
ಒಳಿತಿಗೆ ಕೆಡುಕೆದುರಾದರೆ
ನಾನೇನು ಸುಮ್ಮನಿರುವವಳಲ್ಲ ಬಿಡಿ!

■

## ಬಾ ಮಗೂ ಒಳಗೆ ಬಾ

ಬಾ ಮಗೂ ಒಳಗೆ ಬಾ
ನಿನ್ನ ಮಂಗಳದ ಅಡಿಗಳ, ಅಂಗಳದ ಒಳಗಿಟ್ಟು ಬಾ
ಮುದದಿ ಬಾ, ದುಗುಡವ ಕಳೆದಿಟ್ಟು ಬಾ
ನಮ್ಮೊಲವಿನಲಿ ನಿನ್ನ ನಲಿವ ಕಾಣಬಾ

ನಾನಿನ್ನತ್ತೆಯಲ್ಲಮ್ಮಾ, ತಾಯಿ ಇಹೆನು
ನಾ, ಹಿಂದೊಂದು ದಿನ
ನಿನ್ನಂತೆಯೆ ತೌರ ಬಿಟ್ಟು
ಈ ಮನೆಯ ಹೊಸ್ತಿಲಿನ ಒಳಗೆ ಕಾಲಿಟ್ಟು ಬಂದೆ;
ಅಂದಿನ ನನ್ನ ಮನದ ಸ್ಥಿತಿ
ಇಂದಿಗೂ ಅಚ್ಚಳಿಯದೆ ಉಳಿದಿಹದು;
ಅದಕಾಗಿ ನಿನ್ನ ಇಂದಿನ ತೊಳಲಾಟ ಅರಿಯಬಲ್ಲೆ ಮಗೂ,
ನಾನಿನ್ನ ಅತ್ತೆಯಾಗದೆ, ತಾಯಾಗಬಯಸಿಹೆನು.

ಹತ್ತಿರಿಲ್ಲೆಂದು ನಿನ್ನ ಹೆತ್ತವರು
ಅತ್ತು ಕರೆಯಲು ಬೇಡ,
ನಿನ್ನೊಡ ಹುಟ್ಟಿದವರು ದೂರಾದರೆಂದು
ಹಿಗ್ಗನೆಲ್ಲಾ ನುಗ್ಗು ಮಾಡಿಕೊಳಬೇಡ
ನಿನ್ನ ಸುಖ ನನ್ನ ಹೊಣೆಯಮ್ಮಾ
ನನ್ನ ಮಗನು ನಿನ್ನ ಸಂತಸದಿ ಇಡುವನಮ್ಮಾ
ಈ ಮನೆಯಲಿ ಹುಟ್ಟಿದಾ ಮಗಳು
ಬೇರೊಬ್ಬರ ಮನೆಯ ಬೆಳಗ ಹೋಗಿಹಳಮ್ಮಾ
ಈಗ ನೀನೇ ನಮಗೆ ಮಗಳು
ನೀನು ನಮ್ಮವಳು, ನಾವು ನಿನ್ನವರು.
ಬಾ ಒಂದಾಗಿ ಎಳೆಯೋಣ ಬಾಳತೇರ.

■

## ದೇವರಿಗೆ

ದೇವರೇ ಎಲ್ಲಿರುವೆ ನೀನು?
ಕೈಗೂ ಸಿಕ್ಕಲೊಲ್ಲೆ ಕಣ್ಣಿಗೂ ಕಾಣಿಸಲ್ಲೊಲ್ಲೆ
ಮಾಡುವಾಟ ಮಾಡುತ್ತಾ ಆಡುವಾಟ ಆಡುತ್ತಾ,
ನಿನ್ನಾಟದ ಮಾಟದ ಫಲ ನಮಗುಣಿಸುತ್ತ,
ಎಲ್ಲಿ ಅವಿತು ನಮ್ಮ ಬವಣೆಯ ನೋಡುತ್ತ
ಕಿಲಾಡಿ ನಗು ನಗುತ್ತಾ ಕುಳಿತಿರುವೆ?

ಯಾರೋ ದೀರ್ಘದಂಡ ನಮಸ್ಕಾರ ಹಾಕಿ,
ನಿನಗಾಗಿ ಹಂಬಲಿಸುತಿಹರು;
ಮತ್ತೋರ್ವರು ಜಪತಪವ ಮಾಡುತ್ತ
ನಿನ್ನ ಕಾಣಲೆತ್ನಿಸುತಿಹರು;
ಇನ್ನೋರ್ವರು ತೀರ್ಥಯಾತ್ರೆಗೆ ಹೋಗಿ
ನಿನ್ನನರಸುತಿಹರು.

ಎಲ್ಲರೂ ಹಲುಬಿ ಹಲುಬಿ ಹಣ್ಣಾದರೂ,
ನೀನೆಲ್ಲೂ ಇಲ್ಲ. ತಲೆ ತಪ್ಪಿಸಿಕೊಂಡು
ತಿರುಗುತಿಹೆ ಏಕೆ?
ಧೈರ್ಯವಿದ್ದರೆ ಎದುರು ನಿಂತು
ಬೇಕಾದಂತೆ ಆಡಿಸು; ಕುಣಿಸು;
ಆದರೆ ಹೇಡಿಯಂತೆ
ಬೆನ್ನಲಿರಿಯಬೇಡ
ಧೂರ್ತನಂತೆ ಸಜ್ಜನರ
ಕರುಳಿನಲ್ಲಿ ಕತ್ತರಿಯಾಡಿಸಬೇಡ ಪ್ರಭುವೆ

■

## ಏಳಿ–ಎದ್ದೇಳಿ

ಏಳಿ, ಎದ್ದೇಳಿ ಭಾರತೀಯರೆ, ಆಲಸ್ಯವ ಬದಿಗೊತ್ತಿ ಹೊರಬನ್ನಿ
ಅಲ್ಲಿ ನೋಡಿ, ಎಲ್ಲೆಲ್ಲೂ ಮೋಸ–ದ್ವೇಷಗಳ ಬಲೆಯು ಹೆಣೆದಿಹುದು;
ಸ್ವಾರ್ಥ–ವಂಚನೆಗಳ ಜಾಲವೆಲ್ಲೆಡೆ ಹಬ್ಬಿಹುದು;
ಮೂಲೆ ಮೂಲೆಯಲ್ಲೂ ಕೊಳಕಿನ ರಾಶಿ,
ಗಟಾರದಲ್ಲೆಲ್ಲಾ ಹರಿಯುತಿಹುದು ಕೃತಘ್ನತೆಯ ಕೆಸರು–ಕೊಚ್ಚೆ,
ಪೊರಕೆಗಳ ಹಿಡಿದು ಬನ್ನಿ, ಬಲೆಯ ಝಾಡಿಸಿ
ಜಾಲಗಳನ್ನೆಲ್ಲ ಜಾಲಿಸಿ, ಹೊಲಸರಾಶಿಯ ಗುಡಿಸಿ
ಕಸದ ತೊಟ್ಟಿಗೆ ಎಸೆಯ ಬನ್ನಿ
ಹೊಲಸ ಗುಡಿಸಿ ಸ್ವಚ್ಛ ಮಾಡದಿರೆ,
ಗಬ್ಬಿಟ್ಟು ನಾರುವುದು ಪರಿಸರವೆಲ್ಲ,
ಧೂಳು ತುಂಬಿ, ಉಸಿರಾಟಕೂ ಹೊಯ್ದಾಡುವಂತಾಗುವುದು
ರೋಗ ರುಜಿನಗಳು ಹಬ್ಬಿ, ಕಲಬೆರಕೆ ಔಷಧಗಳ ಕುಡಿವಂತಾಗಿ
ಮೋಸ ಮಾಡಿ ಕಾಸ ಕುಡಿಸುವ ಅಮಾನವೀಯ ರಾಕ್ಷಸರ
ಮೊರೆ ಹೋಗಬೇಕಾಗುವುದು ಅದಕಾಗಿ!

ಪೊರಕೆಗಳ ತಂದು ಹೊಲಸನೆಲ್ಲ ಹೊರದೂಡ ಬನ್ನಿ;
ಎತ್ತಿ ಎಸೆಯ ಬನ್ನಿ, ಕೊಳೆತುದನು ಹಳಸಿದುದನು
ತಗ್ಗಿನೊಳಗೆ ಸುರಿದು ಮಣ್ಣ ಮುಚ್ಚ ಬನ್ನಿ;
ಹೊಸ ದಾರಿಗೆ, ಹೊಸಗಾಳಿಗೆ, ಶುದ್ಧ ಪರಿಸರಕ್ಕೆ,
ಆರೋಗ್ಯ ಜೀವನಕೆ ಎಡೆ ಮಾಡಬನ್ನಿ

■

## ಬ್ರೇಕು ಹಾಕಬೇಕು ಬಸವಣ್ಣ

ಅಣ್ಣಾ, ಬಸವಣ್ಣಾ; ನೀನೆಲ್ಲಿ ಅಡಗಿರುವೆಯಣ್ಣಾ?
ಕೂಗಿ, ಕೂಗಿ ಗಂಟಲೊಣಗಿದರೂ ಓಗೊಡಲೊಲ್ಲೆಯಲ್ಲಾ
ಸದ್ದುಗದ್ದಲವಿಲ್ಲದೆ, ಯಾರಿಗೂ ಕಾಣದಂತೆ ಕುಳಿತಿಹೆಯಲ್ಲಾ
ಇಂತಹ ಸಮಯದಿ ನೀ ಸುಮ್ಮನಿರುವುದು ಸರಿಯಲ್ಲವಣ್ಣಾ.

ಸ್ಥಾವರ ಪೂಜೆ ನೀ ಬೇಡೆಂದರೂ,
ಕಟ್ಟುತಿಹರಯ್ಯಾ ಗುಡಿಗೋಪುರಗಳ
ನಿನ್ನ ಅನುಯಾಯಿಗಳೆನ್ನಿಸಿಕೊಂಡವರೆ
ನಿನ್ನ ತತ್ವಗಳಿಗೆ ತಿಲಾಂಜಲಿ ನೀಡುತಿಹರಯ್ಯಾ

ನಿನ್ನ ಹೆಸರಲೇ ನಿನಗೆ ಬೇಡವಾದುದನೆಲ್ಲಾ ಮಾಡುತಿಹರಯ್ಯಾ
ನಿನ್ನ ಬೋಧನೆಗಳನ್ನೆಲ್ಲಾ ಗಾಳಿಗೆ ತೂರಿ, ನಿನ್ನ ಹೆಸರ ಮಾತ್ರ ಮುಂದೆ
ಮಾಡುತಿಹರಯ್ಯಾ
ಲಾಂಛನಗಳ ಮುಂದೆ ಮಾಡಿಕೊಂಡು, ಢೋಂಗಿಯಾಟವಾಡುತಿಹರಯ್ಯಾ
ನಿನ್ನ.ತತ್ವಕೆ ಮಸಿ ಬಳಿದು, ಹುಸಿಯಾಟವಾಡುತ ಮೆರೆಯುತಿಹರಯ್ಯಾ

ನಿನಗಾಗಿ ಏನಬೇಕಾದರೂ ಮಾಡುವೆವೆಂದು ಬಡಾಯಿ
ಕೊಚ್ಚಿಕೊಳ್ಳುವರಯ್ಯಾ
ನಿನ್ನ ಹೆಸರ ಬೇಕಾದವರ–ಬೇಡಾದವರೆಲ್ಲರ ಮೇಲೆ ಹೇರುತ್ತ,
ನಿನ್ನ ಹೆಸರ ಮುಂದೆ ಮಾಡಿ ಬಡಿದಾಡುತ್ತ, ತಮ್ಮ ಬೇಳೆ
ಬೇಯಿಸಿಕೊಳ್ಳುತಿಹರಯ್ಯಾ
ನಿನಗಾಗಿ ತಮ್ಮ ತನು–ಮನ–ಧನಗಳನರ್ಪಿಸುವೆವೆಂದು ಬಡಿವಾರ
ಮಾಡುವರಯ್ಯಾ

ಬೀದಿಯಲ್ಲೆಲ್ಲಾ ನಿನ್ನ ಎಳೆದಾಡಿ, ಎಲ್ಲರೊಂದೊಂದ ನುಡಿವಂತೆ
ಮಾಡಿಹರಯ್ಯಾ
ಹೆಸರನಷ್ಟೇ ಕೇಳುವಂತೆ ಮಾಡಿ, ತತ್ವಗಳ ಬೀದಿ ಪಾಲು ಮಾಡಿಹರಯ್ಯಾ

ಬಸವನ  ಹೆಸರಲ್ಲೇ ಕೆಸರ ಚೆಲ್ಲುತಿಹರಯ್ಯಾ
ನಿನ್ನನುಯಾಯಿಗಳ ಹೊಲಸ ನೋಡಿ, ಉಳಿದವರೆಲ್ಲಾ
ಮೂಗುಮುರಿಯುವಂತಾಗಿದೆಯಯ್ಯಾ

ನೀ ಬಂದ ಇದಕೆಲ್ಲಾ ಹಾಕಬೇಕಯ್ಯಾ ಬಲವಾದ ಬ್ರೇಕು.
ಇಲ್ಲದಿರೆ, ನಿನ್ನ ಹೆಸರಿನಲ್ಲಿವರು ಚೆಲ್ಲುವರು ಕೆಸರ.
ಹೊಸಬರು, ಬಸವಣ್ಣನನುಯಾಯಿಗಳಂತೆ ಬಸವಣ್ಣ
ಇದ್ದನೇನೋ, ಎನ್ನವನುಮಾನ ಮೂಡುವಂತೆ ಮಾಡಿ,
ಶರಣಪರಂಪರೆಗೆ ಬಳಿದಾರು ಮಸಿಯ,
ಚೆನ್ನಬಸವಣ್ಣ ಕಕ್ಕಯ್ಯನ ಮಗನೇನೋ
ಎಂದು ಅನುಮಾನಿಸುವಂತೆ ಮಾಡಿರುವ ಹಾಗೆ

## ನಿನಗೆಷ್ಟು ಸಾರಿ ಹೇಳಲಿ ನಾನು?

ಏ ಮೀರಾ: ಎಲ್ಲಿರುವೆ ಬೇಗ ಬಾರಾ
ನೀ ಬರದೆ, ಮನೆ ತುಂಬಾ ಕಸಹರಡಿ, ಹಸನು ಕಾಣದಲ್ಲೆ?
ನಮ್ಮ ಮೈಲಿಗೆ ಬಟ್ಟೆಗಳು ನೋಡುತ್ತಿವೆ ನಿನ್ನ ಹಾದಿಯನ್ನು
ರಾಶಿ-ರಾಶಿ ಬಿದ್ದ ಮುಸುರೆ ಪಾತ್ರೆಗಳು ಕಾಯುತಿವೆ ನಿನ್ನಾಗಮನವನ್ನು
ನಿನಗೆಷ್ಟು ಸಾರಿ ಹೇಳಲಿ ನಾನು, ನೀ ಹೀಗೆ ಕೈಕೊಡಬೇಡವೆಂದು!

ನಿನಗೆ ಬರಲಾಗದಿದ್ದರೆ, ಬರಲು ತಡವಾಗುವುದಿದ್ದರೆ,
ಮೊದಲೇ ತಿಳಿಸೆಂದು ಹೇಳಬೇಕೆಷ್ಟು ಸಾರಿ ನಿನಗೆ?
ಹೇಳಿ-ಹೇಳಿ ನನಗೆ ಸಾಕಾಯಿತಾದರೂ
ಕೇಳಿ-ಕೇಳಿ ಬೇಸರ ಬಾರದು ನಿನಗೆ!

ಈಗ ಬಂದೆಯಲ್ಲಾ ಎಲ್ಲ ಕೆಲಸವಾದ ಮೇಲೆ!
ಹೇಳಬಾರದಿತ್ತೆ ನೆನ್ನೆಯೇ, ಇಂದು ತಡವಾಗುವುದೆಂದು:
ನೆನ್ನೆ ಗೊತ್ತಿರಲಿಲ್ಲೆಂದು ಎಷ್ಟು ಗತ್ತಿನಲ್ಲಿ ಹೇಳುತಿರುವಿಯಲ್ಲ!

ಏಕೆ ಮೀರಾ?: ಏಕೆ ಕಣ್ಣಲಿ ನೀರು?
ಏನಾಯಿತಮ್ಮಾ ಮುದಲಿ ದುಗುಡ ತುಂಬಿದೆಯಲ್ಲಾ
ಏನೆಂದೆ? ಹುಚ್ಚು ನಾಯಿ ಕಡಿಯಿತೆ ನಿನ್ನ ಮಗನಿಗೆ ಇಂದು
ಅದಕಾಗಿ, ದವಾಖಾನೆಗೆ ಹೋಗಿ, ತಡವಾದರೂ ಆಗಲಿ ಎಂದು
ಕೆಲಸಕಾಗಿ ಬಸವಳಿದು ಬಂದಿಹೆಯಾ?
ಮದ್ದು ಕೊಡಿಸಿದೆ ತಾನೆ? ಕಂದನೆದ್ದು ಕುಳಿತಿಹನೆ?
ಹುಚ್ಚುನಾಯಿ ಕಡಿತದ ಮದ್ದಿಗೆ ಸಾವಿರ-ಸಾವಿರ ಹಣಬೇಕೆ?
ಎಲ್ಲಿಂದ ತರುವಿಯಮ್ಮಾ? ತಿಂಗಳೆಲ್ಲಾ ದುಡಿದರೂ
ಮುಂಜಾವಿನಿಂದ ಸಂಜೆಯವರೆಗೆ ಮುಸುರೆ ತೊಳೆದರೂ
ಮಕ್ಕಳ ಹೊಟ್ಟೆಗಾದರೆ ಬಟ್ಟೆಗಿಲ್ಲ, ಬಟ್ಟೆಗಾದರೆ ಹೊಟ್ಟೆಗಿಲ್ಲ
ಈ ಸಾವಿರವನೆಂತು ಕೂಡಿಸುವಿಯಮ್ಮಾ?
ತೊಗೊ ಈ ಐವತ್ತು, ಆದರಿದು ನಿನ್ನ

ಕಣ್ಣೀರನಳಿಸದು ಮೀರಾ, ನಿನ್ನ ಕಣ್ಣಿನಿಂದ
ಹರಿವ ಕಣ್ಣೀರಲೊಂದು ಹನಿಯ ತಡೆಯಲೆಂಬ
ಪ್ರಯತ್ನವಿದಷ್ಟೆ, ಇದು ನಿನ್ನ ಕಷ್ಟ ನಿವಾರಿಸದು ಮೀರಾ,
ಲಂಕೆಗೆ ಸೇತುವೆ ಕಟ್ಟಲು ರಾಮಗೆ ಅಳಿಲು ತೋರಿದ
ಮಳಲು ಭಕ್ತಿಯಂತೆ ಇದು; ಅಷ್ಟೆ ತಾಯಿ.

■

# ಹಳೆಯ ಹೊತ್ತಗೆ

ಒಂದು ಸಂಜೆಯಲಿ, ಯಾರೂ ಇಲ್ಲದೆ ಬೇಸರಾಗಿ,
ಏನು ಮಾಡಲೂ ತೋಚದೆ,
ಹಳೆಯ ಹೊತ್ತಗೆ ತಂದು
ಒಂದೊಂದೇ ಪುಟವ ಬಿಡಿಸಿ ಓದತೊಡಗಿದಾಗ,
ಹಿಂದೆ ಓದಿದ್ದೆಲ್ಲಾ ಮನಸ್ಸಿನ ಮುಂದೆ ಬಂದು
ಅದರಲ್ಲಿದ್ದ ಘಟನೆಗಳು ಒಂದೊಂದಾಗಿ ಸಿನಿಮಾದ ಸೀನುಗಳಂತೆ
ತೆರೆದುಕೊಂಡಾಗ, ತನ್ನನ್ನೇ ತಾನು ಮರೆತು
ತಾನೇ ಆ ಹೊತ್ತಿಗೆಯ ಕಥೆಯ ಒಂದು ಪಾತ್ರವಾಗಿ
ಆ ಘಟನೆಗಳಲ್ಲೇ ಒಂದಾಗಿ
ಮುದನೀಡುವ ಸಂದರ್ಭದಲಿ ಖುಷಿಪಡುತ್ತಾ
ಗೋಳಿನ ಘಟನೆಗಳು ಸಂಭವಿಸಿದಾಗ ಅಳುತ್ತಾ
ಇಂದನೆಲ್ಲಾ ಮರೆತು, ಅಂದಿನಲಿ ಒಂದಾಗಿ
ಇಂದು ಅಂದೆ ಎನ್ನಿಸಿ, ತನ್ನನ್ನು ತಾನೇ ಕಳೆದುಕೊಂಡ ಅನುಭವ!

ಓದುತ್ತ, ಓದುತ್ತಾ ಕಾದ ಬಿಸಿಲಲಿ ನಿಂತಂತಾಗಿ
ತಡೆಯಲಾರದ ಸೆಕೆ, ಬಿಡಿಸಿಕೊಳ್ಳಲಾರದ ಬವಣೆ,
ಏದುಬ್ಬಸಗೊಂಡಾಗ, ಈಗ ಇದರಿಂದ
ಪಾರಾಗಲಿ ಹೇಗೆಂದು ತವಕಗೊಂಡಾಗ,
ಒಳಮನ, ಮುಚ್ಚಿಬಿಡು ನನ್ನ ಹಳೆಯ ಹೊತ್ತಗೆ
ನಿನ್ನ ಹೊಸಪುಸ್ತಕ ತಂದು ಬಿಚ್ಚಿ ನೋಡು
ಎಂದಾಗ, ಮನ ಖುಷಿಗೊಂಡು ಹೊಸಪುಸ್ತಕ
ಹುಡುಕಿ ತಂದು ಓದಿದರೆ, ತಂಗಾಳಿ ಬೀಸಿದಂತಾಗಿ
ದಗೆ ಇಲ್ಲದಂತಾಗಿ, ಮನಕೆ ತಂಪಾಯಿತು

ಬೇಗೆಯಿಂದ ಹೊರಬರುವುದು ಇಷ್ಟು ಸುಲಭವಿದ್ದರೂ
ಸುಮ್ಮ, ಸುಮ್ಮನೆ ಬಿಸಿಲಲಿ ಬೆಂದು ಹೋಗುತ್ತಿದ್ದೆನಲ್ಲಾ

ಎನ್ನಿಸಿ, ಹಳೆ ಪುಸ್ತಕವ ಸಂದೂಕದ
ತಳದಲ್ಲಿ ಇರಿಸಿ, ಅದರ ಮೇಲೆ
ಹೊಸ ಹೊತ್ತುಗೆಗಳ ಪೇರಿಸಿ, ಎಂದೆಂದೂ
ಹಳೆಯ ಪುಸ್ತಕ ತೆರೆದು ಓದಬಾರದೆಂದು
ನಿಶ್ಚಯಿಸಿ ನಿಶ್ಚಿಂತೆಯಲಿ
ನಿದ್ದೆಯ ಆಸರದಲಿ ನೆಮ್ಮದಿಯ ತೊಟ್ಟಿಲು ತೂಗಿತು!

■

## ಇತಿಹಾಸದಾಧಾರ

ಹಾಳು ಹಂಪೆಯ ಪಳೆಯುಳಿಕೆಗಳು,
ಪಿರಾಮಿಡ್ಡಿನ ಅವಶೇಷಗಳು,
ಮಾಸ್ತಿ ಕಲ್ಲುಗಳು, ಶಿಲಾ ಲೇಖನಗಳು
ಹರಪ್ಪಾ-ಮೊಹೆಂಜಾದಾರೋದಲ್ಲಿ ಸಿಕ್ಕ
ಮಡಕೆ ಚೂರುಗಳು, ಸವೆದ ನಾಣ್ಯಗಳು
ಬಹಳ ಮಹತ್ವವೆಂಬಂತೆ ಮ್ಯೂಜಿಯಂನಲ್ಲಿ
ಜತನದಲ್ಲಿ ಇಟ್ಟು, ಕಾವಲಿರಿಸಿ,
ಪ್ರದರ್ಶನಕಿಡುವ ಪರಿ ಎಂತಹದು!
ಮನೆಯ ಧೂಳು ಝಾಡಿಸುವಾಗ
ಹಳೆಯ ಸಾಮಾನುಗಳನು
ಕಸದ ತೊಟ್ಟಿಗೆಸೆಯುವಂತೆ ಎಸೆಯದೆ,
ವಜ್ರ-ವೈಡೂರ್ಯಗಳೆಂಬಂತೆ
ಪಾರವಿಟ್ಟು ಕಾಯುತಿಹರು ಏಕೆ?

ಮಂಗನ ಕೈಗೆ ಮಾಣಿಕ್ಯ ಕೊಟ್ಟರೆ
ಅದಕೇನು ಗೊತ್ತು ಮಣಿಕ್ಯದ ಮಹತ್ತು?
ಇತಿಹಾಸದ ಮಹತ್ತು ಅರಿಯದವಗೇನು ಗೊತ್ತು
ತನ್ನ ಪೂರ್ವೇತಿಹಾಸದ ಕಿಮ್ಮತ್ತು!
ಪೂರ್ವಜರ ಪಳೆಯುಳಿಕೆಗಳು
ಗತಕಾಲದ ವೈಭವಕೆ ಬೆಳಕು ಚೆಲ್ಲುವ ಸಂಪುಟಗಳು;
ನಮ್ಮ ಗತವೈಭವಕೆ, ಸಂಸ್ಕೃತಿಗೆ ಹಿಡಿವ ಕನ್ನಡಿಗಳು

ನಮ್ಮ ದೇಶ ನಡೆದು ಬಂದ
ರೀತಿ-ನೀತಿ ಎತ್ತಿ ತೋರುವ ಕುರುಹುಗಳು,
ಇವ ಜತನದಿ ಕಾಯದಿರೆ,
ನಮ್ಮ ಇತಿಹಾಸವ ಅರಿವುದೆಂತು?

ಇತಿಹಾಸಕಿವು ಎಲ್ಲಕ್ಕಿಂತ ಮಿಗಿಲಾದ ಸಾಕ್ಷ್ಯಾಧಾರಗಳು
ಅನುಮಾನಕೆಡೆ ಇಲ್ಲದೆ, ಇದ್ದುದಿದ್ದಂತೆ
ಬಿಚ್ಚಿ ತೋರಿಸುವ ಸಾಕ್ಷಿಗಳು!
ಇವುಗಳಿಗೆ ಬೆಲೆ ಇಲ್ಲದಿರೆ
ನಮ್ಮ ನೆಲೆಯ ಅರಿವುದೆಂತು?

## ಸಮಾನತೆ

ಎಲ್ಲೆಲ್ಲಿಯೂ ಕೇಳುತಿಹುದು ಶೋಷಣೆಯ ಘೋಷಣೆ
ಮೀಟಿಂಗುಗಳ ಮೇಲೆ ಮೀಟಿಂಗು
ಸೆಮಿನಾರುಗಳ ಮೇಲೆ ಸೆಮಿನಾರು
ಪುರುಷ ಪ್ರಧಾನ ಸಮಾಜದ ಶೋಷಣೆಯ ಕಥೆಗಳು
ಹರಿಯುತಿಹವು ಕಥೆಯಾಗಿ, ವ್ಯಥೆಯಾಗಿ, ಕವನವಾಗಿ
ಕಾದಂಬರಿಯಾಗಿ, ಪ್ರಬಂಧಗಳಾಗಿ ಭಾಷಣಗಳೂ ಆಗಿ.
ಬಹುರೂಪಿ ಶೋಷಣೆ ಇದುವರೆಗಾಗಿತ್ತು ಈಗ ಅವುಗಳ ಘೋಷಣೆ
ಸಾಗಿಹುದು.

ಈ ಘೋಷಣೆಗಳ ಸ್ವರೂಪ ತಾಳಿಹುದು ನಿರೂಪದ ರೂಪ
ದಿನದಿನಕೆ ಅದು ತಾಳುತಿಹುದು ಬಹುರೂಪ!
ಇದು ಮುಗ್ಧ ಹುಡುಗಿಯರ ಕೆರಳಿಸಬಹುದು
ಸೇಡುತೀರಿಸಿಕೊಳ್ಳುವಾಸೆ ಅವರಲಿ ಅರಳಿಸಬಹುದು!

ಮುಗ್ಧ ತರುಣಿಯರು, ಕ್ರಮಿಸಬೇಕಾದ ದಾರಿಯ ತಿಳಿಯದೆ
ಮಿಸ್‌ಲೀಡಾಗಿ ಅಡ್ಡದಾರಿಗುಂಟ ಹೋದರೆ, ಪಾಪ:
ಈ ಹುಡುಗಿಯರು ಹಾದಿ ತಪ್ಪಿ, ಕಲ್ಲು ಮುಳ್ಳಲಿ ಸಿಕ್ಕಿ
ಮುಂದೂ ಹೋಗಲಾರದೆ ಹಿಂದೂ ಬರಲಾರದೆ
ಒದ್ದಾಡುವಾಗ, ಮನೆಯವರೂ ಗೋಳಾಡುವಂತಾದೀತು!

ಹೀಗಾದರೆ ಆಗುವ ಬದಲಾವಣೆ ಇಷ್ಟೆ
ಆಗ ಒದ್ದಾಡುತ್ತಿದ್ದವಳು ಮಹಿಳೆ
ಇಂದು ಗೋಳಾಡುತ್ತಿರುವವನು ಪುರುಷ ಎಂಬಂತೆ,
ಈ ಬದಲಾವಣೆ ಯಾರಿಗೆ ತರುವುದು ಹರುಷ?
ಚೌಕಟ್ಟಿನಲಿ ಹೊಸ ಬದಲಾವಣೆಯ ಭಾವಚಿತ್ರ ಹಾಕಿ
ಯಾರ ಶೋಷಣೆಯೂ ಇಲ್ಲದ ಸಮಾನತೆಯ ಕವನ ರಚಿಸಿ
ಸಮಸ್ಯೆ ಇಲ್ಲದ ಸಮಾಜಕೆ ಮಾರ್ಗ ತೋರಬೇಕು.

■

## ಅ-ದೃಷ್ಟ

ಜೀವನದ ಘಟನೆಗಳು
ಅಸೇಷ್ವದ ಕೈಯ್ಯಲ್ಲಿ ಇವೆಯೋ
ನಾವೇ ಮಾಡಿಕೊಂಡುದರಿಂದಾದುವೋ
ಒಂದೂ ತಿಳಿಯದಲ್ಲ!
ಒಮ್ಮೊಮ್ಮೆ ಕೆಲವರ ಜೀವನ ನೋಡಿದರೆ
ಮಾನವರ ಕೈಲೇನಿಲ್ಲ, ಎಲ್ಲಾ ವಿಧಿ ವಿಲಾಸ
ಎನ್ನಿಸಿದರೆ, ಮತ್ತೆ ಕೆಲವರ ಬದುಕು
ಅವರ ಮುಂದಾಲೋಚನೆಯ, ಸ್ವ ಪ್ರಯತ್ನದ ಫಲವೆಂಬಂತೆ
ಪ್ರತೀಕವೆಂಬಂತೆ ತೋರುವುದು
ಆದರೆ, ಒಮ್ಮೊಮ್ಮೆ ಪ್ರಯತ್ನ ನಿಷ್ಫಲವಾಗಿ
ಪರಿಸ್ಥಿತಿ ಕೈ ಮೀರಿ ಬಿಗಡಾಯಿಸಿದಾಗ
ಮನುಷ್ಯನ ಕೈಲೇನಿಲ್ಲ; ಆಗಿಯೇ ತೀರುವುದು
ಆಗಬೇಕಾದುದೆಲ್ಲ ಎನ್ನಿಸುವುದಲ್ಲ.
ಅದೃಷ್ಟ ಮಿಗಿಲಾದಾಗ, ಹಲವರು
ಮಣ್ಣು ಮುಟ್ಟಿದರೂ ಚಿನ್ನವಾಗುವುದು
ದುಷ್ಟರಾಗಿದ್ದರೂ ದೊರೆಯುವುದೆಲ್ಲೆಲ್ಲೂ ಮನ್ನಣೆಯು
ಮೆರೆಯುವರವರು ಮದಿಸಿದಾನೆಯಂತೆ
ದುರಾದೃಷ್ಟ ಬೆನ್ನ ಹತ್ತಿದಾಗ
ಹೊನ್ನು ಮಣ್ಣಾಗುವುದು
ಸ್ನೇಹಿತರು ಶತ್ರುಗಳಾಗುವರು
ಬಂಧು-ಬಾಂಧವರೇ ಮೋಸಮಾಡುವರು
ಅನ್ಯಾಯದಿ ಅಪರಾಧ ಹೊರಿಸುವರು
ಎಲ್ಲೆಲ್ಲೂ ದೊರೆಯುವದು ನಿರಾಕರಣೆ!
ಅದೃಷ್ಟದ ಕೈವಾಡವೋ
ನಮ್ಮ ಬೇಜವಾಬ್ದಾರಿತನವೋ
ಎಂಬುದೇ ತಿಳಿಯದಂತಾಗುವುದಲ್ಲ.

■

## ಸೇರುವುದೆಂತು ಗುರಿಯ?

ವೈಚಾರಿಕ ಮನೋಭಾವದ ಇಂದಿನ ಜನ,
ಅಲುಗಾಡಿಸುತಿಹರು ನಮ್ಮ ನಂಬುಗೆಯ ಬುನಾದಿಯನ್ನೆ!
ಅಂದಿನವರನುಭವಗಳ ಅಭಿವ್ಯಕ್ತಿಯ ಕೇಳೆ,
ಬಾಳಿನಲೊಂದು ನಂಬುಗೆ, ಭವಿಷ್ಯಕ್ಕೊಂದು ಆಸೆ
ಚಿಗುರಿ, ಹುಟ್ಟಿಸುವುದುತ್ಸಾಹವನು.
ಅದರ ಬಲದಲಿ ಮುನ್ನಡೆದು ಹೋದಾಗ
ಜೀವನವನ್ನೇ ಚೆಲ್ಲಾಪಿಲ್ಲಿ ಮಾಡುವ ಅನುಭವಗಳು
ಆಸೆ ನಂಬುಗೆಗಳ ಬುಡವನ್ನೆ ನಡುಗಿಸುವುವು
ಚಾರ್ವಾಕರ ಜೊತೆಗೆ , ಸಿದ್ಧಾಂತಗಳೂ ಕಾಲ ಹಿಡಿದು
ಎಳೆದಾಗ, ನೆಲಕ್ಕೆ ಮುಖಮಾಡಿ ಬಿದ್ದಂತಹ ಅನುಭವ,
ಆಸ್ತಿಕರ ನಂಬುಗೆಯ ಕಥೆಗಳ
ಒರೆಗೆ ಹಚ್ಚತೊಡಗುವುದು ಮನಸು,
ಜೋನ್ ಆಫ್ ಆರ್ಕ್‌ಗೆ ಯುದ್ಧ ಮಾಡಲು
ಆದೇಶಿಸಿದ ದೈವ, ಅವಳ ಇಂಪೀಚ್‌ಮೆಂಟಾದಾಗ
ಬರಲಿಲ್ಲವೇಕವಳ ಬೆಂಬಲಿಸಲು ಎಂದು ಪ್ರಶ್ನಿಸುವುದು
ಧರ್ಮವನಂಬಿ ಬದುಕಿದ ಸೀತೆಗೆ
ಏಕಂತಹ ಕೊನೆಯು ಎನ್ನಿಸುವುದು
ಬಸವಣ್ಣನಂತ್ಯವು ಚನ್ನಬಸವೇಶ್ವರನ
ಕಡೆಯದಿನಗಳು, ಸಜ್ಜನರ ಬೆಂಬಲಕೆ
ದೇವರಿದ್ದಾನೋ ಇಲ್ಲವೋ ಅಥವಾ
ಅವನಿರುವುದೇ ಸುಳ್ಳೋ ಎಂಬ
ಅನುಮಾನವ ತಂದು ಎಷ್ಟೋ ವರ್ಷಗಳಿಂದ
ಕಟ್ಟಿದ, ನಂಬುಗೆಯ ಸೇತುವೆಯೇ ಕುಸಿಯುವಂತೆ
ಮಾಡುವುದು, ಹಾಗೆಲ್ಲಾದರೂ ಕುಸಿದರೆ
ದಾಟುವುದೆಂತು ನದಿಯ?
ಸೇರುವುದೆಂತು ಗುರಿಯ?

■

## ಒಕ್ಕಟ್ಟಿಲ್ಲದೆ ಬಿಕ್ಕಟ್ಟು

ಒಕ್ಕಟ್ಟಿಲ್ಲ, ಒಕ್ಕಟ್ಟಿಲ್ಲ, ಒಕ್ಕಟ್ಟೆನ್ನುವುದು
ಭಾರತದಲಿ ಇಲ್ಲವೇ ಇಲ್ಲ.
ಕುಟುಂಬದೊಳಗಿಲ್ಲ, ಬಂಧುಗಳಲಿಲ್ಲ.
ಒಡಹುಟ್ಟಿದವರಲ್ಲಂತೂ ಇಲ್ಲವೇ ಇಲ್ಲ
ಸಾಹಿತಿಗಳೊಳಗಿಲ್ಲ: ಸ್ನೇಹಿತರಲ್ಲಿಲ್ಲ:
ರಾಜಕಾರಣದಲೂ ಇಲ್ಲ: ಸರ್ಕಾರದಲ್ಲಂತೂ ಇಲ್ಲವೇ ಇಲ್ಲ.

ಒಕ್ಕಟ್ಟಿಲ್ಲವಾಗಿ ಸಹಕಾರವಿಲ್ಲ.
ಸಹಕಾರವಿಲ್ಲವಾಗಿ ಯಾವ ಕೆಲಸವೂ ಮುಂದುವರಿಯದಲ್ಲ
ಕುಟುಂಬದಲಿ ಮಕ್ಕಳ ಪ್ರಗತಿ ಇಲ್ಲ
ರಾಷ್ಟ್ರದಲಿ ಯೋಜನೆಗಳೆಲ್ಲಾ ಕುಸಿದು ಬಿದ್ದಿವೆಯಲ್ಲ
ಪ್ರಜೆಗಳ ಗೋಳ ಹೇಳತೀರದಲ್ಲ.

ಸಹಕಾರವಿಲ್ಲವಾಗಿ ಮಾನವೀಯತೆ ಇಲ್ಲ
ಮಾನವೀಯತೆ ಇಲ್ಲವಾಗಿ ಜನರ ನೋವ ಹೇಳಲಾಸಲ್ಲ!
ಶಿಕ್ಷಕನೇ ಮಕ್ಕಳ ಹಿಂಸಿಪನಲ್ಲ
ವೈದ್ಯನೇ ರೋಗಿಗಳ ಶೋಷಿಸುತಿಹನಲ್ಲ
ಬಿದ್ದವರ ಇದ್ದವರು ದೋಚುತಿಹರಲ್ಲ
ಅಸಹಾಯಕರ ದುಃಖಾಗ್ನಿಗೆ ತುಪ್ಪವ ಸುರಿಯುತಿಹರಲ್ಲ

ಬೇಲಿಯೇ ಎದ್ದು ಹೊಲವ ಮೇಯುತಿದೆಯಲ್ಲ
ಗೊಲ್ಲನೇ ಹಾಲ ಕುಡಿಯುತಿಹನಲ್ಲ
ಔಷಧವೇ ವಿಷವಾಗಿದೆಯಲ್ಲಾ
ವಂಚಕರಿಗೆ ಶಹಭಾಸಗಿರಿ ದೊರೆಯುತಿದೆಯಲ್ಲಾ
ಮೌಲ್ಯಗಳು ಅಪಮೌಲ್ಯಗೊಳುತಿವೆಯಲ್ಲಾ
ತಾಯ ಹಾಲೇ ನಂಜಾಗುತಿದೆಯಲ್ಲಾ
ರಾಮರಾಜ್ಯ ಬರದೇ ರಾವಣರಾಜ್ಯವಾಗುತಿದೆಯಲ್ಲಾ
ಇಷ್ಟಾದರೂ ಭಾರತೀಯರಿಗೆ ಒಕ್ಕಟ್ಟಿನ ಬೆಲೆಯೇ ತಿಳಿಯುತಿಲ್ಲವಲ್ಲ!

■

## ಅಂದು-ಇಂದು

ಆಗಿನ ಕಾಲದಲಿ ಅತ್ತೆ, ಸೊಸೆಯ ಕಾಡಿದರೆ,
ಈಗಿನ ಕಾಲದಲಿ ಸೊಸೆ, ಅತ್ತೆಯ ಕಾಡುವಳು!
ಅಂದು ಬಾಡಿಗೆದಾರ ಮಾಲೀಕರನ ಕೈಯಲ್ಲಿ ಗೋಳಾಡಿದರೆ,
ಇಂದು ಮಾಲಿಕಗೆ ಬಾಡಿಗೆದಾರನೇ ಕೊಡುವನು ಉಪಟಳ!
ಆಗ ಸಾಲ ಮಾಡಿದವ ಶೂಲಕ್ಕೇರಿದ ನೋವ ಅನುಭವಿಸಬೇಕಿತ್ತು!
ಈಗ ಸಾಲ ಕೊಟ್ಟವನು ಪರಿಪರಿಯ ಸಂಕಟದಲಿ ಒದ್ದಾಡಬೇಕಿಹುದು!
ಹಿಂದೆ ಪುರುಷ, ಮಹಿಳೆಯ ಶೋಷಿಸಿ ಹಿಂಸಿಸುತ್ತಿದ್ದ
ಇಂದವಳು ಪುರುಷನ ಪುಂಗಿ ಬಂದು ಮಾಡಿಹಳು.
ಒಂದಾನೊಂದು ಕಾಲದಲಿ ಹಿಂದುಳಿದವರ ಸ್ಥಿತಿ ಚಿಂತಾಜನಕವಾಗಿತ್ತು
ಇಂದವರು, ಮುಂದುವರಿದವರ ಚಿಂತೆಯಲಿ ಮುಳುಗುವಂತೆ ಮಾಡಿಹರು!
ಹಿರಿಯರಿಗೆ ಕಿರಿಯರು ಗೌರವದಿ ನಡೆಯುತ್ತಿದ್ದ ಕಾಲವೊಂದಿತ್ತು'
ಇಂದು, ಕಿರಿಯರು ಹಿರಿಯರ ಮೂಲೆಗುಂಪಾಗಿಸಿ,
ತಾವೆ ಮುಂದೆ ಮೆರೆಯುತಿಹರು,
ಹೀಗೆ ಮೇಲಿದ್ದುದು ಕೆಳಗಾಗಿ, ಕೆಳಗಿದ್ದುದು ಮೇಲೆ ಏರಿದೆ.
ಇದು, ಕಾಲವೆಂಬ ರಥದ ಗಾಲಿಗಳ ಉರುಳಾಟ,
ಉರುಳುವಾಗ, ಮೇಲಿದ್ದುದು ಕೆಳಗೆ, ಕೆಳಗಿದ್ದುದು ಮೇಲೆ
ಹೋಗುತ್ತಾ ಬರುತ್ತಾ ಇರುವುದು ಸಹಜ ಆಟ........

■

## ಮನಸ್ಸೆಲ್ಲಾ ಬತ್ತಲೆ

ಸಂಜೆಯ ಬದುಕು ಬಯಸುತಿದೆ ಊರುಗೋಲನ್ನು
ಕೇಳುತಿದೆ ಕಣ್ಣಿಗೆ ಕನ್ನಡಕವನ್ನು
ಊರುಗೋಲು ದೊರೆಯದಾಗಿ
ಕನ್ನಡಕವೇ ಕಣ್ಣ ರೆಪ್ಪೆಯ ಮುಚ್ಚಲು.
ಬವಣೆಯೇ ಆಗುವುದು ಆರೋಗಣೆ

ಕಣ್ಣಿನ ಆಪರೇಷನ್ ಆಗಿ
ಒಂದಲ್ಲ ಒಂದು ದಿನ ಕಣ್ಣು ಬರುವುದೆಂಬ
ಆಸೆಯಿಂದಾಗಿ, ಒಂದಲ್ಲ ಒಂದು ದಿನ
ಕತ್ತಲು ಹರಿದು ಬೆಳಕು ಬರುವ ನಂಬಿಕೆಯಲಿ
ಹಗಲೆಲ್ಲಾ ಇರುಳಾಗಿರಲು ಬರುವ ಹಗಲಿಗೆ ಮರುಳಾಗಿ
ಇರುಳು ಹಗಲುಗಳ ಪುಟಗಳ ತಿರುವುತ್ತಾ ತಿರುವುತ್ತಾ
ಕೈಸೋತರೂ ಸುದಿನಗಳಿಗಾಗಿ ಕಾಯುತ್ತಾ, ಕಾಯುತ್ತಾ
ಒಂದೊಂದೇ ಅಧ್ಯಾಯ ಮುಗಿಸಿ,
ಹೊತ್ತು ಏರಿದರೂ, ಇಳಿದರೂ
ಮುಂದೆ–ಮುಂದೆ ಸಾಗುತ್ತಾ
ಹೊತ್ತುಗೆಯ ಕೊನೆಗೆ ಬಂದರೂ
ಹಗಲೂ ಇರುಳಾಗಿ, ಇರುಳೂ ಇರುಳಾಗಿ
ಮರುಳಾಗಿ ಕಾಯುವ ಹಗಲಿನಲ್ಲೂ
ಇರುಳೇ ಮುಸುಕಿ ಏನೂ ಕಾಣದಾಗಲು,
ನಿರೀಕ್ಷೆ ನಿಡಿದಾಗುತ್ತಲೇ ಹೋಯಿತು.

ಬಯಸಿದ ಹಗಲು ಬರಲಿಲ್ಲ;
ಇರುಳು ಮತ್ತು ಉದ್ದವಾಗುತ್ತಲೇ ಹೋದಾಗ
ಕಣ್ಣಿಗೆ ಕತ್ತಲೆ, ಮನಸ್ಸೆಲ್ಲಾ ಬತ್ತಲೆಂಯೋ ಬತ್ತಲೆ!

■

# ಘನ ಸರ್ಕಾರ

ಹಗಲೆಲ್ಲಾ ದುಡಿ-ದುಡಿದು ಹಣ್ಣಾಗುವರಿವರು
ಇರುಳೆಲ್ಲಾ ಕುಡಿ-ಕುಡಿದು ಮಣ್ಣಾಗುವರು
ಸತ್ತರೂ ಚಿಂತಿಲ್ಲ ಇವರಿಗೆ, ಕುಡಿಯಲೇಬೇಕು
ಊಟಕಿಲ್ಲದಿದ್ದರೂ ನಡೆದೀತು
ಕುಡಿಯದಿದ್ದರೆ ಆದೀತೆ?
ರೋಗಕ್ಕೆ ಗುರಿಯಾಗಿ, ಸಾವಿಗೆ ತುತ್ತಾಗಿ
ಜನರೆಲ್ಲರೂ ಬೀದಿ ಪಾಲಾದರೂ ಪರವಿಲ್ಲ
ಅಬಕಾರಿ! ಸರ್ಕಾರಕ್ಕೆ ಬಹು ದೊಡ್ಡ ಆದಾಯ!

ಹೀಗೆ ಹಣ ಪಡೆದು ಸರ್ಕಾರ,
ದವಾಖಾನೆಗಳ ತೆಗೆಯಬೇಕು
ಬಡವರಿಗೊಂದು ಸೂರು ನೀಡಬೇಕು
ಬಡವರ ಮಕ್ಕಳಿಗೆ ಶಾಲೆ ತೆರೆಯಬೇಕು
ಇದಕೆಲ್ಲ ಹಣ ಎಲ್ಲಿಂದ ಬರಬೇಕು?
ಅದಕ್ಕೆಂದೇ ಗಾಂಧಿ ತಾತನ 'ಪಾನ ನಿರೋಧವ'
ವಿರೋಧಿಸಿ, ಗಲ್ಲಿಗೆರಡು ಸೇಂದಿಯಂಗಡಿಗೆ
ಪರ್ಮಿಟ್ಟು ಕೊಟ್ಟಿದೆ, ಘನ ಸರ್ಕಾರ

ಸೇಂದಿಯಂಗಡಿಯಿಂದ ಬಂದ ಆದಾಯದಿಂದ
ಎಷ್ಟೊಂದು ಸೌಲಭ್ಯಗಳು ಬಡವರಿಗೆ ದೊರೆತಿಹವು!
ಅದೆಲ್ಲದರ ಲೆಕ್ಕ ಪತ್ರ, ದಿನವೂ ಟಿ.ವಿ.ಯ
ವರದಿಯಲಿ ಬಿತ್ತರಿಸುವಾಗ
ಜನತಾ ಮನೆಗಳಲಿ ಕೂಲಿಗಳು ಕುಡಿದು ಸಾಯುತ್ತಿದ್ದರೆ,
ಅವರ ಹೆಂಡತಿ ಮಕ್ಕಳು
ಸರಕಾರಿ ದವಾಖಾನೆಗಳಲಿ, ಕೊನೆಯುಸಿರೆಳೆಯುತ್ತಿರುತ್ತಾರೆ.

■

## ಇಂದೇನಾಗಿದೆ ಈ ಭಾರತೀಯರಿಗೆ?

ಇಂದೇನಾಗಿದೆ ಈ ಭಾರತೀಯರಿಗೆ?
ಸ್ವಾರ್ಥಕ್ಕಾಗಿ ದೇಶವನೇ ದುಸ್ಥಿತಿಗೆ ದೂಡುತಿಹರಲ್ಲ!
ನಮ್ಮದಾದ ದೇಶ ಪರಕೀಯರ ಪಾಲಾದಾಗ
ಭಾರತೀಯರು ಅನುಭವಿಸಿದ ಗೋಳೆಷ್ಟು?
ಹೋರಾಡಿ ಹಿಂಪಡೆದಾಗ
ಗಾಂಧೀಜಿ ಬಯಸಿದ್ದ ಬಯಕೆಗಳೆಷ್ಟು?
ಇಂದು ಭಾರತೀಯರು ಹಿಡಿದಿರುವ ಹಾದಿ ಯಾವುದು?

ಅಂದು ದೇಶಕ್ಕಾಗಿ ಮಾಡಿದ ಜನರ ತ್ಯಾಗವೆಷ್ಟು?
ಮಡಿದು, ಮಣ್ಣಾಗಿ ಹೋದ, ದೇಶಪ್ರೇಮಿಗಳೆಷ್ಟು?
ದೇಶ ಹೆಚ್ಚೆಂದು, ಮಡಿದ-ಮಕ್ಕಳ ಕಡೆಗಣಿಸಿ
ಹೊಟ್ಟೆಗೂ ಹಿಟ್ಟಿಲ್ಲದೆ ಹೋರಾಡಿದ ಜೀವಿಗಳ
ನೋಡುಬೇಕಿತ್ತು ಈ ಜನ! ಆಗಾದರೂ ತಿಳಿಯುತ್ತಿತ್ತು ಈ ನಾಡ ಕಿಮ್ಮತ್ತು!

ಪರತಂತ್ರದಲ್ಲಿದ್ದ ಜನ, ಪ್ರಾಣ ಪಣಕಿಟ್ಟು
ದೇಶಕ್ಕಾಗಿ ಹೋರಾಡಿ, ಪಡೆದ ನಾಡ,
ಸ್ವತಂತ್ರ ಭಾರತದ ಜನ, ಸ್ವಾರ್ಥಕ್ಕಾಗಿ
ಅನ್ಯರ ಪ್ರಾಣ, ಮಾನ ತೆಗೆದು
ದೇಶವನೆ ಮಾರಿ-ತೂರಿ,
ಬಗಿದು ಬಾಚಿಕೊಳ್ಳುತಿಹರು
ಕೂಡಿಹಾಕಿಕೊಂಡಿಹರು ಅನ್ಯಾಯದ ಹಣ
ಮೋಸ-ವಂಚನೆಗೈದು, ಹೆಚ್ಚಿಸುತಿಹರು ದೇಶದ ಋಣ.

ದೊಡ್ಡ ಸ್ಥಾನದಲಿ ಇರುವ, ಪದವಿ ಮೇಲೆ ಪದವಿ ಪಡೆದ,
ಬ್ರಹ್ಮಾಂಡವಾಳುವ ಬುದ್ಧಿ ಇರುವ,
ಚಾಣಾಕ್ಷ ರಾಜಕಾರಣಿಗಳು, ಮೇಧಾವಿ ಅಧಿಕಾರಿಗಳು

ದೇಶದ ಹಣವ ಕೋಟಿ-ಕೋಟಿ ಲೂಟಿ ಮಾಡುತಿಹರು
ಬೊಕ್ಕಸಕ್ಕೆ ತೂತು ಕೊರೆದು, ಬಾಚಿ-ಬಳಿದು ಖಾಲಿಯಾಗಿಸುತಿಹರು!

ತಮಗಾಗಿ ದೇಶ; ದೇಶಕ್ಕಾಗಿ ತಮ್ಮದೇನಿಲ್ಲ
ಎಂಬಂತೆ ನಡೆಯುತ, ನೆರೆ ಬಂದರೂ ಸರಕಾರಕ್ಕೇ ಹೊರೆ
ಮಳೆ ಹೋದರೂ ದೇಶವೇ ಹೊಣೆ
ಭೂಕಂಪಿಸಿದರೂ, ಜನಸತ್ತರೂ-ಹುಟ್ಟಿದರೂ
ಜನಬಿದ್ದರೂ-ಎದ್ದರೂ, ಸರಕಾರ ಕಾರಣವೆಂಬ ದೂಷಣೆ!
ಎಲ್ಲದಕ್ಕೂ ಸರ್ಕಾರ ಕಟಿಬದ್ಧವಾಗಿರಬೇಕು.!
ಪ್ರಜೆಗಳ ಹೊಣೆಗಾರಿಕೆ ಏನಿಲ್ಲ ಎಂಬಂತೆ
ಕೂಗಾಡಿದಾಗ ಆಗುವುದು ಸರಕಾರ ಅಸಹಾಯ.
ಬೀಸುವ ದೊಣ್ಣೆ ತಪ್ಪಿಸಿಕೊಳ್ಳಲು,
ಸಮಿತಿಯ ಮೇಲೆ ಸಮಿತಿ ಯೋಜನೆಯ ಸಾಲು-ಸಾಲು
ರಾಜಕಾರಣಿಗಳ, ಹಾರಾಟವಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ
ಇದಕ್ಕೂ ಬೊಕ್ಕಸಕ್ಕೇ ಕತ್ತರಿ, ಕೊನೆಗೆ
ಶ್ರೀ ಸಾಮಾನ್ಯಗೆ ದೊರೆಯುವುದೊಂದು ದೊಡ್ಡ ಸೊನ್ನೆ.

■

## ದುಡುಕದಿರು

ಎಲೆ ಹುಡುಗಿ, ಓಡುತಿಹೆ ಎಲ್ಲಿಗೆ?
ನಿಲ್ಲು ಅಲ್ಲೆ! ದುಡುಕದಿರು ಚೆಲುವೆ.
ದುಡುಕಿದರೆ ಮಿಡುಕುವಂತಾದೀತು ಮುಂದೆ!
ನಡೆ ನಿಧಾನವಾಗಿ, ಇಲ್ಲದಿರೆ,
ಬಿದ್ದು ಬಿಡಬಹುದು ಜೋಕೆ!
ಮುರಿದುಕೊಂಡಾವು ಕಾಲು
ಉದುರ್‍ಯಾವು ಹಲ್ಲು!

ಸುತ್ತಲೆಲ್ಲಾ ಕಣ್ಣು ಹಾಯಿಸಿ ನೋಡು,
ನಿನ್ನನ್ನು ಕತ್ತಲೆಯಲಿ ಕೊಳೆವಂತೆ
ಮಾಡಿದವರಲ್ಲಿ ಕೆಲವರು ಇಂದು, ನೀನು
ಬೆಳಕಿಗೆ ಬರುವಂತೆ ಮಾಡುತಿಹರು
ನಿನಗ್ಯಾರಾದರೂ ಕೆಡುಕ ಮಾಡಿದರೆ
ಅವರ ಬೆನ್ನು ಮೂಳೆಯನೆ ಮುರಿವ
ಕಾಯಿದೆ ತಂದಿಹರು
ಸಂಘ ಕಟ್ಟಿ, ನಿನ್ನ ಬೆನ್ನೆಲುಬಾಗಿ ನಿಂದಿಹರು!

ಇಂತಹ ಬೆಂಬಲವೆಲ್ಲಾ ನಿನಗಾಗಿ ಇರಲು
ನೀನಂಜದೆಯೆ ಮುನ್ನಡೆಯಬಹುದು;
ಅನ್ಯಾಯವ, ಅಂಜದೆಯೆ ಎದುರಿಸಬಹುದು.

ಆದರೊಂದೇ ಎಚ್ಚರ ನಿನಗೆ!
ಬೆಂಬಲವಿದೆಯೆಂದು, ನೀ
ತಪ್ಪಿ ನಡೆದೀಯೆ ಜೋಕೆ!
ನೀ ತಪ್ಪು ಹೆಜ್ಜೆ ಹಾಕಿದರೆ,
ನಿನ್ನ ಮಕ್ಕಳು, ಆ ಹೆಜ್ಜೆಯ ಮೇಲೆಯೇ

ಹೆಜ್ಜೆ ಹಾಕಿ, ದಾರಿ ತಪ್ಪಿ,
ಗುರಿ ಜಾರಿ ಹೋದೀತು ಮುಂದೆ!

ಇರುವ ಬೆಂಬಲ ಒಳಿತಿಗಾಗಿ ಬಳಸಿಕೊ
ಬಾಳನೆ ಸಗ್ಗವಾಗಿ ಮಾಡಿಕೊ
ಅದಕಾಗಿಯೇ ಹೇಳುತಿಹೆ ನಾನು
ದುಡುಕದಿರು, ದುಡುಕಿದರೆ, ಮಿಡುಕಬೇಕಾದೀತು ಎಂದು!

■

## ಏಳು-ಬೀಳು

ವಿವಾಹವೊಂದು ಸಾಮಾಜಿಕ ಬಂಧನ
ಆ ಬಂಧನ ಆದರೆ ಪ್ರೀತಿಯ ಅನುಬಂಧ
ಆಗುವುದು ಜೀವನ ನಂದನ.

ತಾಳಮೇಳವಿಲ್ಲದ ಬಾಳು ಬರಿಹಾಳು
ಒಂದು ಒಗ್ಗಾಲು ಇನ್ನೊಂದು ಮುಗ್ಗಾಲು
ಇಲ್ಲದಿದ್ದರೆ ಒಂದು ಸರಿ ಮತ್ತೊಂದು ತಪ್ಪು
ಆಗ ಜೀವನ ಬರಿ ಗೋಳು.

ಒಂದು ಕೈ, ಚಪ್ಪಾಳೆ ಇಕ್ಕಬೇಕೆಂದು
ಹೊಯ್ದಾಡಿದರೂ, ಚಡಪಡಿಸಿದರೂ
ಆಗದದು ಚಪ್ಪಾಳೆ, ಬರೀ ಹೊಯ್ದಾಟ
ಒಂದೇ ಕೈ ಬಳಲಿ, ಬೆಂಡಾಗಿ
ಬೀಳಬೇಕಾದೀತು ಸೋತು ಸುಣ್ಣವಾಗಿ

ಎತ್ತು ಏರಿಗೆಳೆದು, ಎಮ್ಮೆ ನೀರಿಗೆಳೆದಾಗ
ನೀರಿಲ್ಲ-ನೆಲವಿಲ್ಲ, ಏರಲಿಲ್ಲ ಇಳಿಯಲಿಲ್ಲ
ಈ ಪರಿಯ ಬಾಳು ನರಕಕ್ಕಿಂತ ಕೀಳು!
ದುರ್ಭರ ಬಾಳಿಗಿಂತ ಒಂಟಿತನವೇ ಮೇಲು
ಪರಸ್ಪರ ಹಿತವಿಲ್ಲದಿಹ ಬಾಳು ಜೀವನವೆಲ್ಲಾ ಏಳು-ಬೀಳು.!

■

## ಭಾರತದ ರಾಜಕಾರಣ

ಭಾರತದ ರಾಜಕಾರಣದಲಿ ಶಿಷ್ಟರಾಜಕಾರಣಿ
ಭ್ರಷ್ಟನಾಗುತಿಹನು; ಆಗದಿರೆ ಅವಗೆ ಉಳಿಗಾಲವಿಲ್ಲ.
ಎಷ್ಟೇ ಗಟ್ಟಿಯಗಿ ನಿಂತರೂ ಉಳಿದವರು ಬಿಡಬೇಕಲ್ಲ!
ಜಂಘಾಬಲವನೇ ಉಡುಗಿಸಿಬಿಡುವರಲ್ಲ!
ಧೈರ್ಯದಿ ಹೋರಾಡಿದರೂ, ತತ್ತರಿಸುವಂತೆ ಮಾಡುವರಲ್ಲ!
ಹೆಣಗಾಡಿ, ಹೆಣಗಾಡಿ ಬೇಸತ್ತು.
ಶಿಷ್ಟರಾಜಕಾರಣಿಯೂ ಭ್ರಷ್ಟರಿಗೆ
ಬೆಂಬಲ ನೀಡುವಂತೆ ಆಗುತ್ತಿದೆಯಲ್ಲಾ!
ರಾಜಕಾರಣಿಗಳೇ! ಏಕಾಡುತಿಹಿರಿ ಈ ದೊಂಬರಾಟ!
ನಿಮ್ಮ ಗೊತ್ತು ಗುರಿಗಳ ಪರಿಚಯವೇ ಇಲ್ಲವೆ ನಿಮಗೆ?
ನೀವು ಸಾಗುತಿರುವಾ ದಾರಿ, ದೇಶವನೆಲ್ಲಿಗೆ
ಒಯ್ಯುತಿದೆಯೆಂಬ ಅರಿವಾದರೂ ಇದೆಯೆ ನಿಮಗೆ?
ಇಲ್ಲದಿರೆ ಈ ಮಾರ್ಗಕೆ ಬಂದಿರಾದರೂ ಏಕೆ?
ನಿಮ್ಮ ಗುರಿ, ಆಳುವ ಪಕ್ಷವ ಕೆಳಗಿಳಿಸಿ,
ಗದ್ದುಗೆಯ ಮೇಲೆ ನಿಮ್ಮ ಪಕ್ಷವ ಏರಿಸುವುದಲ್ಲ;
ನಿಮ್ಮ ಟೀಕೆ-ಟಿಪ್ಪಣಿಗಳು, ಆರ್ಭಟ-ಹೋರಾಟಗಳು
ಆಳುವ ಸರ್ಕಾರವ ಬೀಳುವಂತೆ ಮಾಡುವುದಕಲ್ಲ;
ಅದು ಹಳಿತಪ್ಪಿದಾಗ, ತರಾಟೆಗೆ ತೆಗೆದುಕೊಂಡು
ದಾರಿಗುಂಟ ಹೋಗುವಂತೆ ಮಾಡಬೇಕು.
ಸರಿದಾರಿಯಲಿ ನಡೆದಾಗ, ಜೊತೆಗೂಡಿ ನಡೆಯುತ್ತಾ
ದೇಶದುನ್ನತಿಯ ಸಾಧಿಸಲು, ಸಮಸ್ಯೆಗಳ ಬಗೆಹರಿಸಲು
ಭುಜಕ್ಕೆ ಭುಜಕೊಟ್ಟು ನೆರವಾಗುವಾ
ಗುರಿಯ ನೀವು ಮುಂದಿಟ್ಟುಕೊಳ್ಳಬೇಕು.

ರಾಜಕಾರಣಿಗಳೇ ನಿಮ್ಮ ಪಕ್ಷದ ಗೆಲುವಿಗಾಗಿ
ದಯವಿಟ್ಟು ದೇಶವ ಒಡೆಯಬೇಡಿ.
ಗಡಿ, ಭಾಷೆ, ಜಾತಿ, ಮೀಸಲಾತಿಗಳ

ಮುಂದೆ ಮಾಡಿ, ಜನರ ಅಭಿಮಾನವ ಕೆರಳಿಸಿ
ಹೋರಾಟಕೆ ಹಚ್ಚಿ, ಅದರ ಲಾಭ ನೀವು ಪಡೆಯಬೇಡಿ!
ಮುಗ್ಧ ಜನರಲ್ಲಿ ಜಗಳ ಹಚ್ಚಿ ಅವರ ಮುಂದೆದೂಡಿ
ನೀವು ಸೆಕ್ಯೂರಿಟಿಯೆಂಬ ಕೋಟೆಯೊಳಗೆ
ಸುರಕ್ಷಿತವಾಗಿ ಚೆನ್ನಾಟವಾಡುತ್ತಾ,
ಸಾಮಾನ್ಯರ ಭಾವನೆಗಳ ಬೆದಕಿ,
ಜನರು ಮುನ್ನುಗ್ಗಿ ಹೋಗಿ ಬಲಿಯಾಗುವಂತೆ ಮಾಡಬೇಡಿ!

ಓಟುಗಳಿಸಿ ಗದ್ದುಗೆ ಏರಲು,
ತಾರತಮ್ಯವಿಲ್ಲದೆ, ದೂರದೃಷ್ಟಿ ಇಲ್ಲದ
ಸವಲತ್ತು ಜನಕೆ ಕೊಟ್ಟು
ಅವರಿಗಿಲ್ಲವಾಗಿದೆ ಇಂದು ಜವಾಬ್ದಾರಿ.
ಹಕ್ಕುಗಳಿಗೆ ಹೋರಾಡಿ
ಸ್ವಾರ್ಥಕೇ ಮಹತ್ವವಿತ್ತು
ಲಾಭ ದೃಷ್ಟಿಯ ಪ್ರಜೆಯ ಬೆಳೆಸಿದಿರಿ
ದೇಶದ ತುಂಬೆಲ್ಲಾ ಮೆಹತಾಗಳ ಮೆರೆಸಿ
ವೀರಪ್ಪನ್‌ಗಳ ಸೃಷ್ಟಿಸಿ
ಕುರುಕ್ಷೇತ್ರಕೆ ದಾರಿಮಾಡಿ
ಧರ್ಮರಾಯರುಗಳ ವಧೆ ಮಾಡುತ್ತಿದ್ದೀರಿ!

ಚುನಾವಣೆಗಳಲಿ ಹಣದ ಹೊಳೆಹರಿಸಿ
ಸ್ವಾರ್ಥಿಗಳ, ಅಜ್ಞಾನಿಗಳ ಓಟು ಪಡೆದು
ಗದ್ದುಗೆ ಏರಲು, ಭ್ರಷ್ಟಾಚಾರಕೆ ಶಿಷ್ಟಾಚಾರದ ರೂಪಕೊಟ್ಟು
ನ್ಯಾಯಕೆ ಎಲ್ಲೆಡೆ ಪೆಟ್ಟುಕೊಟ್ಟು,
ಭ್ರಷ್ಟಾಚಾರವೆಲ್ಲೆಡೆ ತಾಂಡವವಾಡುವಂತೆ ಮಾಡಬೇಡಿ!
ರಾಷ್ಟ್ರಕೆ ಬೆಂಕಿಹಚ್ಚಿ ಆ ಉರಿಯಲಿ
ನಿಮ್ಮ ಬೇಳೆ ಬೇಯಿಸಿಕೊಳ್ಳದೆ
ನೀತಿಯುತ ಬಾಳ ಬದುಕಿ
ವಿಶ್ವದಲಿ ಭಾರತ ಹೆಮ್ಮೆಯಿಂದ
ತಲೆ ಎತ್ತಿ ನಿಲ್ಲುವಂತೆ
ಪ್ರತಿಪ್ರಜೆಯೂ ತನ್ನಳಿಲ ಸೇವೆ ಸಲ್ಲಿಸಿ
ಗಾಂಧೀಜಿಯ ಕನಸು–ನನಸ ಮಾಡಲು
ನಡೆಯಿರಿ ಮುಂದೆ ನಡೆಯಿರಿ

■

## ಕೊಟ್ಟದ್ದು ತನಗೆನ್ನಬೇಡ

ಅವಳೊಂದು ಒಲೆಯನು ಹೂಡಿ
ಅಡಿಗೆಯ ಮಾಡಿ, ಬಡಿಸಿದಳು ಬೇಡಿ ಬಂದವರಿಗೆಲ್ಲಾ!
ಬಂದವರೆಲ್ಲಾ ಉಂಡುಟ್ಟು ನಲಿದು
ತಮ್ಮ ಒಲೆಯ ಹತ್ತಿಸಿಕೊಂಡು
ಮುಂದೆ ಉಣಲು ಬೇಕೆಂದು
ಅವಳ ಒಲೆಯಿಂದ ಉರಿಯುತಿದ್ದ
ಕೊಳ್ಳಿಗಳನೂ ಎಳೆದುಕೊಂಡು
ಹೋದರವರವರ ಮನೆಗೆ.
ಉರಿಯಿತಿಹ ಒಲೆಯ ಕೊಳ್ಳಿಗಳನು
ಒಯ್ದು, ಬರಿದು ಮಾಡಿದರು ಈಕೆಯ ಒಲೆಯ!
ಈಗವಳಿಗಿಲ್ಲವಾಯ್ತು ಅಟ್ಟುಣ್ಣಲುರಿಯು.
ಬಾ ಎನ್ನಲಿಲ್ಲ, ಉಣಬಡಿಸಲಿಲ್ಲ,
ಕೊಂಡು ಹೋದ ಕೊಳ್ಳಿಯಿಂದ ತಮ್ಮ
ಬೇಳೆ ಬೇಯಿಸಿಕೊಂಡು, ಇನ್ನೂ
ಧಗ ಧಗನೆ ಒಲೆತುಂಬಾ ಉರಿಯುತ್ತಾ ಇದ್ದರೂ
ಕೊಳ್ಳಿಗಳಲೊಂದನೂ 'ಕೊಳ್ಳು'
ಎಂದು ಅನಲಿಲ್ಲ, 'ಬಂದ ದಾರಿಗೆ
ಸುಂಕವಿಲ್ಲದೆ' ಹಿಂತಿರುಗಿ ಹೋಗುವುದ ಕಂಡು,
ಕೊಂಡು ಹೋದವರಿಗೆಲ್ಲಾ,
ಒಂದು ತರಹದ ಹಿಗ್ಗೋ ಹಿಗ್ಗು!

ತಾನೇ ಎಲ್ಲರಿಗೂ ಕೊಡುವವಳೆಂಬಂತೆ
ಬೀಗುತ್ತಿದ್ದಳಲ್ಲಾ, ಈಗವಳೇ
ಬೇಡುವಂತಾಗಿ ನಮ್ಮ ಮನೆ ಬಾಗಿಲ ತಟ್ಟುವಂತಾಯ್ತಲ್ಲಾ ಎಂದು.
ಕೈಗಳ ತಟ್ಟುತ್ತಾ ಹಿಗ್ಗುವುದ ನೋಡಿದಳು
ಇದ ಕೇಳಿದಾ ಆಕೆ

ನಾನವರ ಒಲೆಗಳ ಹತ್ತಿಸಲು
ಕೊಳ್ಳಿಗಳ ಕೊಡದಿದ್ದರವರು
ಇಂದು ಚಪ್ಪಾಳೆ ತಟ್ಟಿ ನಗುತ್ತಿರಲಿಲ್ಲ.
ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ ಎನ್ನುವರಲ್ಲಾ
ನನ್ನುದಾರತೆಯೇ ನನಗೆ ಮುಳುವಾಯಿತಲ್ಲ ಎನ್ನುತ್ತಾ
ಮರ ಮರನೆ ಮರಗುತ್ತಾ ಮುಂದೆ ಸಾಗಿದಳು.

■

## ಭಾರತೀಯ ಮೌಲ್ಯ

ಮಾರು ಹೋದರು ಭಾರತೀಯ ಮೌಲ್ಯಗಳಿಗೆ, ಸಂಸ್ಕೃತಿಗೆ,
ಪಾಶ್ಚಾತ್ಯ ದೇಶಗಳ ನಿವೇದಿತ, ಅನಿಬೆಸೆಂಟರು
ಬಂದರವರಿಲ್ಲಿಗೆ ಬಾಯಾರಿ, ಅಧ್ಯಾತ್ಮದ ಅರವಟ್ಟಿಗೆಯಲಿ
ಗಂಟಲ ತಣಿಸಿಕೊಳ್ಳಲೆಂದು!
ಆದರಿಲ್ಲಿಗೆ ಬಂದ ಅವರು,
ಭಾರತೀಯರ ನೋಡಿ ದಂಗಾದರು
ಉತ್ತರದಿಂದ ದಕ್ಷಿಣಕೂ ಧಾವಂತದಿ ಧಾವಿಸಿ
ಭಾರತೀಯರ ಕಣ್ಣು ತೆರಸಲೆತ್ನಿಸಿದರು.
ತಮ್ಮಲ್ಲೆ ಇರುವ ಪುರಾತನ ಅಮೂಲ್ಯ ರತ್ನಗಳ
ಅಗೆದು ಹೊರತೆಗೆದು
ತೊಡಿಗೆಗಳಿಂದಲಂಕರಿಸಿ ಜಗದ
ಮೌಲ್ಯಗಳ ಸ್ಪರ್ಧೆಯಲಿ
ಪ್ರಥಮ ಸ್ಥಾನ ಪಡೆಯಲು ತಿಳಿಯ ಹೇಳಿದರು.
ಭಾರತೀಯರಿಂದು ತಮ್ಮತನವನೆ ಮರೆತು
ಮುತ್ತು ರತ್ನಗಳ ತೆಗೆಯದೆ
ಕಲ್ಲು–ಕಡ್ಡಿ, ಮುಳ್ಳು–ಕಂಟಿಗಳನಗೆಯುತಿಹರು!
ಸ್ಪರ್ಧೆಯಲಿ ಮೊದಲ ಸ್ಥಾನದಲ್ಲಿದ್ದ
ಭಾರತ, ಇಂದು ನಿಂತಿದೆ ಕೊನೆಯ ಕೊಂಡಿಯಾಗಿ
ಆ ಕೊಂಡಿಯೂ ಬಾಯ್ಬಿಟ್ಟುಕೊಂಡಿದೆಯಾಗಿ,
ಬಹುಶಃ ಕಡೆಯ ಸ್ಥಾನವೇ ಇದಕೆ ಗತಿಯಾದೀತೆನೋ!

ದೇಶದ ಬೆಲೆ ಪ್ರಜೆಗಳಿಗೆ ಗೊತ್ತಿಲ್ಲ
ದೇಶ ಹಾಳಾದರೆ ತಮ್ಮ ಸರ್ವನಾಶವೆಂಬ ಅರಿವಿಲ್ಲ;
ಜನತೆಗೆ ಸ್ವಾರ್ಥದ ಕಾರ್ಮೋಡ ಮುಸುಕಿ
ಹಣ ಮಾಡುವ, ಮಜಾ ಮಾಡು ಎಂಬ
ತತ್ವ ಬೆಳೆಸಿಕೊಂಡು,

ದೇಶಕೇನಾದರೂ ಆಗಲಿ ಎಂತಾದರೂ ಆಗಲಿ
ತಾನು ಮಾತ್ರ ಮೆರೆಯಬೇಕೆಂಬ ಆಸೆಯಲಿ,
ಮನಬಂದಂತೆ ಬದುಕುತ್ತ, ಪಾತಾಳಕ್ಕೆ ಜಾರುತ್ತ
ತಮ್ಮೊಡನೆ ದೇಶವನೂ ಮುಳುಗಿಸುತ್ತಿರುವೆವೆಂಬ ಅರಿವಿಲ್ಲದೆ,
ದೇಶಪ್ರೇಮಿಗಳು ಕಟ್ಟಿದ ನಾಡಿಗೆ ದ್ರೋಹವನೆ ಬಗೆದು,
ಮೆಲ್ಲ ಮೆಲ್ಲಗೆ ಮಾತೃಭೂಮಿಯ
ಮುಳುಗಿಸುತಿಹರು ಮೇಲೇಳದಂತೆ!

## ಸಹವಾಸ

ಸಹವಾಸ ಸನ್ಯಾಸಿ ಕೆಡಿಸುತ್ತ ಅಂತಾರೆ
ದುಷ್ಟ ಹೆಂಡತಿ ಅಥವಾ ಗಂಡ ಸಿಕ್ಕರೆ,
ಅವರಿಂದ ದೂರಿರ್ಬೇಕು ಹೆಂಗೆ?
ಅಂತಹವರ್ನೆಲ್ಲಾ ದೂರವಿಡೋಕಾಗುತ್ತಾ ನಿಂಗೆ?

■

## ಪರದೇಶಿ

ಇಂದಿನ ವಿದ್ಯಾವಂತರ ಮಕ್ಕಳೆಲ್ಲಾ
ಪರದೇಶದಲ್ಲಿ ನೆಲಸಿ 'ಪರದೇಶಿ' ಗಳಾದರೆ
ಅವರ ಪಾಲಕರು ತಮ್ಮ ದೇಶದಲ್ಲೇ
'ಪರದೇಶಿ'ಗಳಂತೆ ಬದುಕುತ್ತಿದ್ದಾರೆ!

■

## ಕೈ ತುಂಬಾ ಬೇಕು

ಬರುವಾಗ ಬರಿಗೈಲಿ ಬರುವೆವಲ್ಲ;
ಹೋಗುವಾಗ ಏನೂ ಒಯ್ಯಲು ಆಗುವುದೇ ಇಲ್ಲವಲ್ಲ;
ಇವೆರಡರ ಮಧ್ಯೆ ಇರುವಾಗ ಕೈ ತುಂಬಾ ಇರಬೇಕೆಂದು
ಹೆಣಗುವ ಮೂರ್ಖತನವ ಬಿಡಲಾರೆವಲ್ಲಾ!

■

## ಬವಣೆಯ ನೀಗಿಸುವವರು ಯಾರು?

ಹೊಲಸು ರಾಜಕೀಯ ಹುಲುಸಾಗಿ ಬೆಳೆದು,
ಜಾತಿ, ಮೀಸಲಾತಿಗಳ ಹೆಸರಿನಲ್ಲಿ
ಅಲ್ಪಸಂಖ್ಯಾತರು, ಬಹುಸಂಖ್ಯಾತರೆಂಬ ಪಟ್ಟಭದ್ರಹಿತಾಸಕ್ತಿಯಲಿ
ಮೈದಾನ–ಮಂದಿರಗಳ ಒಡೆತನಕ್ಕೆಂದು
ಜನರ ಮನಸ ಒಡೆದು, ವಿಷಬೀಜ ಬಿತ್ತಿ
ಆ ಬೀಜ ಮೊಳಕೆಯೊಡೆದು ಹೆಮ್ಮರವಾಗುವಂತೆ
ನೀರು–ಗೊಬ್ಬರ ಮೇಲಿಂದ ಮೇಲೆ ಕೊಟ್ಟು
ಜನರೆಲ್ಲಾ ವಿಷದ ಫಲವ ಉಣ್ಣುವಂತೆ
ಮಾಡುತ್ತಿರುವಾಗ ಬದುಕಬೇಕೆಂತು ಅವರು?
ಚುನಾವಣೆಯ ಗೆದ್ದ ಪ್ರಜಾಪ್ರತಿನಿಧಿಗಳು
ರಾಜ್ಯದಲ್ಲಿ, ಕೇಂದ್ರದಲ್ಲಿ
ಅವರು ಮಾಡಬೇಕಾದ ಕಾರ್ಯಗಳಿಗೆಂದು
ಪಡೆವ ಸೌಲಭ್ಯ, ಸಂಪತ್ತು, ಸವಲತ್ತುಗಳೆಷ್ಟು?
ಆಗ ರಾಜ್ಯಕೊಬ್ಬ ರಾಜನಿದ್ದ;
ಈಗ ಊರಿಗೊಬ್ಬ, ರಾಜನನ್ನೂ ಮೀರಿಸುವ
ಪ್ರಜಾಪ್ರತಿನಿಧಿ! ದೋಚುತಿಹನು ಪ್ರಜರ ನಿಧಿ!
ಇಷ್ಟೆಲ್ಲಾ ಪಡೆದು ಅವರು ಮಾಡುತಿಹುದೇನು?
ಕಟ್ಟಿದುದನೆಲ್ಲಾ ಕೆಡಹುತಿಹರು;
ಒಂದಮಾಡ ಹೋಗಿ ಒಂಭತ್ತಮಾಡಿ
ಒಂದಕೊಂದು ಕೂಡಿ, ಗೊಂದಲ ಹೂಡಿ
ಅಮೃತ ವಿಷವಾಗುತಿಹುದು;
ಒಳ್ಳೆಯದು ಕೆಟ್ಟರೂಪ ತಾಳುತಿಹುದು;
ಹೊರಗೆ ಥಳುಕು; ಒಳಗೆ ಕೊಳಕು ಹರಡಿ,
ಒಳಿತು–ಕೆಡುಕಗಳ
ಬೇರ್ಪಡಿಸಲೇ ತೊಡಕಬಿಡಿಸಿ, ಕೆಡುಕನೆಲ್ಲಾ ಗುಡಿಸಿ
ಭಾರತದ ಬವಣೆಯ ನೀಗಿಸುವವರು ಯಾರು?

■

## ಹುಟ್ಟು ಹಬ್ಬದ ಶುಭಾಶಯಗಳು

ಶುಭಾಶಯ, ಶುಭಾಶಯ, ನಿನ್ನ
ಹುಟ್ಟು ಹಬ್ಬಕೆ ನಮ್ಮೆಲ್ಲರ ಶುಭಾಶಯ!
ಸಹೃದಯದ ಮೃದುಮಾತಿನ
ಸೌಜನ್ಯದ ಮೂರ್ತಿ ನೀನಾಗೆಂದು
ಎಲ್ಲೆಡೆ ನಿನಗೆ ಜಯ ಸಿಗಲೆಂದು
ನೀ ಹಿಡಿದುದು, ಹೊನ್ನಾಗಲಿ ಎಂದು
ಆಸಿಪೆವು ಇಂದು ನಿನ್ನ ಹುಟ್ಟು ಹಬ್ಬದ ದಿನದಂದು.

ಅದೃಷ್ಟವು ನಿನ್ನನರಸಿ ಬರಲಿ ಎಂದು
ಗುರು-ಹಿರಿಯರೆಲ್ಲರ ಹರಕೆ ನಿನಗಿರಲಿ ಎಂದು
ಸದ್ಗುಣವು ನಿನ್ನಲಿ ತುಂಬಿರಲಿ ಎಂದು
ಕೆಡುಕಾದುದು ನಿನ್ನ ಬಳಿ ಸುಳಿಯದಿರಲಿ ಎಂದು
ಹಾರೈಸುವೆವು ನಿನ್ನ ಹುಟ್ಟು ಹಬ್ಬದ ದಿನದಂದು.

ಉನ್ನತ ಸ್ಥಾನ-ಮಾನ ದೊರೆಯಲಿ ಎಂದು
ಉತ್ತಮ ಸ್ನೇಹವು ದೊರಕಲಿ ಎಂದು, ಎಲ್ಲರ ಕಣ್ಮಣಿ ನೀನಾಗೆಂದು,
ಆ ದೇವನು ನಮ್ಮ ಈ ಬಯಕೆಯ ಈಡೇರಿಸಲೆಂದು
ಬೇಡುವೆವು ನಿನ್ನ ಈ ಹುಟ್ಟು ಹಬ್ಬದ ದಿನದಂದು.

■

## ಬಹುಜನರ ಬದುಕಂತೆ

ಕೈ ಕೆಸರಾಗದೆ ಬಾಯಿ ಮೊಸರಾಗಬೇಕು!
ದುಡಿಯದೆ ಕೈ ತುಂಬ ದುಡ್ಡು ಬರಬೇಕು!
ಮಾತಿನಲ್ಲಿ ಹರಿಶ್ಚಂದ್ರನ ತುಂಡೇನೋ ಎಂಬಂತೆ,
ಧರ್ಮರಾಯನ ಅಪರಾವತಾರವೆಂಬಂತೆ ಕಾಣಿಸಿಕೊಳ್ಳುತ್ತಾ
ಕೃತಿಯಲ್ಲಿ ಶಕುನಿಯ ಪ್ರತಿರೂಪವಾಗಿ
ದುಶ್ಯಾಸನನ ಪಾಪದ ಪಿಂಡವೆಂಬಂತೆ ಇಹರು!
ಅವರ ನಯ-ವಿನಯವೂ, ಜನರನು ಕುತಂತ್ರದ ಕೋಟೆಯಲಿ
ಹೊಗಿಸಿ, ತಮಗೆ ಬೇಕಾದುದ
ದಕ್ಕಿಸಿಕೊಳ್ಳುತ್ತಾ, ಮುಸುಕಿನೊಳಗಣ ದೊಣ್ಣೆಯಂತೆ,
ಬೆಣ್ಣೆಯೊಳಗೆ ಮುರಿವ ಮುಳ್ಳಿನಂತೆ,
ಇಂದಿನ ಬಹುಜನರ ಬದುಕಂತೆ!

■

## ಪಾರಿವಾಳವೆ ಬಾ

ಬಾ ಪಾರಿವಾಳವೇ ಬಾ,
ಏಕಷ್ಟು ಅಂಜುವೆ?
ಏಕಷ್ಟು ಅಳುಕುವೆ? ನೀನೇ ಕಟ್ಟಿದ ಗೂಡು
ನೀನಿಟ್ಟ ಮೊಟ್ಟೆಯ ಸನಿಹ
ಹೋಗಲಿಷ್ಟು ಹೆದರಿಕೆ ಏಕೆ?

ನೀನಿಟ್ಟ ಮೊಟ್ಟೆಗೆ ಕಾವುಕೊಟ್ಟು,
ಮೊಟ್ಟೆಯೊಳಗಣ ಮರಿ ಹೊರ ಬಂದಾಗ
ಗುಟುಕನಿಕ್ಕಿ, ರೆಕ್ಕೆ ಬರುವವರೆಗೂ
ಕಣ್ಣ ರೆಪ್ಪೆಯಡಿ ಕಾಪಾಡಿ,
ರೆಕ್ಕೆ ಬಲಿತು, ಗರಿಬಿಚ್ಚಿ,
ಹಾರಿ ಹೋಗುವವರೆಗೂ
ನಿನ್ನ ಅಕ್ಕರೆ ಎಷ್ಟು?
ಕಕ್ಕುಲಾತಿ ಇನ್ನೆಷ್ಟು?
ನನಗೆ ತಿಳಿಯದೆ ಹಕ್ಕಿ?

ಅಷ್ಟು ಮಮತೆ ತೋರಿದ ನೀನು,
ಇಂದೇಕಿಷ್ಟು ಭಯದಿಂದ,
ಹೆಜ್ಜೆ ಮುಂದಕ್ಕಿಟ್ಟು, ಹಿಂದೆ
ಸರಿಯುತಿಹೆಯಲ್ಲೆ?
ಮೊಟ್ಟೆಯ ಬಳಿ, ಹೋಗಲೂ ಆಗದೆ
ಅದ ಮರೆತು ದೂರವೂ ಇರಲಾರದೆ
ಚಡಪಡಿಸುವ ನಿನ್ನ ಮನದ
ದುಗುಡವ ನೋಡಿ,
ನನ್ನ ಮನ ಮುದುಡಿ ಹೋಗಿಹುದಲ್ಲೆ!

ಯಾರು ತಾನೇ ನೀನಗೇನ ಮಾಡಿಯಾರು!

ನಿನ್ನ ಮೊಟ್ಟೆಯೆಡೆಗೆ ಧೈರ್ಯದಿಂದ ಮುಂದೆಸಾಗು
ಹಿಂದೆ ಸರಿಯದಿರು
ಮೊಟ್ಟೆ ಮರಿಯಾಗಿ ಹಾರಲು
ತಾಯಿ ಅಪ್ಪುಗೆಯ ಕಾವು ಬೇಕೇ ಬೇಕು.
ತಾಯಿ–ಮಗುವ ಅಗಲಿಸಿ, ಸಂತಸ ಪಟ್ಟವರು
ಎಲ್ಲರ ಶಾಪಕೆ ಗುರಿಯಾಗುವರು ಜೋಕೆ
ಬಾ, ಪಾರಿವಾಳವೆ ಹೆದರದೆ ಮುಂದೆ ಬಾ!

# ಕನಸು ನಮ್ಮದು ನೋವು ನಿನ್ನದು

ನಮಗೆ ಬುದ್ಧಿಯಿಲ್ಲ ಪಾಪು ನಮಗೆ ಬುದ್ಧಿ ಇಲ್ಲ
ನಿನ್ನ ಮನವ ಅರ್ಥಮಾಡಿಕೊಳ್ಳು ಶಕ್ತಿಯಿಲ್ಲ;
ನಿನ್ನ ಸ್ವಾಭಾವಿಕ ಬೇಕು ಬೇಡಗಳನ್ನೆಲ್ಲ ಅಸಾಭಾವಿಕವೆಂದು ಬಗೆದು
ಹಠವೆಂದು ತೀರ್ಮಾನಿಸಿ, ಉದ್ಧಟತನವೆಂದು ಪರಿಗಣಿಸಿ
ನಿನ್ನದೆಲ್ಲವನೂ ಹತ್ತಿಕ್ಕಿ ಅಸ್ವಾಭಾವಿಕವಾಗಿ ಪೋಷಿಸುವವರು ನಾವು.

ನೀನು ಹೀಗಿರಬೇಕು ಹಾಗಾಗಬೇಕು ಎಂಬ
ನಮ್ಮಾಸೆಯಲಿ ಏನೇನೋ ಮಾಡಿ ನಿನ್ನನೆಷ್ಟು ಹಿಂಸಿಪೆವು ಪಾಪು!
ಅಸಹಾಯಕತೆಯಿಂದ ಹೇಗೆ ಅನುಭವಿಸುವೆ ನೀನು ಅವನೆಲ್ಲ
ಇಲ್ಲದಿರೆ ನಿನಗೆ ಬೇರೆ ಮಾರ್ಗವೇ ಇಲ್ಲವಲ್ಲ!

ನೀ ಒಳಿತಾಗಿ ಬೆಳೆಯಬೇಕು
ಹಠಮಾರಿ ಎನಿಸದಿರಬೇಕು
ಅಶಿಸ್ತು ನಿನ್ನ ಬಳಿ ಸುಳಿಯದಿರಲಿ, ದಕ್ಷತೆ ನಿನ್ನ ಪಕ್ಷಪಾತಿಯಾಗಲಿ
ನೀ ಬುದ್ಧಮತಿಯಾಗಬೇಕು, ನೀನಾಗಬೇಕು ತುಂಬು ವಿದ್ಯಾವತಿ
ನಿನ್ನ ವಯಸಿನವರಿಗೆಲ್ಲರಿಗಿಂತ ಮುಂದಿರಬೇಕು
ಈ ವಯಸಿನಲೇ ಎಲ್ಲದರಲೂ ನಮ್ಮನೆಲ್ಲ ಮೀರಿಸಬೇಕು!

ಅಷ್ಟೇ ಏಕೆ? ನಮಗಿಲ್ಲದಾ ಪರಿಪಕ್ವತೆ
ನಿನ್ನಲ್ಲಿ ಕಾಣಬೇಕೆಂಬುದು ನಮ್ಮಾಸೆ ಮಗು.
ಆ ಆಸೆಯಲಿ ನಿನ್ನ ವಯಸ್ಸಿನ್ನೂ ಪರಿಪಕ್ವವಾಗಿಲ್ಲ
ಎಂಬುದ ಮರೆತು ಸುಮ್ಮನೆ ಕಾಡುವೆವು ನಿನ್ನ
ನಾವು ಬೇಡವೆಂಬುದೆಲ್ಲ ನಿನ್ನಲಿ ಬಂದರೆ ಅತಿಶಯವಲ್ಲ!

ನಮ್ಮ ಬೇಕುಗಳಲಿ ನಿನ್ನ ಮನಸ, ವಯಸ ಮರೆತೇ ಬಿಡುವೆವು ಕಂದ
ಪಾಪ! ನಿನಗೆಷ್ಟು ಹಿಂಸೆ ಅಲ್ಲವೇ ಚಿನ್ನಾ!
ಇಂದು ನಿನ್ನ ಮನ ಮುದುಡದೆ ಅರಳಿದರೆ,
ನಾಳೆ ನೀನು ಪರಿಪೂರ್ಣತೆಯ ಪಡೆವುದೇನೂ ಕಷ್ಟವಲ್ಲ.

ನಿಜ, ಈಗಲೂ ನಿನ್ನ ಮೇಲೆ ಬೇಕು ಹಿಡಿತ; ಆದರೆ ಮಿತಿ ಮೀರಿದಾಗ
ಮಾತ್ರ!
ಯಾವಾಗಾದರೊಮ್ಮೆ, ಅದೂ ಅಪರೂಪವಾಗಿ;
ಅಪ್ಪಿಷ್ಟಕೆಲ್ಲಾ, ಮುಟ್ಟಿದುದಕೆಲ್ಲಾ ಪರಿಮಿತಿ ಒಳಿತಲ್ಲ
ಸರಿ–ಅಲ್ಲವೆಂದು ತೀರ್ಮಾನಿಸುವ ಬುದ್ಧಿ ನಿನ್ನಲಿ ಮೊಳೆಯುವ ಮೊದಲೇ
ನಾವು ಎಳೆಯುವ ಗೆರೆ, ಆದೀತು ನಿನ್ನ ಆತ್ಮ ವಿಶ್ವಾಸಕ್ಕೆ,
ವಿಕಾಸಕ್ಕೆ, ಆನಂದಕ್ಕೆ ಹಾಕುವ ಬರೆ!
ನಿನ್ನಲಿ ನೇರ ಮನೋಭಾವವೇ ಮರೆಯಾಗಿ
ನಾವೇ ನಿನ್ನಲ್ಲಿ ಬೇಡವಾದುವುಗಳನ್ನೆಲ್ಲಾ ಹುಟ್ಟು ಹಾಕುತ್ತಿರುವೆ ಕಂದಾ!

■

## ಸಮಯ ಸಾಧಕರು

ಇದು ಸಮಯ ಸಾಧಕರ ಕಾಲ
ಮತ್ತೆ ಬಾಲಬಡುಕರಿಗೆ ಬಹಳ ಅನುಕೂಲ
ಮೌಲ್ಯಗಳ ಬೆಂಬತ್ತಿ ಹೋದವರಿಗೆ ದುಷ್ಕಾಲ
ಒಳಿತಾಗಿ ಬದುಕ ಬೇಕೆಂಬುವರಿಗೆ ಕೆಟ್ಟಕಾಲ.

ಒಳಗೊಂದು–ಹೊರಗೊಂದು ಇರುವರ್ಗೆ ಸುಗ್ಗಿ
ಒಳಹೊರಗೊಂದಾಗಿರುವವರು ನಡೆಯಬೇಕು ತಗ್ಗಿ
ಆದರ್ಶಗಳ ನಾಟಕವಾಡುವವರು
ಹೋಗಬಹುದು ಮೇಲಕ್ಕೆ ನುಗ್ಗಿ, ನುಗ್ಗಿ!

ಹಣಮಾಡಬಹುದಾದ ಸ್ಥಾನ ನೋಡಿ,
ಅದ ಪಡೆಯಲು ಹಾಕುವರು ಮೋಡಿ,
ನೇರ ಮಾರ್ಗದಿ ನಡೆಯಬೇಕೆನ್ನುವವರು ಆಗುವರು ಖೋಡಿ
ಮೇಲೆ ಕುಳಿತವರೆ ಹೊಗಳಬೇಕು ಮುಚ್ಚಿ, ಅವರೆಲ್ಲ ರಾಡಿ,
ಇದ್ದುದಿದ್ದಂತೆ ಹೇಳಿದರೆ, ಆಗುವುದು ನಿಮ್ಮ ಮಾತೆಲ್ಲ ಚಾಡಿ.
ಅದಕಾಗಿ, ಅಂತಹುದನೆಲ್ಲ ಮಾಡಬೇಡಿ.

■

## ನುಣ್ಣನೆಯ ಬೆಣ್ಣೆ

ಅಲ್ಲೊಬ್ಬರಿಲ್ಲೊಬ್ಬರು ಮೇಧಾಪಾಟ್ಕರರುದಯಿಸಿರುವುದು
ಕರಿಮೋಡವ ನಡುವಿನ ಮಿಂಚಿನ ಸೆಳಕಿನಂತಿಹುದು.
ಪರಿವರ್ತನೆ, ಬಯಸಿದಷ್ಟು ಸುಲಭವಲ್ಲ!
ಸಾವಿರಾರು ವರ್ಷಗಳಿಂದ ನೆಲದಾಳಕೆ ಇಳಿದ ಬೇರುಗಳ
ಕೀಳುವುದು ಹಗುರಲ್ಲ; ಕಸುವು ಹಾಕಿ,
ಬಿರುಸು ಬಿಟ್ಟು ಎಳೆದರದು, ಅರ್ಧಕ್ಕೆ ಹರಿದು
ಅತ್ತಲೂ ಅಲ್ಲ, ಇತ್ತಲೂ ಅಲ್ಲವೆಂಬಂತಾಗಬಹುದು!
ಬದಲಾವಣೆಗಳ ತಂದರೂ, ಸಂದಿಗ್ಧ ಕಾಲದ ಮಹಿಳೆಗೆ
ನುಂಗಲೂ ಆಗದೆ, ಉಗುಳಲೂ ಬಾರದೆ,
ತಳಮಳ ಉಂಟಾಗಿ, ಹಿಂದಿನದಕ್ಕಿಂತ
ಇಂದಿನದು ಕಿರುಕುಳವಾಗಿ, ಗರಗಸದಂತೆ ಕೊರೆಯುವುದು;
ಮುಳ್ಳಿನಂತೆ ಚುಚ್ಚುವುದು ನಾಯಿಯಂತೆ ಕಚ್ಚುವುದು
ಕತ್ತರಿಯಂತೆ ಕತ್ತರಿಸಿ, ತುಂಡರಿಸಿಯೇ ಬಿಡುವುದು!
ಇದೆಲ್ಲಾ ಒಳ ಒಳಗೆ, ಮುಸುಕಿನೊಳಗಿನ ದೊಣ್ಣೆ,
ನೋಡುವವರ ಕಣ್ಗೆ, ನುಣ್ಣನೆಯ ಬೆಣ್ಣೆ.

■

## ಗುರಿ ಇಲ್ಲದ ನಡಿಗೆ

ಏ ಹುಡುಗ, ಹೊರಟಿರುವೆ ಎಲ್ಲಿಗೆ ಈಗ?
ಏಕೆ? ನಿನ್ನ ಪ್ಯಾಂಟಿಗೆ ತೇಪೆ ಹಚ್ಚಿದೆಯಲ್ಲಾ?
ನೆನ್ನೆ ತೊಟ್ಟ ಚಡ್ಡಿ ಹರಿದುದಾಗಿತ್ತಲ್ಲ?
ಏಕಪ್ಪಾ? ನಿನ್ನಪ್ಪ ಶ್ರೀಮಂತನಿದ್ದ;
ಈಗವನು ಬಡವನಾಗಿಹನೇನು

ಹುಡುಗಿಯಂತೇಕೆ ಕಿವಿಗೆ ಉಂಗುರ?
ಅದೂ ಒಂದೇ ಕಿವಿಯಲ್ಲಿದೆಯಲ್ಲೊ
ಇನ್ನೊಂದು ಉದುರಿ ಹೋಗಿದೆಯೇನು?
ಗಡ್ಡ ಬೋಳಿಸದೆ, ಎಷ್ಟು ಕಾಲವಾಯ್ತು ತಮ್ಮಾ
ನಿನ್ನಪ್ಪನಲಿ ದುಡ್ಡು ಇರಲಿಲ್ಲವೇನೊ
ತೊಗೋ ಈ ಇಪ್ಪತ್ತು ನೀನೇನು ಬೇರ್‍ಯಲ್ಲ
ನಿನ್ನಪ್ಪ–ನಾನು ಅಣ್ಣತಮ್ಮಂದಿರಂತಿದ್ದೆವು ಓದುವಾಗ!

ಇದೇನೋ ಜಡೆ ಹಾಕಿಕೊಂಡಿರುವೆ?
ತಿರುಪತಿ ತಿಮ್ಮಪ್ಪಗೆ ಮುಡಿ ಬಿಟ್ಟಿರುವಿ ಏನು?
ಬಿಟ್ಟರೇನಾಯ್ತು? ಎತ್ತಿ ಕಟ್ಟಿಕೊಂಡರಾಯ್ತಪ್ಪಾ,
ಷರಟಿಲ್ಲದೆ ನಿನ್ನಕ್ಕನ ಬ್ಲೌಜ್ ಹಾಕಿಕೊಂಡಿರುವೆಯಲ್ಲೊ
ಪಾಪ, ಅದು ಚಂದಲ್ಲ ತೆಗೆದೊಗೆದು ಬಾ
ನನ್ನ ಮಗನ ಷರ್ಟೊಂದ ಹಾಕಿಕೊ
ಅವನೇನು ಬೇರ್‍ಯಲ್ಲ ನಿನ್ನ ತಮ್ಮ ಇದ್ದ ಹಾಗೆ!

ನೆನ್ನೆ ಆ ಮ್ಯಾಗಿ ತಿನ್ನುತ್ತಿದ್ದೆಯಲ್ಲಾ
ಪಾಪ! ಬಡತನ ಬಂದು, ನಿಮ್ಮ ಮನೇಲಿ
ಮಾಡುತ್ತಿದ್ದ, ಭಕ್ಷ್ಯ–ಭೋಜ್ಯಗಳು ಇಲ್ಲವಾಗಿರಬೇಕು
ಮಕ್ಕಳಿಗೆ ಅದೆಲ್ಲಾ ಇಲ್ಲವಾಗಿ, ಮ್ಯಾಗಿ
ತಿಂದು ಬದುಕುವ ಸ್ಥಿತಿ ಬಂತೆ?
ಹೀಗೆ ಜೀವನ! ಯಾವಾಗ, ಯಾರಿಗೆ, ಏನೇನೋ ಯಾರಿಗೆ ಗೊತ್ತು?

■

# ಬಿತ್ತಿದವನೆಲ್ಲಿ ಹೋದ?

ಎಲ್ಲಿ ಹೋದನು, ಜಗದ ತುಂಬೆಲ್ಲಾ
ಕತ್ತಲೆ–ಬೆಳಕ ಬಿತ್ತಿ, ಬೆಳೆ ಬರುವ
ಮೊದಲೇ ಎಲ್ಲೋ ಹೋಗಿಹನಲ್ಲಾ

ಸುತ್ತ–ಮುತ್ತ ನೋಡಿದರಿಲ್ಲ;
ಅತ್ತ–ಇತ್ತ ಹುಡುಕಿದರಿಲ್ಲ;
ಕತ್ತಲೆಯಲಿ ಬೆಳಕಿನಾಟ ತೋರುತ್ತಾ
ಬೆಳಕಿನಲಿ ಕತ್ತಲೆಯಾಟ ಆಡುತ್ತಾ
ಕಣ್ಣುಮುಚ್ಚಾಲೆಯಾಡುವವನೆಲ್ಲ ಹೋದ?

ಹುಡುಕಿ ಹುಡುಕಿ ಬೇಸತ್ತಿರುವೆ
ಹುಡುಕದಿರೆ ಬಿತ್ತಿದ ಬೆಳೆ ದಕ್ಕದೆ ಹೋಗುವುದು
ಹುಡುಕಿದರೆ ಬರಿ ಕತ್ತಲೆಯೋ ಕತ್ತಲಾಗಿ
ಬಿತ್ತಿದವ ಎಲ್ಲೆಲ್ಲೂ ಕಾಣನಾಗಿ,
ಕತ್ತಲಲ್ಲಿ ತಡಕಾಡುತ್ತಾ ಹೋದಾಗ ಎಡವಿ,
ಬೆರಳು ಕಲ್ಲಿಗೆ ತಾಗಿ, ರಕ್ತ ಸೋರಿದಾಗ
ಕಾಲ ತುದಿಯಲ್ಲೆನೋ ನೋವು
ಬೆಳಕಿದ್ದೆಡೆ ಧಾವಿಸಿ ಹೋದಾಗ ಕತ್ತಲಾವರಿಸಿ
ಏನೂ ಕಾಣದಂತಾಗುವುದು.

ಎನೂ ಕಾಣದಾಗಲು ಸುರಿವ ರಕ್ತವ
ನಿಲ್ಲಿಸಲು ಬಾರದಾಗಿ, ಮುಲಾಮು ಹಚ್ಚಲಾರದಾಗಿ,
ಬ್ಯಾಂಡೇಜು ಹಾಕಲಾರದೆ, ರಕ್ತ ಸೋರಿ
ಸೋರಿ ಹೋಗುತಿಹುದು!

ಹೊತ್ತು ಏರಿ ಬಾಯಾರಿ, ಬವಳಿ ಬಂದು,
ಬಿತ್ತಿದವನ ಬರುವ ಕಾಯುತ್ತಾ ನೆಲಕ್ಕೆ ಬಿದ್ದಾಗ
ಎಲ್ಲಿಂದಲೋ ಬಂದು, ಬೆಳೆಯ ಬಿಟ್ಟು
ನನ್ನನೆತ್ತಿಕೊಂಡು ಹೋಗಿಯೇ ಬಿಟ್ಟ.

■

## ಓ ರೈತ

ಪ್ರಕೃತಿ ಇತ್ತಿಹಳು ಫಲವತ್ತಾದ ನೆಲ.
ಾದರಲಿ ಬಿತ್ತಿ ಬೀಜ, ಹರಿಸು ಜಲ
ಕಳೆ ಬೆಳೆಯದಂತೆ ವಹಿಸು ಎಚ್ಚರ, ದೊರೆವುದು ಸತ್ಫಲ
ಆ ಫಲವುಂಡು ನೀ ಪಡೆವೆ ಭೀಮ ಬಲ.

ಭೀಮ ಬಲವಾದರೂ ಅದಲ್ಲ ಪಶುಬಲ
ದುಷ್ಟರ ದಮನಕದು ದೈಹಿಕ ಬಲ
ಶಿಷ್ಟರ ರಕ್ಷಣೆ ನೈತಿಕ ಬಲ
ಒಳಿತಾದ ಆಡಳಿತಕೆ ನೀಡಬಲ್ಲದು ಬುದ್ಧಿ ಬಲ.

ಒಳಿತಿಗೆ ಬೆಂಬಲವಾಗಿ ಉಪಯೋಗಿಸುವ ಪ್ರಕೃತಿ ನೆಲ
ಅದರ ಬಳಕೆಯಾಗುತಿಹುದೆಲ್ಲ ಸ್ವಾರ್ಥ ಸಾಧನೆಗಾಗಿ
ಇತರರ ನಾಶಕಾಗಿ, ಬಲ್ಲವರ ಇಲ್ಲವಾಗಿಸಲಿಕಾಗಿ
ಸಲ್ಲದವರ ಬೆಲ್ಲದಂತೆ ಮಾತಿಗೆ ಮರುಳಾಗಿ.

ನೀತಿ–ನ್ಯಾಯ, ಪ್ರೀತಿ–ದಯ, ಅಹಿಂಸಾಮಯ
ಆಗುವುದು ಜನಕ್ಕೆ ಸುಖ ಶಾಂತಿಗಳ ಆಲಯ
ಸ್ನೇಹ–ಸಹಕಾರವಿಲ್ಲದಾ ಬದುಕು ಘನ–ಘೋರ
ಅದೆ ಪ್ರತಿಯೊಬ್ಬರ ನಾಶದ ಕಾರ್ಯಾಗಾರ.

ಓ ರೈತ ಇದನರಿತು ನೆಲ–ಜಲದಿಂದ ಪಡೆದು ಸುಕೃತ ಫಲ
ನೀನು ಸಜ್ಜನರಿಗಾಗು ಬೆಂಬಲ.
ದುರ್ಜನರ ನಾಶಕೆ, ಆಗು ಪಶುಬಲ
ಸಮಾಜದೇಳಿಗೆಗೆ, ಒಳಿತಿಗೆ ನೀಡು ನಿನ್ನ ಬುದ್ಧಿ ಬಲ.

■

## ಪ್ರಕೃತಿ

ವೃಕ್ಷವೊಂದು ಭೂಮಿಯಲಿ ಉದಿಸಿದ ಮೇಲೆ
ಮಳೆಗೆ, ಬೆಳದಿಂಗಳಿಗೆ ಮೈ ತೆರೆದುಕೊಂಡಂತೆ,
ಗುಡುಗು, ಮಿಂಚು ಬರಸಿಡಿಲಿಗೂ
ಬಿಸಿಲ ಬೇಗೆಗೂ, ಬೆದರದೆ–ಬೆಚ್ಚದೆ
ಮೈ ಒಡ್ಡಿ ನಿಲ್ಲಬೇಕು; ನಿಂತು ಸಹಿಸಬೇಕು
ಬಿರುಗಾಳಿ ಬೀಸಿದಾಗಲೂ
ನಿಂತು, ನೆರಳ ನೀಡಬೇಕು
ಇದೆಲ್ಲಾ ಆದೀತು! ಮರ ಮುಪ್ಪಾಗುವವರೆಗೆ!
ವರುಷಗಳುರುಳಿ, ಪ್ರಕೃತಿ ವಿಕೋಪಕ್ಕೆ ತುತ್ತಾಗಿ
ವಿಕೃತ ಪರಿಣಾಮಗಳಿಗೆ ಈಡಾಗಿ
ಹೆಮ್ಮರದ ಕಸುವು ಕಮರಿ
ದೃಢತೆ ಕುಗ್ಗಿ, ಬುಡ ಡೊಗ್ಗರಾಗಿ
ಬಲಕುಗ್ಗಿ, ಮರಬಗ್ಗಿ
ಬೇರು ಸಡಿಲಾದಾಗಲೂ
ಬಿರುಗಾಳಿಯ ತಡೆಯಬೇಕು ಹೇಗೆ?
ಬರಸಿಡಿಲ ಬೇಗೆಯ ಸಹಿಸಬೇಕು ಹೇಗೆ
ಬಿಸಿಲ ಬೇಗೆಗೆ ಬಾಡದೆ
ತಂಪುಗಾಳಿ ಬೀಸಬೇಕು ಹೇಗೆ?
ಪ್ರಕೃತಿಯ ಮಿತಿ ಮೀರಿದ ವೈಪರೀತ್ಯ
ವಿಕೃತ ರೀತಿಯ ಪರಿಸರದಿಂದಾಗಿ

ಎಲೆಗಳುದುರಿ, ಕೊಂಬೆ ಜೋತು
ತೊಗಟೆಯೊಣಗಿ ಒಸರಗಿ ನಿಂತರೂ
ಎಂದಿನಂತೆ ನೆರಳು ನೀಡಿ
ತಂಪು ಗಾಳಿ ಬೀಸುವುದು ಸಾಧ್ಯವೆ?
ಹಿಂದಿನಂದ ಇರುವುದಸಾಧ್ಯ
ಹಾಗೆಂದು ಬಯಸಿದರದು ಮಹಾಕ್ರೌರ್ಯ.

■

## ಇಬ್ಬಗೆಯ ಸಂಸ್ಕೃತಿ

ಪುರುಷ ಪ್ರಧಾನ ಸಮಾಜದಲಿ
ಬರುತಿವೆ ಅಷ್ಟಿಷ್ಟು ಬದಲಾವಣೆಗಳು
ಇಂದಿಗೂ ಅಲ್ಲಲ್ಲಿ ಇರುವರು
ಸಂಸ್ಕೃತಿಯ ಹೆಸರಲ್ಲಿ
ಮಹಿಳೆಯ ಕಾಲಿಗೆ ಬೇಡಿಯ ಹಾಕುವವರು!

ಮಹಿಳೆಯನು ತನ್ನ ಸ್ವಾರ್ಥಕೆ ಬಳಸಿಕೊಳ್ಳುವ
ಸಂಸ್ಕೃತಿಯ ಅರ್ಥವ ತಿಳಿದುಕೊಳ್ಳಲಾರದ ಪುರುಷ
ನಮ್ಮಲ್ಲಿ ಗಂಡನಿಗೊಂದು ಸಂಸ್ಕೃತಿ
ಹೆಂಡತಿಗೆ ಬೇರೊಂದು ಸಂಸ್ಕೃತಿ ಎಂದು
ಇಬ್ಬಗೆಯ ಸಂಸ್ಕೃತಿ ಇಲ್ಲವಯ್ಯ
ಗೌರವಸ್ಥನಿಗಿರುವುದು ಒಂದೇ ಸಂಸ್ಕೃತಿ
ಆ ಸಂಸ್ಕೃತಿ ಎಂದರೆ, ಹೆಣ್ಣಿಗಷ್ಟೇ ಸಂಸ್ಕೃತಿ ಹೇರದೆ
ತಾನೂ ಸಂಸ್ಕೃತಿಗೆ ಶಿರಬಾಗುವ ಪರಿಸ್ಥಿತಿ.

ಹೆಣ್ಣಿಗೆ ಸಂಸ್ಕೃತಿಯ ಬೋಧಿಸುವ ಮೊದಲು
ನೀನು ಸಂಸ್ಕೃತಿಯ ಗೌರವಿಸಬೇಕು
ಮಹಿಳೆಯನು ಮಹಾದೇವಿ ಎಂದು
ಕಾಣುವುದು ನಮ್ಮ ಸಂಸ್ಕೃತಿಯ ಹಿರಿಮೆ
ಅವಳನ್ನು ಗೌರವಿಸುವುದು ನಮ್ಮ ಸಂಸ್ಕೃತಿಯ ಗರಿಮೆ

ಬಳೆ, ಕುಂಕುಮ, ಹೂವು, ಕೇಶಾಲಂಕಾರ
ಇವೆಲ್ಲಾ ನಮ್ಮ ಸಂಪ್ರದಾಯದ ಕುರುಹುಗಳು;
ಗರತಿಯ ಸೌಂದರ್ಯ ಹೆಚ್ಚಿಸುವ ಸಾಧನಗಳು
ಅವುಗಳಲ್ಲಿ ಕಾಲ–ಕಾಲಕ್ಕೆ ಬದಲಾವಣೆಗಳಾಗುವುದೂ ಉಂಟು.
ಹಿಂದೆಯೂ ಇದ್ದವು ಬಗೆ–ಬಗೆಯ ಕೇಶಾಲಂಕಾರಗಳು
ಇಂದವು ಮಾಯವಾಗಿ ಬಂದಿಹವು ಬೇರೆಯವು!

ಇಂದು ಕುಂಕುಮದ ಬದಲು ಅಂದ-ಚಂದದ ಟಿಕಳಿಗಳು
ಗಾಜಿನ ಬಳೆಯ ಬದಲು ಚೆಂದ-ಚೆಂದದ
ಮಿರಿ-ಮಿರಿ ಮಿಂಚುವ ತರ-ತರದ ಬಳೆಗಳು!
ಸ್ವಾಭಾವಿಕ ಹೂವನು ಆಕ್ರಮಿಸುವ
ಪ್ಲಾಸ್ಟಿಕ್ ಹೂವುಗಳು, ವಿಧ-ವಿಧದ ಪಿನ್ನುಗಳು
ಬ್ರೋಚುಗಳು, ಕೂದಲು ಹರಡದಂತೆ
ಸುತ್ತುವರಿಯುವ ಹೂವಿನಾಕಾರದ ಟೇಪುಗಳು!
ಇವೆಲ್ಲಾ ಮಹಿಳೆಯ ಸೌಂದರ್ಯ ಹೆಚ್ಚಿಸುವ ಸಾಧನಗಳು
ಹಿಂದಿನ ಕುಪ್ಪಸದ ಬದಲು
ಇಂದು ನಾನಾ ಬಗೆಯ ಚೋಲಿಗಳು
ಅರ್ಧ ತೋಳು, ಮುಕ್ಕಾಲು ತೋಳು
ಉದ್ದ ತೋಳಿನ ಬ್ಲೌಸ್‌ಗಳು
ಎಲ್ಲಿಯವರೆಗೆ ಇವು ಅಶ್ಲೀಲವಾಗಿ
ಕಾಣುವುದಿಲ್ಲವೋ ಅಲ್ಲಿಯವರೆಗೆ
ಇವು ತರುವುದಿಲ್ಲ ಸಂಸ್ಕೃತಿಗೆ ಧಕ್ಕೆ.

ಸಮಾಜ ನಿಂತ ನೀರಲ್ಲಿನಾಗಿ,
ಬದಲಾವಣೆ ಪ್ರಗತಿಯ ಚಿಹ್ನೆ
ಆದರದು ಅಶ್ಲೀಲದ ಗೆರೆಯ ಬಳಿ ಹೋಗದಿರಬೇಕು ಅಷ್ಟೆ
ಗುರು-ಹಿರಿಯರ ಮಾತಿಗೆ ಮನ್ನಣೆ ನೀಡದಿರೆ
ತಂದೆ-ತಾಯ್ಗಳ ಅಲಕ್ಷಿಸಿದೊಡೆ
ಸಭ್ಯತನವ ಬಿಟ್ಟು, ಅಸಭ್ಯವಾಗಿ ನಡೆದೊಡೆ

ಗೊಂದಲವಿಲ್ಲದಲ್ಲಿ ಗೊಂದಲವೆಬ್ಬಿಸಿದೊಡೆ
ಅವಶ್ಯವಿಲ್ಲದೆ ಅಧಿಕಾರ ಚಲಾಯಿಸಿದೊಡೆ
ಶಾಂತ ಸಾಗರದಲ್ಲಿ ಕಲ್ಲನೆಸೆದು ಅಶಾಂತಿಯ ಎಬ್ಬಿಸಿದೊಡೆ
ಆಗುವುದು ಸಂಸ್ಕೃತಿಗೆ ಧಕ್ಕೆ

ಸ್ತ್ರೀಗೆ ಕಟ್ಟುಪಾಡು ಹಾಕುವ ನೀನು
ಪ್ಯಾಂಟು ಧರಿಸುವುದ, ಜುಟ್ಟಿನ ಜಾಗದಿ
ಕ್ರಾಪ್ ಕಟ್ ಮಾಡಿಸುವ,
ಬೂಟು ಧರಿಸುವ, ಬೀರನ್ನು ಸೇವಿಸುವ
ವಿದೇಶೀ ನಡೆ ನುಡಿಗಳ, ಮೊದಲು ಬಿಡು,
ನಂತರ ಹೆಣ್ಣಿಗೆ ಸಂಸ್ಕೃತಿಯ ಪಾಠ ಹೇಳು

ಪುರುಷ ಪ್ರಧಾನ ಸಮಾಜದಿ, ಇಬ್ಬಗೆಯ ನೀತಿ
ಹೆಣ್ಣಿಗೊಂದು ನೀತಿ; ಗಂಡಿಗೊಂದು ನೀತಿ
ಹೆಂಡತಿಗೊಂದು ನಿಯಮ
ಸೋದರಿಗಾದರೆ ಇನ್ನೊಂದು
ಎಲ್ಲೆಲ್ಲೂ ದುಃಖ–ದುಮ್ಮಾನ–ಅಸಮಾಧಾನ!

ಸಮರಸಜೀವನ ಬಾಳಿಗೆ ಮುಖ್ಯ.
ಅದಕಾಗಿ, ವಿನಾಕಾರಣ ಎಬ್ಬಿಸದೆ ಗೊಂದಲ,
ಹೊಂದಿಸಿಕೊಂಡು ಹೋಗುವ,
ಮನಸು ಮಾಡಿಕೊ ಪ್ರಾಂಜಲ;
ವೃಥಾ ಆಡಬೇಡ ಮಾತು ಗಲಗಲ
ಶಾಂತಿ ಇಲ್ಲದಂತಾದರೆ ಒದ್ದಾಡಬೇಕಾದೀತು ವಿಲವಿಲ!
ಸಂತಸದಿ ಇರಲು ಸಾಧ್ಯವಿರುವಾಗ
ವಿನಾಕಾರಣ ನರಕ ಮಾಡಿಕೊಳ್ಳದಿರು ಜೀವನ

■

## ಹಾಲಿಗೆ ಹಾಲಾಹಲ

'ಜಗವೆಲ್ಲಾ ನಗುತಿರಲಿ, ಜಗದಳುವು ನನಗಿರಲಿ'
ಎಂಬಂತೆ ಬದುಕಿದ ಸ್ನೇಹಮಯಿಯ ಹೃದಯ
ಪ್ರೇಮವೆಂಬ ಜಲದಿಂದ
ಮಮತೆಯೆಂಬ ಹಾಲಿನಿಂದ ತುಂಬಿತ್ತು
ತನ್ನಲ್ಲಿದ್ದ ಸ್ನೇಹ, ಮಮತೆ, ಸಹಕಾರಗಳನ್ನೆಲ್ಲಾ
ಇತ್ತಳೆಲ್ಲರಿಗೆ ಧಾರಾಳವಾಗಿ

ಬಂಧುಗಲೂ-ಬಾಂಧವರು,
ಒಡಹುಟ್ಟಿದವರು, ಒಡಲಲ್ಲಿ ಹುಟ್ಟಿದವರು
ನೆರೆಯವರು-ಹೊರೆಯವರು
ಬೇಕಾದವರು-ಬೇಡಾದವರೆನ್ನದೆ
ಬೇಡಿಬಂದವರಿಗೆಲ್ಲಾ, ಕೊಟ್ಟು ಬಿಟ್ಟಳು
ಹಿಂದು-ಮುಂದು ನೋಡದೆ,
ತನಗಾಗೇನನ್ನೂ ನೋಡದೆ,
ತನಗಾಗೇನನ್ನೂ ಉಳಿಸಿಕೊಳ್ಳದೆ.

ಬಾಚಿಕೊಂಡು, ದೋಚಿಕೊಂಡು
ಹೋದರೆಲ್ಲರದನು ಮುಲಾಜು ಇಲ್ಲದೆ
ಕೊಟ್ಟಿದ್ದು ಎಲ್ಲಿ ಹೋದೀತು? ಇಲ್ಲೆ,
ಅವರೆಲ್ಲರಲ್ಲೆ ಇಟ್ಟಿಹೆನಲ್ಲ! ಬೇಕೆಂದಾಗ
ಕೊಂಡುಹೋದವರೆಲ್ಲ, ಬಂದುಕೊಡುವರೆಂದು ಬಗೆದು
ಕೊಟ್ಟಿದ್ದು ತನಗೆ, ಬಚ್ಚಿಟ್ಟಿದ್ದು ಪರರಿಗೆ
ಕೊಟ್ಟಿದ್ದು ಕೆಟ್ಟಿತೆನಬೇಡ
ಕಟ್ಟಿಹುದು ಬುತ್ತಿ, ಮುಂದೆ
ಎಂದುಕೊಂಡು ಇತ್ತಳೆಲ್ಲವನು!

ದಿನಗಳೆದು ಸಂಜೆಯಾಗಿ, ದಿನವಿಡಿಯ ದುಡಿತದಿಂದ
ಗಂಟಲೊಣಗಿ ಬಾಯಾರಿ, ಭಾವವೆಲ್ಲ ಬರಡಾಗಿ
ಮಮತೆ ಮುಗಿದು, ಸ್ನೇಹ ತೀರಿ, ಹೃದಯ ಬಿರಿದು
ಹಾತೊರೆಯುತ್ತಿತ್ತು ಪ್ರೀತಿಯೆಂಬ ಧಾರೆಗಾಗಿ

ಹಗಲೆಲ್ಲಾ ಪಡೆದುಕೊಂಡು ಹೋದವರು
ಇರುಳಲ್ಲಿ ಬಂದು, ಪಡೆದುದರಲ್ಲೊಂದಿಷ್ಟು ಕೊಟ್ಟು
ಹೃದಯ ತಣಿಸುವರೆಂದು, ಮನಕೆ ಮುದವ ನೀಡುವರೆಂದು
ಕೂತಳು ಇರುಳೆಲ್ಲಾ ಕಾಯುತ್ತ.
ಕಾದು, ಕಾದು ಬೇಸರಾಗಿ
ಹಸಿವು ಪಸರಿ, ಸಂಕಟವಾಗಿ
ಬಾಯಾರಿಕೆಯಾಯ್ತು ಗಂಟಲೊಣಗಿ,
ಸ್ನೇಹವೆಂಬ ನೀರಿಗೆ, ಮಮತೆಯೆಂಬ ಉಣಿಸಿಗೆ
ಪ್ರೀತಿಯೆಂಬ ಅಮೃತಕ್ಕೆ ಹಾತೊರೆದು ಕಾಯುತ್ತಿರುವಾಗ
ಇತ್ತರೆಲ್ಲರೂ ಹಾಲಹಲ–ಅವಳು ಹಾಲನಿತ್ತ ತಪ್ಪಿಗಾಗಿ!

■

## ವಚನಸಾಹಿತ್ಯಕ್ಕೆ ಸಂಬಂಧಿಸಿದ ಬಿಡಿಲೇಖನಗಳು

೧) ಗಂಗಾಂಬಿಕೆ–ಪ್ರಕಟಿತ 'ಶಿವಶರಣೆಯರ ಚರಿತಾಮೃತ'

೨) ಗ್ರಂಥ –ಮಾರ್ಗ–೧ರ 'ನೀಲಲೋಚನೆ' ಪರಿಶೀಲನೆ –ಪ್ರಕಟಿತ 'ವಿಶ್ವಪ್ರತಿ'

೩) ದೇವರ ಒಲುಮೆಗೆ ಶರಣರು ತೋರಿದ ಮಾರ್ಗ –ಅಪ್ರಕಟಿತ

೪) ಆಯ್ದಕ್ಕಿ ಮಾರಯ್ಯ ಲಕ್ಕಮ್ಮ (ರೂಪಕ) ಅಪ್ರಕಟಿತ

೫) ಶರಣಸಾಹಿತ್ಯ ಸಂಶೋಧನೆಯ (ಆದ್ಯರು)ಪ್ರಕಟಿತ 'ಕೊಡುಗೆಗಳ ಕಡವರ'

೬) ವೀರಶೈವ ವಿವಾಹ ವೈಶಿಷ್ಟ –ಸಮಾಜ ಸಂಪ್ರದಾಯ) ಪ್ರಕಟಿತ 'ಶಿವವೆಂಬ'

೭) ಮಠಗಳಿಗೊಂದು ನೀಲನಕ್ಷೆ – ಪ್ರಕಟಿತ

■

## ಬಿಡಿ ಲೇಖನಗಳು

೭೦-೮೦ರ ದಶಕದಿಂದ ವಚನ ಸಾಹಿತ್ಯ ಕುರಿತು ಅಧ್ಯಯನ ಕೈಗೊಂಡ ಅವರು ಸ್ಮರಣ ಸಂಚಿಕೆ ಅಭಿನಂದನ ಗ್ರಂಥಗಳಿಗಾಗಿ ಬರೆದು ಪ್ರಕಟಿಸಿರುವ ಬಿಡಿ ಲೇಖನಗಳನ್ನು ಪ್ರಸ್ತುತ ಸಂಪುಟದಲ್ಲಿ, ಅನುಬಂಧವಾಗಿ ಅಳವಡಿಸಲಾಗಿದೆ. ಲಭ್ಯ ೭ಲೇಖನಗಳಲ್ಲಿ ಶಿವಶರಣೆ ಗಂಗಾಂಬಿಕೆ, ನೀಲಾಂಬಿಕೆಯವರ ಅಧ್ಯಾತ್ಮಿಕತೆಯನ್ನು ಸಂಗ್ರಹವಾಗಿ ನಿರೂಪಿಸಿಸುವ ಎರಡು ಲೇಖನಗಳು, ಶರಣರ ದೇವರ ಪರಿಕಲ್ಪನೆಯನ್ನು ಶರಣ ಸಾಹಿತ್ಯ ಸಂಶೋಧಕ ಡಾ. ಫ.ಗು. ಹಳಕಟ್ಟಿ ಅವರ ಸಾಧನೆಯನ್ನು ವೀರಶೈವ ವಿವಾಹವಿಧಿಯನ್ನು ವೀರಶೈವ ಮಠಗಳ ಕಾರ್ಯಸಾಧ್ಯತೆಗಳನ್ನು ಕುರಿತು ಚಿಂತನೆಗಳಾಗಿವೆ. ಆಯ್ದಕ್ಕಿ ಮಾರಯ್ಯನವರ ಲಕ್ಕಮ್ಮನವರ ಕಾಯಕ ನಿಷ್ಠೆಯನ್ನ ನಿರೂಪಿಸುವ ರೂಪಕವಿದೆ. ಒಂದು ಲೇಖನ ಪತಿ ಪ್ರೊ. ವೃಷಭೇಂದ್ರಸ್ವಾಮಿಯವರ ಬಗೆಗೆ ಬರೆದ ಮಹತ್ವದ ಬರಹ.

ಗಂಗಾಂಬಿಕೆ ಮತ್ತು ನೀಲಾಂಬಿಕೆಯವರನ್ನು ಕುರಿತು ರಚಿಸಿರುವ ಎರಡು ಲೇಖನಗಳಲ್ಲಿ ಲಲಿತಾಂಬಾ ಅವರು ಶರಣರ ಸ್ತ್ರೀಪರ ಚಿಂತನೆಗಳ ಮಾನವೀಯ ಲೋಕವನ್ನು ವಿವರವಾಗಿ ಪರಿಚಯಿಸಿದ್ದಾರೆ. ಮಾನವ ಚರಿತ್ರೆಯುದ್ಧಕ್ಕೂ ಧರ್ಮ-ಸಂಸ್ಕೃತಿ-ಸಾಮಾಜಿಕ ಪರಿಸರದಿಂದ ಹೊರಗೇ ಉಳಿದಿದ್ದ ಕೆಳವರ್ಗದವರ ಬದುಕಿಗೆ ಸಾಮಾಜಿಕ ಘನತೆ ಸಾಂಸ್ಕೃತಿಕ ಅಸ್ತಿತ್ವವನ್ನು ದೊರಕಿಸಿಕೊಟ್ಟ ಶಿವಶರಣ ಸಕಲದೇವ ಪ್ರೀತಿಯನ್ನುಅಪಾರವಾಗಿ ಮೆಚ್ಚುಕೊಂಡಿದ್ದ ಲಲಿತಾಂಬಾ ವಚನಸಾಹಿತ್ಯದ ವೈಚಾರಿಕ ಓದುಗರು. ಶಿವಶರಣ ಅಧ್ಯಾತ್ಮಿಕ-ಕಾಳಜಿ, ಸಾಮಾಜಿಕ ಪ್ರೀತಿ ಈ ಲೇಖನಗಳ ಮುಖ್ಯ ಗುರಿ.

ಹೆಣ್ಣಿನ ಅಸ್ತಿತ್ವವನ್ನು ಅಧೀನ ನೆಲೆಯಲ್ಲಿ ಪರಿಗಣಿಸುತ್ತಿದ್ದ ಸಾಂಪ್ರದಾಯಿಕ ಸಮಾಜದಲ್ಲಿ ಹುಟ್ಟಿದ ಮಹಿಳೆಯರು ಶರಣರ ಜೀವಪರ ವಿಚಾರಗಳಿಂದ ಪ್ರೇರಿತರಾಗಿ ಅಧ್ಯಾತ್ಮಿಕತೆಯನ್ನು ಸಾಮಾಜಿಕ ಜಾಗೃತಿಯನ್ನು ಕಾಯಕನಿಷ್ಠೆಯನ್ನು ಬೆಳೆಸಿಕೊಂಡು ವಚನಕಾರ್ತಿಯರಾದುದು ವಿಸ್ಮಯದ ಘಟನೆ. ವಚನಗಳ ಸ್ತ್ರೀ ಸಂವೇದನೆಗೆ ದನಿ ನೀಡಿದ ಅವರು ಹೆಣ್ತನದ ಗೌರವವನ್ನು ಹೆಚ್ಚಿಸಿದ ಮೊದಲಿಗರು. ಏಕಕಾಲಕ್ಕೆ ೩೫ ರಷ್ಟು ಮಹಿಳೆಯರು ವಿಶೇಷವಾಗಿ ಕೆಳವರ್ಗದ ದಲಿತ ಮಹಿಳೆಯರು

ಧರ್ಮ-ಸಮಾಜ-ಸಂಸ್ಕೃತಿಯನ್ನು ಕರಿತು ಚಿಂತಿಸಿದರನ್ನುವುದು ವಿಶೇಷ. ಗೃಹಿಣಿಯರಾಗಿ, ಆಧ್ಯಾತ್ಮಸಾಧಕರಾಗಿ ಅವರು ಸಾಧಿಸಿದ ಸಾಧನೆಯನ್ನ ವೈಚಾರಿಕವಾಗಿ ವಿಶ್ಲೇಷಿಸಿರುವ ಲಲಿತಾಂಬಾ ಅವರು ಶಿವಶರಣೆಯರ ಸ್ವಂತಿಕೆ - ಸ್ವಾಭಿಮಾನದ ವ್ಯಕ್ತಿತ್ವವನ್ನು ಪರಿಚಯಿಸಿದ್ದಾರೆ. ಕೌಟುಂಬಿಕ -ಸಾಮಾಜಿಕ ನೆಲೆಯ ಲಿಂಗತಾರತಮ್ಯವನ್ನು ಮೀರಿ ಬೆಳೆದ ಅವರ ಆತ್ಮ ಪ್ರತ್ಯೆಯವನ್ನು ಪ್ರಶಂಸಿದ್ದಾರೆ.

ಬಸವಣ್ಣನವರ ಪತ್ನಿ ಗಂಗಾಂಬಿಕೆ ವಚನಕಾರ್ತಿ. ತೆರೆಮರೆಯಲ್ಲಿ ನಿಂತು ಗುಪ್ತಗಾಮಿನಿಯಾಗಿ ಬಸವಣ್ಣನವರ ಧರ್ಮಯಜ್ಞಕ್ಕೆ ನೆರವು ನೀಡಿದ್ದಾಳೆ. ರಾಮಾಯಣ ಊರ್ಮಿಳೆಯಂತೆ ಗಂಗಾಬಿಕೆ ನೇಪಥ್ಯೆದು ನಾಯಕಿ ಎನ್ನುವ ಲಲಿತಾಂಬಾ ಅವರು ಪ್ರಾಚೀನಕನ್ನಡ ಕವ್ಯಗಳಲ್ಲಿ, ವ್ಯಕ್ತವಾಗಿರುವ ಸ್ವರೂಪವನ್ನು ಪರಿಚಯಿಸಿದ್ದಾರೆ. ಪೌರಾಣಿಕ ಪವಾಡದ ಪ್ರಸಂಗಗಳನ್ನು ಸಂಶೋಧನಾದೃಷ್ಟಿಯಿಂದ ಸ್ವೀಕರಿಸಬೇಕೆನ್ನುವ ಎಚ್ಚರವನ್ನು ವ್ಯಕ್ತಪಡಿಸಿರುವದು ವಿಶೇಷ.

ಹರಿಹರನ 'ಬಸವರಾಜದೇವರ ರಗಳೆ' ಭೀಮಕವಿಯ 'ಬಸವ ಪುರಾಣ' ಸಿಗಿರಾಜನ ನಿಗಿರಾಜಪುರಾಣಗಳ ಹಿನ್ನೆಲೆಯಲ್ಲಿ ಗಂಗಾಬಿಕೆಯ ಚಾರಿತ್ರಿಕ ವ್ಯಕ್ತಿತ್ವದ ಶೋಧ ಈ ಲೇಖನದ ಮುಖ್ಯ ಗುರಿಯಾಗಿದೆ. ಇತ್ತೀಚೆಗೆ ದೊರಕಿರುವ ಇಂಗಳೇಶ್ವರಕ ಕುಲಕರ್ಣಿಯವರ ಮನೆತನದ ವಂಶಾವಳಿಯ ನಕಲನ್ನ ಗಂಗಾಂಬಿಕೆಯ ಲಭ್ಯ ವಚನಗಳನ್ನು ಬಳಸಿಕೊಂಡಿರುವುದು ಗಮನಾರ್ಹ. ಪ್ರಾಚೀನ ಕವಿ-ಕಾವ್ಯಗಳ ಹೇಳಿಕೆಯನ್ನು ತರ್ಕಬದ್ಧವಾಗಿ ಪರಾಮರ್ಶಿಸುವ ವೈಚಾರಿಕತೆಯನ್ನು ಪ್ರದರ್ಶಿಸಿದ್ದಾರೆ.

ಗಂಗಾಂಬಿಕೆಯ ಜನನ-ಬಾಲ್ಯ-ಶಿಕ್ಷಣ-ವಿವಾಹ ಇತ್ಯಾದಿ ವಿವರಗಳನ್ನು ಭೀಮಕವಿಯ ಬಸವಪುರಾಣದ ಹಿನ್ನೆಲೆಯಲ್ಲಿ ಚರ್ಚಿಸುವ ಅವರು ನೀಲಲೋಚನೆ -ಮಾಯದೇವಿ ಅಭಿಚರ್ಚೆಯನ್ನು ಕೈಗೆತ್ತಿಕೊಂಡಿದ್ದಾರೆ. ಗಂಗಾಂಬಿಕೆ- ನೀಲಾಂಬಿಕೆಯರೊಂದಿಗೆ ದ್ವಿಪತ್ನಿತನಾದ ಬಸವಣ್ಣನವರ ನಿಲುವನ್ನು ಸಮರ್ಥಿಸಿದ್ದಾರೆ. ಗಂಗಾಂಬಿಕೆ ವಿದ್ವಾಂಸರು ಹೇಳುವಂತೆ ಎರಡನೆಯ ಪತ್ನಿಯಲ್ಲಿ ಮೊದಲ ಪತ್ನಿ ಎಂದು ಸಮರ್ಥಿಸಿದ್ದಾರೆ. "ನಾವು ಈ ವಿಷಯವನ್ನು ಇಂದಿನ ಸಮಾಜಿಕ ಮಹಿಳೆಯರ ಸ್ಥಾನಮಾನ ಮನೋಭಾವನೆಗಳನ್ನು ಗಣನೆಗೆ ತೆಗೆದುಕೊಂಡು ಚರ್ಚಿಸುಬೇಕು." ಎನ್ನುವ ಸಮಪರ್ಕ ಧೋರಣೆಯನ್ನು ಪ್ರತಿಪಾದಿಸಿದ್ದಾರೆ.

ಗಂಗಾಂಬಿಕೆಯ ದಾಸೋಹ ಪ್ರೀತಿ-ಕಾಯಕ ನಿಷ್ಠೆ ಗುರು-ಲಿಂಗ-ಜಂಗಮಭಕ್ತಿ ಗೃಹಿಣಿ ವ್ಯಕ್ತಿತ್ವವನ್ನು ಆಕೆಯ ವಚನಗಳ ಮೂಲಕ ಪರಾಮರ್ಶಿಸಿದ್ದಾರೆ. ಮಗನನ್ನು

ಕಳೆದುಕೊಂಡು ಶೋಧಿಸುವ ತಾಯಿ ಹೃದಯದ ಆಕ್ರಂದನವನ್ನು ಅತ್ಯಂತ ಭಾವಸ್ಪರ್ಶಿಯಾಗಿ ದಾಖಲಿಸಿದ್ದಾರೆ. ಒಟ್ಟಾರೆ ಈವರೆಗಿನ ಅಧ್ಯಯನಗಳಲ್ಲಿ ಮತ್ತು ಕಾವ್ಯಗಳಲ್ಲಿ ಬಸವಣ್ಣನವರ ಪತ್ನಿಯಾಗಿದ್ದರೂ ನೀಲಾಂಬಕೆಗೆ ದೊರೆತ ಪ್ರಶಸ್ತ್ಯೆ ಗಂಗಾಂಬಿಕೆಗೆ ದೊರೆಯದಿರುವುದನ್ನು ಎತ್ತಿತೋರಿಸುವ ಲಲಿತಾಂಬಾ ಗಂಗಾಂಬಿಕೆಯ ಅಂತರಂಗದ ಬದುಕನ್ನು ಆದರ್ಶಗಳನ್ನು ನಿರೂಪಿಸುವ ನಮ್ರ ಪ್ರಯತ್ನವನ್ನು ಮಾಡಿದ್ದಾರೆ.

ಗ್ರಂಥ: ಮಾರ್ಗ–೧–ನೀಲಲೋಚನೆ ಪರಿಶೀಲನೆ, ಬಸವಣ್ಣನವರ ಪತ್ನಿ ನೀಲಾಂಬಿಕೆಯನ್ನು ಕುರಿತು ರಚಿಸಿದ ಲೇಖನ

ಹರಿಹರನು ಬಸವರಾಜ ದೇವರ ರಗಳೆಯಲ್ಲಿ, ಬಸವಣ್ಣನವರು ಜಂಗಮ ಪ್ರಾಣಿಗಳು, ಜಂಗಮ ಭಕ್ತಿಯ ಅನನ್ಯ ಸಾಧಕರೆನ್ನುವುದನ್ನು ಸ್ಫುಟಗೊಳಿಸುವ ಹಲವಾರು ಪ್ರಸಂಗಗಳನ್ನು ಚಿತ್ರಿಸಿದ್ದಾನೆ. ಅಂಥ ಒಂದು ಸನ್ನಿವೇಶ ಸುಖೀ ಜಂಗಮ ಪ್ರಸಂಗ ಬಸವಣ್ಣನ ಭಕ್ತಿಯನು ಪರೀಕ್ಷಿಸಲು ಶಿವನು ಸುಖೀ ಜಂಗಮನಾಗಿ ಬಸವಣ್ಣನಿಂದ ಪೂಜೆಗೊಂಡು, ಅಂದಿನ ರಾತ್ರಿ ಬಸವಣ್ಣನ ಮನೆಯಲ್ಲಿ ತಂಗುತ್ತಾನೆ. "ಎಲೆ ಬಸವರಾಜ ಹೆಂಗೂಸಿಲ್ಲದೆ ಎಂದುರಿ ಇದ್ದುದಿಲ್ಲೊ" ಎಂದು ತನ್ನ ಆಸೆ ವ್ಯಕ್ತಪಡಿಸಿದಾಗ ಬಸವಣ್ಣನು ಊರಲ್ಲಿರುವ ವೇಶ್ಯೆಯರಿಗೆ ಬರಲು ತಿಳಿಸಿದರೂ ಯಾರೂ ಬಿಡುವಾಗಿರದ ಕಾರಣ ಜಂಗಮನ ಆಸೆಯನ್ನು ನೇರವೇರಿಸಲಾಗದಿದ್ದಾಗ ನೀಲಾಂಬಿಕೆ ತನ್ನನ್ನು ಬಸವಣ್ಣ ಜಂಗಮನಿಗೆ ಕೊಡುವನೆಂದು ಊಹಿಸಿ ಸಿಂಗರಿಸಿಕೊಂಡು ಸಿದ್ಧಳಾಗುತ್ತಾಳೆ. ಬಸವಣ್ಣ ನೀಲಾಂಬಿಕೆಯನ್ನು ಸುಖೀ ಜಂಗಮನ ಹತ್ತಿರ ಕಳಿಸುತ್ತಾನೆ. ಬಸವಣ್ಣನ ನಿಷ್ಕಾಯ ಭಕ್ತಿಗೆ ಮೆಚ್ಚಿದ ಶಿವ ತನ್ನ ನಿಜರೂಪವನ್ನು ತೋರಿಸಿ ಬಯಲಾಗುತ್ತಾನೆ. ಅಂದಿನಿಂದ ಬಸವಣ್ಣನವರು ನೀಲಾಂಬಿಕೆಯನ್ನು ಪಾರ್ವತಿ ಶಿವನ ಪತ್ನಿ ಸಮಾನಳೆಂದು ಆರಾಧಿಸಿದರೆನ್ನುವ ಕಥೆಯನ್ನು ಆಧರಿಸಿ, ನೀಲಲೋಚನೆಯ ಶೀಲವನ್ನು ಶಂಕಿಸಿ ಕನ್ನಡದ ಖ್ಯಾತ ಸಂಶೋಧಕರು ಬರೆದ ಲೇಖನದಲ್ಲಿ ನಡೆದ ಶರಣರ ಚಾರಿತ್ರ್ಯವಧೆಯು ಬಸವ ಧರ್ಮದ ಅನುಯಾಯಿಗಳ ಪ್ರತಿಭಟನೆ ಸಮಾಜದಲ್ಲಿ ಗೊಂದಲವನ್ನುಂಟು ಮಾಡಿದ ಪ್ರಸಂಗದಲ್ಲಿ ಲಲಿತಾಂಬಾ ಅವರು ಬರೆದ ಲೇಖನವಿದು. ಶರಣರ ಹಲವಾರು ವಚನಗಳು ಸಂವಾದ-ಸಂಭಾಷಣೆಯ ರೂಪದಲ್ಲಿರುವಂತೆ ಸ್ವರತದ ಹೇಳಿಕೆಗಳೂ ಆಗಿರುವುದು ಸ್ಪಷ್ಟ ಹೀಗೆ ಸ್ವವಿಮರ್ಶೆ-ಸಮಾಜ ವಿಮರ್ಶೆಗಳೆರಡನ್ನು ಏಕಕಾಲದಲ್ಲಿ ಒಳಗೊಂಡಿರುವ ವಚನಗಳನ್ನು ಎಚ್ಚರದಿಂದ ಅರ್ಥೈಸಬೇಕಾಗುತ್ತದೆ. ವಚನಗಳ ತಾತ್ವಿಕತೆ ಅಧ್ಯಾತ್ಮಿಕತೆ ಸಾಂಕೇತಿಕ ರೂಪಕ ಶಕ್ತಿಯನ್ನು ಅರಿತವರಿಗೆ ವಚನಗಳ ಅರ್ಥದ ನೆಲೆಗಳನ್ನು ಮುಟ್ಟುವುದು ಸಾಧ್ಯ. ಎನ್ನುವ ಲಲಿತಾಂಬಾ ಅವರು ಮನಬಂದಂತೆ ವಚನಗಳಿಗೆ

ಅರ್ಥ ಹಚ್ಚುವುದು ತಮ್ಮ ಆಸಕ್ತಿ ಮತ್ತು ಅಭಿರುಚಿಗಳನ್ನು ಶರಣರಿಗೆ ಆರೋಪಿಸಿ ಅವರ ಅನುಭಾವಿಕ ವ್ಯಕ್ತಿತ್ವಗಳನ್ನು ಲೌಕಿಕತೆಯ ನೆಲೆಯಲ್ಲಿ ಅಥೈಸುವ ಸಂಶೋಧನಾ ಪ್ರವೃತ್ತಿಗಳನ್ನು ಖಂಡಿಸಿದ್ದಾರೆ.

ಶಿವಶರಣರು ಅದರ್ಶಜೀವಿಗಳು: ಸಮಜದ ದೋಷ-ದೌರ್ಬಲ್ಯಗಳನ್ನು ನಿರ್ಧರಿಸಿ ತಮ್ಮ ಪವಿತ್ರವಾದ ಬದುಕು-ಉದಾತ್ತವಾದ ಚಿಂತನೆಗಳಿಂದ ಮನುಕುಲಕ್ಕೆ ಮಾದರಿಯಾಗುವ ಸಾರ್ವಕಾಲಿಕ ಸತ್ಯಗಳನು ವಚನಗಳಲ್ಲಿ ವಿವರಿಸಿದ್ದಾರೆ. ಅಂತೆಯೇ ವಚನಗಳನ್ನು ಅರ್ಥಮಾಡಿಕೊಳ್ಳಲು "ಅಧ್ಯಾತ್ಮಿಕ ಹಿನ್ನೆಲೆ ಇರಬೇಕು ಸದ್ಭಾವನೆಬೇಕು ವಚನ ಸಾಹಿತ್ಯವನ್ನು ತಪಸ್ಸಿನಂತೆ ಅಭ್ಯಾಸಮಾಡಬೇಕು." ವಚನಗಳನ್ನು ಅಂತರಂಗದ ಅನಾವರಣಕ್ಕೆ ಶರಣ ಶರಣೆಯರ ಅಭಿವ್ಯಕ್ತಿಯ ರೀತಿ ಶರಣರ ಗುರಿಗಳ ಸ್ಪಷ್ಟಕಲ್ಪನೆ ಇದ್ದರೆ ಮಾತ್ರ ಅರ್ಥಸುಲಭ ಎನ್ನುವುದು ಲಲಿತಾಂಬಾ ಅವರು ಹಲವಾರು ಬೆಡಗಿನ ವಚನಗಳ ವಾಚ್ಯಾರ್ಥ-ಲಕ್ಷ್ಯಾರ್ಥಗಳಲ್ಲಿರುವ ದ್ವಂದ್ವವನ್ನು ವಿರೋಧಾಭಾಸಗಳನ್ನು ಎತ್ತಿತೋರಿಸಿ, ವಚನಗಳ ಅರ್ಥೈಸುವಿಕೆಯಲ್ಲಿ ಪ್ರಬುದ್ಧ ಚಿಂತನೆ-ಮನನದ ಅಗತ್ಯವಿದೆ ಎಂದು ತಿಳಿಸಿದ್ದಾರೆ. ನಂತರ ಉದ್ದೇಶಿತ 'ಮಾರ್ಗ-೧' ಗ್ರಂಥದಲ್ಲಿರುವ ನೀಲಾಂಬಿಕೆಯನ್ನು ಕುರಿತ ಲೇಖನದ ಅಕ್ಷೇಪಾರ್ಹ ಸಂಗತಿಗಳನ್ನು ಶರಣರ ಮಹೋನ್ನತ ಜೀವನದೃಷ್ಟಿ, ಆದರ್ಶಗಳ ಹಿನ್ನೆಲೆಯಲ್ಲಿ ಚರ್ಚಿಸಿ ಬಸವಣ್ಣನವರ ಜಂಗಮ ಭಕ್ತಿಯ ಉತ್ಕಟತೆಯ ಪ್ರತೀಕವಾಗಿ ಹರಿಹರ ಚಿತ್ರಿಸಿರುವ ಭಾವ ಪವಾಡ ಸದೃಶ್ಯ ಕಥೆಯ ವಾಚ್ಯಾರ್ಥ ಗ್ರಹಿಕೆಯಿಂದಾಗುವ ಅಪಾಯಗಳನ್ನು ವಿಶ್ಲೇಷಿಸಿರುವುದು ಪ್ರೊ. ಲಲಿತಾಂಬಾ ಅವರ ವೈಚಾರಿಕ ಸ್ಪಷ್ಟತೆ ವಿಮರ್ಶಾತ್ಮಕ ಅಧ್ಯಯನಕ್ಕೆ ನಿದರ್ಶನವಾಗಿದೆ.

ವಚನಗಳನ್ನು ಆಧರಿಸಿ ಶರಣರ ವ್ಯಕ್ತಿತ್ವವನ್ನು ಕಟ್ಟಿಕೊಳ್ಳುವಾಗ ವಿದ್ವಾಂಸರು -ಸಂಶೋಧಕರಿಗಿರಬೇಕಾದ ಸೂಕ್ಷ್ಮತೆ ಹೊಣೆಗಾರಿಕೆ ಮತ್ತು ಅಕರಗಳ ಅಧಿದೃತತೆಯ ಜೊತೆಗೆ ಎಚ್ಚರಿಸಿರುವುದು ಅವರಿಗಿರುವ ತಾತ್ವಿಕ ಎಚ್ಚರವನ್ನು ಪರಿಚಯಿಸುತ್ತದೆ.

"ಆಯ್ದಕ್ಕಿ ಮಾರಯ್ಯ -ಲಕ್ಕಮ್ಮ" ದಂಪತಿಗಳ ಕಾಯಕ ಶ್ರದ್ಧೆ

ಸತ್ಯ ಶುದ್ಧವಾದ ಅರಿವಿನ ದಾರಿಯನ್ನು ಪರಿಚಯಿಸುವ ರೂಪಕ ಶರಣರ ಕಾಯಕ-ತತ್ವದ ಪ್ರತೀಪಾದನೆಯನ್ನೊಳಗೊಂಡಿದೆ. ೧೯೯೩ರಲ್ಲಿ ರೇಡಿಯೋ ಪ್ರಸಾರಕ್ಕಾಗಿ ಬರೆಕ ರೂಪಕವಿದು. ವಚನಗಳ ಹಿನ್ನೆಲೆಯಲ್ಲಿ ಮಾರಯ್ಯ-ಲಕ್ಕಮ್ಮನವರ ಚರಿತ್ರೆ ಮತ್ತು ಅಧ್ಯಾತ್ಮಿಕತೆಯನ್ನು ಪರಿಚಯಿಸಲಾಗಿದೆ. ಜಾತಿ- ಭೇದವಿಲ್ಲದೇ. ಲಿಂಗತಾರತಮ್ಯವಿಲ್ಲದೇ ಎಲ್ಲರಿಗೂ ದುಡಿದುಣ್ಣುವ ಕಾಯಕ ನಿಷ್ಠೆಯನ್ನು ಕಲಿಸಿದ ಶರಣರು ಕಾಯಕವನ್ನು ಕೈಲಾಸವಾಗಿಸಿಕೊಂಡಿದ್ದನ್ನು ವಿವರಿಸಿದ್ದಾರೆ. ಕಾಯಕ

ನಿರತವಾದಡೆ ಗುರುದರುಶನನಾದರೂ ಮರೆಯಬೇಕು ಲಿಂಗ-ಜಂಗಮದರುಶನನಾದರೂ ಮರೆಯಬೇಕು ಎನ್ನುವ ಶರಣರ ಗುರುಲಿಂಗಜಂಗಮಕ್ಕೆ ಕಾಯಕದಿಂದಲೇ ಮುಕ್ತಿ ಎಂದು ಕಾಯಕದ ಹಿರಿಮೆಯನ್ನು ಎತ್ತಿಹಿಡಿದು ದುಡಿಮೆಯಲ್ಲಿ ದೇವರನ್ನು ಕಂಡ ಕಾಯಕ ಜೀವಿಗಳು ಎನ್ನುವುದನ್ನು ಪರಿಣಾಮಕಾರಿಯಾಗಿ ಬಿಂಬಿಸಿರುವ ರೂಪಕವಿದು.

'ದೇವರ ಒಲುಮೆಗೆ ಶರಣರು ತೋರಿಸುವ ಮಾರ್ಗ' ಲೇಖನವು ಶರಣರ ದೇವರ ಪರಿಕಲ್ಪನೆಯನ್ನು ಪರಿಶೀಲಿಸುವ ಲೇಖನ ಅಧ್ಯಾತ್ಮಸಾಧನೆಯ ಮೂಲಕ ದೈವೀತತ್ವದ ಅನುಸಂಧಾನವು ಶ್ರೇಷ್ಠಮಾನವರಿಗೆ ಮಾತ್ರ ಸಾಧ್ಯವಾಗುತ್ತದೆ. ಜನಸಾಮಾನ್ಯರು ಶುದ್ಧಭಾವ- ಬುದ್ಧಿ, ನೀತಿಸಂಪನ್ನತೆ, ಪ್ರೀತಿ ಹೀಗೆ ಅಂತರಂಗ -ಬಹಿರಂಗ ಶುದ್ಧಿಯ ಮೂಲಕ ದೇವರ ದಯ ಸಾಧ್ಯ ಎನ್ನುವ ಲೇಖಕಿ ತೀರ್ಥಕ್ಷೇತ್ರಗಳಲ್ಲಿ ದೇವರನ್ನು ಹುಡುಕುವ ಅಜ್ಞಾನವನ್ನು ಆಡಂಬರದ ಪೂಜೆ ಜಪ-ತಪ, ಯಾತ್ರೆ-ಮುದ್ರೆ-ಲಾಂಛನಗಳಲ್ಲಿ ದೇವರನ್ನು ಗುರುತಿಸಿಕೊಳ್ಳುವ ಮೌಢ್ಯವನ್ನು ಕುರಿತು ಶರಣರ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ. 'ಅರಿವೇಗುರು' ಶರಣರ ಆದರ್ಶ ಅದನ್ನು ಸಾಧಿಸುವುದು ಸಾಧಾರಣರಿಗೆ ಅಳಿವಲ್ಲ. ಸಾಕಾರದಿಂದ ನಿರಾಕಾರವರೆಗೆ ಶರಣರ ದೈವಿ ಅನುಸಂಧಾನದ ವಿಭಿನ್ನ ನೆಲೆಗಳನ್ನು ವಚನಗಳ ಮೂಲಕ ಪರಿಚಯಿಸಿದ್ದಾರೆ. "ಶಿವ ಪಥವನರಿವಡೆ ಗುರುಪಥವೇ ಮೊದಲು" ಎನ್ನುವ ಶರಣರು ಗುರುವಿಗೆ ನೀಡಿದ ಮಹತ್ವವನ್ನು ವಿವರಿಸಿ ನಂಬಿಕೆ-ನಿಷ್ಠೆ-ಶ್ರದ್ಧೆಯುಳ್ಳ ಶುದ್ಧ ಭಕ್ತಿಗೆ ದೇವರ ಒಲುವೆ, ಸಾಧ್ಯವೆಂದಿದ್ದಾರೆ. ದೈವೀ ತತ್ವವನ್ನು ಅಗಮ್ಯ-ಅಗೋಚರ ಅಪ್ರತಿಮ ಎನ್ನುವ ಶರಣರು ಸತ್ಯ ಶದ್ಧಕಾಯಕವನ್ನು ದೇವನೊಲುಮೆಯ ಮಾರ್ಗವೆಂದ ಬೋಧಿಸಿ ಶ್ರಮ ಸಂಸ್ಕೃತಿಗೆ ನೀಡಿದ ಮನ್ನಣೆಯನ್ನು ಎತ್ತಿತೋರಿಸಿದ್ದಾರೆ. ದೇವ-ಭಕ್ತರ ಹೃದಯಸಂಬಂಧಕ್ಕೆ ಅಡ್ಡಗೋಡೆಯಾಗಿ ಪುರೋಹಿತಶಾಹಿಯನ್ನೂ ದೇವಾಲಯ ಸಂಸ್ಕೃತಿಯನ್ನು ನಿರಾಕರಿಸಿ 'ದೇಹ ದೇವಾಲಯ'ವಾಗಿಸಿದ ಶರಣರ ಕ್ರಾಂತಿಕಾರಿ ನಿಲುವನ್ನು ಷಟ್‌ಸ್ಥಲ ಅಷ್ಟಾವರಣ ಪಂಚಾಚಾರಗಳ ಅರ್ಥಮಹತ್ವವನ್ನು ಇಹಪರಗಳ ಸಮನ್ವಯವನ್ನು ಏಕದೈವ ನಿಷ್ಠೆಯನ್ನು ಮನಗಾಣಿಸಿದ್ದಾರೆ.

'ಶರಣಸಾಹಿತ್ಯ ಸಂಶೋಧನೆಯ ಆದ್ಯರು'

ಡಾ.ಫ.ಗು. ಹಳಕಟ್ಟಿಯವರ ಜೀವನ ಸಾಧನೆಗಳನ್ನು ಪರಿಚಯಿಸುವ ಲೇಖನ. ಶತಮಾನಗಳ ಕಾಲ ಅಜ್ಞತವಾಗುಳಿದಿದ್ದ ವಚನಸಾಹಿತ್ಯವನ್ನು ಶೋಧಿಸಿ, ಓಲೆಗರಿಗಳಲ್ಲಿದ್ದ ಅನುಭಾವನಿಧಿಯನ್ನು ಕನ್ನಡಿಗರಿಗೆ ಪರಿಚಯಿಸುವ ಧ್ಯೇಯವನ್ನು ಬದುಕಿನ ಗುರಿಯಾಗಿಸಿಕೊಂಡು ವಚನ ತಪಸ್ವಿ ವಚನಪಿತಾಮಹ ಡಾ.ಫ.ಗು.

ಹಳಕಟ್ಟಿಯವರು ಸಾಧನೆಯನ್ನು ಎತ್ತಿತೋರಿಸಿದ್ದಾರೆ. ಕನ್ನಡ ನೆಲದ ಮಹಾಯುಗವೊಂದನ್ನು ಕುರಿತು ಕನ್ನಡಿಗರ ಕಣ್ಣು ತೆರೆಸಿದ ಹಳಕಟ್ಟಿಯವರು ಚಾರಿತ್ರಿಕ ಸಾಧನೆಯನ್ನು ನೂರಾರು ಶರಣರ ವಚನರಾಶಿಯನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸುವಲ್ಲಿ ತೋರಿದ ಶ್ರದ್ಧೆ, ನಿಸ್ಪ್ರಹ ಸೇವೆ ಸಂಶೋಧನಾ ಸಾಮರ್ಥ್ಯವಾಗಿ ದಣಿವರಿಯದ ದುಡಿಮೆಯನ್ನು ಸಂಸ್ಕೃತ ಸಾಹಿತ್ಯಿಕ ಪ್ರತಿಯನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ಶಿವನುಭವ ಪತ್ರಿಕೆಯ ಮೂಲಕ ಪ್ರಕಟಿಸಿದ ಸಾಹಿತ್ಯ ರಾಶಿಯನ್ನು ಪರಿಚಯಿಸಿದ್ದಾರೆ. ಆರು ದಶಕಗಳ ಕಾಲ ಸಾಹಿತ್ಯ ಸೇವೆಯಲ್ಲಿ ಶ್ರೇಷ್ಠ ವಿದ್ವಾಂಸ–ಸಂಶೋಧಕ–ಶ್ರೇಷ್ಠ ಕನ್ನಡಿಗರಾಗಿ ಫ.ಗು.ಹಳಕಟ್ಟಿಯವರ ಪ್ರದರ್ಶಿಸಿದ ಕನ್ನಡ ಪ್ರಜ್ಞೆ–ಕನ್ನಡ ಪ್ರೀತಿಯನ್ನು ಪ್ರಶಂಸಿದ್ದಾರೆ.

'ವೀರಶೈವ ವಿವಾಹ ವೈಶಿಷ್ಟ್ಯ–ಸಮಾಜ ಸಂಪ್ರದಾಯ' ಲಲಿತಾಂಬಾ ಅವರ ಸಮಾಜ–ಸಂಸ್ಕೃತಿಯ ಬಗೆಗಿನ ಆಸಕ್ತಿ–ಅಧ್ಯಯನವನ್ನು ಬಿಂಬಿಸುವ ಲೇಖನ. ಸಮಾಜದಲ್ಲಿ ವಿಶಿಷ್ಟ ಸಂಸ್ಕೃತಿ–ಸಂಪ್ರದಾಯಗಳನ್ನುಳ್ಳ ವೀರಶೈವ ಸಮಾಜದ ಆಚರಣೆಗಳಿಗಿರುವ ಲೌಕಿಕ ಪಾರಮಾರ್ಥಿಕ ವೈಶಿಷ್ಟಗಳನ್ನು ಹೊಂದಿರುವುದನ್ನು ಪ್ರಸ್ತಾಪಿಸುತ್ತ ವೀರಶೈವರ ವಿವಾಹ ಪದ್ಧತಿಯನ್ನು ಹಂತ ಹಂತವಾಗಿ ಪರಿಚಯಿಸುತ್ತಾರೆ. ವಧು ಪರೀಕ್ಷೆಯ ಪ್ರಸಂಗದಿಂದ ಪ್ರಾರಂಭಿಸಿ, ಮದುವೆಯ ವಿಧಿ ವಿಧಾನಗಳನ್ನು ಹಸಿರುವೀಳ್ಯಕಾರ್ಯ ಅಥವಾ ಹಿರೀ ವೀಳ್ಯ, ಲಗ್ನಕಟ್ಟಿಸುವುದು. ಒಳ್ಳಕಲ್ಲುಪೂಜೆ ಶಾಸ್ತ್ರ, ಅರಿಸಿನದ ಶಾಸ್ತ್ರ ಸುರಗಿ, ಮಾಂಗಲ್ಯಧಾರಣ. ಧಾರೆ, ನಾಗೊಲೆ–ಗಂಗೆಪೂಜೆ, ಸುರಗಿ ಸಾಮಾನು ಮನೆತುಂಬಿಸಿಕೊಳ್ಳುವುದು ಇತ್ಯಾದಿ ವಿವಾಹದ ಆಚರಣೆಗಳನ್ನು ನಂತರ ಗರ್ಭವತಿಗೆ ಮಾಡುವ ಕುಬಸ, ಬಯಕೆಯೂಟ ಗರ್ಭಸ್ಥಪಿಂಡಕ್ಕೆ ಲಿಂಗಧಾರಣ, ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿರುವ ಇಷ್ಟಲಿಂಗದೀಕ್ಷೆ ಇತ್ಯಾದಿ ಆಚರಣೆಗಳನ್ನು ಸವಿವರವಾಗಿ ಪರಿಚಯಿಸಿ, ವೀರಶೈವಧರ್ಮವು ವೈಚಾರಿಕ ಧರ್ಮವಾಗಿರುವುದರಿಂದ, ನಕ್ಷತ್ರದೋಷ, ವಾರತಿಥಿದೋಷ ಗಣಿಸುವುದಿಲ್ಲ, ಇಷ್ಟ ಲಿಂಗಪೂಜೆ ಮಾತ್ರ ಸ್ವೀಕೃತ, ಸತ್ಯ ಶುದ್ಧಿ ಕಾಯಕ ಸಮರಸದಾಂಪತ್ಯ, ಸದ್ಭಕ್ತಿ, ಸದಾಚಾರಗಳು ದೇವನೊಲುಮೆಗೆ ಮಾರ್ಗ ಗುರುವಿಗೆ ಶ್ರೇಷ್ಠ ಸ್ಥಾನ, ಸ್ತ್ರೀ ಪುರುಷರಿಗೆ ಸಮಾನತೆ ಉದಾತ್ತವಾದ ಮಾನವತೆಯ ತಳಹದಿಯುಳ್ಳ ವೀರಶೈವಧರ್ಮವು ಸಕಲ ಜೀವಾತ್ಮರಿಗೆ ಲೇಸಬಯಸುವ ಶ್ರೇಷ್ಠಧರ್ಮ ಎಂದು ವೀರಶೈವ ಧರ್ಮದ ಲಕ್ಷಣಗಳನ್ನು ವಿವರಿಸಿದ್ದಾರೆ.

ಸಂಖ್ಯೆಯಲ್ಲಿ ವಿಪುಲವಾಗಿರುವ ವೀರಶೈವ ಮಠಗಳು ಸಮಾಜ ಮುಖಿಯಾಗಿ ಕ್ರೀಯಾಶೀಲಗೊಳ್ಳಬೇಕು ಮತ್ತು ಸಮಕಾಲೀನ ಅಗತ್ಯ ಆಶಯಗಳಿಗನುಗುಣವಾಗಿ ಗುಣಾತ್ಮಕವಾಗಿ ಬೆಳೆದು ವ್ಯವಸ್ಥಿತವಾದ

ಕಾರ್ಯಯೋಜನೆಗಳ ಮೂಲಕ ಅರ್ಥಪೂರ್ಣವೆನಿಸಬೇಕು. ಎನ್ನುವ ಕಾಳಜಿಯಿಂದ ಬರೆದಿರುವ ಲೇಖನ "ಮಠಗಳಿಗೊಂದು ನೀಲನಕ್ಷೆ." ವೀರಶೈವ ಮಠಗಳು ಕರ್ನಾಟಕದಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಕೆಲವು ಬಹಳ ಮಹತ್ಕಾರ್ಯಗಳನ್ನು ಮಹತ್ಸೇವೆಯನ್ನು ಮಾಡುತ್ತಾ ಬಂದಿವೆ. ಮತ್ತು ಕೆಲವು ಇದ್ದು ಇಲ್ಲದಂತಿವೆ. ಅನೇಕ ಜನರು ಮಠಗಳನ್ನು ಸ್ವಾಮಿಗಳನ್ನು ಟೀಕೆಮಾಡುತ್ತಿದ್ದರೂ ಬಹುಸಂಖ್ಯಾತರು ಈಗಲೂ ಬಹಳ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದಾರೆ.

ಅನೇಕ ಸ್ವಾಮಿಗಳು ತಮ್ಮ ಕ್ಷೇಮವನ್ನು ಸುಖವನ್ನು ಬದಿಗಿರಿಸಿ ಸಮಾಜದ ನೆಮ್ಮದಿಗಾಗಿ ಸುಖಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದಾರೆ. ಕಾವಿಯ ಹೆಸರಿನಲ್ಲಿ ಮುಗ್ಧ ಭಕ್ತರ ಸುಲಿಗೆ ಮಾಡಿ ತಮ್ಮ ವೈಭವ ಜೀವನ ನಡೆಸುತ್ತಿರುವ ಸ್ವಾಮಿ ಸ್ವಾಮಿನಿಯರು ಬಹುಶಃ ಕಾವಿಧರಿಸಿದವರ ಬಗೆಗೆ ಕಲಂಕ ಬರುವಂತೆ ಜನರು ಸ್ವಾಮಿಗಳ ಬಗೆ ಬೆಲೆ ಕಳೆದುಕೊಳ್ಳುವಂತೆ ಮಾಡಿದ ಅಪರಾಧಿಗಳು ಎನ್ನಲಡ್ಡಿಯಿಲ್ಲ." ಹೀಗೆ ನಿಷ್ಠುರ ವಿಮರ್ಶೆ ನಿರ್ದಾಕ್ಷಿಣ್ಯ ಸತ್ಯನಿಷ್ಠೆ ಲಲಿತಾಂಬಾ ಅವರ ವೈಚಾರಿಕತೆಗೆ ಹಿಡಿದ ಕನ್ನಡಿ ಸಮಾಜ ಸತ್ಯ ಮೌಲ್ಯಾದರ್ಶಗಳ ಬಗೆಗೆ ಗಾಢವಾದ ಶ್ರದ್ಧೆಯುಳ್ಳ ನಂಬಿಕೆಯಿದ್ದ ಖಚಿತವಾದ ಜೀವನ ದರ್ಶವಹೊಂದಿದ್ದ ಅವರು ಕೆಟ್ಟದನ್ನು ನಿರ್ಭಯವಾಗಿ ಎತ್ತಿತೋರಿಸುತ್ತ, ಅನ್ಯಾಯಕ್ಕೆ ಪ್ರತಿಭಟಿಸುತ್ತ ದನಿಯತ್ತುವ ಮೂಲಕ ತಮ್ಮ ಅವಹನೆಯನ್ನು ವ್ಯಕ್ತಪಡಿಸುತ್ತಾರ. 'ಶಿವಮುಖ' ಸಂಸ್ಕರಣ ಅಭಿನಂದವ ಗ್ರಂಥದಲ್ಲಿ ಪ್ರಕಟವಾಗಿದೆ. (ಶಿವಮೊಗ್ಗ, ಬೆಕ್ಕಿನ ಕಲ್ಮಠದ ಶ್ರೀ ಮಲ್ಲಿಕಾರ್ಜುನ ಮುರುಘಾರಾಜೇಂದ್ರ ಶ್ರೀಗಳ ಪಟ್ಟಾಧಿಕಾರದ ಬೆಳ್ಳಿಹಬ್ಬದ ಸಂಸ್ಮರಣ ಗ್ರಂಥ ೨೦೦೫) ವೈಜ್ಞಾನಿಕಯುಗದ ವಿದ್ಯಮಾನಗಳು ಸಾಂಪ್ರದಾಯಿಕ ವ್ಯವಸ್ಥೆಯನ್ನು ವ್ಯವಸ್ಥೆಗೊಳಿಸುತ್ತಿವೆ. ಆಧುನಿಕಯುಗದ ಪ್ರಭಾವದಿಂದಾಗಿ ಜನಜೀವನದಲ್ಲಿ ಕಂಡು ಬರುತ್ತಿರುವ ಪರಿವರ್ತನೆಗಳಿಗನುಗುಣವಾಗಿ ಧರ್ಮಸಂಸ್ಥೆಗಳೂ ಕೂಡ ತಮ್ಮ ಧ್ಯೇಯೋದ್ದೇಶಗಳಲ್ಲಿ ಕಾರ್ಯಕ್ರಮಗಳಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುವುದು ಅಗತ್ಯ ಜನತೆಯ ಬೇಕು –ಬೇಡಗಳಿಗೆ ಕ್ರಿಯಾತ್ಮಕವಗಿ ಸ್ಪಂದಿಸುವ ಮೂಲಕ ಧರ್ಮ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವುದು ಸಾಧ್ಯ. ಉದ್ಯೋಗದ ಕಾರಣವಾಗಿ ಹರಿದು ಹಂಚಿಹೋಗುತ್ತಿರುವ ಸಮುದಾಯದಲ್ಲಿ ನಗರೀಕರಣದ ರಭಸದಲ್ಲಿಭಾವೈಕ್ಯತೆ, ಬಂಧುತ್ವದ ಮೌಲ್ಯಗಳು ಕಣ್ಮರೆಯಾಗುತ್ತಿರುವ ಸಂದರ್ಭದಲ್ಲಿ ಧಾರ್ಮಿಕ ಸಂಸ್ಥೆಗಳು ಸ್ನೇಹ ಸೇತುವೆಗಳಾಗಿ, ಭಾವನಾತ್ಮಕ ಆಸರೆ ನೀಗುವ ಕೊಂಡಿಗಳಾಗಿ ಕೆಲಸ ಮಾಡಬೇಕಾದ ಅಗತ್ಯವಿದೆ. ಸಾಮಾಜಿಕ ಸಮಸ್ಯೆಗಳಿವೆ, ಸ್ಪಂದಿಸುವ ಮೂಲಕ ಸಾಮಾಜಿಕ ಮನ್ನಣೆ ಪಡೆಯಬೇಕು ಅಧ್ಯಾತ್ಮಿಕತೆಯ ಉನ್ನತ ಮೌಲ್ಯಗಳನ್ನು ಜೀವಂತವಾಗಿರಿಸಬೇಕಾದ ಮುಖ್ಯ ಕರ್ತವ್ಯದೊಂದಿಗೆ ಮಠಗಳು

ಧರ್ಮ ಜಾತಿ–ವರ್ಗ. ವರ್ಣ ನಿರುಪೇಕ್ಷವಾದ ನೆಲೆಯಲ್ಲಿ ಸಮಷ್ಟಿಯ ಸಮಸ್ಯೆಗಳಿಗೆ ಸ್ಪಂದಿಸಬೇಕು. ಮಠಾಧಿಪತಿಗಳು ನೀತಿ ಶೀಲ ಸಚ್ಚಾರಿತ್ರ್ಯವಂತರಾಗಿ ತಪಸ್ಸಿಗಳಾಗಿ ವಿಚಾರ ಸಂಪನ್ನರಾಗಿ ತಮ್ಮ ವ್ಯಕ್ತಿತ್ವದ ಘನತೆಯಿಂದ ಜನಾದರ ಪಡೆಯುವಂಥವರಾಗಬೇಕು. ಬಡತನ–ನಿರುದ್ಯೋಗ–ಶಿಕ್ಷಣ–ಆರೋಗ್ಯ ಮುಂತಾದ ಮೂಲಭೂತ ಅಗತ್ಯಗಳ ಬಗೆಗೆ ವಿನಿಯೋಗಿಸಬೇಕು ಇತ್ಯಾದಿ ಸಂಪನ್ಮೂಲಗಳನ್ನು ಸಮಾಜವು ಉಳ್ಳವರಿಂದ ಪಡೆದು ವಿನಿಯೋಗಿಸಬೇಕು ಇತ್ಯಾದಿ ಸಮಾಜದ ಧಾರ್ಮಿಕ–ವೈಚಾರಿಕ ಜಾಗೃತಿಗಾಗಿ, ಯೋಜನೆಗಳನ್ನು ರೂಪಿಸಬೇಕು ಇತ್ಯಾದಿಯಾಗಿ ಹಲವಾರು ರಚನಾತ್ಮಕ ಸಲಹೆ ಸೂಚನೆಗಳನ್ನು ಲೇಖಕಿ ನೀಡುತ್ತಾರೆ.

ಶಾಂತಾ ಇಮ್ರಾಪೂರ

'ಚಿತ್ತಾರ'
ನಿರ್ಮಲನಗರ, ಧಾರವಾಡ

■

## ಅನುಬಂಧ

## ಕಿರು ಪರಿಚಯ

## ಹಣತೆ ಹಚ್ಚಿ ಹುಡುಕುತಿರುವೆ

ಲೇಖಕಿ: ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ
ಪ್ರಸಾದ ಪ್ರಕಾಶನ, "ಶಿವಪ್ರಸಾದ"
೮ನೇ ಕ್ರಾಸ್, ಕಲ್ಯಾಣನಗರ, ಧಾರವಾಡ – ೫೮೦ ೦೦೭

ಇದು ಪ್ರೊ: ಲಲಿತಾಂಬ ವೃಷಭೇಂದ್ರಸ್ವಾಮಿ ಅವರ ಎರಡನೆಯ ಕವನಸಂಕಲ. ಸಂದರ ಮುಖಪುಟವುಳ್ಳ ೫೧ ಕವನಗಳುಳ್ಳ ಈ ಕವನಸಂಕಲನ ಕವಯಿತ್ರಿಯ 'ಸಾಚಾ ಜನರ' ಹುಡುಕಾಟವನ್ನು ಅಭಿವ್ಯಕ್ತಿಗೊಳಿಸುತ್ತದೆ. ಈ ಹುಡುಕಾಟವು. ಸಾಂಕೇತಿಕವಾಗಿ ಉನ್ನತ ಜೀವನ ಮೌಲ್ಯಗಳ ಅನ್ವೇಷಣೆಯೂ ಆಗಿದೆ. ಸಮಾಜದಲ್ಲಿ ಆದ ಅಧಃಪತನಕ್ಕಾಗಿ ಕವಯಿತ್ರಿಯರ ವಿಷಾದವೂ ಕವನಗಳಲ್ಲಿ ವ್ಯಕ್ತವಾಗಿದೆ. ಮಹಳೆಯರ ಬಗ್ಗೆ ಇದ್ದ ಹಲವಾರು ಕವನಗಳು ಅತ್ಯಂತ ಸರಳ, ಮೃದು ಭಾವನೆಗಳಿಂದ ಪೂರಿತವಾಗಿವೆ. ಅವರ ಚುಟುಕವೊಂದು ಇಲ್ಲಿದೆ:

"ಇಂದಿನ ವಿದ್ಯಾವಂತರ ಮಕ್ಕಳೆಲ್ಲಾ
ಪರದೇಶದಲ್ಲಿ ನೆಲಸಿ 'ಪರದೇಶಿ'ಗಳಾದರೆ
ಅವರ ಪಾಲಕರು ತಮ್ಮ ದೇಶದಲ್ಲೇ
'ಪರದೇಶಿ'ಗಳಂತೆ ಬದುಕುತ್ತಿದ್ದಾರೆ!"

–ಡಾ. ಯಶೋಧಾ ಭಟ್ಟ

■

**VACHANANJALI-** Acollection of Vachanas with interpretation: Lalithamba Vrishabhendra Swamy: Shiva Prakashana, Kalyana Nagar, Dharwad-7. Rs. 40.

The author's knowledhe of the Vachana literature is evident in her work. the Vachananjali. The book consists of Vachanas of Basavanna. Akkamahadevi and Allama Prabhu. The book comprises Vachana poets beginning from the earliest Fedara Dasimayya up to the recent poet. Panchakshari Gavayi. The author has selected Vachanas from nine women poets and 24 Veerashaiva Sharanas. The aim of the author is to popularise reading, understanding and enjoying the Vachana literature among the common masses. She believes that the Vachanas would guide the people in their daily lives and the reading would bring peace to their hearts and make life meaningful. Her explanation of the Vachanas helps one to know the philosophy of hte Sharanas. The author has included Shiva Yogi of Ghana Matha, Nijaguna Shivayogi and Sarvajna in her selection of Vachanas. The reading of this book would help on to know the meaning of the Vachanas and arouse interest in reading of this book would help on to know the meaning of the Vachanas and arouse interest in reading Sharana literature. The author's explanations of the Vachanas are simple and forcegul. The aim and hope of the author would be fulfilled through this book. As

the author has stated in her foreword one would benefit if one makes it a habit to read and appreciate one Vachana a day regularly from this book.

A. S. Kedilaya
The Hindu- 20/8/96

■

## ಕಾವ್ಯಾಂಜಲಿ

### ಭವ್ಯಮಾನದ

ಭೂಸನೂರು ಮಠದ ಕಾವ್ಯ ಭವ್ಯ. ಅದರ ಉಪಮೆ ಪ್ರತಿಮೆ, ವಿಷಯ, ಹೇಳುವ ಶೈಲಿ ರೀತಿ ಎಲ್ಲವೂ ನೂತನ ಹಾಗೂ ಭವ್ಯ. ಇದು ಆಧ್ಯಾತ್ಮಿಕ ಸತ್ವದಿಂದ ಕೂಡಿದ ಕೃತಿ. ಈ ಕೃತಿಯ ಉದ್ದೇಶ ಮನುಷ್ಯನ ಭವಿತವ್ಯದ ರೂಪಲಕ್ಷಣಗಳನ್ನು ನಿರೂಪಿಸುವುದಾಗಿದೆ. ಐತಿಹಾಸಿಕ ಸಂಗತಿಯಾಗಿರುವ ವೀರಶೈವ ಶರಣರ ಆಧ್ಯಾತ್ಮಿಕ ಉನ್ನತಿಯನ್ನು ವಸ್ತುವಾಗಿಟ್ಟುಕೊಂಡು ಈ ಕೃತಿ ಮನುಷ್ಯನ ಜೀವನದ ಪದರು, ಪದರುಗಳನ್ನು ಬಿಚ್ಚುತ್ತಾ, ಮನುಷ್ಯ ಹಾಗೂ ಪರತತ್ತ್ವಗಳ ಗಹನ ಸಂಬಂಧವನ್ನೂ ಬೆಳಕು-ಕತ್ತಲೆ, ಹಗಲು-ರಾತ್ರಿ ಮಣ್ಣು-ಆಕಾಶ ಮೊದಲಾದ ಅನೇಕ ಬಗೆಯ ದ್ವಂದ್ವಗಳ ಪರಿಭಾಷೆಯ ಮೂಲಕ ಕಾವ್ಯ ಬೆಳೆಯುತ್ತದೆ ಈ ಕಾವ್ಯ ಆ ಕಾಂಡಗಳನ್ನೊಳಗೊಂಡಿದೆ.

ಶಿವಶರಣರ ಅಭಿವ್ಯಕ್ತಿ ಮೀಮಾಂಸೆ ಕ್ಲಿಷ್ಟವೂ ಗಹನವೂ ಆಗಿದೆ. ಲೌಕಿಕ ಮತ್ತು ಅಲೌಕಿಕ ಇವೆರಡರ ನಡುವಿನ ಸಂಬಂಧ ಇಲ್ಲಿದೆ. ಅಕ್ಕನ ವಚನಗಳಲ್ಲಿಯೆ ವೇದನೆಯ ಕಾವ್ಯಮಯತೆ, ಬಸವಣ್ಣನ ವಚನಗಳಲ್ಲಿಯ ಪ್ರತಿಮಾನಿಷ್ಠರೆ, ಅಲ್ಲಮನ ವಚನಗಳಲ್ಲಿಯ ರಹಸ್ಯಮಯತೆ ಮುಕ್ತಾಯಕ್ಕನ ಮಾತುಗಳಲ್ಲಿಯ ಒಗ್ಗಟ್ಟು, ದೇವರ ದಾಸಿಮಯ್ಯನ ವಚನಗಳಲ್ಲಿಯ ಸ್ವಭಾವೋಕ್ತಿ ಈ ಕಾವ್ಯ ತನ್ನ ಗುಣಗಳ ಸುವಶಬ್ದ ನಿರ್ಲೇಪವಾಗಿದ್ದು ಪಾರದರ್ಶಕವಾಗಿರುವಂತೆ ನೋಡಿಕೊಂಡಿದ್ದಾರೆ.

ಇನ್ನೊಂದು ಮುಖ್ಯವಾದ ಅಂಶವೆಂದರೆ, ಈ ಕಾವ್ಯದ ಸಾಮಗ್ರಿ ಮತ್ತು ಭಾಷೆ, ಅದು ತಳೆಯುವ ರೂಪ ಇವುಗಳನ್ನು ತಿಳಿಯಲು ಹಿಂದಿನ ಕೃತಿಗಳ ಅಧ್ಯಯನ ಅಗತ್ಯ. ಕವಿಯು ತಾನು ವಿವರಿಸುವ ಕತೆಗೆ ಅಕ್ಕನ ಕತೆಯನ್ನು ನಿಮಿತ್ತವಾಗಿ ಬಳಸಿಕೊಂಡಿದ್ದಾರೆ. ಆದುದರಿಂದ ಕತೆಯನ್ನು ಮನಬಂದಂತೆ ಬೀಸಾಗಿ ಬೆಳೆಸಲು ಸ್ವತಂತ್ರಿಲ್ಲವಾಗಿಸಿಕೊಂಡಿದ್ದಾರೆ.

ಇಲ್ಲಿ ಅಕ್ಕನ ಮಾತುಗಳಲ್ಲಿ ಪ್ರಕಟವಾಗುವ ಭಾವದ ಸಾಮರಸ್ಯ ಇನ್ನೂ ಅಚ್ಚರಿಯನ್ನುಂಟು ಮಾಡುತ್ತದೆ. ಮದುವೆಯೆಂಬ ಅನಿವಾರ್ಯ ವಿದಿಯನ್ನು

ಮೋಕ್ಷ ಸಾಧನೆಗೆ ಉಪಾಯವನ್ನನು ಮಹಾದೇವಿ ಮಾಡಿಕೊಳ್ಳುವ ನಿಲುವು ಅಸಮಾನ್ಯವಾದುದು. ಈಕೆ ಮಲ್ಲಿಕಾರ್ಜುನನ ಭಕ್ತಿ ಪ್ರೀತಿಯನ್ನಾಗಿ ಮಾಡಿಕೊಂಡವಳು. ಆ ಪ್ರೀತಿ ಕಾವ್ಯಸಂವೇದನೆಯಾಗಿ ಉಕ್ಕಿ, 'ಕಾಮಕ್ಕೆ ಬದುಕಿ ತೃಪ್ತಿಗೆ ಸತ್ತು ಹೋಗುವ ಗಂಡು, ಗಂಡರು' ಎಂಬ ಬಣ್ಣನೆಯಲ್ಲಿ ಈ ಇಹ ಜೀವನದ ನಿರ್ವೀರ್ಯತೆಯ ವೇಧಕವಾದ ಚಿತಾವಿದೆ.

ಇಲ್ಲಿ ಕವಿಯು ಮಹಾದೇವಿಯ ವಾದಗಳಲ್ಲಿ ಭಾವಗಳು, ವಿಚಾರಗಳು, ಉಪಮೆ ಮತ್ತು ದೇಷ್ಟಾಂತಗಳಂಥ ಅಲಂಕಾಗಳು ಸಾಲು ಸಾಲಾಗಿ ಬಂದು ವಾದವನ್ನು ಸಮರ್ಥವಾಗಿಸುತ್ತವೆ. ಮಹಾದೇವಿಯ ದಿಗಂಬರ ಸ್ಥಿತಿ ಅವಳ ಸ್ವಾತಂತ್ರ್ಯದ ಅವಳ ಒಂದು ಆತ್ಯಂತಿಕವಾದ ಪ್ರತೀಕವಾಗುತ್ತದೆ. ಮಹಾದೇವಿಯ ತಿಲೂವಳಿಕೆಯನ್ನು ನಿರೂಪಿಸುವುದು ಇಲ್ಲಿ ಮುಖ್ಯವಾಗುತ್ತದೆ. ಆ ತಿಳುವಳಿಕೆ ಮೂಡಿ ಬರಲು ಯಾವ ಸನ್ನಿವೇಶ ಬೇಕೋ ಅಷ್ಟನ್ನೂ ಚಿತ್ರಿಸಿ, ಮುಂದೆ ಆ ತಿಳಿವಳಿಕೆಯಷ್ಟನ್ನೇ ನಿರೂಪಿಸಲಾಗಿದೆ.

ಲಲಿತಾಂಬಾ



## ಸಾಮಾನ್ಯ ಓದುಗನನ್ನು ತಟ್ಟುವ ಸಹಜ ಕಥೆಗಳು

ಲಲಿತಾಂಬಾ ವೃಷಭೇಂದ್ರ ಸ್ವಾಮಿ ಕನ್ನಡ ಬರಹ ಕ್ರಿಯೆಯಲ್ಲಿ ಪಳಗಿದವರೇ! ಇವರ ಬರಹಗಳಲ್ಲಿ ಹೆಚ್ಚಾಗಿ ಬದುಕನ್ನು ಸಾಚಾ ಆಗಿ ಕಂಡು ಚಿಂತನೆಗೈವ ಮನೋಭೀಷ್ಟೆ ಹೆಚ್ಚು ತುಂಬಿಕೊಂಡಿದೆ. ಅವರ ಈ ಅಭೀಪ್ಸೆಗೆ ಪ್ರಸ್ತುತ ಈ ಕಥಾ ಬರವಣಿಗೆಯೂ ಹೊರತಾಗಿಲ್ಲ.

ಈ ಕೃತಿ 'ಬೇರೊಂದು ಮರವೆರಡು' ಕನ್ನಡ ಕಥಾ ಬರಹಕ್ಕೆ ಲೇಖಕಿಯವರ ಮೊದಲ ಕಾಣಿಕೆ. 'ಖಂಡವಿದೆಕೋ ಮಾಂಸವಿದೆಕೋ'. ಯೋಗಾಯೋಗ, ವರ್ಗ ತಂದ ಸ್ವರ್ಗ, ತೀರ್ಮ, ಹಸಿರುಸೀರೆ, ಗಂಡು ಮಗುವೇ ಬೇಕು, ಹತ್ಯೆ, ಬೇರೊಂದು ಮರವೆರಡು, ಹೀಗೂ ನಡೆಯೋದುಂಟೇ, ಪೂರ್ವ ಪಶ್ಚಿಮ, ಆತಂಕ, ಔದಾರ್ಯ ಎಂಬೀ ಕಥೆಗಳು ಸಂಕಲಗೊಂಡಿವೆ.

ಸಣ್ಣ ಕಥೇಗಳ ಕಲಾತ್ಮತಕೆಯು ತಂತ್ರಕೌಶಲ್ಯದ ಕಸರತ್ತಾಗಿರದೇ ಸಹಜ ಬರವ್ಣಣಿಗೆಯ ಸ್ರವಿಸುವಿಕೆ ಇಲ್ಲಿಯ ಸಫಲತೆ.

ಬದುಕನ್ನು ಮೇಲ್ಪದರಿನಲ್ಲಿ ವೀಕ್ಷಿಸಿದ, ಅಲ್ಲಿ ಕಾಣುವ ಆಗುಹೋಗು ನಡೆನುಡಿಗಳನ್ನು ಸಾಚಾರೀತಿಯಲ್ಲಿ ಗ್ರಹಿಸಿ ಚಿತ್ರಿಸುವ ಕಥೆಗಳು ಅಪರೂಪದ ಕಥಾ ವಸ್ತುಗಳನ್ನೊಳಗೊಂಡಿದೆ ಎನ್ನಲಾಗಿದ್ದರೂ, ಸ್ವಂತ ನೋಟದ ಹುಡುಕಾಟದಲ್ಲಿ ದೊರೆತ ಅನುಭವದ ವಿವಿಧತೆ ಓದುಗನಿಗೆ ಲಭಿಸುತ್ತಿವೆ. ಕಥಾ ವಸ್ತುಗಳು ಬಹುತೇಕ ಶಿಷ್ಟ ಮಧ್ಯಮ ವರ್ಗದ ಜನತ ಕೌಟುಂಬಿಕ ಜೀವನದ ಒಳಗಡೆ ಇಣುಕಿ ಅಭಿವ್ಯಕ್ತಿಸಿದ್ದಾಗಿದೆ. ಆ ಬದುಕಿನಲ್ಲಿ ಸಾಮಾನ್ಯಗೊಳ್ಳುವ ತುಡಿತ ಮಿಡಿತ ಬಾಂಧವ್ಯ, ವಿರಸ, ವೈಭವ್ಯ ಕರಬುತನ, ಸಂಕಟ, ಸಮಸ್ಯೆಗಳೆಲ್ಲವನ್ನು ಪಾತ್ರ್ರಗ ಪರಸ್ಪರ ಸಂಬಾಷಣೆಗಳ ಮೂಲಕ ಲೇಖಕಿಯ ಸ್ವಯಂ ನಿರೂಪಣೆಯ ಮೂಲಕವೂ ಮನಮುಟ್ಟುವಂತೆ ತೆರೆದಿಡುತ್ತಾರೆ. ಜೀವನ ನಡವಳಿಕೆಗಳನ್ನು ಭಾವನಾತ್ಮಕ ಅನುಸಂಧಾನಗೊಳಿಸಿ ನಿರೂಪಿಸುವುದೇ ಹೆಚ್ಚಿನಕಥಾ ಮಾರ್ಗವಾಗಿದೆ.

ಹಲವು ಕಥೆಗಳು ನಮ್ಮ ದೂರದರ್ಶನದ ಜನಪ್ರಿಯ ಧಾರಾವಾಹಿಗಳನ್ನು ನೆನಪಿಸುತ್ತವೆ. ಸಾಮಾಜಿಕತೆಯ ವಸ್ತುವಿಗಿಂತಲೂ ಕೌಡುಂಬಿಕ ಬಸುಕಿನ

ಒಳಹೊಗನ್ನು ವಿಶ್ಲೇಷಿಸುವುದರಲ್ಲೇ ಕಥೆಗಳು ಹೆಚ್ಚಿನ ಆಸಕ್ತಿ ತೋರಿಕೊಂಡಿವೆ. ತಂತ್ರಗಳ ಕಸರತ್ತುಗಳಲ್ಲಿದ್ದಂತೆಯೇ ಶೈಲಿಯ ಹೇರಿಕೆಯೂ ಇಲ್ಲ. ಎಲ್ಲವೂ ಸರಳ, ಮುಕ್ತ ಒಂದೇ ವಿಧಾನ, ಆದರೆ ಲೇಖಕಿ 'ಬೇರೊಂದು ಮರವೆರಡು' ಕಥೆಯಲ್ಲಿ ಮಾತ್ರ ಭಿನ್ನವಾದ ತಂತ್ರವನ್ನು ಬಳಸಿದ್ದಾರೆ. ತಾಯಿ, ಪಾರ್ವತಿಮ ಮಗ ಈ ಮೂರು ಪಾತ್ರಗಳೂ ತಮ್ಮ ಸ್ವಗತ ಭಾಷಣದ ಮೂಲಕ ತೊಡಿಕೊಳ್ಳುವ ವಿಧಾನವೇ ಕಥೇಯ ಹಂದರವಾಗಿ ಪ್ರತ್ಯೇಕತೆಯನ್ನು ಸಾಧಿಸಿದೆ. ಕಥೆಗಳೂ ಮೌಖಿಕ ನಿರೂಪಣೆಯಲ್ಲಿ ಕೊಂಡಿದ್ದೇ ಮೌಖಿಕ ನಿರೂಪಣೆಯಲ್ಲಿ ತಾನೆ. ಈ ಕಥೆಗಳೂ ಮೌಖಿಕ ಕಥಾನಿರೂಪಣೆಯು ಬರಹಕ್ಕಿಳಿದಂಥ ಸರಳತೆಯಿಂದೊಡಗೂಡಿದ್ದು ಸಾಮಾನ್ಯ ಓದುಗನನ್ನು ಸುಲಭವಾಗಿ ತಟ್ಟಿ ಸ್ಪಂದಿಸುವ ಬಗೆಯನ್ನು ಹೊಂದಿದೆ.

ನಾ. ಸು. ಭರತನಹಳ್ಳಿ

■

## ನನ್ನ ಬಾಳಸಂಗಾತಿ

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

ಸುಮಾರು ಎಲವತ್ತು ವರುಷಗಳ ನಮ್ಮ ಬದುಕಿನ ಸಿಂಹಾವಲೋಕನವನ್ನು ಮನಸ್ಸಿನಲ್ಲಿಯೇ ಮಾಡಿದಾಗ, ನೋವು-ನಲಿವುಗಳ, ಏರಿಳಿತಗಳ ಸುಖ-ದುಃಖಗಳ 'ಯಾದೋಂಕಿ ಬಾರಾತ್' ನನ್ನ ಕಣ್ಣ ಮುಂದೆ ಹಾದುಹೋಯಿತು.

ಡಾ. ಸ್ವಾಮಿಯವರ ಬದುಕು ತೆರೆದಿಟ್ಟ ಪುಸ್ತಕದಂತೆ ಮುಚ್ಚು ಮರೆಯಿಲ್ಲದ. ಬಿಚ್ಚಿಟ್ಟ ಜೀವನ, ಕಪಟ-ವಂಚನೆಯಿಲ್ಲ: ಮರೆಮೋಸಗಳಿಲ್ಲ: ಕುತಂತ್ರಗಳನ್ನು ಮಾಡಲಿಕ್ಕೆ ಬಾರದ ವ್ಯಕ್ತಿತ್ವ, ಸಾಮಾಜಿಕ ಜೀವನದಲ್ಲಿಯೇ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡವರು. ಕುಟುಂಬ, ಮನೆಯಿಂದ ಬಹಳಷ್ಟು ಆಗು-ಹೋಗುಗಳಿಗೆ ಸಮಾಜವೇ ಹಿನ್ನೆಲೆ. ಹೀಗಾಗಿ ಅವರನ್ನು ಕುಟುಂಬಜೀವಿ ಎನ್ನುವುದಕ್ಕಿಂತ 'ಸಮಾಜ ಜೀವಿ' ಎಂದರೆ ಹೆಚ್ಚು ಸೂಕ್ತವೆನ್ನಿಸುತ್ತದೆ.

ಹೆಂಡತಿ-ಮಗನ ಒಳಿತನ್ನು ಅಪೇಕ್ಷಿಸಿದರೂ, ಅವರಿಗಾಗಿ ಹೆಚ್ಚು ಚಿಂತೆ ಮಾಡಿದರೆ, ಕಾಳಜಿ ವಹಿಸಿದರೆ ಏನೋ ತಪ್ಪು ಮಾಡಿದಂತೆ ಅಥವಾ ಸ್ವಾರ್ಥ ಸಾಧಿಸಿದಂತೆ ಎಂಬ ಭಾವನೆ ಅವರಿಗಿರಬಹುದೆಂದು ನನಗೆಷ್ಟೋ ಬಾರಿ ಅನ್ನಿಸಿದೆ. ಸಂಸಾರದ ಭವಿಷ್ಯಕ್ಕಾಗಿ ಒಳಿತಿಗಾಗಿ ಅವರೆಂದೂ ತಲೆಕೆಡಿಸಿಕೊಂಡವರಲ್ಲ. ಪ್ರಾರಂಭದ ಜೀವನದಲ್ಲಿ ಸಂಸಾರದ ಬಗೆಗೆ, ಅದನ್ನು ಬಹು ಚೆನ್ನಾಗಿ ಮಾಡಿಕೊಳ್ಳುವ ಬಗ್ಗೆ ನಾನೆಷ್ಟೋ ಕನಸು ಕಟ್ಟಿಕೊಂಡಿದ್ದೆ. ಆದರೆ ಆ ಬಗ್ಗೆ ಇವರಿಗೆ ಮಾತಾಡಲೂ ಸಹ ಆಸಕ್ತಿ ಇರುತ್ತಿರಲಿಲ್ಲ. ಆ ಬಗೆಗೆ ಇವರಿಗೆ 'ಕನಸು'ಗಳೇ ಇರಲಿಲ್ಲವೇನೋ ಎನ್ನಿಸುತ್ತದೆ. ಬಸವಣ್ಣನವರ,

'ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ
ಎನ್ನ ಒಡಲಿಂಗೆ, ಎನ್ನ ಒಡವೆಗೆಂದು, ಎನ್ನಮಡದಿ ಮಕ್ಕಳಿಗೆಂದು
ಕುದಿದೆನಾದಡೆ, ಎನ್ನ ಮನಕ್ಕೆ ಮನವೆ ಸಾಕ್ಷಿ
ನಿಮ್ಮ ನಿಲವಿಂಗೆ ಕುದಿವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ
ಕುದಿದೆನಾದೆಡೆ
ತಲೆದಂಡ ಕೂಡಲಸಂಗಮದೇವಾ ॥

ಎಂದು ಬಸವಣ್ಣನಿಗೆ ತಮ್ಮನ್ನು ಒಪ್ಪಿಸಿಕೊಡು ಈ ಆದರ್ಶದಂತೆ ಬಾಳುತ್ತಿದ್ದಾರೆ ಎಂದು ನನಗೆ ಅನ್ನಿಸಿದೆ. 'ನಾಲ್ಕು ಜನರಿಗೆ ಬೇಕಾದವನಾಗಿ, ಬಾಳಬೇಕು, ಸಮಾಜದ ಋಣ ತೀರಿಸಬೇಕು, ನನ್ನ ಬದುಕು ರೂಪಿತವಾದುದೇ ಸಮಾಜದಿಂದ' ಎನ್ನುತ್ತಾರೆ.

ವಿದ್ಯಾರ್ಥಿಗಳು, ಬಡವರು, ಹಳ್ಳಿಗರು, ದಡ್ಡರು, ಮುದುಕರು, ಅಸಹಾಯಕರು ಎಂದರೆ ಇವರಿಗೆ ಹೆಚ್ಚಿನ ಕಾಳಜಿ. ಜೀವನದ ಪ್ರಾರಂಭದ ಬಹು ಸಮಯವನ್ನೆಲ್ಲಾ ಇವರಿಗಾಗಿಯೆ ವಿನಿಯೋಗಿಸಿದರೆನ್ನಬಹುದು. 'ಸಮಾಜ ನನ್ನನ್ನೂ ಕೈಹಿಡಿದು ಎತ್ತದಿದ್ದರೆ, ನಾನು ಎಲ್ಲೋ ಹಳ್ಳಿಯಲ್ಲಿ ಅನಾಮಧೇಯನಾಗಿ ಬದುಕುತ್ತಿದ್ದೆ. ಸಮಾಜದಿಂದ ಮುಂದೆ ಬಂದ ನಾನು ಸಮಾಜಕ್ಕೆ ಕೈಲಾದುದನ್ನು ಮಾಡಬೇಕು ಎಂಬ ಪ್ರಜ್ಞೆ' ಇವರಲ್ಲಿ ಸದಾ ಜಾಗೃತ. ಅವರು ಮಾಡಿದುದೆಲ್ಲವನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಮಾಡಿದ್ದಾರೆ. ಆದರೆ ಇವರಿಂದ ಅನುಕೂಲ ಪಡೆದುಕೊಂಡವರು ಕೃತಘ್ನರಾಗಿ ನಡೆದುಕೊಂಡ ಉದಾಹರಣೆಗಳು ಹೆಚ್ಚಾದಾಗ, ಈಚೆಗೆ ಒಮ್ಮೊಮ್ಮೆ ನೊಂದುಕೊಳ್ಳುವರು. ಆಗಲೂ 'ನಾನು ಹಾಗೆ ಮಾಡಿದೆ, ಹೀಗೆ ಮಾಡಿದೆ' ಎಂದು ಹೇಳಿಕೊಳ್ಳುವುದು ಬಹಳ ಕಡಿಮೆ. ಹಾಗೆ ಅನ್ನುವವಳು ನಾನು ಅಷ್ಟೆ. ಅವರು ಒಂದಲ್ಲ ಒಂದು ರೀತಿಯಲ್ಲಿ ಸದಾಕಾಲವೂ ಸಮಾಜ ಸೇವೆಯನ್ನೂ ಅತ್ಯಂತ ಸಮರ್ಪಣಾಭಾವದಿಂದ ಮಾಡುತ್ತ ಬಂದಿದ್ದಾರೆ. ಜಗತ್ತೆಲ್ಲ ಸುಖದಿಂದಿರಬೇಕು, ಜನರೆಲ್ಲ ಒಬ್ಬರಿಗೊಬ್ಬರು ಅನ್ಯೋನ್ಯವಾಗಿ, ಸಹಕಾರದಿಂದ ಬದುಕಬೇಕೆಂಬುದು ಇವರ ಆಸೆ. ಇವರಲ್ಲಿ ತಾರತಮ್ಯಗಳು ಕಡಿಮೆ ಏನು? ಇಲ್ಲವೆಂದೇ ಹೇಳಬೇಕು. ತಮ್ಮ ಮೊಮ್ಮಗಳನ್ನೂ 'ಪಾಪು' ಎಂದು ಕರೆದಂತೆ ಕೆಲಸದವರ ಮಕ್ಕಳನ್ನೂ 'ಪಾಪು' ಎಂದೇ ಕರೆಯುವರು.

ಪ್ರತಿಷ್ಠಿತ ಸಾಹಿತಿಯೊಬ್ಬರು ಮನೆಗೆ ಬಂದಾಗ ಆತ್ಮೀಯತೆಯಿಂದ. ಸಲುಗೆಯಿಂದ ಮಾತನಾಡಿದಂತೆಯೇ, ಕೈದೋಟದ ಬಂದ ಕೂಲಿಯವನೊಡನೆಯೂ ಮಾತನಾಡುತ್ತಾರೆ. ಮಾನವೀಯ ದೃಷ್ಟಿಯಿಂದ ಅವರಿಬ್ಬರಲ್ಲಿ ಅವರಿಗೆ ಭೇದವೇ ಕಾಣುವುದಿಲ್ಲ. ಆ ಬಗ್ಗೆ ನಾನನು ಅವರೊಡನೆ ಎಷ್ಟೋ ಬಾರಿ ಚರ್ಚಿಸಿದುದುಂಟು. ವಾದಮಾಡಿಯೂ ಇದ್ದೇನೆ. 'ಇದು ಒಂದು ಆದರ್ಶದ ಗುಣ ಹೌದು. ಆದರೆ ಲೌಕಿಕ ಜೀವನದಲ್ಲಿ ಇಂತಹ ನಡೆ ಅನೇಕ ಸಮಸ್ಯೆಗಳಿಗೆ ಎಡೆ ಮಾಡಿಕೊಡುತ್ತದೆ. ಇದನ್ನು ಕೆಳವುಟ್ಟದ ಜನ ದುರುಪಯೋಗಮಾಡಿಕೊಳ್ಳುತ್ತಾರೆ. ಮೇಲ್ಮಟ್ಟದ ಜನ ನಿಮ್ಮ ಬಗ್ಗೆ 'ಅವ್ಯವಹಾರಿ' ಇಂದುಕೊಳ್ಳುತ್ತಾರೆ. ಅವರ ಮನಸ್ಸನ್ನು ತಿರುಗಿಸಲು ಪಟ್ಟ ಶ್ರಮವೆಲ್ಲ ವ್ಯರ್ಥವಾಗಿದೆ. ಅವರಿಗೆ ಈ 'ಸ್ಟಾಂಡರ್ಡ್'ಗಳ ಬಗ್ಗೆ ಮೆಚ್ಚುಗೆ ಇಲ್ಲವಾಗಿ, ನಮಗೆ ಅದರಿಂದಾಗುವ ಪರಿಣಾಮಗಳನ್ನೂ ಎದುರಿಸದೇ ವಿಧಿ ಇಲ್ಲವಾಗಿದೆ.

ಬಡವರ, ಮುದುಕರು, ಹಳ್ಳಿಗರ, ಕಷ್ಟದಲ್ಲಿರುವವರ ಬಗ್ಗೆ ಇವರಿಗೆ ಎಲ್ಲಿಲ್ಲದ ಕಕ್ಕುಲಾತಿ. ಅವರಿಗೆ ತಮ್ಮ ಕೈಲಾದ ಸಹಾಯ ಮಾಡಬೇಕೆಂಬುದು ಇವರ ಸ್ವಭಾವ. ಅವರುಗಳ ಕಷ್ಟಕಂಡ ಆ ಕ್ಷಣದಲ್ಲಿ ಇವರಿಗೆ ತಮ್ಮ ವೈಯಕ್ತಿಕ ತೊಂದರೆಗಳೆಲ್ಲ ಮರೆತು ಹೋಗುತ್ತವೆ. ಅವರ ಕಷ್ಟಗಳೇ ತಮ್ಮ ಕಷ್ಟಗಳೆಂಬಂತೆ, ಅವುಗಳನ್ನೂ ಪರಿಹರಿಸುವ ಬಗ್ಗೆ ಪರದಾಡಿದ ಲೆಕ್ಕವಿಲ್ಲದಷ್ಟು ಘಟನೆಗಳನ್ನು ಅಸಹಾಯಕಳಾಗಿ ಗಮವಿಸಿದ್ದೇನೆ. ಇವರ ಈ ದೌರ್ಬಲ್ಯವನ್ನು ಕಂಡುಕೊಂಡ ಅನೇಕ ಮಂದಿ ದುರುಪಯೋಗ ಪಡಿಸಿಕೊಂಡಿರುವುದೂ ಉಂಟು.; ಮೋಸ ಮಾಡಿರುವುದೂ ಉಂಟು.

**ಬಡ ರಿಕ್ಷಾಚಾಲಕನಿಗೆ ನೆರವು :**

ನಮ್ಮ ವಿವಾಹವಾದ ಹೊಸದರಲ್ಲಿ ನಮ್ಮವೇ ಅನೇಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲಾಗಿಲಿಲ್ಲ. ಬಳ್ಳಾರಿಯಲ್ಲಿ ಮನೆ ಮಾಡಿದ್ದೆವು. ಒಮ್ಮೆ ಸೈಕಲ್ ರಿಕ್ಷಾದಲ್ಲಿ ಬಂದಾಗ ಅದನ್ನು ನಡೆಸುವವನು ಪರಿಚಯವಾದ. ಇವರೊಡನೆ ಮಾತನಾಡುತ್ತಲೇ ಇವರ ಸ್ವಭಾವವನ್ನು ಇತ್ತು. ಆಗಾಗ್ಗೆ ಬರತೊಡಗಿದ. ತನ್ನ ಕಷ್ಟ- ಸುಖ ಹೇಳಿಕೊಳ್ಳುತ್ತಿದ್ದ. ಕೊನೆಗೆ ತನಗೆ ಗುಡಿಸಲು ಹಾಕಿಕೊಳ್ಳಲು ಸಹಾಯ ಮಾಡಬೇಕಾಗಿಯೂ, ದಿನಾ ಸ್ವಲ್ಪ ಸ್ವಲ್ಪ ಕೊಟ್ಟ (ರಿಕ್ಷ ಬಾಡಿಗೆಯ ಹಣದಿಂದ) ತೀರಿಸುವುದಾಗಿಯೂ ಗಂಟುಬಿದ್ದ. ನಮಗೇ ಸಾಕಷ್ಟು ತೊಂದರೆಗಳಿದ್ದರೂ, ನಾನೆಷ್ಟು ಹೇಳಿದರೂ ಕೇಳದೆ ಅವನಿಗೆ ಎಂಟನೂರು ರೂಪಾಯಿ ಕೊಟ್ಟರು! ಅಂದರೆ ಈಗ್ಗೆ ಮೂವತ್ತೊಂಬತ್ತು ವರ್ಷಗಳ ಹಿಂದಿನ ಮಾತು. ನೂರು ರೂಪಾಯಿಗೆ ಒಂದು ತೊಲ ಚಿನ್ನವಿದ್ದ ಕಾಲವದು. ಸುಮಾರು ಎಂಟುತೊಲ ಬಂಗಾರದ ಬೆಲೆ (ಈಗಿನ ಲೆಕ್ಕದಲ್ಲಿ ಕನಿಷ್ಠ ರೂ. ೪೦,೦೦೦ಗಳು) ಏನು ಬದಿಗಿರಿಸಿ ಕೊಟ್ಟುಬಿಟ್ಟರು. ಆ ಕಾಲದಲ್ಲಿ ಡಾ. ಸ್ವಾಮಿಯವರಿಗೆ ರೂ. ೧೨೫, ನನಗೆ ರೂ. ೧೦೦ ಸಂಬಳ ಬರುತ್ತಿತ್ತು. ಹಣ ಪಡೆದಂದಿನಿಂದ ಅವನ ಪತ್ತೆಯೇ ಇಲ್ಲ. ಆಕಸ್ಮಾತ್ ದೂರದಲ್ಲಿ ಕಾಣಿಸಿದರೂ, ರಿಕ್ಷಾವನ್ನು ಬೇರೆ ರೋಡಿಗೆ ತಿರುಗಿಸಿಕೊಂಡು ಹೋಗಿಬಿಡುತ್ತಿದ್ದ. ಇಂತಹ ಘಟನೆಗಳನ್ನು ಬರೆಯುತ್ತಾ ಹೋದರೆ ಐದುನೂರು ಪುಟದ ಪುಸ್ತಕವಾದರೂ ಮುಗಿಯಲಾರದು. ನನ್ನ ಪುಣ್ಯಕ್ಕೆ ಈಚೆಗೆ ಇವರಿಗೆ ಜನರ ಮೋಸಗಾರಿಕೆ, ವಂಚಕತನ ಅರ್ಥವಾಗಿದೆ; ಆಗುತ್ತಿದೆ. ಮೊದಲಿನ ಆ ಧಾರಾಳತನ, ಸುಲಭವಾಗಿ ಜನರನ್ನೂ ನಂಬುವ ಸ್ವಭಾವ ಎಷ್ಟೋ ಕಡಿಮೆಯಾಗಿದೆ. ಇದು ನನಗೆಷ್ಟೋ ಸಂತೋಷ ಕೊಟ್ಟಿದೆ.

**ಹೌಸಿಂಗ್‌ಬೋರ್ಡ ವಿಚಾರ :**

ಸಮಾಜದ ಋಣ ತೀರಿಸಬೇಕೆಂಬ ಭಾವನೆ ಇವರದು. ಜೊತೆಗೆ, ಸ್ವತಃ ಜೀವನದಲ್ಲಿ ಕಷ್ಟ ಅನುಭವಿಸಿದ ಇವರಿಗೆ ಬೇರೆಯವರ ಕಷ್ಟ ನೋಡಲಾಗುವುದಿಲ್ಲ.

ಇಲ್ಲರೂ ಸುಖವಾಗಿರಬೇಕೆಂಬುದು ಅವರ ಆಸೆ. ಆದುದರಿಂದ ತಮ್ಮ ಕೈಲಾದ ಸಹಾಯವನ್ನೂ ಕಷ್ಟದಲ್ಲಿದ್ದವರಿಗೆ ಮಾಡುತ್ತಾ ಬಂದಿದ್ದಾರೆ. ಧಾರವಾಡಕ್ಕೆ ಬಂದ ಮೇಲೆ ಮನೆ ಕಟ್ಟಿಸಬೇಕೆಂಬ ನನ್ನ ಒತ್ತಾಯದಿಂದ, ನಾನೇ ಕೂಡಿಟ್ಟ ಹಣದಿಂದ ಒಂದು ಸೈಟ್ ಕೊಂಡೆವು. ಆದರೆ ಮನೆ ಕಟ್ಟಿಸಲು ಹಣವೆಲ್ಲಿಂದ ಬರಬೇಕು? ಆಗಿನ ಕಾಲದಲ್ಲಿ, ಪಗಾರ ಬಹಳ ಕಡಿಮೆ ಇರುತ್ತಿತ್ತು. ಇಬ್ಬರೂ ದುಡಿಯುತ್ತಿದ್ದೆವೇನೋ ನಿಜ ಆದರೆ ಮನೆತುಂಬ ಬಂಧು ಬಾಂಧವರು ಓದುವ ಮಕ್ಕಳು, ಅಲ್ಲದೆ ಊರಿನಲ್ಲಿರುವ ಬಂಧುಗಳಿಗೂ ಸಹಾಯ ಮಾಡಬೇಕಾಗುತ್ತಿತ್ತು. ಹಾಗಾಗಿ ಮನೆ ಕಟ್ಟಿಸಲು ಸಾಲ ತೆಗೆದುಕೊಳ್ಳಕೆ ವಿಧಿ ಇರಲಿಲ್ಲ.

ಆಗಿನ ಕಾಲದಲ್ಲಿ, ಧಾರವಾಡದಲ್ಲಿ ಹೌಸಿಂಗ್ ಬೋರ್ಡ್ ಮುಂತಾದ ಮನೆ ಕಟ್ಟಲು ಸಾಲಕೊಡುವ ಯಾವ ಸಂಸ್ಥೆಗಳೂ ಇರಲಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಬೆಂಗಳೂರಿನಲ್ಲಿ ಕೋ–ಆಪರೇಟಿವ್ ಹೌಸಿಂಗ್ ಬೋರ್ಡಿನ ಕೇಂದ್ರ ಕಚೇರಿಯಲ್ಲಿ ಕಾನೂನು ಸಲಹೆಗಾರರಾಗಿದ್ದ ಇವರ ಹಳೇಯ ವಿದ್ಯಾರ್ಥಿಯೊಬ್ಬರು, ರೈಲಿನಲ್ಲಿ ಸಿಕ್ಕಾಗ, ಆಧ್ಯಾಪಕರು ಮನೆ ಕಟ್ಟಿಕೊಳ್ಳಲು ಸಹಾಯಕವಾಗುವಂತೆ ಹೌಸಿಂಗ್ ಬೋರ್ಡವೊಂದನ್ನು ಧಾರವಾಡದಲ್ಲಿ ಸ್ಥಾಪಿಸುವುದಾದರೆ ಸಾಲ ದೊರೆಯುವಂತೆ ಮಾಡುವುದಾಗಿ ಹೇಳಿದರಂತೆ. ಆಗ ಇವರಿಗೆ ಇಂತಹ ಒಂದು ಸಂಸ್ಥೆ ಇದ್ದರ, ವಿಶ್ವವಿದ್ಯಾಲಯದ ನೌಕರರಿಗೆಲ್ಲ ವಾಸಕ್ಕೆ ತಮ್ಮದೇ ಒಂದು ಸಂಸ್ಥೆ ಇದ್ದರೆ, ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿದ್ದ ಶ್ರೀಎಸ್.ಎಸ್. ಒಡೆಯರ ಹಾಗೂ ಆಫೀಸ್ ಸುಪರಿಂಟೆಂಡೆಂಟ ಶ್ರೀ ಸಿರಿಯಣ್ಣನವರಲ್ಲಿ ಈ ವಿಷಯ ಪ್ರಸ್ತಾಪಿಸಿದರು. ಆದರೆ ಸಿರಿಯಣ್ಣನವರು, 'ನಿಮ್ಮವೇ ನೀಗದಷ್ಟು ಕೆಲಸಗಳಿವೆ ಮತ್ತೆ ಇದನ್ನೂ ಕಟ್ಟಬೇಡಿ ಸಾಹೇಬ್ರೆ' ಎಂದುಬಿಟ್ಟರಂತೆ. ಸಿರಿಯಣ್ಣನವರೂ ಸಹ ಜನರಿಗೆ ಒಳಿತಾಗಲಿ ಎಂಬ ಸ್ವಭಾವದವರು. ಆದರೆ ಪರಿಸ್ಥಿತಿಯನ್ನು ಅನುಲಕ್ಷಿಸಿ ಹಾಗೆ ಹೇಳಿದರು, ಆದರೆ, ಇವರು "ಇಲ್ಲ ಇದು ನೌಕರದಾರರಿಗೆ" ಮನೆ ಕಟ್ಟಿಕೊಳ್ಳಲು ತುಂಬಾ ಅನುಕೂಲವಾಗುತ್ತದೆ. ಅವರಿಗೆಲ್ಲಾ ಮನೆ ಕಟ್ಟಿಕೊರ್ಳಳ್ಳಲು ಸಹಾಯ ಮಾಡಿದ ಪುಣ್ಯ ನಿಮ್ಮದಾಗುತ್ತದೆ" ಎಂದು ಗಂಟೇಬಿದ್ದರಂತೆ. ಮೇಲಾಗಿ ಶ್ರೀಒಡೆಯರವರು ಸಹ ನೌಕರರ ಹೌಸಿಂಗ್ ಬೋರ್ಡ ಪ್ರಾರಂಭವಾಯಿತು.

ಹಣದ ಅನುಕೂಲಸಾಕಷ್ಟು ಇಲ್ಲದಿದ್ದ ಕಾಲದಲ್ಲಿ 'ನೌಕರದಾರರಿಗೆ ಇದೊಂದು ವರವೇ ಆಯಿತೆನ್ನಬಹುದು. ಮನೆ ಕಟ್ಟಲೇನೋ ಹಣ ಸಿಕ್ಕುವಂತಾಯ್ತು. ಆದರೆ ಅದಕ್ಕೆ ಮೊದಲು ಸೈಟ್ ಕೊಳ್ಳಬೇಕಾಗಿತ್ತಲ್ಲ, ವಿಶ್ವವಿದ್ಯಾಲಯದ ಸಮೀಪದಲ್ಲಿ ಬೇಕಾದಷ್ಟು ಪಾಳುಬಿದ್ದ ಪ್ರೈವೇಟ್ ಜಮೀನಿತ್ತು. ಈಗಿನ ಕಲ್ಯಾಣನಗರ, ನಿರ್ಮಲನಗರ, ನವೋದಯನಗರ, ಜಯನಗರ, ಶಿವಗಿರಿ ಇದೆಲ್ಲ ಖಾಲಿ ಇತ್ತು.

ಆಗ ಆ ಜಮೀನಿನ ಮಾಲೀಕರನ್ನು ಪತ್ತೆ ಹಚ್ಚಿ, ಸಂಪರ್ಕಿಸಿದಾಗ ಅವರಿಗೆ ಅದನ್ನೆಲ್ಲಾ ಸೈಟ್ ಮಾಡಿ ಮಾರುವ ಉದ್ದೇಶವಿದೆ ಇಂದು ಗೊತ್ತಾಯ್ತು. ಭೂಮಿಯ ಬೆಲೆ ಈಗ ಮೂವತ್ತೈದು ವರ್ಷಗಳ ಹಿಂದೆ ಬಹಳ ಕಡಿಮೆ ಇತ್ತು. ಹಲವು ಮಿತ್ರರ ಸಹಾಯದಿಂದ ಗೃಹನಿರ್ಮಾಣ ಸಂಘದ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿದರು. ಇವರು ಅದರ ಸ್ಥಾಪಕ ನಿರ್ದೇಶಕಲ್ಲೊಬ್ಬರಾಗಿದ್ದರು. ನೌಕರರಿಗಾಗಿ ನಿವೇಶನಗಳ ವ್ಯವಸ್ಥೆ ಆಯಿತು, ಆ ಬಗದಗೆ ದಿವಂಗತ ಕಟ್ಟಿ ಎಂಜಿನಿಯರ್ ಅವರನ್ನು ನೆನೆಯಬೇಕು, ಆಗ ಇವರು ತಮಗೆ ಪರಿಚಯವಿದ್ದ ಪ್ರೊಫೆಸರುಗಳ ಮನೆಗೆಲ್ಲಾ ಹೋಗಿ ಸೈಟಗಳು ಸಿಕ್ಕುವ ವಿಚಾರ ತಿಳಿಸಿ, ಕೊಂಡುಕೊಳ್ಳಿರೆಂದು ಒತ್ತಾಯಿಸಿದರು, ಎಷ್ಟೋ ಜನರು, ನಮ್ಮ ಬಳಿ ಹಣವಿಲ್ಲ ನಮಗೆ ಬೇಡ ಎನ್ನುತ್ತಿದ್ದರಂತೆ. ಆಗ ಇವರು 'ಮುಂದೆ ಈ ಬೆಲೆಗೆ ನಿಮಗೆ ಸೈಟ್ ಸಿಕ್ಕೋಲ್ಲ, ಪ್ರಾವಿಡೆಂಟ್ ಫಂಡ ಸಾಲ ತೆಗೆದುಕೊಂಡು ಅಥವಾ ಬಂಗಾರ ಅಡವಿಟ್ಟು ಸೈಟ್ ಕೊಂಡುಕೊಳ್ಳಿ' ಎಂದು ಮನವೊಲಿಸಿ ಮನೆಮನೆಗೆ ಹೋಗಿ ಒತ್ತಾಯಿಸಿದಾಗ, ಕೆಲವರು ಡಾ. ಸ್ವಾಮಿಯವರು ಕಮೀಶನ್ ತೆಗೆದುಕೊಳ್ಳುತ್ತಿರಬೇಕು ಎಂದು ಅನುಮಾನಿಸಿದರು. ಈ ಅನಿಸಿಕೆಯ ಬಗ್ಗೆ ನನಗೆ·ಗೊತ್ತಾಗಲೇ ಇರಲಿಲ್ಲ.

ಒಮ್ಮೆ ನನಗೂ, "ನಿಮ್ಮ ಕಾಲೇಜಿನಲ್ಲಿ ಯಾರಾದರೂ ಸೈಟ್ ತೆಗೆದುಕೊಳ್ಳುತ್ತಾರೇನೋ ಕೇಳು. ಸೈಟ್ಸ್ ಆಗಲೇ ಮುಗಿಯುತ್ತಾ ಬಂದಿವೆ. ಪಾಪ ಯಾರಿಗಾದರೂ ಸಾಧ್ಯವಿದ್ದರೆ ತೆಗೆದುಕೊಳ್ಳಲಿ" ಎಂದರು (ಆಗ ಮೂರು ಸಾವಿರ ಬಾಳುತ್ತಿದ್ದ ಸೈಟಿನ ಬೆಲೆ, ಈಗ ಆರು ಲಕ್ಷ) 'ಆಗ ನಾನು, ನೀವು ಉದ್ದರಿ ಕೆಲಸ ಕಟ್ಟಿಕೊಂಡು ಓಡಾಡುವುದಲ್ಲದೆ ನನಗೂ ಮಾಡಲು ಹೇಳುತ್ತೀರಿ' ಎಂದು ಅಸಮಾಧಾನ ತೋರಿದರೂ ಕಾಲೇಜಿಗೆ ಹೋದಾಗ, ಒಬ್ಬಿಬ್ಬರಲ್ಲಿ ಈ ಪ್ರಸ್ತಾಪ ಮಾಡಿದೆ. ಆಗ ಅವರು ನೇರವಾಗಿ ಹೇಳದಿದ್ದರೂ 'ನಾವು ಮಧ್ಯಸ್ಥಗಾರರಾಗಿ ದುಡ್ಡು ತಿನ್ನಲು ಇಷ್ಟು ಮುತುವರ್ಜಿ ವಹಿಸುತ್ತಿದ್ದೇವೆ' ಎಂಬ ಅರ್ಥಬರುವ ಟೋನಿನಲ್ಲಿ ಮಾತನಾಡಿದರು ! ಅವರ ಅರ್ಥಗ್ರಹಿಸಿ, ಮಾತನ್ನು ಅಷ್ಟಕ್ಕೆ ನಿಲ್ಲಿಸಿ ಮುಗಿಸಿದೆ, ಮನೆಗೆ ಬಂದಮೇಲೆ ಅಲ್ಲಿ ನಡಿದದ್ದನ್ನೆಲ್ಲಾ ಇವರಿಗೆ ಹೇಳಿ, 'ಇಂತಹ ಉಸಾಬರಿಗ ಇನ್ನು ಹೋಗಬೇಡಿ' ಎಂದು ಪರಿಪರಿಯಾಗಿ ಹೇಳಿದೆ. ಆದರೆ ಅವರ ಕೆಲಸ ಅವರು ಬಿಡಲಿಲ್ಲ. ಇವರ ಸ್ವಭಾವದ ಪರಿಚಯವಿದ್ದ ಅನೇಕರು. ಈಗ 'ಸಾಹೇಬ್ರೇ, ನೀವು ಒತ್ತಾಯಿಸದೆ ಇದ್ದಿದ್ದರೆ, ನಾವು ಆಗ ಸೈಟ್ ಕೊಳ್ಳುತ್ತಿರಲಿಲ್ಲ. ನಿಮ್ಮ ಪುಣ್ಯದಿಂದ ತುಂಬಾ ಸೋವಿ ದರದಲ್ಲಿ ಸೈಟು ಸಿಕ್ತು', ಎಂದು ನೆನೆಸಿಕೊಂಡು ಒಳ್ಳೆಯ ಮಾತನಾಡುತ್ತಾರೆ. ಆದರೆ ನೆನೆಸದವರೂ ಲೆಕ್ಕವಿಲ್ಲದಷ್ಟು ಮಂದಿ ಇದ್ದಾರೆ. ನೆನೆಸಿಲ್ಲವೆಂದು ಇವರು ಎಂದೂ ಬೇಜಾರು ಮಾಡಿಕೊಳ್ಳುವದಿಲ್ಲ. ಅವರಿಗೆಲ್ಲಾ ಒಳ್ಳೆಯದಾಗಬೇಕೆಂಬ ಆಸೆ ಇತ್ತು. ಅದು ನೆರವೇರಿದುದೇ ಇವರಿಗೆ ಸಂತೋಷ,

ತೃಪ್ತಿ. ಧಾರವಾಡದ ವಿಶ್ವವಿದ್ಯಾಲಯದ ನೌಕರರ ಹೌಸಿಂಗ್ ಬೋರ್ಡಗೆ ಇವರೂ ಒಬ್ಬ ಡೈರೆಕ್ಟರ್‌ರಾಗಿದ್ದದ್ದು ನನಗೆ ಇಲೆಕ್ಷನ್ ಬರುವ ತನಕ ಗೊತ್ತೇ ಇರಲಿಲ್ಲ. ಎಲೆಕ್ಷನ್ ಸಮಯಕ್ಕೆ ರಾಜಕೀಯ ಶುರುವಾಯ್ತು. ಕೆಲವರು ಡೈರೆಕ್ಟರ್‌ಗಳಾಗುವುದಕ್ಕೆ ಹಂಚಿಕೆ ಮಾಡಿಕೊಂಡಿದ್ದರೆಂದು ಕಾಣಿಸುತ್ತದೆ.

ಹೀಗೆ ಯಾವುದೇ ಸ್ವಾರ್ಥವಿಟ್ಟುಕೊಂಡು ಗುಂಪು ಕಟ್ಟಿಕೊಳ್ಳುವದು ಇವರ ಜಾಯಮಾನಕೆ ಸಾಧ್ಯವಿಲ್ಲ. ಹಾಗಾಗಿ ಅಂತಹ ಗುಂಪಿನವರಿಗೆ ಇವರು ಡೈರೆಕ್ಟರ್‌ರಾಗಿ ಬರುವುದು ಬೇಕಿರಲಿಲ್ಲ. ಇವರು ಚುನಾಯಿತರಾಗಿ ಬರದಂತೆ ಮಾಡಬೇಕೆಂಬುದು ಕೆಲವರ ಹಂಚಿಕೆ. ಎಲೆಕ್ಷಗೆ ಸ್ವಲ್ಪ ಕಾಲಕ್ಕೆ ಮೊದಲು ಹೌಸಿಂಗ್ ಬೋರ್ಡ್‌ನಲ್ಲಿ ತುಂಬಾ ಹಣದ ಅವ್ಯವಹಾರ ನಡೆದಿದೆ ಎಂಬ ಸುದ್ದಿ ಹಬ್ಬಿತು ಅದು ನನ್ನ ಕಿವಿಗೆ ಬಿದ್ದಾಗ ಕಿಡಿಕಿಡಿಯಾದೆ. " ಸ್ವಂತ ಕೆಲಸ ಅಲಕ್ಷಿಸಿ ಈ ಕೆಲಸಗಳನ್ನು ಮಾಡುವುದಲ್ಲದೆ, ಕೆಟ್ಟ ಹೆಸರು ಬೇರೆ ಕಟ್ಟಿಕೊಳ್ಳಬೇಕೆ" ಎಂದು ಇವರ ಮೇಲೆ ಸಿಟ್ಟು ಬಂತು. ಒಬ್ಬ ವ್ಯಕ್ತಿ ಬಂದು ನನ್ನ ಮುಖದೆದುರೇ ಡಾ. ಸ್ವಾಮಿಯವರು ಸಕತ್ ರೊಕ್ಕ ಹೊಡೆದಿದ್ದಾರಂತೆ, ಬೇಕಾದಷ್ಟು ಪ್ರೂಫ್ ಸಿಕ್ಕಿದೆಯಂತೆ. ಹಾಗೇ-ಹೀಗೇಂತ ನನಗೇ ಇವರ ಮೇಲೆ ಅನುಮಾನ ಹುಟ್ಟುವಂತೆ ಹೇಳಿದರು, ಆ ಸಮಯದಲ್ಲಿ ಇವರ ಅಣ್ಣನವರ ಆರ್ಥಿಕ ಸ್ಥಿತಿ ಅಷ್ಟು ಚೆನ್ನಾಗಿರಲಿಲ್ಲ. ಇವರ ನೆರವು ನೀಡುತ್ತದ್ದರಾದರೂ ಅವರ ಅವಶ್ಯಕತೆಗಳನ್ನು ಪೂರೈಸುವರು ಆಗುತ್ತಿರಲಿಲ್ಲ. ಅವರಿಗೆ ಸಾಕಷ್ಟು ನೆರವು ನೀಡಲಾಗುತ್ತಿಲ್ಲ ಎಂಬ ಕೊರಗು ಇವರನ್ನು ಕಾಡಿಸುತ್ತಿತ್ತು.

ಹಾಗಾದರೆ ಇವರು ಇಲ್ಲಿ ದುಡ್ಡು ಹೊಡೆದು ಗೊತ್ತಿಲ್ಲದಂತೆ ಅವರಣ್ಣನವರಿ--ಗೇನಾದರೂ ಕಳಿಸಿರಬಹದೇ ಎಂಬ ಅನುಮಾನವೂ ಬಂತು. ಇವರು ಹಣ ಹೊಡೆಯದಿದ್ದರೆ, ಬೇರೆಯವರು ಬಂದು ನನ್ನ ಮುಂದೆ ಇಷ್ಟು ಧೈರ್ಯವಾಗಿ ಹೇಳಲು ಹೇಗೆ ಸಾಧ್ಯ? ಎಂದು ತರ್ಕಿಸಿದೆ. 'ಮನೆಗೆ ಹೋದಮೇಲೆ ಇವರನ್ನು ಈ ವಿಷಯದ ಬಗ್ಗೆ ಪ್ರಾಮಾಣಿಕವಾಗಿ ಹೇಳಬೇಕೆಂದು ದೇವರ ಹೆಸರಿನಲ್ಲಿ ಆಣೆ ಇಟ್ಟು ಕೇಳಿದೆ. ಜನ ದುರುದ್ದೇಶದಿಂದ ಆಪಾದಿಸುತ್ತಾರೆ. ಎಂದು ಲಕ್ಷ್ಯ ಕೊಡದಿದ್ದ ಇವರಿಗೆ ನಾನೇ ಸಂಶಯಪಡುವುದನ್ನು ನೋಡಿ ವ್ಯಥೆಯಾಯಿತು.

ಆಗ ನನಗೆ ಇದು 'ಮಿಥ್ಯಾರೋಪ' ಎಂದು ಸ್ಪಷ್ಟವಾಗಿ, "ನಿಮ್ಗೇನು ಬರ್‍ಯೋದು -ಓದೋದಿ ಬೇಕಾದಷ್ಟಿದೆ . ಈಚಲು ಮರದ ಕೆಳಗೆ ಮಜ್ಜಿಗೆ ಕುಡಿದರೂ ಹೆಂಡ ಎನ್ನುತ್ತಾರೆ. ನೀವು ಅಂತಹ ಕೆಲ್ಸ ಯಾಕೆ ಮಾಡೋಕೆ ಹೋಗ್ತಿರಿ? ದುಡ್ಯೋದು ಅಲ್ದೆ ಅಪವಾದನೂ ಏಕೆ ಹೊರಬೇಕು" ಎಂದೆ . ಆಗ, " ಏನೋ ನಾಲ್ಕು ಜನಕ್ಕೆ ಉಪಯೋಗವಾಗ್ಲಿ ಅಂತ ನಂತೆ ಅಷ್ಟೇ. ಸ್ವಂತ ಲಾಭದ ಆಸೆ ಇಲ್ಲದೆ ದುಡಿಯುವವರು ಇಲ್ಲದಿದ್ದರೆ, ಅವಶ್ಯಕತಗೆ ನೆರವು ಸಿಗದಂತಹ ಪರಿಸ್ಥಿತಿ ಉಂಟಾಗಿಬಿಡುತ್ತೆ. ಹೆಸರಿನ

ಆಸೆ ಇಲ್ಲ" ಎಂದರು. ಸುಮ್ಮಸುಮ್ಮನೆ ಕೆಟ್ಟ ಹೆಸರೇಕೆ ಹೊಂದಬೇಕು ಎಂದುದಕ್ಕೆ "ಸಾರ್ವಜನಿಕ ಕೆಲಸ ಮಾಡುವಾಗ ಅಪವಾದಗಳು ಸರ್ವೇಸಾಮಾನ್ಯ ಅದಕ್ಕೆಲ್ಲಾ ಹೆದರುವಂತಿದ್ದರೆ, ಜಗತ್ತಿನಲ್ಲಿ ಸಾರ್ವಜನಿಕವಾದ ಕೆಲಸಗಳೇ ಆಗುತ್ತಿರಲಿಲ್ಲ. ಇದಕ್ಕೆಲ್ಲಾ ಸಿದ್ಧವಾಗೇ ಸಾರ್ವಜನಿಕ ಸೇವೆ ಮಾಡಬೇಕು" ಎಂದುಬಿಟ್ಟರು. ಅದೆಲ್ಲ ಹಿಂದಿನ ಕಾಲದ ಆದರ್ಶ. ಈಗಂತೂ ನೂರಕ್ಕೆ ತೊಂಬತ್ತೊಂಬತ್ತು ಜನ ಸ್ವಾರ್ಥವನ್ನು ಮೂಲವಾಗಿಟ್ಟುಕೊಂಡೇ ಸಾರ್ವಜನಿಕ ಕೆಲಸಕ್ಕೆ ಕೈಹಾಕುತ್ತಾರೆ. ಅದು ಬೇರೆಮಾತು. ಅಂತೂ ಇವರು ತಮ್ಮ ಸಾರ್ವಜನಿಕ ಸೇವೆಯ ಹುಚ್ಚು ಬಿಡಲೇ ಇಲ್ಲ.

ಈ ಹೌಸಿಂಗ್ ಬೋರ್ಡನ ಕಥೇ ಇಲ್ಲಿಗೇ ಮುಗಿಯಲಿಲ್ಲ, ಸ್ವಾರ್ಥಿಗಳ ಕುತಂತ್ರದಿಂದಲೂ ನನ್ನ ಬಿರುಸಿನ ಮಾತುಗಳಿಂದ ಬೇಜಾರಾಗಿ ಎಲೆಕ್ಷನ್ನಿಗೆ ನಿಲ್ಲಲೇ ಇಲ್ಲ. ಎಲೆಕ್ಷನ್ ಆದ ನಂತರ, ನಮ್ಮ ಮನೆಯವರು ಹಣ ಲಪಟಾಯಿಸಿದ್ದಾರೆ ಎನ್ನುವ ಮಾತು ಸತ್ಯ ಎನ್ನುವಂತೆ ನನ್ನೊಡನೇ ಹೇಳಿದವರೇ ಬಂದು 'ನೋಡಿ ಮೇಡಂ ನಮಗೀಗ ನಿಜಾಂಶ ಗೊತ್ತಾಯ್ತು. ಇದೆಲ್ಲಾ ಎಲೆಕ್ಷನ್ ಮೋಸ ಅಂತೆ, ಸ್ವಾಮಿಯವರು ಅಂತಹವರಲ್ಲವಂತೆ, ಅವರ ಹೆಸರು ಕೆಡಿಸಿ, ಅವರು ಆರಿಸಿ ಬರದಂತೆ ಮಾಡಬೇಕೆಂದು ಹೀಗೆಲ್ಲಾ ಕತೆ ಕಟ್ಟಿದ್ದಾರಂತೆ" ಎಂದರು. ಅವರೇನೋ ತಮ್ಮ ಉದ್ದೇಶ ಸಾಧಿಸಿಕೊಂಡರು. ಕೆಲವರಿಗೆ ಸತ್ಯ ಏನು ಎನ್ನುವುದು ಗೊತ್ತಾಯ್ತು. ಆದರೆ ಸತ್ಯಾಂಶ ಗೊತ್ತಾಗದವರೂ ಅನೇಕರಿರಬಹುದಲ್ಲ. ಅವರ ದೃಷ್ಟಿಯಲ್ಲಿ ಇವರು ಯಾವ ಮಟ್ಟದವರಾಗಿ ಆದರೆ ಇವರು ಮಾತ್ರ ನಿರ್ಲಿಪ್ತರಾಗಿ, ಜಗತ್ತೇ ಹಾಗೆ ಎಲ್ಲರನ್ನು ಮೆಚ್ಚಿಸಲಾಗುವುದಲ್ಲ, ಜನ ನನ್ನನ್ನು ಕೆಟ್ಟವನು ಎಂದು ಮಾತ್ರಕ್ಕೆ ನಾನು ಕೆಟ್ಟವನಾಗುವದಿಲ್ಲ. ನಾನು ಇದ್ದಂತೆಯೇ ಇರುತ್ತೇನೆ. ಜನ ಅಂದದ್ದಕ್ಕೆಲ್ಲಾ ಬೆಲೆ ಕೊಡುತ್ತಾ ಲಕ್ಷ್ಯ ಕೊಡದ ಅಸಹಾಯಕರಿಗೆ ಸಹಾಯ ಮಾಡಬಹುದಿತ್ತು. ಈಗ ಅದು ಸಾಧ್ಯವಿಲ್ಲ ಎಂಬ ಅನಿಸಿಕೆಯ ಹೊರತು ಅವರು ಬೇಸರಪಟ್ಟುಕೊಳ್ಳಲಿಲ್ಲ.

ಬರಬರುತ್ತಾ ಆ ಸಂಸ್ಥೆಯೊಡನೆ ದೂರ ದೂರ ಉಳಿದಂತೆ ನನಗೆನ್ನಿಸಿತು. ಇನ್ನೂ ಒಂದು ತಮಾಷೆ ಎಂದರೆ ಆ ಸಂಸ್ಥೆಗೆ ಇಪ್ಪತ್ತೈದು ವರ್ಷಗಳಾದಾಗ ಒಂದು ದೊಡ್ಡ ಸಮಾರಂಭವನ್ನು ಏರ್ಪಡಿಸಿದ್ದರು. ಸಮಾರಂಭದ ಎರಡು ದಿನ ಮೊದಲು ಇವರಿಗೂ ಆಮಂತ್ರಣ ಪತ್ರಿಕೆ ಬಂತು. ಅದರಲ್ಲಿ 'ಫೌಂಡರ್ ಮೇಂಬರ್ಸ್' ಎಂದು ಅನೇಕರಿಗೆ ಸನ್ಮಾನವಿಟ್ಟುಕೊಂಡಿದ್ದರು. ಎಷ್ಟೋ ವರ್ಷಗಳ ನಂತರ ಆ ಸಂಸ್ಥೆ ಸೇರಿದ ಕೆಲವರ ಹೆಸರುಗಳೂ ಆ ಸನ್ಮಾನಿತರ ಪಟ್ಟಿಯಲ್ಲಿದ್ದವು. ಅದನ್ನು ಓದಿದ ನಾನು, "ಆಮಂತ್ರಣ ಪತ್ರಿಕೆ ಕಳಿಸುವವರ ಲಿಸ್ಟಿನಲ್ಲಾದರೂ ನಿಮ್ಮನ್ನು ಸೇರಿಸಿಕೊಂಡಿದ್ದಾರಲ್ಲ ಅದೇ ದೊಡ್ಡ ಸಂತೋಷ" ಎಂದು ಹೇಳಿ, 'ಅಂತಹ ಅನ್ಯಾಯಗಳನ್ನೆಲ್ಲ ನುಂಗಿಕೊಳ್ಳಬಾರದು, ಪ್ರತಿಭಟಿಸಬೇಕು. ಆ ಸಂಸ್ಥೆ

ಪ್ರಾರಂಭವಾಗಲು ಮೂಲಕಾರಣರು ನೀವು. ನಿಮ್ಮನ್ನು ಅವರು ಅಲಕ್ಷಿಸಿದರೆ ನೀವು ಅದಕ್ಕೆ ಆಸ್ಪದ ಕೊಡಬಾರದು' ಎಂದೆ. " ಈಗ ಹೋಗಿ ನನಗೂ ಸನ್ಮಾನ ಮಾಡಿರಿ" ಎಂದು ಕೇಳಲೇ? ಜನರಿಗೆ ಸಹಾಯವಾಗಲಿ ಎಂದು ಪ್ರಾರಂಬಿಸಿದೆ. ಅದು ಆದರೆ ಸಾಕು" ಎಂದು ನನ್ನ ಬಾಯಿ ಮುಚ್ಚಿಸಿದರು. ಅವರ ಸಾಮಾಜಿಕ ಜೀವನದಲ್ಲಿ ಹೀಗೆ ಪ್ರತಿಭಟನೆ ಇಲ್ಲದೆ ನುಂಗಿಕೊಂಡ ಘಟನೆಗಳಿಗೆ ಲೆಕ್ಕವಿಲ್ಲ. ಈ ಗುಣವನ್ನು ಹೃದಯವಂತಿಕೆ ಎನ್ನಬೇಕೋ, ಹೇಡಿತನವೆನ್ನಬೇಕೋ, ನನಗೆ ಅನೇಕ ಬಾರಿ ಗೊಂದಲ.

**ಆದರ್ಶ ಶಿಕ್ಷಕ :**

'ಇವರು' ಹುಟ್ಟಿನಿಂದ ಆದರ್ಶ ಶಿಕ್ಷಕರು. ಬೋಧನೆ ಅವರ ಅತ್ಯಂತ ಪ್ರಿಯವಾದ ವಿಷಯ. ವಿದ್ಯಾರ್ಥಿಗಳನ್ನು ಕಂಡರೆ ಅಪರಿಮಿತವಾದ ಪ್ರೇಮ, ಆಸಕ್ತಿ. ಇವರು ಅತ್ಯುತ್ತಮ ಶಿಕ್ಷರೆಂದು ಅವರ ಅನೇಕ ವಿದ್ಯಾರ್ಥಿಗಳು ನನ್ನ ಮುಂದೆ ವರ್ಣಿಸಿದ್ದಾರೆ. ಅವರೆಂದೂ ಬೋಧನೆ ಮಾಡಲು ಬೇಸರಗೊಂಡದ್ದನ್ನು ನೊಡಿಲ್ಲ; ಕೇಳಿಲ್ಲ. ಅವರು ಲೆಕ್ಚರರ್ ಆಗಿದ್ದಾಗ ಬೇರೆ ಯಾವ ಜವಾಬ್ದಾರಿಗಳೂ ಹೆಚ್ಚಿರಲಿಲ್ಲ. ಆಗ ಸಂಜೆ ಮನೆಗೆ ಬಂದಾಗ ದಿನವೂ ಖುಷಿಯಿಂದ ಅವರ ಕ್ಲಾಸಿನ ಬಗ್ಗೆ , ವಿದ್ಯಾರ್ಥಿಗಳ ಬಗ್ಗೆ, ತಾವು ಮಾಡಿದ ಪಾಠದ ಬಗ್ಗೆ ಹೇಳಿಕೊಂಡು ಆನಂದಪಡುತ್ತಿದ್ದ ಹಾಗೂ ನಾವೂ ಆನಂದಗೊಳ್ಳುವಂತೆ ಮಾಡುತ್ತಿದ್ದ ದಿನಗಳು ಇನ್ನೂ ನನ್ನ ಕಣ್ಮುಂದಿವೆ. ವಿದ್ಯಾರ್ಥಿಗಳಿಗೆ ಎಲ್ಲಾ ರೀತಿಯಿಂದಲೂ ತಮ್ಮ ಕೈಲಾದ ಸಹಾಯ ಮಾಡುತ್ತಿದ್ದರು.

ವಿದ್ಯಾರ್ಥಿ ದೆಸೆಯಲ್ಲಿ ತಾವು ಹಣದ ತೊಂದರೆ ಅನುಭವಿಸಿದ ಅನುಭವದಿಂದ, ಬಹಳಷ್ಟು ವಿದ್ಯಾರ್ಥಿಗಳಿಗೆ ಹಣದ ಮೂಲಕ ಸಾಕಷ್ಟು ಸಹಾಯ ಮಾಡಿದ್ದಾರೆ. ಮಾಡಿದ ಸಹಾಯದ ಬಗ್ಗೆ ಅವರೆಂದೂ ನನ್ನ ಮುಂದೆ ಹೇಳಿಕೊಂಡಿಲ್ಲ. ಆ ವಿದ್ಯಾರ್ಥಿಗಳೇ ಪತ್ರ ಬರೆದಾಗ ಅಥವಾ ಮನೆಗೆ ಬಂದಾಗ ಮಾತನಾಡುತ್ತ ಹೇಳಿದರೆ ಮಾತ್ರ ನನಗೆ ಗೊತ್ತಾಗುತ್ತಿತ್ತು. ಅನೇಕ ವಿದ್ಯಾರ್ಥಿಗಳಿಗೆ ಹಾಸ್ಟೆಲಿನಲ್ಲಿ ಫ್ರೀಯಾಗಿ ಊಟ ಸಿಕ್ಕುವಂತೆ ನೆರವೀಯುತ್ತಿದ್ದರು. ಬಡ ಹಾಗೂ ದಡ್ಡ ವಿದ್ಯಾರ್ಥಿಗಳನ್ನು ಕಂಡರೆ ಹೆಚ್ಚಿನ ಕಳಕಳಿ. ಜಾಣ ವಿದ್ಯಾರ್ಥಿಗಳನ್ನೂ ಕಂಡರೆ ಮೆಚ್ಚುಗೆ, ಯಾವುದೇ ವಿದ್ಯಾರ್ಥಿ, ಯಾವದೇ ರೀತಿಯ ಸಹಾಯ ಕೋರಿ ಬಂದರೂ ನನಗೆ ತಿಳಿದಂತೆ ಯಾರನ್ನೂ ಅವರು ಹಾಗೆಯೇ ಕಳಿಸಿಲ್ಲ. ಸಾಹಿತ್ಯ ಅಥವಾ ತಮ್ಮ ವಿಷಯದ ಸಮಸ್ಯೆಯ ಬಗ್ಗೆ ಕೇಳಲು ವಿದ್ಯಾರ್ಥಿಗಳು ಬರುತ್ತಿದ್ದರು. ಆಗ ಅವರ ಸ್ನಾನ, ಊಟ ಆಗದಿದ್ದರೂ ಸಹ ಅದನ್ನೆಲ್ಲಾ ಮರೆತು ಗಂಟೆಗಟ್ಟಲೆ ಅವರೊಂದಿಗೆ ಚರ್ಚಿಸುತ್ತಾರೆ, ರೆಫೆರೆನ್ಸ್ ಬುಕ್ಸ್ ಸೂಚಿಸುತ್ತಾರೆ. ತಮ್ಮಲ್ಲಿರುವ ಪುಸ್ತಕಗಳನ್ನು ಕೊಡುತ್ತಾರೆ. ಆ ಅಪರಿಚಿತ ವಿದ್ಯಾರ್ಥಿಗಳು ಸುಪರಿಚಿತರಾಗುತ್ತಾರೆ.

ಇವರು ಪ್ರಾಧ್ಯಾಪಕರಾಗಿದ್ದಾಗ ತುಂಬಾ ವಿದ್ಯಾರ್ಥಿಗಳು ಮನೆಗೆ ಬರುತ್ತಿದ್ದರು. ಬಹಳಷ್ಟು ಪ್ರೀತಿ ಗೌರವ ತೋರಿಸುತ್ತಿದ್ದರು. ಆಗ ಇವರ ವಿದ್ಯಾರ್ಥಿಪ್ರಿಯತೆ ಬಗ್ಗೆ ಅವರ ಗೌರವಕ್ಕೆ ಪಾತ್ರರಾಗುವಂತೆ ಇರುವ ಬಗ್ಗೆ ನನಗರ ತಂಬಾ ಹೆಮ್ಮೆ ಎನ್ನಿಸುತ್ತಿತ್ತು. ಇವರು ಧಾರವಾಡದ ವಿಶ್ವವಿದ್ಯಾಲಯಕ್ಕೆ ಲೆಕ್ಚರರ್ ಆಗಿ ಬಂದಾಗ, ಎಂ.ಎ. ಮುಗಿಸಿಕೊಂಡು ಹೋದ, ಮೊದಲನೆಯ ಬ್ಯಾಚಿನಲ್ಲಿ ಶ್ರೀ ಬಿ.ಬಿ. ನಾಡಗೌಡ, ಶ್ರೀ ಸಂಗಮನಾಥ ಹಂಡಿ, ಡಾ. ಎಂ.ಎಂ. ಕಲಬುರ್ಗಿ, ಶ್ರೀ ಎಂ. ರಾಮಚಂದ್ರ ಮುಂತಾದವರಿದ್ದರು. ಅವರೆಲ್ಲರಿಗೂ ಇವರು ಅಚ್ಚುಮೆಚ್ಚಿನ ಗುರುಗಳಾಗಿದ್ದರು. ಅವರುಗಳು ಎಂ.ಎ. ಮುಗಿಸಿ ಊರಿಗೆ ಹೋಗುವ ಮುನ್ನ ಡಾ. ಕಲ್ಬುರ್ಗಿ (ಆಗಿನ್ನೂ ಡಾ. ಆಗಿರಲಿಲ್ಲ) ಮನೆಗೆ ಬಂದು, "ಸಾರ್, ಇನ್ನು ದೂರ ಹೋಗಿಬಿಡುತ್ತೇವೆ. ಜೀವನದಲ್ಲಿ ಮತ್ತೆ ಕೂಡುವುದು ಯಾವಾಗಲೋ ಏನೋ, ನಿಮ್ಮಂತಹ ಗುರುಗಳು ದೊರೆಯುವದು ಅಪರೂಪ. ದಿನಾ ನಿಮ್ಮ ಫೋಟೋವನ್ನಾದರೂ ನೋಡಬೇಕು. ನಮ್ಮ ಜೊತೆಯಲ್ಲಿ ನೀವು ಫೋಟೋ ತೆಗೆಸಿಕೊಳ್ಳಬೇಕೆಂದು ಕೇಳಿ ಒತ್ತಾಯ ಮಾಡಿ ಕರೆದುಕೊಂಡು ಹೋಗಿ ಫೋಟೋ ತೆಗೆಸಿಕೊಂಡು, ನಮಗೂ ಒಂದು ಪ್ರತಿ ಕೊಟ್ಟುಹೋದರು.

ಶ್ರೀ ಬಿ.ಬಿ. ನಾಡಗೌಡರು ಮರುವರ್ಷವೇ ಜಮಖಂಡಿ ಕಾಲೇಜಿನಲ್ಲಿ ಲೆಕ್ಚರರ್ ಆದರು. ಆಗ ಕರ್ನಾಟಕ ಸಂಘ ಸ್ಥಾಪಿಸಿ, ಅದನ್ನು ಇವರಿಂದಲೇ ಉದ್ಘಾಟಿಬೇಕೆಂದು ಆಮಂತ್ರಿಸಿದರು. ಆಗ ನನ್ನನ್ನೂ ವಿಶೇಷವಾಗಿ ಆಹ್ವಾನಿಸಿದ್ದರು. ಅಲ್ಲಿ ಪ್ರೊ. ರೂಬೆನ್ನರು ಪ್ರಿನ್ಸಿಪಾಲರಾಗಿದ್ದರು. ಇವರನ್ನು ಶ್ರೀ ನಾಡಗೌಡರು ಪರಿಚಯಿಸುವಾಗ ಇವರ ಬಗ್ಗೆ ತುಂಬ ಪ್ರಶಂಸನೀಯವಾದ ಮಾತು ಹೇಳುತ್ತಾ, "ನಾನು ಎಂ.ಎ. ಎರಡನೆಯ ವರ್ಷಕ್ಕೆ ಓದುತ್ತಿದ್ದಾಗ, ಯಾರೋ ವೃಷಭೇಂದ್ರಸ್ವಾಮಿ ಎನ್ನುವವರು ಡಿಪಾರ್ಟ್‌ಮೆಂಟಿಗೆ ಅಪಾಯಿಂಟ್ ಆಗಿದ್ದಾರೆ. ಅವರು ಇಷ್ಟರಲ್ಲೇ ಬರಲಿದ್ದಾರೆ ಎಂದು ಕೇಳಿದಾಗ ಬಹುಶಃ ಯಾರೋ ವಯಸ್ಸಾದ ಕಾವಿ ಸ್ವಾಮಿ ಇರಬಹುದು ಎಂದುಕೊಂಡಿದ್ದೆನು. ಆದರೆ ಮೊದಲದಿನ ಕ್ಲಾಸಿಗೆ ಬಂದಾಗ, ಇವರೊಬ್ಬ ಉತ್ಸಾಹೀ ತರುಣರಾಗಿದ್ದರು! (ಆಗ ಇವರಿಗೆ ಮೂವತ್ತಾರು ವರ್ಷ ವಯಸ್ಸು) ಅವರ ಉತ್ಸಾಹ, ಪಾಠ ಮಾಡುವ ರೀತಿ, ವಿದ್ಯಾರ್ಥಿಗಳನ್ನು ಹುರಿದುಂಬಿಸುವಿಕೆ ಸಾಕ್ಷಾತ್ ವಿವೇಕಾನಂದರನ್ನು ನೆನಪಿಗೆ ತರುವಂತಿತ್ತು. ನಮ್ಮ ಉತ್ಸಾಹವು ಪುಟಿದೇಳುವಂತಾಯ್ತು. ಡಿಪಾರ್ಟ್‌ಮೆಂಟಿನಲ್ಲಿ ಲೆಕ್ಕವಿಲ್ಲದಷ್ಟು ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳು ಪ್ರಾರಂಭವಾದವು. ಅಲ್ಲಿಯವರೆಗೆ ನಮಗೆ ಬಿ.ಎ. ಹಾಗೂ ಎಂ.ಎ.ಗೆ ವ್ಯತ್ಯಾಸವೇ ಗೊತ್ತಾಗಲಿಲ್ಲ.

"ಇವರು ಬಂದ ಮೇಲೆ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಕರ್ನಾಟಕ ಸಂಘ ಪ್ರಾರಂಭವಾಯ್ತು. ಸೆಮಿನಾರ್‌ಗಳು ಸಂಯೋಜಿಸಲ್ಪಟ್ಟವು.ಪ್ರತಿಯೊಬ್ಬ ವಿದ್ಯಾರ್ಥಿಯೂ ಒಂದು ಚಟುವಟಿಕೆಯಲ್ಲಿ ಭಾಗವಹಿಸಬೇಕಾಗುತ್ತಿತ್ತು. ಡಿಬೇಟ್‌ಗಳು, ನಾಟಕಗಳೂ ನಡೆದವು. ಡಿಪಾರ್ಟಮೆಂಟಿನಲ್ಲಿ ಒಂದು ರೀತಿಯ ಮಿಂಚು ಸಂಚರಿಸಿದಂತಾಯ್ತು. ನಮ್ಮಲ್ಲಿ ಬಹುಪಾಲು ವಿದ್ಯಾರ್ಥಿಗಳಿಗೆ ಸಭೆಯಲ್ಲಿ ನಿಂತು ಮಾತನಾಡಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಅಂತವರನ್ನು ಪ್ರೋತ್ಸಾಹಿಸಿ, ಬೆನ್ನು ತಟ್ಟಿ ಮುಂದೆ ಬರುವಂತೆ ಮಾಡುತ್ತಿದ್ದರು. ಇವರ ಮಾರ್ಗದರ್ಶನದಿಂದ ನಮಗೆ ಸಭೆಯಲ್ಲಿ ನಿಂತು ನಿರ್ಭಯವಾಗಿ ಮಾತನಾಡುವ ವ್ಯವಸ್ಥಿತವಾಗಿ ಓದುವ ಹಾಗೂ ಬರೆಯುವ ಕಲೆ ಕುದುರಿತು" ಎಂದು ಇನ್ನೂ ಅನೇಕ ರೀತಿಯಲ್ಲಿ ಪ್ರಶಂಸಿಸಿದರು. ಮುಂದುವರಿದು, "ಇಂದು ನಾನು ಒಬ್ಬ ಉತ್ತಮ ಶಿಕ್ಷಕನಾಗಿದ್ದರೆ, ಅದು ಇವರ ಪ್ರಭಾವ, ಅವರಿಂದಲೇ ಈ ಕರ್ನಾಟಕ ಸಂಘವನ್ನೂ ಉದ್ಘಾಟಿಸಬೇಕೆಂದು ನಿಶ್ಚಯಿಸಿ ಪ್ರೊ. ಸ್ವಾಮಿಯವರನ್ನು ಆಮಂತ್ರಿಸಿದಾಗ, ಅವರು ಬಂದುದು ಸುದೈವ" ಎಂಬ ಮಾತುಗಳನ್ನು ಸುಮಾರು ಮೂವತ್ಮೂರು ವರ್ಷಗಳ ಹಿಂದೆ ಹೇಳಿದ್ದರೂ ಇಂದೂ ನನಗೆ ಆ ಮಾತುಗಳೆಲ್ಲ ಮನಸ್ಸಿನಲ್ಲಿ ಹಚ್ಚ ಹಸುರಾಗಿ ಉಳಿದಿವೆ. ಏಕೆಂದರೆ ನನಗೆ ಇವರೊಬ್ಬ ವಿದ್ಯಾರ್ಥಿಗಳ ಏಳ್ಗೆಗೆ ದುಡಿಯುವ ಫ್ರಾಮಾಣಿಕ ಶಿಕ್ಷಕ ಎಂದು ಆನಂದ, ಹೆಮ್ಮೆಯುಂಟಾಯಿತು. ಮನಸ್ಸಿಗೆ ಹಿತವೆನ್ನಿಸಿತು.

ಶ್ರೀ ನಾಡಗೌಡರು ಇಂದೂ ಅವರ ಅಚ್ಚುಮೆಚ್ಚಿನ ವ್ಯಕ್ತಿಯಗಿದ್ದಾರೆ. ಅದೇ ಪ್ರೀತಿಯ ಭಾವ ಒಬ್ಬರಿಗೊಬ್ಬರಿಗೆ ಇದೆ. ಇವರು ಬಿಜಾಪುರಕ್ಕೆ ಹೋದರೆ ಅವರನ್ನೂ ಕಾಣದೆ ಬರುವುದಿಲ್ಲ. ಅವರು ಧಾರವಾಡಕ್ಕೆ ಬಂದರೆ 'ಇವರನ್ನು' ಕಾಣದ ಹೋಗುವುದಿಲ್ಲ. ಅಂದುನ ಪ್ರೀತ್ಯಾದರಗಳು ಇಂದಿನವರೆಗೂ ಒಂದೇ ಮಟ್ಟದಲ್ಲಿ ಉಳಿದುಬಂದಿವೆ.

ಅಂಕೋಲದ ಶ್ರೀ ಎನ್. ಆರ್. ನಾಯಕ್ ಅವರೂ ಇವರ ವಿದ್ಯಾರ್ಥಿ. ಇವರೂ ಮನೆಗೆ ಬರುತ್ತಿದ್ದರು. ಈಗಲೂ ಒಮ್ಮೆಮ್ಮೆ ಬರುತ್ತಿರುತ್ತಾರೆ. ಈಚೆಗೆ ಒಮ್ಮೆ ಹೀಗೆ ಮಾತನಾಡುತ್ತಾ ಇವರ ಬಗ್ಗೆ ತುಂಬಾ ಗೌರವದ ಮಾತುಗಳನ್ನಾಡಿದರು. ಆಗ ನಾನು, "ಏನಾದ್ರೆ ಏನ್ರಿ, ಇದನ್ನೆಲ್ಲಾ ಯಾರು ಕೇಳ್ತಾರೆ? ಒಬ್ಬ ಸಾಹಿತಿಯಾಗಿ ಇವರೆಷ್ಟು ಬರೆದಿದ್ದಾರೆ ಎಂದು ಎಲ್ಲರೂ ಅನ್ನುತ್ತಾರೆ. ಇವರು ತಮ್ಮ ಸಮಯವನ್ನೆಲ್ಲಾ ಬರೀ ಪಾಠ ಮಾಡುವುದರಲ್ಲಿ, ವಿದ್ಯಾರ್ಥಿಗಳೊಡನೆ ಸಮಾಲೋಚನೆ ಮಾಡುವದರಲ್ಲಿ, ಎಲ್ಲಾ ಕಡೆ ಭಾಷಣ ಮಾಡುವುದರಲ್ಲಿ ಕಳೆದರು. ಇವರಷ್ಟು ಕಷ್ಟಪಡುವವರು ಯಾರೂ ಇಲ್ಲ. ಆದರೆ 'ಇವರೇನ್ಮಾಡಿದಾರೆ? ಎನ್ನುವಂತಾಗಿದೆ ಎಂಬುದಕ್ಕೆ ಅವರು, 'ಏನ್ ಮೇಡಮ್ ಹೀಗಂತೀರಿ ಬರ್‍ಯೋದು ಒಂದೇನೇ

ಸಾಹಿತ್ಯ ಸೇವೇನೇ? ಬರ್ನ್ಯೋ ಅಂಥವರನ್ನು ಎಷ್ಟು ಜನರನ್ನು ನಿರ್ಮಾಣ ಮಾಡಿದ್ದಾರೆ? ಆ ಕಾಲಕಲ್ಲಿ ಉತ್ತರ ಕರ್ನಾಟಕದ ಮೂಲೆ ಮೂಲೆಯಲ್ಲಿ ಸಾಹಿತ್ಯದ ಅವೇರ್‌ನೆಸ್ ಉಂಟು ಮಾಡಿದವರು ಇವರು. ಇವರ ಭಾಷಣಗಳಿಂದ ಎಷ್ಟೊಂದು ಜನ ಸ್ಫೂರ್ತಿ ಪಡೆದು ಮುಂದೆ ಬಂದಿದ್ದಾರೆ, ಸಾಕಷ್ಟು ಬರೆದೂ ಇದ್ದಾರೆ. ಬರೀ ಸಂಖ್ಯೆ ಮುಖ್ಯನಾ? ಬಿ.ಎಂ.ಶ್ರೀ. ಯವರು ಎಷ್ಟು ತಾನೆ ಬರೆದಿದ್ದಾರೆ? ಅವರು ಕನ್ನಡಕ್ಕೆ ಮಾಡಿದ ಸೇವೆ ಕಡಿಮೆ ಕ್ರಮ. ವಿದ್ಯಾರ್ಥಿಗಳಿಗಾಗಿ ಯಾವ ಸಹಾಯ ಬೇಕಾದರೂ ಮಾಡುತ್ತಾರೆಂಬುದನ್ನು ಅರಿತ ಕೆಲವು ವ್ಯವಹಾರ ಚತುರರಾದ ಪಿಎಚ್. ಡಿ. ವಿದ್ಯಾರ್ಥಿಗಳು, ಬೇರೆ ಯಾರು ಯಾರಿಗೋ ಕೃತಜ್ಞತೆ ಸಲ್ಲಿಸುವಾಗ ಅದನ್ನು ವೈಭವೀಕರಿಸಿ ಬರೆದು, ತಮ್ಮ ಮಾರ್ಗದರ್ಶಕರಾದ ಇವರ ಬಗ್ಗೆ ವ್ಯವಹಾರಿಕವಾಗಿ ಬರೆಯಬೇಕಾದಷ್ಟನ್ನು ಮಾತ್ರ ಬರೆದುದೂ ಉಂಟು! ಒಬ್ಬರಂತೂ ತಾವೇ ಎಲ್ಲ ಮಾಡಿಕೊಂಡು ಬಂದು, ಇವರಿಂದ ಒತ್ತಾಯಪೂರ್ವಕ ಒಪ್ಪಿಗೆ ಪಡೆದುಕೊಳ್ಳಬೇಕಾಯಿತೆಂಬ ಅರ್ಥ ಬರುವಂತೆ ಬರೆದುಕೊಂಡು ಬಂದಾಗಲೂ ಒಂದು ಮಾತಿಲ್ಲದೆ ಸಹಿ ಮಾಡಿಕೊಟ್ಟಿದ್ದಾರೆ; ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಅನುಮತಿ ಕೊಟ್ಟಿದ್ದಾರೆ. ಆ ಸಂದರ್ಭಗಳಲ್ಲಿ ನಾನು, "ಏನ್ರಿ ಹೀಗೆಲ್ಲಾ ಬರೆದರೂ ಸಹಿ ಮಾಡ್ತಿರಲ್ಲಾ ನೋಡಿದವರು ನೀವೇನೂ ಮಾಡೇ ಇಲ್ಲ ಎಂದುಕೊಳ್ಳುವುದಿಲ್ಲವೆ? ಇಂತಹ ಕನ್ನಿಂಗ ಆದವರಿಗೆಲ್ಲಾ ಆಸ್ಪದ ಕೊಡ್ತೀರಲ್ಲ" ಎಂದಾಗ, "ನಾನಾಗ್ಲೇ ರಿಟೈರ್ ಆಗಲು ಬಂದಿದ್ದೇನೆ. ಇನ್ನೂ ಅಧಿಕಾರದಲ್ಲಿದ್ದವರ ಬಗ್ಗೆ ಸ್ವಲ್ಪ ಹೊಗಳಿ ಬರೆದರೆ ಅವರಿಗೆ ಅನುಕೂಲವಾಗುತ್ತೆ. ನನ್ನನ್ನು ಅಲಕ್ಷಿಸಿದರೂ 'ಕೆಲವರಿಂದ' ಹೆಚ್ಚು ಅನುಕೂಲ ವಿದ್ಯಾರ್ಥಿಗಳಿಗಾಗುತ್ತದೆ. ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತಿದ್ದರೆ, ಅವರ ಭವಿಷ್ಯ ಚೆನ್ನಾಗಿ ಆದರೆ ಸಾಕು. ನನ್ನ ಪ್ರತಿಷ್ಠೆಗಾಗಿ ಯಾಕೆ ತಪ್ಪಿಸಬೇಕು, ಅವರು ಹಾಗೆ ಬರೆದುದರಿಂದ ನನಗೆ ಯಾವ ನಷ್ಟವೂ ಆಗುವುದಿಲ್ಲ. ನನ್ನ ಕಾಲ ಮುಗಿದಿದೆ. ಮುಂದೆ ನನಗೆ ಆಗಬೇಕಾದುದು 'ಏನು ಇಲ್ಲ' ಎಂದು ವಾದವನ್ನು ತಳ್ಳಿಹಾಕಿ ಬಿಡುತ್ತಿದ್ದರು. ಅವರ ಈ ಸ್ವಭಾವ ಸಾಮಾನ್ಯವಾಗಿ ಎಲ್ಲಾ ವಿದ್ಯಾರ್ಥಿಗಳಿಗೆ ಗೊತ್ತಿತ್ತು. ಹಾಗಾಗಿ ಕೆಲವು ಚಾಣಾಕ್ಷ ವಿದ್ಯಾರ್ಥಿಗಳು ನಿರ್ದಾಕ್ಷಿಣ್ಯವಾಗಿ ಅದರ ದುರುಪಯೋಗ ಮಾಡಿಕೊಂಡಿದ್ದಾರೆ. ಇವರು ವಿದ್ಯಾರ್ಥಿಗಳ ಅಭ್ಯಾಸದ ಬಗ್ಗೆಯಷ್ಟೇ ಅಲ್ಲ ಅವರ ಜೀವನದ ಬಗ್ಗೆಯೂ ಕಾಳಜಿ ವಹಿಸುತ್ತಿದ್ದರು. ಅಂತಹ ಉದಾಹರಣೆಗಳಿಗೆ ಲೆಕ್ಕವಿಲ್ಲ.

ಅವರ ಒಬ್ಬ ವಿದ್ಯಾರ್ಥಿ ಲೆಕ್ಚರರ್ ಆಗಿ ಕೆಲಸ ಮಾಡುತ್ತಿದ್ದರು ಆಗ ತಾನೆ ಮದುವೆಯಾಗಿತ್ತು. ಅಷ್ಟರಲ್ಲಿ ತಂದೆ ತೀರಿಹೋದರು. ಹಾಗಾಗಿ ಹಿರಿಯ ಮಗನಾದ ಆತನ ಮೇಲೆಯೇ ತಮ್ಮಂದಿರ ವಿದ್ಯಾಭ್ಯಾಸ, ತಂಗಿಯ ಮದುವೆ, ತಾಯಿಯ ರಕ್ಷಣೆ, ಸಂಸಾರದ ನಿರ್ವಹಣೆ ಬಿದ್ದಿತು. ಅದೇ ಸಮಯದಲ್ಲಿ ಯಾವದೋ

ತಾಂತ್ರಿಕ ಕಾರಣಕ್ಕಾಗಿ ಈತನನ್ನು ಕೆಲಸದಿಂದ ತೆಗೆದುಹಾಕಿದರು. ಈಗ ಕೇಳಬೇಕೇ ಆತನ ಗೋಳನ್ನು? ಆಗ ಆತನಿಗೆ ನೆನಪು ಬಂದುದು ಅಪದ್ಬಾಂಧವರಾದ ಈ ಗುರುಗಳು. ಕೂಡಲೇ ತನ್ನ ಪರಿಸ್ಥಿತಿ ವಿವರಿಸಿ ಬರೆದರು. ಆತ್ಮಹತ್ಯೆ ಮಾಡಿಕೊಳ್ಳಬೇಕೆನ್ನಿಸುವ ಮಟ್ಟಕ್ಕೆ ಬಂದಿತ್ತು, ಆತನ ಮನಸ್ಸು. ಈ ವಿಷಯ ತಿಳಿದಕೂಡಲೇ ಡಾ. ಸ್ವಾಮಿಯವರು ಸ್ವಲ್ಪ ಹಣ ಟಿ.ಎಂ.ಓ. ಮಾಡಿ ಆತ್ಮವಿಶ್ವಾಸ ಕುದುರುವಂತಹ ಪತ್ರ ಬರೆದು, ಅವರ ಮರುನೇಮಕಕ್ಕೆ ಆಕಾಶ ಭೂಮಿ ಒಂದಾಗುವಂತಹ ಪ್ರಯತ್ನ ನಡೆಸಿದರು.

ಅದೇ ಸಮಯದಲ್ಲಿ ನಮ್ಮ ಮಗನಿಗೆ ಪ್ಯಾರಾ ಟೈಫಾಯಿಡ್ ಆಗಿತ್ತು. ಡಾಕ್ಟರು ಮನೆಗೆ ಬಂದು ಚಿಕಿತ್ಸೆ ನಡೆಸುತ್ತಿದ್ದರು. ಒಂದು ರಾತ್ರಿ ಜ್ವರ ವಿಪರೀತ ವಾಯಿತು. ಜ್ವರದ ಕಾರಣವೋ, ಔಷಧದ ಪರಿಣಾಮದಿಂದಲೋ ರಾತ್ರಿ ಎಲ್ಲಾ ಅಂಗಾಲು, ಮೈಕೈ ಉರಿ ಎಂದು ಒದ್ದಾಡುತ್ತಿದ್ದ. ನಾನು ಗಾಬರಿಯಾಗಿ ಇಡೀ ರಾತ್ರಿ ಹಾಸಿಗೆಯ ಬಳಿಯೇ ಕುಳಿತು ಕೈ, ಕಾಲು ಎಲ್ಲಾ ಸವರುತ್ತಿದ್ದೆ. ಏನು ಮಾಡಲು ತಿಳಿಯದೆ ಮನಸ್ಸೆಲ್ಲಾ ತಳಮಳಗುಡುತ್ತಿತ್ತು. ಇವರು ಮಾತ್ರ ರೂಮಿನಿಂದ ಎದ್ದು ಬರದೇ. 'ಹೇಗಿದೆ' ಎಂದು ವಿಚಾರಿಸಲೂ ಇಲ್ಲ.

ಇಂತಹ ಸ್ಥಿತಿಯಲ್ಲೂ ಇವರದ್ದು ಎಂತಹ ನಿದ್ದೆಯಪ್ಪಾ ಎನ್ನಿಸುತ್ತಿತ್ತು ನನಗೆ. ಇವರು ಬಂದು ಏನು ಮಾಡುವಂತಿರಲಿಲ್ಲ. ನಿಜ ಆದರೆ ಜೊತೆಗಿದ್ದರೆ ಮನಸ್ಸಿನ ಆತಂಕವನ್ನು ಹೇಳಿಕೊಂಡರೆ ಮನಸ್ಸು ಸ್ವಲ್ಪ ಹಗುರಾಗುತ್ತಿತ್ತು. ; ಸ್ವಲ್ಪ ಧೈರ್ಯ ಬರುತ್ತಿತ್ತು. ಆದರೆ ಇಡೀ ರಾತ್ರಿ ಬರಲೇ ಇಲ್ಲ. ನಾನು ಎಬ್ಬಿಸಲು ಹೋಗಲೂ ಇಲ್ಲ. ಬೆಳಗಾಗುವ ಹೊತ್ತಿಗೆ ಜ್ವರ ಸ್ವಲ್ಪ ಇಳಿಯಿತು. ಮಗನಿಗೆ ಸ್ವಲ್ಪ ನಿದ್ದೆಯೂ ಹತ್ತಿತ್ತು. ಆ ಸಮಯ ನೋಡಿ ಬೇಗ ಮುಖ ತೊಳೆದುಕೊಂಡು ಬಂದರಾಯ್ತೆಂದು ಎದ್ದುಬಂದೆ. ಇವರು ಪ್ಯಾಂಟ ಹಾಕಿಕೊಳ್ಳುತ್ತಿದ್ದರು. ತಡೆಯಲಾರದಷ್ಟು ಸಿಟ್ಟು ಬಂದರೂ ನುಂಗಿಕೊಂಡು 'ಬೆಳಗಾಗುತ್ತಲೇ ಎಲ್ಲಿಗೆ? ಎಂದೆ. ಇಲ್ಲೇ ವಜ್ರಕುಮಾರರವರ ಕಡೆ ಹೋಗಿ ಬರ್ತೇನೆ. ಲೇಟ್ ಆದರೆ ಅವರು ಬಿಸಿ ಆಗ್ಬಿಟ್ತಾರೆ. ಸಿಕ್ಕೋದಿಲ್ಲ. ಅವರಲ್ಲೇನಾದ್ರೂ ಒಂದು ವೇಕೆನ್ಸಿ ಇದ್ಯಾಂತ ಕೇಳ್ಕೊಂಡು ಬರ್ತೀನಿ ಎಂದರು. ನನಗೆ ಸಿಟ್ಟು ತಡೆಯಲಾಗಲಿಲ್ಲ. ಇಲ್ಲಿ ಮಗ ರಾತ್ರಿ ಎಲ್ಲಾ ಜ್ವರದಿಂದ ಒದ್ದಾಡ್ತಾ ಇದ್ರೆ ನಿಮ್ಗೆ ಯಾರ್‍ಯಾರ ಕೆಲಸ ಹೆಚ್ಚಾಯ್ತು ಅಲ್ವಾ? ಎಂದೆ ಬಿರುಸಾಗಿ. ಆಗ ಅವರು ಕೂಲಾಗಿ, "ನಾನ್ಮಾಡೋದೇನಿದೆ? ಡಾಕ್ಟ್ರು ನೋಡಿ ಔಷಧಿ ಕೊಟ್ಟಿದ್ದಾರೆ. ನೀನು ನೋಡ್ಕೊಳ್ತಾ ಇದ್ದೀಯ. ಪಾಪ ಆ ಬಡಪಾಯಿಗೆ ಯಾರು ದಿಕ್ಕಿದ್ದಾರೆ. ದಿನಬೆಳಗಾದ್ರೆ ಮನೆಲಿರೋ ಜನಕ್ಕೆ ಒಂದು ತುತ್ತು ಅನ್ನ ಹಾಕೋರು ಅವ್ನಿಗಿಲ್ಲ. ಅವ್ನಿಗೇನಾದ್ರು ವ್ಯವಸ್ಥೆ ಮಾಡದಿದ್ರೆ ಅವ್ನ ಲೈಫ್ ದುರಂತಕ್ಕೀಡಾಗುತ್ತದೆ" ಎಂದರು.

ನನಗೆ ಮುಂದೆ ಏನೂ ಮಾತಾಡಬಾರದು; ಆಡಿದ್ರೂ ಪ್ರಯತ್ನವಿಲ್ಲವೆನ್ನಿಸಿ ಒಳಗೆ ಹೋಗಿಬಿಟ್ಟೆ. (ಇದನ್ನು ಇಲ್ಲಿ ಬರೆಯುವದಕ್ಕೂ ಇವರ ಸಮ್ಮತಿ ಇಲ್ಲ)

ಈ ವಿಚಾರ ಏಕೆ ಬರಿತಿದೀನಿಂದ್ರ, ಇವರ ಕಾಳಜಿ ತಮ್ಮ ಕುಟುಂಬಕ್ಕಿಂತ ತಮ್ಮ ವಿದ್ಯಾರ್ಥಿಗಳ ಬಗ್ಗೆ ಹೆಚ್ಚಾಗಿತ್ತು ಎಂಬುದನ್ನು ತಿಳಿಸುವ ಕಾರಣ ಈ ಘಟನೆ ಹೇಳಿದೆ ಅಷ್ಟೇ. ಇಂತಹ ಉದಾಹರಣೆಗಳು ಹಲವಾರು, ಹಣ ಪಡೆದವರಿಗೆ ಲೆಕ್ಕವಿಲ್ಲ. ಆದರೆ ಅದನ್ನೆಂದೂ ಇವರು ನನಗೆ ಹೇಳಿಲ್ಲ. ಅಕಸ್ಮಾತ್ತಾಗಿ ನನಗೆ ಗೊತ್ತಾಗಿದೆ ಅಷ್ಟೆ. ಅವುಗಳನ್ನೆಲ್ಲ ಹೇಳುತ್ತಾ ಹೋದರೆ ಆತ್ಮಪ್ರಶಂಸೆ ಎನ್ನಿಸುತ್ತದೆಯಲ್ಲದೆ, ಹೊಗಳಿಸಿ ಕೊಳ್ಳುವದಕ್ಕಾಗಿ ಬೇರೆಯವರಿಗೆ ಸಹಾಯ ಮಾಡದ ತತ್ವಕ್ಕೆ ವಿರುದ್ಧವಾಗುತ್ತದೆ. ಆದರೂ ಅವರು ಸಮಾಜಕ್ಕಾಗಿ, ವಿದ್ಯಾರ್ಥಿಗಳಿಗಾಗಿ, ಧರ್ಮಕ್ಕಾಗಿ, ಜೀವನವಿಡೀ ದುಡಿದಿದ್ದಾರೆ. ಅದು ನಾಲ್ಕು ಜನರ ಕಿವಿಗೆ ಬಿದ್ದರೆ ಇಬ್ಬರಾದರೂ ಅಂತಹ ಆದರ್ಶ ಬೆಳೆಸಿಕೊಳ್ಳಲು ಪ್ರಯತ್ನಿಸಲಿ ಇಂಬುದು ನನ್ನ ಅನಿಸಿಕೆ. ನನಗೇನು ಇವರು ಬೇರೆಯವರಿಗೆ ನೆರನಾಗಬಾರದೆಂಬ ಉದ್ದೇಶವಿಲ್ಲ. ಆದರೆ ನಮ್ಮದನ್ನು ಅಲಕ್ಷಿಸಿ, ಹೆರವರದ್ದೇ ಮಹತ್ವದ್ದು ಎನ್ನುವಷ್ಟರ ಮಟ್ಟಿಗೆ ಇರಬಾರದು ಅಷ್ಟೇ. ಎಷ್ಟೋ ಬಾರಿ ಇವರ ಉದಾರತೆ, ಹೃದಯವಂತಿಕೆಯನ್ನು ನೋಡಿ ದಂಗಾಗಿದ್ದೇನೆ. ಒಳಗೆ ಮೆಚ್ಚುಗೆ ಎನಿಸಿದರೂ ಹೊರಗೆ ಅಸಮಾಧಾನ ತೋರಿಸಿದ್ದೇನೆ. ನನ್ನ ಸಹಕಾರವೂ ಇವರ ಉದಾರತಿಗೆ ಸಿಕ್ಕಿಬಿಟ್ಟರೆ ಮಿತಿಮೀರಿ ಹೋಗಬಹುದು. ಹಾಗಾದಾಗ ನಮ್ಮ ಸಂಸಾರದ ಗತಿ ಏನು ಎಂಬ ಚಿಂತೆ ಅಷ್ಟೆ. ಉದಾರತೆಗೂ ಒಂದು ಮಿತಿ ಇರಬೇಕಲ್ಲವೇ?

**ಹಣವಿರುವುದು ನಮ್ಮ ಸೇವೆಗೆ :**

ಹಣ ಕೂಡಿಡುವ ಸ್ವಭಾವ ಇವರದ್ದಲ್ಲ. ನಾಳೆಗಾಗಿ ಚಿಂತಿಸುವ ಜಾಯಮಾನವೂ ಇವರದ್ದಲ್ಲ. ಹಾಗಾಗಿ ಮೊದಮೊದಲು ತುಂಬಾ ಕಷ್ಟ ಅನುಭವಿಸಬೇಕಾಯ್ತು. 'ತಾನು ದುಡಿಯುತ್ತೇನೆಂದು ಗರ್ವ, ಎಂಬ ಮಾತು ಬರಬಾರದೆಂದು (ಆಗಿನ ಕಾಲದಲ್ಲಿ ಹೆಣ್ಣುಮಕ್ಕಳು ಹೆಚ್ಚಾಗಿ ನೌಕರಿಗೇ ಹೋಗುತ್ತಿರಲಿಲ್ಲ. ನಾನೆಂದೂ ಬ್ಯಾಂಕಿಗೇ ಹೋದವಳಲ್ಲ. ಆಗ ನಮ್ಮ ಇಬ್ಬರ ಪಗಾರವನ್ನು ಎಂಟು ದಿನಗಳಲ್ಲಿ ಮುಗಿಸಿ, 'ಹಣವೆಲ್ಲಾ ಮುಗಿಯಿತು, ಮುಂದೆ ನನ್ನಲ್ಲಿ ಏನೂ ಇಲ್ಲ' ಎಂದು ಬಿಡುತ್ತಿದ್ದರು.ಐದು ರೂಪಾಯಿ ಸಹ ಬೇರೆಯವರನ್ನು ಕೇಳುವಂತಾಗುತ್ತಿತ್ತು. ಉಡಲು ಸೀರೆಗಳಿಲ್ಲಕೆ, ದೊಡ್ಡ ದೊಡ್ಡ ಸೀರೆಗಳನ್ನೇ ಕಾಲೇಜಿಗೆ ಉಟ್ಟು ಹರಿದೆ.

೧೯೭೦ ನನ್ನ ಕೊನೆಯ ತಂಗಿಯ ಮದುವೆಯಾದಾಗ, ಮದುವೆಗೆ ಉಡಲು ಸೀರೆಗಳಿರಲಿಲ್ಲ. ಇವರಿಗೂ ಸರಿಯಾದ ಬಟ್ಟೆಗಳಿರಲಿಲ್ಲ. ಆಗ ಇವರ ಮಿತ್ರರ ಹತ್ತಿ ಎಂಟುನೂರು ರೂ. ಸಾಲಮಾಡಿ ಮೂರುಜನಕ್ಕೆ ಬಟ್ಟೆಕೊಂಡು ಮದುವೆಗೆ

ಹೋದೆವು. ಆಗ ನನಗೆ ತುಂಬಾ ಅವಮಾನವೆನ್ನಿಸಿ ಮನಸ್ಸನ್ನು ಗಟ್ಟಿಮಾಡಿಕೊಂಡು, ನನ್ನ ಸಂಬಳವನ್ನು ದಿನನಿತ್ಯದ ಖರ್ಚಿಗೆ ಕೊಡುವುದಿಲ್ಲ ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಖರ್ಚು ಮಾಡುತ್ತೇನೆ ಎಂದು ಹಠ ಹಿಡಿದೆ. ಆ ಬ್ಯಾಂಕಿಗೆ ಇವರೇ ಡ್ರಾ ಮಾಡುವಂತೆ ಬರೆದುಕೊಟ್ಟಿದ್ದೆ. ಈಗ ಅವರಿಗೆ ಕೊಡಬೇಡಿ ಎಂದು ಹೇಳುವುದು ಸರಿಯಲ್ಲವೆಂದು, ಇನ್ನೊಂದು ಬ್ಯಾಂಕಿನಲ್ಲಿ ನನ್ನ ಹೆಸರಿಗೆ ಅಕೌಂಟ್ ತೆರೆದು, ಅಲ್ಲಿಗೆ ನನ್ನ ಸಂಬಳ ತುಂಬುವಂತೆ ಮಾಡಿದೆ.

ಹೀಗೆ ಹಿಡಿತ ಮಾಡಿದ ಮೇಲೆ ಹಣದ ಅಡಚಣೆ ಕಡಿಮೆಯಾಗುತ್ತಾ ಬಂತು. ಈಚೆಗೆ ಸಂಬಳವೂ ಹೆಚ್ಚಾಯ್ತು, ಮನೆಯಲ್ಲಿರುವ ಬಂಧುಗಳ ಸಂಖ್ಯೆಯೂ ಕಡಿಮೆಯಾಯ್ತು. ಇವರಿಗೂ ಸ್ವಲ್ಪ ಬುದ್ಧಿ ಬರುವಂತಹ ಅನುಭವಗಳಾದವು. ಹಾಗಾಗಿ ಆರ್ಥಿಕ ಸ್ಥಿತಿ ಉತ್ತಮಗೊಂಡಿತೆನ್ನಬೇಕು.

**ನಿಶ್ಚಿಂತತೆಯ ಸ್ವಭಾವ:**

ಎಷ್ಟೇ ಸಮಸ್ಯೆಗಳಿದ್ದರೂ ಯಾವುದನ್ನೂ ಹಚ್ಚಿಕೊಂಡು ಕೊರಗುವ ಸ್ವಭಾವದವರಲ್ಲ. ಎಂತೆಂತಹ ಸಂದರ್ಭಗಳಲ್ಲಿಯೂ ಹಾಸಿಗೆಗೆ ತಲೆ ಇಡುತ್ತಲೇ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಾರೆ. ಎಷ್ಟೋ ಬಾರಿ ಇವರ ಸಮಸ್ಯೆಗಳ ಕಾರಣ ಇಡೀ ರಾತ್ರಿ ನಾನು ಕಣ್ಣು ತೆರೆದು ಚಿಂತೆ ಮಾಡುತ್ತಿದ್ದರೆ, 'ಇದು ಹೇಗೆ ಸಾಧ್ಯ' ಎಂದು ಕೇಳಿದಾಗ, 'ನಾನು ಏನೇ ಸಮಸ್ಯೆಗಳಿದ್ದರೂ (ತಲೆತೋರಿಸಿ) ಈ ಮಟ್ಟದಲ್ಲಷ್ಟೇ ವಿಚಾರ ಮಾಡುತ್ತೇನೆ. ಅವು ಇಲ್ಲಿಯವರೆಗೆ (ಹೃದಯ ತೋರಿಸುತ್ತ) ಇಳಿಯಲು ಬಿಡುವುದೇ ಇಲ್ಲ' ಎಂದರು. ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಎಲೆಕ್ಷನ್‌ಗೆ ನಿಂತಾಗ, ನಾನು ಜಿಲ್ಲೆಯ ಮಟ್ಟದಲ್ಲಿ ನಿಲ್ಲುವುದು ಬೇಡವೆಂದು ಅಭಿಪ್ರಾಯಪಟ್ಟೆ. ಎಂದಿಗೂ ಸ್ಥಾನ-ಮಾನ, ಪ್ರೆಸ್ಟೀಜ, ಡಿಗ್ನಿಟಿ ಎಂದು ತಲೆಕೆಡಿಸಿಕೊಳ್ಳದ ಇವರು, ತಾವು ರಿಟೈರ ಆಗುವುದರಿಂದ ಸಾಕಷ್ಟು ಬಿಡುವು ಸಿಕ್ಕುತ್ತದೆ. ಬೆಂಗಳೂರಿನಲ್ಲಿರುವ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳಲ್ಲಿ ಉತ್ತರ ಕರ್ನಾಟಕದ ಎಲ್ಲಾ ಸಾಹಿತಿಗಳಿಗೂ ಅವಕಾಶ ದೊರೆಯುಲು ಸಾಧ್ಯವಿಲ್ಲ. ಇದನ್ನು ಅದೇ ಮಟ್ಟದಲ್ಲಿ ಬೆಳೆಸಬೇಕೆಂದು ತಮ್ಮ ಅನೇಕ ಯೋಜನೆಗಳನ್ನು ವಿವರಿಸಿದರು. ಆಗಲೂ ನಾನು, ಎಲ್ಲರೂ ಒಮ್ಮತದಿಂದ ಆರಿಸಿದರೆ ಮಾತ್ರ ಒಪ್ಪಬೇಕು, ಎಲೆಕ್ಷನ್‌ಗೆ ಮಾತ್ರ ನಿಲ್ಲಬೇಡಿ ಎಂದೆ.

ಕೆಲವು ಪ್ರಮುಖರನ್ನು ಭೆಟ್ಟಿಯಾದಾಗ, ನೀವು ನಿಂತಿರುವಾಗ, ಬೇರೆಯವರು ನಿಲ್ಲುವುದೇ? ಅವರಿಗೆ ಹಿಂತೆಗೆದುಕೊಳ್ಳಲು ಹೇಳುತ್ತೇವೆ. ಎಂದರಂತೆ ಆದರೆ, ಈಗಿನ ಯುವಕರಿಗೆ ತಾವು ಮುಂದೆ ಬರಬೇಕು, ಅವಕಾಶ ಗಿಟ್ಟಿಸಿಕೊಳ್ಳಬೇಕೆಂಬ

ಮಹತ್ವಾಕಾಂಕ್ಷೆ ಇರುತ್ತದೆ. ಈ ಕಾಲದಲ್ಲಿ ತಾರತಮ್ಯಗಳಿಗೆ ಮಹತ್ವವಿಲ್ಲ. ಹಾಗಾಗಿ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲಿಲ್ಲ. ಕೊನೆಯಲ್ಲಿ ಎಲೆಕ್ಷನ್ ನಡೆಯುವದು ಖಚಿತವಾಯಿತು. ಹಳೆಯ ಮೌಲ್ಯಗಳ ನಂಬುಗೆ ಇಟ್ಟಿದ್ದ ಓವರ್ ಕಾನ್‌ಫಿಡನ್ಸ್‌ನಲ್ಲಿ ನಿಶ್ಚಿಂತರಾದರು. ಎಲೆಕ್ಷನ್‌ಗೆ ನಿಲ್ಲಬಾರದಿತ್ತು. ನಿಂತ ಮೇಲೆ ಆಧುನಿಕ ರಾಜಕೀಯ ತಂತ್ರಗಳನ್ನಾದರೂ ಉಪಯೋಗಿಸಬೇಕಿತ್ತು. ಗುಂಡಿಗೆ ಎದೆಯೊಡ್ಡಿ ನಿಂತ ಸ್ವಾತಂತ್ರ್ಯ ಯೋಧನಂತೆ, ವರ್ತಿಸಿದಾಗ ಎಲೆಕ್ಷನ್ ನಿರ್ಣಯ ಇವರ ನಿರೀಕ್ಷೆಯನ್ನು ತಲೆಕೆಳಗು ಮಾಡಿತು. ಒಂದೇ ಒಂದು ಓಟಿನಿಂದ ಸೋತರು! ಮೋಸವಾಯಿತು. ಆ ದಿನ ರಾತ್ರಿ ಸಹ ನಿಶ್ಚಿಂತೆಯಿಂದ ನಿದ್ದೆ ಮಾಡಿ, ಮರುದಿನ ಬೆಳಿಗ್ಗೆ ಡಿಪಾರ್ಟಮೆಂಟಿನಲ್ಲಿ ಎಂದಿನಂತೆ ಕ್ಲಾಸ್ ತೆಗೆದುಕೊಂಡು ಬಂದರು. ಸಂಜೆ ಮನೆಗೆ ಬಂದ ಶ್ರೀ ಬಸವರಾಜ ಕಟ್ಟಿಮನಿಯವರು. ಇವರು ರಾತ್ರಿ ನಿಶ್ಚಿಂತೆಯಿಂದ ಊಟ ಮಾಡಿ ನಿದ್ದೆ ಮಾಡಿದುದನ್ನೂ, ಬೆಳಿಗ್ಗೆ ತರಗತಿಗೆ ಹೋಗಿ ಕ್ಲಾಸ ತೆಗೆದುಕೊಂಡುದನ್ನೂ ಕೇಳಿ ದಿಗ್ಭ್ರಮೆಗೊಂಡರು. ತಮಗೆ ಮಾತ್ರ ಊಟ ಸೇರಲಿಲ್ಲವೆಂದೂ, ನಿದ್ದೇಬರಲೇ ಇಲ್ಲವೆಂದು ಹೇಳಿದರು.

ಆಗ ಇವರು "ಏನೇನೋ ಕೆಲಸ ಮಾಡಬೇಕೆಂದು ಯೋಜನೆ ಹಾಕಿಕೊಂಡಿದ್ದೆ. ಆರಿಸಿ ಬರಲಿಲ್ಲ, ಕೆಲಸ ಮಾಡುವುದು ಸಾಧ್ಯವಾಗುವುದಿಲ್ಲ. ಅಷ್ಟೆ ಒಳ್ಳೆಯದೇ ಆಯಿತೇನೋ ಈ ವಯಸ್ಸಿನಲ್ಲಿ ಅಷ್ಟೊಂದು ದುಡಿಯುವುದು ಒಳ್ಳೆಯದಲ್ಲವೆಂದು ಹೀಗಾಗಿರಬೇಕು. ಈ ಕಾಲದಲ್ಲಿ ಎಲೆಕ್ಷನ್ ಗೆದಿಯುವುದು ಒಳ್ಳೆಯದಲ್ಲವೆಂದು ಹೀಗಾಗಿರಬೇಕು.ಈ ಕಾಲದಲ್ಲಿ ಎಲೆಕ್ಷನ್ ಗೆದಿಯಲು ಬೇಕಾದ ಕ್ವಾಲಿಫಿಕೇಶನ್ನೇ ಬೇರೆ, ಅವು ನಮಗಿಲ್ಲ ಎಂದುಕೊಂಡರಾಯ್ತು" ಎಂದರು.

ಹೀಗೆ ತಮ್ಮ ಎಣಿಕೆಯಂತೆ ಕೆಲಸಗಳಾದರೆ ಉತ್ಸಾಹದಿಂದ ದುಡಿಯುವುದು; ಆಗದಿದ್ದರೆ ಮನಸ್ಸಿಗೆ ಹಚ್ಚಿಕೊಳ್ಳದೆ ಮರೆತುಬಿಡುವುದು ಇವರ ಅಪರೂಪದ ಸ್ವಭಾವ. ಫಲಿತಾಂಶ ಅವರಿಗೂ ಸಾಕಷ್ಟು ನೋವು ಉಂಟುಮಾಡಿದೆ ಎನಿಸಿತು ನನಗೆ ; ನನಗಂತೂ ನೋವಾದರೆ, ಅವರ ನೆರವು ಪಡೆದ ವಿದ್ಯಾರ್ಥಿ ಪೈಪೋಟಿ ನಡೆಸಿದುದು, ಹಳೆಯ ಮೌಲ್ಯಗಳಿಗೆ ಅಂಟಿಕೊಂಡಿದ್ದ ನನಗೆ ನುಂಗಲು ಕಷ್ಟವೆನ್ನಿಸಿತ್ತು. ಕಟ್ಟೀಮನಿಯವರೊಡನೆ 'ಇವರ ಸ್ಪರ್ಧಿಯಾಗಿ ನಿಂತಿದ್ದ ಇವರ ಹಳೆಯ ನಿದ್ಯಾರ್ಥಿಗೆ ಮೊದಲ ಬಾರಿ ಎಂ.ಎ. ಥರ್ಡ್‌ಕ್ಲಾಸ್‌ನಲ್ಲಿ ಆಗಿತ್ತಂತೆ. ಆಗ ಕೆಲವು ಪ್ರಾಧ್ಯಾಪಕರು, ಜಾತಿಯ ಕಾರಣ ಇವರಿಗೆ ಹಾಗೆ ಮಾಡಿದರೆಂದು ತುಂಬಾ ಬೇಜಾರು ಮಾಡಿಕೊಂಡು, ಇನ್ನು ವಿಶ್ವವಿದ್ಯಾಲಯದ ಕಡೆ ತಿರುಗಿ ನೋಡುವುದು ಬೇಡವೆಂದು ಹೈಸ್ಕೂಲಿನಲ್ಲೆ ಇದ್ದು ಬಿಡಬೇಕೆಂದು ನಿರ್ಧರಿಸಿದ್ದರಂತೆ'.

ಆಗ 'ಇವರು' ಅವರನ್ನು ಕರೆಸಿ, ಹಾಗೆ ಮಾಡಬೇಡಿ. ಇನ್ನೊಮ್ಮೆ ಪರೀಕ್ಷೆ ಕಟ್ಟು, ನಾನು ನಿನಗೆ ಓದಲು ಬೇಕಾದ ಸಹಾಯವನ್ನೆಲ್ಲಾ ಮಾಡುತ್ತೇನೆ. ನಿರಾಶನಾಗುವುದು ಸರಿಯಲ್ಲ ಎಂದು ವಿಧವಾಗಿ ಪ್ರೋತ್ಸಾಹಿಸಿ ಮತ್ತೆ ಪರೀಕ್ಷೆ ಕಟ್ಟುವಂತೆ ಮಾಡಿ, ಪುಸ್ತಕಗಳನ್ನೆಲ್ಲಾ ಕೊಟ್ಟು, ಓದುವ ಬಗ್ಗೆ ಮಾರ್ಗದರ್ಶನ ಮಾಡಿದರಂತೆ! ಅದರಂತೆ ಅವರು ಪರೀಕ್ಷೆಗೆ ಕುಳಿತು ಉತ್ತಮ ರೀತಿಯಲ್ಲಿ ತೇರ್ಗಡೆಯಾದರು. ಆ ಸಂದರ್ಭದಲ್ಲಿ ನಮ್ಮಿಬ್ಬರನ್ನು ಚಹಾಕ್ಕೆ ಕರೆದಿದ್ದರು. ಆ ವಿದ್ಯಾರ್ಥಿಯೇ ನನಗೆ ಇದೆಲ್ಲಾ ವಿಷಯವನ್ನು ತಿಳಿಸಿದರು. ಸ್ವಾಮಿಯವರೆಂದೂ ಈ ಬಗೆಗೆ ಮೊದಲು ನನ್ನೊಡನೆ ಮಾತನಾಡಿರಲಿಲ್ಲ. ಈ ವಿಚಾರಗಳನ್ನೆಲ್ಲಾ ಕಟ್ಟೀಮನಿಯವರಿಗೆ ಹೇಳಿ, 'ನೋಡಿ, ಆ ದಿನ, ನಿಮ್ಮಿಂದ ನಾನು ಎಂ.ಎ. ಮಾಡಿದೆ ಸಾರ್, ಇಲ್ಲದಿದ್ದರೆ ನಾನು ಹೈಸ್ಕೂಲಿನಲ್ಲೇ ಕೊಳೆಯುತ್ತಿದ್ದೆ' ಎಂದವರು, ಈ ದಿನ ತಮಗೆ ಸಹಾಯ ಮಾಡಿದವರ ವಿರುದ್ಧವೇ ಸ್ಪರ್ಧೆಗಿಳಿದರಲ್ಲಾ ಎಂದು ಬೇಸರ ತೋರಿಸಿದ್ದೆ.

ಈಗ ನನಗೂ ಜಗತ್ತಿನ ಪರಿಚಯವಾಗಹತ್ತಿದೆ. ಅವರವರಿಗೆ ಅವರವರ ಶ್ರೇಯಸ್ಸು ಮುಖ್ಯ. ಇಂದು ಸಾಮಾಜಿಕವಾಗಿಯೇ ಮೌಲ್ಯಗಳು ಕುಸಿದಿರುವಾಗ ನಾವು ಅವುಗಳನ್ನು ಯಾರಿಂದಲಾದರೂ ನಿರೀಕ್ಷಿಸುವುದು ಸರಿಯಲ್ಲ. ಜಗತ್ತು ಬದಲಾದಂತೆ ನಾವು ಬದಲಾಗಬೇಕು, ಇಲ್ಲದಿದ್ದರೆ ಪೆಟ್ಟುಗಳನ್ನು ತಿನ್ನುತ್ತಿರಬೇಕಾಗುತ್ತದೆ ಎಂಬ ಅರಿವು ಮೂಡಿ, ಅಂದು ಆ ವಿದ್ಯಾರ್ಥಿ ಯಾರು ತಮಗೆ ಅನ್ಯಾಯ ಮಾಡಿದ್ದರೆಂದು ಹೇಳಿದ್ದರೋ ಅವರ ಬೆಂಬಲವನ್ನೇ ಪಡೆದಿದ್ದು ಇಂದಿನ ಸಮಾಜದ ರೀತಿಯಲ್ಲಿ ಅಕ್ಷೇಪಣೀಯವೇನಲ್ಲ ಎಂಬ ಅರಿವು ನನಗುಂಟಾಗಿದೆ. ಗಾಯ ಮಾಯವಾದರೂ ಗಾಯದ ಗುರುತು ಇರುತ್ತದೆ. ಆದರೆ ಗಾಯದ ನೋವಿರುವುದಿಲ್ಲ. ಹಾಗೆ ನಾವೂ ಅದನ್ನೆಲ್ಲಾ ಮರೆತಿದ್ದೇವೆ. ಆತನೂ ಸಹ ಇವರೊಂದಿಗೆ ಎಂದಿನಂತೆ ಗೌರವದಿಂದ ನಡೆದುಕೊಳ್ಳುತ್ತಾನೆ. ಕೆಟ್ಟ ಗಳಿಗೆಗಳು ಅನಪೇಕ್ಷಣೀಯವಾಗಿ ಜೀವನದಲ್ಲಿ ಬರುತ್ತವೆ. ತಪ್ಪಿಸಲಾಗುವುದಿಲ್ಲ.

ತೃಪ್ತಿ ತುಂಬಿದ ಜೀವ :

'ಇದ್ದರುಂಟು ಇಲ್ಲದಿದ್ದರೆ ಇಲ್ಲ' ಇದು ಇವರ ಫಿಲಾಸಫಿ. ಊಟದಲ್ಲೂ ಹಾಗೆಯೇ ತುಂಬಾ ಪ್ರೀತಿಯಿಂದ ಊಟ ಸವಿಯುತ್ತಿದ್ದರು. (ಈಗ ವಯಸ್ಸಾದ ಮೇಲೆ ಇಲ್ಲ) ಹೀಗೆ ಚೆನ್ನಾಗಿ ಊಟ ಮಾಡತ್ತಿದ್ದ ಇವರು ಸಂದರ್ಭವಶಾತ್ ಇಡೀ ದಿನ ಉಪವಾಸ ಇರಬೇಕೆಂದರೂ ಏನೂ ಕಷ್ಟವಿಲ್ಲದೆ ಊಟದ ನೆನಪೂ ಇಲ್ಲದಂತೆ ಉಪವಾಸವಿದ್ದು ಬಿಡುತ್ತಿದ್ದರು. ಚೆನ್ನಾಗಿ ಬಟ್ಟೆಬರೆ ಹಾಕಿಕೊಳ್ಳಲು ಇಷ್ಟ, ಇದ್ದರೆ ಹಾಕಿಕೊಂಡು ಸಂತೋಷಿಸುತ್ತಾರೆ. ಇಲ್ಲದಿದ್ದರೆ ಇಲ್ಲವೆಂದು

ಅಸಮಾಧಾನ ಪಟ್ಟುಕೊಂಡವರೇ ಅಲ್ಲ. ಅವರಿಗೆ ಎಲ್ಲರೊಡನೆ ಪ್ರೀತಿಯಿಂದ ನಕ್ಕು ನಲಿಯುತ್ತಾ ಸಂತೋಷವಾಗಿರಬೇಕೆಂದು ತುಂಬಾ ಇಷ್ಟ ಅವರು ಮನೆಯವರೇ ಆಗಿರಬೇಕೆಂದಿಲ್ಲ. ಮನೆಯವರ ಹಿತ ಎಷ್ಟು ಸಂತೋಷವೋ ಬೇರೆಯವರ ಒಳಿತೂ ಅವರಿಗೆ ಅಷ್ಟೇ ಸಂತೋಷ ಕೊಡುತ್ತದೆ. ಎಷ್ಟೋ ಸಾರಿ ಅವರು ಮನೆಗೆ ಬರುತ್ತಲೇ ಇವತ್ತೊಂದು ಸಂತೋಷ ಸಮಾಚಾರ ಎಂದು ಹೇಳುತ್ತಾ ಉತ್ಸಾಹದಿಂದ ಬಂದಾಗ, ನಾನು ಮೊದಮೊದಲು ಆ ಸಂತೋಷ ಸಮಾಚಾರ, ನಮಗೇ ಸೇರಿದ್ದೆಂದು ಬಹು ಖುಷಿಯಿಂದ ಅದೇನೆಂದು ತಿಳಿದುಕೊಳ್ಳಲು ಒಳಗಿನಿಂದ ಓಡಿಹೋಗುತ್ತಿದ್ದೆ. ಆಗ ಅವರು ಬೇರೆ ಯಾರದೋ ಹೆಸರು ಹೇಳುತ್ತಾ ಇಂಥವರಿಗೆ ಪ್ರಮೋಷನ್ ಆಯಿತೆಂದೂ, ಅಪಾಯಿಂಟಮೆಂಟ್ ದೊರಿಯಿತೆಂದೂ, ಪ್ರಶಸ್ತಿ ಪಡೆದರೆಂದೋ ಹೇಳುತ್ತಿದ್ದರು

ಈ ರೀತಿ ಇರುವ ಜನ ಖಂಡಿತವಾಗಿಯೂ ವಿರಳ. ಬೇರೆಯವರನ್ನು ಟೀಕಿಸಿ ಎಂದೂ ಮಾತನಾಡುವವರಲ್ಲ. ಈಗೀಗ ಬೇರೆಯವರ ಕಾರಣ ತುಂಬಾ ನೋವಿಗೆ ಮೇಲಿಂದ ಮೇಲೆ ಒಳಗಾದ ನಂತರ, ನಾನು ಈ ಬಗ್ಗೆ ದಿನವೂ ಮಾತನಾಡಿಯೋ ಏನೋ ಒಮ್ಮೊಮ್ಮೆ ಬಹಳ ಅಪರೂಪವಾಗಿ ಅಸಮಾಧಾನ ವ್ಯಕ್ತಪಡಿಸುತ್ತಾರೆ. ತಾವು ಬೇರೆಯವರಿಗೆ ಮಾಡಿದ ಉಪಕಾರದ ಬಗ್ಗೆ ನನಗೆ ಹೇಳುತ್ತಿರಲಿಲ್ಲ. ಈಗೀಗ ಬಹಳ ಅಪರೂಪವಾಗಿ, ಅಂಥವರು ಕೃತಘ್ನರಾಗಿ ನಡೆದುಕೊಂಡಾಗ, ಹೇಳಿಕೊಳ್ಳುತ್ತಾರೆ. ಸಿಟ್ಟಿಗೇಳುತ್ತಾರೆ, ಆದರೆ, ಕೆಟ್ಟದಾಗಲಿ ಎಂದು ಎಂದೂ ಬಯಸಿದವರಲ್ಲ.

ಗುಂಪುಗಾರಿಕೆಯಂತೂ ಇವರಿಗೆ ಸೇರುವುದೇ ಇಲ್ಲ. ಇವರು ಪಠ್ಯಪುಸ್ತಕ ನಿರ್ದೇಶನಾಲಯದ ಡೈರೆಕ್ಟರ್‌ರಾದ ಕಾಲದಲ್ಲಿ ಸ್ವಲ್ಪ ಸಮಸ್ಯೆಗಳುಂಟಾಗಿ ಮಾನಸಿಕವಾಗಿ ಬಹಳಷ್ಟು ನೋವಿಗೆ ಗುರಿಯಾಗಿದ್ದರು. ಆಗ ಇವರ ಸಹೋದ್ಯೋಗಿಗಳಲ್ಲಿ ಒಬ್ಬಿಬ್ಬರು, ನನ್ನ ಬಳಿ ಬಂದು, 'ನೋಡ್ರಿ ಲಲ್ತಕ್ಕಾರೆ, ಸ್ವಾಮಿಗಳು 'ಆನೆ' ಇದ್ದ ಹಾಗೆ, ತಾನು ಹೋದದ್ದೇ ದಾರಿ. ಈಗ ಹಾಗೆ ಒಂಟಿಯಾಗಿ ಬದುಕುವುದು ಕಷ್ಟ, ನಾವಲ್ಲ ಒಂದು ಗುಂಪು ಮಾಡಿಕೊಳ್ಳೋಣ, ನಾವೆಲ್ಲ ಅವರಿಗೆ ಬೆಂಬಲವಾಗಿ ನಿಲ್ಲುತ್ತೇವೆ' ಎಂದರು,

ನಾನು ಈ ವಿಷಯುವನ್ನು ಇವರಿಗೆ ತಿಳಿಸಿದಾಗ, 'ಅದಲ್ಲಾ ನನ್ನಿಂದಾಗೋದಿಲ್ಲಪ್ಪ' ಹಾಗೆ ಮಾಡಿಕೊಂಡರೆ, ಕೆಲವು ಸಂದರ್ಭಗಳಲ್ಲಿ ನಮ್ಮ 'ಪಾರ್ಟಿ'ರವರನ್ನು ಅನ್ಯಾಯ ವಿದ್ದರೂ ಬೆಂಬಲಿಸಬೇಕಾಗುತ್ತದೆ. ನನಗೆ ಅದೆಲ್ಲಾ ಸಾಧ್ಯವಿಲ್ಲ ಎಂದುಬಿಟ್ಟರು. ಅವರಿಗೆ ತಮ್ಮದೇ ಅಭಿಪ್ರಾಯ. ಬೇರೆಯವರ ಮಾತನ್ನು ಕೇಳುವವರಲ್ಲ. ಇದನ್ನರಿತ ಕೆಲವರು ಇವರಿಂದ ಸ್ವಾರ್ಥ ಸಾಧಿಸಕೊಳ್ಳಬೇಕಾದರೆ. ಡಿಪಾರ್ಟಮೆಂಟಿನ ಒಳಿತಿಗೆ ಎಂಬಂತೆ ಆ ವಿಚಾರಗಳನ್ನು ಇವರಿಗೆ ಬಿಂಬಿಸಿ ಸಾಧಿಸಿಕೊಳ್ಳತ್ತಿದ್ದರು. (ಅವರ ಕೈಲಿ ಕೆಲವು ಅಧಿಕಾರಗಳಿದ್ದಾಗ) ಇವರು

ಡಿಪಾರ್ಟಮೆಂಟಿನ ಹೆಡ್ ಆಗಿದ್ದಾಗ ಒಬ್ಬ ಪ್ರಾಧ್ಯಾಪಕರೊಡನೆ ತುಂಬಾ ಆತ್ಮೀಯತೆಯಿಂದ ಇದ್ದರಂತೆ (ಆಗಿನ್ನು ರೋಟೇಶನ್‌ಪದ್ಧತಿ ಜಾರಿಗ ಬಂದಿರಲಿಲ್ಲ) ಹೆಚ್ಚು ಕಡಿಮೆ ಸ್ಟಾಫ್‌ನವರೆಲ್ಲಾ ಇವರ ಹಿಂದಿನ ವಿದ್ಯಾರ್ಥಿಗಳೇ ಆಗಿದ್ದರು.

ಆಗ ಗೌರವಾನ್ವಿತರಾದ ಒಬ್ಬ ಹಿರಿಯ ಪ್ರಾಧ್ಯಪಕರು ಬಂದು, "ನೋಡಿ ಮೇಡಂ,ಸರ್ ಇಂಥವರ ಬಳಿ ಬಹಳ ಕ್ಲೋಸ್ ಇದ್ದಾರೆ, ಒಂದಲ್ಲ ಒಂದು ದಿನ ಅವನು ಇವರಿಗೆ ಕೆಡುಕು ಮಾಡುತ್ತಾನೆ. ಆತನನ್ನು ಎಷ್ಟು ದೂರದಲ್ಲಿಟ್ಟಿದ್ದರ ಅಷ್ಟೇ ಕ್ಷೇಮ. ನಾವು ಅವರ ವಿದ್ಯಾರ್ಥಿಗಳಾಗುತ್ತೇವೆ. ಇಂತಹುದನ್ನೆಲ್ಲಾ ನಾವು ಹೇಳಲು ಬರುವುದಿಲ್ಲ" ಎಂದು ಅಕಸ್ಮಾತ್ತಾಗಿ ಭೆಟ್ಟಿಯಾದಾಗ ಹೇಳಿದರು. ನನಗೂ ಆ ವ್ಯಕ್ತಿಯ ಬಗ್ಗೆ ಅಂತಹದೇ ಭಯವಿತ್ತು. ಇವರು ಜಾಣತನದಿಂದ ಹೇಳುವಂತವರ ಮಾತಿಗೆ ಬಲಿ ಬಿದ್ದು ಬಿಡುತ್ತಾರೆಂದು ಭಯ ನನಗಿದ್ದುದರಿಂದ ಪ್ರಾಧ್ಯಾಪಕರು ಹೇಳಿದ ಮಾತನ್ನು ಹೇಳಿದೆ, 'ಅವನು ಬಹಳ ಜಾಣ ಇದ್ದಾನೆ, ಅದಕ್ಕೆ ಇವರುಗಳಿಗೆ ಅವನ ಮೇಲೆ ಹೊಟ್ಟೆಕಿಚ್ಚು' ಎಂದು ಹೇಳಿ, ಆ ಸಲಹೆಯನ್ನು ತಳ್ಳಿಹಾಕಿಬಿಟ್ಟರು. ಪ್ರಾಧ್ಯಾಪಕರು ಹೇಳಿದ ಮಾತು ನಿಜವಾಗಿ, ಇವರೇ ತಮ್ಮ ವಿದ್ಯಾರ್ಥಿ ಏಳ್ಗೆಯನ್ನು ಸಹಿಸದೆ ಹೆಸರು ಕೆಡಿಸಲು ಪ್ರಯತ್ನಿಸುತ್ತಾರೆ.' ಎಂಬ ಅಪವಾದಕ್ಕೆ ಆ ವ್ಯಕ್ತಿಯಿಂದಲೇ ಗುರಿಯಾದರು! ಎಂದೂ ಯಾರ ವಿರುದ್ಧವೂ ಕೆಲಸ ಮಾಡದ ಇವರು ತಮ್ಮ ನೌಕರಿಯ ಕೊನೆಯ ದಿನಗಳಲ್ಲಿ ಸ್ವಲ್ಪ ಗೊಂದಲದ ಪರಿಸ್ಥಿತಿಯನ್ನು ಎದುರಿಸಬೇಕಾಯ್ತು. ಅವರವರ ಸಂಸ್ಕಾರಕ್ಕೆ, ಅನುಭವಕ್ಕೆ ತಕ್ಕಂತೆ ಯಾವುದೇ ವಿಚಾರವನ್ನು ಅವಲೋಕಿಸುವುದು ಸಹಜ. ಪ್ರತಿಯೊಬ್ಬರಿಗೂ ತಮಗನಿಸಿದಂತೆ ವಿಷಯಗಳನ್ನು ಅರ್ಥೈಸುವ ಸ್ವಾತಂತ್ರ್ಯ ವಿದೆ ತಾನೆ. ಆದರೆ ಇಷ್ಟು ಸಮಾಧಾನ ವ್ಯಕ್ತಿಯೂ ಕೆರಳುವಂತಹ ರೀತಿಯಲ್ಲಿ ಘಟನೆಗಳು ಜರುಗಿದ್ದವು. ಇವರೂ ಮನುಷ್ಯರು ತಾನೆ?

ನಾನೇನು ಇವರು ದೇವಮಾನವರು. ಇವರಲ್ಲಿ ದೋಷಗಳೇ ಇಲ್ಲವೆನ್ನುವುದಿಲ್ಲ. ಇವರ ಹೃದಯವಂತಿಕೆ, ಪರೋಪಕಾರ ಬುದ್ಧಿ, ನಿಸ್ವಾರ್ಥ ಮನೋಭಾವ, ಬೇರೆಯವರ ಏಳ್ಗೆಯ ನೋಡಿ ಹಿಗ್ಗುವ ದೊಡ್ಡತನ, ಕಷ್ಟದಲ್ಲಿರುವವರಿಗೆ ಉತ್ಸಾಹ ನೀಡಿ ಮುಂದೆ ತರುವಂತಹ ಅಪರೂಪದ ಗುಣಗಳ ಮುಂದೆ, ಇವರಲ್ಲಿರುವ ದೋಷಗಳು ಗೌಣ ಎಂಬುದು ನನ್ನ ಅನಿಸಿಕೆ, ಇವರಿಗಿಂತಲೂ ಬೇಕಾದಷ್ಟು ಬುದ್ಧಿವಂತರೂ, ವ್ಯವಹಾರ ಚತುರರೂ, ಚುರುಕಾದವರೂ ಅನೇಕರಿದ್ದಾರೆ. ಆದರೆ ಇವರ ಹೃದಯ ವಂತಿಕೆ ಬಹಳಷ್ಟು ಜನಕ್ಕಿಲ್ಲ ಎಂಬುದು ನಿರ್ವಿವಾದ. ಇವರ ಒಳ್ಳೆಯತನಗಳನ್ನು ವ್ಯವಹಾರ ಚತುರರಾದವರು ಮೂರ್ಖತನವೆಂದು ಗುರುತಿಸಿದರೂ ಆಶ್ಚರ್ಯವಿಲ್ಲ.

■

## ಸಂಪುಟ – ೧

ಅದೆಲೊಮ್ಮೆ ದಾರಿಯಲ್ಲಿ ಸಿಕ್ಕಾಳು
ನನ್ನ ನೋಡಿ ನಕ್ಕಾಳು
ನಮಗೇನ ಇಬ್ಬರು ಮಕ್ಕಳು ದುಂಡರಾಜ

ಮಳೆ ಚನ್ನಾಗಿ ಬರಲ ಬೆಳೆಸಬೇಕು ನಾಡು
ಅನವಶ್ಯವಾಗಿ ಮರಗಳ ಕಡಯಬಾರದು ನೋಡು
ಕರ್ನಾಟಕವು ಕಾಡು –ಮೇಡುಗಳ ಸೊಬಗಿನಬೀಡು
ಲ.ವ್ಯಸ್ವಾ
ಅವಿವೇಕಿಗಳು ಸೂಳು ಆಗುವುದು ಗೋಳು
ಇರುವಷ್ಟು ಜನ ಚೆನ್ನಾಗಿ ಬಾಳಬೇಕು ಕೇಳು
ಬೇಕೆಂದವರಿಗೆ ಯಾಕ್ರಾ ಉಪದೇಶ ಹೇಳು
ಉ.ಶ್ರೀ.ಲ
ಆಡು ಮಟ್ಟದ ಸೊಪ್ಪಿಲ್ಲ ಎಂಬ ಗಾದೆಯಂತೆ
ಚಟುರಂಗಳಿಲ್ಲದ ಪತ್ರಿಕೆಯಿಲ್ಲ ಅಲ್ಲದೆ
ವಿಷಯವೂ ಇಲ್ಲ ಎಂದು ಹೇಳಬಹುದು
ಮನುಷ್ಯನಲ್ಲಿ ಮನೆ ಮಾಡಿದರೆ ದುರ್ಗುಣ
ಅದು ಅಳಿಸಿಹಾಕುವುದು ಅದನೆಲ್ಲಾ ಸದ್ಗುಣ
ಆಗದ ಕಾಣುವುದು ಅವನ ಬಾಳತುಂಬಾ ಅವಗುಣ
ಲ.ವ್ಯಸ್ವಾಮಿ
೨೧–೭–೦೫
ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರರೆಂದು
ಸಮಾಜ ಸ್ಥಾನಕ್ಕೆಂದು
ನಿರ್ಮಿಸಿದ ಪಂಗಡಗಳು
ಬರು ಬರುತ್ತಾ ಹುಟ್ಟಿನಿಂದಲೆ,
ಪಟ್ಟಗಟ್ಟಿಸಿಕೊಂಡು, ಜನರಲ್ಲಿ

ಉಚ್ಚ-ನೀಚರೆಂಬ ಭಾವನೆಗೆ
ಬಲಿಯಾಗಿ, ಹುಟ್ಟಿನಲಿ ಉತ್ತಮರೆನಿಸಿ
ವೃತ್ತಿಯಲಿ, ಗುಣದಲ್ಲಿ ಶೂದ್ರರಾದರೂ
ಅವರ ವಿರಾಸ್ಥೆಯೇ ಮೇಲಾಗಿ
ಕೆಳವರ್ಗವೆನಿಸಿಕೊಂಡ ಪಂಗಡದಲಿ
ಜೆನಾಸಿ, ಗುಣದಲ್ಲಿ ಸ್ವಭಾವದಲಿ
ಮೇಲ್ವರ್ಗದವರ ಮೀರಿಸಿದರೂ
ಅವರಿಗಿರಲಿಲ್ಲ ಉತ್ತಮ ಸ್ಥಾನ-ಮಾನ
ಈ ಮೇಲ್ವರ್ಗದಿ
ಹುಟ್ಟಿದ ಧೂರ್ತರಿಗೆ, ತಮ್ಮ ಸೇವೆಗೆ
ಕೆಳವರ್ಗದಲ್ಲಿ ಹುಟ್ಟಿದರವ ಸೇವೆ ಪಡೆಯುತ್ತಾ
ಯಾವ ಕಟ್ಟು -ನಿಟ್ಟೂ ಇಲ್ಲದೆ
ಅಟ್ಟಹಾಸದಿ ಮೆರೆಯಲು ಸಾಧ್ಯವಾಗಿ
ಅವರನು ಮೆಟ್ಟಿನಿಂತರೆ ತಮಗೆ
ನೆಟ್ಟಗಾಗುವಾಗ ಅವರ ನೆಟ್ಟ
ಮೇಲೇಳದಂತೆ ಬಹುಕಾಲ
ಮೆಟ್ಟಿಲ ಕೆಳಗೇ ಇಟ್ಟರು
ಇದರ ಜೊತೆಗೆ ಹುಟ್ಟಿದ
ಕೌಟುಂಬಿಕ ವ್ಯವಸ್ಥೆಯಲಿ ಪುರುಷನ
ಮೇಲ್ಮೆ ಹೆಚ್ಚಿ, ಸ್ತ್ರೀಯಳು ಕಡಿಮೆ ಎನಿಸಿ
ಪುರುಷನ ತೊತ್ತಿನಂತೆ ದುಡಿಯಬೇಕಾಯ್ತು ಮಹಿಳೆ
ಕುಟುಂಬಿಕ ವ್ಯವಸ್ಥೆ ಮಾನವಗೆ
ಅನಿವಾರ್ಯವೆನಿಸಿ, ಜೀವನ ನಿರ್ವಹಣೆಗೆ
ಹೊರಗೆ ಹೋಗಿ ಪುರುಷ ದುಡಿದು ತರಬೇಕು
ಮಹಿಳೆ ಅಟ್ಟು ಬಿಡಿಸಬೇಕು ಎಂಬ
ವ್ಯವಸ್ಥೆಯಲಿ, ಮನೆಗೆಲಸ , ಮಕ್ಕಳ ಲಾಲನೆ ಪಾಲನೆ
ಮಹಿಳೆಯ ಪಾಲಿಗೆ ಬಂದು .
ಪುರುಷ ಆದರೆ ಬೇಕಾದುದನೆಲ್ಲ
ಬದಗಿಸುವ ಜವಾಬ್ದಾರಿ ಹೊತ್ತು
ಕುಟುಂಬ ನಿರ್ವಹಣೆಯು ಕೆಲಸ
ಇಬ್ಬರೂ ಹಂಚಿಕೊಂಡು ಸುಖಿ

ಕುಟುಂಬ ಜೀವನ ನಡೆಸಲು ಪ್ರಾರಂಭವಾಯ್ತದರೂ
ಬರು–ಬರುತ್ತಾ, ತಂತು ಹಾಕುವ ಗಂಡಿನ
ಪ್ರಾಬಲ್ಯ ಹೆಚ್ಚಿನದೆನಿಸಿ, ಅವನು ತಂದಾಗ
ಮನೆಯಲ್ಲಿ ಕೂತು ಉಣ್ಣುವ ಮಹಿಳೆ
ಮಾಡುವ ಮನೆಗೆಲಸಕ್ಕೆ ಬೆಲೆಇಲ್ಲದಾಗಿ
ಅವಳವನ ತೊತ್ತಾಗಿ ಬದಿಕಬೇಕಾಯ್ತು
ಅವನಿತ್ತರೆ ಆಕೆಗೆ–ಹೊಟ್ಟೆ–ಬಟ್ಟೆ
ಇಲ್ಲದಿರೆ ಉಪವಾಸ–ವನವಾಸ
ಎನ್ನುವ ಸ್ಥಿತಿ ಉಂಟಾಗಿ, ಪುರುಷ
ಮೀಸೆಯ ಮೇಲೆ ಕೈ ಆಡಿಸುತ್ತ
ಮಹಿಳೆಯನು ಕಾಲ ಕೆಳಗೆ ಹಾಕಿ ಕೊಂದು ತುಳಿಯುತ್ತ
ದರ್ಪದಿಂದ ಮೆರೆಯಲು ಹಾದಿಯಾಯ್ತಿ.
ಪುರುಷನ ದೌರ್ಜನ್ಯವನು ಶತ–ಶತಮಾವಗಳು
ಸಹಿಸಿ, ಇಪ್ಪತ್ತನೆಯ ಶತಮಾನದಿ, ಸ್ತ್ರೀ ವಾದಿಗಳು ಹುಟ್ಟಿ
ಪುರುಷ ದಬ್ಬಾಳಿದೆಯ ವಿರುದ್ಧ ಸಿಡಿದೆದ್ದಿಹರು.
ಮಾನವೀಯ ಪುರುಷರಿಗೆ ತಮ್ಮ ಜೀವನದ ಎಲ್ಲ
ಹಂತದಲ್ಲಿ ಒಂದಲ್ಲ ಒಂದು ರೀತಿಯಲಿ
ತಮ್ಮ ಯೆಳ್ಗೆಗೆ ಸಹಕರಿಸುವ ಸ್ತ್ರೀಯ
ಅಸಹಾಯಕತೆ ನಿಂಗಲಾರದ ತುತ್ತಾಯಿತು
ಆಗವರು ಸ್ತ್ರೀವಾದಿಗಳ ಜೊತೆಗೂಡಿ
ದುಷ್ಟ ಪುರುಷರ ಬಗಲ್ಲ ಬಡೆಯುವ
ಹಿಗ್ಗಾ–ಮುಗ್ಗು ಎಳೆಯುವಂತಹ ಕಾನೂನನ್ನೇ ರಚಿಸಿದರು.
ಓ ಮಾನವಾ, ನೀನೇಕಾಇರುವೆ ದಾನವಾ?
ಸೃಷ್ಟಿಯಲಿ ನೀನೇ ಆಗಿರುವಿ ಜ್ಯೇಷ್ಠ
ಕ್ರಿಮಿಕೀಟ, ಪಶ–ಪಕ್ಷಿಗಳಿಗಿಂತ ನೀ ಶ್ರೇಷ್ಠ.
ಕೆಡುಕು–ಒಳಿತುಗಳ ನೀಬಲ್ಲೆ
ಯೋಚಿಸಬಲ್ಲೆ ಮಾತಾಡಬಲ್ಲೆ
ಆಕಾಶಕೆ ಹಾರಬಲ್ಲೆ, ಸಮುದ್ರದಾತರೆ ಇಳಿಯಬಲ್ಲೆ
ಒಳಿತು ಕೆಡುಕಿನ ಪರಿಣಾಮ ನೀಬಲ್ಲೆ
ಒಳಿತ ಮಾಡುತ್ತ ದೇವ ಮಾನವ ನಾಗಬಲ್ಲೆ
ಕೆಡುಗನೇ ಎಸಗುತ್ತ ದುಷ್ಟಮಾನವನಾಗಬಲ್ಲೆ.

ದೇವಾನಾಗಬಲ್ಲೆಯಾದರೂ ಕಾನವನಾಗುತ್ತಿ
ನಿನ್ನ ದುಷ್ಟತನಕೆ, ಸ್ವಾರ್ಥಕ್ಕೆಮ ದ್ವೇಷಕದಕೆ
ರೋಷಕ್ಕೆ ಮಿತಿ ಹಾಕುತಿಲ್ಲವೇಕೆ?
ಎಲ್ಲಿ ನೋಡಿದಲ್ಲಿ ನಿನ್ನ ಕ್ರೌರ್ಯ
ಎಲ್ಲೊಂದರಲ್ಲಿ ದುಷ್ಟತನಗೈಯ್ಯುತಿಹುದು ನಿನ್ನ ಕ್ರೌರ್ಯ
ನಿನ್ನ ಬುದ್ಧಿವಂತಿಕೆಯ ಹಾದಿಯೂ
ವಿನಾಶದೆಡೆಗೆ ಸಾಗುತಿಹುದಲ್ಲ
ಬೇಡವಾಗಿಹುದೇ ಒಳಿತು ನಿನಗೆ ಬೇಕಾಗದಿರಲು ತೋರು
ಹೆರರು ನಿನಗೆ, ನಿನ್ನಲ್ಲಿಲ್ಲವೇಕೆ?
ಒಳಿತಾದ ದಾರಿಯಲಿ ನಡೆದರು
ನಿನಗಾಗುವ ಕೆಡುಕೇನು ಹೇಳು
ಮಾನವಾ, ಆಳವಾಗಿ ಆಲೋಚಿಸಿ ನೋಡು
ಒಳಿತುಮಾಡಿ , ಒಳಿತಾಗಿ ಬಾಳಿ
ಒಳಿತ ಕೊಟ್ಟು, ಒಳಿತ ಪಡೆವ
ಜೀವನದಲ್ಲಿ ಎಲ್ಲೆಲ್ಲೂ ಒಳಿತು
ನಿನಗೂ ಕೆಡುಕಿಲ್ಲ
ಇತರರಿಗೂ ನೋವಿಲ್ಲ
ನಾವು ನೀವು ಎಲ್ಲರೂ ಕೂಡಿ ಒಂದಾಗಿ
ಒಳಿತನೇ ಬಾಳಿದರೆ
ಭುವಿಯು ಸ್ವರ್ಗವಾಗುವದು
ಆ ಸುಖ ಅದೇಕೆ ನಿನಗೆ ಬೇಡವಾಗಿದೆ
ಹೇಳು ಮಾನವಾ ಹೇಳು.
ಮುದುಕ ಅಡಿಗ ಬಸಪ್ಪ ತಿಂಡೀ ಪ್ಲೇತ
ಇದೊಂದು ಪಾಪದ ಪಿಂಡ
ಮಾನವಿಲ್ಲದ ಭಂಡ
ತಿಂದು, ತಿಂದು ಆಗಿರುವುದು ಬೋಂಡಾ'
ಇದರ ಮುಂದೆ ಆದರ್ಶವೆಲ್ಲ
ರುಂಡವಿಲ್ಲದ ಮುಂಡ.
ಲಲಿತಾಂಬಾ
ಸದ್ದು ಮಾಡಬೇಡಿ ನಿದ್ದೆ ಬಂದಿದೆ ನಿದ್ದೆ
ನಿದ್ದೆ ಬಂದಾಗ ಹೆಚ್ಚು ಕಡಿಮೆಯಾದರೆ

ಆಗುವ ಪರಿಯ ಅನುಭವಿಕರನ್ನೇ ಕೇಳಿ
ಬರದ ನಿದ್ದೆ, ನಿದ್ದೆ ಮಾಡಬೇಕೆಸನ್ನಿಸಿದರೂ
ಮುಚ್ಚಿ ಬರುತ್ತಿದ್ದರೂ ಕಣ್ಣು, ಬಾರದು ನಿದ್ದೆ
ಆಗಾಗುವ ಹಿಂಸೆ ಅನುಭವಿಸಿದವನೇ ಬಲ್ಲ
ಅದಕ್ಕಾಗಿ, ನಿದ್ದೆ ಬಂದಾಗ ಅಡ್ಡಿಮಾಡಬೇಡಿ
ಕೆಲವರಂತೂ ಪುಣ್ಯವಂತರೋ ಪುಣ್ಯವಂತರು;
ದಿಂಬಿನ ಮೇಲೆ ತಲೆ ಇಟ್ಟದ್ದೇ ಸಾಕು
ಸೊಂಪಾಗಿ ಮಾಡುವರು ನಿದ್ದೆ
ಕೆಲವರಿಗಂತೂ ದಿಂಬೂ ಬೇಡ
ಕುಳಿತು ಕುಳಿತೇ ಹೊಡೆಯುವರು ನಿದ್ದೆ
ಪ್ರಯಾಣದಲ್ಲೂ ನಿದ್ದೆ; ಮದುವೆಯ
ಮನೆಯಲ್ಲೂ ನಿದ್ದೆ; ನಿದ್ದೆ ಬರದವರಿಗ
ಇವರನ್ನೂ ನೋಡಿದರೆ, ಹೊಟ್ಟೆಯಲ್ಲಿ ಉರಿಯೋ ಉರಿ.
ಎರಡು ಮೂರು ದಿನ ನಿದ್ದೆ ಮಾಡದವರುಂಟು
ನಿದ್ದೆ ಗುಳಿಗೆಗಳ ನುಂಗಿದರೂ
ನಿದ್ದೆ ಬಾರದವರುಂಟು; ಎಷ್ಟೇ ಒದ್ದಾಡಿದರೂ
ಅತ್ತರೂ ಕರೆದರೂ ಅವರ ಸಮೀಪ
ನಿದ್ದೆ ಸುಳಿಯದವರುಂಟು
ಅದಕ್ಕಾಗಿ, ಅವರಿಗಾಗಿ, ಗದ್ದಲಮಾಡಬೇಡಿ
ನಿದ್ದೆ ಅಂಥವರ ಹತ್ತಿರ ಹೋದಾಗ
ನಿದ್ದೆಯಲ್ಲೂ ಎರಡು ವಿಧ
ಕೆಟ್ಟನಿದ್ದೆ, ಒಳ್ಳೆಯ ನಿದ್ದೆ
ಕೆಲವರಿಗಂತೂ ಕುಂಭಕರ್ಣನ ನಿದ್ದೆ
ಅವರಿಗೆ ಎಲ್ಲೆಂದರಲ್ಲೂ ನಿದ್ದೆ
ಯಾವಾಗೆಂದರೆ ಆಗ ನಿದ್ದೆ
ಮಾಡುವ ಕೆಲಸವಿದ್ದರೂ ನಿದ್ದೆ
ಮದ್ದೆ ಇಲ್ಲದಿದ್ದರೂ ಅವರಿಗ ಬೇಕು ನಿದ್ದೆ
ಕೂತಲ್ಲಿ ನಿದ್ದೆ ನಿಂತಲ್ಲಿ ನಿದ್ದೆ
ಎಲ್ಲೊಂದರಲ್ಲಿ ನಿದ್ದೆ
ಆಡಿಕೊಂಡು ನಕ್ಕರೂ ನಿದ್ದೆ
ಮಾಡಿಯೇ ತೀರಬೇಕೆಂಬ ಕೆಲಸವಿದ್ದರೂ ನಿದ್ದೆ

ಮೊದಲು ನಿದ್ದೆ, ಆಮೇಲೆ ಉಳಿದದ್ದು
ಎಂಬುದವರ ನೀತಿ, ಕೆಲಸ ಕೆಟ್ಟರೆ
ಏನಾದೀತೆಂಬ ಅವರಿಗಿಲ್ಲ ಹೆಚ್ಚಿನ ಭೀತಿ
ಇದರ ಫಲಿತಾಂಶ, ಎಡವುತ್ತ
ಕುಂಟುತ್ತ ಮುಂದೆ, ಮುಂದೆ ನಡೆದಾಗ
ಕಾಲವು ಒಂದಕ್ಕೆ ಒಂಭತ್ತು ಕಾಲಬೇಕಾಗಿ
ಬಿಸಿಯಾದದ್ದು ಹೋಗುವುದು ಹಳಸಿ
ನಿದ್ದೆ ಬಾರದವರ ಪಾಡಂತೂ ಬೇಡವೇ ಬೇಡ
ದಕ್ಷರಿದ್ದರೂ, ಕೆಲಸ ಮುಗಿಸುವ ಮನಸ್ಸಿದ್ದರೂ
ನಿದ್ದೆಯೇ ಇಲ್ಲದ ಪರಿಣಾಮವಾಗಿ
ಇದ್ದರೂ ಇಲ್ಲದಾಗಿ
ಅವರ ಗೋಳ ನೋಡಲಾಸಲ್ಲ
ಕುಂಭಕರ್ಣನ ನಿದ್ದೆಯವರು
ನಿದ್ದೆಯಬಾರದವರ ಸಾಧನೆ ಒಂದೇ ಅಲ್ಲ
ತೃಪ್ತಿಯಾಗುವಂತೆ ನಿದ್ದೆ ಮಾಡುವವರ್ಗೆ
ಇರುವುದು ಮನಕ್ಕೆ ಶಾಂತಿ ಸಮಾಧಾನ
ಆಕಾಶ ಕಳಚಿಬಿದ್ದರೂ ಅವರಿಗಿಲ್ಲ ಚಿಂತೆ
ಅವರಿಗೆ ಮಾತ್ರ ನಿಶ್ಚಿಂತೆ
ಮತ್ತೊಂದು ಗುಂಪುಂಟು,
ಕಳೆದುಕೊಳ್ಳದವರು ಮನಃಶಾಂತೀ
ಇತಿಮಿತಿಯುಂಟುವರೆ ನಿದ್ದೆಗೆ
ಸಮಯಕ್ಕೆ ಸರಿಯಾಗಿ ನಿದ್ದೆ.

ಜೊಳ್ಳ ಹಾರಾಡಿದರೆ
ಗಟ್ಟಿಕಾಳು ತಳಕಚ್ಚುವುವು
ಜೊಳ್ಳನ್ನು ಗುಡಿಸಿ ಆಚೆಗೆಸೆದು
ನೀರಬಸಿದು ಗಟ್ಟಿಕಾಳು ಹೊರತರಬೇಕು

ಸಹವಾಸ ಸನ್ಯಾಸಿ ಕೆಡಿಸುತ್ತೆ ಅಂತಾರೆ,
ಹಂಗಾದ್ರೆ, ದುಷ್ಟ ಹೆಂಡತಿ ಸಿಕ್ಕರೆ
ಗಂಡ ಏನ್ಮಾಡ್ಬೇಕು?
ದುಷ್ಟ ಗಂಡ ಜೊತೆಗಾರನಾದಾಗ
ಹೆಂಡತಿ ಗತಿಏನಾಗ್ಬೇಕು?

ಬರುವಾಗ ಬರೀಕೈಲಿ ಬರುವೆವಲ್ಲಾ
ಹೋಗುವಾಗ ಏನೂ ಒಯ್ಯಲು ಆಗುವುದೇ ಇಲ್ಲವಲ್ಲಾ
ಇವೆರಡರ ಮಧ್ಯೆ ಇರುವಾಗ, ಕೈತುಂಬಾ ಇರಬೇಕೆಂದು
ಹೆಣಗಾಡುವ ಮೂರ್ಖತನ ಬಿಡಲಾರೆವಲ್ಲಾ

ಕಾಲಿಟ್ಟಲ್ಲಿ ಕಲ್ಲು ಮುಳ್ಳನ್ನು
ಆಸರೆ ಇಲ್ಲವೆ ಬೇಸರವಾಗುವುದು
ಬೆಲ್ಲ ಬಯಸಿದರೆ ಬೇವು ದೊರುಯುತಿಹುದಲ್ಲ
ಹಣತೆ 'ಹಚ್ಚಿ ಹುಡುಕುತಿಹೆನು
ಬೇಕಾಗುವುದೊಂದು ದೊರೆಯುವುದಿನ್ನೊಂದು
ಕಂಡದ್ದು – ಉಂಡದ್ದು –ನೀಡಿದ್ದು

ಹಿಂದಿರುಗಿ ನೋಡು ಯಗ ಯುಗಾಂತರಗಳಿಂದ
ವಿವೇಕ ಪ್ರಜ್ಞೆ ಸಕಾದಲಲ್ಲಿ ಜಾಗ್ರತಗೊಂಡು ಜನಮನವನು
ಪರಿವರ್ತಿಸಿದೆವುದ ಕಾಣು
ಎಚ್ಚತ್ತುಕೊಂಡು ಕಾರ್ಯ ತತ್ಪರನಾಗು
ಮಾವರ ಜನಾಂಗದಲ್ಲಿ ಆಧ್ಯಾತ್ಮದ ಭಾವನೆ
ಮೂಡಿಸುವ ಹರಿಕಾರನಾಗು
'ಆಧ್ಯತ್ಮಿಕ' ವೆಂದರೆ, ಕೆಲವರು ತಿಳಿದಂತೆ
ಅಸಹಾಯಕತೆಯಿಂದ ಉಂಟಾಗುವ
ಪಲಾಯನ ಮನೋಭಾವವಲ್ಲ
ಲೋಪ ಸಮತೋಲನದಿಂದ ಸಾಗುವುದು
ಆಧ್ಯಾತ್ಮಿಕ ಬಲದಿಂದಲೇ ಎಂಬುದನು ನೆನಪಿಸಿಕೊ
ನಿಜವಾದ ಆಧ್ಯಾತ್ಮ ಆತ್ಮಬಲಕ್ಕೆ ದಾರಿ
ಆತ್ಮ ಬಲವುಳ್ಳವಗೆ ಆತ್ಮವಿಶ್ವಾಸ ಸ್ನೇಹಿ
ಆತ್ಮ ಬಲವುಳ್ಳವ ಕ್ರೌರ್ಯವನ್ನು
ಎದುರಿಸುವನು ಯಶಸ್ವಿಯಾಗಿ
ಕಾರುಣ್ಯದ ಸ್ಥಿತಿಯಲ್ಲೂ ಅವು ಕಾಲುಗಳು ನಿಲ್ಲುವುದು ಸ್ಥಿರವಾಗಿ
ಅವನು –ಜಾತಿ –ಮತಗಳಲ್ಲಿ
ಪಂಥ, ಪಕ್ಷ ಪ್ರದೇಶಗಳಲ್ಲೂ
ಪಕ್ಷಪಾತವಿಲ್ಲದೆ,
ದ್ವೇಷಬಿಟ್ಟ – ಸಹನೆಯ ಹುಟ

ಇತಿ–ಮಿತಿ ಗಳನರಿತು ದಾಟುವನು ಸಾಗುವ ಹಿಡಿದು ಸರಾಗವಾಗಿ
ಅಕಕಾಗಿ ಈಗ ಆಧ್ಯತ್ಮ ಸಾಧನೆಗೆ ಬೇಕಾದ
ಪರಿಸರ ನಿರ್ಮಾಣವಾಗಬೇಕು
ಅಂತಹ ಸಮಷ್ಠಿಕದಷೇಮದೃಷ್ಟಿಯ
ಹಿತಚಿಂತಕರು ಮುಂದೆ ಬರಬೇಕು.
ಉಳಿದೆಲ್ಲರೂ ಅವರ ಭುಜಕ್ಕೆ ಭಜಕೊಟ್ಟು
ನಿಲ್ಲುವಂತಾಗಬೇಕು; ಲೋಕಪ್ರಜ್ಞೆ ಇರುವ ಎಲ್ಲರೂ ಒಂದಾಗಬೇಕು.
ಸಾಹಿತಿಗಳು, ವಿದ್ವಾಂಸರು, ಪೀಠಾಧಿಪತಿಗಳು
ಪೂಜಾರು –ಪುರೋಹಿತರು ರಾಜಕಾರಣಿಗಳು
ತಮ್ಮ ಹಳೆ ಹಾಡುಗಳ ಮರೆತು,
ಹೊಸ ಹಾಡ ಕಟ್ಟಬೇಕು
ಸಮುದಾಯದಿ ಸಾಮರ ಸ್ಯದೆಂಬ
ಮಾನವೀಯತೆಯ ಹಾಡಿಗೆ ಹೊಸ ಸಂಯೋಜಿಸಬೇಕು

ನವ ನೂತನ –ರಾಗ

೧ ಒಂದು ಮಹತ್ವದ ಸ್ಥಾನಗಳು ಸಿಕ್ಕದವರಿಗೆ ಸೀರುಂಡೆ
ದಕ್ಕುವಂತೆ ಮಾಡಿದವರಿಗೆ ನಂತರ ಲಾಡು ಉಂಡೆ
ದಕ್ಕಲು ಅಡ್ಡಬಂದವರ ಬೆನ್ನಮೇಲೆ ಬಾಸುಂಡೆ

೨ ಹಿಂದಿನ ಪರಿಸರದಲಿ ಸೊಸೆಯಾಗಿ ಬೆಂದವಳು
ಇಂದಿನ ಪರಿಸ್ಥಿತಿಯಲಿ ಅತ್ತೆಯಾಗಿ ನೋವಿಗೀಡಾಗುವಳು
ಹಿಂದಿನ ಸೊಸೆ, ಇಂದಿನ ಅತ್ತೆ ಅಂದು ಬೆಂದಳು, ಇಂದು ನೋಯುತ್ತಿರುವಳು,

೩ ಜಾತ್ಯಾತೀತ ರಾಜ್ಯದಲಿ ಜಾತಿಗಳದೇ ಮೇಲುಗೈ
ತಮ್ಮ ತಮ್ಮ ಜಾತಿಯವರು ಮಾಡಿದುದಕ್ಕೆಲ್ಲಾ ಸೈ ಸೈ
ಗೊಂದಲದ ರಾಜಕೀಯದಲಿ ಆಗುತಿಹನು ಭಾರತೀಯ ಬರಿಗೈ

೪ ನೋಟುಕೊಟ್ಟವರಿಗೆ ಓಟು,; ಲಂಚಕೊಟ್ಟವರಿಗೆ ಸೀಟು
ಮೇಲೆ ಹತ್ತಿದಮೇಲೆ ಏಣಿ ನೂಕಿದವರು ಇಂದು ಬಲುಗ್ರೇಟು
ಮೌಲ್ಯ, ನೀತಿ, ತಪ್ಪು ರೈಟು ಎಂದು ಕೂತವನಿಗೆ ಇಂದು ಮುಚ್ಚುವುದು ಅದೃಷ್ಟದ ಗೇಟು.

೫ ಒಬ್ಬರಿಗೊಬ್ಬರು ಬೆಂಬಲನೀಡುವ ಕಾಲವೆಲ್ಲೋ ಹೋಯ್ತು
'ಯಾರಿಗೆ ಯಾರಿಲ್ಲ ಪುರಂಧರವಿಠಲ' ಎನ್ನುವಂತಾಯ್ತು
ಇಬ್ಬರ ನಡುವೆ ಮೂಗುತೂರಿದೆಯಾದರೆ ನಿನ್ನಗತಿ ಮುಗಿದೇ ಹೋಯ್ತು.

೬ ಈಗ ಯಾರಿತು ಬೇಕಿಲ್ಲ ಮೈಮುರುದ ದುಡಿತ
ಆದರೆಲ್ಲರಿಗಿದೆ ಮಜಾಮಾಡಲು ತುಡಿತ
ಅದಕ್ಕಾಗಿ ನೀತಿಯ ಬದುಕಿನಲ್ಲಿ ಮಾಡುವರು ಕಡಿತ.

೭ ದಿನ ಬೆಳಗಾದರೆ ನಡೆಯುತ್ತವೆ ಗುಡಿಗೋಪುರಗಳ ಉದ್ಘಾಟನೆ
ಆದರಿಲ್ಲೂ ಕಾಣದು ನಿಜ ಭಕ್ತಿಯ ಸೂಚನೆ
ಇವುಗಳ ಹಿಂದೆಲ್ಲಾ ಇರುವುದು ಸ್ವಾರ್ಥ ಸಾಧಿಸಿಕೊಳ್ಳುವ ಆಲೋಚನೆ.

# ಗಂಗಾಂಬಿಕೆ

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

ಹನ್ನೆರಡನೆಯ ಶತಮಾನದಲ್ಲಿ ಶರಣರು ಕ್ರಾಂತಿಕಾರಕವಾದ ಆಂದೋಲನವನ್ನು ಧಾರ್ಮಿಕ, ಸಾಮಾಜಿಕ ಕ್ಷೇತ್ರದಲ್ಲಿ ಮಾಡಿ ಹೋದರು. ಶರಣರ ಆಂದಿನ ವಿಚಾರಗಳು ಇಂದಿಗೂ ಉಪಯುಕ್ತವಾಗಿವೆ. ಆಗಿನ ಕಾಲದ ಹೋರಾಟ, ಸಿದ್ಧಿ, ಸಾಧನೆ ಮೊದಲಾದ ವಿಷಯಗಳನ್ನು 'ಬಸವ ಕ್ರಾಂತಿ'ಯಾದ ಎಂಬತ್ತ ವರ್ಷಗಳ ನಂತರದ ಸಾಹಿತ್ಯದಲ್ಲಿ ಹಿಡಿದಿಟ್ಟಿದ್ದಾರೆ. ಮೊದಲು ಆ ಬಗ್ಗೆ ಬರೆದವನು ಹರಿಹರ ಕವಿ. ಅಂದಿನಿಂದ ಇಂದಿನವರೆಗೂ ಆ ಬಗೆಗೆ ಸಾಹಿತ್ಯ ರಚನೆಯಾಗುತ್ತಲೇ ನಡೆದಿದೆ. ಮೊದಲು ಹರಿಹರ, ನಂತರ ಪಾಲ್ಕುರಿಕೆ ಸೋಮನಾಥ, ಮೂರನೆಯವನಾಗಿ ಬಸವ ಪುರಾಣದ ಭೀಮ ಕವಿ, ತದನಂತರ ಲಕ್ಕಣ ದಂಡೇಶ, ಶರಣರ ಹಾಗೂ ಶರಣೆಯರ ಬಗೆಗೆ ಬರೆದ ಪ್ರಾರಂಭಿಕ ಕವಿಗಳು, ಅವರು ಕ್ರಿಶ. ೧೨೦೦ರಿಂದ ೧೪೫೦ರ ಒಳಗೆ ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಸಿಂಗಿರಾಜನು ಹದಿನೇಳನೆಯ ಶತಮಾನದಲ್ಲಿ ಸಿಂಗಿರಾಜ ಪುರಾಣದಲ್ಲಿ ಇವರೆಲ್ಲಗಿಂತ ಹೆಚ್ಚಿನ ವಿವರಗಳನ್ನು ಕೊಟ್ಟಿದ್ದಾನೆ. ಈಚಿನ ಕನ್ನಡ, ತೆಲುಗು, ತಮಿಳು, ಸಂಸ್ಕೃತ ಬಸವ ಪುರಾಣಕಾರರು ಹಿಂದಿನವರು ಹೇಳಿದುದನ್ನೇ ಬಿತ್ತರಿಸಿದ್ದಾರೆ ಅಥವಾ ಸಂಗ್ರಹಿಸಿದ್ದಾರೆ. ಇಲ್ಲವೆ ಅವರುಗಳು ಹೇಳಿದುದನ್ನೇ ತಮ್ಮದೇಆದ ರೀತಿಯಲ್ಲಿ ನಿರೂಪಿಸಿದ್ದಾರೆ. ಈ ಎಲ್ಲ ಸಾಹಿತ್ಯದಿಂದ ನಮಗೆ ಆಗಿನ ಕಾಲದಲ್ಲಿ ನಡೆದಿರಬಹುದಾದ ಘಟನೆಗಳು ಶರಣ ಶರಣೆಯ ಜೀವನ ಪರಿಚಯ ಮಾಡಿಕೊಳ್ಳಬಹುದಾಗಿದೆ. 'ರವಿ ಕಾಣದುದ ಕವಿ ಕಂಡ' ಎಂಬ ಉಕ್ತಿಯಂತೆ ಸಾಹಿತಿ, ಸಾಹಿತ್ಯ ರಚಿಸುವಾಗ ತನ್ನ ಅನಿಸಿಕೆ, ಅಭಿಪ್ರಾಯಗಳನ್ನು, ಸಮಾಜದ ಅಂದಿನ ಜನರು ಮೆಚ್ಚಬಹುದಾದ ಸಂಗತಿಗಳನ್ನು ಘಟನೆಗೆ ಹೊಂದಿಕೆಯಾಗುವಂತೆ ಸೇರಿಸಿ ಬಿಡುತ್ತಾನೆ, ಹಾಗಾಗಿ ಮುಖ್ಯವಾಗಿ ಪುರಾಣಗಳಲ್ಲಿ, ಧಾರ್ಮಿಕ ವ್ಯಕ್ತಿಗಳ ಜೀವನದಲ್ಲಿ ಬಹಳಷ್ಟು ನಿಜವಲ್ಲದ ಸಂಗತಿಗಳು, ಜನರ ಆಸಕ್ತಿಯನ್ನು, ಕುತೂಹಲವನ್ನು ಕೆರಳಿಸುವ ಪವಾಡ ಸದೃಶ ಘಟನೆಗಳೂ ಅಲ್ಲಲ್ಲಿ ನಿಸುಳಿ ಬಿಡುತ್ತವೆ. ಇಲ್ಲಿಯೂ ಸಹ ಹಾಗಾಗಿರುವುದನ್ನು ಗಮನಿಸಬಹುದು. ಬಸವಣ್ಣನ ದೊಡ್ಡ ವ್ಯಕ್ತಿತ್ವವನ್ನು ಜನರಿಗೆ ಬಿಂಬಿಸುವದಕ್ಕಾಗಿ ಸಾಹಿತ್ಯಕಾರರು,

ಬಸವಣ್ಣನ ಪತ್ನಿಯರ ಓಲಡಯನ್ನಿತ್ತ ಪಾವಾಡ, ಸೀರೆಯನ್ನುತ್ತ ಪವಾಡ, ಕಡೆಗೆ ಸುಖೀ ಜಂಗಮನಿಗೆ ಪತ್ನಿಯನ್ನೇ ಇತ್ತ ಪವಾಡಗಳು ಸೃಷ್ಟಿಯಾಗಿವೆ. ಜಂಗಮನಿಗೆ ಪತ್ನಿಯನ್ನಿತ್ತ ಪವಾಡದ ಕಥಯನ್ನು ಪುರಾಣಕಾರರು

"ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳೆಯ ಚೆಲುವೆ
ಆಕೆಯನು ಸಂಗಮದೇವಾ, ನೀ ಜಂಗಮ ರೂಪಾಗಿ ಬಂದು
ಎನ್ನ ಮುಂದೆ ಸಂಗವ ಮಾಡುತ್ತಿರಲು
ಎನ್ನೊಡನಿರ್ದ ಸತಿ ಎಂದು ಮಾಯಕ್ಕೆ ಮರುಗಿದೆನಾದೊಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲ ಸಂಗಮದೇವಾ"

ಎಂಬ ಬಸವಣ್ಣನ ವಚನದಿಂದ, ಅವನ ಭಕ್ತಿಯ ಪರಾಕಾಷ್ಠತೆ ಎಷ್ಟಿತ್ತು ಎಂಬುದನ್ನು ಎತ್ತಿ ಹಿಡಿಯಲು ಈ 'ಸುಖೀ ಜಂಗಮ' ಪ್ರಸಂಗನ್ನು ಸೃಷ್ಟಿಸಿದಂತೆ ಕಾಣುತ್ತದೆ. ಬಸವಣ್ಣನ ಉದ್ದೇಶ ಸಂಗಮದೇವರಿಗಾಗಿ ನಾನಾವ ತ್ಯಾಗ ಬೇಕಾದರೂ ಮಾಡಬಲ್ಲೆ, ಸಿರಿಯಾಳನನ್ನು ಪರೀಕ್ಷಿಸಲು ಅವನ ಮಗನನ್ನು ಕೊಂದು ಅದರಿಂದ ಅಡುಗೆ ಮಾಡಿ ಬಡಿಸೆಂದು ಕೇಳಿದಂತೆ ಕೇಳಿ, ನನ್ನ ಪ್ರೀತಿಯ ಮಗನಾದ ಚಿಕ್ಕ ಸಂಗಯ್ಯನನ್ನು ಹೆಡಮುರಿಕಟ್ಟಿ ತಂದು, ಕೊಂದು ಅಡಿಗೆ ಮಾಡಿದರೂ, ನನ್ನ ಹೊಟ್ಟೆಯಲ್ಲಿ ಹುಟ್ಟಿದವನೆಂಬ ಮಮತೆಯ ಮೋಹವನ್ನು ನಿಮ್ಮಾಣೆಗೂ ತೋರುವುದಿಲ್ಲ (ವಚನದ ಆಧಾರದಿಂದ) ಎಂದು ಹೇಳಿದ್ದಾನೆ. ಸಾಮಾನ್ಯವಾಗಿ ಹೆಂಡತಿ –ಮಕ್ಕಳಿಗಿಂತ ಸಂಗಮನಾಥ ಹೆಚ್ಚು ಎಂಬ ತನ್ನ ನಿಷ್ಠೆಯ ಬಗ್ಗೆ ಈ ವಚನಗಳಲ್ಲಿ ತಿಳಿಸಿದ್ದಾನೆ. ಇವು ಸಾಹಿತ್ಯದಲ್ಲಿ ನಾನಾ ರೀತಿಯ ಕಥೆಗಳಿಗೆ, ಪವಾಡಗಳಿಗೆ ಆಹಾರವಾಗಿರುವದನ್ನು ನಾವು ಅವುಗಳನ್ನು ಸಂಶೋಧಕ ದೃಷ್ಟಿ ಇಟ್ಟು ಓದಿದರೆ ಅರ್ಥವಾಗುತ್ತದೆ.

**ಶರಣ ಸಾಹಿತ್ಯದ ವಿಶಿಷ್ಟಾಂಶಗಳು**

ಶರಣ ಸಾಹಿತ್ಯ ಒಂದು ಅಪೂರ್ವ ಪ್ರಕಾರ, ಮಹಿಳೆಯರು ಅಷ್ಟೊಂದು ಸಂಖ್ಯೆಯಲ್ಲಿ ಹನ್ನೆರಡನೆಯ ಶತಮಾದಷ್ಟು ಹಿಂದೆ ಸಾಹಿತ್ಯ ರಚನೆ ಮಾಡಿದುದೂ ಒಂದು ಅಪೂರ್ವ ಸಂಗತಿಯೇ, ಮಹಿಳೆ ಮನೆಯಿಂದ ಹೊರಗೆ ಬರುವುದು, ತಮ್ಮ ಸ್ವಂತ ಅಭಿಪ್ರಾಯಗಳನ್ನು ಸಾರ್ವಜನಿಕವಾಗಿ ಅಭಿವ್ಯಕ್ತಿಸುವುದು, ಪುರುಷರಿಗೆ ಸಮಾನವಾಗಿ ಕುಳಿತು ವಿಷಯಗಳನ್ನು ಚರ್ಚಿಸುವುದು ಇಂದು ಸಾಮಾನ್ಯ ಸಂಗತಿಯಾದರೂ ಅಂದು ಜನ ಹುಬ್ಬೇರಿಸುವಂತಹ ಮೂಗಿನ ಮೇಲೆ ಬೆರಳಿಡುವಂತಹ, ಟೀಕೆಗೆ ಗುರಿಯಾಗುವಂತಹ ಸಂಗತಿಗಳು, ಆದರೂ (ಹನ್ನೆರಡನೆಯ ಶತಮಾನದಲ್ಲಿ ರಾಣಿಯಾಗಿದ್ದ ಮೋಳಿಗೆ ಮಹಾದೇವಿಯಿಂದ

ಹಿಡಿದು ಸೂಳೆ ಸಂಕವ್ವನಂತಹ ಸಾಮಾನ್ಯ ಮಹಿಳೆಯೂ ವಚನ ರಚಿಸಿ, ಆ ಮೂಲಕ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದುದು ಆಶ್ಚರ್ಯವಾದರೂ ಸತ್ಯ, ಮಹಿಳೆಯರು ಇದಕ್ಕೂ ಮೊದಲು ಜೀವನದಲ್ಲಿಯ ತಮ್ಮ ಸುಖ-ದುಃಖಗಳನ್ನು ,ನೋವು ನಲಿವುಗಳನ್ನು ತಾವಾಡುವ ಭಾಷೆಯಲ್ಲಿ ದಿನನಿತ್ಯದಲ್ಲಿ ಅನುಭವಕ್ಕೆ ಬರುವ ಉಪಮೆಗಳ ಮೂಲಕ ಹಾಡು, ಕಥೆ, ಒಗಟು, ಗಾದೆಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.) ಆದರೆ ಅವುಗಳನ್ನು ಯಾರು ಯಾವಾಗ ರಚಿಸಿದರೆಂದು ಯಾರಿಗೂ ಗೊತ್ತಿಲ್ಲ. ಜಗತ್ತಿನಾದ್ಯಂತ ಶತಮಾನಗಳಿಂದ ಒಬ್ಬರಿಂದ ಒಬ್ಬರಿಗೆ, ಬಾಯಿಂದ -ಬಾಯಿಗೆ ಹೋಗಿ ಇಂದಿನ ತನಕ ಉಳಿದುಬಂದಿದೆ. ಈಗ ಆ ಜನಪದ ಸಾಹಿತ್ಯವನ್ನು ಪುಸ್ತಕಗಳಲ್ಲಿ ಹಿಡಿದಿಡುವ ಪ್ರಯತ್ನ ನಡೆದಿದೆ. ಅವುಗಳಲ್ಲಿಯ ವಿಷಯಗಳನ್ನು ನೋಡಿದರೆ ಈ ಜನಪದ ಸಾಹಿತ್ಯವು ಮಹಿಳೆಯರಿಂದಲೂ ಹೊರಬಂದಿದೆ ಎಂಬುದು ವ್ಯಕ್ತವಾಗುತ್ತದೆ. ಆದರೆ ವಚನಗಳನ್ನು ಒಂದೇ ಕಾಲದಲ್ಲಿ, ಅದೂ ಉತ್ತರ ಕರ್ನಾಟಕದಲ್ಲಿ, ಕನ್ನಡ ಭಾಷೆಯಲ್ಲಿ ಸರಳವಾದ ಉಪಮೆಗಳನ್ನೊಳಗೊಂಡಿವೆ. ಕೆಲವು ವಚನಕಾರರು ಅಲ್ಲಲ್ಲಿ ಸಂಸ್ಕೃತ ಭಾಷೆಯ ಉಪಯೋಗವನ್ನು ಮಾಡಿದ್ದಾರೆ. ಕೆಲವು ವಚನಗಳು ಅರ್ಥೈಸಲು ಕ್ಲಿಷ್ಟವಾಗಿಯೂ ಇವೆ. ಇವುಗಳಲ್ಲಿ ಸ್ವಾನುಭವ, ಆಧ್ಯಾತ್ಮಬೋಧನೆ, ನೀತಿ, ಮೌಲ್ಯ ಮುಂತಾದ ಅಂಶಗಳು ಒಡಬೆರೆತಿವೆ. ಅತ್ಯಂತ ಹೆಚ್ಚಿನ ಎಂದರೆ ಸುಮಾರು ಮೂರೂವರೆನೂರು ವಚನಗಳನ್ನು ಬರೆದ ಅಕ್ಕಮಹಾದೇವಿಯಿಂದ ಹಿಡಿದು ಒಂದೊಂದೇ ವಚನವನ್ನು ಬರೆದ ಕಾಳವ್ವೆ, ರೇವಮ್ಮ, ರೇಚವ್ವೆ, ಸಂಕವ್ವೆ ಮುಂತಾದವರು ಕೂಡಿ ಆಗ ಮೂವತ್ತುಮೂರು ವಚನಕಾರ್ತಿಯರಿದ್ದರೆಂದು ಗುರುತಿಸಲಾಗಿದೆ. ಇವರಲ್ಲಿ ಬಹು ಮಂದಿ ಸಾಮಾನ್ಯ ಜನರಿಗೆ ಪರಿಚಿತರಲ್ಲ,

ಶರಣೆಯರೆಂದ ತಕ್ಷಣ ಎಲ್ಲರ ಮನಸ್ಸಿನ ಮುಂದೆ ಬರುವ ಹೆಸರುಗಳೆಂದರೆ ಅಕ್ಕಮಹಾದೇವಿ, ಅಕ್ಕನಾಗಮ್ಮ, ಮುಕ್ತಾಯಕ್ಕ, ಮೋಳಿಗೆ ಮಹಾದೇವಿ, ಆಯ್ದಕ್ಕಿ ಲಕ್ಕಮ್ಮ ಮತ್ತು ನೀಲಾಂಬಿಕೆಯರು, ಬಸವಣ್ಣನವರ ಮೊದಲ ಪತ್ನಿಯಾದ ಗಂಗಾಂಬಿಕೆಯೂ ವಚನಕಾರ್ತಿ. ಆದರೂ ಬಹಳ ಜನರಿಗೆ ಆಕೆ ಬಸವಣ್ಣನವರ ಪತ್ನಿಯಾಗಿ ಪರಿಚಿತಳೇ ಹೊರತು ವಚನಕಾರ್ತಿಯಾಗಿ ಅಲ್ಲ. ೧೯೫೫ರಲ್ಲಿ ಫ.ಗು.ಹಳಕಟ್ಟಿಯವರು ಶಿವಶರಣೆಯರ ಚರಿತ್ರೆಗಳು ಎಂಬ ಪುಸ್ತಕ ಪ್ರಕಟವಾದಾಗ ಆಕೆ ಬರೆದ ವಚನಗಳಿನ್ನೂ ದೊರೆತಿರಲಿಲ್ಲ. ಆದರೆ ವಚನಾಂಕಿತ 'ಬಸವ ಪ್ರಿಯ ಕೂಡಲಸಂಗ' ಎಂದು ಅವರಿಗೆ ತಿಳಿದಿತ್ತು. ಅದಕ್ಕೆ ಆಧಾರವಾವುದು ಎಂಬುದನ್ನು ಆ ಪುಸ್ತಕದಲ್ಲಿ ಉಲ್ಲೇಖಿಸಿಲ್ಲ, ಈಚೆಗೆ ಆಕೆ ಬರೆದ ಎಂಟು ವಚನಗಳೆಂದು ಕ.ವಿ. ವಿದ್ಯಾಲಯದಿಂದ ಪ್ರಕಟವಾದ ಇಪ್ಪತ್ತೇಳು ಶಿವಶರಣೆಯರು ಎಂಬ ಪುಸ್ತಕದಲ್ಲಿ

ಸಂಪುಟದಲ್ಲಿ ಆಕೆಯವಾದ ಒಂಭತ್ತು ವಚನಗಳು ಪ್ರಕಟವಾಗಿವೆ. ಬಸವಣ್ಣನವರ ಇನ್ನೋರ್ವ ಪತ್ನಿಯಾದ ನೀಲಾಂಬಿಕೆಯ ಬಗ್ಗೆ ಬೇಕಾದಷ್ಟು, ಕಾಲಜ್ಞಾನ ವಚನ, ಸ್ತೋತ್ರ ಪದ್ಯಗಳು „ ಜನಪದ ಹಾಡುಗಳು, ತ್ರಿಪದಿಗಳೂ ಇವೆ. ಈಕೆ ಬಸವಣ್ಣನವರಷ್ಟೇ ಪ್ರಸಿದ್ಧಳು. ಸ್ವತಃ ಬಸವಣ್ಣನವರ ವಚನಗಳಲ್ಲಿಯೂ ಕೆಲವು ಕಡೆ ಇವಳ ಹೆಸರು ಬರುತ್ತದೆ. ಆದರೆ ಗಂಗಾಂಬಿಕೆಯ ಬಗ್ಗೆ ವಿವರಗಳು ಹೆಚ್ಚಿಲ್ಲ. ಕೆಲವೇ ಕೆಲವರು ಬರೆದ ಅಂಶಗಳನ್ನು ಗಮನಿಸಿದಾಗ ಈಕೆ ಬಸವಣ್ಣನವರ ಸಾಮಾಜಿಕ ಕಾರ್ಯಕ್ರಮಗಳಲ್ಲಿ ನೀಲಾಂಬಿಕೆಯಂತೆ ಜೊತೆ–ಜೊತೆಯಾಗಿ ತೆರೆಮರೆಯಲ್ಲಿ ನಿಂತು, ಗುಪ್ತ ಗಾಮಿನಿಯಂತೆ ಮೂಕ ಕಾರ್ಯಕರ್ತೆಯಾಗಿ ಕೆಲಸ ಮಾಡಿದ್ದಾಳೆ ಎಂಬ ಅಂಶವನ್ನು ಹೆಕ್ಕಿ ತೆಗೆಯಬಹುದು. ಈ ವಿಚಾರದಲ್ಲಿ ಊರ್ಮಿಳೆಯು ರಾಮಾಯಣದಲ್ಲಿ ನೇಪಥ್ಯದೊಳಗೇ ಉಳಿದಂತೆ. ಶರಣರ ಕೊನೆಯ ಕ್ರಾಂತಿಕಾರಕ ಹೋರಾಟದಲ್ಲಿ, ಶೌರ್ಯದಿಂದ ಭಾಗವಹಿಸಿದರೂ, ಅದೆಲ್ಲ ಹೆಚ್ಚಾಗಿ ಪ್ರಚಾರವಾಗದೆ ತೆರೆಯ ಮರೆಯಲ್ಲೇ ಗಂಗಾಂಬಿಕೆ ಉಳಿದಿದ್ದಾಳೆ. ಎನ್ನಬಹುದು

**ಗಂಗಾಂಬಿಕೆಯ ಕಥೆಯ : ಕಾವ್ಯಾಧಾರಿತ ವಿವೇಚನೆ**

ಗಂಗಾಂಬಿಕೆಯ ಬಗೆಗೆ ಹೆಚ್ಚಿನ ಮಾಹಿತಿಗಳು ಸಾಹಿತ್ಯದಲ್ಲಿ ದೊರೆಯುವುದಿಲ್ಲ. ಹರಿಹರನ ಬಸವರಾಜ ದೇವರ ರಗಳೆ, ಭೀಮಕವಿಯ ಬಸವ ಪುರಾಣ, ಸೀಂಗಿರಾಜನ ಸೀಂಗಿ ಪುರಾಣ, ಲಕ್ಕಣ ದಂಡೇಶನ ಶಿವತತ್ವ ಚಿತಾಮಣಿ, ಸಿದ್ಧನಂಜೇಶನ ಗುರುರಾಜ ಚಾರಿತ್ರ್ಯ, ಷಡಕ್ಷರ ದೇವನ ಬಸವರಾಜ ವಿಜಯ, ಶಾಂತಲಿಂಗ ದೇಶಿಕನ ಭೈರವೇಶ್ವರ ಕಥಾಮಣಿ ಸೂತ್ರ ರತ್ನಾಕರ, ಮುಖ ಬೋಳು ಸಿದ್ಧಲಿಂಗನ ಷಟ್‌ಸ್ಥಲ ತಿಲಕ, ಚೆನ್ನಪ್ಪ ಕವಿಯ ಶರಣ ಲೀಲಾವೃತ ಮೊದಲಾದ ಕೃತಿಗಳಲ್ಲಿ ಈಕೆಗೆ ಸಂಬಂಧಿಸಿದ ಕೆಲವು ಸಂಗತಿಗಳು ಕೊಡಲ್ಪಟ್ಟಿವೆ, ಇವುಗಳಲ್ಲಿಯೂ ವಿವರವಾದ ಹಾಗೂ ಸ್ಪಷ್ಟವಾದ ಅಂಶಗಳು ದೊರೆಯುವುದಿಲ್ಲ. ಗ್ರಂಥಕರ್ತರ ಬರಹಗಳಲ್ಲಿ ಒಮ್ಮತವಿಲ್ಲ, ಇವುಗಳ ಪುರಾಣ ಕಥೆಗಳಾಗಿರುವುದರಿಂದ, ಬರಹಗಳಲ್ಲಿ ಕಲ್ಪನೆ, ಉತ್ಪ್ರೇಕ್ಷೆ ಹೆಚ್ಚಾಗಿವೆ. ತರ್ಕದ ಒರೆಗಲ್ಲಿನಲ್ಲಿ ಮೌಲ್ಯ ಕಳೆದುಕೊಳ್ಳುತ್ತವೆ.

ಇಪ್ಪತನೆಯ ಶತಮಾನದ ಉತ್ತರ ಭಾಗದಲ್ಲಿ ಬಹಳಷ್ಟು ಲೇಖಕರು ಶರಣೆಯರ ಬಗ್ಗೆ ಲೇಖನಗಳನ್ನು, ಪುಸ್ತಕಗಳನ್ನು ಬರೆದಿರುವರಾದರೂ ಗಂಗಾಂಬಿಕೆಯ ಬಗೆಗೆ ಅಷ್ಟಾಗಿ ಬರೆದಿಲ್ಲ. ಬರೆದರೂ ಹೆಚ್ಚಿನ ವಿವರಗಳು ದೊರೆಯುತ್ತಿಲ್ಲ.

ಹರಿಹರನು, ಬಸವಣ್ಣನವರು ಮಂತ್ರಿ ಪದವಿಗೇರಿದ ಮೇಲೆ ಕೆಲವು ದಿನಗಳು ಕಳೆದು 'ಸತ್ಕುಲ ಸಾದೃಶ ಸುಶೀಲೆಯರಪ್ಪ ಗಂಗಾದೇವಿ, ಮಾಯಿದೇವಿಯರೊಡನೆ ವಿವಾಹ ಸಂಪದದಿಂ ಸಂತ ಸುಖದಿಂದಿರ್ದರೆಂದು' ಮಾತ್ರ ಹೇಳಿದ್ದಾನೆ. ಇಲ್ಲಿ

ಗಂಗಾಂಬಿಕೆ, ಮಾಯಿದೇವಿಯಂತು ಯಾರ ಮಕ್ಕಳು? ಮದುವೆ ಎಲ್ಲಿ ನಡೆಯಿತೆಂಬುದರ ಪ್ರಸ್ತಾಪವಿಲ್ಲ. ನಂತರ ಪಾಲ್ಕುರಿಕೆ ಸೋಮನಾಥನ ಬಸವ ಪುರಾಣವನ್ನು ಆಧರಿಸಿ ಬರೆದ ಭೀಮಕವಿಯು ಹೆಚ್ಚಿನ ಸಂಗತಿಗಳನ್ನು ಕೊಡುತ್ತಾನೆ. ಗಂಗಾಂಬಿಕೆಯು ಬಸವಣ್ಣನವರ ತಾಯಿಯ ಅಣ್ಣನಾದ ಬಲದೇವ ಮಂತ್ರಿಯ ಮಗಳೆಂದೂ, ಬಲದೇವನೂ ಬಸವಣ್ಣನ ಮುಂಜಿಗೆಂದೂ ಬಂದಿದ್ದ ಉಲ್ಲೇಖವಿದೆ. ಗಂಗಾಂಬಿಕೆಯೊಡನೆ ವೈಭವದಿಂದಾದ ಬಸವಣ್ಣನ ವಿವಾಹವನ್ನು ವರ್ಣಿಸಿದ್ದಾನೆ. ಮಾಯಿದೇವಿಯ ವಿವಾಹವಾದ ಬಗ್ಗೆ ಏನೂ ತಿಳಿದಿಲ್ಲ. ಆದರೆ, ಓಲೆಯನ್ನಿತ್ತ ಪವಾಡದ ಬಗ್ಗೆ ಹೇಳುವಾಗ ಮಾಯಿದೇವಿಯನ್ನು ಹೆಸರಿಸಿದ್ದಾನೆ. ಹಾಗಾಗಿ ಕೆಲವರು ಗಂಗಾಂಬಿಕೆ ಒಬ್ಬಳೇ ಹೆಂಡತಿ, ಆಕೆಗೆ ಮಾಯಿದೇವಿ ಎಂಬ ಹೆಸರೂ ಇದ್ದಿರಬಹುದೆಂದು ಊಹಿಸುತ್ತಾರೆ. ಮುಂದೆ ಹದಿನಾರನೇ ಶತಮಾನದಲ್ಲಿ ಬರೆದ ಸಿಂಗಿರಾಜ ಪುರಾಣದಲ್ಲಿ ಗಂಗಾಂಬಿಕೆ–ನೀಲಾಂಬಿಕೆಯರು ಬಸವಣ್ಣನ ಇಬ್ಬರು ಧರ್ಮಪತ್ನಿಯರು; ಗಂಗಾಂಬಿಕೆ ಬಲದೇವ ಮಂತ್ರಿಯ ಮಗಳು ಮೊದಲ ಪತ್ನಿ. ನೀಲಾಂಬಿಕೆ ಸಿದ್ಧರಸ ಮಂತ್ರಿಯ ಮಗಳು ಎರಡನೆಯ ಪತ್ನಿ ಎಂದು ವ್ಯಕ್ತವಾಗುತ್ತದೆ. ಸಿಂಗಿರಾಜನು ವಚನಗಳನ್ನು ಇದ್ದಕ್ಕಿದ್ದತೆಯೇ ಬೇರೆ ಬೇರೆ ಸನ್ನಿವೇಶಗಳಲ್ಲಿ ಉದ್ಧರಿಸುವುದು ಕಂಡುಬರುತ್ತದೆ. ಇದು ಅವನ ವಿಶಿಷ್ಟ ರೀತಿ. ಅದರಿಂದ ಸಿಂಗಿರಾಜ ಪುರಾಣಕ್ಕೆ ಐತಿಹಾಸಿಕ ಬೆಲೆ ಅಧಿಕತರವಾದೆಯೆಂದು ಊಹಿಸಲು ಅವಕಾಶವಿದೆಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಈತನು, ಬಸವಣ್ಣನವರ ವಿವಾಹ ನೀಲಾಂಬಿಕೆ–ಗಂಗಾಂಬಿಕೆಯರೊಡನೆ ಆದ ಬಗ್ಗೆ ಬರೆಯುವಾಗ, ಹಿಂದಿನ ಸಾಹಿತ್ಯದಲ್ಲಿ ಬಂದಿರುವ ಸಂಶಯ, ಸಂದಿಗ್ಧತೆಗಳ ಬಗ್ಗೆ ಲಕ್ಷ್ಯವಿತ್ತು ಅವುಗಳ ಪರಿಹಾರಕ್ಕೆ ಬೇಕಾದ ಅಂಶಗಳನ್ನು ಸಂಗ್ರಹಿಸಿ ಸಾಹಿತ್ಯ ರಚಿಸಿದಂತೆ ಕಂಡುಬರುತ್ತದೆ. ಹೀಗಾಗಿ ಅವನ ಪುರಾಣದಲ್ಲಿ ಓದುಗನ ಮನಸ್ಸಿಗೆ ಒಂದು ಸಮಗ್ರ ಚಿತ್ರ ಕಾಣುವುದಲ್ಲದೆ, ಕೆಲವು ಅನುಮಾನಗಳಿಗೆ ಪರಿಹಾರವು ಗೋಚರವಾಗುತ್ತದೆ.

ಗಂಗಾಂಬಿಕೆಯ ಒಂದು ಸಮಗ್ರ ಜೀವನಚಿತ್ರವನ್ನು, ಸಿಕ್ಕುವ ಆಧಾರಗಳನ್ನು ಕ್ರೂಢೀಕರಿಸಿ, ವಿಮರ್ಶಿಸಿ ಸತ್ಯಕ್ಕೆ ಸಾಕಷ್ಟು ಹತ್ತಿರವಾದ ರೀತಿಯಲ್ಲಿ ಮೂಡಿಸಬೇಕಾಗಿದೆ. ಈಗ ದೊರೆಯುವ ಆಧಾರಗಳೆಂದರ ೧. ಪುರಾಣ, ರಗಳೆ, ಲೇಖನ ಮುಂತಾದ ಸಾಹಿತ್ಯಗಳು ೨. ಇತ್ತೀಚೆಗೆ ಕೊರೆತಿರುವ ಇಂಗಳೇಶ್ವರದ ಕುಲಕರ್ಣಿಯವರ ಮನೆತನದ ವಂಶಾವಳಿಯ (ಅಸಲಿನಂತೆ ಮಾಡಲಾದ ನಕಲಿನ) ನಕಲು. ೩. ಗಂಗಾಂಬಕೆಯೇ ಬರೆದ ವಚನಗಳು.

ಸಾಹಿತ್ಯದಲ್ಲಿ ಅನೇಕ ಅಂಶಗಳು ಗೊಂದಲ ಉಂಟು ಮಾಡುವಂತಿದ್ದರೂ ಎಲ್ಲ ಅಂಶಗಳನ್ನು ತರ್ಕಬದ್ಧವಾಗಿ ಪರಾಮರ್ಶಿಸಿ ಒಂದು ವಿಶ್ಚಿತ ಚಿತ್ರವನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

## ಭೀಮಕವಿ ವರ್ಣಿಸಿದ ಗಂಗಾಂಬಿಕೆ

ಗಂಗಾಂಬಿಕೆಯ ಜನನ,ಬಾಲ್ಯ, ಶಿಕ್ಷಣಗಳ ಬಗ್ಗೆ ಯಾವ ಅಂಶವೂ ತಿಳಿದು ಬರುವುದಿಲ್ಲ. ಆಕೆಯ ಬಗೆಗೆ ನಮಗೆ ತಿಳಿಯುವುದು ಆದೆಯ ಮದುವೆಯ ಕಾಲದಿಂದ, ಗಂಗಾಂಬಿಕೆ ಬಸವೇಶ್ವರನ ಸೋದರಮಾವನಾದ ಬಲದೇವ ಮಂತ್ರಿಯ ಮಗಳೂ, ಬಲದೇವ ಮಂತ್ರಿಯು ಬಹಳ ಹಿಂದೆಯೇ ಇಂಗಳೇಶ್ವರದಿಂದ ಮಂಗಳವೇಡೆಗೆ ಹೋಗಿರುತ್ತಾನೆ. ಮುಂದೆ ಆತನು ಕಲ್ಯಾಣದಲ್ಲಿ ಬಿಜ್ಜಳನ ಮಂತ್ರಿಯಾಗುತ್ತಾನೆ. ಆತನ ಮಗಳಾದ ಗಂಗಾಂಬಿಕೆಯು ಮದುವೆಯ ವಯಸ್ಸಿಗೆ ಬಂದಾಗ ವರಾನ್ವೇಷಣೆಗೆ ತೊಡಗುತ್ತಾನೆ. ಆ ಸಮಯದಲ್ಲಿ ಬಸವಣ್ಣನು ಕೂಡಲಸಂಗಮದಲ್ಲಿ ಜಾತವೇದ ಮುನಿಗಳ ಬಳಿ ಶಿಕ್ಷಣ ಪಡೆದು ತನ್ನ ವಿದ್ಯೆ., ಜ್ಞಾನ, ದಕ್ಷತೆ, ಪ್ರತಿಭೆಗಳಿಂದ ಪ್ರಖ್ಯಾತವಾಗಿರುತ್ತಾನೆ. ಈ ವಿಷಯವನ್ನು ತಿಳಿದ ಬಲದೇವ ಮಂತ್ರಿಯು ವಿಚಾರಿಸಲಾಗಿ ಆತ, ತನ್ನ ಸೋದರಿ ಮಾದಲಾಂಬೆಯ ಮಗನೇ ಎಂದು ತಿಳಿದು ತುಂಬಾ ಸಂತೋಷವಾಗಿ ಮದುವೆಗೆ ಪ್ರಯತ್ನಿಸುತ್ತಾನೆ. ಜಾತವೇದ ಮುನಿಗಳ ಸಲಹೆಯ ಮೇರೆಗೆ ಬಸವಣ್ಣನು ಒಪ್ಪುತ್ತಾನೆ. ಕಲ್ಯಾಣದಲ್ಲಿ ಗಂಗಾಂಬಿಕೆ ಮತ್ತು ಬಸವಣ್ಣನವರ ಲಗ್ನವನ್ನು ತುಂಬಾ ವಿಜೃಂಭಣೆಯಿಂದ ಮಾಡುತ್ತಾನೆ. ಭೀಮಕವಿಯು ಗಂಗಾಂಬಿಕೆಯನ್ನು ಈ ರೀತಿ ವರ್ಣಿಸಿದ್ದಾನೆ.

ಕ್ಷಿತಿಗೆ, ಲಕ್ಷ್ಮಿಗೆ, ರೋಹಿಣಿಗೆ, ಭಾ
ರತಿಗೆ, ರತಿಗೆ, ಪುಲೋಮಜೆಗೆ ಅರುಂ-
ಧತಿಗೆ, ಸೀತೆಗೆ, ಜಾಹ್ನವಿಗೆ, ರವಿಸತಿಗೆ ನೂರುಮಡಿ
ಧೃತಿ, ಸಿರಿ, ಪ್ರಭೆ, ಜಾಣ್ಮೆ, ರೂಪು
(ಉ) ನ್ನತಿ ಪತಿವ್ರತದಾಚರಣೆ ಸಂ-
ತತ ಪವಿತ್ರತೆ, ತೇಜವೆಂದವರಿಂದ ಗಂಗಾಯಿ......
ರೂಪ, ಗುಣ

ದಕ್ಷತೆಯಲ್ಲಿ ಮೂರು ಲೋಕದಲ್ಲೂ ಯಾರು ಅವಳ ಸಮಾನರಿರಲಿಲ್ಲವೆಂಬಂತೆ ವರ್ಣಿಸುತ್ತಾನೆ. ಕವಿ ಕವಿಯೇ ಅಲ್ಲವೆ?

## ಕೂಡಲಸಂಗಮದಲ್ಲಿ ಬಸವಣ್ಣನ ಸಂಸಾರ

ಇಂತಹ ಗಂಗಾಂಬಿಕೆಯನ್ನು ಮದುವೆ ಮಾಡಿಕೊಂಡು ಬಸವಣ್ಣ ಕೂಡಲ ಸಂಗಮದಲ್ಲಿ ತನ್ನ ಅಕ್ಕ ನಾಗಲಾಂಬಿಕೆ, ಹೆಂಡತಿ ಗಂಗಾಂಬಕೆಯೊಡನೆ ವಾಸಿಸುತ್ತಿರುತ್ತಾನೆ. ನಂತರ ಬಿಜ್ಜಳನ ಆಸ್ಥಾನದಲ್ಲಿ ಕರಣಿಕನಾಗಿ ಸೇರುತ್ತಾನೆ. ಆ ಸಮಯದಲ್ಲಿ ಆಸ್ಥಾನದಲ್ಲಿ ಲೆಕ್ಕಿಗರು ಲೆಕ್ಕ ಮಾಡುವಾಗ ಮಾಡಿದ್ದ ತಪ್ಪನ್ನು

ಒಂದು ಸಾರಿ ಪಕ್ಷಿನೋಟ ಬೀರಿ, ಕಂಡು ಹಿಡಿದು ಬೊಕ್ಕಸಕ್ಕಾಗುವ ನಷ್ಟವನ್ನು ತಪ್ಪಿಸುತ್ತಾನೆ. ಇವನ ದಕ್ಷತೆಯನ್ನು ಗಮನಿಸಿದ ರಾಜನು ಬಸವಣ್ಣನನ್ನು ಭಂಡಾರಿಯನ್ನಾಗಿ ಆಸ್ಥಾನದಲ್ಲಿ ನೇಮಿಸಿಕೊಳ್ಳುತ್ತಾನೆ. ಆ ಸಮಯದಲ್ಲಿ ಬಸವಣ್ಣನು ತನ್ನ ಪತ್ನಿ ಗಂಗಾಂಬಿಕೆ, ಅಕ್ಕನಾಗಲಾಂಬಿಕೆ ಅಳಿಯ ಚೆನ್ನಬಸವಣ್ಣನೊಡನೆ ಕಲ್ಯಾಣದಲ್ಲಿರುತ್ತಾನೆ. ಕೆಲವು ಕಾಲದ ನಂತರ ಬಲದೇವ ಮಂತ್ರಿಯು ಕಾಲವಶನಾಗಲು, ಅವನ ಸ್ಥಾನಕ್ಕೆ ಸಮರ್ಥರಾದವರನ್ನು ರಾಜನು ಹುಡುಕುತ್ತಿರುವಾಗ ಎಲ್ಲರೂ ಬಸವಣ್ಣನೇ ಆ ಸ್ಥಾನಕ್ಕೆ ಸಮರ್ಥನೆಂದು ತೀರ್ಮಾನಿಸುತ್ತಾರೆ. ಆಗ ಬಿಜ್ಜಳನು ಬಸವಣ್ಣನನ್ನು ಮಂತ್ರಿಯನ್ನಾಗಿ ಮಾಡಿಕೊಳ್ಳುವನು. ಅವನು ಮಂತ್ರಿಯಾಗಿದ್ದ ಕಾಲದಲ್ಲಿ ಅಪೂರ್ವ ಲಿಪಿಯಲ್ಲಿ ಬರೆದ ಒಂದು ಪತ್ರವನ್ನು ಓದಬೇಕಾದ ಸಂದರ್ಭ ಒದಗಿತು. ಆಗ ಯಾರೂ ಓದಲು ಸಮರ್ಥರಾಗಲಿಲ್ಲ. ಬಸವಣ್ಣನು ಅದನ್ನು ಓದಿ, ರಾಜನ ಸಿಂಹಾಸನದ ಅಡಿಯಲ್ಲಿ ಹೇರಳವಾದ ನಿಧಿ ಇದೆಯೆಂದು ಅಂಶವನ್ನು ತಿಳಿಯಪಡಿಸಿದನು. ಅದರಂತೆ ಅಗೆದು ನೋಡಲು ರಾಜನಿಗೆ ಬಹು ದೊಡ್ಡ ಸಂಪತ್ತು ಅಲ್ಲಿ ದೊರಕಿತು. ಆಗ ರಾಜನಿಗೆ ತುಂಬಾ ಸಂತೋಷವಾಗಿ ಬಸವಣ್ಣನನ್ನು ತನ್ನ ರಾಜ್ಯದ ಮುಖ್ಯ ದಂಡಾಧೀಶನನ್ನಾಗಿ ನೇಮಿಸುತ್ತಾನೆ. ಅಲ್ಲದೆ ಒಂದು ಅರಮನೆಯನ್ನು ಕಟ್ಟಿಸಿ ಕೊಡುತ್ತಾನೆ. ಬಸವಣ್ಣನು ಆ ಅರಮನೆಯಲ್ಲಿ ಗಂಗಾಂಬಿಕೆ- ಅಕ್ಕನಾಗಲಾಂಬಿಕೆ ಚೆನ್ನಬಸವಣ್ಣನವರೊಡನೆ ವಾಸವಾಗಿರುತ್ತಾನೆ. ಅವನು ಮೊದಲಿನಿಂದಲೂ ತತ್ವ ಜ್ಞಾನ ಪ್ರವೀಣನಾಗಿರುತ್ತಾನೆ. ಹಾಗಾಗಿ ಕಲ್ಯಾಣಕ್ಕೆ ಅನೇಕ ವಿದ್ವಾಂಸರು ಅವನೊಡನೆ ವಿಷಯಗಳನ್ನು ಚರ್ಚಿಸಲು ಬರುತ್ತಿರುತ್ತಾನೆ. ಬಂದ ವಿದ್ವಾಂಸರ, ಅತಿಥಿಗಳ, ಸತ್ಕಾರವನ್ನು ಗಂಗಾಂಬಿಕೆ ಮಾಡುತ್ತಾ, ಬಸವಣ್ಣನ ಕೆಲಸಗಳಿಗೆ ಸಹಕಾರಿಯಾಗಿ ತುಂಬಾ ವಿಧೇಯಳಾದ ಪತ್ನಿಯಾಗಿ ಇರುತ್ತಾಳೆ. ಬಸವಣ್ಣನು ಮನೆಯಲ್ಲಿ ವಿದ್ವಾಂಸರೊಡನೆ ಚರ್ಚೆ, ವಿಚಾರಗಳನ್ನು, ಅರಮನೆಯಲ್ಲಿ ರಾಜ್ಯಾಡಳಿತನ್ನು ತುಂಬಾ ದಕ್ಷತೆಯಿಂದ ಮಾಡಿಕೊಂಡಿರುತ್ತಾನೆ.

ಬಿಜ್ಜಳನಿಗೆ ಸಮರ್ಥ ದಂಡನಾಯಕನಾದ ಬಸವಣ್ಣನ ಕೆಲಸಗಳಿಂದ ತುಂಬ ಸಂತೋಷವಾಗುತ್ತದೆ. ತನ್ನೆಲ್ಲ ರಾಜ್ಯದ ಜವಾಬ್ದಾರಿಯನ್ನು ಹೊತ್ತಿರುವ ದಂಡಾಧೀಶರೊಡನೆ ತನ್ನ ಸಂಬಂಧ ಪ್ರೀತಿಯಿಂದ, ಸ್ನೇಹದಿಂದ ಕೂಡಿರಬೇಕು, ಗಾಢವಾಗಿರಬೇಕು ಎಂದು ತನ್ನ ಸಾಕು ತಂಗಿಯಾದ ನೀಲಾಂಬಿಕೆಯನ್ನು ಕೊಟ್ಟು ಬಸವಣ್ಣನಿಗೆ ತಿಳಿಸಿ ಮದುವೆಗೆ ಒಡಂಬಡಿಸುತ್ತಾನೆ. ಬಸವಣ್ಣನೊಡನೆ ಲಗ್ನವಾಗಿ ನೀಲಾಂಬಿಕೆಯು ಬಸವಣ್ಣನ ಮನೆಗೆ ಬರುತ್ತಾಳೆ.

ಇಲ್ಲಿ ಅನೇಕರು ಎರಡನೆಯ ಲಗ್ನವಾದುದಕ್ಕೆ ಬಸವಣ್ಣನವರನ್ನು ಟೀಕಿಸಿದರೆ, ಕೆಲವರು ಹಾಗಾಗಲು ಸಾಧ್ಯವೇ ಇಲ್ಲ, ಬೇರೆಯವರ ತಪ್ಪುಗಳನ್ನು ತಿದ್ದುವ

ಬಸವಣ್ಣ ಹೆಣ್ಣಿನ ಶೋಷಣೆಗೆ ಉದಾಹರಣೆಯಂತಿರುವ ಇಬ್ಬರು ಹೆಂಡತಿಯರನ್ನು ಮಾಡಿಕೊಳ್ಳಲು ಸಾಧ್ಯವೇ ಇಲ್ಲ. ತನ್ನ ಮೊದಲ ಪತ್ನಿ ಗಂಗಾಂಬಿಕೆಗೆ ಎಂದಿಗೂ ದ್ರೋಹ ಬಗೆದಿರಲಾರ ಎನ್ನುತ್ತಾರೆ. ಶ್ರೀ ಎಚ್. ದೇವೀರಪ್ಪನವರು ತಮ್ಮ ಬಸವರಾಜನರಸಿಯರು ಎಂಬ ಲೇಖನದಲ್ಲಿ (ಪರಂಜ್ಯೋತಿ, ಏಪ್ರಿಲ್ ೧೯೬೩) ಅನೇಕ ಉದಾಹರಣೆಗಳ ಮೂಲಕ ಬಸವಣ್ಣನವರಿಗೆ ಒಬ್ಬಳೇ ಹೆಂಡತಿಯೆಂದು ವಾದಿಸುತ್ತಾರೆ. ಬಸವಣ್ಣನು ಎರಡನೆಯ ಲಗ್ನಕ್ಕೆ ಒಪ್ಪುವುದು ಸಾಧ್ಯವೇ ಇಲ್ಲ ಎಂಬುದು ಅವರ ಅನಿಸಿಕೆ. ಆದರೆ ಈ ಮದುವೆಯ ಹಿನ್ನಲೆಯನ್ನು ಪೂರ್ಣವಾಗಿ ಅವಲೋಕಿಸಿ, ಇಂಗಳೇಶ್ವರದ ಕುಲಕರ್ಣಿ ಮನೆತನದ ವಂಶಾವಳಿಯ ವಿವರಗಳನ್ನು ತೆಗೆದುಕೊಂಡರೆ ವಿಷಯ ಸ್ಪಷ್ಟವಾಗಿ ಅರ್ಥವಾಗುತ್ತದೆ.

ನೀಲಲೋಚಯೇ ಮಾಯಿದೇವಿ ಇರಬೇಕು ಎನ್ನುವುದು ಕೆಲವರ ಅನಿಸಿಕೆ. ಹಾಗಿರಲು ಸಾಧ್ಯವಿದೆ. ಏಕೆಂದರೆ ಹರಿಹರನ ಮತ್ತು ಭೀಮಕವಿ ಮಾಯಿದೇವಿಯ ಪ್ರಸ್ತಾಪ ಮಾಡುತ್ತಾರೆ. ಆ ಬಗ್ಗೆ ವಿವರಗಳೇನೂ ಸಿಕ್ಕದಿರುವುದರಿಂದ ನೀಲಲೋಚನೆಯ ಮೊದಲ ಹೆಸರು ಮಾಯಿದೇವಿ ಇರಬಹುದೆಂದೂ, ಮದುವೆಯಾದ ನಂತರ ಸುಂದರವಾದ ನೀಲಿ ಕಣ್ಣುಗಳುಳ್ಳ ಆಕೆಯನ್ನು ಬಸವಣ್ಣ ನೀಲಲೋಚನೆಯೆಂದು ಕರೆದಿರಬಹುದು. ಏಕೆಂದರೆ ಅವನೇ ಬರೆದ ಒಂದು ವಚನದಲ್ಲಿ 'ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳ ಚೆಲುವೆ' ಹಾಗಾಗಿ ಗ್ರಂಥಕರ್ತರು ನೀಲಲೋಚನೆ ಎಂದು ಅವಳನ್ನು ಸಂಬೋಧಿಸುರಲು ಸಾಕು. ನಂತರ ಆಕೆಯನ್ನು ನೀಲಾಂಬಿಕೆ ಎಂದೂ ಕರೆದಿದ್ದಾರೆ. ಏಕೆಂದರೆ ಬಸವೇಶ್ವರನ ಬಳಗದ ಅಂದಿನ ಸಂಪ್ರದಾಯದಲ್ಲಿ ಅಂಬಿಕೆ ಎಂದು ಹೆಸರಿಗೆ ರೂಢಿ ಕಂಡುಬರುತ್ತದೆ. ಬಸವೇಶ್ವರನ ತಾಯಿಯ ಹೆಸರು ಮಾದಲಾಂಬಿಕೆ; ಅಕ್ಕನ ಹೆಸರು ನಾಗಲಾಂಬಿಕೆ, ಹೆಂಡತಿಯ ಹೆಸರು ನೀಲಾಂಬಿಕೆ, ಇದನ್ನು ಆಧರಿಸಿ ಬಸವಣ್ಣ ಹೆಸರಿಸಿದ ನೀಲಲೋಚನೆಯನ್ನು ನೀಲಾಂಬಿಕೆ ಎಂದು ಬಳಸಿರಬಹುದು ಸಂಪ್ರದಾಯಸ್ಥ ಗ್ರಂಥಕರ್ತರು ಗಂಗಮ್ಮ, ನಾಗಮ್ಮ, ನೀಲಮ್ಮ ಎಂದು ವ್ಯವಹಾರ ರೀತಿಯಲ್ಲಿ ಬಳಸಿದ್ದಾರೆ. ಬಸವಣ್ಣನವರಿಗೆ ಒಬ್ಬಳೇ ಹೇಂಡತಿ ಇರಬೇಕು ಎಂದು ತರ್ಕಿಸಿರುವ ಎಚ್. ದೇವೀರಪ್ಪನವರು ಎರಡು ಹೆಸರುಗಳನ್ನು ಕೂಡಿಸಿ ನೀಲಗಂಗಾ (ನದಿಯ ಮಧ್ಯೆ ಇರುವ ನೀಲಮ್ಮನ ಸಮಾಧಿಯನ್ನು ಅಲ್ಲಿಯ ಜನರು ನೀಲಗಂಗಮ್ಮನ ಗುಡಿ ಎಂದು ಕರೆಯುವುದನ್ನು ಆಧರಿಸಿ) ಎಂದು ಕರೆದಿದ್ದಾರೆ. ಇನ್ನೊಂದು ವಿವಾದದ ಅಂಶವೆಂದರೆ ಬಹಳಷ್ಟು ಕವಿಗಳು ಪ್ರಾರಂಭದಿಂದಲೂ ಬಲದೇವ ಮಂತ್ರಿಯ ಮಗಳು ಗಂಗಾಂಬಿಕೆ ಬಸವಣ್ಣನ ಮೊದಲ ಪತ್ನಿ ಎಂದು ಬರೆದರೂ, ಫ.ಗು ಹಳಕಟ್ಟಿಯವರು ನೀಲಾಂಬಿಕೆಯು ಬಸವಣ್ಣನವರ ಮೊದಲ ಪತ್ನಿ ಎಂದು ಬರೆದಿದ್ದಾರೆ. ಆದರೆ

ವಿಷಯಗಳನ್ನು ಜೋಡಿಸಿ ತರ್ಕಿಸಿದರೆ, ನೀಲಾಂಬಿಕೆ ಎರಡನೆಯ ಪತ್ನಿ ಎಂಬುದು ಈಗ ಸ್ಪಷ್ಟವಾಗುತ್ತದೆ.

**ಇಬ್ಬರು ಪತ್ನಿಯರೇ?**

ಗಂಗಾಬಿಕೆ ಇದ್ದೂ, ಬಸವಣ್ಣನವರು ನೀಲಾಂಬಿಕೆಯನ್ನು ಮದುವೆಯಾದುದು (ಬಿಜ್ಜಳ ಹೇಳಿದ ಮಾತ್ರಕ್ಕೆ) ಹೇಗೆ ಎಂಬ ಸಮಸ್ಯೆಗೆ ವಂಶಾವಳಿಯನ್ನು ಗಣನೆಗೆ ತೆಗೆದುಕೊಂಡು ಯೋಚಿಸಿದರೆ ಬಲದೇವ ಮಂತ್ರಿ ಹಾಗೂ ಸಿದ್ಧರಸ ಮಂತ್ರಿ ವಾಸುದೇವನ ಮಕ್ಕಳು (ಅಣ್ಣ ತಮ್ಮಂದಿರು.) ಅವರ ಮಕ್ಕಳಾದ ಗಂಗಾಂಬಿಕೆ ನೀಲಾಂಬಿಕೆಯರು ಅಣ್ಣ ತಮ್ಮಂದಿರ ಮಕ್ಕಳಾಗಿ ಅಕ್ಕ ತಂಗಿಯರೆನ್ನಿಸಿಕೊಳ್ಳುತ್ತಾರೆ. ನೀಲಾಂಬಿಕೆ ಮಗುವಾಗಿದ್ದಾಗ ಬಿಜ್ಜಳ ರಾಜನ ತಮ್ಮ ಕರ್ಣದೇವನ ತಾಯಿ ಸತಿ ಹೋದುದರಿಂದ ತಬ್ಬಲಿಯಾಗುತ್ತಾಳೆ. ಆಗ ರಾಜ ಆ ಮಗುವನ್ನು ನೋಡಿಕೊಳ್ಳಲು ಮಂತ್ರಿ ಸಿದ್ಧರಸನಿಗೆ ಒಪ್ಪಿಸುತ್ತಾನೆ. ಸಿದ್ಧರಸನ ಹೆಂಡತಿ. ನೀಲಲೋಚನೆಯೊಂದಿಗೆ ಕರ್ಣದೇವನಿಗೂ ಮೊಲೆಯೂಡಿಸುತ್ತಾ ಬೆಳೆಸುತ್ತಾಳೆ. ಹಾಗಾಗಿ ತನ್ನ ತಮ್ಮನೊಡನೆ ಆಡುತ್ತಿದ್ದ ನೀಲಾಂಬಿಕೆಯನ್ನು ಬಿಜ್ಜಳನು ತಂಗಿಯೋಪಾದಿಯಲ್ಲಿ ಕಾಣುತ್ತಿರುತ್ತಾನೆ. ಬಿಜ್ಜಳನು ರಾಜನಾದ ಮೇಲೆ ಕೆಲವು ಕಾಲಾನಂತರದಲ್ಲಿ ಸಿದ್ಧರಸನ ಪತ್ನಿ ತೀರಿ ಹೋಗಿ, ಸಿದ್ಧರಸನು ಸಾಯುವ ಮುನ್ನ ಮಗಳು ನೀಲಾಂಬಿಕೆಯ ರಕ್ಷಣೆಯನ್ನು ಜಿಜ್ಜಳನಿಗೆ ಒಪ್ಪಿಸಿ ಸಾಯುತ್ತಾನೆ. ಬಿಜ್ಜಳನ ಅರಮನೆಯಲ್ಲಿ ನೀಲಾಂಬಿಕೆ ಅವನ ತಂಗಿಯಂತೆ ಬೆಳೆಯುತ್ತಿರುತ್ತಾಳೆ. ಬಸವಣ್ಣ ಬಿಜ್ಜಳನ ಮಂತ್ರಿಯಾಗಿ ಬಂದ ಮೇಲೆ ನಾಗಲಾಂಬಿಕೆ, ಗಂಗಾಂಬಿಕೆಯರೂ ಕಲ್ಯಾಣಕ್ಕೆ ಬರುತ್ತಾರೆ. ಆಗ ನೀಲಾಂಬಿಕೆ, ಗಂಗಾಂಬಿಕೆಯರ ಒಡನಾಟ ಹೆಚ್ಚಾಗುತ್ತದೆ. ತಂದೆ-ತಾಯಿ ಇಲ್ಲದ ತನ್ನ ಸೋದರಮಾವ ಸಿದ್ಧರಸನ ಮಗಳಾದ ನೀಲಾಂಬಿಕೆಯನ್ನು ಹಿರಿಯಳಾದ ನಾಗಲಾಂಬಿಕೆ ಮಗಳಂತೆ ಪ್ರೀತಿಸುತ್ತಾಳೆ. ತಾಯಿ ಇಲ್ಲದ ನೀಲಾಂಬಿಕೆ ನಾಗಲಾಂಬಿಕೆಯನ್ನು (ಸೋದರತ್ತೆಯ ಮಗಳು ಹಾಗೂ ಚಿಕ್ಕಪ್ಪನ ಮಗ ಶಿವದೇವನ ಹೆಂಡತಿ) ತಾಯಿಯಂತೆ ಕಾಣುತ್ತಿರುತ್ತಾಳೆ. ಮುಂದೆ ಸಹ ನೀಲಾಂಬಿಕೆ ತನ್ನೊಂದು ವಚನದಲ್ಲಿ ಆ ಭಾವನೆಯನ್ನು,

ಎನಗೆ ಹಾಲೂಟವನಿಕ್ಕುವ ತಾಯಿ
ಎನಗೆ ಪರಿಣಾಮವ ತೋರುವ ತಾಯೇ
ಪರಮ ಸುಖದೊಳಗಿಟ್ಟ ತಾಯೆ, ಪರವಸ್ತುವ ನಂಬಿದ ತಾಯೇ,
ಬಸವನ ಗುರು ತಾಯೇ
ಸಂಗಯ್ಯವಲ್ಲಿ ಸ್ವಯಂ ಲಿಂಗಿಯಾದೆಯಾ ಅಕ್ಕನಾಗಮ್ಮ ತಾಯಿ
ಎಂದು ವ್ಯಕ್ತಪಡಿಸಿದ್ದಾಳೆ.

ಇದರಿಂದ ಬಸವಣ್ಣನಿಗೂ, ಗಂಗಾಂಬಿಕೆಗೂ ಗೌರವಾನ್ವಿತಳಾದ ನಾಗಮ್ಮನಿಗೂ ಸಹಜವಾಗಿ ಈಕೆಯ ಬಗ್ಗೆ ಪ್ರೀತಿ, ಅನುಕಂಪ, ಕಳಕಳಿ ಇದ್ದಿರಬೇಕು. ಅವಳ ಭವಿಷ್ಯದ ಬಗ್ಗೆ ಅವರುಗಳಿಗೆ ಕಾಳಜಿ ವಹಿಸಿದುದು ಸಹಜ. ಗಂಗಾಂಬಿಕೆಗೂ ತನ್ನ ಚಿಕ್ಕಪ್ಪನ ಮಗಳಿಗೆ ಕಷ್ಟವಾಗದಿರಲಿ. ಅವಳ ಜೀವನ ಸುಖವಾದುದಾಗಲಿ ಎಂಬ ಹಾರೈಕೆ ಇರುವುದು ಸ್ವಾಭಾವಿಕ. ಬಸವಣ್ಣನಿಗೂ ತನ್ನ ಸೋದರ ಮಾವನ ಮಗಳು ತಂದೆ ತಾಯಿ ಇಲ್ಲದವಳು ಸುಖವಾದ ನೆಲೆ ಸೇರಲಿ ಎಂಬ ಅನಿಸಿಕೆ ಇದ್ದಿರಲು ಸಾಕು. ಸಂಬಂಧಿಗಳಾದ ಎಲ್ಲರಿಗೂ ಅವಳ ಭವಿಷ್ಯದ ಬಗ್ಗೆ ಚಿಂತೆ ಇರುವ ಕಾಲದಲ್ಲಿ ಬಿಜ್ಜಳ ದೊರೆ ಅವಳನ್ನು ಲಗ್ನವಾಗಬೇಕೆಂದು ಬಸವಣ್ಣನನ್ನು ಕೇಳಿದಾಗ, ಪುರುಷನು ಒಂದಕ್ಕಿಂತ ಹೆಚ್ಚು ಲಗ್ನವಾಗುತ್ತಿದ್ದುದು ಅತ್ಯಂತ ಸಾಮಾನ್ಯವಾಗಿದ್ದ ಆ ಕಾಲದಲ್ಲಿ ನಾಗಲಾಂಬಿಕೆಯು ಹುಡುಗಿಯ ಭವಿಷ್ಯ ಹಾಗೂ ಸುರಕ್ಷತೆಯ ದೃಷ್ಟಿಯಿಂದ ಇದು ಒಳ್ಳೆಯ ಸಲಹೆ ಎಂದು ಬಸವಣ್ಣನನ್ನು ಒಪ್ಪಿಸಿರಬೇಕು, ನಾವು ಈ ವಿಷಯವನ್ನು ಇಂದಿನ ಸಮಾಜದ, ಮಹಿಳೆಯರ ಮನೋಭಾವವನ್ನು ಹಿನ್ನೆಲೆಯಾಗಿಟ್ಟುಕೊಂಡು ವಾದ ಮಾಡುವುದಕಿಂತ ಆಗಿನ ಕಾಲದ ಸಮಾಜದ ಮಹಿಳೆಯರ ಸ್ಥಾನಮಾನ, ಮನೋಭಾವಗಳನ್ನು ಗಣನೆಗೆ ತೆಗೆದುಕೊಂಡು ತರ್ಕಿಸಬೇಕು. ಆಗಿನ ಮಹಿಳೆಯರು ತಮ್ಮ ಗಂಡಂದಿರಿಗೆ ಇನ್ನೂ ಹಲವಾರು ಹೆಂಡಂದಿರು ಇರುವುದು ತಪ್ಪೆಂದಾಗಲೀ, ತೊಂದರೆ ಎಂದಾಗಲೀ ಭಾವಿಸುತ್ತಿರಲಿಲ್ಲ. ಹೆಂಡತಿಯು ತನಗೆ ಬೇಕಾದ ಇನ್ನೊಬ್ಬ ಹುಡುಗಿಯನ್ನು ಗಂಡನನ್ನು ಒಪ್ಪಿಸಿ ತಾನೇ ನಿಂತು ಮದುವೆ ಮಾಡಿದ ಉದಾಹರಣೆಗಳು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದವರೆಗೂ ಬೇಕಾದಷ್ಟು ಇದ್ದವು. ಸವತಿಯರು ಒಬ್ಬರಿಗೊಬ್ಬರು ಅಕ್ಕ ತಂಗಿಯರಿಗಿಂತಲೂ ಹೆಚ್ಚಾದ ಪ್ರೀತಿಯಿಂದ ಇರುತ್ತಿದ್ದ ಸಂಗತಿಗಳು ಅನೇಕ. ಅಂದಿನ ಮೌಲ್ಯದ ಹಿನ್ನೆಲೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದರೆ ತಪ್ಪಾಗಿ ಕಾಣುತ್ತದೆ. ಆದರೆ ಮೌಲ್ಯದ ಹಿನ್ನೆಲೆಯಲ್ಲಿ ನೀಲಾಂಬಿಕೆಯ ಪರಿಸ್ಥಿತಿಯನ್ನು ಬಸವಣ್ಣ, ಗಂಗಾಂಬಿಕೆ, ನಾಗಲಾಂಬಿಕೆಯರೊಂದಿಗೆ ಅವರ ಸಂಬಂಧವನ್ನು ಅವರುಗಳಲ್ಲಿದ್ದ ಒಡನಾಟ, ಪ್ರೀತಿ ವಿಶ್ವಾಸಗಳನ್ನು ಮನದಲ್ಲಿಟ್ಟಕೊಂಡು ಅವಲೋಕಿಸಿದಾಗ ಆ ಪರಿಸ್ಥಿತಿಯಲ್ಲಿ ಬಸವಣ್ಣ ನೀಲಾಂಬಿಕೆಯನ್ನು ಲಗ್ನವಾದುದು ಹೆಣ್ಣಿನ ಶೋಷಣೆಯಲ್ಲ, ಎಲ್ಲರ ಹಿತಕ್ಕಾಗಿ ತನ್ನ ವೈಯಕ್ತಿಕ ನಂಬಿಕೆಯನ್ನು ಕಡೆಗಣಿಸಿದ ಎಂದು ಹೇಳಿದರೆ ತಪ್ಪಾಗಲಾರದು. ನೀಲಾಂಬಿಕೆಗೂ ಕೂಡ ತೇಜಸ್ವಿಯಾದ, ಪ್ರತಿಭಾವಂತನೂ, ದಕ್ಷನೂ, ಉನ್ನತಾಧಿಕಾರಿಯಾಗಿದ್ದವನೂ ಎಲ್ಲರ ಪ್ರಶಂಸೆಗೂ ಪಾತ್ರನಾದ ಬಸವಣ್ಣನನ್ನು ವಿವಾಹವಾಗಲು ಆಸೆಯಾಗಿರಬಹುದು. ಇಲ್ಲಿ ಅವಳು ಇಷ್ಟವಿಲ್ಲದೆ ಎರಡನೆಯ ಲಗ್ನವಾದಳು ಎಂಬ ಪ್ರಶ್ನೆಯೇ ಏಳುವುದಿಲ್ಲ. ಗಂಗಾಂಬಿಕೆಯು ದಿನವೂ ಅತಿಥಿ ಅಭ್ಯಾಗತರಿಂದ ತುಂಬಿದ್ದ ಮನೆಯ

ಜವಾಬ್ದಾರಿಯನ್ನು ನಿರ್ವಹಿಸಲು ತನ್ನ ತಂಗಿಯೊಬ್ಬಳು ಬರುತ್ತಾಳೆಂದು ಎರಡನೆಯ ಮದುವೆಯನ್ನು ಸ್ವಾಗತಿಸಿರಲು ಸಾಕು.

ಪ್ರಿಯ ಪತ್ನಿ ಗಂಗಾಂಬಿಕೆ : ವಿಚಾರ ಪತ್ನಿ ನೀಲಾಂಬಿಕೆ

ಹೀಗೆ ಗಂಗಾಂಬಿಕೆಯು ಪತಿಯ ಜವಾಬ್ದಾರಿಗಳನ್ನು ನಿರ್ವಹಿಸಿದರೆ, ನೀಲಾಂಬಿಕೆಯು ಬಸವಣ್ಣನ ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಜೊತೆಜೊತೆಯಾಗಿ ಮೈಗೂಡಿಸಿಕೊಂಡಿದ್ದಳಾಗಿ ಮನೆಯಲ್ಲಿದ್ದುಕೊಂಡು, ಪತಿಯ ಇಷ್ಟವನ್ನು ಅರಿತು ಚಾಚು ತಪ್ಪದೆ ವಿಧೇಯಳಾಗಿ ಬದುಕುತ್ತಿರುತ್ತಾಳೆ. ಸಂಪ್ರದಾಯಸ್ಥ ಪತಿವ್ರತೆಯರ ನಂಬಿಕೆ, ಜೀವನದ ರೀತಿ ಇವಳದಾಗಿರುತ್ತದೆ. ಆದರೆ ನೀಲಾಂಬಿಕೆ ರಾಜಗೃಹದಲ್ಲಿ ಬೆಳೆದು ಸ್ಥೈರ್ಯ, ದಕ್ಷತೆ, ನಿರ್ಭಿಡೆಯ ಮನೋಭಾವದವಳಾಗಿ ಸಾರ್ವಜನಿಕ ಜೀವನದಲ್ಲೂ ಧೈರ್ಯದಿಂದ ಮುನ್ನುಗ್ಗುವ ಮನೋಭಾವದವ-ಳಿರುತ್ತಾಳೆ, ಹಾಗಾಗಿ ಬಸವಣ್ಣ ಹಾಗೂ ನೀಲಲೋಚನೆಯರು ಹೆಚ್ಚು ಹೆಚ್ಚು ಹತ್ತಿರವಾಗಿದ್ದರೆಂದು, ಗಂಗಾಂಬಿಕೆಗೆ ಹಾಗೆ ಪತಿಗೆ ಸಮವಾಗಿ ಮುನ್ನುಗ್ಗುವುದು ಸೇರುತ್ತಿರಲಿಲ್ಲವಾಗಿ, ಮನೆಯಲ್ಲಿನ ಕೆಲಸಗಳಲ್ಲಿ ಹೆಚ್ಚಾಗಿ ನೆರವಾಗುತ್ತಿದ್ದಳೆಂದು ಭಾಸವಾಗುತ್ತದೆ. ಮುಂದೆ ಬಿಜ್ಜಳನ ಮಂತ್ರಿಯು ಸಿದ್ಧರಸನ ಆಸ್ತಿಗೆ ಅವನಿಗೆ ಗಂಡು ಸಂತಾನವಿಲ್ಲದ ಕಾರಣ ಆತನ ಅಳಿಯನಾದ ಬಸವಣ್ಣನನ್ನು ವಾರಸುದಾರನನ್ನಾಗಿ ಮಾಡುತ್ತಾನೆ.!

ಶಿವಾನುಭವದ ಚರ್ಚೆಗಾಗಿ ನಾನಾ ದೇಶಗಳಿಂದ ವಿದ್ವಾಂಸರು, ಶಿವಾನುಭವಿಗಳು ಬಸವೇಶ್ವರನಲ್ಲಿಗೆ ಬರುತ್ತಿದ್ದರು, ಹಾಗಾಗಿ ಬಸವೇಶ್ವರನು ಕಲ್ಯಾಣದಲ್ಲಿ ಶಿವಾನುಭವ ಮಂಟಪವನ್ನು ರೂಪಿಸಿದನು. ಇಲ್ಲಿ ಶಿವಾನುಭವದ ವಿಷಯಗಳನ್ನು ಶರಣರು ದೀರ್ಘವಾಗಿ ಚರ್ಚಿಸಿ ವಚನಗಳನ್ನು ರಚಿಸುತ್ತಿದ್ದರು. ಎಲ್ಲೆಡೆ ಅವುಗಳ ಪ್ರಚಾರವನ್ನು ಮಾಡುತ್ತಿದ್ದರು.

ಗಂಗಾಂಬಿಕೆ, ನೀಲಾಂಬಿಕೆಯರು ಮಹಾಮನೆಗೆ ಬಂದ ಅತಿಥಿಗಳ ಸತ್ಕಾರವನ್ನು ಅತ್ಯಂತ ಶ್ರದ್ಧೆಯಿಮದ ವ್ಯವಸ್ಥಿತವಾಗಿ ಮಾಡುತ್ತಿದ್ದರು, ಅಕ್ಕ ನಾಗಮ್ಮನು ಈ ಎಲ್ಲ ಕಾರ್ಯಗಳ ಮೇಲ್ವಿಚಾರಣೆ, ಮಾರ್ಗದರ್ಶನ ಮಾಡುತ್ತಿದ್ದಳು, ಎಲ್ಲವೂ ಚೆನ್ನಾಗಿ ಕೆಲವು ಕಾಲ ನಡೆಯುತ್ತಿತ್ತು.

ಮುಂದೆ ಬಸವಣ್ಣನ ಕ್ರಾಂತಿಕಾರಕ ವಿಚಾರಗಳಿಂದ ಪ್ರೇರಿತವಾದ ಮಧುವರಸ ಮತ್ತು ಹರಳಯ್ಯ ಇವರ ನಡುವೆ ಬೀಗತನವಾಗುತ್ತದೆ. ಜಾತಿ ಸುಂದರವಾಯಿತೆಂದು ಜನ ರೊಚ್ಚಿಗೆದ್ದು ಬಿಜ್ಜಳನ ಮನಸ್ಸನ್ನು ಬಸವಣ್ಣನ ವಿರುದ್ಧವಾಗಿ ತಿರುಗಿಸುತ್ತಾರೆ. ಸಿಟ್ಟಿಗೆದ್ದ ದೊರೆಯು ಮಧುವರಸ ಮತ್ತು ಹರಳಯ್ಯ ಇವರಿಬ್ಬರನ್ನು ಆನೆಯ

ಕಾಲಿಗೆ ಕಟ್ಟಿ, ಎಳೆಸಿ ಕ್ರೂರ ರೀತಿಯಲ್ಲಿ ಕೊಲ್ಲಿಸುತ್ತಾನೆ. ಇದರಿಂದ ಶರಣರು ರೊಚ್ಚಿಗೆದ್ದು ಕಲ್ಯಾಣದಲ್ಲಿ ಕ್ರಾಂತಿಯಾಗುತ್ತದೆ ಮನ ನೊಂದ ಬಸವಣ್ಣ ಅಪ್ಪಣ್ಣನವರೊಂದಿಗೆ ಕೂಡಲಸಂಗಮಕ್ಕೆ ಹೋಗುತ್ತಾನೆ . ಕೊನೆಯಲ್ಲಿ ಉಳಿದ ಕೆಲವರು ಶ್ರೀಶೈಲದ ಕಡೆಗೆ, ಮತ್ತೆ ಹಲವರು ಉಳವಿಯ ಕಡೆಗೆ ಹೋಗುತ್ತಾರೆ. ಬಸವೇಶ್ವರನು ನೀಲಾಂಬಿಕೆಗೆ ಸಂಗಮಕ್ಕೆ ಬರಬೇಕೆಂದು ಹೇಳಿ ಕಳಿಸುತ್ತಾನೆ. ಆಕೆ ಅಪ್ಪಣ್ಣನವರೊಡನೆ ಹೊರಟು ತಂಗಡಿಗೆ ಬರುತ್ತಾಳೆ. ಅಷ್ಟರಲ್ಲಿ ಬಸವಣ್ಣನವರು ಐಕ್ಯರಾದ ಸುದ್ದಿ ತಿಳಿಯುತ್ತದೆ. ಆಗ ಮುಂದೆ ಹೋಗದೆ. ಅಲ್ಲೇ ಐಕ್ಯಳಾದಳೆಂದು ಪ್ರತೀತಿ. ಬಸವಣ್ಣನವರು ಐಕ್ಯರಾದ ಮೇಲೆ ಬರೆದಿರಬಹುದು ಎಂದು ಅರ್ಥೈಸಿಕೊಳ್ಳಬಹುದಾದ ನೀಲಾಂಬಿಕೆಯ ಅನೇಕ ವಚನಗಳಿವೆ. ಅದನ್ನು ಬಸವಣ್ಣನವರ ಐಕ್ಯದ ಸುದ್ದಿ ತಿಳಿದ ಮೇಲೆ ತಾನು ಐಕ್ಯಳಾಗುವ ಮೊದಲು ತಂಗಡಿಯಲ್ಲಿ ಬರೆದಳೇ? ಬರೆದಿರಲಾರಳು ಎಂಬ ಅನುಮಾನ ಮೂಡಿದಾಗ, ಕೆಲವರು ಆಕೆ ಕಲ್ಯಾಣದಲ್ಲೇ ಇದ್ದಳು ಎಂದು ಹೇಳುವ ಮಾತು ನಿಜವಿರಬಹುದು ಎನ್ನಿಸುತ್ತದೆ. ಆಗ ಅಲ್ಲಿ ಈ ವಚನಗಳನ್ನು ಬರೆದಿರಬಹುದು ಎಂಬ ಅನಿಸಿಕೆ ಮೂಡುತ್ತದೆ.

**ಹೊಸ ದಾಖಲೆ : ಪೋಷಕ ಆಧಾರ**

ಈ ರೀತಿಯ ಒಂದು ಚಿತ್ರವನ್ನು ಗಂಗಾಂಬಿಕೆಯ ಜೀವನದ ಬಗೆಗೆ ದೊರೆತಿರುವ ಅಂಶಗಳ ಆಧಾರದಿಂದ ತರ್ಕಿಸಿ ಚಿತ್ರಿಸಬಹುದು ಈ ಲೇಖನಕ್ಕೆ ಇಂಗಳೇಶ್ವರದ ಕುಲಕರ್ಣಿಯವರ ವಂಶಾವಳಿಯ ಈ ಕೆಳಗಿನ ಭಾಗವನ್ನು ಉಪಯೋಗಿಸಿಕೊಳ್ಳಲಾಗಿದೆ. (ಚೆನ್ಮಲಾದ್ರಿ ಚೇತನ)



ಟಿಪ್ಪಣಿಗಳು

೧. ಮಾದಲಾಂಬಿಕೆ ವಾಸುದೇವನ ಮಗಳು

೨. ಬಲದೇವ, ನೀಲಕಂಠ, ಸಿದರಾಯ (ಸಿದ್ಧಣ್ಣ) ಇವರು ಮಾದಲಾಂಬೆಯ ಅಣ್ಣ ತಮ್ಮಂದಿರು

೩. ಮಾದಲಾಂಬೆಯನ್ನು ಕಶ್ಯಪ ಗೋತ್ರದ ಮಾದರಸನಿಗೆ ಕೊಟ್ಟಿತ್ತು.

೪. ಮಾದಲಾಂಬಿಕೆಯ ಮಗಳೇ ಅಕ್ಕನಾಗಮ್ಮ

೫. ಅಕ್ಕನಾಗಮ್ಮನನ್ನು ನೀಲಕಂಠನ ಮಗನಾದ ಶಿವರಾಯ (ಶಿವದೇವ)ನಿಗೆ ತೆಗೆದುಕೊಂಡಿತ್ತು.

೬. ಅಕ್ಕ ನಾಗಮ್ಮ ಶಿವರಾಯ ಇವರ ಮಗ ಚೆನ್ನಬಸವಣ್ಣ

೭ ಬಸವಣ್ಣನವರ ಅಳಿಯನೇ ಚೆನ್ನಬಸವಣ್ಣ

೧. ಈ ಆಧಾರವನ್ನು ಹಿನ್ನೆಲೆಯಾಗಿಟ್ಟುಕೊಂಡಾಗ ಸಿದ್ಧರಸ-ಬಲದೇವ ಅಣ್ಣ ತಮ್ಮಂದಿರು ಎಂದು ಪುರಾಣಗಳಲ್ಲಿ ಕೊಡದಿರುವ ಸಂಗತಿ ತಿಳಿಯುತ್ತದೆ.

೨. ನೀಲಲೋಚನೆ ಎರಡನೆಯ ಹೆಂಡತಿ ಎಂಬುದು ಸ್ಪಷ್ಟವಾಗುತ್ತದೆ.

೩. ಚೆನ್ನಬಸವಣ್ಣನ ತಂದೆ-ತಾಯಿಯ ಬಗ್ಗೆ ನಿಖರವಾದ ಮಾಹಿತಿ ದೊರೆಯುತ್ತದೆ.

೪. ಬಸವಣ್ಣನು ಎರಡನೆಯ ಲಗ್ನವನ್ನು ಮಾಡಿಕೊಳ್ಳಲು ಕಾರಣವೇನಿರಬಹುದು ಎಂಬುದನ್ನು ತರ್ಕಬದ್ಧವಾಗಿ ಊಹಿಸಲು ಸಾಧ್ಯವಾಗುತ್ತದೆ.

ಸಾಮಾನ್ಯವಾಗಿ ಪುರಾಣಕಾರರು. ಕವಿಗಳು, ದೊಡ್ಡ ದೊಡ್ಡ ಕಾವ್ಯಗಳನ್ನು ರಚಿಸುವಾಗ ಅಥವಾ ಪುರಾಣಗಳನ್ನು ಬರೆಯುವಾಗ ಸಾಹಿತ್ಯದ ಒಂದಲ್ಲ ಒಂದು ಕಡೆ ತಮ್ಮ ವಿಚಾರವಾಗಿ ಹೇಳಿಕೊಂಡಿರುತ್ತಾರೆ. ಆದರೆ ಶರಣರು ವಚನಗಳನ್ನು ವೀರಶೈವ ತತ್ವಗಳನ್ನು ತಾವು ಎತ್ತಿ ಹಿಡಿದಿರುವ ಮೌಲ್ಯಗಳನ್ನು ಅನುಭಾವವನ್ನು ಪ್ರಸ್ತಾಪಿಸಿರುವರು. ಆದರೆ ತಮ್ಮಬಗ್ಗೆ ಹೇಳಿಕೊಂಡಿಲ್ಲ. ಸಾಂದರ್ಭಿಕವಾಗಿ ಕೆಲವು ಅಂಶಗಳನ್ನು ನಾವು ಅವುಗಳಿಂದ ಹೆಕ್ಕಿ ತೆಗೆದುಕೊಳ್ಳಬಹುದು. ಉದಾ: ಬಸವಣ್ಣನವರ,

ಸೆಟ್ಟಿ ಎಂಬೆನೆ ಸಿರಿಯಾಳನ
ಮಡಿವಾಳನೆಂಬೆನೆ ಮಾಚಯ್ಯನ

ಡೋಹರನೆಂಬೆನೆ ಕಕ್ಕಯ್ಯನ
ಮಾದಾರನೆಂಬೆನೆ ಚೆನ್ನಯ್ಯನ
ಆನು ಹಾರುವನೆಂದಡೆ
ಕೂಡಲಸಂಗಯ್ಯ ನಗುವನಯ್ಯ

ಎಂಬ ವಚನದಲ್ಲಿ ಇವರ ಜಾತಿ ಬೇರೆ, ಬೇರಾದರೂ ನೀತಿಯಿಂದ ಇವರೆಲ್ಲ ಒಂದೇ ಎಂಬ ತತ್ವದ ಪ್ರತಿಪಾದನೆಗಾಗಿ ಈ ವಚನ ಹೇಳಿದ್ದರೂ ಇಲ್ಲಿ ಸಿರಿಯಾಳನು ಸೆಟ್ಟಿಯೆಂದೂ, ಮಾಚಯ್ಯನು ಮಡಿವಾಳನೆಂದೂ, ಕಕ್ಕಯ್ಯನು ಡೋಹರನೆಂದೂ ಚೆನ್ನಯ್ಯನು ಮಾದಾರನೆಂದೂ, ಬಸವಣ್ಣನು ಹಾರುವನೆಂದು ಅವರವರ ಕಾಯಕದ ಬಗೆಗೆ ತಿಳಿದುಕೊಳ್ಳಲು ಸಾಧ್ಯಾವಾಗುತ್ತದೆ.

ಸ್ವಂತ ವಚನಗಳಲ್ಲಿ ಗಂಗಾಂಬಿಕೆ ವ್ಯಕ್ತಿತ್ವ

ಹಾಗೆಯೇ ಗಂಗಾಂಬಿಕೆಯು ತನ್ನ ಮಗ ತೀರಿಹೋದಾಗ, ಬಸವಣ್ಣನಿಗೂ ದುಃಖವಾಗಿರಬೇಕೆಂದರಿತು, ಆ ದುಃಖದ ಪರಿಸ್ಥಿತಿಯಲ್ಲಿ.

ಸಾಂದ್ರವಾಗಿ ಹರಗಣ ಭಕ್ತಿಯ ಮಾಳ್ಪನೆಂತೋ
ಮಾದಲಾಂಬಿಕಾನಂದನನು?
ಸಾಂದ್ರವಾಗಿ ಬಿಜ್ಜಳನರಮನೆಯ ನೋಳ್ಪನೆಂತೋ
ಮಾದರಸನ ಮೋಹದ ಮಗನು?
ಸಾಂದ್ರವಾಗಿ ಲಿಂಗಾರ್ಚನೆ, ಲಿಂಗತೃಪ್ತಿ ಅ ನಿಗೆಯ್ವನೆಂತೋ
ಗಂಗಾಪ್ರಿಯ ಕೂಡಲಸಂಗನ ಶರಣ

ಎಂದು ತಾನೇ ದುಃಖಿಸುತ್ತ ಬಸವಣ್ಣನು ದುಃಖತಪ್ತನಾಗಿ ತನ್ನ ಕತವ್ಯಗಳನೆಂತು ನಿರ್ವಹಿಸಬಲ್ಲನೋ ಎಂದು ಚಿಂತಿಸಿದ್ದಾಳೆ. ಈ ವಚನದಿಂದ ಬಸವಣ್ಣನ ತಂದೆ–ತಾಯಿಗಳ ಹೆಸರು ತಿಳಿಯುತ್ತದೆ. ಅವನು ನಿರ್ವಹಿಸುತ್ತಿದ್ದ ಕರ್ತವ್ಯಗಳ ಪರಿಚಯವೂ ಆಗುತ್ತದೆ. ಇಲ್ಲಿ ಗಂಗಾಂಬಿಕೆಯ ವಚನಗಳಲ್ಲಿ ಒಂದು ವಿಶೇಷವಿದೆ. ಆಕೆ ಹೆಚ್ಚಾಗಿ ತನ್ನವೈಯಕ್ತಿಕ ವಿಚಾರಗಳನ್ನೇ ವ್ಯಕ್ತಪಡಿಸಿದ್ದಾಳೆ. ಅದರಲ್ಲೂ ಮುಖ್ಯವಾಗಿ ತನ್ನ ಮಗನ ಸಾವಿನಿಂದಾದ ದುಃಖವನ್ನೇ ಬಹುವಾಗಿ ವ್ಯಕ್ತಪಡಿಸಿದ್ದಾಳೆ. ಸಿಕ್ಕಿರುವ ಒಂಬತ್ತು ವಚನಗಳಲ್ಲಿ ಒಂದು ವಚನ ಹೊರತು ಉಳಿದೆಲ್ಲ ವಚನಗಳಲ್ಲಿ ವೈಯಕ್ತಿಕ ಅಂಶಗಳು ಅಡಗಿವೆ. ಅದರಲ್ಲೂ ಪ್ರಮುಖವಾಗಿ ಮಗನ ಸಾವಿನಿಂದಾದ ನೋವನ್ನು ಹೊರಚೆಲ್ಲಿದ್ದಾಳೆ. ಈಕೆಯ ವಚನಗಳ ಮುದ್ರಿಕೆ 'ಗಂಗಾಪ್ರಿಯ ಕೂಡಲಸಂಗ' ಅಥವಾ 'ಗಂಗಾಪ್ರಿಯ ಕೂಡಲಸಂಗಮದೇವಾ' ಎಂದಿದೆ.

ನೇತ್ರ ಮಧ್ಯದಲ್ಲಿ ಸೂಸುವ ತ್ರಿಣೇತ್ರನ ರೂಪವೆ ಸಿದ್ಧರಾಮಯ್ಯನಾದ.
ಜಿಹ್ವೆಯ ಮಧ್ಯದಲ್ಲಿ ಸೂಸುವ ರುಚಿಯೆ ಸಿದ್ಧರಾಮಯ್ಯನಾದ.
ಶ್ರೋತ್ರದಲ್ಲಿ ತುಂಬಿ ತುಳುಕುವ ಮೂರ್ತಿಯೆ ಸಿದ್ಧರಾಮಯ್ಯನಾದ.
ಘ್ರಾಣದಲ್ಲಿ ತುಂಬಿ ತುಳುಕುವ ಮೂರ್ತಿಯೆ ಸಿದ್ಧರಾಮಯ್ಯನಾದ.
ತ್ವಕ್ಕಿನಲ್ಲಿ ಅರಿವ ಮೂರ್ತಿಯೇ ಅಚ್ಚೊತ್ತಿದ ಸಿದ್ಧರಾಮಯ್ಯನಾದ.
ಇಂತಪ್ಪ ಪರಶಿವಮೂರ್ತಿ ಸಿದ್ಧರಾಮಯ್ಯನ ಪಾದೋದಕವ ಕೊಂಡು
ಪರವಸ್ತು ನಾನಾದೆ, ಗಂಗಾಪ್ರಿಯ ಕೂಡಲಸಂಗಮದೇವಾ.

ಎಂಬ ಅಧ್ಯಾತ್ಮದ ವಿಷಯಕ್ಕೆ ಸಂಬಂಧಿಸಿದ ಈಕೆಯ ಇದೊಂದೇ ವಚನದಿಂದ ಈಕೆಯ ಪಂಚೇಂದ್ರಿಯಗಳನ್ನೆಲ್ಲ ಸಿದ್ಧರಾಮಯ್ಯನೆ ಆವರಿಸಿದ್ದ, ಆಕೆಗೆ ಸಿದ್ಧರಾಮಯ್ಯ ಪರಮಪೂಜನೀಯನಾಗಿದ್ದನೆಂಬುದನ್ನು ಕಂಡುಕೊಳ್ಳಲಾಗಿದೆ.

ಪತಿಯಾಜ್ಞೆಯಲ್ಲಿ ಚರಿಪ ಸತಿಗ್ಯಾಕೆ ಪ್ರತಿಜ್ಞೆಯು?
ಪ್ರತಿಜ್ಞೆಯ ಪತಿಕರದಲ್ಲಿ ಪೋಪದಿರೆ ಯಾತನೆಯಲ್ಲವೆ?
ಇವಳ ಲಿಂಗನಿಷ್ಠೆ ಇವಳಿಗೆ,
ನಮ್ಮ ಲಿಂಗನಿಷ್ಠೆ ಪತಿಯಲ್ಲಿ ಕಾಣಾ
ಗಂಗಾಪ್ರಿಯ ಕೂಡಲಸಂಗಮದೇವಾ.

ಎಂಬ ವಚನದಿಂದ ಗಂಗಾಂಬಿಕೆ ಲಿಂಗನಿಷ್ಠೆಗಿಂತ ಪತಿನಿಷ್ಠೆಗೆ ಮಹತ್ವ ಕೊಡುತ್ತಿದ್ದಳೆಂದು 'ಇವಳ' ಲಿಂಗನಿಷ್ಠೆ 'ಇವಳಿಗೆ' ಎಂಬಲ್ಲಿ ಬಸವಣ್ಣನ ಇನ್ನೊಬ್ಬ ಹೆಂಡತಿಯಾದ 'ಲಿಂಗಪ್ರಾಣಿ' ನೀಲಲೋಚನೆಯನ್ನು ಕುರಿತು ಹೇಳಿದಂತಿದೆ. ನೀಲಲೋಚನೆ ತನ್ನ ಲಿಂಗನಿಷ್ಠೆಗೆ ಹೆಸರಾಗಿದ್ದಾಳೆ. ಅದನ್ನು ಗಮನಿಸಿದ ಪತಿಯೇ ಪರದೈವವೆಂದು ನಂಬಿದ್ದ. ಪತಿಯಂತೆ ನಡೆಯುವುದೇ ಸತಿಯ ಪರಮ ಕತವ್ಯವೆಂದು ಬಗೆದಿದ್ದ ಗಂಗಾಂಬಿಕೆಗೆ ನೀಲಾಂಬಿಕೆಯ ಲಿಂಗನಿಷ್ಠೆ ಸರಿ ಎನ್ನಿಸುತ್ತಿರಲಿಕ್ಕಿಲ್ಲ. ಲಿಂಗಪೂಜೆಯಲ್ಲಿ ಕೆಲವು 'ಪ್ರತಿಜ್ಞೆಗಳನ್ನು ಮಾಡಿ ನಡೆದುಕೊಳ್ಳಬೇಕಾಗುತ್ತದೆ. ಆದರೆ ಪತಿಗೆ ಸಂಬಂಧಿಸಿದ ಕರ್ತವ್ಯ ನಿರ್ವಹಿಸುವಲ್ಲಿ ಪ್ರತಿಜ್ಞೆಯಂತೆ ನಡೆಯಲು ಕಷ್ಟವಾದರೆ ಮನಸ್ಸಿಗೆ ನೋವಾಗುತ್ತದೆ. ಆದ್ದರಿಂದ ಪತಿನಿಷ್ಠೆಯೇ ನನಗೆ ಸರಿಯಾದ ಮಾರ್ಗ ಎಂದು ತನ್ನ ನಿಲುವನ್ನು ಇಲ್ಲಿ ವ್ಯಕ್ತಪಡಿಸುತ್ತಾಳೆ. ಈ ವಚನದಿಂದ ಗಂಗಾಂಬಿಕೆ ನೀಲಾಂಬಿಕೆಯರ ಒಬ್ಬಳೇ ಹೆಂಡತಿ ಇದ್ದಳೆಂದು ನಂಬಿದ್ದಾರೆ. ಅದಕ್ಕೆ ಉತ್ತರ ಇಲ್ಲಿ ದೊರೆಯುತ್ತದೆ. ನೀಲಾಂಬಿಕೆಯ ವಚನಗಳಲ್ಲಿ ಬಸವಣ್ಣನಿಗೆ ಇನ್ನೊಬ್ಬ ಹೆಂಡತಿ ಇರುವ ಅಂಶ ತಿಳಿಯಬರುವುದಿಲ್ಲ. ಆದರೆ ಗಂಗಾಂಬಿಕೆಯ ವಚನಗಳಲ್ಲಿ ವೈಯಕ್ತಿಕ ಅಂಶಗಳು ವ್ಯಕ್ತವಾಗಿರುವುದರಿಂದ, ಬಸವಣ್ಣನಿಗ ಇಬ್ಬರು ಹೆಂಡರಿದ್ದರು ಎಂಬ ಅಂಶವನ್ನು ದೃಢಪಡಿಸುವ ಅಭಿಪ್ರಾಯ ದೊರೆಯುತ್ತದೆ.

ಅವಳಕಂದ ಬಾಲಸಂಗ, ನಿನ್ನ ಕಂದ ಚೆನ್ನಲಿಂಗ,
ಎಂದು ಹೇಳಿದರಮ್ಮಾ ಎನ್ನ ಒಡೆಯರು
ಫಲವಿಲ್ಲದ ಕಂದನಿರ್ಪನವಳಿಗೆ,
ಎನಗೆ ಫಲವಿಲ್ಲ, ಕಂದನಿಲ್ಲ
ಇದೇನೋ ದೂಃಖದಂದುಗ
ಗಂಗಾಪ್ರಿಯ ಕೂಡಲಸಂಗಮದೇವಾ?

ಎಂಬ ತನ್ನ ಮಗನನ್ನು ಕುರಿತಾದ ವಚನ ಹೇಳುವಾಗಲೂ, ಬಸವಣ್ಣನಿಗೆ ಇಬ್ಬರು ಹೆಂಡಿರಿರುವ ಅಂಶ ಸ್ಪಷ್ಟವಾಗುತ್ತದೆ. ಅಲ್ಲದೆ ಇಬ್ಬರಿಗೂ ಒಬ್ಬೊಬ್ಬ ಮಗನಿದ್ದನೆಂದೂ, ನೀಲಾಂಬಿಕೆಯ ಮಗನಿಗೆ ಬಸವಣ್ಣನು ಬಾಲಸಂಗನೆಂದೂ, ಗಂಗಾಂಬಿಕೆಯ ಮಗನಿಗೆ ಚೆನ್ನಸಂಗನೆಂದೂ ಹೆಸರಿಟ್ಟಿದ್ದರೆಂದು ತಿಳಿದುಬರುತ್ತದೆ.

**ಮಗನನ್ನಗಲಿದ ತಾಯಿ ಕರುಳ ಮೊರೆ**

ಇದಲ್ಲದೆ ಇನ್ನೂ ಆರುವಚನಗಳಲ್ಲಿ ಎಂದರೆ ಒಟ್ಟು ಏಳು ವಚನಗಳಲ್ಲಿ ಮಗನನ್ನು ಕಳೆದುಕೊಂಡ ದುಃಖ, ಹಂಬಲ, ಅವನನ್ನು ಪುನಃ ಪಡೆಯುವ ಆಸೆ, ರೋದನ ವ್ಯಕ್ತವಾಗಿದೆ. ನಾನಾ ರೀತಿಯಲ್ಲಿ ಮಗನ ಅಗಲುವಿಕೆಯ ದುಃಖವನ್ನು ಹಾಡಿ, ಹಾಡಿ ಅತ್ತಿರುವಂತಿದೆ. ಶರಣ ಮಡಿವಾಳ ಮಾಚಿದೇವ ಆಕೆಯ ಆಪ್ತ ಶರಣನಿರಬೇಕು, ತನ್ನ ದುಃಖದ ಸಮಯದಲ್ಲಿ.

ಮಡಿವಾಳಣ್ಣಂಗೇಕೆ ಬಾರದವ್ವಾ ಕರುಣಾರಸ?
ಮಡಿವಾಳಣ್ಣಂಗೇಕೆ ಬಾರದವ್ವಾ ಶೌರ್ಯರಸ?
ಮಡಿವಾಳಣ್ಣಂಗೇಕೆ ಬಾರದವ್ವಾ ಅದ್ಭುತರಸ ?
ಮಡಿವಾಳಣ್ಣಂಗೇಕೆ ಬಾರದವ್ವಾ
ಗಂಗಾಪ್ರಿಯ ಕೂಡಲಸಂಗನ ಶರಣಪ್ರಾಣ ದಾನರಸ
ಸಿದ್ಧರಾಮಯ್ಯ ?

ಎಂದು ತನ್ನ ಮಗನಿಗೆ ಪ್ರಾಣದಾನ ಮಾಡಿ ಬದುಕಿಸಬಾರದೆ?ಎಂದು ಹಲುಬಿದ್ದಾಳೆ. ಮತ್ತೊಂದು ವಚನದಲ್ಲಿ.

ನಮ್ಮಯ್ಯನ ಮನದಲ್ಲಿ , ಮಾತಿನಲ್ಲಿ ಸೂಸುವ ಮೂರ್ತಿ
ನೋಡ ನೋಡುತ್ತ ಬಯಲಾಯಿತ್ತಲ್ಲಾ!
ಇದು ಅಲ್ಲಮಯ್ಯ ಮಾಡಿದ ಬೇಟ
ಹೋದುದು ನಿಶ್ಚಯವದಡೆ ಕರುಳು ಕಳವಳಿಸುತ್ತಿದ್ದವು
ಇಂತಪ್ಪ ಕಂದ ಪೋದಡೆಯೂ ಪೋಗಿಲ್ಲ.

ಗಂಗಾಪ್ರಿಯ ಕೂಡಲಸಂಗನ ಶರಣಳ
ಮೊಲೆಯನುಂಬುದಕ್ಕೆ ಬಾರ, ಕೇಳಾ, ಚೆನ್ನಬಸವಣ್ಣ

ಎಂದು ಚೆನ್ನಬಸವಣ್ಣನನ್ನು ತನ್ನ ಮಗ ಸತ್ತಿಲ್ಲ ಎಂದು ಕರುಳು ಹೇಳುತ್ತದೆ. ಅವನನ್ನು ಮೊಲೆಯುಂಬುದಕ್ಕೆ ಬರಲು ಹೇಳೆಂದು ಕೇಳಿರುವುದು, ಮಗನ ಮೇಲಿನ ತಾಯಿಯ ಮೋಹ ಮತ್ತು ಮಮತೆಯನ್ನು ತೋರಿಸುತ್ತದೆ. ಇವಳ ಈ ವಚನಗಳನ್ನು ನೋಡಿದರೆ, ಕಂದನ ಸಾವು ಅವಳಲ್ಲಿ ಅಗಾಧ ದುಃಖವನ್ನುಂಟು ಮಾಡಿತ್ತು. ಶರಣರ, 'ಮರಣವೇ ಮಹಾನವಮಿ ಎಮಗೆ' ಎಂಬ ಭಾವ ಇವಳ ಮನದಾಳಕ್ಕೆ ಇಳಿದಿರಲಿಲ್ಲ. ಬಸವಣ್ಣನಂತೆ ಮೋಹ ಮಮತೆಗಳನ್ನು ದಾಟಿರಲಿಲ್ಲ ಎನಿಸುತ್ತದೆ. ಬಸವಣ್ಣನಾದರೋ ಸಂಗಮನಿಗಾಗಿ ಏನು ತ್ಯಾಗ ಮಾಡಲೂ ಸಿದ್ಧನಾಗಿದ್ದ. ಮಗುವಿನ ಪ್ರಾಣವನ್ನೇ ಕೊಡು ಎಂದರೂ ಯಾವ ದುಃಖವಿಲ್ಲದೆ ಅರ್ಪಿಸಿ ಬಿಡುವಷ್ಟು ನಿಷ್ಠನಿದ್ದ ಎಂಬ ವಿಷಯ ಬಸವಣ್ಣನ,

ಪ್ರತ್ಯಕ್ಷವಾಗಿ ಶಿರಿಯಾಳ ಶೆಟ್ಟಿ ಚಂಗಳವ್ವೆಯರ ಮನೆಗೆ ಬಂದು,
ಅವರ ಮಗನ ಬೇಡುವಂತೆ ಸಂಗಮದೇವ,
ನಿಮ್ಮ ಹೆಸರ ಚಿಕ್ಕ ಸಂಗಯ್ಯನಿದ್ದಿಹನು
ನೀ ಜಂಗಮ ರೂಪಾಗಿ ಬಂದು, ಆತನ ಕೈಹಿಡಿದು
ಎನ್ನ ಮುಂದೆ ಹೆಡೆಮುಡಿಯ ಕಟ್ಟಿ ಖನಿ ಖಂಡವ ಮಾಡಿ
ಬಾಣಸವ ಮಾಡುವಾಗಲೂ
ಎನ್ನುದರದಲ್ಲಿ ಬಂದ ಪುತ್ರನೆಂದು ಮಾಯಕ್ಕೆ ಮರುಗಿದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಕೂಡಲಸಂಗಮದೇವಾ

(ಬಸವಣ್ಣನವರ ಹೆಚ್ಚಿನ ವಚನ ೯೧)

ಎಂಬ ಬಸವಣ್ಣನ ಸ್ಥೈರ್ಯ ಗಂಗಾಂಬಿಕೆಯಲ್ಲಿ ತೋರುವುದಿಲ್ಲ. ಪುತ್ರಶೋಕ ಆಕೆಯನ್ನು ಎಲ್ಲ ತಾಯಂದಿರನ್ನು ಬಾಧಿಸಿದಂತೆ ಬಾಧಿಸುವುದನ್ನು ಈಕೆಯ ವಚನಗಳು ತಿಳಿಸುತ್ತವೆ.

## ಗಣ್ಯಮಾನ್ಯ ಗಂಗಾಯಿ

ಒಟ್ಟಿನಲ್ಲಿ ಗಂಗಂಬಿಕೆಯ ಜೀವನಚಿತ್ರವನ್ನು ಬಿಡಿಸುವಲ್ಲಿ ಕಾಲ ಕಾಲಕ್ಕೆ ಒದಗಿದ ಸಂದಿಗ್ಧತೆ ಸಮಸ್ಯೆಗಳನ್ನು ಇಂದು ನಮಗೆ ದೊರೆಯುವ ಎಲ್ಲ ಆಧಾರಗಳನ್ನು ಸಮೀಕರಿಸಿ ತರ್ಕಸಮ್ಮತವಾದ, ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಕವಿಗಳು, ಪುರಾಣಕಾರರು ಭಕ್ತಿಭಾವ ತುಂಬಿ , ಶರಣರ ಜೀವನವನ್ನು ಉತ್ಪ್ರೇಕ್ಷೆ ಪವಾಡಗಳಿಂದ ತುಂಬಿಸಿರುವರು. ಅವರಲ್ಲಿ ನೀಲಾಂಬಿಕೆಗೆ ದೊರೆತ ಪ್ರಾಶಸ್ತ್ರ

ಗಂಗಾಂಬಿಕೆಗೆ ದೊರೆಯದಿರುವುದು ಸುಸ್ಪಷ್ಟ. ಶರಣರ 'ವ್ಯಕ್ತಿ ಜೀವಿತ'ದ ದಾಖಲೆಗಳಾದ ವಚನಗಳೇ ಇಂದು ಪ್ರಮುಖವಾದ ಆಕರಗಳು. ಗಂಗಾಂಬಿಕೆಯ ವಚನಗಳ ಅಂತರಂಗವನ್ನು ಹೊಕ್ಕು ನೋಡಿದರೆ, ದೊರೆವ ಆಕೆಯ ಅಂತರಂಗದ ಬದುಕು. ತಾಯ್ತನದ ಹಂಬಲ, ಪತಿಸೇವಾ ನಿಷ್ಠೆ ಹಾಗೂ ಧೀರ ಮನೋಭಾವ ವ್ಯಕ್ತವಾಗುತ್ತದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ಪುರಾಣಕಾರರು ತಮಗೆ ಅಂದಂದು ದೊರೆತ ಮಾಹಿತಿಗಳನ್ನು ಆಧರಿಸಿ, ಶರಣರ ಜೀವನ ಚಿತ್ರಿಸಿದಂತೆ ಇಂದು ನಮಗೆ ದೊರೆತ ವಚನಗಳ ಹಾಗೂ ವಂಶಾವಳಿಯ ಆಧಾರಗಳನ್ನು ವಿಶ್ಲೇಷಿಸಿ, ತರ್ಕಬದ್ಧವಾಗಿ, ಬಸವಣ್ಣನವರ ಪ್ರಿಯ ಪತ್ನಿ ಗಂಗಾಂಬಿಕೆಯ ಬದುಕು ಆದರ್ಶಗಳ ಜೀವನ ಕಥನವನ್ನು ಇಲ್ಲಿ ನಿರೂಪಿಸಿದ್ದೇನೆ. ಇದು ಅಂತಿಮವೆಂಬ ಭಾವನೆ ನನಗಿಲ್ಲ. ಇದು ನನ್ನ ನಮ್ರ ಪ್ರಯತ್ನ. ಏನೆಂದರೂ ಬಸವಣ್ಣನವರ ಕಾಲದ ಶರಣ ಕ್ರಾಂತಿ ನೀಡಿದ ಮಹತ್ತರ ಫಲಗಳಲ್ಲಿ, ಗಂಗಾಂಬಿಕೆಯಂಥ ಸಾಧ್ವಿಯರೂ, ಗಣ್ಯಮಾನ್ಯರಾಗಿರುವುದು ಅಭಿಮಾನದ ಸಂಗತಿ.

**ಸಹಾಯಕ ಸಾಮಗ್ರಿ**


೧. ಶಿವಶರಣೆಯರ ಚರಿತ್ರೆಗಳು – ಶ್ರೀ ಫ.ಗು.ಹಳಕಟ್ಟಿ (೧೯೫೫)

೨. ಶಿವಶರಣೆಯರ ವಚನ ಸಂಪುಟ ೫ – ಪ್ರ. ಕರ್ನಾಟಕ ಸರಕಾರ (೧೯೯೩)
(ಸಂ. ಡಾ. ವೀರಣ್ಣ ರಾಜೂರ)

೩. ಬಸವ ಪುರಾಣ –ಭೀಮಕವಿ – ಶ್ರೀ ಬಾಲಲೀಲಾ ಮಹಾಂತ
ಶಿವಯೋಗೀಶ್ವರ ಗ್ರಂಥಮಾಲೆ
ಶ್ರೀ ಮುರುಘಾಮಠ, ಧಾರವಾಡ

೪. ಬಸವೇಶ್ವರ – ಡಾ. ಎಂ. ಚಿದಾನಂದ ಮೂರ್ತಿ

೫. ಇಪ್ಪತ್ತೇಳು ಶಿವಶರಣೆಯರ ವಚನಗಳು – ಡಾ. ಆರ್. ಸಿ. ಹರೇಮಠ
(ಸಂ.) ಕರ್ನಾಟಕ
ವಿಶ್ವವಿದ್ಯಾಲಯ ಧಾರವಾಡ

೬. ಚಿನ್ಮೂಲಾದ್ರಿ ಚೇತನ – (ಲಿಂ. ನಿರಂಜನ ಜಗದ್ಗುರು ಶ್ರೀ
ಮಲ್ಲಿಕಾರ್ಜುನ ಮುರುಘ ರಾಜೇಂದ್ರ
ಮಹಾಸ್ವಾಮಿಗಳ ಸ್ಮರಣ ಸಂಚಿಕೆ)

| | | |
|---|---|---|
| ೭. ಮಾತೋಶ್ರೀ | – | ಮಾತೋಶ್ರೀ ಚಿನಿವಾರ ಗಂಗಮ್ಮ ಸ್ಮರಣ ಸಂಪುಟ, ಮುದ್ದೇಬಿಹಾಳ |
| ೮. ಗಂಗಾಂಬಿಕೆ (ಮಕ್ಕಳ ಪುಸ್ತಕ) | – | ಶ್ರೀ ಮತಿ ಶಾಂತಾದೇವಿ ಮಾಳವಾಡ ಧಾರವಾಡ |
| ೯. ಪರಂಜ್ಯೋತಿ | – | ಶ್ರೀ ಮೂರುಸಾವಿರ ಮಠದ ಮುಖಪತ್ರಿಕೆ ಸಂ. ೯, ಸಂ. ೨೫, ಏಪ್ರಿಲ, ೧೯೯೩ |
| ೧೦. ನೀಲಾಂಬಿಕೆ | – | ಪ್ರೋ. (ಶ್ರೀಮತಿ ಎಚ್. ಎಸ್. ಬೀಳಗಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨ |

■

## ಅನುಬಂಧ

## ಕಾವ್ಯಾಂಜಲಿ

## ಭವ್ಯಮಾನವ

ಭೂಸನೂರು ಮಠದ ಕಾವ್ಯ ಭವ್ಯ. ಅದರ ಉಪಮೆ, ಪ್ರತಿಮೆ, ವಿಷಯ, ಹೇಳುವ ಶೈಲಿ ರಱತಿ ಎಲ್ಲವ ನೂತನ ಹಾಗೂ ಭವ್ಯ. ಇದು ಆಧ್ಯಾತ್ಮಿಕ ಸತ್ವದಿಂದ ಕೂಡಿದ ಕೃತಿ. ಈ ಕೃತಿಯ ಉದ್ದೇಶ ಮನಷ್ಯನ ಭವಿತವ್ಯದ ರೂಪಲಕ್ಷಣಗಳನ್ನು ನಿರೂಪಿಸುವುದಾಗಿದೆ. ಐತಿಹಾಸಿಕ ಸಂಗತಿಯಾಗಿರುವ ವೀರಶೈವ ಶರಣರ ಆಧ್ಯಾತ್ಮಿಕ ಉನ್ನತಿಯನ್ನು ವಸ್ತುವಾಗಿಟ್ಟುಕೊಂಡು ಈ ಕೃತಿ ಮನುಷ್ಯನ ಜೀವನದ ಪದರು, ಪದರುಗಳನ್ನು ಬಿಚ್ಚುತ್ತಾ, ಮನುಷ್ಯ ಹಾಗೂ ಪರತತ್ವಗಳ ಗನ ಸಂಬಂಧವನ್ನು ಬೆಳಕು-ಕತ್ತಲೆ, ಹಗಲು-ರಾತ್ರಿ, ಮಣ್ಣು-ಆಕಾಶ ಮೊದಲಾದ ಅನೇಕ ಬಗೆಯ ದ್ವಂದ್ವಗಳ ಪರಿಭಾಷೆಯ ಮೂಲಕ ಕಾವ್ಯ ಬೆಳೆಯುತ್ತದೆ. ಈ ಕಾವ್ಯ ೬ ಕಾಂಡಗಳನ್ನೊಳಗೊಂಡಿದೆ.

ಶಿವಶರಣರ ಅಭಿವ್ಯಕ್ತಿ ಮೀಮಂಸೆ ಕ್ಲಿಷ್ಟಧ್ಯ ಗಹನವೂ ಆಗಿದೆ. ಲೌಕಿಕ ಮತ್ತು ಅಲೌಕಿಕ ಇವೆರಡರ ನಡುವಿನ ಸಂಬಂಧ ಇಲ್ಲಿದೆ. ಅಕ್ಕನ ವಚನಗಳಲ್ಲಿಯ ವೇದನೆಯ ಕಾವ್ಯಮಯತೆ, ಬಸವಣ್ಣನ ವಚನಗಳಲ್ಲಿಯ ಪ್ರತಿಮಾನಿಷ್ಠತೆ, ಅಲ್ಲಮನ ವಚನಗಳಲ್ಲಿಯ ರಹಸ್ಯಮಯತೆ ಮುಕ್ತಾಯಕ್ಕನ ಮಾತುಗಳಲ್ಲಿಯ ಒಗಟ್ಟು, ದೇವರ ದಾಸಿಮಯ್ಯನ್ನಾಗಿಸಿಕೊಂಡಿದೆ. ಕವಿ ಪ್ರತಿಯೊಬ್ಬ ಶರಣನೂ ಉಪಯೋಗಿಸುವ ಶಬ್ದ ನಿರ್ಲೇಪವಾಗಿದ್ದು ಪಾರದರ್ಶಕವಾಗಿರುವಂತೆ ನೋಡಿಕೊಂಡಿದ್ದಾರೆ.

ಇನ್ನೊಂದು ಮುಖ್ಯವಾದ ಅಂಶವೆಂದರೆ, ಈ ಕಾವ್ಯದ ಸಾಮಗ್ರಿ ಮತ್ತು ಭಾಷೆ, ಅದು ತಳೆಯುವ ರೂಪ ಇವುಗಳನ್ನು ತಿಳಿಯಲು ಹಿಂದಿನ ಕೃತಿಗಳ ಅಧ್ಯಯನ ಅಗತ್ಯ. ಕವಿಯು ತಾನು ವಿವರಿಸುವ ಕತೆಗೆ ಅಕ್ಕನ ಕತೆಯನ್ನು ನಿಮಿತ್ತವಾಗಿ ಬಳಸಿಕೊಂಡಿದ್ದಾರೆ. ಆದುದರಿಂದ ಕತೆಯನ್ನು ಮನಬಂದಂತೆ ಬೀಸಾಗಿ ಬೆಳೆಸಲು ಸ್ವಾತಂತ್ರವಿಲ್ಲವಾಗಿಸಿಕೊಂಡಿದ್ದಾರೆ.

ಇಲಲಿ ಅಕ್ಕನ ಮಾತುಗಳಲ್ಲಿ ಪ್ರಕಟವಾಗುವ ಭಾವದ ಸಾಮರಸ್ಯ ಇನ್ನೂ

ಅಚ್ಚರಿಯನ್ನುಂಟುಮಾಡುತ್ತದೆ. ಮದುವೆಯೆಂಬ ಅನಿವಾರ್ಯ ವಿಧಿಯನ್ನು ಮೋಕ್ಷಸಾಧನೆಗೆ ಉಪಾಯವನ್ನು ಮಹಾದೇವಿ ಮಾಡಿಕೊಳ್ಳುವ ನಿಲುವು ಅಸಮಾನ್ಯವಾದುದು. ಈಕೆ ಮಲ್ಲಿಕಾರ್ಜುನನ ಭಕ್ತಿಯನ್ನು ಪ್ರೀತಿಯನ್ನಾಗಿ ಉಕ್ಕಿ, 'ಕಾಮಕ್ಕೆ ಬದುಕಿ ತೃಪ್ತಿಗೆ ಸತ್ತು ಹೋಗುವ ಗಂಡು, ಗಂಡರು' ಎಂಬ ಬಣ್ಣನೆಯಲ್ಲಿ ಈ ಇಹ ಜೀವನದ ನಿರ್ವೀರ್ಯತೆಯ ವೇಧಕವಾದ ಚಿತ್ರಾವಿದೆ.

ಇಲ್ಲಿ ಕವಿಯು ಮಹಾದೇವಿಯ ವಾದಗಳಲ್ಲಿ ಭಾವಗಳು, ವಿಚಾಗಳು, ಉಪಮೆ ಮತ್ತು ದೃಷ್ಟಾಂತಗಳಂಥ ಅಲಂಕಾರಗಳು ಸಾಲು ಸಾಲಾಗಿ ಬಂದು ವಾದವನ್ನು ಸಮರ್ಥವಾಗಿಸುತ್ತದೆ. ಮಹಾದೇವಿಯ ದಿಗಂಬರ ಸ್ಥಿತಿ ಅವಳ ಸ್ವಾತಂತ್ರ್ಯದ ಅವಳ ಒಂದು ಆತ್ಯಂತಿಕವಾದ ಪ್ರತೀಕವಾಗುತ್ತದೆ. ಮಹಾದೇವಿಯ ತಿಳುವಳಿಕೆಯನ್ನು ನಿರೂಪಿಸುವುದು ಇಲ್ಲಿ ಮುಖ್ಯವಾಗುತ್ತದೆ. ಆ ತಿಳುವಳಿಕೆಯ ಮೂಡಿಬರಲು ಯಾವ ಸನ್ನಿವೇಶಬೇಕೋ ಅಷ್ಟನ್ನು ಚಿತ್ರಿಸಿ, ಮುಂದೆ ಆ ತಿಳಿವಳಿಕೆಯಷ್ಟನ್ನೇ ನಿರೂಪಿಸಲಾಗಿದೆ.

■

## ಗ್ರಂಥ : ಮಾರ್ಗ – ೧– ನೀಲಲೋಚನೆ ಪರಿಶಿಲನೆ

**ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ**

ಧರ್ಮ ಮನುಷ್ಯನ ಜೀವನದಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತಾ ಬಂದಿದೆ. ಕೆಲವೊಂದು ರೀತಿಯ ನಂಬಿಕೆ, ಶ್ರದ್ಧೆಗಳನ್ನೂ, ಗೌರವದ ಭಾವನೆಗಳನ್ನೂ ಮಾನವರು ಧರ್ಮದ ಬಗ್ಗೆ ಬೆಳಸಿಕೊಂಡಿರುತ್ತಾರೆ. ಈ ನಂಬಿಕೆಗಳಿಗೆ, ಪೂಜ್ಯ ಭಾವನೆಗಳಿಗೆ ಶತಮಾನಗಳ ಹಿನ್ನೆಲೆಯೂ ಇರುತ್ತದೆ, ಇಂತಹ ಭಾವನೆಗಳಿಗೆ ಧಕ್ಕೆ ತರುವಂತಹ ಅಭಿಪ್ರಾಯಗಳು, ಧಾರ್ಮಿಕ ಭಾವನೆಯುಳ್ಳ ಜನರಿಗೆ ತುಂಬಾ ನೋವನ್ನುಂಟುಮಾಡುತ್ತವೆ. ಧಾರ್ಮಿಕ ಅಂಶಗಳು ಜನ–ಜೀವನದಲ್ಲಿ ಹಾಸುಹೊಕ್ಕಾಗಿ ಹಬ್ಬಿರುವುದರಿಂದ, ಯಾರಾದರೂ ಆ ಬಗ್ಗೆ ಮಾತಾಡುವಾಗ, ಅಭಿಪ್ರಾಯ ವ್ಯಕ್ತಪಡಿಸುವಾಗ ಬಹು ಎಚ್ಚರಿಕೆ ವಹಿಸಬೇಕಾಗುತ್ತದೆ. ಜವಾಬ್ದಾರಿಯುತವಾಗಿ ನಡೆಯಬೇಕಾಗುತ್ತದೆ. ಶತಮಾನಗಳಿಂದ ಬೆಳೆದು ಬಂದಿರುವ ಧಾರ್ಮಿಕ ಭಾವನೆಗಳ ಬಗ್ಗೆ ಭಿನ್ನಾಭಿಪ್ರಾಯಗಳು ಸಮಸ್ಯೆಗಳು ಹುಟ್ಟಿದಾಗ ಬಹಳ ಎಚ್ಚರಿಕೆಯಿಂದ, ಸೂಕ್ತ ಹಾಗೂ ಸತ್ವಯುತ ಆಧಾರಗಳನ್ನು ಒದಗಿಸಿ, ಆ ಕ್ಷೇತ್ರದ ವಿದ್ವಾಂಸರಿಗೂ ಕೂಡ 'ಸತ್ಯ' ಎಂದು ಕಾಣಿಸಬೇಕು ಎನ್ನುವ ಮಟ್ಟದಲ್ಲಿದ್ದಾಗ ಮಾತ್ರ ಅಂಥ ಅಭಿಪ್ರಾಯ ವ್ಯಕ್ತಪಡಿಸುವುದು ಯೋಗ್ಯ.

**ಆದರ್ಶ ಜೀವಿಗಳ ಆದರ್ಶ ಬದುಕು :**

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣ–ಶರಣೆಯರು ದಿವ್ಯ ಬದುಕನ್ನು ಬದುಕಿ ಹೋದರು. ಆಗ ಧರ್ಮದ ಹೆಸರಿನಲ್ಲಿ ಅಂಧಶ್ರದ್ಧೆ, ಕುರುಡು ನಂಬಿಕೆ, ಸ್ವಾರ್ಥ, ಮೇಲು–ಕೀಳು ಭಾವನೆಗಳು, ಅಸಹಾಯಕ ಜನರ ಶೋಷಣೆ ಮುಂತಾದ ಸಾಮಾಜಿಕ ದುಷ್ಟ ಪ್ರವೃತ್ತಿಗಳು ಬೆಳೆದು, ಜೀವನ ದಾರುಣವಾಗಿತ್ತು. ಬ್ರಾಹ್ಮಣ ಸಮಾಜದ ಧಾರ್ಮಿಕ ಮನೆತನದಲ್ಲಿ ಜನ್ಮ ತಳೆದಿದ್ದ ಬಸವಣ್ಣನವರು, ಆ ಧರ್ಮದ ಅನೇಕ ಅಂಧ ಆಚಾರಗಳ ವಿರುದ್ಧ ಬಾಲಕನಿದ್ದಾಗಲೇ ಪ್ರತಿಭಟಿಸಿದರು. ದೊಡ್ಡವರಾದ ನಂತರ ಕ್ರಾಂತಿಕಾರಕ ವಿಚಾರಗಳನ್ನು ಜನರಲ್ಲಿ ಬಿತ್ತಿ, ಸಮಾಜದಲ್ಲಿ ಪಸರಿಸಿದ್ದ ದೋಷಗಳನ್ನು ನಿವಾರಿಸಲು ಪ್ರಯತ್ನಿಸಿದರು. ಅವರ ವಿಚಾರದ ಪ್ರಭಾವಕ್ಕೆ ಒಳಗಾಗಿ ಅನೇಕರು ಅವರ ಅನುಯಾಯಿಗಳಾಗಿ ಶರಣ–ಶರಣೆಯರೆನ್ನಿಸಿಕೊಂಡರು.

ಅವರೆಲ್ಲರೂ ತಮ್ಮ ಜೀವನದಲ್ಲಿ ಕಂಡುಂಡ ಸತ್ಯವನ್ನು ಅಧ್ಯಾತ್ಮದ ಒರೆಗಲ್ಲಿಗೆ ಹಚ್ಚಿ, ನಂತರ ಅಲ್ಲಿ ಕಂಡುಕೊಂಡ ಆಧ್ಯಾತ್ಮದ ಅಂಶಗಳನ್ನು ವಚನ ರೂಪದಲ್ಲಿ ಬರೆದಿದ್ದಾರೆ. ಪ್ರತಿಯೊಬ್ಬರೂ ತಮ್ಮದೇ ಆದಂತಹ ಒಂದು ಅಂಕಿತವನ್ನು ಇಟ್ಟುಕೊಂಡು, ಆ ಅಂಕಿತವನ್ನು ವಚನದ ಕೊನೆಯಲ್ಲಿ ಉಪಯೋಗಿಸಿದ್ದಾರೆ. ಈ ಅಂಕಿತದ ಆಧಾರದಿಂದ ಪ್ರತಿಯೊಂದು ವಚನದ ವಚನಕಾರರು ಯಾರು ಎಂದು ಹೇಳಬಹುದು. ಅಲ್ಲದೆ ಈ ವಚನಗಳ ಮೂಲಕ ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನೂ, ಧಾರ್ಮಿಕ ರೀತಿ–ನೀತಿಗಳನ್ನೂ, ಶರಣರ ವಿಚಾರಧಾರೆಯನ್ನೂ, ಜೀವನ ದರ್ಶನವನ್ನೂ ತಿಳಿದುಕೊಳ್ಳಬಹುದಾಗಿದೆ. ಶರಣರು ಸ್ವತಃ ಪವಿತ್ರವಾದ ಬದುಕನ್ನು ಬದುಕಿ ಮನುಜಕುಲಕ್ಕೆ ದಿವ್ಯ ಸಂದೇಶವನ್ನು ನೀಡಿ ಹೋಗಿದ್ದಾರೆ. ಮನುಜಕುಲಕ್ಕೆ ಅವು ಆದರ್ಶಪ್ರಾಯವಾಗಿವೆ. ಇತ್ತೀಚಿಗೆ ಕೆಲವು ಪಾಷಂಡರು ತಮ್ಮ ಅನಿಸಿಕೆಗಳಿಗೆ ಮಹತ್ವ ಬರುವಂತೆ ಮಾಡಲು, ಅವುಗಳನ್ನು ವಚನರೂಪದಲ್ಲಿ ಬರೆದು ಶರಣರ ಅಂಕಿತಗಳನ್ನು ಉಪಯೋಗಿಸಿಕೊಂಡು, ಮೂಲ ವಚನಗಳ ಜೊತೆ ಸೇರಿಸಿಬಿಟ್ಟಿದ್ದಾರೆಂಬ ಸಂಶಯವೂ ಇದೆ. (ಆದುದರಿಂದ ವಚನಗಳನ್ನು ಸರಿಯಾಗಿ ಪರಿಷ್ಕರಿಸಿ ನೈಜವಾದವುಗಳು ಯಾವುವು, ಮಧ್ಯೆ ಸೇರಿಸಲ್ಪಟ್ಟ ವಚನಗಳಾವುವು ಎಂದು ವಿಂಗಡಿಸುವ ಕಾರ್ಯ ವಿದ್ವಾಂಸರಿಂದ ಆಗಬೇಕಾದುದು ಆವಶ್ಯವಾಗಿದೆ).

**ವಚನಗಳ ಅರ್ಥೈಸುವಿಕೆ :**

ಒಟ್ಟಿನಲ್ಲಿ ಶರಣರ ಜೀವನವನ್ನು ಅರ್ಥಮಾಡಿಕೊಳ್ಳಲು ವಚನಗಳೇ ಮುಖ್ಯ ಆಧಾರ. ಆದರೆ ಎಲ್ಲ ವಚನಗಳೂ ಎಲ್ಲರೂ ಅರ್ಥಮಾಡಿಕೊಳ್ಳುವಷ್ಟು ಸುಲಭವಾಗಿಲ್ಲ. ಕೆಲವೊಂದು ಸರಳ ವಚನಗಳನ್ನೇನೋ ಎಲ್ಲರೂ ಅರ್ಥಮಾಡಿಕೊಳ್ಳಬಹುದು. ಆದರೆ ಒಗಟಿನಂತಿರುವ, ರೂಪಕಗಳನ್ನು ಉಪಯೋಗಿಸ ರಚಿಸಿರುವ, ಸಾಧಾರಣ ಶಬ್ದಗಳಿಗೆ ಆಧ್ಯಾತ್ಮದ ಹಿನ್ನೆಲೆಯನ್ನು ಒಳಗೊಂಡಿರುವ ವಚನಗಳು, (ಉದಾ ಸೋದರಿಯರೈವರು ಮುರೆಗೆಟ್ಟು ಹೆಂಡಿರಾದರೆನಗೆ=ಜೊತೆಯಲ್ಲೇ ಹುಟ್ಟುವ ಪಂಚೇಂದ್ರಿಯಗಳನ್ನು ಸಂಪೂರ್ಣವಾಗಿ ನನ್ನ ಹತೋಟಿಗೆ ತಂದುಕೊಂಡೆನು) ಸಾಧಾರಣರಾದವರಿಗೆ ಅರ್ಥ ಮಾಡಿಕೊಳ್ಳಲಾಗುವುದಿಲ್ಲ. ಇವುಗಳನ್ನು ಅರ್ಥಮಾಡಿಕೊಳ್ಳಲು ಅಧ್ಯಾತ್ಮದ ಹಿನ್ನೆಲೆ ಇರಬೇಕು; ಶರಣರ ಬಗ್ಗೆ ಸದ್ಭಾವನೆ ಬೇಕು, ವಚನ ಸಾಹಿತ್ಯವನ್ನು ತಪಸ್ಸಿನಂತೆ ಅಭ್ಯಾಸಮಾಡಬೇಕಾದರೆ ಭಾಷೆಯ ಹಿನ್ನೆಲೆ ಶರಣ–ಶರಣೆಯರ ಅಭಿವ್ಯಕ್ತಿಯ ರೀತಿ, ಶರಣರ ಗುರಿ ಇವುಗಳ ಸ್ಪಷ್ಟ ಕಲ್ಪನೆಯೂ ಸಹ ಅವಶ್ಯಕ. ಆಗ ಮಾತ್ರ ಸರಿಯಾದ ರೀತಿಯಲ್ಲಿ ವಚನಗಳನ್ನು ಅರ್ಥೈಸಲು ಸಾಧ್ಯವಾಗಬಹುದು.

ಉದಾಹರಣೆಗೆ, ಮುಕ್ತಾಯಕ್ಕ ತನ್ನ ಅಣ್ಣ ಅಜಗಣ್ಣನು ಐಕ್ಯನಾದಾಗ, ವಿಹ್ವಲಳಾಗಿ ಪ್ರಲಾಪಿಸುತ್ತಿರುವಂತಹ ಸಂದರ್ಭದಲ್ಲಿ ಅಲ್ಲಮ ಪ್ರಭುಗಳು ಹೇಳಿರಬಹುದಾದಂತಹ ವಚನವನ್ನು ತೆಗೆದುಕೊಳ್ಳಬಹುದು.

ಮರಣವೇ ಮಹಾನವಮಿ ಎನ್ನುವ ಶರಣರು ಸಾವನ್ನು, ಲಿಂಗದಲ್ಲಿ ಒಂದಾದಂತೆ ಎಂದು ಬಗೆಯುವರು. ಹೀಗಿರುವಾಗ ಶರಣೆಯಾದ ಮುಕ್ತಾಯಕ್ಕ ಶರಣರಿಗೆ ಸಹಜವಲ್ಲದ ರೀತಿಯಲ್ಲಿ, ಅಜಗಣ್ಣನು ಐಕ್ಯವಾದ ಬಗೆಗೆ ಅತೀವ ದುಃಖಿತಳಾಗಿರುತ್ತಾಳೆ. ಆ ಸಂದರ್ಭದಲ್ಲಿ ಅವರಿಬ್ಬರ ನಡುವೆ ನಡೆದಿರಬಹುದಾದ ಸಂವಾದದಲ್ಲಿ ಮುಕ್ತಾಯಕ್ಕನು ಅಲ್ಲಮಪ್ರಭುವನ್ನು ನೀನಾರೆಂದು ಕೇಳಿದಾಗ,

'ನಾ ನಿನ್ನ ಭಾವನಲ್ಲಯ್ಯನು
ನೀ ನನಗೆ ನೆಗೆವೆಣ್ಣು;
ಸೋದರಿಯರೈವರು ಮತಿಗೆಟ್ಟು ಹೆಂಡಿರಾದರೆನಗೆ'

ಎಂಬ ವಚನದ ಅರ್ಥವನ್ನು 'ನಾನು ನಿನಗೆ ಭಾವನಾಗಬೇಕು ನೀನು ನನಗೆ ನಗೆಣ್ಣಿ, ನನ್ನ ಒಡಹುಟ್ಟಿದವರು ನನ್ನ ಬಲವಂತಕ್ಕೆ ಮಣಿದು, ಅಸಹಾಯಕರಾಗಿ ಹೆಂಡತಿಯರಾದರು ಎಂದು ಹೇಳಿದನೆಂದು ಭಾವಿಸಿದರೆ ಎಂಥ ಅನರ್ಥವಾದೀತು! ನಾನು ನನ್ನ ಒಡಹುಟ್ಟಿದ ಈ ಪಂಚೇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡಿರುವೆನಾಗಿ (ಪಂಚೇಂದ್ರಿಯಗಳ ಗಂಡನಾಗಿ) ನಿನ್ನ ಭಾವನಾಗಿದ್ದೇನೆ. ನೀನೂ ಶರಣೆಯಾಗಿ ಲಿಂಗವೇ ಪತಿಯಾದವಳೂ, ನಾನು ಸಹ ಅದೇ ಮಾರ್ಗದವನಾದುದರಿಂದ, ನೀನು ನನಗೆ ನೆಗೆವೆಣ್ಣು (ನೆಗೆಣ್ಣಿಯಾಗುವಿ). ನನ್ನ ಜೊತೆಯಲ್ಲೇ ಹುಟ್ಟಿದ ಪಂಚೇಂದ್ರಿಯುಗಳನ್ನು ನಾನು ಅಂಕಿತದಲ್ಲಿಟ್ಟುಕೊಂಡಿರುವುದರಿಂದ ಪಂಚೇಂದ್ರಿಯಗಳು ತಮ್ಮ ಜಾಲವನ್ನು ನನ್ನ ಮೇಲೆ ಬೀಸದೆ, ಬೇರೆ ಮಾರ್ಗ ಕಾಣದೆ ನನ್ನ ಅಂಕಿತದಲ್ಲಿ ಉಳಿದಿರುವವು (ಹೆಂಡಿರಾದವರು ಹನ್ನೆರಡನೆಯ ಶತಮಾನದಲ್ಲಿ ಹೆಂಡಿರು ಎಂದರೆ ಅಂಕಿತದಲ್ಲಿರುವವರು ಎಂಬರ್ಥ ಸಾಮಾಜಿಕವಾಗಿ ಆಗ ಮಹಿಳೆಯ ಸ್ಥಿತಿ ಹಾಗೆಯೇ ಇತ್ತು). ಪಂಚೇಂದ್ರಿಗಳ ಅಧೀನಳಾಗಿ ದುಃಖಿಸುತ್ತಿರುವ ಮುಕ್ತಾಯಕ್ಕ, ಅವುಗಳ ಸೋದರಿಯಾಗಿಯೇ ಇದ್ದಾಳೆ. ಅವುಗಳನ್ನು (ಮುಕ್ತಾಯಕ್ಕನ ಸೋದರಿಯರನ್ನು) ಇವನು ಅಂಕಿತದಲ್ಲಿ ತಂದುಕೊಂಡುದರಿಂದ (ಅವುಗಳ ಗಂಡನಾದುದರಿಂದ) ಮುಕ್ತಾಯಕ್ಕನಿಗೆ ಅಲ್ಲಮಪ್ರಭು ಸೋದರಿಯರ ಗಂಡನಾಗಿ "ಭಾವ"ನಾಗುತ್ತಾನೆ ಎಂದು ಅರ್ಥೈಸಬಹುದು. ಒಡಹುಟ್ಟಿದ ತಂಗಿಯರೇ, ತನಗೆ ಹೆಂಡಿರಾದರೆಂಬ ವಾಚ್ಯಾರ್ಥವನ್ನು ಮಾತ್ರ ಗಮನಿಸಿದರೆ, ಅನಾಹುತ, ಶರಣರಿಗೆ ದ್ರೋಹ. ಅದು ಬಿಟ್ಟು ಅಲ್ಲಮಪ್ರಭುವು (ಮೇಲ್ನೋಟಕ್ಕೆ ಆಗುವ ಅರ್ಥವನ್ನೇ ನಿಜವೆಂದು ಪ್ರತಿಪಾದಿಸಿ) ತನ್ನ ಸೋದರಿಯರನ್ನು ಬಲವಂತವಾಗಿ

ಹೆಂಡಿರನ್ನಾಗಿ ಮಾಡಿಕೊಂಡನೆಂದು ಹೇಳಿದಾಗ ಎಂತಹ ಅಪರಾಧವಾಗಬಹುದು?– ಹೀಗೆ ವಚನಗಳು ಮೇಲ್ನೋಟಕ್ಕೆ ಕಾಣುವ ಅರ್ಥಕ್ಕೆ ಭಿನ್ನವಾದ ಅರ್ಥವನ್ನು ಒಳಗೊಂಡಿವೆ. ಅಂತಹುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಶಕ್ತಿಯನು ಮೊದಲು ಬೆಳೆಯಿಸಿಕೊಳ್ಳಬೇಕು. ಇಲ್ಲದೆ ಅವುಗಳಿಗೆ ಅಪಾರ್ಥಕೊಟ್ಟು, ತಮಗ ಅಭಿವ್ಯಕ್ತಿ ಸ್ವಾತಂತ್ರ್ಯವಿದೆಯೆಂದು ಬೆಂಬಲಿಗರ ಬೆಂಬಲದ ಮೂಲಕ ಸಾಧಿಸಹೋದರೆ ಅದು ಶರಣರಿಗೆ ಬಗೆದ ಮಹಾ ಅಪಚಾರವಾಗುತ್ತದೆ. ವಚನವು ಅರ್ಥವಾಗದಿದ್ದಲ್ಲಿ, ಆ ಕ್ಷೇತ್ರದಲ್ಲಿ ಪರಿಣಿತರಾದವರೆಲ್ಲ ಕೂಡಿ, ಅದನ್ನು ಚರ್ಚಿಸಿ, ಆಧಾರಗಳ ಒರೆಗೆ ಹಚ್ಚಿ, ನಂತರ ಸರ್ವಸಮ್ಮತವಾದ ನಿರ್ಣಯಕ್ಕೆ ಬರುವುದು ಸೂಕ್ತ. ಇದು ವಚನಗಳ ವಾಚ್ಯ–ವ್ಯಂಗ್ಯ ಅರಿಯಬಲ್ಲ ವಿದ್ವಾಂಸರ ಲಕ್ಷಣ. ಮತ್ತೊಂದು ವಚನವನ್ನು ಗಮನಿಸೋಣ :– ಬಸವಣ್ಣನವರ ಒಂದು ವಚನ ಹೀಗೆಇದೆ,

ಚನ್ನಯ್ಯನ ಮನೆಯ ದಾಸನ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು,
ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲಸಂಗಮದೇವ ಸಾಕ್ಷಿಯಾಗಿ,

ಇದರ ಶಬ್ದದ ಅರ್ಥಕ್ಕನುಣವಾಗಿ, ಬಸವಣ್ಣನೇ ತನ್ನ ತಂದೆ ಯಾರು, ತಾಯಿ ಯಾರು ಎಂಬುದನ್ನು ಈ ವಚನದಲ್ಲಿ ಹೇಳಿಕೊಂಡಿದ್ದಾನಾಗಿ ಚನ್ನಯ್ಯನ ಮನೆಯ ದಾಸನ ಮಗ ಮತ್ತು ಕಕ್ಕಯ್ಯನ ಮನೆಯ ದಾಸಿಯ ಮಗಳೇ ಆತನ ತಂದೆತಾಯ್ಗಳೆಂದು ತೀರ್ಮಾನಕ್ಕೆ ಬರಬಹುದೆ? ಇಂತಹ ತೀರ್ಮಾನಗಳನ್ನು ವಿದ್ವಾಂಸರಾದವರು ಬರೆದಿಟ್ಟುಬಿಟ್ಟರೆ, ವಚನಗಳ ಆಳವನ್ನು ಅರಿಯಲಾರದ ಸಾಮಾನ್ಯ ಜನರನ್ನು ತಪ್ಪುದಾರಿಗೆ ಎಳೆದಂತಾಗುವುದಿಲ್ಲವೆ? ಶಿಶರಣರ ವಚನಗಳಲ್ಲಿ ಬಹಳ ಆಳವಾದ ಅರ್ಥವಿರುತ್ತದೆ, ಹಾಗಿರುವಾಗ ನಾವು ದುಡುಕಿನಿಂದ ಅರ್ಥೈಸಿದರೆ ಅಕ್ಷಮ್ಯ ಅಪರಾಧವಾಗುತ್ತದೆ–ಈಗ ನೀಲಲೋಚನೆಯ ವಚನವನ್ನೇ ಪರಿಶೀಲಿಸೋಣ. ಆಕೆಯ ಒಂದು ವಚನ ಹೀಗಿದೆ–

ಕಾವಲು ಕಾದಿದ್ದವರು ಕಾವಲಮೀರಿ
ಎನ್ನ ಸಂಗವನೆ ಮಾಡಿದರು ಬಸವಯ್ಯ.
ಎನ್ನ ಸಂಗವ ಮಾಡಿದವರ, ಎನ್ನಯ್ಯ ಬಸವಯ್ಯ ಕಂಡು
ಎನ್ನ ತನುವಿನಲ್ಲಿಯೇ ಅಡಗಿದನಯ್ಯಾ,
ಸಂಗಯ್ಯಾ, ಸ್ವಯಲಿಂಗಿಯಾದೆನಯ್ಯಾ ॥

ಈಗ ನೀಲಾಂಬಿಕೆ ವಿರಹತಾಪದಿಂದ ದುಃಖಿತಳಾಗಿದ್ದಳೆಂಬ ತೀರ್ಮಾನಕ್ಕೆ ಬಂದಿರುವ ವಿದ್ವಾಂಸರಂತಹವರು, ಈ ವಚನ ಓದಿ ' ಆಕೆ ಕಾವಲನ್ನು ಕೆಲವರು ಕಾಯುತ್ತಿದ್ದರು, ಅವರು ಕಾವಲು ಕಾಯುವುದನ್ನು ಬಿಟ್ಟು, ಆಕೆಯ ಸಂಗ ಮಾಡಿದರು. ಅದನ್ನು ಬಸವಣ್ಣನು ನೋಡಿ, ಶಿಕ್ಷಿಸಿದನು. ಆಗ ಆಕೆ ಭಗವಂತನ ಮೊರೆ ಹೊಕ್ಕಳೆಂದು' ಅರ್ಥೈಸಿ, ಆ ಅರ್ಥಕ್ಕೆ ಈ ವಚನವೇ ಆಧಾರ ಎಂದರೆ, ಆಕೆಯ ಬಗ್ಗೆ ಅಪಾರ್ಥವಾಗುವದು ಸಹಜವಲ್ಲವೇ? ವಚನಗಳ ಅಭ್ಯಾಸ ಮಾಡಿದ ಅನುಭವವಿದ್ದವರು ಇಲ್ಲಿ ಕಾವಲ ಕಾದಿದ್ದವರು ಎಂದರೆ, ಮನುಷ್ಯನ ಮನಸ್ಸು ತಪ್ಪು ದಾರಿಗೆ ಹೋಗುವಂತೆ ಪ್ರೇರೇಪಿಸುವಂತಹ ಸಂದರ್ಭದಲ್ಲಿ, ನೀತಿ, ಜ್ಞಾನ, ವಿವೇಕ, ಆಚಾರ ವಿಚಾರಗಳು ಮನಸ್ಸನ್ನು ಎಚ್ಚರಗೊಳಿಸಿ, ತಪ್ಪು ಮಾಡದಂತೆ ಕಾಯುತ್ತವೆ ಎಂದರ್ಥ. ಇಲ್ಲಿ ಜ್ಞಾನ, ವಿವೇಕ, ನೀತಿ, ಮೌಲ್ಯ ಇವುಗಳೇ ಕಾವಲು ಕಾಯುವವರು. ಸಾಧಾರಣ ಮಟ್ಟದಲ್ಲಿ ಮನುಷ್ಯ ಇದ್ದಾಗ, ಅವನಲ್ಲಿ ಕೆಟ್ಟ ಭಾವನೆಗಳು ಉದಯವಾಗಬಹುದು. ಆಗ ಉತ್ತಮ ಗುಣಗಳು ರಕ್ಷಿಸುತ್ತವೆ. ಆದರೆ ನೀತಿಯ ಸ್ವರೂಪವೇ ಆದ ಬಸವಣ್ಣನವರ ಬೋಧನೆಯ, ಜೀವನದ, ತತ್ವಗಳ ಪ್ರಭಾವಕ್ಕೆ ಒಳಗಾದ ಮೇಲೆ, ನೀಲಾಂಬಿಕೆ ಕೆಟ್ಟ ವಿಚಾರಗಳು ಮನದಲ್ಲೂ ಸುಳಿಯದಂತಹ ವ್ಯಕ್ತಿತ್ವವನ್ನು ಎಂದರೆ ಎಲ್ಲಾ ಸದ್ಗುಣಗಳ ಸ್ವರೂಪವೇ ತಾನಾದಾಗ (ಕಾವಲ ಕಾದಿದ್ದವರು ಕಾವಲ ಮೀರಿ ಎನ್ನ ಸಂಗವನೇ ಮಾಡಿದರು) "ಅದನ್ನು ಗಮನಿಸಿದ ಬಸವಣ್ಣನು ಸಂತೋಷದಿಂದ ಮೆಚ್ಚಿ, ನಾನು ಬೇರೆ, ಅವನು ಬೇರೆ ಎಂಬ ಭೇದನೆ ಮರೆತು ನನ್ನಲ್ಲೆ ಒಂದಾದನು "ಎಂಬ ಅರ್ಥ ಇಲ್ಲಿದೆ. 'ಆಕೆ ಬಸವಣ್ಣನನ್ನೇ ಸಂಗಯ್ಯನೆಂದು ತೋರಿದುದ್ದರಿಂದ, ಆ ಸಂಗಯ್ಯ ತನ್ನ ತನುವಿನಲ್ಲೇ ಅಡಗಿದುದರಿಂದ, ಸ್ವಯಲಿಂಗಿಯಾದೆನಯ್ಯಾ' ಎಂಬ ಅರ್ಥ ಪಡೆಯುಬಹುದಾಗಿದೆ, ಆ ತಾಯಿ, ಪತಿಯಾದ ಬಸವಣ್ಣನನ್ನು 'ನನ್ನಯ್ಯ ಬಸವಯ್ಯ' ಎನ್ನುತ್ತಾಳೆ. ಅನೇಕ ವಚನಗಳಲ್ಲಿ ಸಂಗಯ್ಯ-ಬಸವಯ್ಯ ಇಬ್ಬರೂ ಒಂದೇ ಎಂಬ ಭಾವ ವ್ಯಕ್ತಪಡಿಸಿದ್ದಾಳೆ. ಈ ಮಟ್ಟದ ವಿಚಾರಧಾರೆಯಿಂದ ಆಕೆಯ ಆಧ್ಯಾತ್ಮ ಸಾಧನೆ ಉನ್ನತ ಮಟ್ಟದಿತ್ತು ಎಂಬ ತಿಳಿವನ್ನು ನಾವು ಪಡೆಯಬಹುದಾಗಿದೆ, ಆ ಶರಣೆ ಸಾಮಾನ್ಯ ಮಡದಿಯ ಮಟ್ಟವನ್ನ ಮೀರಿ ಎತ್ತರದ, ಅತೀ ಎತ್ತರದ ಆಧ್ಯಾತ್ಮದ ಬದುಕನ್ನು ಬದುಕುತ್ತಿದ್ದಳು. ಅಂತಹ ದಿವ್ಯ ಬದುಕನ್ನು ಬದುಕಿದ ಆ ಮಹಿಮಾನ್ವಿತಳ ಬಗ್ಗೆ ವಿಕೃತವಾಗಿ ವಿಚಾರ ಮಾಡುವದು ಸರಿಯಲ್ಲ.

ಮಾರ್ಗ – ೧ರ ಕುವಿಚಾರಕ್ಕೆ ಕ್ಷಕಿರಣ :

ಈಚೆಗೆ ಬಿಡುಗಡೆಯಾಗಿರುವ ಮಾರ್ಗ ೧ – ಗ್ರಂಥದಲ್ಲಿ ಶಿವಶರಣೆ ನೀಲಾಂಬಿಕೆಯನ್ನು ಕುರಿತು ಲೇಖನಗಳು ಪ್ರಕಟವಾಗಿವೆ. ಅದರಲ್ಲಿ ಆಕೆಯ ಬಗ್ಗೆ

ಕೆಲವು ಉತ್ತಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ. ಆದರೆ ಜೊತೆಯಲ್ಲಿ ಆ ಮಹಾಶಿವಶರಣೆಯ ವ್ಯಕ್ತಿತ್ವಕ್ಕೆ ಕುಂದು ಬರುವಂತಹ ಮಾತುಗಳೂ ಬರೆಯಲ್ಪಟ್ಟಿವೆ. ಈ ಗ್ರಂಥದಲ್ಲಿ ನೀಲಾಂಬಿಕೆಯ ಬಗ್ಗೆ ಬರೆಯುವಾಗ

– 'ಇಲ್ಲಿಯ ಬಹಳಷ್ಟು ವಚನಗಳಲ್ಲಿ ಬಸವಣ್ಣನ ಅಗಲಿಕೆಯ ಆರ್ತನಾದ ಪ್ರಧಾನವಾಗಿ ಕೇಳಿಸುತ್ತದೆ.

– 'ಬಹಳಷ್ಟು ವಚನಗಳಲ್ಲಿ ಬಸವನ ಅಗಲಿಕೆಯ ಧ್ವನಿ ಕೇಳಿ ಬರುವುದಕ್ಕೂ ಬೇರೊಂದು ಕಾರಣವಿರಬೇಕು. ಅದು ಬಹುಶಃ ಅವಳಿಗೆ ನಡುವಯಸ್ಸಿನಲ್ಲಿಯೇ ಗಂಡನ ಸಂಬಂಧ ತಪ್ಪಿಹೋದುದಾಗಿರಬೇಕು.'

– 'ಅವಳು ಬಸವನ ಅಗಲಿಕೆಯನ್ನು ಜೀವನದುದ್ದಕ್ಕೂ ಅನುಭವಿಸಿರಬಹುದು. ದಾಂಪತ್ಯಾತೀತ ದಿವ್ಯ ಬದುಕಿನ ಧ್ವನಿಯಾದ ಇವಳ ವಚನಗಳಲ್ಲಿ ಈ ಮಾನವ ಸಹಜ ವಿರಹ ನುಗ್ಗಿ ಬಂದು ನಿಂತಿರಬಹುದು.'

– 'ಇತ್ಯಾದಿ ವಚನಗಳಲ್ಲಿ ಅವಳ ಪರಿತ್ಯಕ್ತ ಜೀವನದ ಲೌಕಿಕ ನೋವು–ಅಲೌಕಿಕ ಸಿದ್ಧಿಗಳು ಕೇಳಿಸುತ್ತವೆ. ಆದುದರಿಂದ ಅವಳ ವಚನಗಳಲ್ಲಿ ಬಹಳಷ್ಟು ಸಲ ಸ್ಪಂದಿಸುವ ಬಸವನ ಅಗಲಿಕೆಯ ಧ್ವನಿ ಆತನ ನಿಧನದ ಅಳಲಾಗಿರದೆ, ನಡುವಯಸ್ಸಿನಲ್ಲಯೀ ಅವನಿಂದ ಅಗಲಿದ ವ್ಯಥೆಯಾಗಿರಬಹುದೆನ್ನಿಸುತ್ತದೆ.'

– 'ಇಲ್ಲಿ ನೀಲಲೋಚನೆಯ ವ್ಯಕ್ತಿತ್ವದಲ್ಲಿ ಶರಣ ತತ್ವಕ್ಕೆ ಇನ್ನೂ ಮಾಗದ ಘಟ್ಟವನ್ನು ಗುರುತಿಸಬಹುದು.'

– 'ಸಾಮಾನ್ಯವಾಗಿ ಇವಳ ಎಲ್ಲ ವಚನಗಳ ಒಡಲಲ್ಲಿ ಬಸವನ ಅಗಲಿಕೆಯ ಆಲಾಪ ಧ್ವನಿ ಕೇಳಿಸುವುದಕ್ಕೆ ಈ ಭೋಗತ್ಯಕ್ತ ಜೀವನವೇ ಕಾರಣವಾಗಿರಬಹುದು.'

ಪುಸ್ತುತ ಲೇಖನದಲ್ಲಿರುವ ಈ ಮೇಲೆ ಹೇಳಿದ ಸಾಲುಗಳು ನೀಲಲೋಚನೆ ಬಸವಣ್ಣನ ವಿರಹದಿಂದ ಪ್ರಲಾಪಿಸುತ್ತಿದ್ದಳು. ಅತೀ ಸಾಮಾನ್ಯ ಮಹಿಳೆಯಂತೆ, ಆಧ್ಯಾತ್ಮ ಜೀವನದ ನೆರಳೂ ಬೀಳದವಳಂತೆ, ಬಸವೇಶ್ವರನ ತತ್ವಗಳ ಪ್ರಭಾವಕ್ಕೆ ಒಳಗಾಗದೆ ಪಂಚೇಂದ್ರಿಯಗಳ ಹೊಡೆತಕ್ಕೆ ಒಳಗಾಗಿ ಗಂಡನ ಸಂಬಂಧಕ್ಕಾಗಿ ಹಾತೊರಿದಿದ್ದಳು. ಅದು ದೊರೆಯದಾಗ ಆ ಅಳಲನ್ನು ವಚನ ರೂಪದಲ್ಲಿ ಬರೆದು ತೋಡಿಕೊಂಡಿದ್ದಾಳೆ ಎಂಬ ಅರ್ಥ ಕೊಡುತ್ತವೆ. ಎಂದರೆ ಆ ಮಹಾಶಿವಶರಣೆ ಬಸವ ಪಥದ ಪ್ರವಾಹದಿಂದ ಬೇರಾಗಿ, ತನ್ನ ವಿರಹದನೋವನ್ನು ತೋಡಿಕೊಳ್ಳಲು ವಚನ ಬರೆದಳು. ಆ ವಚನಗಳನ್ನು ತಾಡೋಲೆಗಳಲ್ಲಿ ಬರೆದು ಶರಣರು ಮಾನವ ಕುಲದ ಉದ್ಧಾರಕ್ಕಾಗಿ ಉಳಿಸಿ ಹೋಗಿದ್ದಾರೆ ಎಂದು

ತಿಳಿಯಬೇಕಾಗುತ್ತದೆ. ಇಂತಹ ತರ್ಕವನ್ನು ಯಾವ ವಿದ್ವಾಂಸನಾದರೂ ಒಪ್ಪಲು ಸಾಧ್ಯವೆ ಎಂಬುದು ಮೂಲ ಪ್ರಶ್ನೆ. ಆಕೆಯ ವಚನಗಳಲ್ಲಿರುವ ಆಧ್ಯಾತ್ಮ ವಿಚಾರಗಳನ್ನು ಗುರುತಿಸದೆ, ಈ ರೀತಿಯಲ್ಲಿ ಅರ್ಥೈಸಿರುವುದು ಲೇಖಕರ ವಿಚಾರಕ್ಕೆ ಅಪಕ್ವ ರೀತಿಯನ್ನು ಎತ್ತಿ ತೋರಿಸುತ್ತದೆ.

**ನೀಲಾಂಬಿಕೆಯ ನಿಲುಮೆ:**

ನೀಲಾಂಬಿಕೆ ನೂರಿಪ್ಪತ್ತೈದು ವಚನಗಳನ್ನು ಬರೆದಿದ್ದಾಳೆ. ಅದರಲ್ಲಿ ಸುಮಾರು ನಾಲ್ವತ್ತು ವಚನಗಳಲ್ಲಿ ಬಸವಣ್ಣನು ಐಕ್ಯನಾದ ಎಂಬ ಸಂಗತಿಯನ್ನು ನೇರವಾಗಿ ಪ್ರಸ್ತಾಪಿಸಿದ್ದಾಳೆ. ಅದರಲ್ಲಿ 'ಬಸವಣ್ಣ ಬಯಲಾದ ಬಳಿಕ,' 'ಬಸವಣ್ಣ ಸಂಗಯ್ಯನಲ್ಲಿ ಒಂದಾದ ಬಳಿಕ,' ಬಸವಣ್ಣನ ರೂಪು ನಿರೂಪಾದ ಬಳಿಕ,' ಬಸವನ ಶಬ್ದ ನಿಶ್ಯಬ್ದವಾದ ಬಳಿಕ,' ಮುಂತಾದ ಮಾತುಗಳಲ್ಲಿ ಬಸವಣ್ಣ ಐಕ್ಯನಾದ ಅಂಶ ತಿಳಿಸುತ್ತಾಳೆ. ಇಷ್ಟೇ ಅಲ್ಲ, ಆಕೆಯ ಕೆಲ ಮಾತುಗಳಿಂದ ಬಸವಣ್ಣನವರು ಎಲ್ಲಿ, ಹೇಗೆ ಐಕ್ಯರಾದರು ಎಂಬುದು ಯಾರಿಗೂ ಗೊತ್ತಾಗಿರಲಿಲ್ಲ ಎಂದು ಸಹ ಅನ್ನಿಸುತ್ತದೆ. ಈ ಅಂಶ ಆಕೆಯಲ್ಲಿ ದುಃಖ ಉಂಟುಮಾಡಿರಬಹುದು. ತನ್ನ ದುಃಖವನ್ನು ತೋಡಿಕೊಳ್ಳುವಾಗ ಬಸವಣ್ಣನವರು ಮಾಡಿದ ಸಾಧನೆಗಳನ್ನು ಕೊಂಡಾಡುವುದರ ಮೂಲಕ, ತೋಡಿಕೊಂಡಿದ್ದಾಳೆಯೇ ಹೊರತು ವೈಯಕ್ತಿಕ ಆಸೆಗಳನ್ನು ವ್ಯಕ್ತಪಡಿಸಿಲ್ಲ. ಆತನು ಬಯಲಾದ ಬಗೆ, ಚನ್ನ ಬಸವಣ್ಣನಿಗಲ್ಲದೇ ಬೇರಾರಿಗೂ ಗೊತ್ತಿಲ್ಲವೆಂದೂ ಹೇಳಿದ್ದಾಳೆ. ಈ ರೀತಿಯ ವಚನಗಳಲ್ಲಿ ಲೇಖಕರು 'ವಿರಹ ವೇದನೆ' ಕಂಡಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಇದು ಪೂರ್ವಾಗ್ರಹ ಪೀಡಿತವಾದ ಅಭಿಪ್ರಾಯವಲ್ಲದೆ ಬೇರಲ್ಲ. ಬಸವಣ್ಣನವರ ಅತ್ಯಂತ ಉನ್ನತ ವಿಚಾರದ ಹಿನ್ನೆಲೆಯಲ್ಲಿ ಬದುಕಿದ ಆಕೆ, ಬಸವಣ್ಣನವರ ಆಧ್ಯಾತ್ಮಿಕ ತತ್ವಗಳನ್ನು ಅರಗಿಸಿಕೊಂಡು, 'ವಿಚಾರ ಪತ್ನಿ'ಯಾಗಿ ಪತಿಯ ನೆರಳಿನಂತೆ ಬಾಳಿದ್ದಾಳೆ. ಅವರ ಧಾರ್ಮಿಕ–ಸಾಮಾಜಿಕ ಕೆಲಸಗಳಲ್ಲಿ ಸಹಕಾರಿಯಾಗಿ ಬಾಳಿದ ಸಹಧರ್ಮಿಣಿ ಆಕೆ. ಬಸವಣ್ಣನವರ ಕಾರ್ಯಗಳಲ್ಲಿ ಹೆಗಲಿಗೆ ಹೆಗಲು ಕೊಟ್ಟು, ಹೆಜ್ಜೆಯಲ್ಲಿ ಹೆಜ್ಜೆ ಹಾಕಿ ನಡೆದವಳು. ಬಸವನೇ ಸಂಗಯ್ಯ–ಸಂಗಯ್ಯನೇ ಬಸವನೆಂದು ಬಗೆದವಳು. ತನ್ನ ಅರಿವಿಗೆ, ಬದುಕಿಗೆ ಬಸವಣ್ಣನ ಬೋಧನೆಯೇ ಕಾರಣವೆನ್ನುತ್ತಾಳೆ. 'ಆತನೇ ತನಗೆ ಗುರು, ಲಿಂಗ, ಜಂಗಮ, ತಾಯಿ, ತಂದೆ, ಮಗ, ಜಗ, ಶಕ್ತಿ–ಮುಕ್ತಿ,– ಎಲ್ಲ' ಎಂದು ನಾನಾ ರೀತಿಯಿಂದ ಬಸವಣ್ಣನ ಬಗೆಗೆ ಪ್ರೀತಿ, ಗೌರವ, ಮೆಚ್ಚುಗೆಗಳನ್ನು ವ್ಯಕ್ತಪಡಿಸಿದ್ದಾಳೆ. ಶರಣರೆಲ್ಲಾ ಶಿವನನ್ನು ಕೊಂಡಾಡಿದರೆ ಈಕೆ ಶಿವನೇ ಇವನಾಗಿರುವ ಬಸವಣ್ಣನನ್ನು ಕೊಂಡಾಡಿದ್ದಾಳೆ. ಹನ್ನೆರಡನೆಯ ಶತಮಾನದ ಬಸವ ಪ್ರವಾಹದಲ್ಲಿದ್ದ

ಸಾಮಾನ್ಯ ಶರಣರೂ ಸಹ ಆಧ್ಯಾತ್ಮಕ್ಕೆ ಒಳಗಾಗಿದ್ದರೆಂಬುದು ವಚನಗಳನ್ನೋದಿ--ದವರಿಗೆ ಗೋಚರವಾಗುತ್ತದೆ. ಅಲ್ಲದೆ ಅಕ್ಕಮಹಾದೇವಿ, ಬೊಂತಾದೇವಿ ಮುಂತಾದ ಮಹಿಳೆಯರು ಅತೀ ಚಿಕ್ಕ ವಯಸ್ಸಿನಲ್ಲಿಯೇ ವೀರ –ವಿರಾಗಿಣಿಯರಾಗಿ ಬದುಕಿದರು. ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಿ, ಹಡಪದ ಲಿಂಗಮ್ಮ, ಗಂಗಾಂಬಿಕೆ, ನೀಲಾಂಬಿಕೆ ಮುಂತಾದ ಶರಣೆಯರು, ದಾಂಪತ್ಯ ಜೀವನದಲ್ಲಿ ಒಮ್ಮೊಮ್ಮೆ ತಮ್ಮ ಪತಿಗಳಿಗಿಂತಲೂ ಉನ್ನತ ಮಟ್ಟದ ಆಧ್ಯಾತ್ಮದ ಅರಿವನ್ನು ತೋರಿಸಿದ್ದಾರೆ! ಇಂತಹವರ ಬಗೆಗೆ, ಅವರುಗಳು ತಮ್ಮ ಗಂಡಂದಿರೊಡನೆ ಲೈಂಗಿಕ ಸಂಬಂಧ ಇಟ್ಟುಕೊಂಡಿದ್ದರೋ ಇಲ್ಲವೋ ಎಂಬ ಕಲ್ಪನೆ ಮಾಡುವುದೂ ಸಹ ಸಣ್ಣತನವೆನ್ನಿಸುತ್ತದೆ. ಅವರ ಉದಾತ್ತ ವಿಚಾರಗಳೇ ಬೇರೆ; ಅವರ ದಿವ್ಯ ಬದುಕೇ ಬೇರೆ. ಆ ಶರಣೆಯರ ಬಗ್ಗೆ ಈ ರೀತಿ ಆಲೋಚಿಸುವಷ್ಟು ಎತ್ತರದಲ್ಲಿ ಆ ಮಹಿಳೆಯರು ಬದುಕಿದ್ದರು. ಅಂತಹವರಲ್ಲಿ ಒಬ್ಬಳಾದ ನೀಲಾಂಬಿಕೆಯ ಬಗ್ಗೆ ವ್ಯಕ್ತಪಡಿಸಿರುವ ಅಭಿಪ್ರಾಯಗಳು ಅಸಾಧುವಾಗಿವೆ. ಜನಸಾಮಾನ್ಯರಿಗೆ ಮಾರ್ಗದರ್ಶನ ಮಾಡಲು ಸಾಧ್ಯವಾಗುವ ಅನೇಕ ಉತ್ತಮ, ಉದಾತ್ತ ವಿಷಯಗಳು ವಚನ ಸಾಹಿತ್ಯದಲ್ಲಿವೆ, ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷ್ಯ, ಈ ರೀತಿ ವಿಕೃತ ಕಲ್ಪನೆಮಾಡಿ ಸಾಧಿಸುವ ಸಾಧನೆಯಾದರೂ ಏನು? ಇದು ಮೊದಲ ಪ್ರಶ್ನೆ, ಈ ಬಗೆಯ "ಊಹೆ"ಗಳನ್ನು ಸಂಶೋಧನೆಯ ಹೆಸರಿನಲ್ಲಿ ಮಾಡಬೇಕಾದರೆ, ಸಿಕ್ಕಿರುವ ಆಧಾರಗಳು ಯಾವುವು? ಈ ಆಧಾರಗಳು ಎಷ್ಟರಮಟ್ಟಿಗೆ ನಿರ್ಣಯ ಕೊಡುವಷ್ಟು ಗಟ್ಟಿಯಾಗಿ ನಿಲ್ಲಬಲ್ಲವು ಎಂಬುದು ಎರಡನೆಯ ಪ್ರಶ್ನೆ, ಈ ರೀತಿಯಾದ ಕಲ್ಪನೆಗಳು ನೀಲಮ್ಮನಂತಹ ಶ್ರೇಷ್ಠ ಶರಣೆಯ ಬಗ್ಗೆ ಸಲ್ಲದಾಗಿವೆ, ಆಕೆಯ ವಚನಗಳಲ್ಲಿ ಕಂಡುಬರುವ ಆಧ್ಯಾತ್ಮಿಕ ವಿಚಾರಗಳನ್ನು ಗಮನಿಸದೆ, ಈ ರೀತಿ ಅರ್ಥೈಸಿರುವ ಪ್ರಯತ್ನ, ಆ ಶರಣೆಯ ಬಗ್ಗೆ ಅಭಿಪ್ರಾಯ ಕೊಡುವುದಕ್ಕಿಂತ ಹೆಚ್ಚಾಗಿ, ಲೇಖಕರ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ.! ಇಂತಹ ಬರಹವನ್ನು ಓದಿ, ಶರಣರ ಬಗ್ಗೆ ಅಲ್ಪಸ್ವಲ್ಪ ಪರಿಚಯವಿದ್ದ, ಸಾಮಾಜಿಕ ಅಭ್ಯಾಸದ ದೃಷ್ಟಿಯಿಂದ ಶರಣರನ್ನು ಅರ್ಥಮಾಡಿಕೊಂಡಿರುವ ಕೆಲವರು, 'ನೀಲಮ್ಮನಿಗೆ ವಿರಹವೇದನೆ ಇರಬಹುದು. ಮನುಷ್ಯರಿಗೆ ಸಹಜವಾದ ಕಾಮನೆಗಳು ಆಕೆಯಲ್ಲೂ ಇದ್ದಿರಬಹುದು. ಅದನ್ನು ಲೇಖಕರು ಹೇಳಿದರೆ ತಪ್ಪೇನು' ಎಂದು ಸಮರ್ಥಿಸಿದ್ದಾರೆ. ಇದ್ದುದನ್ನು ಇದ್ದಂತೆ ಹೇಳಿದರೆ ತಪ್ಪೇನಿಲ್ಲ ಸಾಮಾನ್ಯ ಸ್ತ್ರೀಯರಲ್ಲಿ ಅಂತಹ ಭಾವನೆಗಳು ಇರಲೂಬಹುದು. ಆದರೆ ನೀಲಮ್ಮ ಅಂತಹ ಮಟ್ಟವನ್ನು ಮೆಟ್ಟಿನಿಂತವಳು. ಆಕೆಯಲ್ಲಿ ವಿರಹದ ಭಾವನೆಗಳನ್ನು ಆರೋಪಿಸುವದು ಕರ್ಣಶೂಲಗಳಾಗಿವೆ. ನೀಲಾಂಬಿಕೆ ಯೌವ್ವನದಲ್ಲಿ ಇರಲಿ, ಬಸವಣ್ಣನವರ ನೇರ ಪ್ರಭಾವ ವಲಯದಲ್ಲಿ ಅನೇಕ ಕಾಲ ಜೀವಿಸಿದ ನಂತರವೂ, ತನ್ನ ನಡುವಯಸ್ಸಿನಲ್ಲಿ ಐಹಿಕ ಸುಖಲೋಲುಪತೆಗೆ ಹಾತೊರೆದು

ಹಾಡಿ-ಹಾಡಿಕೊಂಡು ದುಃಖಿಸಿದಳು ಎಂದು ಭಾವಿಸುವಂತೆ ಮಾಡುವ ಬರಹಗಳು, ಎಂಟುನೂರು ವರ್ಷಗಳ ಹಿಂದೆ ದಿವ್ಯಜೀವನ ಬದುಕಿದ ಆ ಮಹಾತಾಯಿಗೆ ಮಾಡಿದ ಮಹಾ ಅಪಚಾರವಲ್ಲದೆ ಬೇರಲ್ಲ! ಆ ಮಹಾ ಶಿವಶರಣೆಯನ್ನೇಕೆ ನಮ್ಮ ಮಟ್ಟಕ್ಕೆ ಇಳಿಸಿ ಕೂಡ್ರಿಸಬೇಕು? !

ವಿಕೃತ ಕಲ್ಪನೆಯ ತಾಯಿಬೇರು :

ನೀಲಮ್ಮನ ಬಗೆಗೆ ಬರೆದಿರುವ ಲೇಖನಗಳ ಆಧಾರವಾದರೂ ಏನು? ಪವಾಡಕಥೆಯೊಂದನ್ನು ತಲೆಯಲ್ಲಿರಿಸಿಕೊಂಡು, ಆಕೆಯ ನೂರಿಪ್ಪತ್ತೈದು ವಚನಗಳಲ್ಲಿ ಹುಡುದಿ, ಹುಡುಕಿ, ಅಲ್ಲಿಯ ಅಭಿಪ್ರಾಯಗಳನ್ನು, ಪೂರ್ವಗ್ರಹಪೀಡಿತ ಅಭಿಪ್ರಾಯಕ್ಕೆ ಪೋಷಕವಾಗುವಂತೆ ಅರ್ಥೈಸಿಕೊಳ್ಳುವುದು ಪ್ರಾಮಾಣಿಕ ಸಂಶೋಧನೆಯೇ? "ಕೂಟವಿಲ್ಲದ ಪುರುಷನ ಕಂಡು ಕಾಮದ ಆತುರ ಹಿಂಗಿತ್ತೆನಗೆ" ಆಕೆ ಹೇಳಿರುವ ವಚನದಿಂದ ಇದೊಂದು ಸಾಲನ್ನು ಲೇಖಕರು ಹೊರಗೆಳೆದುಕೊಂಡು ಬಂದು ತರ್ಕಿಸಿದ್ದಾರೆ. ಇದೇ ಸಾಲು ಬೇರೆ, ಬೇರೆ ಹಿನ್ನೆಲೆಯಲ್ಲಿ ಭಿನ್ನ, ಭಿನ್ನ ಅರ್ಥಕೊಡಬಹುದು. ಲೇಖಕರ ಜಾಡಿನಲ್ಲೇ ವಿಚಾರ ಮಾಡಿದರೂ, ಆಕೆಯೇ ಹೇಳಿಕೊಂಡಿರುವಂತೆ,

"ಬಸವನ ಅನುಭಾವದಿಂದ ವಿವರವ ಕಂಡು, ವಿಚಾರಗಳನ್ನೂ ಒಪ್ಪಿ, ಅನುಸರಿಸಿ, ವಿಚಾರಪತ್ನಿಯಾಗಿ ಬಾಳಿದಳೆಂದು ಅರ್ಥವಾಗುವುದು, ವಿರಹದ ಪ್ರಲಾಪ ಇಲ್ಲಿ ಕೇಳಿಬರುವುದಿಲ್ಲ.

ಲೇಖಕರು ಆರಿಸಿಕೊಂಡಿರುವ ಮತ್ತೊಂದು ವಚನ (ನೀಲಾಂಬಿಕೆಯದು)

'ಪಾರ್ವತಿಯ ರೂಪಕಂಡು ಪರಶಿವನ ಸಂಗ ನಿಸ್ಸಂಗವಾಗಿ
ತಾಯಿ ಮಗನಂಗದಿಂದ ತನುವಳಿದು, ನಿರಾಭಾರರೂಪವನೆಯ್ದಿ
ಬಸವನ ಅನುಭಾವದಿಂದ ವಿವರವ ಕಂಡು
ವಿಚಾರ ಪತ್ನಿಯಾದೆನಯ್ಯಾ ಸಂಗಯ್ಯ' ಎಂಬುದು,

ಈ ವಚನದಲ್ಲಿ ಲೇಖಕರಿಗೆ " ಮಾನವ ಸಹಜ ವಿರಹ ನುಗ್ಗಿ ಬಂದುದು" ಎಲ್ಲಿ ಕಾಣಿಸಿತು? ಲೇಖಕರು ವಚನದ ಸಾಲುಗಳನ್ನಾಗಲೀ, ಪದಗಳನ್ನಾಗಲೀ ವಿಶ್ಲೇಷಿಸಿ ಅರ್ಥಮಾಡಲು ಹೋಗಿಯೇ ಇಲ್ಲ, ವಚನವನ್ನು ಒಟ್ಟಾಗಿ ತಮ್ಮ ಮನಸ್ಸಿನಂತೆ ಗಮನಿಸಿ, ಅನ್ನಿಸಿದುದನ್ನು ಬರೆದು ಬಿಟ್ಟಿದ್ದಾರೆ. ಲೇಖಕರು ಆರಿಸಿಕೊಂಡಿರುವ ಇನ್ನೊಂದು ವಚನ ಹೀಗಿದೆ,

'ಮಡದಿ ಎನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವನ ಎನಗೆ

ಉಭಯಕುಳವ ಹರಿದು
ಬಸವಂಗೆ ಶಿಶುವಾದೆನು, ಬಸವನೆನ್ನ ಶಿಶುವಾದನು
ಪ್ರಮಥರು ಪುರಾತರು ಸಾಕ್ಷಿಯಾಗಿ
ಸಂಗಯ್ಯನಿಕ್ಕಿದ ದಿಬ್ಯವಮಿೂರದೆ ಬಸವನೊಳಗಾನಡಗಿದೆ.

ಈ ವಚನ ಆಕೆ ದಾಂಪತ್ಯ ಜೀವನದಲ್ಲಿದ್ದು (ರಾಮಕೃಷ್ಣಪರಮಹಂಸರು–ಶಾರದಾದೇವಿಯವರು, ತೀರುನೀಲಕಂಠರು ಮತ್ತು ಅವರ ಪತ್ನಿ ಬದುಕಿದಂತಹ ರೀತಿಯಲ್ಲಿ ಪತಿ–ಪತ್ನಿಯರು ಲೌಕಿಕ ಸಂಬಂಧವಿಲ್ಲದೆ ಬದುಕಿದ ವಿಚಾರವನ್ನು ತಿಳಿಸುತ್ತದೆ. ಈ ವಚನದಲ್ಲಿ ಲೇಖಕರಿಗೆ 'ಬಸವನ ಅಗಲಿಕೆಯ ಧ್ವನಿ' ಕೇಳಿಸಿರುವುದು ಜಗತ್ತಿನ ಪರಮಾಶ್ಚರ್ಯಗಳಲ್ಲಿ ಒಂದಾಗಿದೆ. ! ಬಹುಶಃ ಈ ವಚನವನ್ನು ನೀಲಾಂಬಿಕೆ ವೀರಶೈವ ದೀಕ್ಷೆಯನ್ನು ಕೈಗೊಳ್ಳುವಾಗ ಪ್ರಮಥರು, ಪುರಾತನರ ಎದುರಿನಲ್ಲಿ ಸಂಗಯ್ಯನಿಕ್ಕಿದ ದಿಬ್ಯವಮಿೂರದೆ (ಎಂದರೆ ಸಂಗಯ್ಯನ ಆಣೆಯಾಗಿ) ಬಸವನೊಳಗಾನಡಗಿದೆ ಎಂದರೆ ಬಸವನ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು, ಅವನ ಆಧ್ಯಾತ್ಮ ಜೀವನದಲ್ಲಿ ಬಾಳುತ್ತೇನೆಂದು ಶಪಥಮಾಡಿದಂತೆ ಎನ್ನಿಸುತ್ತದೆ. ಅಂದಿನಿಂದ ತಾವು ಬದುಕುವ ರೀತಿಯನ್ನು ಆಕೆ ಇಲ್ಲಿ ವಿವರಿಸಿದ್ದಾಳೆ. ತಾನು ಬಸವೇಶ್ವರನ ವಿವಾಹ ಪತ್ನಿಯಾಗಿರುವುದರಿಂದ ನನ್ನನ್ನೂ ಬಸವನ ಹೆಂಡತಿಯೆಂದು, ಬಸವನು ನನಗೆ ಗಂಡನೆಂದೂ ತಿಳಿಯಬೇಡಿ. ಈ ಸಂಬಂಧವನ್ನೂ ನಾವು ಇನ್ನೂ ಮುಂದೆ ಹರಿದು ನಾನು ಬಸವನ ಮಗಳಂತೆ ಅವನು ನನ್ನ ಮಗನೆಂಬಂತೆ ಪ್ರಮಥರು, ಪುರಾತರ ಸಾಕ್ಷಿಯಾಗಿ, ಸಂಗಯ್ಯನ ದಿಬ್ಯವ ಮಿೂರದಂತೆ ಬದುಕುತ್ತೇವೆ ಎಂದು ಹೇಳಿರುವ ಸರಳ ಭಾವನೆ ವ್ಯಕ್ತವಾಗುತ್ತದೆ, ಆದರೆ ಲೇಖಕರು ಈವಚನ ಬರೆದು, 'ಈ ಘಟನೆಯನ್ನು ಹೇಗೆ ಅರ್ಥೈಸಿಕೊಳ್ಳಬೇಕೋ' ಎಂಬ ಮಾತಿನಿಂದ ಆ ವಚನವನ್ನು ಅರ್ಥಮಾಡಿ ಕೊಳ್ಳಲಾಗದ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಇದು, ಅವರಿಗೆ ವಚನಗಳ ನಿಜವಾದ ಅರ್ಥವನ್ನು ಕಾಣಲಾರದ ದೌರ್ಬಲ್ಯದ ದ್ಯೋತಕ.

**ಭಾವುಕ ಭಕ್ತನ ಪವಾಡ ಕಥೆ :**

ಹೀಗೆ ಅಪಾರ್ಥಮಾಡುವ ಮನೋಭಾವ ಲೇಖಕರಿಗೆ ಬರಲಿಕ್ಕೆ ಸಹಾಯಕವಾಗುವ ಆಧಾರ ಹರಿಹರನು ಬಸವೇಶ್ವರ ರಗಳೆಯಲ್ಲಿ ಬರೆದಿರುವ ಒಂದು ಪವಾಡ ಕಥೆ. ಹರಿಹರ ಬಸವನ ಭಕ್ತ, ಭಾವುಕ ಕವಿ. ಈಗ ಎಂಟನೂರು ವರ್ಷಗಳ ಹಿಂದೆ, ದೇವರು 'ಭಕ್ತರನ್ನು ನಾನಾರೀತಿಯಿಂದ ಪರೀಕ್ಷಿಸುತ್ತಾನೆ' ಎಂಬ ನಂಬಿಕೆ ಜನರಲ್ಲಿ ಬಹಳವಾಗಿ ಇತ್ತು. ಈ ಹಿನ್ನೆಲೆಯಲ್ಲಿ ಭಾವುಕ ಭಕ್ತನಾದ ಹರಿಹರ 'ಬಸವಣ್ಣ ಜಂಗಮರ ಭಕ್ತನಾಗಿದ್ದ, ಅವರು ಬೇಡಿದುದನ್ನೆಲ್ಲಾ ಕೊಡುತ್ತಿದ್ದ'

ಎಂಬ ತನ್ನ ಭಾವನೆಯನ್ನು ಸತ್ಯವಾಗಿ ತೋರಿಸಬೇಕಿತ್ತು. ಅದಕ್ಕಾಗಿ ತನ್ನ ರಗಳೆಯಲ್ಲಿ ಸುಖೀ ಜಂಗಮನ ಸನ್ನಿವೇಶವೊಂದನ್ನು ಸೃಷ್ಟಿಸಿದ್ದಾನೆ. ಅದರಲ್ಲಿ ಶಿವನೇ ಸುಖೀ ಜಂಗಮನ ವೇಷದಲ್ಲಿ ಬಸವಣ್ಣನ ಮನೆಗೆ ಬರುತ್ತಾನೆ. ಬಸವಣ್ಣ ಅವನನ್ನು ಆದರಿಸಿ ಸತ್ಕರಿಸುತ್ತಾನೆ. ಆ ಜಂಗಮ ಆ ದಿನ ರಾತ್ರಿ ಬಸವೇಶ್ವರನಲ್ಲಿಯೇ ತಂಗುತ್ತಾನೆ. ಆಗ, 'ಎಲೆ ಬಸವರಾಜ ಹೆಂಗೂಸಿಲ್ಲದೆ ಎಂದುಂ ಇದ್ದುದಿಲ್ಲ' ಎಂದು ತನ್ನ ಮನದಾಸೆಯನ್ನು ವ್ಯಕ್ತಪಡಿಸುತ್ತಾನೆ. ಆಗ ಬಸವೇಶ್ವರನು ಅವನ ಇಚ್ಛೆಯನ್ನು ಪೂರೈಸಲು ವೇಶ್ಯೆಯರಿಗೆ ಹೇಳಿಕಳಿಸಿದಾಗ ಯಾರೂ ಬಿಡುವಾಗಿರಲಿಲ್ಲವಂತೆ, ಇದನ್ನು ತಿಳಿದ ನೀಲಾಂಬಿಕೆ 'ಊರೊಳಗೆ ಪೆಣ್ಣಿಲ್ಲದಿರ್ದಡೆ ಜಂಗಮಕ್ಕೆ ಬಸವನೆನ್ನಂ ಕೊಟ್ಟನಲ್ಲದೆ ಮಾಣನು' ಎಂದು ತಾನೇ ಸಿಂಗರಿಸಿಕೊಂಡು ಸಿದ್ಧಳಾಗಿದ್ದಳಂತೆ, ! ಆಗ ಬಸವಣ್ಣನು ನೀಲಾಂಬಿಕೆಯನ್ನು ಜಂಗಮನ ಕೋಣೆಗೆ ಕಳಿಸುತ್ತಾನೆ. ತಕ್ಷಣವೇ ಜಂಗಮನು ಬಸವನ ಭಕ್ತಿಗೆ ಮೆಚ್ಚಿ " ದಶಭುಜಂ ಪಂಚವಕ್ತ್ರಂ ತ್ರಿಣೇತ್ರಂ'ಗಳು ಸಂಗಮದೇವನಾಗುತ್ತಾನೆ !! ಇದನ್ನು ನೋಡಿ ನೀಲಲೋಚನೆ 'ಬಸವಾ, ಬಸವಾ ಜಂಗಮ ದೇವರು ಸಂಗಮದೇವರಾದರು' ಎಂದು ಕೂಗಲು " ತಾಯೇ ತಾಯೇ ಮುನ್ನಿದಾರೆಂದು ಕೊಟ್ಟೆಂ" ಎಂದು ಬಸವಣ್ಣ ನುಡಿಯುವಷ್ಟರಲ್ಲಿ ಶಿವನು ಅಂತರ್ಧಾನವಾಗುತ್ತಾನೆ. ! ಈ ಪ್ರಸಂಗದಲ್ಲಿ ಹರಿಹರ, "ಅಂದು ಮೊದಲಾಗಿ ಗುಣಾನ್ವಿತೆ ಮಾಯಿದೇವಿಯಂ ಶಿವನ ಲತಾಂಗಿಯೆಂದು ಬಸವಂ ಪದೆದರ್ಚಿಸುತ್ತಿರ್ದನುರ್ವಿಯೊಳ್" ಎಂಬ ವಿಷಯವನ್ನು ಲೇಖಕರು 'ನೀಲಲೋಚನೆಯ ಬದುಕಿನಲ್ಲಿ ಒಂದು ತಿರುವು' ಎಂಬ ಲೇಖನವನ್ನು ಮಾರ್ಗ ಒಂದು ಗ್ರಂಥದಲ್ಲಿ ಸೇರಿಸಿದ್ದಾರೆ. ಈ ಸನ್ನಿವೇಶವನ್ನು ಹದಿಮೂರನೆಯ ಶತಮಾನದ ಪರಿಸರದಲ್ಲಿ ಒಬ್ಬ ಭಕ್ತ ಕವಿ ಬರೆದಿದ್ದಾನೆ. ತನ್ನ ಅನುಭವ, ಆಲೋಚನೆಗಳಿಗನುಗುಣವಾಗಿ 'ರವಿಕಾಣದುದು ಕವಿಕಂಡ' ಎಂಬ ಹಿನ್ನೆಲೆಯಲ್ಲಿ ಒಂದು ಪವಾಡ ಕಥೆಯನ್ನು ಸೃಷ್ಟಿಸಿರುವುದನ್ನು ಒಪ್ಪೋಣ. ಆಗಿನ ಸಮಾಜದಲ್ಲಿ ಜನಸಾಮಾನ್ಯರು ಹೆಚ್ಚು ವಿದ್ಯಾವಂತರೂ ವಿಚಾರಪರರೂ ಆಗಿರಲಿಲ್ಲ, ಮುಗ್ಧಭಾವದಿಂದ ಕೂಡಿದವರಾಗಿರುತ್ತಿದ್ದರು. ಜನರಲ್ಲಿ ಭಕ್ತಿಭಾವವನ್ನು ಉದ್ದೀಪನಗೊಳಿಸಲು ರಂಜನೀಯವಾದ ಪವಾಡ ಕಥೆಗಳನ್ನು ಸೃಷ್ಟಿಸುತ್ತಿದ್ದ ಕಾಲವದು, ಆಗ ಜನರು ಆ ಕಥೆಗಳ ಸಾಧ್ಯಾಸಾಧ್ಯತೆಯನ್ನು, ಸತ್ಯಾಸತ್ಯತೆಯನ್ನು ಪ್ರಶ್ನಿಸದೆ, ವಿಮರ್ಶಿಸದೆ ಒಪ್ಪಿ, ನಂಬಿ ಭಕ್ತಿಭಾವನೆಗಳನ್ನು ರೂಢಿಸಿಕೊಳ್ಳುತ್ತಿದ್ದರು. ಅಂತಹ ಒಂದೇ ಒಂದು ಕಥೆಯನ್ನು ಈ ಪಂಡಿತರು ತಮ್ಮ ಊಹೆಗಳಿಗೆ ತಳಹದಿಯನ್ನಾಗಿಟ್ಟುಕೊಂಡು, ನೀಲಲೋಚನೆಯನ್ನು ಆ ಭಾವನೆಗಳ ಕನ್ನಡಕದ ಮೂಲಕ ಅವಲೋಕಿಸಿ, ಅರ್ಥೈಸಿದ್ದಾರೆ. ಈ ನಿಲುವನ್ನು ನಾವು ವಿಶ್ಲೇಷಣೆಯ ಒರೆಗಲ್ಲಿಗೆ ಹಚ್ಚುತ್ತಾ ಹೋದರೆ, ಊರೊಳಗೆ ಪೆಣ್ಣಿಲ್ಲದಿರ್ದೊಡೆ ಜಂಗಮಕ್ಕೆ

ಬಸವನೆನ್ನಂ ಕೊಟ್ಟಲ್ಲದೆ ಮಾಣನು' ಎಂದು ಆಕೆ ಸಿಂಗರಿಸಿಕೊಂಡು ಸಿದ್ಧವಾದುದನ್ನು ನೋಡಿದರೆ, ಈ ತೆರನ ಅನುಭವ ಆಕೆಗೆ ಇದಕ್ಕೆ ಹಿಂದೂ ಸಾಕಷ್ಟಿದ್ದಿರಬಹುದು ಎಂದು ಊಹಿಸಬಹುದು. ಅಲ್ಲದೆ ಆಕೆ ಒಬ್ಬ ಮೂಢ ಸ್ತ್ರೀಯಂತೆ, ಸ್ವಂತ ವಿಚಾರಗಳೇ ಇಲ್ಲದೆ, ಯುಕ್ತಾ ಯುಕ್ತಯೋಚಿಸದ ಮಹಿಳೆಯಾಗಿದ್ದಳೆಂದು ಕಲ್ಪಿಸಬಹುದು. ಇದಕ್ಕಿಂತ ಮಿಗಿಲಾಗಿ ಬಸವಣ್ಣನು ಹೆಂಡತಿಯನ್ನು ತನ್ನ ಸ್ವತ್ತಿನಂತೆ ಉಪಯೋಗಿಸುತ್ತಿದ್ದಿರಬಹುದೆಂದೂ, ಆಕೆಯ ಭಾವನೆಗಳಿಗೆ ಆಸ್ಪದ ಕೊಡದೆ, ತನ್ನ ಇಚ್ಛೆ ಬಂದಂತೆ ಆಕೆಯನ್ನು ಉಪಯೋಗಿಸಿಕೊಳ್ಳುತ್ತಿದ್ದನೆಂದೂ, ಆಕೆಯನ್ನು ಭೋಗವಸ್ತುವಿನಂತೆ, ಒಬ್ಬ ತೊತ್ತಿನಂತೆ ಕಾಣುತ್ತಿದ್ದಿರಬೇಕೆಂದೂ ಅರ್ಥಮಾಡಿಕೊಳ್ಳಲೂಬಹುದು. ಹೀಗೆ ಅರ್ಥೈಸಿದರೆ ಬಸವಣ್ಣನ ವ್ಯಕ್ತಿತ್ವಕ್ಕೆ ಅವನು ಯಾವ ತತ್ವಗಳಿಗಾಗಿ ಬದುಕಿದನೋ, ಹೋರಾಡಿದನೋ ಅವುಗಳಿಗೆ ಕೊಡಲಿ ಪೆಟ್ಟು ಬಿದ್ದಂತಾಗುತ್ತದೆ. ಅವನ ಕ್ರಾಂತಿಕಾರಕ ವಿಚಾರಗಳಲ್ಲಿ ಮಹಿಳೆಯರಿಗೆ ಸಮಾನತೆ ಕೊಡುವುದು ಒಂದು ಮುಖ್ಯವಾದ ಅಂಶವಾಗಿತ್ತು. ಅದಕ್ಕಾಗಿ ಬೇಕಾದಷ್ಟು ಹೆಣಗಿದ; ಮಹಿಳೆಯರು ಸ್ವತಂತ್ರ ವಿಚಾರಗಳಿಂದ ಬಾಳುವುದಕ್ಕೆ ಕಾರಣನಾದ, ಕ್ರಾಂತಿ ಪುರುಷ ಬಸವಣ್ಣ. ಮಹಿಳೆಯ ಗೌರವವನ್ನು ಎತ್ತಿಹಿಡಿದ ಮಹನುಭಾವ ಅವನು. ಅಂತಹವನು ಜಂಗಮನು ಭೋಗಕ್ಕೆ ಹೆಣ್ಣನ್ನು ಕೇಳಿದಾಗ ಹೆಂಡತಿಯನ್ನು ಕೋಣೆಗೆ ಕಳಿಸಿದನೆಂದರೆ ಇಂತಹ ಅಭಿಪ್ರಾಯ ಬಸವಣ್ಣನ ಜೀವನಕ್ಕೆ ಮಸಿಬಳಿದಂತೆ. ಅವನ ಕೆಲಸ ಕಾರ್ಯಗಳನ್ನೆಲ್ಲಾ ಅಲ್ಲಗಳೆದಂತೆಯೇ ಸರಿ. ಹರಿಹರನ ಆ ಪ್ರಸಂಗವನ್ನು ಭಕ್ತನೊಬ್ಬನು ಬರೆದ ಅತಿರಂಜಿತ ಕಥೆ ಎನ್ನುವ ಮಟ್ಟಕ್ಕೆ ಇಟ್ಟುಕೊಳ್ಳಬೇಕಷ್ಟೆ.

**ಬೇಜವಾಬ್ದಾರಿ ಸಂಶೋಧನೆ–ಅಭಿವ್ಯಕ್ತಿ ಸ್ವಾತಂತ್ರ್ಯ**

ಮೇಲಿನ ಪರಿಶೀಲನೆ–ವಿಶ್ಲೇಷಣೆಯಿಂದ ಶಿವಶರಣರ ಸಾಹಿತ್ಯ ಹಾಗೂ ಜೀವನದ ಸಂಗತಿಗಳ ಬಗೆಗೆ ಚಲ್ಲಾಟ ಸರಿಯಲ್ಲ. ವಚನಗಳನ್ನು ಶರಣರ ಜೀವನವನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ. ದುಡುಕಿನಿಂದ ಅಪಚಾರ ಮಾಡಬಾರದು. ಶಿವಶರಣ ಶರಣೆಯರ ಬಗೆಗೆ ಜನರಿಗಿರುವ ಭಕ್ತಿ –ಗೌರವದ ಭಾವನೆಗಳನ್ನು ಕಲಕುವಂತಹ ವಿಚಾರಗಳಿಂದ ಬರುವ ಲಾಭವಾದರೂ ಏನು?

■

## ದೇವರ ಒಲುಮೆಗೆ ಶರಣರು ತೋರಿರುವ ಮಾರ್ಗ

ದೇವರ ಬಗೆಗೆ ಜನರಲ್ಲಿ ನಾನಾ ಬಗೆಯ ಕಲ್ಪನೆಗಳಿವೆ. ದೇವರು ಒಬ್ಬನೇ ಆದರೂ ಅವನಿಗೆ ನಾನಾ ಹೆಸರುಗಳನ್ನಿಟ್ಟು, ಬೇರೆ ಬೇರೆ ರೂಪಕೊಟ್ಟು ಜನರು ಅವನನ್ನು ಆರಾಧಿಸುತ್ತಾರೆ ಯಾವುದೇ ಹೆಸರಿನಿಂದ ಕರೆದರೂ, ಯಾವುದೇ ಆಕಾರಕೊಟ್ಟು ಪೂಜಿಸಿದರೂ ಎಲ್ಲವೂ ಒಬ್ಬನೇ ಆದ ಭಗವಂತನ ಕಡೆಗೆ ಮಾರ್ಗದರ್ಶನ ಮಾಡುತ್ತವೆ. ಅವರವರ ಭಾವಕ್ಕೆ ಅವರವರ ವಿಚಾರಗಳಿಗೆ ಅವರವರ ಅನುಭವಕ್ಕೆ ತಕ್ಕಂತೆ ಅವನನ್ನು ಜನರು ಕಂಡಿದ್ದಾರೆ. ಶರಣರು ಸರ್ವಾಂತರ್ಯಾಮಿಯೂ, ಸರ್ವಶಕ್ತನೂ, ಸರ್ವಜ್ಞನೂ, ವಿರಾಟ ಸ್ವರೂಪಿಯೂ ಆದ ಭಗವಂತನನ್ನು ತಮ್ಮದೇ ಆದ ರೀತಿಯಲ್ಲಿ ವರ್ಣಿಸಿರುವುದನ್ನು ಬಸವಣ್ಣನವರ ಈ ಕೆಳಗಿನ ವಚನದಿಂದ ಅರಿಯಬಹುದು.

ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ,
ಅಪ್ರಮಾಣ, ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೆ
ಕೂಡಲಸಂಗಮ ದೇವಯ್ಯಾ
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ

ಇಲ್ಲಿ ಭಗವಂತನ ಆಳಗಲಗಳನ್ನು ಜಗದಗಲ ಮುಗಿಲಗಲ, ಮಿಗೆಯಗಲ ಎಂದು ಎತ್ತರವನ್ನು ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ ಎಂಬ ಮಾತುಗಳಿಂದಲೂ ವರ್ಣಿಸಿ, ಅವನನ್ನೂ ಅಪ್ರಮಾಣ, ಅಗೋಚರ, ಅಗಮ್ಯ, ಅಪ್ರತಿಮ ಎಂದು ಬಣ್ಣಿಸಿ, ಅಂತಹ ವಿರಾಟ ಸ್ವರೂಪನಾದ ಭಗವಂತನು ಭಕ್ತನಿಗಾಗಿ ಅತ್ಯಂತ ಚಿಕ್ಕರೂಪದಲ್ಲಿ ಇಷ್ಟಲಿಂಗವಾಗಿ ಭಕ್ತನ ಕರಸ್ಥಲದಲ್ಲಿ ಆಸೀನನಾಗಿದ್ದಾನೆ ಎಂದು ಹೇಳಿದ್ದಾರೆ.

ಇಂತಹ ಭಗವಂತನನ್ನು ಮಾನವರೆಲ್ಲರೂ ತಮ್ಮ ಕಷ್ಟ ಪರಿಹಾರಕ್ಕಾಗಿ, ಇಷ್ಟಾರ್ಥ ಸಿದ್ಧಿಗಾಗಿ ಪ್ರಾರ್ಥಿಸುತ್ತಾರೆ; ಪೂಜಿಸುತ್ತಾರೆ; ಧ್ಯಾನಿಸುತ್ತಾರೆ

ಭಗವಂತನನ್ನೂ ಒಲಿಸಿಕೊಳ್ಳಲು ಅಥವಾ ಅವನನ್ನು ಸಾಕ್ಷಾತ್ಕರಿಸಿಕೊಳ್ಳಲು ಮಾನವ ಶತ-ಶತಮಾನಗಳಿಂದ ವಿವಿಧ ಮಾರ್ಗಗಳನ್ನು ಅನುಸರಿಸುತ್ತಾ ಬಂದಿದ್ದಾನೆ. ಎಲ್ಲ ಮಾರ್ಗಗಳ ಗುರಿಯೂ ಒಂದೆ. ಹಾಗೆಯೇ ಶರಣರು ಆ ಭಗವಂತನನ್ನು ಒಲಿಸಲು ಜನರಿಗೆ ತಮ್ಮದೇ ಆದ ಮಾರ್ಗವನ್ನು ತೋರಿಸಿದ್ದಾರೆ.

ವಚನಗಳನ್ನೂ ಸೂಕ್ಷ್ಮವಾಗಿ ಗಮನಿಸಿದರೆ, ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು ಭಕ್ತಸ್ಥಲ, ಮಹೇಶಸ್ಥಾಲ, ಪ್ರಸಾದಿಸ್ಥಲ, ಪ್ರಾಣಲಿಂಗ ಶರಣಸ್ಥಲ ಮತ್ತು ಐಕ್ಯಸ್ಥಲಗಳ ಮುಖಾಂತರ, ಅಷ್ಟಾವರಣ, ಪಂಚಾಚಾರಗಳ ಮೂಲಕ ಸಾಧ್ಯ ಎಂದು ಕಂಡು ಬರುತ್ತದೆ. ಆದರೆ ಲೌಕಿಕ ಜೀವನವನ್ನು ನಡೆಸುತ್ತಾ, ತಮ್ಮ ಕಷ್ಟ ಸುಖಗಳಲ್ಲಿ ಭಗವಂತನ ಕೃಪೆಯನ್ನು ಬಯಸುವ ಜನ ಸಾಮಾನ್ಯರಿಗೆ ಬೋಧಿಸಿರುವ ಶರಣ ಮಾರ್ಗ ಅತ್ಯಂತ ಅನುಪಮವಾಗಿದೆ. ಇಲ್ಲಿ ಧಾರ್ಮಿಕ ಆಚರಣೆಗಿಂತ ನೀತಿಯುತವಾದ ಅರಿವು -ನಡೆನುಡಿಗಳಿಗೆ ಮಹತ್ವಕೊಡಲಾಗಿದೆ. ಜನರು ದೇವರ ಹೆಸರಿನಲ್ಲಿ ಹೇರಳವಾಗಿ ಹಣ ಖರ್ಚುಮಾಡುತ್ತಾ ಅಮೂಲ್ಯವಾದ ಸಮಯವನ್ನು ವ್ಯರ್ಥವಾಗಿ ಕಳೆಯುತ್ತಾ, ಕಠಿಣವಾದ ಆಚರಣೆಗಳಿಂದ ದೇಹ-ಮನಸ್ಸುಗಳನ್ನೂ ದಂಡಿಸುತ್ತಾ, ಇದ್ದರೂ ಹೃದಯದಲ್ಲಿ ದ್ವೇಷ, ಮೋಸ, ಹೊಟ್ಟೆಕಿಚ್ಚು ಮುಂತಾದ ದುಷ್ಟ ಗುಣಗಳನ್ನು ತುಂಬಿಕೊಂಡು ಕುಟುಂಬದಲ್ಲಿ ಸಾಮರಸ್ಯವಿಲ್ಲದೆ, ಸಮಾಜದಲ್ಲಿ ಸಹಕಾರವಿಲ್ಲದೆ ತೊಳಲಾಡುತ್ತಾರೆ. ಸ್ವಭಾವದಲ್ಲಿ ದುಷ್ಟರಾಗಿದ್ದವರ ಮೇಲೆ ದ್ವೇಷ ಉಂಟಾಗಿ ಕಷ್ಟಗಳು ಮುತ್ತಿಕ್ಕುವುದು ಸಹಜ. ಇದನ್ನು ಗಮನಿಸಿದ ಶರಣರು, ಜನಸಾಮಾನ್ಯರಿಗೆ ವಿರಸ ಮಾರ್ಗವನ್ನೂ ಬಿಟ್ಟು ಸುಖ-ಶಾಂತಿಯಿಂದ ಇದ್ದು ದೇವರ ಒಲುಮೆಯನ್ನು ಹೇಗೆ ಪಡೆಯಬೇಕೆಂಬ ಬಗ್ಗೆ ಮಾರ್ಗ ಸೂಚಿಸಿರುವುದನ್ನು ವಚನಗಳನ್ನೂ ಸೂಕ್ಷ್ಮವಾಗಿ ಅವಲೋಕಿಸಿದರೆ ತಿಳಿಯುತ್ತದೆ. ಅಲ್ಲದೆ ಎಲ್ಲರೂ ಷಟ್ಸಸ್ಥಲಗಳನ್ನೇರಿ ಭಗವಂತನಲ್ಲಿ ಒಂದಾಗಲು ಸಾಧ್ಯವಿಲ್ಲವಲ್ಲದೆ, ಅದು ಪ್ರಕೃತಿ ನಿಯಮಾನುಸಾರ ಅಸಾಧ್ಯ ಎಂಬ ವಿಚಾರವನ್ನೂ

ಬಟ್ಟಬಯಲದೆಲ್ಲ ಗಟ್ಟಿಗೊಂಡಡೆ
ಸ್ವರ್ಗ, ಮರ್ತ್ಯ, ಪಾತಾಲಕ್ಕೆ ಠಾವಿನ್ನೆಲ್ಲಿಯದೊ?
ಮೇಘ ನಿರ್ಮಲ ಜಲವೆಲ್ಲಾ ಮುತ್ತಾದೊಡೆ
ಸಪ್ತಸಾಗರಂಗಳಿಗೆ ಉದಕವೆಲ್ಲಿಯದೊ ?
ಕಷ್ಟಜೀವಿ ಮನುಜರೆಲ್ಲಾ ನೆಟ್ಟನೆ ಶಿವಜ್ಞಾನಿಗಳಾದರೆ
ಮುಂದೆ ಭವದ ಬಳ್ಳಿ ಬೆಳೆಯನ್ನೆಲ್ಲಿಯದೊ?
ಇಂತೆಂದುದಾಗಿ

ಕೂಡಲ ಚನ್ನಸಂಗಯ್ಯಾ ಲಕ್ಷ್ಯಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ ಎಂಬ ವಚನದಿಂದ ಸ್ಪಷ್ಟಗೊಳಿಸಿದ್ದಾರೆ.

ಜನಸಾಮಾನ್ಯರು ತಮ್ಮ ಜೀವನದಲ್ಲಿ ನೆಮ್ಮದಿಯಿಂದ ಬದುಕಬೇಕಾದರೆ ಅವರು ಮೋಸ-ದ್ವೇಷಗಳನ್ನು ತೊರೆದು ಇತರರನ್ನು ಪ್ರೀತಿಯಿಂದ ಕಾಣಬೇಕು. ಒಬ್ಬರಿಗೊಬ್ಬರು ಕೆಡುಕು ಮಾಡುವ ಪ್ರಯತ್ನಪಡದೆ ಎಲ್ಲರೂ ಸುಖವಾಗಿರುವಂತೆ ಪರಸ್ಪರ ಸಹಕಾರದಿಂದ ಬದುಕಬೇಕು. ನುಡಿದಂತೆ ನಡೆಯಬೇಕು. ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಶರಣಾರ್ಥಿ ಎನ್ನುವ ಮೋಸಗಾರಿಕೆಯ ಮನೋಭಾವವಿದ್ದಲ್ಲಿ ಮೋಸಗೋಳಿಸುವವನೂ-ಮೋಸಕ್ಕೆ ಒಳಗಾದವನು ಇಬ್ಬರೂ ಸಮಸ್ಯೆಯಲ್ಲಿ ಮುಳುಗಿರಬೇಕಾಗುತ್ತದೆ. ನೆಮ್ಮದಿ ಕನ್ನಡಿಯಗಂಟಾಗುತ್ತದೆ. ಅದಕ್ಕಾಗಿ ಶರಣರು ತಮ್ಮ ವಚನಗಳಲ್ಲಿ, ಮಾನವರಿಗೆ, ಪರಸ್ಪರ ಪ್ರೀತಿಯಿಂದಿರಲು ಬೇಕಾದ ನಡೆ-ನುಡಿ ರೂಢಿಸಿಕೊಳ್ಳಲು ಬೋಧಿಸಿದ್ದಾರೆ. ಮಾನವರು ತಮ್ಮ ತಮ್ಮಲ್ಲಿ ಪರಸ್ಪರ ಪ್ರೀತಿ-ಸಹಕಾರದಿಂದ ಬದುಕಿದ್ದರೆ. ಮುಚ್ಚು ಮರೆಮೋಸ, ತಂತ್ರಗಳಿಲ್ಲದ ಜೀವನ ಸಾಗಿಸಿದರೆ-ಒಳ-ಹೊರಗೆ ಒಂದಾಗಿ ಬದುಕಿದರೆ ಭಗವಂತನಿಗೆ ಪ್ರೀತಿಯಾಗುತ್ತದೆ. ಸುಳ್ಳು-ಸಟೆ ಇಲ್ಲದೆ ಪ್ರಾಮಾಣಿಕತೆಯಿಂದಿರುತ್ತಾ ಸತ್ಯ ಶುದ್ಧ ಕಾಯಕಮಾಡಿ ಜೀವಿಸುತ್ತಿದ್ದರೆ, ಅಂತವರನ್ನು ಕಂಡರೆ ದೇವರು ಮೆಚ್ಚಿ ಅವರ ಬೆಂಗಾವಲಿಗೆ ಇದ್ದು ರಕ್ಷಿಸುತ್ತಾನೆ. ತಮ್ಮ ದೋಷಗಳನ್ನು ಮುಚ್ಚಿಕೊಂಡು ಇತರರ ದೋಷಗಳನ್ನು ಎತ್ತಿ ಆಡುವ ಜನರನ್ನು ಕಂಡರೆ ದೇವರಿಗೆ ಇಷ್ಟವಿಲ್ಲ. ಆಡಂಬರದ ಆಚಾರಗಳನ್ನು ಮಾಡುತ್ತಾ, ದುಷ್ಟತನವನ್ನು ಮನದಲ್ಲಿ ತುಂಬಿಕೊಂಡು ಇತರರ ಬಗ್ಗೆ ವಿಷಕಾರುವವರನ್ನು ಕಂಡರೆ ಭಗವಂತನಿಗೆ ಆಗುವುದಿಲ್ಲ ಆದರೆ ಮೃದು ಮಾತುಗಳಿಂದ ಇತರರಿಗೆ ಹಿತವಾಗುವಂತೆ ಕಾಣುವವರನ್ನೂ, ಪ್ರಾಮಾಣಿಕತೆ, ಮರುಕ ಸಹಕಾರ, ಪ್ರೀತಿಯಿಂದ ಬದುಕುವವರನ್ನು ಕಂಡರೆ ದೇವರಿಗೆ ಪ್ರೀತಿ ಅಂತಹವರಿಗೆ ಸ್ವರ್ಗ ಸುಖವೀಯುತ್ತಾನೆ. ಇಲ್ಲದಿದ್ದಲ್ಲಿ ನರಕ ಸದೃಶವಾದ ಜೀವನ ನೀಡುತ್ತಾನೆ ಎಂದಿದ್ದಾರೆ.

ದೇವರನ್ನು ಒಲಿಸುವ ಮಾರ್ಗಗಳನ್ನು ಶರಣರು ತಮ್ಮ ವಚನಗಳಲ್ಲಿ ವಿವಿಧ ರೀತಿಯಲ್ಲಿ ಹೇಳಿದ್ದಾರೆ. ಅವರು ತೋರಿಸಿರುವ ಮಾರ್ಗವು ಜಾತೀಯವಾಗಿರದೆ ನೀತಿಯುತವಾಗಿದೆ. ದೇವರನ್ನು ಒಲಿಸಲು ಏನುಮಾಡಬೇಕು ಏನುಮಾಡಬಾರದು ಎಂಬುದನ್ನು ತಿಳಿಸುವ ಹಲವಾರು ವಚನಗಳನ್ನು ರಚಿಸಿದ್ದಾರೆ.

ದೇವರು ಒಲಿಯುವನೆಂದು ಹಾಗೆಯೂ ಮಾಡಿದ್ದಾರೆ. ದಿಂಡುರುಳು, ಕೆನ್ನೆಗೆ ಶಸ್ತ್ರ ಹಾಕುವುದ, ಮುಳ್ಳು ಅವುಗೆಯ ಮೇಲೆ ನಿಲ್ಲವುದು ಮುಂತಾದ ಮಾರ್ಗಗಳಿಂದ ದೇಹವನ್ನು ದಂಡಿಸಿದರೆ ದೇವರು ತೃಪ್ತನಾಗಿ ಒಲಿಯುವನೆಂದು

ತಿಳಿದವರು ಸಾಕಷ್ಟು ಮಂದಿ ಪ್ರಾಣಿಬಲಿಯೆಂದ, ಮಕ್ಕಳನ್ನು ದೇವಸ್ಥಾನಕ್ಕೆ ಒಪ್ಪಿಸಿ 'ದೇವದಾಸಿ'ಯರನ್ನಾಗಿ ಮಾಡುವುದೂ ದೇವರೊಲುಮೆಯ ಮಾರ್ಗವೆಂದು ಆ ತಪ್ಪು ದಾರಿ ತುಳಿದವರಿಗೂ ಲೆಕ್ಕವಿಲ್ಲ. ಧರ್ಮಚಿಂತಕರು ಮತ ಸ್ಥಾಪಕರು, ತತ್ವಜ್ಞಾನಿಗಳು, ಜ್ಞಾನಪಿಪಾಸುಗಳು, ಈ ಬಗೆಗೆ ಆಳವಾಗಿ ಯೋಚಿಸಿದ್ದಾರೆ. ಖಚಿತ ನಿಲುವಿಗೆ ಬರಲು ಹಗಲಿರುಳೂ ಪ್ರಯತ್ನ ಮಾಡಿದ್ದಾರೆ. ಸಾಧನೆಗೈದಿದ್ದಾರೆ. ತಮ್ಮ ಸಾಧನೆಯ ಹಾದಿಯಲ್ಲಿ ಸ್ವಾನುಭವದಿಂದ ತಾವು ಕಂಡುಂಡ ಸತ್ಯವನ್ನು ನಂಬಿ ಅದರ ಆಧಾರದ ಮೇಲೆ, ದೇವರ ಒಲುಮೆಗೆ ತಮ್ಮದೇ ಆದ ಮಾರ್ಗವನ್ನು ರೂಪಿಸಿಕೊಳ್ಳುತ್ತ ನಡೆದಿದ್ದಾರೆ. ಈ ಸಾಧಕರು ತಮ್ಮದೇ ಆದ ಮಾರ್ಗವನ್ನು ಸೂಚಿಸಿದ್ದರೂ ಅವು ಸರಿಯಲ್ಲವೆಂಬ ತೀರ್ಮಾನ ಕೊಡಲು ಸಾಧ್ಯವಿಲ್ಲ. ಏಕೆಂದರೆ ಒಂದು ಊರು ಸೇರಲು ನಾನಾ ಮಾರ್ಗಗಳಿರುತ್ತವೆ. ಅದೆಲ್ಲಾ ಮಾರ್ಗಗಳಿಂಲೂ ಊರು ಸೇರಬಹುದು. ಒಂದು ರೋಗ ಗುಣಪಡಿಸಲು ಆಯುರ್ವೇದ, ಹೋಮಿಯೋಪತಿ, ಅಲೋಪತಿ, ನ್ಯಾಚುರೋಪತಿ ಕಾಸ್ಮಿಕ್ ಹೀಲಿಂಗ, ಆಕ್ಯೂಪ್ರೆಶರ್ ಅಕ್ಯುಪಂಕ್ಚರ್ ಮುಂತಾದ ಮಾರ್ಗಗಳಿವೆ. ಯಾರಿಗೆ ಯಾವ ಚಿಕಿತ್ಸೆಯಲ್ಲಿ ನಂಬಿಕೆಯಿದೆಯೇ; ಆ ವಿಧದ ಮೂಲಕ ಚಿಕಿತ್ಸೆ ಪಡೆದು, ರೋಗ ಗುಣಪಡಿಸಿಕೊಂಡವರಿದ್ದಾರೆ. ಯಾರಿಗೆ ಯಾವ ಚಿಕಿತ್ಸೆಯಿಂದ ಗುಣವಾಗುವುದೋ ಅದೇ ಅವರಿಗೆ ಸರಿಯಾದ ಚಿಕಿತ್ಸೆ, ಅದರಂತೆ ದೇವರ ಒಲುಮೆಗೂ ದೇವರ ಅನ್ವೇಷಣೆಗೆ ಹೊರಟವರು ಹೇಳುವ ವಿವಿಧ ಮಾರ್ಗಗಳು ಸತ್ಯವೇ. ಆದರೆ ಈ ಮಾರ್ಗಗಳಲ್ಲಿ ಬಹುಪಾಲು ಮಾರ್ಗಗಳು ಅತ್ಯಂತ ಬಡವರಾದವರು, ಅಂದಂದಿನ ಖರ್ಚನ್ನು ಅಂದಂದೇ ದುಡಿದುಕೊಳ್ಳಬೇಕಾದವರು ಹೊಟ್ಟೆಗೆ ಇದ್ದರೆ ಬಟ್ಟೆಗಿಲ್ಲ, ಬಟ್ಟೆಗಿದ್ದರೆ ಹೊಟ್ಟೆಗಿಲ್ಲ ಎಂಬ ಸ್ಥಿತಿಯಲ್ಲಿ ಇರುವವರು, ಅಶಕ್ತರು, ಅನಾರೋಗ್ಯವಂತರು ಅನುಸರಿಸಲು ಆಗದಂಥವುಗಳಾಗಿವೆ. ಆದುದರಿಂದ ಶರಣರು, ಅದಕ್ಕಾಗಿ ಪ್ರತ್ಯೇಕವಾದ ಸಮಯ ಉಪಯೋಗಿಸದೇ, ತಮ್ಮ ದಿನನಿತ್ಯದ ಕಾಯಕದಲ್ಲಿ ತೊಡಗಿಕೊಂಡೇ, ತಮ್ಮ ಕಾರ್ಯಗಳನ್ನು ಮಾಡಿಕೊಳ್ಳುತ್ತಲೇ ಭಗವಂತನನ್ನು ಒಲಿಸುವ, ಸಾಕ್ಷತ್ಕಾರ ಮಾಡಿಕೊಳ್ಳುವ ಮಾರ್ಗಗಳನ್ನು ಸೂಚಿಸಿ ಮಹದುಪಕಾರ ಮಾಡಿದ್ದಾರೆ.

ಶರಣರ ಮಾರ್ಗಗಳು ಜಾತೀಯವಾಗಿರದೆ ನೀತಿಯುತವಾಗಿವೆ ನೈತಿಕ ನಡುವಳಿಕೆಯೇ ದೇವರೊಲುಮೆಗೆ ಮಾರ್ಗ ಎಂದಿದ್ದಾರೆ. ಶರಣರ ಈ ಮಾರ್ಗಗಳನ್ನು ಅವರುಗಳ ವಚನಗಳಲ್ಲಿ ಕಾಣಬಹುದಾಗಿದೆ. ಸಾಮಾನ್ಯಜನರು ತಮ್ಮ ದಿನನಿತ್ಯದ ಕಾಯಕಗಳಿಗೆ ಯವುದೇ ರೀತಿಯಲ್ಲಿ ವ್ಯತ್ಯಯವಾಗದಂತೆ ದೇವರನ್ನು ಒಲೆಸಿಕೊಳ್ಳವ ಮಾರ್ಗ ಇದಾಗಿದೆ.

ಈ ಮಾರ್ಗಗಳನ್ನು ವಿವಿಧ ಶರಣರು, ವಿವಿಧ ರೀತಿಯಲ್ಲಿ ತಮ್ಮ ವಚನಗಳ ಮೂಲಕ ನಮ್ಮ ಮುಂದಿಟ್ಟಿದ್ದಾರೆ. ಈ ವಚನಗಳು ಕನ್ನಡದ ಉಪನಿಷತ್ತುಗಳಾಗಿವೆ. ದೇವರೊಲುಮೆಗೆ ಏನು ಮಾಡಬೇಕು, ಏನು ಮಾಡಬಾರದೆಂಬುದನ್ನು ಶರಣರು ತಮ್ಮ ತಮ್ಮ ರೀತಿಯಳಲ್ಲೆ ಬೋಧಿಸಿದ್ದಾರೆ.

ಅಕ್ಕ ಮಹಾದೇವಿಯು ದೇವರ ಒಲುಮೆಗಾಗಿ ಗುರು ಕೊಟ್ಟ ಲಿಂಗದ ಬಲ ಕಡಿಮೆ ಎಂದು ಭಾವಿಸಿ, ತೀರ್ಥ ಕ್ಷೇತ್ರಕ್ಕೆ ಹೋದರೆ ದೇವರು ಹೆಚ್ಚು, ತನ್ನ ಕೈಯಲ್ಲಿರುವ ಲಿಂಗ ಕಡಿಮೆಯೆಂದು ಭಾವಿಸಿದಂತಾಗುತ್ತದೆ. ಹಾಗೆ ಮಾಡಿದರೆ ಅಘೋರ ನರಕ ತಪ್ಪದು ಎಂದಿದ್ದಾಳೆ.ಅದಕ್ಕಾಗಿಯೇ ಒಂದು ಕ್ಷಣ ನಿರ್ಮಲ ಮನಸ್ಸಿನಿಂದ ದೃಢ ಭಕ್ತಿಯಿಂದ ತನ್ಮಯಳಾಗಿ ಪ್ರಾರ್ಥಿಸಿದರೆ ದೇವರು ಸಾಕ್ಷಾತ್ಕಾರವಾಗುತ್ತಾನೆ ಎಂಬ ಅಕ್ಕನ ಬೋಧನೆಯನ್ನು ಈ ವಚನ ವ್ಯಕ್ತಪಡಿಸುತ್ತದೆ.

ವೇದಾಗಮಂಗಳೆಲ್ಲ ಕೊಟ್ಟವ ಕುಟ್ಟುತ್ತ ನುಚ್ಚು ತೌಡೂ
ಇದ ಕುಟ್ಟಲೇಕೆ ಅತ್ತ ಇತ್ತ ಹರಿವಮನದ ಶಿರವಣ ಹರಿದೊಡೆ
ಬಟ್ಟಬಯಲು ಮಲ್ಲಿಕಾರ್ಜುನಾ

ಸದುವಚನವೇ ಸದಾಶಿವನ ಒಲುಮೆಯಯ್ಯಾ; 'ಅಯ್ಯಾ ಎಂದೊಡೆ ಸ್ವರ್ಗ' 'ಎಲವೋ ಎಂದರೆ ನರಕ' ಜಗತ್ತಿನಲ್ಲಿ ಡಾಂಭಿಕರೇ ಹೆಚ್ಚು. ದೇವರ ಒಲುಮೆಗೆ ಬೇಕಾದ ಭಕ್ತಿ, ನಿಷ್ಠೆ, ಸ್ಥಿರಮನಸ್ಸಿನ ಪ್ರಾರ್ಥನೆಯೆಲ್ಲದೆ ತಮ್ಮ ಇಚ್ಚೆಗಳನ್ನು ಪೂರೈಸುವ ಸಲುವಾಗಿ ದೇವರ ಒಲುಮೆ ಬೇಕೆಂದು ಜಪ ಮಾಡುತ್ತಾರೆಂಬಂತೆ ಕಾಣಿಸಿಕೊಳ್ಳುತ್ತಾರೆ. ಆದರ ಮನಸ್ಸು ಮಾತ್ರ ಲೌಕಿಕ ವಿಚಾರಗಳಿಂದಲೇ ತುಂಬಿರುತ್ತದೆ. ಇಂತಹ ರೀತಿಯಳಿಂದ ಪ್ರಯೋಜನವಿಲ್ಲ. ದಿನಗಟ್ಟಲೆ ಜಪಮಾಲೆ ಹಿಡಿಯುವುದಕ್ಕಿಂತ, ಕಣಿಯಪೂಜಿಸಿ ಫಲಪ್ರಾಪ್ತಿ ಬೇಡುವುದಕ್ಕಿಂತ ನಿಶ್ಚಲ ಮನಸ್ಸಿನಿಂದ ಒಂದು ಕ್ಷಣ. ಕೊನೆಗೆ ಅರ್ಧ ಕ್ಷಣ ಪ್ರಾರ್ಥಿಸಿದರೂ ದೇವರಿಗೆ ಸಂತೋಷವಾಗುತ್ತದೆ. ಆದುದರಿಂದ ಬಿಸಿ ಬೇಕಾದಲ್ಲೆ ಬೆಂಕಿಯೆಂದ ಪಡೆಯಬೇಕಲ್ಲದೆ ನೀರಿನಲ್ಲೆ ಹುಡುಕಿದರೆ ದೊರೆಯುವುದಿಲ್ಲ. ಹಾಗೆ ಭಗವಂತನ ಒಲುಮೆ ಬೇಕಾದಲ್ಲೆ ನಿಜವಾದ ಭಕ್ತಿಯ ಪ್ರಾರ್ಥನೆ ಮಾಡಬೇಕೇ ಹೊರತಾಗಿ, ಮಣಿಯನ್ನೆಣಿಸುವುದಾಗಲಿ, ಕಣಿಯನ್ನು ಪೂಜಿಸುವುದಾಗಲೀ ಅವಶ್ಯವಿಲ್ಲ ಎಂಬ ಮಾತನ್ನು ,

ಮಣಿಯನೆಣಿಸಿ ದಿನವ ಕಳೆಯಲು ಬೇಡ
ಕಣಿಯ ಪೂಜಿಸಿ ದಿನವ ಕಳೆಯಲು ಬೇಡ
ಕ್ಷಣವಾದರೂ ನಿಜದ ನೆನಹೇ ಸಾಕು
ಕ್ಷಣಕೊಳಗಣ ಅರ್ಧವಾದರೂ ನಿಜದ ನೆನಹೇ ಸಾಕು

ಬೆಂಕಿಯೊಳಗುಳ್ಳ ಬಿಸಿ ನೀರೊಳಗುಂಟೇ ಗುಹೇಶ್ವರ ಎಂಬ
ವಚನದಿಂದ ಅರಿತು ನಮ್ಮನ್ನು ನಾವೇ ತಿದ್ದಿಕೊಳ್ಳಬಹುದಾಗಿದೆ.

ಸಾಕಾರದಲ್ಲಿ ನಂಬಿಕೆ, ನಿರಾಕಾರದಲ್ಲಿ ತನ್ಮಯತೆ ಹಾಗೂ ಪಾರಮಾರ್ಥದಲ್ಲಿ ಸಾಧನೆಗಳಿಲ್ಲದೆ, ಪಟಿ ಬೆಟ್ಟರೂ ವ್ಯರ್ಥ, ತಲೆ ಬೋಳಿಸಿಕೊಂಡರೂ ಪ್ರಯೋಜನವಿಲ್ಲ ಕಾಷಾಯ ಹಾಕಿಕೊಂಡು, ವಿಭೂತಿ, ರುದ್ರಾಕ್ಷಿ ಧರಿಸಿ ಕೊಂಡರೂ ಉಪಯೋ ಅಷ್ಟಕಷ್ಟೆ. ಮುಖ್ಯವಾಗಿ ಅಂತರಂಗದಲ್ಲಿ ಅರಿವು, ಬಹಿರಂಗದಲ್ಲಿ ಅಂತರಂಗದ ವಿಚಾರಕ್ಕೆ ಹೊಂದುವ ನಡತೆ ಇದ್ದರೆ, ಪರಮಾತ್ಮನ ಒಲುಮೆ ಸಾಧ್ಯ ಎಂಬ ವಿಚಾರವು.

ಕೇಶ ಕಾಶಂಬರವ ನಿಕ್ಕೆದೊಡೇನು?
ವಿಭೂತಿ ರುದ್ರಾಕ್ಷಿ ಧರಿಸಿದೊಡೇನು?
ಸಾಕಾರದಲ್ಲಿ ಸನ್ಮತನಲ್ಲ, ನಿರಾಕಾರದಲ್ಲಿ ನಿರುತನಲ್ಲಿ
ಪರಮರ್ಥದಲ್ಲಿ ಪರಿಣಾಮಿಯಲ್ಲ, ಇದು ಕಾರಣವಾಗಿ
ಕೂಡಲ ಚೆನ್ನಸಂಗಮದೇವಾ, ತುರುಬಾಗಲೆ, ಜಡೆಯಾಗಲೆ
ಬೋಳಾಗಲೆ, ಅರಿವು ಆಚಾರವುಳ್ಳೊಡೆ ಜಂಗಮ ಎಂಬ
ವಚನದಲ್ಲಿ ಮನವರಿಕೆಯಾಗುತ್ತದೆ.

ದೇವರನ್ನು ಕಾಣಲು ಕೆಲವರು ದಾಶಿ ಮುಂತಾದ ತೀರ್ಥಕ್ಷೇತ್ರಗಳಿಗೆ ಹೋಗಿ, ಪ್ರಯಾಣ ಪರಸ್ಥಳವಾಸದಿಂದ ಬಳಲುತ್ತಾರೆ. ಅಂತಹ ನಡೆಗಳ ಅವಶ್ಯವಿಲ್ಲ. ತನ್ನನ್ನು ಅರಿದು, ಪರಮಾತ್ಮನನ್ನು ತಮ್ಮ ಉತ್ತಮ ನಡೆ ನುಡಿಗಳಿಂದ ಸತ್ಕಾರ್ಯ –ಸಾಧನೆಗಳ ಮೂಲಕ ಕಾಣಲು ಸಾಧ್ಯ ಎಂಬ ತಿಳಿವಳಿದೆ

ಈಶ್ವರನ ಕಾಂಬುದೊಂಬಾಸೆಯಲೊಳಡೆ ಪರದೇಶಕ್ಕೆ ಹೋಗಿ ಬಳಲದಿರು
ಕಾಶಿಯಲ್ಲಿ ಕಾಯುವ ವಿನಾಶವ ಮಾಡಬೇಡ
ನಿನ್ನಲ್ಲಿ ನೀ ತಿಳಿದು ನೋಡಾ ಜಗವು ನಿನ್ನೊಳಗೆಂದಾತ ಅಂಬಿಗರ
ಚೌಡಯ್ಯಾ ಎಂಬ ವಚನದಿಂದ ಉಂಟಾಗುತ್ತದೆ.

ಲೌಕಿಕರು ಸಾಮಾನ್ಯವಾಗಿ, ತಮ್ಮಲ್ಲಿರುವ ದೋಷಗಳ ಕಡೆಗೆ ಕೊಡುವುದಿಲ್ಲ ತಾವು ಬಹಳ ಒಳ್ಳೆಯವರು ಎಂದುಕೊಂಡು ಪರರ ದೋಷಗಳನ್ನೇ ಗಮನಿಸಿ ಟೀಕಿಸುತ್ತಾರೆ. ಇತರರ ದೋಷಗಳನ್ನು ತಿದ್ದಲು ಮುಂದಾಗುತ್ತಾರೆ. ಅದು ಬಿಟ್ಟು ಪ್ರತಿಯೊಬ್ಬರೂ ತಮ್ಮ, ದೋಷಗಳ ಕಡೆಗೆ ಗಮನಕೊಟ್ಟು ಅವುಗಳನ್ನು ಹೋಗಲಾಡಿಸಿ ಕೊಳ್ಳಬೇಕು. ಪ್ರತಿಯೊಬ್ಬರೂ ಹೀಗೆ ತಿದ್ದಿಕೊಂಡರೇ ಇಡೀ ಸಮಾಜವೇ ದೋಷರಹಿತವಾಗುತ್ತದೆ. ಬೇರೆಯವರ ದೋಷಗಳನ್ನು ನೋಡಿ,

ದುಃಖಿಸುವುದುರ ಬಗೆಗೆ ದೇವರಿಗೆ ಪ್ರೀತಿಯಿಲ್ಲ ಎಂಬ ವಿವೇದಕ ನುಡಿಯನ್ನು ಶರಣರು, 'ಆಚಾರವೇ ಸ್ವರ್ಗ' 'ಅನಾಚಾರವೇ ನರಕ' ಎಂಬ ಶರಣರ ನುಡಿಗಳಲ್ಲಿ ನುಡಿಗಳಲ್ಲಿ ಅಹಂಕಾರರಹಿತ, ವಿನಯ ಪೂರಿತ ಉತ್ತಮ ನಡೆ ನುಡಿಗಳು ದೇವರ ಒಲುಮೆಗೆ ದಾರಿಯೆಂಬ ಅರ್ಥ ತೋರುತ್ತದೆ.

ಭಕ್ತನಾದವನು ಪ್ರಾರಂಭದಲ್ಲಿ ಗುರುವಿನ ಮೂಲಕ ಭಕ್ತಿ ಮಾರ್ಗದ ದಾರಿಯನ್ನು ಕಂಡುಕೊಳ್ಳಬೇಕೆಂಬುದು ಶರಣರ ಅಭಿಪ್ರಾಯ.

ಮಡಿಕೆಯ ಮಾಡುವೆಡೆ ಮಣ್ಣೇ ಮೊದಲು
ತೊಡಿಗೆಯ ಮಾಡುವಡೆ ಹೊನ್ನೇ ಮೊದಲು
ಶಿವಪಥವನರಿವೆಡೆ ಗುರುಪಥವೇ ಮೊದಲು
ಕೂಡಲಸಂಗಮದೇವನರಿವೊಡೆ ಶರಣರ ಸಂಗವೇಮೊದಲು
ಎಂಬ ವಚನದಲ್ಲಿ ವ್ಯಕ್ತವಾಗಿದೆ.

ದೇವರ ಒಲುಮೆ ಬೇಕಾದವರು, ಮೊದಲು ದೇವರ ಅಸ್ತಿತ್ವದಲ್ಲಿ , ದೇವರ ಕೃಪೆಯಲ್ಲಿ ನಂಬಿಕೆಯಿಟ್ಟಿರಬೇಕು, ಸಂಶಯ ಮನಸ್ಕರಾಗಿ, ಪೂರ್ಣ ನಂಬಿಕೆಯಿಲ್ಲದೆ ಅರ್ಧ ಮನಸ್ಸಿನಿಂದ, ಅದೂ ಕಷ್ಟ ಬಂದ ಸಮಯದಲ್ಲೆ, ಕಷ್ಟಗಳ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಿದರೆ, ದೇವರ ಒಲುಮೆಗಿಂತ ಅವನ ಶಾಪ ದೊರೆಯುತ್ತದೆ ಎಂಬ ಅಭಿಪ್ರಾಯವು

ನಂಬರು, ನೆಚ್ಚರು, ಬರಿದೆ ಕರೆದರು
ನಂಬಿ ಕರೆದರೆ ಓಎನ್ನನೆ ಶಿವನು
ನಂಬದೆ ನೆಚ್ಚದೆ ಬರಿದೆ ಕರೆವವರ
ಕೊಂಬ ಮೆಟ್ಟಿ ಕೂಗೆಂದ ಕೂಡಲ ಸಂಗಮದೇವಾ ಎಂಬ ಬಸವಣ್ಣನವರ ವಚನದಲ್ಲೆ ಕಾಣಬರುತ್ತದೆ.

ದೇವರ ಒಲುಮೆಯನ್ನು ಪಡೆಯಲು ಮಾನವ, ನಡೆ ನುಡಿಗಳಲ್ಲೊಂದಾಗಿ ಪರಿಶುದ್ಧ ಜೀವನ ಬದುಕಬೇಕು. ಭ್ರಷ್ಟತನದಲ್ಲಿ ಬದುಕಿ, ಕಾಮ, ಕ್ರೋಧಾದಿಗಳ ವಶರಾಗಿ ತಮ್ಮ ಯಾವುದೋ ಇಷ್ಟಾರ್ಥ ಸಿದ್ಧಿಗಾಗಿ ನೀರು ನಿದ್ದೆ ಆಹಾರವನ್ನು ತೊರೆದು ದೇಹವನ್ನು ದಂಡಸಿದರೂ ಒಳಗಿನ ಆತ್ಮ ಪರಿಶುದ್ದವಾಗದೇ ದೇವರ ಒಲುಮೆ ಸಾಧ್ಯವಾಗುವುದಿಲ್ಲ. ಬರೀ ದೇಹ ದಂಡನೆಯಗುತ್ತದೆ. ಅಷ್ಟೇ ಒಳಗಿ ಭಾವನೆಗಳನ್ನು ಪರಿಶುದ್ಧ ಮಾಡಿಕೊಳ್ಳದೆ ಈ ಬಾಹ್ಯವಾದ ಆಚರಣೆಗಳು ಎಷ್ಟೇ ಕಠಿಣವಾಗಿದ್ದರೂ ಒಳ ಆತ್ಮವು ಪರಿಶುದ್ಧಿಯಾಗುವುದಿಲ್ಲ. ಹುತ್ತದೊಳಗೆ ಹಾವು ಸೇರಿ ಕೊಂಡಿದ್ದಾಗ ಆ ಹಾವನ್ನು ಕೊಲ್ಲಲು ಹುತ್ತವನ್ನೇ ಬಡಿದು ಪುಡಿಪುಡಿ

ಮಾಡಿದರೂ ಒಳಗಿನ ಹಾವು ಸಾಯುವುದಿಲ್ಲ. ಅದು ಒಳಗೆ ಸುರಕ್ಷಿತವಾಗಿರುವಂತೆ ಘೋರ ತಪಸ್ಸುಮಾಡಿ ದೇಹ ದಂಡಿಸಿದರೂ ಒಳಗಿನ ವಿಷಪೂರಿತ ಭಾವನೆಗಳು ನಾಶವಾಗುವುದಿಲ್ಲ. ಅವು ನಾಶವಾಗದಹೊರತು ದೇವರ ಒಲುಮೆ ಸಾಧ್ಯವಿಲ್ಲವೆಂಬ ಅಂಶವು

ಹುತ್ತವ ಬಡಿದೊಡೆ ಹಾವು ಸಾಯಬಲ್ಲದೆ?
ಅಘೋರ ತಪವ ಮಾಡಿದೊಡೇನು?
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು
ನಂಬುವನಯ್ಯಾ ಕೂಡಲ ಸಂಗಮದೇವ ಎಂಬ ವಚನದಲ್ಲಿ ವ್ಯಕ್ತವಾಗಿದೆ.

ಕೆಲವರು ದೇವರ ಒಲುಮೆಗೆ ಬ್ರಹ್ಮಚರ್ಯದಲ್ಲಿ ಬದುಕಬೇಕು ಎಂದು ನಂಬಿ ಇಂದ್ರಿಯಗಳು ಕಾಡುತ್ತಿದ್ದರೂ ಬಲವಂತವಾಗಿ ಅವುಗಳನ್ನು ಹತ್ತಿಕ್ಕಿಕೊಂಡು ಮನಸ್ಸು ಹಿಡಿತದಲ್ಲಿಟ್ಟುಕೊಳ್ಳಲಿಕ್ಕಾಗಿಯೇ ಕಾಲ ಕಳೆಯುತ್ತಾರೆ. ಮನಸ್ಸು ಅಂತಹ ಚಂಚಲತೆಯನ್ನು ಗೆದ್ದಲ್ಲದೆ ಬಲವಂತದ ಬ್ರಹ್ಮಚರ್ಯದಿಂದ ಪ್ರಯೋಜನವಿಲ್ಲ. ಅದಕ್ಕಿಂತ ವಿವಾಹವಾಗಿ, ಸತಿ ಪತಿಗಳೊಂದಾದ ಹಿತವಾದ ಬದುಕನ್ನು ಬದುಕುತ್ತ ಪರಸತಿಯನ್ನು ಮಹಾದೇವಿಯಂತೆ ಭಾವಿಸಿ ಪರಿಶುದ್ಧ ಗೃಹಸ್ಥಾಶ್ರಮ ಬದುಕಿದರೆ ದೇವರೊಲುಮೆಗೆ ಪಾತ್ರರಾಗಬಹುದು ಎಂಬ ಅಭಿಪ್ರಯವು

ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವುವು ದೋಷಗಳು
ಮುಂದೆ ಬಂದು ಕಾಡುತಿಹವು ಪಂಚೇಂದ್ರಿಯಗಳು
ಸತಿಪತಿ ರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು
ಸತಿಪತಿ ರತಿಸುಖೋಪಭೋಗೋಪಭೋಗ ವಿಳಾಸವನು
ಬಿಟ್ಟನೆ ಸಿಂಧು ಬಲ್ಲಾಳನು
ನಿಮ್ಮ ಮುಟ್ಟಿ ಪರಧನ ಪರಸತಿಯಂಗಳೆಗೆಳಸಿದರೆ
ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ

ಎಂಬ ವಚನದಲ್ಲಿ ಅಡಕವಾಗಿದೆ. ಮನುಷ್ಯನ ಜೀವನ ಕ್ಷಣಿಕ, ಅಲ್ಲದೆ ಸಾವು ಕಟ್ಟಿಟ್ಟದ್ದು, ಒಂದಲ್ಲ ಒಂದು ದಿನ ಸಾಯಲೇಬೇಕು. ಸಾಯುವ ಮುನ್ನ ಭಗವಂತನನ್ನು ಪೂಜಿಸಬೇಕು ನಾಳೆ ಎಂದು ಮುಂದೂಡಬೇಡ ಮೃತ್ಯು ಒಯ್ಯುವ ಮುನ್ನ ದೇವರ ಪೂಜೆ ಮಾಡಬೇಕು ಎಂದು ಬಸವಣ್ಣನವರು

ಹೊತ್ತಾರೆ ಎದ್ದು ಅಗ್ಘವಣಿಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದಬಳಿಕ ನಿನ್ನನ್ನಾರು ಬಲ್ಲರು?

ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ
ತೊತ್ತ ಕೆಲಸ ಮಾಡು ಕೂಡಲ ಸಂಗಮದೇವಾ

ಎಂದು ಬುದ್ಧಿವಾದ ಹೇಳಿದ್ದಾರೆ.

ಭಕ್ತನಾದವನು ಧಾರ್ಮಿಕ ಕಾರ್ಯಗಳನ್ನು ದೇವರ ಸೇವೆಯನ್ನು , ಭಕ್ತಿಗಾಗಿ, ದೇವರ ತೃಪ್ತಿಗಾಗಿ, ಸ್ವ ಸಂತೋಷಕ್ಕಾಗಿ ಮಾಡಬೇಕು, ಲೋಕವನ್ನು ಮೆಚ್ಚಿಸಲಿಕ್ಕಾಗಲಿ, ತನ್ನ ದೊಡ್ಡಸ್ತಿಕೆಯನ್ನು ಪ್ರದರ್ಶಿಸಕ್ಕಾಗಲಿ ಅಹಂಕಾರದಿಂದಾಗಲಿ ಮಾಡಬಾರದು. ಅಲ್ಲಿ ವಿನಯವಿರಬೇಕು, ವಿವೇಕವಿರಬೇಕು, 'ಅಹಂ' ಇರಬಾರದು, ತಾನು ಇಷ್ಟೆಲ್ಲ ಮಾಡಬಲ್ಲವನು, ನಾನೊಬ್ಬ ದೊಡ್ಡ ಭಕ್ತ ಎಂಬ ಭಾವನೆ ಮನಸ್ಸಿನಲ್ಲಿಯೂ ಹೊಳೆಯ ಬಾರದು. ಹಾಗೇನಾದರೂ ಅಹಂಕಾರ ಅವನ ಮನಸ್ಸಿನಲ್ಲೆ ಹೊಳೆದರೂ ದೇವರು ಅಂತಹವರನ್ನು ಕಾಡಿಸಿ ಸೊಕ್ಕು ಅಡಗಿಸುತ್ತಾನೆ. ಆದುದರಿಂದ ದೇವರ ಸಮಾಜ ಸೇವೆಯನ್ನು ಸರ್ವಾರ್ಪಣ ಭಾವದಿಂದ ವಿನಯಪೂರ್ವಕ ಮಾಡಿದರೆ ದೇವರು ಬೇಡಿದುದನ್ನು ಭಕ್ತನಿಗೆ ಕರುಣಿಸುತ್ತಾನೆ ಎಂಬ ವಿವೇಕದ ಮಾತನ್ನು

ಮಾಡಿದೆನೆಂಬುದು ಮನದಲ್ಲೆ ಹೊಳೆದಡೆ
ಏಡಿಸಿ ಕಾಡಿತ್ತು ಶಿವನ ಡಂಗುರ
ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿಲ್ಲದೊಡೆ
ಬೇಡಿದ-ನೀವ ಕೂಡಲ ಸಂಗಮದೇವಾ

ಎಂಬ ವಚನದ ಮೂಲಕ ತಿಳಿಸಿದ್ದಾರೆ ಬಸವಣ್ಣ.

ಶರಣ ಗುಣಗಳನ್ನು ಕಳೆದುಕೊಂಡು, ಆಸೆಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲಾರದೆ, ಕಾಮವನ್ನು ನಿಗ್ರಹಿಸುವ ಶಕ್ತಿಯೆಲ್ಲದೆ, ಬಾಹ್ಯ ರೀತಿಯಲ್ಲೆ ಇವುಗಳೆನ್ನೆಲ್ಲ ತೊರೆದಿದ್ದಾರೆನೋ ಎಂಬುವ ಭಾವನೆ ಬರುವ ರೀತಿಯಲ್ಲಿ ಕೆಲವರು ತಲೆಯನ್ನು ಬೋಳಿಸಿಕೊಂಡು ಬಟ್ಟೆಯನ್ನು ಧರಿಸದೆ, ಕೌಪೀನಧಾರಿಗಳಾಗಿ ಅವಿವಾಹಿತರಾಗಿ ಇರುತ್ತಾರೆ. ಒಳಗೆ ಮಾತ್ರ ಇದಕ್ಕೆ ವಿರುದ್ಧವಾಗಿ ಅಲೋಚಿಸುತ್ತಿರುತ್ತಾರೆ. ಇವರಿಗೆ ದೇವರು ಒಲಿಯಲು ಸಾಧ್ಯವಿಲ್ಲ ಎಂಬ ಅಂಶವು

ಮಂಡೆ ಬೋಳಾದರೇನು ಹುಟ್ಟಾ ಬೋಳಾಗದನ್ನಕ್ಕರ
ತನು ನಿರ್ವಾಣವಾದಡೇನು ಆಸೆ ನಿರ್ವಾಣವಾಗದನ್ನಕ್ಕರ
ಇಂದ್ರಿಯ ನಿಗ್ರಹ ಮಾಡಿದೊಡೇನೋ ಷಟ್‌ಸ್ಥಲಾಗ್ರಹವಾಗದನ್ನಕ್ಕರ
ಸೌರಾಷ್ಟ್ರ ಸೋಮೇಶ್ವರ ಲಿಂಗ ಬರಿದೆ ಒಲಿವನೆ ಎಂಬ

ವಚನದಲ್ಲೆ ವ್ಯಕ್ತಗೊಂಡಿರುವುದು ಗೋಚರವಾಗುತ್ತದೆ.

ಲೋಕದ ಡೊಂಕವ ನಿವೇಕೆ ತಿದ್ದುವಿರಿ,
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯವರ ದುಃಖಕ್ಕೆ ಅಳುವವರ ಮೆಚ್ಚ
ಕೂಡಲ ಸಂಗಮದೇವ ಎಂದು ಎಚ್ಚರಿಸಿದ್ದಾರೆ.

ಶರಣರು ಮುಖ್ಯವಾಗಿ ಒಳ್ಳೆಯ ನಡೆ ನುಡಿಯ ಬಗೆಗೆ, ಎಂದರೆ ಸುಳ್ಳು, ಕಳ್ಳತನ, ಸಿಟ್ಟು, ಕೊಲೆ, ವಂಚನೆ, ಮೋಸ, ಬೇರೆಯವರನ್ನು ಹೀಯಾಳಿಸುವ, ಇತರರ ಮನನೋಯಿಸುವ ತಮ್ಮ ಬಗೆಗೆ ಜಂಬಕೊಚ್ಚಿಕೊಳ್ಳುವ ದುಷ್ಟ ಗುಣಗಳಿಲ್ಲದೆ ಅಂತರಗದ ಆಲೋಚನೆಗಳಲ್ಲಿ ಆಚರಣೆಗಳಲ್ಲಿ ಶುದ್ಧವಾಗಿದ್ದು. ಎಕ ರೀತಿಯಿಂದ ಬದುಕಿದರೆ ಯಾವ ಪೂಜೆಯು ಅವಶ್ಯಕವಿಲ್ಲ. ಅಂತಹ ಪರಿಶುದ್ಧ ಬದುಕಿನಿಂದಲೇ ಪರಮಾತ್ಮ ಒಲಿಯುತ್ತಾನೆ. ಎಂಬುದು ಅವರ ತತ್ವದ ಮುಖ್ಯ ಸಾರ. ಈ ಅಂಶವನ್ನು ಬಸವಣ್ಣನವರು

ಕಳಬೇಡ, ಕೊಬೇಡ, ಹುಸಿಯ ನುಡಿಯಬೇಡ,
ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನಬಣ್ಣಿಸಬೇಡ, ಇದಿರು ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ಕೂಡಲಸಂಗಮನ ಒಲಿಸುವ ಪರಿ

ಎಂಬ ವಚನದಲ್ಲಿ ಸ್ಪಷ್ಟಗೊಳಿಸಿದ್ದಾರೆ.

ಸದಾಚಾರ, ಸನ್ನಡತೆ, ಸತ್ಯಶುದ್ಧ ಕಾಯಕ, ಮೃದು ಮಾತು, ನಿಶ್ಚಲ ಭಕ್ತಿ, ಒಳ –ಹೊರಗೆ ಒಂದಾದ ಮುಚ್ಚುಮರೆಯಿಲ್ಲದ, ಪರಿಶುದ್ಧ ಜೀವನದಿಂದ ಒಳ್ಳೆಯ ಬದುಕು ಬದುಕುವ ಮೂಲಕ 'ಇಲ್ಲಿಯೂ ಎಂದರೆ ಜನ ಸಮಾಜದಲ್ಲಿಯೂ ಮನ್ನಣೆಗೆ ಪಾತ್ರರಾಗಬಹುದಲ್ಲದೆ' ಅಲ್ಲಿಯೂ ಎಂದರೆ ದೇವರ ಹೃದಯದಲ್ಲೂ ಸ್ಥಾನ ಪಡೆಯಬಹುದು ಎಂಬುದು ಶರಣರ ತತ್ವದ ಮೌಲ್ಯ, ಮುಖ್ಯ ಸಾರಾಂಶ. ಈ ವಿಷಯುವನ್ನು ಅವರು ಅನೇಕ ವಚನಗಳಲ್ಲಿ. ವಿವಿಧ ರೀತಿಗಳಲ್ಲಿ ದೃಢೀಕರಿಸಿದ್ದಾರೆ.ಅವರು ಮೂರ್ತಿ ಪೂಜೆಯನ್ನು ನಿರಾಕರಿಸಿ, ಇಷ್ಟಲಿಂಗ ಪೂಜೆಯನ್ನು ಸ್ವೀಕರಿಸಿದ್ದಾರೆ. ಇಷ್ಟಲಿಂಗದ ಮೂಲಕ ಮನಸ್ಸನ್ನು ಕೇಂದ್ರಿಕರಿಸಿ ಭಕ್ತಿಭಾವದಿಂದ ಧ್ಯಾನಿಸಿ, ಭಗವಂತನನ್ನು ಒಲಿಸಿಕೊಳ್ಳಬಹುದೆಂದಿದ್ದಾರೆ. ತೃಪ್ತಿ ಜೀವನಕ್ಕೆ ನೆಮ್ಮದಿಯ ಬದುಕಿಗೆ ಇದೇ ಹಾದಿಯೆಂದು ಮಾರ್ಗ ತೋರಿಸಿದ್ದಾರೆ.

ಇದು ಜನ ಸಾಮಾನ್ಯರ ಮಾತಾಯಿತು, ಆದರೆ ಕೆಲವು ಭಕ್ತರು ದೇವರ ಒಲುಮೆ ಪಡೆದು ಲೌಕಿಕ ಜೀವನದ ಸರಳವಾದ ನೆಮ್ಮದಿಯ ಜೀವನದಿಂದಲೇ

ತೃಪ್ತಿ ಹೊಂದುವುದಿಲ್ಲ ಅವರಿಗೆ ವಿರಾಟ ಸ್ವರೂಪನಾದ ಭಗವಂತನ ದರ್ಶನವೇಬೇಕು. ಅವನಲ್ಲೇ ಒಂದಾಗಬೇಕು ಎಂಬ ಉತ್ಕಟೇಚ್ಛೆ ಇರುತ್ತದೆ. ಅಂತಹವರಿಗೂ ಶರಣರ ಮಾರ್ಗದರ್ಶನವಿದೆ. ಅದೆಂದರೆ, ಆ ಅಭಿಲಾಷೆಗಳವರು ಹಂತ -ಹಂತವಾಗಿ ಷಟಸ್ಥಲಗಳನ್ನು ಏರುತ್ತಾ ಲೌಕಿಕ ವ್ಯವಹಾರಗಳಿಂದ ದೂರ ದೂರ ಸರಿಯುತ್ತ ಹೋಗಬೇಕು, ಲೋಕದ ಸಂಬಂಧಗಳನ್ನು ಮೈಗೂಡಿಸಿಕೊಳ್ಳಬೇಕು. ನಾನು ನೀನೆಂಬುದನ್ನು ಮರೆತು ನಾನೇ ನೀನಾಗಬೇಕು ನೀನೇ ನಾನಾಗಬೇಕು, ಭಾವ ಬಯಲಾಗಬೇಕು, ಈ ಲೋಕ ಜೀವನದ ನಶ್ವರತೆ ಅರಿವಾಗಬೇಕು. ಅರಿವೇ ಗುರವಾಗಬೇಕು. ಆಗ ಭಗವಂತನಲ್ಲಿ ಒಂದಾಗುವ ಅವರ ಇಚ್ಛೆ ಈಡೇರುತ್ತದೆ.

ಭಕ್ತಿಯ ಸಾಧನೆಯ ದಾರಿಯಲ್ಲಿ ಶರಣರು ಇಷ್ಟಲಿಂಗಕ್ಕೆ ಮಹತ್ವದ ಸ್ಥಾನ ಕೊಟ್ಟಿದ್ದಾರೆ. ಇಷ್ಟಲಿಂಗದ ಹೊರತು ಅನ್ಯ ದೇವರನ್ನು ಪೂಜಿಸುವುದು, ಸಂದರ್ಶಿಸುವುದು, ದೇಹ ದಂಡಿಸುವುದು, ವ್ರತೋಪವಾಸ ಮಾಡುವುದು, ತೀರ್ಥಯಾತ್ರೆ ಹೋಗುವುದು ದೇವರ ಹೆಸರಿನಲ್ಲೆ ದುಂದು ವೆಚ್ಚ ಮಡುವುದು, ಇವೆಲ್ಲ ಸಮಯ, ಶಕ್ತಿ ಧನವನ್ನು ವ್ಯರ್ಥ ಮಾಡುವ ಮಾರ್ಗಗಳು, ಇವು ದಿನನಿತ್ಯದ ಕಾರ್ಯಗಳಿಗೆ ಅಡ್ಡಿಯುಂಟು ಮಾಡುತ್ತವೆಯಾಗಿ, ಇವುಗಳನ್ನೆಲ್ಲ ಶರಣರು ಅಲ್ಲಗಳೆದಿದ್ದಾರೆ. ಎಲ್ಲ ಮಹತ್ವವನ್ನು ಇಷ್ಟಲಿಂಗಕ್ಕೆ ಇಟ್ಟು ಭಕ್ತಸ್ಥಲ, ಮಹೇಶ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಳ ಶರಸ್ಥಲಗಳ ಭಕ್ತಿ, ಶ್ರದ್ಧೆ, ನಿಷ್ಠೆಗಳಿಂದ ಕೂಡಿದ ಪೂಜೆಗೆ ಕೊಟ್ಟಿದ್ದಾರೆ. ಮೂಲಕ ಐಕ್ಯಸ್ಥಲ ತಲುಪಬಹುದೆಂದು ಬೋಧಿಸಿದ್ದಾರೆ. ಹಂತ ಹಂತವಾಗಿ ಐಕ್ಯ ಸ್ಥಿತಿಯನ್ನು, ಮುಟ್ಟುವ ಮಾರ್ಗದರ್ಶನವನ್ನು ವಿಧಿ ವಿಧಾನಗಳನ್ನು ವಿವರಿಸಿದ್ದಾರೆ. ಐಕ್ಯ ಸ್ಥಲವನ್ನು ಸೇರುವ ಹೊತ್ತಿಗೆ ಶರಣನಲ್ಲೆ 'ನಾ' ಎಂಬುದು ಅಳಿದು ಹೋಗಿರುತ್ತದೆ. ಜೀವನದ ನಶ್ವರತೆಯ ಅರಿವಾಗಿ ಅರಿವೇ ಗುರುವಾಗುತ್ತದೆ. ಈ ಜಗತ್ತೆಲ್ಲ ಮಿಥ್ಯ ಭಗವಂತನೊಬ್ಬನೆ ಸತ್ಯ ಎಂಬ ಹಂತ ಮುಟ್ಟಿರುತ್ತಾನೆ. ಅಂದರೆ 'ಬದುಕು ಶೂನ್ಯ -ಭಾವ ಬಯಲು' ಎಂಬ ತಿಳಿವಳಿಕೆ ಬಂದು 'ಶೂನ್ಯ ಸಂಪಾದನೆ' ಯಾಗಿರುತ್ತದೆ. ಈ ಮಟ್ಟ ಮುಟ್ಟಿದ ಮೇಲೆ ಅವನಿಗೆ 'ಇಷ್ಟಲಿಂಗ'ವೂ ದೇವರಲ್ಲ ಅದು ಸಾಧನೆಯ ಹಂತದಲ್ಲೆ ದೇವರ ಧ್ಯಾನಕ್ಕೆ ಮನಸ್ಸನ್ನು ಕೇಂದ್ರಿಕರಿಸಲು ಅವನ ಸಾಕ್ಷಾತ್ಕಾರ ಪಡೆಯಲು ದೇವರ ಒಂದು ಕುರುಹು ಎಂಬ ಭಾನೋದಯವಾಗುತ್ತದೆ. ಅರಿವೇ ಗುರುವಾಗಿ ಬೇರೆ ಗುರುವಿನ ಅಗತ್ಯವಿಲ್ಲವಾಗುತ್ತದೆ.

ಈ 'ಅರಿ'ವನ್ನು ಸಾಧಿಸುವುದು ಸಾಧಾರಣರಿಗೆ ಅಳವಲ್ಲ, ಅದಕ್ಕೆ ಬಹು ತೀವ್ರವಾದ, ಆಳವಾದ ಸ್ಥಿರ ಮನಸ್ಸಿನ, ಧೃಡ ಸಂಕಲ್ಪದ ಸತತ ಸಾಧನೆ ಎಂಬುದನ್ನು ಮನಗಂಡು ಮುಂದುವರಿಯಬೇಕಾಗುತ್ತದೆ.

■

# ಆಯ್ದಕ್ಕಿ ಮಾರಯ್ಯ-ಲಕ್ಕಮ್ಮ (ರೂಪಕ)

ಹನ್ನೆರಡನೆಯ ಶತಮಾನದಲ್ಲಿ ಭಕ್ತಿಭಂಡಾರಿ ಬಸವಣ್ಣನವರು ಕೈಗೊಂಡ ಕ್ರಾಂತಿಯ ಫಲವಾಗಿ, ಜನಸಾಮಾನ್ಯರಲ್ಲಿ ಅರಿವಿನ ಬೆಳಗು ಮೂಡಿತು. ಅನೇಕರು ಬಸವಣ್ಣನವರು ನಡೆದ ದಾರಿಯಲ್ಲಿ ನಡೆಯುತ್ತಾ ಅವರ ತತ್ವಗಳನ್ನು ಪಾಲಿಸುತ್ತ ತಮ್ಮ ಜೀವನವನ್ನು ಸಾರ್ಥಕ ಪಡಿಸಿಕೊಂಡರು, ಆಗಿನ ಕಾಲದಲ್ಲಿ ಕೀಳು ಜಾತಿಯವರೆಂದು ಪರಿಗಣಿಸಲ್ಪಟ್ಟಿದ್ದ ಡೋಹರ ಕಕ್ಕಯ್ಯ, ಮಾದಾರ ಚನ್ನಯ್ಯ, ಮಡಿವಾಳ ಮಾಚಿದೇವ ಮುಂತಾದವರು ವೀರಶೈವ ದೀಕ್ಷೆ ಕೈಕೊಂಡು, ಶರಣ ಮಾರ್ಗದಲ್ಲಿ ನಡೆದು, ಮಹಾಶರಣರೆನ್ನಿಸಿಕೊಂಡರು

ಯಾರೂ ದುಡಿಯದೆ ಊಟಮಾಡಬಾರದು. ಪ್ರತಿಯೊಬ್ಬರು ಸತ್ಯ, ಶುದ್ಧಕಾಯಕ ಒಂದನ್ನು ಕೈಗೊಂಡು, ಪರಮಾತ್ಮನ ಹೆಸರಿನಲ್ಲಿ ದುಡಿಯುತ್ತಾ, ತಮ್ಮ ಜೀವನ ನಡೆಸಬೇಕು. ಸಂಗ್ರಹ ತತ್ವ ಶರಣ ಜೀವನಕ್ಕೆ ವಿರುದ್ಧ, ಅಂದಂದಿನ ಆವಶ್ಯಕತೆಯನ್ನು ಅಂದಂದಿನ ದುಡಿತದಿಂದಲೇ ಪಡೆಯಬೇಕು ಎಂಬುದು ಶರಣ ತತ್ವದ ಕಟ್ಟುಪಾಡು. ಹಾಗಾಗಿ ಕಲ್ಯಾಣದ ಶರಣರೆಲ್ಲರೂ ಒಂದಲ್ಲ ಒಂದು ಕಾಯಕವನ್ನು ಕೈಗೊಂಡು, ದೇವರ ಸೇವೆಗೆ ತಮ್ಮ ಆವಶ್ಯಕತೆಗಳಿಗೆ ಸಂಪಾದನೆ ಮಾಡಿಕೊಳ್ಳುತ್ತಿದ್ದರು. ಅದರಮತೆ ಮಡಿವಾಳ ಮಾಚಿದೇವನು ಬಟ್ಟೆಯನ್ನು ಸ್ವಚ್ಛಮಾಡುವ ಕಾಯಕ ಕೈಗೊಂಡರೆ, ಹಡಪದ ಅಪ್ಪಣ್ಣನವರು ಕ್ಷೌರಿಕ ಕಾಯಕದಿಂದ ಜೀವಿಸುತ್ತಿದ್ದರು. ಕಾಶ್ಮೀರದ ಭೂಪಾಲ ಕಲ್ಯಾಣಕ್ಕೆ ಬಂದು ಶರಣನಾದ ಮೋಳಿಗೆ ಮಾರಯ್ಯನವರು ಪ್ರತಿದಿನವೂ ಕಾಡಿಗೆ ಹೋಗಿ ಕಟ್ಟಿಗೆಯನ್ನು ತಂದು ಮಾರುತ್ತಿದ್ದರು. ಸಂಪಾದಿಸಿದ ಹಣದಿಂದ, ಧಾನ್ಯತಂದು ಆರೋಗಣೆಯನ್ನು ಅವರ ಪತ್ನಿ ಮಹಾದೇವಿ ತಯಾರಿಸುತ್ತಿದ್ದಳು. ಅದನ್ನು ದೇವರಿಗೆ ನೈವೇದ್ಯ ಮಾಡಿ ಪ್ರಸಾದವನ್ನು ಜಂಗಮರಿಗೆ ಉಣಬಡಿಸಿ, ತಾವೂ ಸೇವಿಸುತ್ತಿದ್ದರು. ಆಯ್ದಕ್ಕಿ ಮಾರಯ್ಯನವರು ದಿನವೂ ಊರಿನ ಒಂದೊಂದು ಓಣಿಗೆ ಹೋಗಿ ಅಲ್ಲಿ ಬಿದ್ದು ವ್ಯರ್ಥವಾಗಿ ಹೋಗುತ್ತಿದ್ದ ಧಾನ್ಯವನ್ನು ಆರಿಸಿ ತರುತ್ತಿದ್ದರು ಅದನ್ನು ಪತ್ನಿ ಲಕ್ಕಮ್ಮನಿಗೆ ಕೊಡುತ್ತಿದ್ದರು. ಲಕ್ಕಮ್ಮ ಅದರಿಂದ ಅಡಿಗೆ ಮಾಡಿ, ದೇವರಿಗೆ ನೈವೇದ್ಯವಗೈದು ಆ ಪ್ರಸಾದವನ್ನು ಭುಂಜಿಸಿ ಜೀವನ ಸಾಗಿಸುತ್ತಿದ್ದರು.

ಶರಣ ಮಾರಯ್ಯನವರ ಪತ್ನಿ ಲಕ್ಕಮ್ಮ. ಆಕೆ ಮಾರಯ್ಯ ಶರಣರ ಜೀವನದಲ್ಲಿಯೂ ಸಹಕಾರಿಯಾದ ಪತ್ನಿಯಾಗಿದ್ದಳು ಒಂದು ದಿನ ಮಾರಯ್ಯನವರು ಲಕ್ಕಮ್ಮನನ್ನು ಕುರಿತು, ಲಕ್ಕ ನನಗೆ ಈ ಕಾಯಕದ ವಿಷಯವಾಗಿ ಅನೇಕ ಸಂದೇಹಗಳು ಉಂಟಾಗಿವೆ ನೋಡು, ನಮ್ಮ ತತ್ವದ ಪ್ರಕಾರ,

ಕಾಯಕದಲ್ಲಿ ನಿರತವಾದರೆ ಗುರುದರ್ಶನವಾದರೂ ಮರೆಯಬೇಕು.
ಲಿಂಗಪೂಜೆಯಾದರೂ ಮರೆಯಬೇಕು;
ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು;
ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರ ಲಿಂಗವಾಯಿ
ತ್ತಡೂ ಕಾಯಕ ದೊಳಗು!

ಹೀಗಿರುವಾಗ ಅಂದು ಅಲ್ಲಮ ಪ್ರಭುಗಳು, ಬಸವಣ್ಣನವರ ಮನೆಗೆ ಬೀಜಯಂಗೈದಾಗ, ಬಸವಣ್ಣನವರು ಲಿಂಗಪೂಜೆಮಾಡಿಕೊಳ್ಳುತ್ತಿದ್ದರು. ಆವಾಗ ಹಡಪದ ಅಪ್ಪಣ್ಣ ಗಳನ್ನು ಪ್ರಭುದೇವರನ್ನು ಸ್ವಾಗತಿಸಲು ಕಳಿಸಿಕೊಟ್ಟರು ಆದರೆ ಪ್ರಭುದೇವರಿಗೆ ಇದರಿಂದ ಸಿಟ್ಟು ಬಂದಿತು ಮನೆಗೆ ಬಂದ ಅತಿಥಿಯನ್ನು ಆದರಿಸಲು ಬೇರೆಯವರನ್ನು ಕಳಿಸಿದ ಬಸವಣ್ಣನವರಿಗೆ ಹಮ್ಮು ಬಂದಿದೆಯೆಂದು ಪ್ರಭು ಕಿಡಿ, ಕಿಡಿಯಾದರು. ಲಿಂಗಪೂಜೆಯ ಕಾಯಕವನ್ನು ಮಾಡುತ್ತಿದ್ದ ಬಸವಣ್ಣನವರು ಅಪ್ಪಣ್ಣನವರನ್ನು ಮನೆಗೆ ಬಂದ ಅತಿಥಿಯನ್ನು ಸತ್ಕರಿಸಲು ಕಳಿಸಿದ್ದರಲ್ಲಿ ತಪ್ಪೇನು?

ಲಕ್ಕಮ್ಮ :- ಮನೆಗೆ ಬಂದ ಅತಿಥಿಗಳನ್ನು ಸತ್ಕರಿಸುವುದು ಮನೆಯ ಒಡೆಯನ ಮೊದಲ ಕರ್ತವ್ಯ ಲಿಂಗಪೂಜೆ ನಂತರದ್ದು. ಕಾಯಕದ ಮುಂದೆ ಲಿಂಗಪೂಜೆಯಾದರೂ ಮರೆಯಬೇಕಲ್ಲವೆ ಮಾರಯ್ಯ? ಆದುದರಿಂದ ಪ್ರಭುದೇವರಿಗೆ ಬಸವಣ್ಣನವರೇ ತತ್ವದಲ್ಲಿ ತಪ್ಪಿದುದು ಸಿಟ್ಟುತರಿಸುವುದರಲ್ಲಿ ಆಶ್ಚರ್ಯವಿಲ್ಲ

ಮಾರಯ್ಯ:- ಆದರೆ ಲಕ್ಕಾ. ನನಗಿಲ್ಲೊಂದು ಸಂದೇಹ. ಪ್ರಭುದೇವರು ಬಂದ ಸಂದರ್ಭದಲ್ಲಿ ಲಿಂಗಪೂಜಾ ಕಾಯಕದಲ್ಲಿ ಬಸವಣ್ಣನವರು ತೊಡಗಿದ್ದರು. ಆಗ ಮನೆಗೆ ಅತಿಥಿಗಳು ದಯಮಾಡಿಸಿದರು. ಆಗ ಲಿಂಗಪೂಜೆಗೆ ಹೆಚ್ಚು ಗಮನಕೊಡಬೇಕಾದುದು ಸರಿ ಎಂಬುದು ನನ್ನ ಅನಿಸಿಕೆ.

ಹಾಗಾದರೆ ಅನುಭವ ಮಂಟಪಕ್ಕೆ ಹೋಗಿ, ಅಲ್ಲಮಪ್ರಭುಗಳನ್ನೇ ಈ ವಿಷಯವಾಗಿ ಕೇಳಿರಿ. ಅವರೇ ಈ ಬಗ್ಗೆ ಸೂಕ್ತವಾದ ಉತ್ತರ ಕೊಡಲು ಸಮರ್ಥರು.

ಹೌದು ನೀನು ಹೇಳುವುದು ಸರಿ. ನನ್ನನ್ನು ಈ ಪ್ರಶ್ನೆ ಅಂದಿನಿಂದಲೂ ಕಾಡುತ್ತಿದೆ. ಅದಕ್ಕೆ ಸಮರ್ಪಕ ಉತ್ತರ ಪಡೆಯುವ ವರೆಗೂ ಸಮಾಧಾನವಿಲ್ಲ.

ನಾಳೆ ಕಾಯಕಕ್ಕೆ ಹೋಗುವ ಮೊದಲೇ, ಅನುಭವ ಮಂಟಪಕ್ಕೆ ಹೋಗಿ, ಈ ಬಗೆಗಿನ ಸಂಶಯ ಪರಿಹರಿಸಿಕೊಂಡುಬಿಡುವೆ

ನಾಳೆ ಬೆಳಗಿನ ಮಾತು ತಾನೆ. ಈಗ ನಿಶ್ಚಿಂತೆಯಾಗಿ ಮಲಗಿ ನಿದ್ದೆಮಾಡಿ (ಎಂದಳು ಲಕ್ಕಮ್ಮ)

ಶರಣ ನಿದ್ರೆ ಗೈದರೆ ಜಪಕಾಣಿರೊ

[ಶರಣರು ಅನುಭವ ಮಂಟಪದಲ್ಲಿ ತಮ್ಮ ಜೀವನಾನುಭವಗಳ ಬಗ್ಗೆ, ತಮಗೆ ಬಂದ ಸಂಶಯಗಳ ಬಗೆಗೆ ಎಲ್ಲರೂ ಕೂಡಿ ಚರ್ಚೆ ಮಾಡುತ್ತಿದ್ದರು. ಅನುಭವ ಮಂಟಪಕ್ಕೆ ಅಲ್ಲಮಪ್ರಭುದೇವರು ಅಧ್ಯಕ್ಷರಾಗಿದ್ದರು ಆ ಸಭೆಯಲ್ಲಿ ಗಂಡು-ಹೆಣ್ಣು , ಬಡವರು-ಶ್ರೀಮಂತರು, ಆಳು-ಅರಸರು, ಉಚ್ಚಜಾತಿ-ಕೀಳು ಜಾತಿ ಎಂಬ ಯಾವ ರೀತಿಯ ಭೇದವೂ ಇಲ್ಲದೆ ವೀರಶೈವ ಧರ್ಮ ಸ್ವೀಕರಿಸಿ ಅದರ ತತ್ವದಂತೆ ಬದುಕುತ್ತಿದ್ದ ಯಾರು ಬೇಕಾದರೂ, ಅಲ್ಲಿ ಹೋಗಿ ಚರ್ಚೆಮಾಡಬಹುದಿತ್ತು. ಆ ಚರ್ಚೆಯಲ್ಲಿ ಎಲ್ಲರೂ ಎಲ್ಲರೀತಿಯ ವ್ಯತ್ಯಾಸಗಳನ್ನು ಮರೆತು ಸಮಾನಭಾವದಿಂದ ಚರ್ಚಿಸಿ, ಅಲ್ಲಮ ಪ್ರಭುದೇವರ ನೇತೃತ್ವದಲ್ಲಿ ನಿರ್ಣಯಕ್ಕೆ ಬರುತ್ತಿದ್ದರು. ತಾವು ಕಂಡುಂಡ ಅನುಭಾವ ಸತ್ಯವನ್ನು ವಚನ ರೂಪದಲ್ಲಿ ರಚಿಸುತ್ತಿದ್ದರು. ಇಂತಹ ಅನುಭವ ಮಂಟಪಕ್ಕೆ ಬೆಳಗಾಗುತ್ತಲೇ ಮಾರಯ್ಯ  ತನ್ನ ಸಂದೇಹ ನಿವಾರಣೆಗಾಗಿ ಹೊಗಿದ್ದರು]

ಇಲ್ಲಿ ಮನೆಯಲ್ಲಿ ಮಾರಯ್ಯನವರ ಪತ್ನಿ ಲಕ್ಕಮ್ಮ ಮನೆಕೆಲಸ ಮುಗಿಸಿಕೊಂಡು ಸ್ನಾನಮಾಡಿ. ಮಡಿಯುಟ್ಟು, ಅಮರೇಶ್ವರ ಲಿಂಗಕ್ಕೆ ಪೂಜೆಮಾಡಿ, ಪ್ರಸಾದ ತಯಾರಿಸಬೇಕೆಂದು ಬಂದರೂ, ಅನುಭವ ಮಂಟಪಕ್ಕೆ ಹೋಗಿದ್ದ ಮಾರಯ್ಯನ ಸುಳಿವಿಲ್ಲ. ಆಗಳೆ ಕಾಯಕಕ್ಕೆ ಹೋಗುವ ವೇಳೆಯಾಗಿದೆ. ವೇಳೆಯನ್ನು ತಪ್ಪಬಾರದೆಂದು ಕಾಯಕದ ತತ್ವ ಇನ್ನಾದರೂ ಬರುದಿದ್ದದನ್ನು ನೋಡಿ ಲಕ್ಕಮ್ಮನೇ ಅನುಭವಮಂಟಪಕ್ಕೆ ಲಗುಬಗೆಯಿಂದ ಹೋದಳು. ಮಾರಯ್ಯ ಪ್ರಭುವಿನೊಡನೆ ಏನೋ ಚರ್ಚಿಸುತ್ತಿದ್ದರು ಮಾರಯ್ಯನಿದ್ದಲ್ಲಿಗೆ ಹೋಗಿ

ಹೋಗಯ್ಯಾ
ಕಾಯಕ, ನಿಂದಿತ್ತು ಎನ್ನಾಳ್ವನೆ! ಭಾವ ಶುದ್ಧವಾಗಿ ಮಹಾ
ಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು ನಿಶ್ಚೈಸಿ ಮಾಡಬೇಕು
ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ, ಬೇಗ ಹೋಗಿ ಮಾರಯ್ಯ!"

ಪತ್ನಿಯ ಮಾತು ಕೇಳಿದ ಮಾರಯ್ಯನಿಗೆ ತನ್ನ ಚರ್ಚೆಯ ವಿಷಯದಿಂದ ಎಚ್ಚರಾಯಿತು. ಹೊರಗೆ ನೋಡುತ್ತಾನೆ ಆಗಲೇ ಹೊತ್ತೇರಿ ಬಂದಿದೆ. ತನ್ನ ತಪ್ಪಿನ

ಅರಿವಾಯಿತು, ಲಗುಬಗೆಯಿಂದ ಎದ್ದು ಬಸವಣ್ಣನವರ ಓಣಿಯ ಕಡೆಗೆ ತಂಡುಲವನ್ನಾರಿಸುವ ಕಾಯಕಕ್ಕೆ ಹೋಗಬೇಕು ಎಂದು ಹೇಳಿ

ಲಕ್ಕಮ್ಮ:– ಅಂಗವರತ ಅರುವೆಯ ಅಂಗದಲ್ಲಿ ಕಟ್ಟಿ
ಬಯಕೆಯರತ ಕೈಯಲ್ಲಿ ತಂಡುಲವನಾಯ್ದುಕೊಂಡು
ಸಂದ ಪ್ರಮಥರ ಅಂಗಳಕ್ಕೆ ಬೇಗಹೋಗಿ ಬಾರಯ್ಯಾ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಮಾರಯ್ಯಾ
ನಿರೂಪಣೆ

ಮಾರಯ್ಯನವರು ಹಿಂತಿರುಗಿ ಬರುವುದರೊಳಗೆ ಮನೆಸೇರು, ಅವರು ಧಾನ್ಯ ತಂದುಕೊಟ್ಟ ತಕ್ಷಣ ಪ್ರಸಾದ ತಯಾರಿಸಬೇಕೆಂದು ಮನೆಯ ಕಡೆ ಹೊರಟಳು.

ಲಕ್ಕಮ್ಮ ಮನೆಸೇರಿ ಬಹಳ ಹೊತ್ತಾದರೂ ಮಾರಯ್ಯನವರು ಅವರ ದಾರಿಯನ್ನೇ ಕಾಯುತ್ತ ಬಾಗಿಲಲ್ಲೇ ನಿಂತಿದ್ದಳು. ಎಷ್ಟೋ ಹೊತ್ತಾದ ನಂತರ ದೂರದಲ್ಲಿ ಮಾರಯ್ಯನವರು ಬರುವುದು ಕಾಣಿಸುತು. ಹತ್ತಿರ ಬಂದಂತೆ ಕೈಯಲ್ಲಿ ದಿನದಂದಿನಂತಿರದೆ, ದೊಡ್ಡ ಗಂಟು ಅವರಲ್ಲಿ ಕಾಣಿಸಿ ಆಶ್ಚರ್ಯವಾಯಿತು ಇದೇನಿದು ಕಾಯಕಕ್ಕೆ ಹೋದವರು ಇಷ್ಟು ದೊಡ್ಡ ಗಂಟು ಹಿಡಿದು ಬರುತ್ತಿದ್ದಾರೆ. ನಮಗಿಬ್ಬರಿಗೆ ಆಗುವಷ್ಟು ಧಾನ್ಯ ಸುಗುವುದೇ ದಿನವೂ ಕಷ್ಟವಾಗುತ್ತಿರುವಾಗ ಇಂದು ಹಿಡಿದುಕೊಂಡು ಬರುತ್ತಿರುವ ದೊಡ್ಡಗಂಟಾವುದು? ಅದರಲ್ಲಿ ಏನಿರಬಹುದು? ಎಂದು ಇಲ್ಲದ ವಿಶೇಷ ಇಂದೇನು ಎಂದು ಏನೇನೋ ಸಂಶಯಗಳು ಕ್ಷಣಾರ್ಧದಲ್ಲಿ ಲಕ್ಕಮ್ಮನ ಮನಸ್ಸನ್ನು ಮುತ್ತಿದವು. ಅಷ್ಟರಲ್ಲಿ ಮಾರಯ್ಯನು ಮನೆಯ ಬಾಗಿಲಿಗೆ ಬಂದಿದ್ದರು.

ಲಕ್ಕಮ್ಮ:– ಏನಿದು ? ಇಷ್ಟು ದೊಡ್ಡಗಂಟು? ಇದರಲ್ಲೇನಿದೆ? ಏನು ತಂದಿದ್ದೀರಿ ಏಕೆತಂದಿದ್ದೀರಿ?

ಮಾರಯ್ಯ :– ಬಸವಣ್ಣನವರ ಅಂಗಳದಲ್ಲಿ ಈ ದಿನ ಬಹಳಷ್ಟು ಅಕ್ಕಿ ಸಿಕ್ಕಿತು. ಲಕ್ಕಾ. ಅದನ್ನೆಲ್ಲಾ ಆಯ್ದುತಂದೆ.

ಲಕ್ಕಮ್ಮ :– ಇದೇಕೆ ಇಷ್ಟೊಂದು ಅಕ್ಕಿ ತಂದಿರಿ ಎನ್ನಾಳ್ದ?

ಮಾರಯ್ಯ :– ಇಂದು ಬಸವಣ್ಣನವರ ಓಣಿಯಲ್ಲಿ ಕಾಯಕವಿತ್ತು. ಅಲ್ಲಿ ಸಾಕಷ್ಟು ಅಕ್ಕಿ ಚಲ್ಲಿತ್ತು. ತುಂಬಾ ಖುಷಿಯಾಗಿ ಸಾಕಷ್ಟು ಆಯ್ದು ತಂದೆ.

ಲಕ್ಕಮ್ಮ :– ಇದೇನಿದು ಎನ್ನಾಳ್ದ, ನಿಮ್ಮ ಈ ಪರಿ ಶರಣತ್ವಕ್ಕೆ ಸರಿಯೇ? "ಒಮ್ಮನವ ಮಾರಿ ಇಮ್ಮನದಲ್ಲಿ ತಂದಿರುವಿರಿ. ಇದು ನಿಮ್ಮ ಮನವೊ? ಬಸವಣ್ಣನ ಅನುಮಾನದ ಚಿತ್ತವೊ? ಇದು ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ"

ಸಂದಣಿಗೊಂಡು ಮನ ಹರುಷದಿಂದ ಬಸವಣ್ಣನ ಅಂಗಳಕ್ಕೆ ಹೋಗಿ
ತಿಪ್ಪೆಯ ತಪ್ಪಲಲ್ಲಿ ಬಿದ್ದಿದ್ದ ತಂಡುಲವ ಕಟ್ಟಿಕೊಂಡು
ಎಯಿದಾಗಿ ತರಲು ಎಯಿದಾಗಿ ಬಂದಿತ್ತಲ್ಲಾ!
ನಮಗೆ ಎಂದಿನಂದವೆ ಸಾಕು ಮತ್ತೆ ಕೊಂಡು ಹೋಗಿ ಅಲ್ಲಿಯೇ ಸುರಿ
ಮಾರಯ್ಯಪ್ರಿಯ ಅಮರೇಶ್ವರ ಲಿಂಗ ಕೊಟ್ಟ (ಸ್ವಗತ)
ಕಾಯಕವೇ ಸಾಕು ಮಾರಯ್ಯ. ಎಂದು ಖಡಾ ಖಂಡಿತವಾಗಿ ಹೇಳಿದಳು.

ಮಾರಯ್ಯ:– ಏನೆಂದೆ? ಅಲ್ಲಿಯೇ ಸುರಿದು ಬರಲೆ? ಬಸವಣ್ಣನವರೇನೆಂದು ಕೊಂಡರು?

ಅವರಿಗೆ ಬೇಜಾರಾಗುವುದಿಲ್ಲವೆ? ನಾವು ಬಡವರೆಂದು ತಿಳಿದ ಬಸವಣ್ಣನವರು ಕನಿಕರಿಸಿ ನಾನಿಂದು ಕಾಯಕಕ್ಕೆ ಅವರ ಅಂಗಳಕ್ಕೆ ಹೋಗುತ್ತೇನೆಂದು ಗೊತ್ತಿದ್ದುದರಿಂದಲೇ ಅಲ್ಲಿ ಹೆಚ್ಚು ಸುರಿಸಿದ್ದರು. ದಿನವೂ ನಮ್ಮಿಬ್ಬರಿಗೆ ಸಾಕಾಗುವಷ್ಟು ಧಾನ್ಯ ಸಿಕ್ಕುವುದೇ ಕಷ್ಟವಾಗಿತ್ತು. ಈದಿನ ಬಸವಣ್ಣನವರ ಅಂಗಳದಲ್ಲಿ ಬೇಕಾದಷ್ಟಿದ್ದದರಿಂದ ಅದನ್ನು ತಂದುದು ದೊಡ್ಡ ಅಪರಾಧವಾಯಿತೆ?

ಲಕ್ಕಮ್ಮ :– ಏನೆಂದಿರಿ? ನಾವು ಬಡವರೆಂದು ಬಸವಣ್ಣನವರು ಹೆಚ್ಚು ಆರಿಸಿಕೊಂಡು ಹೋಗಲೆಂದು ಧಾನ್ಯವನ್ನು ಹೆಚ್ಚಾಗಿ ತಮ್ಮಂಗಳದಲ್ಲಿ ಚೆಲ್ಲಿಸಿದ್ದರೆ? ಅಬ್ಬಾ ! ಬಸವಣ್ಣನವರು ತಾವು ಶ್ರೀಮಂತರೆಂದೂ, ನಾವು ಬಡವರೆಂದು ಕಂಡುಕೊಂಡರೆ ಆ ದೊಡ್ಡಮನುಷ್ಯರು? ಎನ್ನರಸ, ಅವರು ಹಾಗೆ ತಿಳಿದಮಾತ್ರಕ್ಕೆ, ಬಡತನವೆಂಬ ಶಬ್ದ ನಿಮ್ಮಲ್ಲಿ ಬರಬಹುದೆ? ಶಿವಭಕ್ತರಾದ ನಾವು ಬಡವರಾಗಬಲ್ಲೆವೆ?

ಅಂಗಕ್ಕೆ ಬಡತನವಿಲ್ಲದೆ, ಮನಕ್ಕೆ ಬಡತನವುಂಟೆ?
ಬೆಟ್ಟ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ ಬಡತನವಿದ್ದಡೆ, ಒಡೆಯದೆ
ಘನ ಶಿವಭಕ್ತರಿಗೆ ಬಡತನವಿಲ್ಲ ! ಸತ್ಯರಿಗೆ ದುಷ್ಕರ್ಮವಿಲ್ಲ,
ಎನಗೆ ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವುಳ್ಳನ್ನಕ್ಕ
ಯಾರ ಹಂಗಿಲ್ಲ ಮಾರಯ್ಯ

ಮಾರಯ್ಯ :– ಇಲ್ಲಿ ಹಂಗಿನ ಪ್ರಶ್ನೆ ಏತರದು ಲಕ್ಕಾ. ನೀನು ಬಹುಜಾಣೆಯೆಂಬ ಸೊಕ್ಕಿನಿಂದ ಬಸವಣ್ಣನವರ ಹಂಗೂ ಇಲ್ಲದಂತೆ ಮಾತನಾಡುತ್ತಿರುವಿ. ಸ್ವಲ್ಪ ಎಚ್ಚರದಿಂದ ನಡೆ. ಒಂದು ದಿನ ಆಸೆಯಿಂದ ಸ್ವಲ್ಪ ಹೆಚ್ಚು ಅಕ್ಕಿ ತಂದುದಕ್ಕೆ ಇಷ್ಟು ರಾದ್ಧಾಂತವೇ? ನಿನ್ನ ನಾಲಿಗೆಯನ್ನ ಬಹಳ ಉದ್ದ ಚಾಚದೆ ಸ್ವಲ್ಪ ಹಿಡಿತದಲ್ಲಿಟ್ಟುಕೊ. (ಎಂದು ಸ್ವಲ್ಪ ಸಿಟ್ಟಿನಿಂದಲೇ) ನುಡಿದರು ಮಾರಯ್ಯನವರು.

ಲಕ್ಕಮ್ಮ :- ಎನ್ನರಸ, ಇಷ್ಟಕ್ಕಿಯನ್ನು ಆಸೆಯಿಂದ ತಂದಿರಾ? ಅದೇಕೆ ತಂದಿರಿ ಎಂದುದಕ್ಕೆ ರೋಷಗಳನ್ನು ಹಿಡಿತದಲ್ಲಿಟ್ಟುಕೊಳ್ಳದೆ ಹೋದಿರಾ ಎನ್ನಾಳ್ದ?

"ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಅಯ್ಯಾ?
ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ! ಮಾರಯ್ಯಪ್ರಿಯ
ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ!"

[ಈಸಕ್ಕಿಯಾಸೆ ನಿಮಗೇಕೆ ....ಈಶ್ವರನೊಪ್ಪ ಈ ಮಾತುಗಳು ಮಾರಯ್ಯನವರ ಕಿವಿಯಲ್ಲಿ ಪ್ರತಿಧ್ವನಿಸತೊಡಗಿದವು. 'ಆಸೆ' ಎಂಬುದು 'ಆಸೆ'ಯೆ. ಆ ಆಸೆ ಅಷ್ಟೈರ್ಯಕ್ಕಾಗಿ ಆಗಿರಬಹುದು. ಈಸಕ್ಕಿಗಾಗಿ ಆಗಿರಬಹುದು. ಹೌದು ನಾನಿಂದು ಆಸೆಗೆ ಮನಸೋತೆ. ಆಸೆಯನ್ನು ನನ್ನ ಅಂಕಿತದಲ್ಲಿ ಇಟ್ಟುಕೊಳ್ಳುವುದನ್ನು ಬಿಟ್ಟು, ಆಸೆಯ ಅಂಕಿತಕ್ಕೆ ಒಳಗಾದೆ. ದಾರಿ ತಪ್ಪಿದೆ- ಶರಣ ತತ್ವಕ್ಕೆ ವಿರೋಧವಾಗಿ ನಡೆದೆ. ಈಗ ನನ್ನ ಪತ್ನಿ ಲಕ್ಕಾ ನನಗೆ ಗುರುವಾದಳು. ಅವಳು ಕೇವಲ ಪತ್ನಿಯಲ್ಲ ಮಹಾಜ್ಞಾನಿ. ನಾನು ದಾರಿತಪ್ಪಿದಾಗ ಎಚ್ಚರಿಸಿ ಕೈ ಹಿಡಿದು ನಡೆಸಿದ ಮಹಾಗುರು] ಎಂದು ಮನಸ್ಸಿನಲ್ಲಿ ಅಂದುಕೊಂಡು,

ಮಾರಯ್ಯ:- ಲಕ್ಕಾ, ನೀನು ಮಹಾಜ್ಞಾನಿ. ನನ್ನನ್ನಿಂದು ಕತ್ತಲಿಂದ ಬೆಳಕಿನೆಡೆಗೆ ನಡೆಸಿದ ಮಹಾಬೆಳಗು. ನಿನ್ನ ಮಾರ್ಗದರ್ಶನ ನನಗೆ ನೀಡು. ನನ್ನ ಅಂಧಕಾರವನ್ನು ಸಂಪೂರ್ಣ ತೊಡೆದು ಹಾಕು. ನಿನ್ನ ಸುಜ್ಞಾನ ನನ್ನ ಸಹಾಯಕ್ಕೆ ಬರದಿದ್ದಲ್ಲಿ ನಾನು ಆಸೆ ಆಮಿಷಕ್ಕೆ ಒಳಗಾಗಿ ದಾರಿತಪ್ಪಿ ಹೋಗುತ್ತಿದ್ದೆ. ನನಗೆ ಮಾರ್ಗದರ್ಶನ ನೀಡು ಮಹಿಳಾ ಮಣಿ, ಮಾರ್ಗದರ್ಶನ ನೀಡು.

ಲಕ್ಕಮ್ಮ:- ಎನ್ನ ಎದೆಯರಸ ಏನು ಹೇಳುತ್ತಿರುವಿರಿ? ನಾನು ನಿಮಗಿಂತ ದೊಡ್ಡ ಜ್ಞಾನಿ ಹೇಗಾಗಬಲ್ಲೆ? ನೀವು ಕಲಿಸಿದುದನ್ನು ಕಲಿತು, ನೀವು ನಡೆಸಿದಂತೆ ನಡೆದುದರಿಂದ ಬಂದ ತಿಳುವಳಿಕೆಯೇ ಅಲ್ಲವೇ? ಆ ಜ್ಞಾನವು ನಿಮ್ಮಲ್ಲಿ ಮರೆಯಾದಾಗ, ನನ್ನಲ್ಲಿ ಕಾಣಿಸಿಕೊಂಡಿತು. ನಾನು ಬೇರೆ, ನೀವು ಬೇರೆ ಎಂಬದಂದುಗವೇಕೆ. ಬೀಜವು ಯಾವುದಾದರೂ ಮೊಳೆಕೆಯು ಮುಖದಲ್ಲಿ ಹಿಂಚುಮುಂಚುಂಟೆ? ಅದೇ ಬೀಜವೇ ಅಲ್ಲವೇ ಮೊಳೆಯುವುದು? ಆ ಜ್ಞಾನ ನೀವು ತಿಳಿದರೂ ಅಷ್ಟೆ. ನಾನು ತಿಳಿದರೂ ಅಷ್ಟೆ. ಒಬ್ಬರಿಗೊಬ್ಬರು ಆಸರೆಯಾಗಿ ದಾರಿತಪ್ಪದೆ ನಡೆದರೆ ಆಯ್ತು ಅದೇ ಅಮರೇಶ್ವರ ಲಿಂಗಕ್ಕೆ ತೃಪ್ತಿ ಎನ್ನೊಡೆಯಾ? ನಾವಿಬ್ಬರೂ ಬೇರಲ್ಲ.

ಆವ ಬೀಜವ ಬಿತ್ತಿದರೂ ಮೊಳೆಯ ಮುಖ ಹಿಂಚುಮುಂಚುಂಟೆ?
ನೀನು ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ?
ಮೂಲನಷ್ಟವಾದಲ್ಲಿ ಅಂಕುರ ನಿಂದಿತ್ತು. ಕೂಟಕ್ಕೆ
ಸತಿ ಪತಿ ಎಂಬ ನಾಮವಿಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ?

ನಾನು ನೀನು ಬೇರೆ ಎಂದು ತಿಳಿಯಬೇಡ. ಆದರೆ ನೀವು ಹೇಳಿಕೊಟ್ಟದನ್ನೇ ಹೇಳಿದ್ದೇನಷ್ಟೆ.

ಮಾರಯ್ಯ:- ಲಕ್ಕಾ ತಪ್ಪಾಯಿತು ಕ್ಷಮಿಸು. ನನಗೆ ಬಹುದಿನದಿಂದ ಶರಣರನ್ನೆಲ್ಲಾ ಕರೆಸಿ ಆರೋಗಣೆ ಮಾಡಬೇಕೆಂಬಾಸೆ ಬಹಳಿತ್ತು. ಆದರೆ ತರುತ್ತಿದ್ದ ಧಾನ್ಯ  ನಮ್ಮಿಬ್ಬರಿಗಷ್ಟೆ ಆಗುತ್ತಿದ್ದುದರಿಂದ ಆ ಬಯಕೆಯನ್ನು ಹತ್ತಿಕ್ಕಿಕೊಂಡಿದ್ದ ನಾನು, ಹೆಚ್ಚು ಅಕ್ಕಿಯನ್ನು ನೋಡಿದ್ದೇ ತಡ, ಬಹಳಷ್ಟು ವಿಚಾರ ಮಾಡದೆ, ದಾಸೋಹಮಾಡಲೆಂದು ಅಲ್ಲಿದ್ದ ಅಕ್ಕಿಯನ್ನೆಲ್ಲಾ ಆರಿಸಿ ತಂದು, ತಪ್ಪುಮಾಡಿದೆ ಲಕ್ಕಾ, ತಪ್ಪು ಮಾಡಿದೆ.

ಮಾರಯ್ಯ:- ಲಾಭ ಮಾಡಿಕೊಂಡು ಭಕ್ತರು ದಾಸೋಹ ಮಾಡಬಾರದು, ಎನ್ನರಸಾ,

ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿ ತಂದು ದಾಸೋಹ ಮಾಡಬಹುದೆ? ಒಮ್ಮನದಿ ತಂದು ಒಮ್ಮನದಲ್ಲಿಯೇ ಮಾಡಿ ಇಮ್ಮನವಾಗದ ಮುನ್ನವೆ ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲಬೇಕು  ಮಾರಯ್ಯ

ಬಸವಣ್ಣನವರು ದುಡಿದ ಅಕ್ಕಿಯನ್ನು, ಅವರು ನಾವು ಬಡವರೆಂದು ತಿಳಿದು ಚಲ್ಲಿಸಬಾರದಿತ್ತು. ಬಸವಣ್ಣನವರು ತಾವು ಕೊಡುವವರು ನಾವು ತೆಗೆದುಕೊಳ್ಳುವವರು ಎಂಬ ಭಾವನೆ ತೋರಿಸದಂತಾಗಲಿಲ್ಲವೆ? ಅವರು ನಮ್ಮನ್ನು ಪರೀಕ್ಷಿಸಲೋಸುಗ ಹಾಕಿರಬಹುದು. ನಾವು ಆಸೆಯಿಂದ ತಂದುದು ದಾಯಗಾರಿಕೆಯಾಯ್ತು ಕಾಯಕವಾಗಲಿಲ್ಲ. ಎಂದಾಗ ಅವಳು ಅರಿವಿನಾಗರವಾಗಿರುವುದನ್ನು ಅರಿತ ಮಾರಯ್ಯನವರ ಹೃದಯ ಅರಳಿತು ಬೇರೆ ಗುರುವನ್ನರಸುವುದಕ್ಕಿಂತ ಅಕ್ಕಮ್ಮನಿಂದಲೇ ಶಿವಯೋಗದ ಅರಿವನ್ನು ಪಡೆಯಬಹುದೆಂದು ಅನಿಸಿ,

ಅಂಧಕರಿಗೆ ಜೀವವಿದ್ದಡೆ, ಕಣ್ಣಿನಿಂದಲೆ ಕಂಡು ನಡೆಯಬಲ್ಲನೆ? ನೀ ಸತಿಯಾಗಿ, ನಾಪತಿಯಾಗಿ ಉಭಯ ಪ್ರಾಣ ಏಕರೂಪಾಗಿ ಯೋಗದ ಅಂಗನೆ, ಅಮರೇಶ್ವರ ಲಿಂಗವ ತೋರು" ಎಂದು ಕೇಳಿಕೊಳ್ಳುತ್ತಾರೆ.ಇದನ್ನು ಕೇಳಿದ ಲಕ್ಕಮ್ಮ, ಬಹು ಮಾರ್ಮಿಕವಾಗಿ ಉತ್ತರಿಸುತ್ತಾಳೆ. ದೇವರನ್ನು ಕಾಣುವ ಶಕ್ತಿ ತನ್ನಲ್ಲೇ ಇರಬೇಕು.

ಅದರ ಮಾರ್ಗವನ್ನು ಬೇರೆಯವರು ಬೋಧಿಸುವರಲ್ಲದೆ, ದೇವರನ್ನೇ ತೋರಿಸಲಾರರು ಅವನನ್ನು ಕಾಣುವ ಭಕ್ತಿ, ಶಕ್ತಿ ವ್ಯಕ್ತಿಯಲ್ಲೇ ಅಡಕವಾಗಿರಬೇಕು. ನನ್ನ ಮಾರಯ್ಯ.

ಕೈದಂಡವ ಕೊಡುವರಲ್ಲದೆ, ಕಲಿತನವ ಕೊಡುವರುಂಟೆ ಅಯ್ಯಾ?

ಸಸಿಗೆ ನೀರೆರೆದರೆ ಎಳಕುವುದಲ್ಲದೆ, ನಷ್ಟ ಮೂಲಕ್ಕೆ ನೀರಹೊತ್ತು ಹೊಯ್ದರೆ ಎಳಕುವುದೇನಯ್ಯಾ? .... ಪ್ರತಿಷ್ಠೆಗೆ ಮಾಟವಲ್ಲದೆ ಸ್ವಯಂಭುವಿಗುಂಟೇ? ನನಗು ನಿನಗೂ ಮಾರಯ್ಯಪ್ರಿಯ ಅಮರೇಶ್ವರ ಲಿಂಗವನರುವುದಕ್ಕೆ ಬೇರೊಂದು ಠಾವುಂಟೆ ಮಾರಯ್ಯ?

ಸತಿಯ ಅಮರವಾಣಿ ಕೇಳಿ ಮಾರಯ್ಯನವರ ಆನಂದಕ್ಕೆ ಪಾರಪಿಲ್ಲವಾಯ್ತು. ನಾವಿಬ್ಬರೂ ಒಂದಾಗಿ ಪರಶಿವನನ್ನು ಅರಿಯಬೇಕು ಆಕೆ ಜ್ಞಾನದಲ್ಲಿ ಹಿರಿಯರನ್ನೂ ಮೀರಿಸಿದ್ದಾಳೆ. ನಾವಿಬ್ಬರೂ ಒಂದಾಗಿ ಶರಣ ಜೀವನದಲ್ಲಿ ಮುಂದಾದರೆ, ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಆ ಶಿವನು ನಮಗೆ ಒಲಿವಲ್ಲಿ ಸಂದೇಹವಿಲ್ಲ ಎಂದು ಸಂತೋಷ ಸಾಗರದಲ್ಲಿ ಓಲಾಡಿದರು ಮಾರಯ್ಯ ಆದರೆ ಹೆಚ್ಚಾಗಿ ತಂದ ಅಕ್ಕಿಯ ಗಂಟು ಕೈಯಲ್ಲೇ ಇದ್ದ ಕಡೆ ಲಕ್ಷ್ಯ ಹೋಯಿತು.

ಈಗ ಈ ಅಕ್ಕಿ ಏನುಮಾಡಲಿ ಎನ್ನರಸಿ?

ಈ ಅಕ್ಕಿಯನ್ನು ಎಲ್ಲಿತ್ತೋ ಅಲ್ಲಿಗೆ ಸುರಿದು ಬನ್ನಿ. ನಂತರ ಒಂದು ಮಾತು. ನಿಮಗೆ, ಅಲ್ಲಮ ಪ್ರಭು, ಬಸವಾದಿ ಶರಣರಿಗೆ ಆರೋಹಣೆಗೆ ಹೇಳಬೇಕೆಂಬ ಆಸೆ ಇದೆ ಎಂದು ಹೇಳಿದಿರಲ್ಲವೆ? ಬರುವಾಗ ಎಲ್ಲ ಶರಣರನ್ನೂ ಕಂಡು, ನಾಳೆ ಆರೋಗಣೆಗೆ ನಮ್ಮ ಮನೆಗೆ ದಯಮಾಡಿಸಬೇಕೆಂದು ಬಿನ್ನವಿಸಿ ಬನ್ನಿ. ಎಂದಳು,

**ನಿರೂಪಣೆ**

[ಈ ಮಾತನ್ನು ಕೇಳಿದ ಮಾರಯ್ಯನವರಿಗೆ ಆಶ್ಚರ್ಯವೂ, ಗಾಬರಿಯೂ ಏಕಕಾಲಕ್ಕೆ ಉಂಟಾದವು. ಏಕೆಂದರೆ ಮನೆಯಲ್ಲಿ ಒಂದು ಕಾಳೂ ಧಾನ್ಯವಿಲ್ಲ. ಹಣವಂತೂ ಮೊದಲೇ ಇಲ್ಲ. ಹೀಗಿರುವಾಗ ಮಹಾ, ಮಹಾ ಶರಣರನ್ನೆಲ್ಲಾ ಆರೋಗಣೆಗೆ ಬಿನ್ನವಿಸಿ ನಗೆಪಾಟಲಾಗಬಾರದು. ಅಷ್ಟೇ ಅಲ್ಲ. ಬಂದವರಿಗೆ ನೈವೇದ್ಯಮಾಡದೆ, ಅವಮಾನವೂ ಆಗಬಾರದು ಎಂದು]

ಏನು ಲಕ್ಕಾ. ಇದನ್ನೇನು ಹೇಳುವಿ? ಬರಿಗೈಲಿ ಮೊಳಹಾಕುವುದೆ? ಶರಣರು ಬಂದರೆ. ಬರೀ ತೀರ್ಥವನ್ನು ಕೊಟ್ಟು ಕಳಿಸುವೆಯಾ? ಅಸಂಖ್ಯಾತ ಶರಣರಿಗೆ ಆರೋಗಣೆ ಮಾಡಬೇಕಾದರೆ ಹಣಬೇಕಾದರೆ ಹಣಬೇಡವೆ, ಎಂದು ಗಾಬರಿಗೊಂಡು ಕೇಳಲು, ಲಕ್ಕಮ್ಮನು

ಅಂಜದಿರು ಎನ್ನಾಳ್ದ, ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವ ಸದ್‌ಭಕ್ತಂಗೆ ಎತ್ತನೋಡಿದತ್ತ ಲಕ್ಷ್ಮಿತಾನಾಗಿಪ್ಪಳು. ಮಾರಯ್ಯಪ್ರಿಯ ಅಮರೇಶ್ವರಲಿಂಗ ಸೇವೆಯುಳ್ಳನ್ನಕ್ಕ!

ಮಾರಯ್ಯ, ಏಕೆ ಕಳವಳಿಸುತ್ತೀರಿ? ಎಲ್ಲಿಯವರೆಗೆ ನಾವು ಸತ್ಯ, ಶುದ್ಧ ಮನಸ್ಕರಾಗಿ ಕಾಯಕಮಾಡುತ್ತಾ ಅಮರೇಶ್ವರ ಲಿಂಗದ ಸೇವೆಯನ್ನು ಮಾಡುತ್ತೇವೆ ಅಲ್ಲಿಯ ವರೆಗೆ, ನಮಗೆ ಯಾವುದಕ್ಕೂ ಕೊರತೆಯಾಗುವುದಿಲ್ಲ. ಸತ್ಕಾರ್ಯಮಾಡುವ ಸತ್ಸಂಕಲ್ಪ ಮಾಡಿದಲ್ಲಿ ಅಮರೇಶ್ವರ ಲಿಂಗವು ಎಲ್ಲಿಂದಲೋ, ಹೇಗೋ ನಮಗೆ ಬೇಕಾದುದನ್ನೆಲ್ಲಾ ಒದಗಿಸಿ, ಕಾರ್ಯನೆರವೇರಿಸುತ್ತಾನೆ. ಅವನ ಬಲವಿರುವ ವರೆಗೂ ನಾವು ಹೆದರಬೇಕಾಗಿಲ್ಲ ಭಕ್ತಂಗೆ ಬಡತನ ಉಂಟೆ? ನಿತ್ಯಂಗೆ ಮರಣ ಉಂಟೆ? ಮಾರಯ್ಯಪ್ರಿಯ ಅಮರೇಶ್ವರ ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ. ಹೌದು ಲಕ್ಕಾ, ನೀ ಹೇಳಿದುದು ಸತ್ಯ. ಮೊನ್ನೆ ನೋಡು, ಶಿವಭಕ್ತ ಶರಣಯ್ಯನು ತಾನೇ ಕಡುಬಡವ. ಆದರೆ ತನ್ನ ನೆರೆಯ ಶಿವಯ್ಯನ, ಮಗಳ ಮದುವೆ ಮಾಡಲು ಹಣವಿಲ್ಲದೆ ಒದ್ದಾಡುತ್ತಿದ್ದಾಗ ಶರಣಯ್ಯನೇ ಆಮದುವೆಯ ಜವಾಬ್ದಾರಿ ವಹಿಸಿಕೊಂಡ. ಆಗ ಎಲ್ಲೆಲ್ಲಿಂದಲೋ ಯಾರು, ಯಾರೋ, ಒಬ್ಬರು ಅಕ್ಕಿ, ಒಬ್ಬರು ಬೆಲ್ಲ, ಮತ್ತೊಬ್ಬರು ಬೇಳೆ, ಮಗುದೊಬ್ಬರು ಮದುಮಕ್ಕಳಿಗೆ ವಸ್ತು, ಹೀಗೆ ಒಬ್ಬೊಬ್ಬರು ಒಂದೊಂದು ವಸ್ತು ತಂದು ವಿವಾಹವನ್ನು ಮಹಮನೆಯಲ್ಲಿ ಸರಳವಾಗಿ ಮಾಡಿ ಮುಗಿಸಿಯೇ ಬಿಟ್ಟರು. ಬೆಟ್ಟದಂತಹ ಕೆಲಸ ಹೂವೆನ್ನದಷ್ಟು ಹಗುರಾಗಿ ನಡೆದೇ ಹೋಯಿತು. ಇದಕ್ಕೆಲ್ಲಾ ಶರಣಯ್ಯನ ಭಕ್ತಿಯೇ ಕಾರಣ ನಿಜ ನನ್ನರಸಾ. ನೀವು ಹೆದರುವ ಕಾರಣವಿಲ್ಲ ಬೇಗಹೋಗಿ ಆರೋಗಣೆಗೆ ಬಿನ್ನವಿಸಿ ಬನ್ನಿ ನನ್ನೊಡೆಯಾ ನನಗೂ ನಿಮ್ಮಂತೆಯೇ ಶರಣರನ್ನು ಅರೋಗಣೆಗೆ ಬಿನ್ನವಿಸ ಬೇಕೆಂಬಾಸೆಯಿತ್ತು. ಆದುದರಿಂದ ಪ್ರತಿದಿನವೂ ನೀವು ತರುತ್ತಿರುವ ಕಾಯಕದ ಧಾನ್ಯದಲ್ಲಿ ಒಂದೊಂದು ಹಿಡಿ ಅಕ್ಕಿ ಶೇಖರಿಸುತ್ತಾ ಬಂದಿದ್ದೇನೆ. ಅದು ಹೆಚ್ಚಾಗಿ, ಶರಣರಿಗೆಲ್ಲಾ ಆರೋಗಣೆ ಮಾಡುಬಹುದಾದಷ್ಟು ಸಂಗ್ರಹವಾಗಿದೆ.

ಏನೆಂದೆ ಲಕ್ಕಾ. ಸಂಗ್ರಹ ಕಾರ್ಯ ಶರಣರಿಗೆ ಸಲ್ಲದು. ನೀನೇ ನನಗೆ ಹೇಳುವವಳಾಗಿ ಸಂಗ್ರಹ ಮಾಡಿದೆ ಏಕೆ?

**ನಿರೂಪಣೆ**

ನಮ್ಮ ಅಗತ್ಯದ ಧಾನ್ಯದಲ್ಲೇ ಉಳಿಸಿದ್ದು. ಎನ್ನಾಳ್ದ, ನಮಗಾಗಿ ನಾಳೆಗೆಂದು ಸ್ವಾರ್ಥದ ಉದ್ದೇಶದಿಂದ ಮಾಡಿದ ಸಂಗ್ರಹಣೆ ತರವಲ್ಲ. ಆದರೆ ಇದು ಸತ್ಕಾರ್ಯಕ್ಕಾಗಿ ಮಾಡಿದ ಸಂಕಲ್ಪ ಅದೂ ಶಾಶ್ವತವಾದ ಸಂಗ್ರಹವಲ್ಲ. ಇಷ್ಟರಲ್ಲೇ ಆರೋಗಣೆ ಮಾಡಿ ಮುಗಿಸುತ್ತೇವಲ್ಲವೆ? ಆದ್ದರಿಂದ ಇದು ತತ್ವಕ್ಕೆ ವಿರೋಧವಲ್ಲ.

ಇಷ್ಟರಲ್ಲಿ ಲಕ್ಕಮ್ಮನ ಶಕ್ತಿ ಮಾರಯ್ಯನಿಗೆ ಸಂಪೂರ್ಣ ಅರ್ಥವಾಗಿತ್ತು. ಆಗ ಅವರು ಬಸವನ ಅಂಗಳಕ್ಕೆ ಹೋಗಿ, ಹೆಚ್ಚಾದ ಅಕ್ಕಿಯನ್ನು ಸುರಿದು,

"ಸತ್ಯವೆಂಬ ತಟ್ಟೆಯಲ್ಲಿ ಚಿತ್ತ ಶುದ್ಧಿಯೆಂಬ ವಿಭೂತಿಯ ಬೈಚಿಟ್ಟಾ ಸಕಲ ಸಂಪದ ಪ್ರಮಥರು ಮುಂತಾಗಿ ಅಮರೇಶ್ವರ ಲಿಂಗದ ಆಶ್ರಯದಲ್ಲಿ ಪ್ರಸಾದವ ಕೊಂಬುದಕ್ಕೆ ಬಾರಂ ಸಂಗನ ಬಸವಣ್ಣ ಎಂದು ಬಿನ್ನವಿಸಿದರು. ಅವರೊಡನೆ ಇತರ ಶರಣರಿಗೂ ಬಿನ್ನಹವಿತ್ತ ಮಾರಯ್ಯನವರು ಮನೆಗೆ ಹಿಂತಿರುಗಿದರು.

ಮರುದಿನ ಎಲ್ಲರೂ ಬಂದರು. ಲಕ್ಕಮ್ಮ ಅಮರೇಶ್ವರ ಲಿಂಗದ ಕೃಪೆಯಿಂದ ಪವಾಡ ಸದೃಶ ರೀತಿಯಲ್ಲಿ, ಮಾರಯ್ಯನವರು ತಂದ ಅಕ್ಕಿಯಿಂದಲೇ ಅನ್ನಮಾಡಿ, ಅಮರೇಶ್ವರ ಲಿಂಗಕ್ಕೆ ನೈವೇದ್ಯ ಮಾಡಿ ಎಲ್ಲರಿಗೂ ಎಡೆ ಮಾಡಿದಳು ಎಲ್ಲರೂ ಅರೋಗಿಸಿ ಸಂತೃಪ್ತರಾದರು. ಆಯ್ದಕ್ಕಿಯ ಕಾಯಕದಿಂದ ಜೀವಿಸುತ್ತಿದ್ದ ಮಾರಯ್ಯ-ಲಕ್ಕಮ್ಮ ದಂಪತಿಗಳು, ಇಷ್ಟು ದೊಡ್ಡ ಶರಣ ಪ್ರಭುದೇವರಿಗೆ ಆಶ್ಚರ್ಯವಾಯಿತು. ಆಗ ಪ್ರಭುದೇವರು,

ಆರಾರ ನೇಮಕ್ಕೆ ಸಂದಿತ್ತು. ಇಚ್ಛಾ ಭೋಜನಕ್ಕೆ ಕೃತ್ಯವಾಯಿತ್ತು. ಮಹಾಘನದೊದಗ ಕಂಡೆಯಾ ಸಂಗನ ಬಸವಣ್ಣಾ!

ಗುಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು." ಎಂದರು

ಆಗ ಲಕ್ಕಮ್ಮ, ಇದೆಲ್ಲಾ ತಮ್ಮ ಆಶೀರ್ವಾದ. ನಿಮ್ಮ ಕರುಣೆಯ ಪ್ರಸಾದ ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು

ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ

ಕೊಡದೆ ತ್ಯಾಗಿ ಎನಿಸಿಕೊಂಬುದು ನುಡಿ ಇಲ್ಲದ ಶೃಂಗಾರ

**ನಿರೂಪಣೆ**

ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ನಾ ಜಲವ ತುಂಬಿದಂತೆ. ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ ಭಕ್ತಿ, ಇದು ಎಂದ . ನಿಮ್ಮ ಕರುಣೆಯಿಂದ ನಮಗೀ ಮಹಾ ಯೋಗ ಲಭಿಸಿತು ಎಂದು ನಮ್ರಳಾಗಿ ನುಡಿಯುತ್ತಾಳೆ. ಲಕ್ಕಮ್ಮ

ಬಸವಣ್ಣನವರು
ಮನೆ ನೋಡಾ ಬಡವರು, ಮನನೋಡಾ ಸಂಪನ್ನರು!
ಧನ ನೋಡಾ ಬಡವರು, ಘನಮನ ಸಂಪನ್ನರು !
ಕೂಡಲಸಂಗನ ಶರಣರು ಕರುಳಿಲ್ಲದ ಕಲಿಗಳು!
ಇವರನಾರಿಗೆ ಉಪಮಿಸಬಹುದು ಕೂಡಲ ಸಂಗಮದೇವಾ,

ಎಂದು ಕೊಂಡಾಡಿ ಮಾರಯ್ಯನಿಗೆ ನೀನು ನಿನ್ನ ಭಕ್ತಿಯ ಶಕ್ತಿಯಿಂದ ನಿನ್ನ ದೇವ ಅಮರೇಶ್ವರ ಲಿಂಗಕ್ಕೆ ಭಕ್ಷ್ಯ ಭೋಜವನ್ನೀ ನೀಡಬಲ್ಲೆ ಎಂದಾಗ ಭಾವದಿಂದ, ಮಾರಯ್ಯನು ಬಸವಣ್ಣನಿಗೆ

ತನುವೀದಡೆ ತನುವೆನಗಿಲ್ಲ, ಮನವೀದಡೆ ಮನವೆನಗಿಲ್ಲ
ಧನವೀದಡೆ ಧನವೆನಗಿಲ್ಲ, ಎನ್ನೊಡಲ ಹೊರೆವೆನಾಗಿ
ಅಮರೇಶ್ವರ ಲಿಂಗಕ್ಕೆ ನೀಡುವ ಬಯಕೆ ನನಗಿಲ್ಲ ಸಂಗನ ಬಸವಣ್ಣಾ

ಎಂದು ವಿನೀತನಾಗಿ ನುಡಿದರು. ಅಲ್ಲದೆ ಬಸವಣ್ಣನ ಕೃಪೆಯಿಂದ ನಾವಿಂದು ಇಂತಹ ಶಕ್ತಿಯನ್ನು ಪಡೆಯಲು ಸಾಧ್ಯವಾಯಿತು. ಇದೆಲ್ಲಾ ಬಸವ ಪವಾಡವೆಂದು ಬಸವಣ್ಣನನ್ನು ಕೊಂಡಾಡಿದನು.

ಎಲ್ಲರ ಮುಂದೆ ತನ್ನನ್ನೂ ಇಷ್ಟು ದೊಡ್ಡದಾಗಿ ವರ್ಣಿಸಿದಾಗ 'ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ' ಎಂದು ತಿಳಿದು, ಬಾಳಿದ ಬಸವಣ್ಣನವರಿಗೆ ಸಂಕೋಚವಾಗಿ,

" ನಾ ನಡೆವುದೆಲ್ಲಾ ಅನಾಚಾರ, ನಾನುಡಿವುದೆಲ್ಲ ಅವಿಚಾರ, ನಡೆ-ನುಡಿ ಶುದ್ಧವಿಲ್ಲದ ಅಪವಿತ್ರನ ತಂದು ನಿಮ್ಮೊಕ್ಕುದನಿಕ್ಕು ಸಲಹಿದಿರಾಗಿ, ಎನಗಿನ್ನಾವ ಭಯವೂ ಇಲ್ಲ. ಕೂಡಲ ಸಂಗಮ ದೇವರು ಸಾಕ್ಷಿಯಾಗಿ ಆಯ್ದಕ್ಕಿಯ ಮಾರಯ್ಯನ ಮನೆಗೆ ಮಗ ನಾನು'? ಎಂದು ತನ್ನ ವಿನಯ ಭಾವವನ್ನು ಪ್ರಕಟಿಸುವುದರ ಜೊತೆಗೆ, ಆಯ್ದಕ್ಕಿ ಮಾರಯ್ಯನ ಶ್ರೇಷ್ಠತೆಯನ್ನು ಎತ್ತಿ ಹಿಡಿದನು. ಇಂತಹ ಪವಡ ಸದೃಶ ಆರೋಗಣೆ ಮಾಡಿದ ನಿನ್ನ ಭಕ್ತಗೆ ಎಣೆ ಇಲ್ಲಿ. ನೀನು ಶರಣ ಶ್ರೇಷ್ಠ ಲಕ್ಕಮ್ಮ ನಿನಗೆ ತಕ್ಕ ಪತ್ನಿ. ಈ ಆರೋಗಣೆಗೆ ಆಕೆಯ ಭಕ್ತಿ ಕಾರ್ಯತತ್ಪರತೆ ಶರಣ ನಿಷ್ಠೆಯೇ ಕಾರಣ. ಅಂತಹ ಶರಣ ಸತಿಯನ್ನು ಪಡೆದ ನಿನ್ನ ಭಾಗ್ಯಕ್ಕೆ ಎಣೆ ಇಲ್ಲ ಎಂದು ದಂಪತಿಗಳೀರ್ವರನ್ನೂ ಕೊಂಡಾಡಿದರು ಬಸವಣ್ಣನವರು.

ಆಗ ವಿನಯವೇ ಮೂರ್ತಿವೆತ್ತು ಬಂದತ್ತಿದ್ದ ಲಕ್ಕಮ್ಮ ಭಕ್ತಿಯಿಂದ, ಬಸವಣ್ಣನ ಪ್ರಸಾದವ ಕೊಂಡು ಎನ್ನ ಕಾಯ ಶುದ್ಧವಾಯಿತ್ತಯ್ಯಾ

ಚನ್ನಬಸವಣ್ಣನ ಪ್ರಸಾದವ ಕೊಂಡು ಎನ್ನ ಜೀವ ಶುದ್ಧವಾಯಿತ್ತಯ್ಯಾ.
ಮಡಿವಾಳಯ್ಯನ ಪ್ರಸಾದವ ಕೊಂಡು ಎನ್ನ ಭಾವ ಶುದ್ಧವಾಯಿತ್ತಯ್ಯಾ
ಶಂಕರ ದಾಸಿಮಯ್ಯನ ಪ್ರಸಾದವ ಕೊಂಡು ಎನ್ನ ತನು ಶುದ್ಧವಾಯಿತ್ತಯ್ಯಾ.
ಸಿದ್ಧರಾಮಯ್ಯನ ಪ್ರಸಾದವ ಕೊಂಡು ಎನ್ನ ಮನ ಶುದ್ಧವಾಯಿತ್ತಯ್ಯಾ.
ಘಟ್ಟಿವಾಳಯ್ಯನ ಪ್ರಸಾದವ ಕೊಂಡು ಎನ್ನ ಪ್ರಾಣ ಶುದ್ಧವಾಯಿತ್ತಯ್ಯಾ.
ಅಕ್ಕನಾಗಮ್ಮನ ಪ್ರಸಾದವ ಕೊಂಡು ಎನ್ನ ಅಂತರಂಗ ಶುದ್ಧವಾಯಿತ್ತಯ್ಯಾ.

ಮುಕ್ತಾಯಕ್ಕಗಳ ಪ್ರಸಾದವ ಕೊಂಡು ಎನ್ನ ಬಹಿರಂಗ ಶುದ್ಧವಾಯಿತ್ತಯ್ಯಾ.
ಇವರು ಮುಖ್ಯವಾದ ಏಳನೂರು ಎಪ್ಪತ್ತು ಅಮರಗಣಂಗಳ
ಪ್ರಸಾದವ ಕೊಂಡು ಬದುಕಿದೆನಯ್ಯಾ
ಮಾರೇಶ್ವರ ಪ್ರಿಯ ಅಮರೇಶ್ವರಾ

ನಿಮ್ಮಶರಣರ ಪಾದಕ್ಕೆ ಆಹೋರಾತ್ರಿಯಲ್ಲಿ ನಮೋ, ನಮೋ, ಎನ್ನುತ್ತಿರ್ದೆನು.

ಎಂದು ವಿನೀತಭಾವದಿಂದ ಶರಣರೆಲ್ಲರಿಗೆ ನಮಸ್ಕರಿಸಲು ಶರಣರು ಲಕ್ಕಮ್ಮ ಮಾರಯ್ಯನವರ ಭಕ್ತಿ, ವಿನಯ, ಶ್ರದ್ಧೆ, ನಿಷ್ಠೆಗಳನ್ನು ಕೊಂಡಾಡುತ್ತ ತೆರಳಿದರು.

ಮಾರಯ್ಯನು ಲಕ್ಕಮ್ಮನನ್ನು ಕುರಿತು.

ಲಕ್ಕ, ನಿನ್ನ ಸದ್ಭಾವದಿಂದ ಎಷ್ಟೋ ದಿನದ ಬಯಕೆ ಕೈಗೂಡಿ ನನಗಿಂದು ಮಹದಾನಂದವಾಗೆದೆ. ನಿನ್ನನ್ನಾವರೀತಿ ಕೊಂಡಾಡ ಬೇಕೋ ತಿಳಿಯದಾಗಿದೆ. ಬಸವಣ್ಣನವರು ನುಡಿದಂತೆ, ಎಷ್ಟು ಕಾಲದ ಪುಣ್ಯವೋ ಗಟ್ಟಿಗೊಂಡ ನೀ ಪತ್ನಿಯಾಗಿ ಬಂದು ನನ್ನ ಜನ್ಮವನ್ನು ಸಾರ್ಥಕಗೊಳಿಸಿದೆ.

ನಿಮ್ಮ ಪ್ರೀತಿ ನಿಮ್ಮ ಬಾಯಿಂದ ಇಂತಹ ಹೊಗಳಿಕೆಯ ಮಾತನ್ನು ಹೊಮ್ಮಿಸುತ್ತಿದೆ. ನನ್ನ ಪುಣ್ಯ ಫಲಗೊಂಡು ಪಕ್ವವಾಗಿ ನಿಮ್ಮಂತಹ ಶರಣರ ಪತ್ನಿಯಾಗುವ ಭಾಗ್ಯ ಉಂಟುಮಾಡಿತು. ಅದರಿಂದಾಗಿ ಶರಣ ತತ್ವ ಅರಿಯಲನುವಾಯಿತು. ಮಹಾ ಮಹಾ ಶರಣರ ದರ್ಶನ ದೊರೆಯಿತು. ಅವರ ಸೇವೆ ಮಾಡುವ ಪುಣ್ಯ ಒದಗಿತು.

ನಮ್ಮ ಇಂದಿನ ಸಂತಸದಲ್ಲಿ ಹೊತ್ತು ಸರಿದುದೇ ಗೊತ್ತಾಗಲಿಲ್ಲ. ಅನುಭವ ಮಂಟಪಕ್ಕೆ ಹೋಗುವ ವೇಳೆಯಾಯಿತು . ಬೇಗ ಹೋಗೋಣ ನಡೆ ಎಂದು ಹೇಳುತ್ತಾ ಒಳಗೆ ಹೋಗುವರು.

ಶರಣ ನಿದ್ರೈಗೈದಡೆ ಜಪ ಕಾಣಿರೊ
ಶರಣ ನೆದ್ದು ಕುಳಿತಡೆ ಶಿವರಾತ್ರಿ ಕಾಣಿರೊ
ಶರಣ ನಡೆದುದೆ ಪಾವನ ಕಾಣಿರೊ.
ಶರಣ ನುಡಿದುದೆ ಶಿವತತ್ವ ಕಾಣಿರೊ
ಕೂಡಲ ಸಂಗನ ಶರಣನ,
ಕಾಯವೆ ಕೈಲಾಸ ಕಾಣಿರೊ.
ಶರಣರಯ್ಯಾ ಇವರೆಲ್ಲಾ ಶರಣರು
ಒಳಗೊಂಡು ಶರಣತ್ವವನು

ಬದುಕಿದವರಿವರು.
ಶರಣಮಾರ್ಗದಿ ನಡೆದ ಮಾನವರು
ಮಹಾಂತರಾಗಿ ಮೆರೆದವರು
ಮಣ್ಣಿನ ಕಣ್ಣಿಗೆ ಮರೆಯಗಿಹರಾದರು
ಎಲ್ಲರಂತರಂಗದಿ ನೆಲಸಿಹರು

■

# ಶರಣ ಸಾಹಿತ್ಯ ಸಂಶೋಧನೆಯ ಆದ್ಯರು

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

ವೀರಶೈವ ಸಾಹಿತ್ಯ ಕನ್ನಡಕ್ಕೆ ವಿಶೇಷ ಕೊಡುಗೆಯಾದರೆ, ವಚನ ವಾಙ್ಮಯ ವಿಶ್ವಸಾಹಿತ್ಯಕ್ಕೆ ಅನುಪಮ ಕೊಡುಗೆ. ಹರಿಹರಾದಿ ಷಡಕ್ಷರ ಕವಿಗಳ ಶರಣ ಸಾಹಿತ್ಯ ಶಿವಶರಣರ ದಿವ್ಯ ವ್ಯಕ್ತಿತ್ವ, ಭವ್ಯ ಕೊಡುಗೆಗಳನ್ನು ಪ್ರತಿನಿಧಿಸಿದರೆ, ಬಸವಾದಿಗಳ ವಚನ ಸಾಹಿತ್ಯ ಅವರವರ ವ್ಯಕ್ತಿತ್ವದ ಅಂತರಂಗ –ಬಹಿರಂಗ, ಅನುಭಾವದ ಆಳಗಲಗಳನ್ನು ಪ್ರತಿಬಿಂಬಿಸುತ್ತದೆ. ಭಾರತೀಯ ತತ್ವಜ್ಞಾನ, ಯೋಗ, ಅನುಭಾವಗಳಿಗೆ ನೂತನ ಆಯಾಮಗಳನ್ನು ಕೊಡ ಮಾಡಿದ ವಚನ ಸಾಹಿತ್ಯ, ಅನೇಕ ದೃಷ್ಟಿಗಳಿಂದ, ವಿನೂತನ ಸ್ಥಾನವನ್ನು ಪಡೆದ ಸಾಹಿತ್ಯವಾಗಿದೆ. ಎಂಟನೂರು ವರ್ಷಗಳ ಈ 'ಗುಪ್ತನಿಧಿ' ಈ ಇಪ್ಪತ್ತನೆಯ ಶತಮಾನದಲ್ಲಿ ಶೋಧಗೊಂಡು ಪ್ರಚಾರಕ್ಕೆ ಬಂದು, ಸಂಶೋಧನೆ, ಸಂಪಾದನೆಗಳನ್ನು ಕಂಡು, ಚಿಂತನ –ಮಂಥನಕ್ಕೆ ದಾರಿ ಮಾಡಿಕೊಟ್ಟ ಮಹತ್ಕಾರ್ಯಕ್ಕೆ ಮೂಲ ಪುರುಷರು. ಲಿಂ. ಡಾ. ಪಿ.ಜಿ. ಹಳಕಟ್ಟಿ, ಬಸವಾದಿ ಬದುಕು, ಅವರವರ ವಚನಗಳಲ್ಲಿ ಪ್ರತಿಫಲಿತವಾಗುಂತೆ, ಕೃಷಿಗೈದ ವಚನಸಾಹಿತ್ಯ ಸಂಶೋಧನೆಯ ಪಿತಾಮಹರೆಂದೇ ಪ್ರಸಿದ್ಧರಾಗಿರುವ ಆಧುನಿಕ ಋಷಿ, ಶ್ರೀ ಫಕೀರಪ್ಪನವರ ಜೀವನ, ಸಾಧನೆ, ಸಿದ್ಧಿಗಳ ಕೈಗನ್ನಡಿ ಇಂದು ನಮ್ಮ ಆಸ್ತಿಯಾಗಿರುವ ವಚನ ವಾಙ್ಮಯ. ಈ ಮಹತ್ವದ ಸಾಹಿತ್ಯ ಸಂಶೋಧನೆಗೆ ಶ್ರೀ ಹಳಕಟ್ಟಿಯವರು ಕೈ ಹಾಕದಿದ್ದರೆ, ಹೊಸಗನ್ನಡ ಸಾಹಿತ್ಯದ ಬಹುಭಾಗ ಇಲ್ಲವಾಗುತ್ತಿದ್ದಿತು. ಆಧುನಿಕ ವಚನ ಸಂಶೋಧನೆ, ಸಂಪಾದನೆ, ಚಿಂತನೆ 'ಗಂಗೋತ್ರಿ'ಯಾದವರು. ಡಾ. ಹಳಕಟ್ಟಿ, ಅವರ ಬದುಕು–ಬರಹಗಳನ್ನು ಸ್ಮರಿಸಿಕೊಳ್ಳುವುದೇ ಒಂದು ಪುಣ್ಯ ಪ್ರಸಂಗ, ಕಿರಿಯರಿಗೆ ಮಾರ್ಗದರ್ಶಕ, ಪ್ರೇರಕ ಸನ್ನಿವೇಶ. ಶರಣ ಸಾಹಿತ್ಯ ಸಮ್ಮೇಳನ ಶುಭ ಸಂದರ್ಭದಲ್ಲಿ ಇಂಥ "ಸಾರ್ಥಕ ಬದುಕು" ಕಂಡ ಶ್ರೀ ಹಳಕಟ್ಟಿಯವರ ಸ್ಮರಣೆ ಒಂದು ಕೃತಜ್ಞತೆಯ ಸಂಕೇತ.

ಶರಣ ಡಾ. ಹಳಕಟ್ಟಿಯವರ ಜೀವನ ಚರಿತ್ರೆಯನ್ನು ಸಮೀಕ್ಷಿಸಿದರೆ ಅವರ ಅದ್ಭುತ ಸಾಧನೆಗಳ ಪರಿಚಯವಾಗುತ್ತದೆ. ಒಬ್ಬ ವ್ಯಕ್ತಿ ಯಾವ ಸಂಘ, ಸಂಸ್ಥೆಗಳ ಬಲವಿಲ್ಲದೆ ಏಕಾಕಿಯಾಗಿ ಇಷ್ಟೊಂದು ಸಾಧನೆಗಳನ್ನು ಮಾಡಲು ಸಾಧ್ಯವೆ ಎಂದು ಬೆರಗುಗೊಳ್ಳಬೇಕಾಗುತ್ತದೆ. ಇದೊಂದು ಪವಾಡವಿರಬೇಕು ಎನ್ನಿಸುತ್ತದೆ. ಪವಾಡವಿಲ್ಲ

ಇದು ಸಂಪೂರ್ಣ ಸತ್ಯವಾದ ಸಾಹಸ ಎಂಬುದನ್ನರಿತ ಸಹೃದಯ ಅತ್ಯಂತ ಕೃತಜ್ಞೆಯಿಂದ ಅವರ ಸಾಹಸಕ್ಕೆ ಶರಣೆನ್ನುತ್ತಾನೆ.

ಶ್ರೀ ಹಳಕಟ್ಟಿಯವರು ಸರಳತೆ, ದಕ್ಷತೆಯ ತ್ರಿವೇಣಿ ಸಂಗಮದಂತಿದ್ದರು. ಲೌಕಿಕ, ಪಾರಮಾರ್ಥಿಕಗಳೆರಡನ್ನೂ ಜೀವನದಲ್ಲಿ ಅಳವಡಿಸಿಕೊಂಡವರು. ಸಾರ್ವಜನಿಕವನ್ನು ಬಳಸಿಕೊಂಡು ತಮ್ಮ ಸ್ವಾರ್ಥದ ಬೇಳೆ ಬೇಯಿಸಿಕೊಳ್ಳುವ ಇಂದಿನ ಸಮಾಜದ ಮಧ್ಯೆ ನಿಂತು, ತಮ್ಮದನ್ನು ಬಳಸಿಕೊಂಡು ಸಾರ್ವಜನಿಕವನ್ನು ಬೆಳೆಸು ಶ್ರಮಿಸಿದ ಮಹಾಜೀವಿ ಇವರು.

## ಜೀವನದ ಹೆಜ್ಜೆ ಗುರುತುಗಳು

ಶ್ರೀ ಹಳಕಟ್ಟಿಯವರು. ೧೮೮೮ರ ಜುಲೈ ೩ನೆಯ ತಾರೀಖು ಧಾರವಾಡದಲ್ಲಿ ಜನಿಸಿದರು. ಇವರ ತಂದೆ ಸಾಹಿತ್ಯಪ್ರೇಮಿಗಳೂ, ಆದರ್ಶ ಶಿಕ್ಷಕರೂ, ಸುಸಂಸ್ಕೃತ ಧಾರ್ಮಿಕ ವ್ಯಕ್ತಿಗಳೂ ಆಗಿದ್ದ ಗುರುಬಸಪ್ಪನವರು, ತಾಯಿ ಸದ್ಗುಣೆ ಸಂಪನ್ನೆಯಾದ ದಾನಾದೇವಿ. ಮೂರು ವರ್ಷದ ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡ ಫಕೀರಪ್ಪ ಹಳಕಟ್ಟಿಯವರು ತಂದೆಯ ಪೋಷಣೆ ಹಾಗೂ ಮಾರ್ಗದರ್ಶನದಲ್ಲಿಯೇ ಬೆಳೆದು ಬಂದರು. ಮೆಟ್ರಿಕ್ ಪರೀಕ್ಷೆಯವರೆಗೆ ಧಾರವಾಡದಲ್ಲಿಯೇ ಓದಿ, ಮುಂಬಯಿಯಲ್ಲಿ ವಿಜ್ಞಾನ ಪದವಿಯನ್ನು ಪಡೆದರು. ಮುಂದೆ ಕಾಯಿದೆ ಪರೀಕ್ಷೆಯನ್ನು ಮುಗಿಸಿ, ಎಂ.ಎ. ಪರೀಕ್ಷೆಗೂ ಅಭ್ಯಾಸ ಮಾಡಿದರಾದರೂ ಪರೀಕ್ಷೆಗೆ ಕುಳಿತುಕೊಳ್ಳಲಿಲ್ಲ. ಆಗಿನ ಕಾಲದಲ್ಲಿ ಶಿಕ್ಷಣ ಈಗಿನಷ್ಟು ಜನಜನಿತವಾಗಿರಲಿಲ್ಲ. ಕೇವಲ ಕೆಲವರು ಪದವೀಧರರಿದ್ದರು. ಇಂಗ್ಲೀಷಿನಲ್ಲಿ ಮೆಟ್ರಿಕ್ ಪರೀಕ್ಷೆ ಪಾಸುಮಾಡಿ, ಇಂಗ್ಲೀಷರಿಗೆ ವಿಧೇಯತೆಯಿಂದ ಸೇವೆ ಮಾಡಿ, ಬೇಕಾದಂತಹ ಉನ್ನತ ಪದವಿ ಪಡೆಯುತ್ತಿದ್ದ ಕಾಲವದು. ಅಂತಹ ಸನ್ನಿವೇಶದಲ್ಲಿ ಎರಡು ಪದವಿಗಳನ್ನು ಅವರು ಮನಸ್ಸು ಮಾಡಿದ್ದು 'ರಾವ್' ಬಹದ್ದೂರ್' ರಾವ್ ಸಾಹೇಬ್' ಎಂಬ ಪ್ರಶಸ್ತಿಗಳನ್ನಿತ್ತು ಗೌರವಿಸುವಂತೆ ಬದುಕಿದರು. ಇವರು ವೃತ್ತಿಯನ್ನು ಬೆಳಗಾವಿಯಲ್ಲಿ ಪ್ರಾರಂಭಿಸಿದರೂ, ಅಲ್ಲಿ ಬಹಳ ಕಾಲ ನಿಲ್ಲದೆ ಬಿಜಾಪುರಕ್ಕೆ ಬಂದು ನೆಲಸಿ ಅದನ್ನೇ ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಮಾಡಿಕೊಂಡರು. ಗೋಳುಗುಮ್ಮಟದ ನಾಡಿನಲ್ಲಿ 'ವಚನಗುಮ್ಮಟ' ನಿರ್ಮಾಣವಾಗುವುದಕ್ಕೆ ಇದು ನಾಂದಿಯಾಯಿತು. ಅನೇಕ ಸಂಘ ಸಂಸ್ಥೆಗಳು ಸಾಧಿಸುವಷ್ಟು ಕೆಲಸವನ್ನು ಹಳಕಟ್ಟಿಯವರು ಏಕಾಂಗಿಯಾಗಿ ಮಾಡಿರುವುದನ್ನು ನೋಡಿದರೆ, ಒಬ್ಬ ದಕ್ಷ ವ್ಯಕ್ತಿ ಪ್ರಾಮಾಣಿಕನಾಗಿ ನಿಷ್ಠೆಯಿಂದ ಸತತವಾಗಿ ದುಡಿದರೆ ಏನೆಲ್ಲಾ ಸಾಧಿಸಲು ಸಾಧ್ಯ ಎಂಬುದಕ್ಕೆ ಇವರೊಂದು ನಮ್ಮ ಕಣ್ಮುಂದಿನ ನಿದರ್ಶನ. ಅವರ ಪರಿಶುದ್ಧ ಕಾಯಕ ನಿಷ್ಠೆಯ ವ್ಯಕ್ತಿತ್ವ ಅನುಕರಣೀಯ; ಸಮಾಜಕ್ಕೆ ಮಾರ್ಗದರ್ಶನ. ಹಳಕಟ್ಟಿಯವರು ಮಾನವ

ಜೀವನದ ಎಲ್ಲ ಕ್ಷೇತ್ರದಲ್ಲೂ ಕೆಲಸ ಮಾಡಿದ್ದಾರೆ. ರಾಜಕೀಯ, ಶೈಕ್ಷಣಿಕ, ಧಾರ್ಮಿಕ, ಸಾಹಿತ್ಯಕ, ಸಾಮಾಜಿಕ ಎಲ್ಲ ಕ್ಷೇತ್ರಗಳಲ್ಲೂ ದುಡಿದಿದ್ದಾರೆ.

ರಾಜಕೀಯ ಕ್ಷೇತ್ರದಲ್ಲಿ ಕಾಲಿರಿಸಿ, ರಾಷ್ಟ್ರದ ಸ್ವಾತಂತ್ರ ಗಳಿಸಿವ ಸೇವೆಯಲ್ಲಿ ಪಾಲ್ಗೊಂಡಿದ್ದಾರೆ. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿ, ವಿಧಾನಪರಿಷತ್ತಿನ ಸದಸ್ಯರಾಗಿ ರಾಜಕೀಯ ಕ್ಷೇತ್ರದಲ್ಲಿ ದುಡಿದಿದ್ದಾರೆ.

## ವಚನ ಸಂಶೋದನೆಯ ಆದ್ಯರು

ಲಿಂ. ಹಳಕಟ್ಟಿಯವರು ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿರುವ ಸೇವೆ ಅಪಾರ, ಗುಬ್ಬಿಯ ಮಲ್ಲಣಾರ್ಯರು ಗಣಭಾಷ್ಯ ರತ್ನ ಮಾಲೆಯ ಕೈಬರಹದ ಕೃತಿ ಅವರ ದೃಷ್ಟಿಗೆ ಬಿದ್ದುದೇ ಅವರ ಜೀವನದ ಜಾಡನ್ನು ಬದಲಾಯಿಸಲು ಕಾರಣವಾಯಿತು. ಅಲ್ಲಿನ ಸುಂದರ ವಚನಗಳು ಅವರ ಮನಸ್ಸನ್ನು ಸೂರೆಗೊಂಡವು. ಅಲ್ಲಿಂದ ಅವರು ವಚನ ವಾಙ್ಮಯದ ಶೋಧನೆಗೆ ಹೊರಟರು, ಮನೆ ಮನೆಗಳನ್ನು, ಮಠ ಮಠಗಳನ್ನು ಸುತ್ತಿ ಗೆದ್ದಲು ತಿಂದು ನಾಶವಾಗಿ ಹೋಗುತ್ತಿದ್ದಂತಹ ಅಮೂಲ್ಯ ವಚನ ಸಾಹಿತ್ಯದ ತಾಡೋಲೆ ಗ್ರಂಥಗಳನ್ನು ಸಂಗ್ರಹಿಸಿದರು. ಅವರ ಅವಿಶ್ರಾಂತ ಶ್ರಮ, ಕುಂದದ ಆಸಕ್ತಿಯ ಫಲವಾಗಿ ಸುಮಾರು ಒಂದು ಸಾವಿರ ಹಸ್ತಪ್ರತಿಗಳ ಸಂಗ್ರಹವಾಯ್ತು. ಆ ಅಮುಲ್ಯ ಸರಳ, ಸುಂದರ, ಜನಸಾಮಾನ್ಯರ ಕೈದೇವಿಗೆಯಾಗಬಹುದಾದ ವಚನ ಸಾಹಿತ್ಯದ ಲಾಭ ಜನತೆಗೆ ದೊರೆಯಬೇಕಾದರೆ ಏನು ಮಾಡಬಹುದೆಂದು ಚಿಂತಿಸಿದರು. ಅದಕ್ಕಾಗಿ ಒಂದು ಪ್ರದರ್ಶನವನ್ನು ಏರ್ಪಡಿಸಿ, ಅಂದಿನ ಕಲೆಕ್ಟರರಿಂದ ಅದನ್ನು ಉದ್ಘಾಟನೆ ಮಾಡಿಸಿದರು; ಆ ಸಂಗ್ರಹದಲ್ಲಿದ್ದ ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಹಾಡು ಮೊದಲಾದವುಗಳನ್ನು ಬೇರೆ ಬೇರೆ ಗುಂಪುಗಳನ್ನಾಗಿ ವಿಂಗಡಿಸಿ, ಸ್ವಂತ ಖರ್ಚಿನಲ್ಲಿ ಕಾರಕೂನರನ್ನು ನೇಮಿಸಿಕೊಂಸು ಅವುಗಳ ನಕಲನ್ನು ಸಿದ್ಧಪಡಿಸಿದರು.

ಆಗಿನ ಕಾಲದಲ್ಲಿ ಅಚ್ಚು ಹಾಕಿ ಪುಸ್ತಕ ಪ್ರಕಟಣೆ ಮಾಡುವುದು ಸುಲಭ ಸಾಧ್ಯವಾಗಿರಲಿಲ್ಲ. ಅದಕ್ಕಾಗಿ ಅವರು ಪಟ್ಟ ಶ್ರಮ ಸಾರ್ಥಕವಾಗಲಿಲ್ಲವಾಗಿ, ತಮ್ಮ ಸ್ವಂತ ಮನೆಯನ್ನು ಮಾರಿ 'ಹಿತಚಿಂತಕ' ಎಂಬ ಅಚ್ಚುಕೂಟವನ್ನು ಪ್ರಾರಂಭಿಸಿದರು. ಉತ್ತಮ ವಚನಗಳನ್ನು ಸಂಗ್ರಹಿಸಿ ವಿಷಯಕ್ಕನುಗುಣವಾಗಿ ಹೊಂದಿಸಿ ಪ್ರಕಟಿಸಿದರು. ಸುಮಾರು ೬೦ ವರ್ಷಗಳ ಕಾಲ ಸತತ ಸಾಹಿತ್ಯ ಸೇವೆ ಸಲ್ಲಿಸಿ, ಕನ್ನಡ ನಾಡಿಗೆ, ಕನ್ನಡ ಜನರಿಗೆ, ಕನ್ನಡ ಭಾಷೆಗೆ ಅತ್ಯಮೂಲ್ಯ ಕಾಣಿಕೆಯನ್ನು ಅರ್ಪಿಸಿದ್ದಾರೆ. ಕೆಲವು ದಿವಸಗಳ ನಂತರ ಪಬ್ಲಿಕ್ ಪ್ರಾಸಿಕ್ಯೂಟರ್ ಎಂದು ನೇಮಿಸಲ್ಪಟ್ಟ ಇವರು, ಆ ಬಗೆಗೆ ಆಸಕ್ತಿ ವಹಿಸಿದ್ದರೆ ನೌಕರಿಯಲ್ಲೇ ಬೇಕಾದಂತಹ ಎತ್ತರಕ್ಕೆ ಏರಬಹುದಿತ್ತು.

ಆದರೆ ಅವರ ಸಾಹಿತ್ಯ ಪ್ರೇಂ, ಸಾಮಾಜಿಕ ನಿಷ್ಠೆ, ಧಾರ್ಮಿಕ ಶ್ರದ್ಧೆ, ಪ್ರಾಮಾಣಿಕ ಕರ್ತವ್ಯಗಳು ಅವರನ್ನು ವೈಯಕ್ತಿಕ ಪ್ರಗತಿಗಳ ಬಗೆಗೆ ದುಡಿಯಲು ಬಿಡಲಿಲ್ಲ, ಧರ್ಮಾಂಧತೆಯಿಲ್ಲದ, ವಿಶ್ವಧರ್ಮವಾದ ವೀರಶೈವ ಶರಣರ ತತ್ತ್ವಗಳು ಇವರ ಮನಸ್ಸನ್ನು ಸೆರೆ ಹಿಡಿದು, ಮಾನವೀಯ ಉದ್ಧಾರಕ್ಕಾಗಿ, ಶರಣ ಸಾಹಿತ್ಯ ಸೇವೆ ಮಾಡಲು ಇವರನ್ನು ಪ್ರೇರೆಪಿಸಿದವು. ಕ್ರಮೇಣವಾಗಿ ವಕೀಲಿ ವೃತ್ತಿಯನ್ನು ತ್ಯಜಿಸಿದರು. ಜನರಲ್ಲಿ ಕನ್ನಡದ ಬಗ್ಗೆ ಅಭಿಮಾನ ಹುಟ್ಟಿಸಲು, ಕನ್ನಡವನ್ನು ಪ್ರೋತ್ಸಾಹಿಸಲು, ಕನ್ನಡ ಭಾಷೆಯನ್ನು ಬೆಳೆಸಲು 'ನವಕರ್ನಾಟಕ'ವೆಂಬ ಪತ್ರಿಕೆಯನ್ನು ಹೊರಡಿಸಿದರು. ಶ್ರೀ ಸಾಮಾನ್ಯರಲ್ಲಿ ಧಾರ್ಮಿಕ ಭಾವನೆ ಜಾಗೃತಗೊಳಿಸಲು ನಿಜವಾದ ಧರ್ಮವೇನೆಂಬುದರ ಪರಿಚಯ ಮಾಡಿಕೊಡಲು ವಚನಗಳ ಮಹತ್ತಿನ ಅರಿವನ್ನುಂಟು ಮಾಡಲು 'ಶಿವಾನುಭವ' ಮಾಸಿಕವನ್ನು ಪ್ರಾರಂಭಿಸಿದರು. ತನ್ಮೂಲಕ ಸುಮಾರು ೭೭ಕೃತಿಗಳನ್ನು ಸ್ವತಃ ಪ್ರಕಟಿಸಿದರು. ಬರೀ ಆದರ್ಶಗಳಿದ್ದು ವ್ಯವಹಾರಿಕ ಜೀವನದ ಅರಿವಿಲ್ಲದಿದ್ದರೆ. ಮನುಷ್ಯನ ಜೀವನ ದುಃಖಮಯವಾಗುವುದೆಂದು ಅರಿತು, ಸಮಾಜದ ಜನರೆಲ್ಲಾ ಸುಖದಿಂದ ಬದುಕಬೇಕೆಂಬ ಮಾನವೀಯ ಗುಣಪಡೆದ ಇವರು ನೈತಿಕ ಬೌದ್ಧಿಕ ವಿಚಾರಗಳನ್ನು ಘೋಷಿಸಿ ಯುವ ಪೀಳಿಗೆಗೆ ಪ್ರಗತಿಮಾರ್ಗ ಜೀವನ ಎಂಬ ಪುಸ್ತಕ ಬರೆದು ಪ್ರಕಟಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ನಿಕಟ ಸಂಪರ್ಕವಿಟ್ಟುಕೊಂಡು ಪ್ರತಿಸಲವೂ ಸಮ್ಮೇಳನದಲ್ಲಿ ವಚನ ಸಾಹಿತ್ಯದ ಬಗೆಗೆ ವಿಚಾರ ಪೂರ್ಣವಾದ ಉಪನ್ಯಾಸಗಳನ್ನು ಕೊಡುತ್ತಿದ್ದರು. ಶ್ರೀ ಹಳಕಟ್ಟಿಯವರು ಸಾಹಿತ್ಯ ಪ್ರೇಮ, ಪಾಂಡಿತ್ಯ ಸೇವೆಯನ್ನು ಅವಲೋಕಿಸಿದ ಕನ್ನಡ ಜನರು ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿದರು. ಕರ್ನಾಟಕ ವಿಶ್ವವಿದ್ಯಾಲಯವು ಇವರ ಅಗಾಧ ಸಾಹಿತ್ಯ ಸೇವೆಯನ್ನು ಡಾಕ್ಟರೇಟ್ ಪ್ರಶಸ್ತಿ ನೀಡುವುದರ ಮೂಲಕ ಕೊಂಡಾಡಿ ಗೌರವಿಸಿತು.

### ಸಾಮಾಜಿಕ ಸೇವೆಯಲ್ಲಿ ಶ್ರೀ ಹಳಕಟ್ಟಿ

ಡಾ. ಹಳಕಟ್ಟಿಯವರ ಕರ್ನಾಟಕ ಪ್ರೇಮ. ಕನ್ನಡ ಪ್ರೇಂ, ಶಿಕ್ಷಣದ ಬಗೆಗಿನ ಅಭಿಮಾನ ಅಮಿತವಾದುದು. ಕನ್ನಡದ ಗಂಡುಮೆಟ್ಟಿದ ಬಿಜಾಪುರದಲ್ಲಿ ಕನ್ನಡ ಶಾಲೆಗಳಿಗಿಂತ ಮರಾಠೀ ಶಾಲೆಗಳೇ ಹೆಚ್ಚಾಗಿದ್ದುದನ್ನು ನೋಡಿ ಅವರ ಸ್ವಾಭಿಮಾನಕ್ಕೆ ದಕ್ಕೆ ಎನ್ನಿಸಿ, ಕನ್ನಡಿಗರ ಬಗ್ಗೆ ಅನುಕಂಪ ಮೂಡಿತು. ಬಿಜಾಪುರದ ನಗರ ಸಭೆಯ ಶಾಲಾಮಂಡಲದ ಸದಸ್ಯರಾದ ಅವಕಾಶ ಉಪಯೋಗಿಸಿಕೊಂಡು, ಬಿಜಾಪುರದ ಕನ್ನಡ ಶಾಲೆಗಳು ತಲೆ ಎತ್ತುವಂತೆ ಮಾಡಿದರು. ಸಿದ್ಧೇಶ್ವರ ಹೈಸ್ಕೂಲನ್ನು ತೆರೆದು, ಅದನ್ನು ಅಭಿವೃದ್ಧಿಗೊಳಿಸುವ ಮಾರ್ಗದರ್ಶಿಯಾದ ಒಂದು ಪುಸ್ತಕವನ್ನು

ಪ್ರಕಟಿಸಿದರು. ಅದರಲ್ಲಿ ಪಠ್ಯ ಅತ್ಯೇತರ ಚಟುವಟಿಕೆಗಳ ವಿವರವನ್ನೆಲ್ಲಾ ಕೊಟ್ಟಿರುವುದನ್ನು ನೋಡಿದರೆ, ಇವರು ಒಬ್ಬ ಶಿಕ್ಷಣ ತಜ್ಞರು ಆಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ, ಕರ್ನಾಟಕ ರಾಜ್ಯದ ಸ್ಥಾಪನೆಗೂ ತಮ್ಮ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕವನ್ನು ಕಟ್ಟಿದ ಪಿತಾಮಹ ಸಾಲಿನಲ್ಲಿ ಶ್ರೀ ಹಳಕಟ್ಟಿ ಅಗ್ರ ಸ್ಥಾನವನ್ನಲಂಕರಿಸಿರುವರು.

ಇಷ್ಟೇ ಅಲ್ಲದೆ ಸಾರ್ವಜನಿಕರ ವ್ಯಾವಹಾರಿಕ ಜೀವನಕ್ಕೆ ಅನುಕೂಲವಾಗಲೆಂದು ಬಿಜಾಪುರದಲ್ಲಿ ಶ್ರೀ ಸಿದ್ಧೇಶ್ವರ ಕೊ ಆಪರೇಟಿವ್ ಸೊಸೈಟಿಯನ್ನು, ಬ್ಯಾಂಕನ್ನು ಪ್ರಾರಂಭಿಸಿದರು. ರೈತರಿಗೆ ಸಹಾಯವಾಗುವಂತೆ ಒಕ್ಕಲುತನ ಸಹಕಾರಿ ಸಂಘವನ್ನು ಸ್ಥಾಪಿಸಿದರು. ನೇಕಾರರಿಗೂ, ಹತ್ತಿಯ ಬೆಳೆಗಾರರಿಗೂ ಉಪಕಾರವಾಗಲೆಂದು ಹತ್ತಿಯ ಮಾರಾಟ ಸಂಘಗಳನ್ನು ರಚಿಸಿದರು. ಎರಡನೆಯ ಮಹಾಯುದ್ಧ ಸಮಿತಿಯ ಕಾರ್ಯದರ್ಶಿಯಾಗಿ ಆ ಕ್ಷೇತ್ರದ ಸೇವೆ ಸಲ್ಲಿಸಿದರು. ಗ್ರಾಮೀಣದ ಅಭಿವೃದ್ಧಿಮಂಡಲಿ ಕಾರ್ಯದರ್ಶಿಯಾಗಿ ಹಳ್ಳಿಗರ ಉದ್ಧಾರಕ್ಕೆ ಶ್ರಮಿಸಿದ್ದಾರೆ. ಫ್ಯಾಮಿನ ಇನ್ಸಿಟ್ಯೂಟಿನ ಕಾರ್ಯದರ್ಶಿಯಾಗಿ ಭೂಮಿಯ ಅಭಿವೃದ್ಧಿ ಕಾರ್ಯಕೈಗೊಂಡು ವ್ಯವಸಾಯ ಉತ್ಪನ್ನಗಳ ಹೆಚ್ಚುವರಿಗೆ ಸಹಾಯಕರಾದರು. ಹೀಗೆ ಇವರು ಸಲ್ಲಿಸಿದ ಸೇವೆ ಒಂದೇ? ಎರಡೇ? ಹತ್ತಾರು. ಸಾಮಾಜಿಕ ಸೇವಾ ಕಾರ್ಯಗಳನ್ನು ಸಮರ್ಥವಾಗಿ ನೇರವೇರಿಸಿದ ಶಕ್ತಿ ಸಂಪನ್ನ ಶ್ರೀ ಹಳಕಟ್ಟಿಯವರದು.

ಶ್ರೀ ಹಳಕಟ್ಟಿಯವರ ಧರ್ಮಶ್ರದ್ಧೆ ಅಪಾರವಾದುದು. ವೀರಶೈವ ಧರ್ಮದ ವ್ಯಕ್ತಿ ಹೇಗಿರಬೇಕೋ ಹಾಗೆ ಬಾಳಿದವರು. ಸ್ವಧರ್ಮಾಭಿಮಾನಿ, ಪರಧರ್ಮಪ್ರೇಮಿ. ಇವರ ಧಾರ್ಮಿಕ ಶ್ರದ್ಧೆ ಕಾರ್ಯಗಳನ್ನು ಗೌರವಿಸಿ, ಜನತೆ ಇವರನ್ನು ೧೯೩೩ರಲ್ಲಿ ಧಾರವಾಡದಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರನ್ನಾಗಿ ನೇಮಿಸಿತು. ಹೀಗೆ ಪ್ರಜಾತಂತ್ರದ ಸರ್ವಕ್ಷೇತ್ರದಲ್ಲೂ ಇಹಲೋಕಯಾತ್ರೆ ಮುಗಿಸಿ, ಲಿಂಗದಲ್ಲಿ ಒಂದಾದರು.

ಈ ಎಲ್ಲಾ ಕಾರ್ಯಗಳ ಮೂಲಕ ಜನರಲ್ಲಿ ಒಂದಾದರು; ಅವರ ಮನದಲ್ಲಿ ಬೆರೆತರು; ಎಲ್ಲರ ಅಚ್ಚುಮೆಚ್ಚಿನ ಅಣ್ಣನವರಾದರು. ನಾವು ಯರು ಯಾರನ್ನೇ ಬಸವಣ್ಣನವರಿಗೆ ಹೋಲಿಸಿ ಬಸವಣ್ಣನವರನ್ನು ಸಣ್ಣವರನ್ನಾಗಿ ಮಾಡುತ್ತಿರುತ್ತೇವೆ. ಆದರೆ ಫಕೀರಪ್ಪ ಹಳಕಟ್ಟಿಯವರನ್ನು ಇಪ್ಪತ್ತನೆಯ ಶತಮಾನದ ಬಸವಣ್ಣ ಎಂದರೆ, ಯಾವ ರೀತಿಯ ಅಪಚಾರವೂ ಆಗದೆ ಸೂಕ್ತವಾದ ಹೋಲಿಕೆ ಎನ್ನಿಸುತ್ತದೆ. ಬಸವಣ್ಣನವರು ಕಲ್ಯಾಣದ ಕ್ರಾಂತಿಗೆ ಕಾರಣರಾದರೆ ಫಕೀರಣ್ಣನವರು ಬಿಜಾಪುರ ಭಾಗದ ಜನಜೀವನದ ತಮ್ಮ ಸರ್ವತೋಮುಖವಾದ ಸೇವೆಯಿಂದ ಕ್ರಾಂತಿ ಮಾಡಿದ್ದಾರೆ. ಅಲ್ಲದೆ, ವಚನ ಸಾಹಿತ್ಯ ಸಂಶೋಧನೆಯಿಂದ ಇವರ ವಿಚಾರಕ್ರಾಂತಿ

ಮೂಡುವಂತೆ ಮಾಡಿರುವುದು ಗಣ್ಯಮಾನ್ಯ ಸಂಗತಿ, ವಚನ ವಿಚಾರ ಕ್ರಾಂತಿಗೂ ಇವರು ಆದ್ಯರಾದರು.

ಒಟ್ಟಿನಲ್ಲಿ ವಿಶ್ವಮಾನ್ಯವಾದ ಭಾರತೀಯ 'ಉಪನಿಷತ್ತು'ಗಳು ಪುನರವತಾರವಾದ ಶಿವಶರಣರ ವಚನೋಪನಿಷತ್ತುಗಳು ಕನ್ನಡಿಗರ ಕೈಗೆ ದೊರಕಿದುದು ಶ್ರೀ ಹಳಕಟ್ಟಿಯವರ ಪ್ರಮುಖ ಕೊಡುಗೆ. ವಿಶ್ವದ ತತ್ವ ಜ್ಞಾನದ ಕೃತಿಯಾದ 'ಶೂನ್ಯ ಸಂಪಾದನೆ'ಯ ಪ್ರಥಮ ಸಂಶೋಧಕರು ಡಾ. ಹಳಕಟ್ಟಿ, ಹರಿಹರಾದಿ ಶಿವಕವಿಗಳ ಸಾಹಿತ್ಯ ಸಂಶೋಧನೆ ಪ್ರಕಟಣೆ ಕನ್ನಡ ಸಾಹಿತ್ಯದ ಬಹು ಮುಖ್ಯ ಭಾಗವಾದ ವೀರಶೈವ ಸಾಹಿತ್ಯಾಧ್ಯಯನಕ್ಕೆ ದಾರಿ ಮಾಡಿಕೊಟ್ಟಿತು. ಶಿವಾನುಭವ ಶಬ್ದಕೋಶ ಮತ್ತು ವಚನ ಶಾಸ್ತ್ರಸಾರ ಸಂಪುಟಗಳು, ವಚನಗಳ ಅರ್ಥೈಸುವಿಕೆಗೆ ದಾರಿ ಮಾಡಿಕೊಟ್ಟಿತು. "ಶಿವಾನುಭವ" ಮಾಸಪತ್ರಿಕೆಯು ಒಂದು ಮಹತ್ವದ 'ಆಕರ ಪತ್ರಿಕೆ'ಯಾಯಿತು. ಶ್ರೀ ಹಳಕಟ್ಟಿಯವರ ಕೊಡುಗೆ ಇಂದು ವ್ಯಾಪಕವಾಗಿ ನಡೆಯುತ್ತಿರುವ ವೀರಶೈವ ಅರಸು ಮನೆತನಗಳ ಅಧ್ಯಯನ ಸಂಶೋಧನೆಗೆ ಪ್ರಥಮ ಪಥದರ್ಶಕರು ಡಾ. ಹಳಕಟ್ಟಿ. ಅವರನ್ನು 'ವಚನ ಪಿತಾಮಹ' ಎನ್ನುವುದಕ್ಕಿಂತ ವಚನ ಸಂಶೋಧನ ಪಿತಾಮಹ ಎನ್ನುವುದೇ ಸೂಕ್ತ.

ಹೀಗೆ ಮಹಾನುಭಾವರಾಗಿ ಬದುಕಿದ್ದ ಶ್ರೀ ಫಕೀರಪ್ಪ ಗುರುಬಸಪ್ಪ ಹಳಕಟ್ಟಿ ಅವರ ಬದುಕೇ ಒಂದು ಪುಣ್ಯದಾಗರ, ಸ್ಫೂರ್ತಿಸಾಗರ, ಇದಲ್ಲದೆ, ಬದುಕಿನ ಸಾರ್ಥಕತೆ. ವಿಜಾಪುರದಲ್ಲಿ ಇಂದು ಚರಿತ್ರೆ ಪ್ರಸಿದ್ಧ. "ಗೋಳುಗುಮ್ಮಟ" ಅಮರ ಪ್ರೇಮದ ಸಂಕೇತವಾದರೆ ಶ್ರೀ ಹಳಕಟ್ಟಿಯವರ ಸಮಾಧಿ ಲಿಂಗ ಗುಮ್ಮಟ ಪ್ರವಾಸಿಗಳನ್ನು ಆಕರ್ಷಿಸಿದಂತೆ ವಚನ ವಾಙ್ಮಯದ ವಿಶ್ವಪ್ರೇಮ ಜ್ಞಾನ ಗುಮ್ಮಟ ಅಭ್ಯಾಸಿಗಳನ್ನು ಕೈ ಬೀಸಿ ಕರೆಯುತ್ತಿದೆ.

೧. ದೇವಸಹಿತ ಭಕ್ತ ಮನೆಗೆ ಬಂದರೆ
ಕಾಯಕವಾವುದೆಂದು ಬೆಸಗೊಂಡರೆ
ನಿಮ್ಮಾಣೆ! ನಿಮ್ಮ ಪುರಾತನರಾಣೆ!
ತಲೆದಂಡ! ತಲೆದಂಡ!! ಕೂಡಲಸಂಗಮದೇವಾ,
ಭಕ್ತರ ಕುಲವನರಸಿದರೆ! ನಿಮ್ಮ ರಾಣಿವಾಸದಾಣೆ!

೨. ನೀ ಹುಟ್ಟಿಸಿದಲ್ಲಿ ಹುಟ್ಟಿದೆ ನೀ ಕೊಂದಲ್ಲಿ
ಸಾಯದೆ ಎನ್ನವಶವೆ, ಅಯ್ಯಾ?
ನೀ ಇರಿಸಿದಲ್ಲಿ ಇರದೆ ಎನ್ನ ವಶವೇ ಅಯ್ಯಾ?
ಅಕಟಕಟ! ಎನ್ನವನೆನ್ನವನನ್ನಯ್ಯಾ
ಕೂಡಲಸಂಗಮದೇವಯ್ಯಾ.

೩. ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ;
ಚಂದ್ರಕುಂದೆ ಕುಂದುವುದಯ್ಯಾ; ಚಂದ್ರಂಗೆ ರಾಹು
ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ?
ಅಂಬುಧಿಯ ಮುನಿಯಾಪೋಷಣವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ? ಆರಿಗಾರೂ ಇಲ್ಲ; ಕೆಟ್ಟವಂಗೆ ಕೆಳೆಯಿಲ್ಲಾ!
ಜಗದ ನಂಟ ನೀನೇ ಅಯ್ಯಾ, ಕೂಡಲಸಂಗಮದೇವಾ.

■

# ವೀರಶೈವ ವಿವಾಹ ವೈಶಿಷ್ಟ್ಯ – ಸಮಾಜ ಸಂಪ್ರದಾಯ

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

ವೀರಶೈವ ಧರ್ಮದಲ್ಲಿ ಅನೇಕ ಒಳಪಂಗಡಗಳಿವೆ. ತಾತ್ವಿಕವಾಗಿ ಎಲ್ಲಾ ಪಂಗಡಗಳೂ ಒಂದೇ. ಆದರೆ ಸಾಮಾಜಿಕವಾಗಿ ಈ ಒಳ ಪಂಗಡಗಳು ಬೆಳೆದು ಬಂದಿವೆ. ಈಗೀಗ ಒಳ ಪಂಗಡಗಳ ಅಂತರ ಕಡಿಮೆಯಾಗುತ್ತಿರುವುದನ್ನು ಸಾಮಾಜಿಕವಾಗಿ ಕಾಣುತ್ತಿದ್ದೇವೆ. ವೀರಶೈವರಲ್ಲಿ ತಮ್ಮದೇ ಆದ ಆಚರಗಳು, ಪದ್ಧತಿಗಳು, ಸಂಪ್ರದಾಯಗಳು ಬೆಳೆದು ಬಂದಿವೆ. ಇವುಗಳು ಪ್ರಾಪಂಚಿಕ ಮಹತ್ವವನ್ನು ಹೊಂದಿರುವುದರ ಜೊತೆಗೆ, ಪಾರಮಾರ್ಥಿಕ ಮಹತಿಯನ್ನೂ ಒಳಗೊಂಡಿವೆ. ಯುಗಾದಿ, ಕಾರಹುಣ್ಣಿಮೆ, ನಾಗರಪಂಚಮಿ ಗಣೇಶಚೌತಿ, ಗೌರಿಹಬ್ಬ, ದೀಪಾವಳಿ, ಶಿವರಾತ್ರಿ ಇವು ಇವರ ಮುಖ್ಯ ಹಬ್ಬಗಳು, ವಿವಾಹ, ನಾಮಕರಣ, ದೀಕ್ಷೆ, ಅಂತ್ಯಸಂಸ್ಕಾರ ಮುಂತಾದ ಸಂಪ್ರದಾಯಗಳು ವೀರಶೈವರಲ್ಲಿ ತಮ್ಮದೇ ಆದ ವೈಶಿಷ್ಟ್ಯ ಪಡಿದಿವೆ.

ವಿವಾಹ ಪದ್ಧತಿ :

ವೀರಶೈವರು ಕನ್ಯೆಯನ್ನು ನೋಡಲು ಕನ್ಯೆ ಇದ್ದಲ್ಲಿಗೇ ಹೋಗುತ್ತಾರೆ. ಬಹಳ ವರ್ಷಗಳ ಹಿಂದೆ 'ತೆರ' ಕೊಡುವ ಪದ್ಧತಿ ಇತ್ತು. ಈಚೆಗೆ ಅದು ನಿಂತುಹೋಯಿತಾದರೂ ಈಗಿರುವಂಥ ವರದಕ್ಷಿಣೆ ಪದ್ಧತಿ ಇರಲಿಲ್ಲ. ಆದರೆ ಇತರ ಸಮಾಜದ ಪ್ರಭಾವದಿಂದಾಗಿ ಈಗೀಗ ಅವರಲ್ಲೂ ಆ ಪದ್ಧತಿ ಬೆಳೆದು ಬಂದಿದೆ.

ಕನ್ಯೆಯು ವರನ ಹಗೂ ಹಿರಿಯರ ಮನಸ್ಸಿಗೆ ಬಂದ ನಂತರ ವಿವಾಹ ಕಾರ್ಯವು ನಿಶ್ಚಿತಾರ್ಥದಿಂದ ಪ್ರಾರಂಭವಾಗುತ್ತದೆ. ಈ ಕಾರ್ಯವು ಕನ್ಯೆಯ ಮನೆಯಲ್ಲಿಯೇ ನಡೆಯುವುದು. ಈ ಕಾರ್ಯವನ್ನು " ಹಿರೀವೀಳ್ಯ" ಅಥವಾ "ಹಸಿರು ವೀಳ್ಯ ಕಾರ್ಯ" ಎನ್ನುವರು. ಅವರ ಅಂತಸ್ತಿಗೆ ಮತ್ತು ಪದ್ಧತಿಗೆ ತಕ್ಕಂತೆ ಹಸಿರು ವೀಳ್ಯವನ್ನಾಗಲೀ ಹಿರೀ ವೀಳ್ಯವನ್ನಾಗಲೀ ಮಾಡುತ್ತಾರೆ. ಹಸಿರು ವೀಳ್ಯದಲ್ಲಿ ವರನ ಪಾತ್ರವಿಲ್ಲ. ಆದರೆ ಹಿರೀ ವೀಳ್ಯವಾದರೆ ವರನನ್ನು ಮೆರವಣಿಗೆಯಿಂದ ಕನ್ಯೆಯ ಮನೆಗೆ ಕರೆದುಕೊಂಡು ಬರುತ್ತಾರೆ.

ಅಂದು ಕನ್ಯೆಗೆ ಗಂಡನ ಮನೆಯವರು ತಂದ ಸೀರೆ ಉಡಿಸಿ, ದೇವರ ಮುಂದೆ ಕೂರಿಸಿ ಆರತಿ ಮಾಡಿ, ಬಾಯಲ್ಲಿ ಸಕ್ಕರೆ ಹಾಕುತ್ತಾರೆ. ಆಕೆ ದೇವರಿಗೆ ನಮಸ್ಕಾರ ಮಾಡಿದ ನಂತರ ಆಕೆಯನ್ನು ಸಭೆಗೆ ಕರೆದುಕೊಂಡು ಬಂದು ಕೂರಿಸುತ್ತಾರೆ.

ಮದುವೆಯ ಯಾವ ಕೆಲಸವೇ ಆಗಲಿ ಲಗ್ನ ಕಟ್ಟಿಸಿದ ನಂತರ ಪ್ರಾರಂಭವಾಗುತ್ತವೆ. ಸುವಾಸಿನಿಯರು ಒರಳು, ಬೀಸುವ ಕಲ್ಲು ಇವುಗಳನ್ನು ಪೂಜೆ ಮಾಡಿ ಅರಿಸಿನ ಕುಟ್ಟಿ ಬೀಸುತ್ತಾರೆ. ಆ ಅರಿಸಿನದಿಂದಲೇ "ಅರಿಸಿನದ ಗಂಟು" ಮಾಡಿ ವರನ ಮನೆಗೆ ಕಳಿಸುತ್ತಾರೆ. ಅದನ್ನು ಅವರು ಲಗ್ನಕ್ಕೆ ಬರುವಾಗ ತರಬೇಕು. ದೇವರೂಟದೊಡನೆ ಮದುವೆ ಪ್ರಾರಂಭವಾಗುತ್ತದೆ. ವರ ಹಾಗೂ ವರನ ಕಡೆಯವರು ತಮ್ಮ ಮನೆಯಲ್ಲಿ ದೇವರೂಟ ಮುಗಿಸಿ ಕೊಂಡು, ವಧುವಿನ ಊರಿಗೆ ಪ್ರಯಾಣ ಬೆಳೆಸುತ್ತಾರೆ. ವಧುವಿನ ಊರಿನಲ್ಲಿ ಬೀಗರ ವಸತಿಗಾಗಿ " ಬಿಡದಿಮನೆ'ಯನ್ನು ಸಿದ್ಧಮಾಡಿರುತ್ತಾರೆ. ಊಟೋಪಚಾರದ ನಂತರ ವಧೂವರರಿಗೆ ಸುವಾಸಿನಿಯರು ಮಂಗಲ ಸ್ನಾನಮಾಡಿಸುತ್ತಾರೆ; ವಧುವಿಗೆ ಬಳೆ ತೊಡಿಸುವ ಶಾಸ್ತ್ರವಾಗುತ್ತದೆ. ವಧುವಿಗೆ ಅವರವರ ಸಂಪ್ರದಾಯದಂತೆ ಕರೀಬಳೆಗಳನ್ನಾಗಲೀ, ಹಸಿರು ಬಳೆಗಳನ್ನಾಗಲೀ ತೊಡಿಸುತ್ತಾರೆ. ನಂತರ ಬಳಗದ ಬಳೆ ಎಂದು ಅಲ್ಲಿದ್ದ ಸುಮಂಗಲಿಯರಿಗೆಲ್ಲಾ ಬಳೆ ಇಡಿಸುತ್ತಾರೆ. ಆಮೇಲೆ ವಧೂವರರನ್ನು ಕೂಡಿಸಿ "ಮೊದಲ ಹಸೆ" ಮಾಡುತ್ತಾರೆ (ಈಗ ವಧುವನ್ನು ಬಲಕ್ಕೂ ವರನನ್ನು ಎಡಕ್ಕೂ ಕೂರಿಸುತ್ತಾರೆ)ರಾತ್ರಿಯೆಲ್ಲಾ ಮಂಗಳವಾದ್ಯದೊಡನೆ ಶಾಸ್ತ್ರ ನಡೆಯುತ್ತದೆ. ಕೊನೆಯಲ್ಲಿ ಅರಿಸಿನ, ಎಣ್ಣೆಹಚ್ಚಿ ಸ್ನಾನ ಮಾಡಿಸುತ್ತಾರೆ. ಈಗ ಸೋದರ ಮಾವ ಸೀರೆ ಕೊಡಬೇಕು. ಈ ಎಲ್ಲ ಕಾರ್ಯಗಳಲ್ಲಿ ಈ ಎಲ್ಲ ಕಾರ್ಯಗಳಲ್ಲಿ ಕಂಕಣ ಕಟ್ಟಿಕೊಂಡು ಕಾರ್ಯನಿರತರಾದ "ಐದು ಮುತ್ತೈದೆಯರು" ಪ್ರಮುಖ ಪಾತ್ರ ವಹಿಸುತ್ತಾರೆ. ಬೆಳಗಾಗುತ್ತಿದ್ದಂತೆಯೇ ಹಾಲು ಗಂಬ ಹಸಿರುಗಂಬಗಳನ್ನು ತಂದು ಚಪ್ಪರಕ್ಕೆ ಕಟ್ಟುತ್ತಾರೆ. ಇದು ಜೀವನ ಹಚ್ಚ ಹಸುರಾಗಿ ಅಮೃತಮಯವಾಗಿ ಸಂಪತ್-ಸಮೃದ್ಧಿಯಿಂದ ಕೂಡಿರಲಿ ಎಂಬ ಹಾರೈಕೆಯ ಸಂಕೇತ. ಕುಂಬಾರರ ಮನೆಯಿಂದ "ಐರಣಿ-ಬಾಸಿಂಗ" ತರುತ್ತಾರೆ. ಮದುಮಕ್ಕಲ ಅರಿಸಿನ-ಎಣ್ಣೆಯ ಸ್ನಾನದ ಸಂಕೇತವಾಗಿ ಊರಿನಲ್ಲೆಲ್ಲ ಮನೆಮನೆಗೂ, ದೇವಸ್ಥಾನಕ್ಕು ವಾದ್ಯದ ಮೂಲಕ ಹೋಗಿ ಅರಿಸಿನ ಎಣ್ಣೆ. ಸೀಗೆಪುಡಿಯನ್ನು ಹಂಚಿ ಬರುತ್ತಾರೆ. ನಂತರ ಮುತ್ತೈದೆಯರು ಬಾವಿಗೆ ಹೋಗಿ "ಗಂಗಾ' ತರುತ್ತಾರೆ. ಆ ಗಂಗೆಯನ್ನು ಉಪಯೋಗಿಸಿಕೊಂಡು ಹಂದರದ ಕೆಳಗೆ "ಸುರಗಿ ಸುತ್ತು"ತ್ತಾರೆ ಮೊದಲು ಗಂಡಿನ ಸುರಗಿ, ನಂತರ ಹೆಣ್ಣಿನ ಸುರಗಿ, ಸುರಗಿಯನ್ನು ಸುತ್ತಿ ಪಾವನವಾದ

ಗಂಗೆಯಿಂದಾವೃತವಾದ ಒಂದು ಚೌಕಟ್ಟನ್ನು ನಿರ್ಮಿಸಿ ನಾಲ್ಕೂದಿಕ್ಕಿನಲ್ಲಿ ಕಲಶ ಸ್ಥಾಪನೆ ಮಾಡುತ್ತಾರೆ. ಹಿರಿಯ ಅನುಭವಸ್ಥ ಮುತ್ತೈದೆ ಮೊದಲು ಆ ಚೌಕಟ್ಟಿನಲ್ಲಿ ಹೋಗಿ ನಂತರ ಹೆಣ್ಣಿನ ಸುರಗಿಯಲ್ಲಿ ಹೆಣ್ಣನ್ನೂ, ಗಂಡಿನ ಸುರಗಿಯಲ್ಲಿ ಗಂಡನ್ನೂ ಒಳಕ್ಕೆ ಕರೆದುಕೊಳ್ಳುತ್ತಾರೆ. ಇದು ವೈವಾಹಿಕ ಜೀವನದ ಚೌಕಟ್ಟಿನಲ್ಲಿ ಆಗಲೇ ಒಳಪಟ್ಟವರು ಬ್ರಹ್ಮಚರ್ಯದಲ್ಲಿದ್ದವರನ್ನೂ ತಮ್ಮ ಆವರಣಕ್ಕೆ ಸೇರಿಸಿಕೊಳ್ಳುವುದರ ಸಂಕೇತ. ಅಲ್ಲಿ ಕಲಶೋದಕದಿಂದ ಮಂಗಲ ಸ್ನಾನ ಮಾಡಿಸುತ್ತಾರೆ.

ಈ ಕಡೆ ವಧುವು ತೌರಿನವರು ತಂದ ಧಾರೆ ಸೀರೆಯನ್ನುಟ್ಟು ಎರಡೂ ಮನೆಯವರಿಂದ ದೊರೆತ ಆಭರಣಗಳಿಂದ ಅಲಂಕೃತಳಾಗಿ, ಗೌರಿಪೂಜೆ, ಅರಣಿ ಪೂಜೆ ಮಾಡುತ್ತಾಳೆ. ಅಲ್ಲಿಯೇ ಆಕೆಗೆ ಬಾಸಿಂಗವನ್ನು ಹಿಂದಲೆಗೆ ಕಟ್ಟುತ್ತಾರೆ. ಕೆಲವು ಕಡೆ ತಲೆಗೆ "ದಂಡೆ" ಹಾಕುವುದೂ ಉಂಟು. ವರನೂ ಸಹ ಜೋಡಿ ಪಂಚೆ, ಷರ್ಟು, ಶಲ್ಯ, ಪೇಟಗಳನ್ನು ಧರಿಸಿ ಬಾಸಿಂಗ ಕಟ್ಟಿಕೊಂಡು ಸಿದ್ಧನಾಗುತ್ತಾನೆ. ಹೀಗೆ ಸಿದ್ಧರಾದ ವಧೂವರರನ್ನು ಶುಭ ಮುಹೂರ್ತದಲ್ಲಿ ಕಲಶ ಮುಂದಾಗಿ ಧಾರೆಮಂಟಪಕ್ಕೆ ಕರೆ ತರುತ್ತಾರೆ. ಮಂಗಳವಾದ್ಯಗಳು ಭೋರ್ಗರೆಯುತ್ತಿರುವಾಗ ಮನೆಯ ಒಳಗೂ, ಮನೆಯ ಮುಂದಿನ ಚಪ್ಪರದ ತುಂಬಾ ಬಂಧು, ಬಾಂಧವರು, ಆಪ್ತೇಷ್ಟರು, ಅತಿಥಿ ಅಭ್ಯಾಗತರು ದಿವ್ಯಾಲಂಕಾರಭೂಷಿತರಾಗಿ ಸಂಭ್ರಮ ಸಡಗರಗಳಿಂದ ನೆರೆದಿರುವಾಗ ಪುರೋಹಿತರು ಗುರುಗಳ ಪ್ರತೀಕವಾಗಿ ಸ್ಥಾಪಿಸಿರುವ ಪಂಚಕಲಶದ ಹಾಗೂ ಗುರುವಿನ ಸಮ್ಮುಖದಲ್ಲಿ ನೂತನ ವಧೂವರರನ್ನು ಕೂರಿಸುತ್ತಾರೆ. [ಕೆಲವರು ಒಂದೇ ಕಲಶವನ್ನು ಸ್ಥಾಪಿಸುತ್ತಾರೆ] ಈ ಪಂಚಕಲಶ ಹಾಗೂ ಗುರುವಿನ ಸಮ್ಮುಖದಲ್ಲಿ ವಿವಾಹದ "ದಶಕರ್ಮ"ಗಳನ್ನು ಪವಿತ್ರ ಮಂತ್ರ ಪಠಣ ಮಾಡುತ್ತ ನೆರವೇರಿಸುತ್ತಾರೆ.

ಜೀವನದಲ್ಲಿ ಕಷ್ಟವಾಗಲೀ ವಿರಸವಾಗಲೀ ಬಂದಾಗ ಔಷಧದ ಗುಣವುಳ್ಳ ಜೀರಿಗೆಯಂತಹ, ಬೆಲ್ಲದಂತೆ ಸಿಹಿಯಾಗಿ ಸವಿಯಾದ ಹಾಗೂ ಹಿತವಾದ ಮಾತುಗಳಿಂದ ಹಾಗೂ ನಡೆಯಿಂದ ಒಬ್ಬರಿಗೊಬ್ಬರು ನಡೆದು ನನ್ನ ಜೀವನವನ್ನು ಹಸನುಗೊಳಿಸು ಎಂದು ಹಾರೈಸಿ, ವಧುವು ವರನ ತಲೆಯ ಮೇಲೆ, ವರನು ವಧುವಿನ ಮಸ್ತಕದ ಮೇಲೆ ತಮ್ಮ ಕಂಕಣಬದ್ಧವಾದ ಹಸ್ತಗಳಿಂದ ಜೀರಿಗೆ ಬೆಲ್ಲವನ್ನು ಹಾಕುತ್ತಾರೆ. ಅನಂತರ ಹಿರಿಯರಿಂದಲೂ ಮುತ್ತೈದೆಯರಿಂದಲೂ ಹಸ್ತವಿಡಿಸಿ ಆಶೀರ್ವಾದ ಮಾಡಿಸಿ ತರಿಸಿದ ಮಾಂಗಲ್ಯವನ್ನು ಶುಭ ಮುಹೂರ್ತದಲ್ಲಿ ವರನು ವಧುವಿಗೆ ಧಾರಣ ಮಾಡುತ್ತಾನೆ. ಈ ಕಾರ್ಯದ ನಂತರ ವರನನ್ನು ಬಲಕ್ಕೂ, ವಧುವನ್ನು ಎಡಕ್ಕೂ ಕೂರಿಸಿ ಮದುಮಕ್ಕಳ ಕೈಲಿ ನಾರೀಕೇಳ ಫಲವನ್ನಿರಿಸಿ ಮೊದಲ ವಧುವಿಗೆ ತಂದೆ ತಾಯ್ಗಳು ಧಾರೆ ಎರೆದು ಕೊಡುತ್ತಾರೆ. ನಂತರ ಬಂಧು ಬಳಗದವರೆಲ್ಲಾ ನಿಮ್ಮ ಜೀವನ ಸಮೃದ್ಧವಾಗಿರಲಿ, ಅಮೃತಮಯವಾಗಲಿ, ಆನಂದ ಭರಿತವಾಗಲಿ ಎಂದು ಹಾರೈಸಿ ಹಾಲೆರೆಯುತ್ತಾರೆ.

ಪತಿಯ ಮುತ್ತೈದೆತನ ಹಾಗೂ ಸಂಪತ್ತಿನ ಸೂಚಕವಾದ ಪತ್ನಿಯ ಮುತ್ತಿನ ಮೂಗುತಿಯನ್ನು "ತನ್ನ ಮನೆಯನ್ನು ಮಂಗಲಮಯವಾಗಿ ಬೆಳಗಿಸು" ಎನ್ನುವ ಕೋರಿಕೆಯ ಸಂಕೇತವಾಗಿ ಪೂಜಿಸುತ್ತಾನೆ. ಆಗ ದಂಪತಿಗಳೀರ್ವರೂ ಗುರುಗಳಿಗೆ ಕಾಣಿಕೆ ಫಲ ತಾಂಬೂಲಗಳನ್ನರ್ಪಿಸಿ, ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ಮಧುರ ಧನ್ವಂತರಿಯ ಸಂಕೇತಗಳಾದ ಜೀರಿಗೆ ಬೆಲ್ಲವನ್ನು ವಧುವಿನ ಮೇಲುಮುಸುಕಿನ ತುದಿಯಲ್ಲೂ, ವರನ ಶಲ್ಯದ ತುದಿಯಲ್ಲೂ ಕಟ್ಟಿ ಇಬ್ಬರ ಮೇಲು ಹೊದಿಕೆಯ ತುದಿಗಳನ್ನೂ ಗಂಟುಹಾಕಿ ಪೂಜಿಸುತ್ತಾರೆ. ಇದೇ "ಬ್ರಹ್ಮಗಂಟು" ಇನ್ನು ಇವರು ಒಬ್ಬರನ್ನೊಬ್ಬರು ಬಿಡುವಂತಿಲ್ಲ.

ಇಲ್ಲಿಗೆ ಮಾಂಗಲ್ಯ ಧಾರಣಾಕಾರ್ಯ ಮುಕ್ತಾಯವಾಗುತ್ತದೆ. ವಧೂವರರನ್ನು ಸಭಿಕರೆಲ್ಲರ ಮುಂದೆ ಸಭೆಯಲ್ಲಿ ಕೂರಿಸಿ, ಎಲ್ಲರಿಗೂ ಫಲ ತಾಂಬೂಲಾದಿಗಳನ್ನು ವಿನಿಯೋಗಿಸುತ್ತಾರೆ. ಸಂತೋಷಾರ್ಥವಾಗಿ "ಸರಿ-ಬೆಸ" ಆಡಿಸುತ್ತಾರೆ. ಹಾಲಿನ ತಂಬಿಗೆಯಲ್ಲಿ ಉಂಗುರ ಹುಡುಕಿಸುತ್ತಾರೆ,

ಆ ದಿನ ಸಂಜೆ ಆರತಕ್ಷತೆ ಇರುತ್ತದೆ. ಅದಾದ ನಂತರ ಮೆರವಣಿಗೆಯಲ್ಲಿ ಎಲ್ಲರೂ ವಧುವರರೊಡಗೂಡಿ ದೇವಸ್ಥಾನಕ್ಕೆ ಹೋಗಿ "ಮಂಗಳಾರತಿ" ಮಾಡಿಸಿಕೊಂಡು ಬರುತ್ತಾರೆ. ಊಟವಾದ ನಂತರ "ನಾಗೋಲೆ" (ನಾಕಬಲಿ) ಶಾಸ್ತ್ರ ನಡೆಯುತ್ತದೆ. ಕೊನೆಯಲ್ಲಿ ಸ್ನಾನ ಮಾಡುತ್ತಾರೆ ಮರುದಿನ ವಧು ಶುಚಿಭೂರ್ತಳಾಗಿ, ಸರ್ವಾಲಂಕಾರಭೂಷಿತೆಯಾಗಿ ವಾದ್ಯಸಮೇತ ಸುವಾಸಿನಿಯರೊಡಗೂಡಿ "ಗಂಗೆ" ತರಲು ಬಾವಿಗೆ ಹೋಗುತ್ತಾಳೆ. ಗಂಗೆ ಪೂಜಿಸಿ ಪವಿತ್ರ ಗಂಗೆಯನ್ನು ತಲೆಯ ಮೇಲೆ ಹೊತ್ತು ಕೊಂಡು ಬರುತ್ತಾಳೆ. ಮುಂಬಾಗಿಲಲ್ಲಿ ವರನು ಮಡಿಯುಟ್ಟು ಪೂಜಾ ಸಾಮಗ್ರಿಗಳೊಡನೆ ಕಾದು ನಿಂತಿರುತ್ತಾನೆ. ಗಂಗೆ ಬಂದ ತಕ್ಷಣ ಬಾಗಿಲಲ್ಲೇ ಪೂಜೆಮಾಡಿ ಗಂಗೆಯನ್ನು ಪತ್ನಿಯ ತಲೆಯಿಂದ ಇಳುಹಿಕೊಂಡು ದೇವರ ಮನೆಗೆ ತೆಗೆದು ಕೊಂಡು ಹೋಗಿ ಈರ್ವರೂ ಪೂಜಿಸುತ್ತಾರೆ. ಇಲ್ಲಿಗೆ ವಿವಾಹವಿಧಿ ಮುಕ್ತಾಯವಾದಂತೆ. ಈ ವಿಧಿಗಳಲ್ಲಿ ಆಯಾ ಪ್ರದೇಶಕ್ಕೆ ತಕ್ಕಂತೆ ಅಲ್ಪ ಸ್ವಲ್ಪ ಬದಲಾವಣೆಗಳಿವೆ.

(ಉದಾ : ವೈದಿಕ ಸಂಪ್ರದಾಯಗಳ ಪ್ರಭಾವವಿರುವ ಕಡೆ ಕಾಶೀಯಾತ್ರೆ, ಸಪ್ತಪದಿ, ಘೋಮ, ಭೂಮಗಳನ್ನು ಮಾಡುವುದುಂಟು. ಆದರ ಇಲ್ಲಿ ಹೆಚ್ಚಾಗಿ ರೂಢಿಯಲ್ಲಿರುವ ಮುಖ್ಯ ಸಂಪ್ರದಾಯಗಳನ್ನು ಮಾತ್ರ ವಿವರಿಸಿದೆ.)

**ಮನೆದುಂಬಿಸುವುದು :**

ವಧುವಿನ ಮನೆಯಲ್ಲಿ ವಿವಾಹ ಮುಗಿಸಿಕೊಂಡು ವಧುವನ್ನು ಆಕೆಯ ಆಪ್ತೇಷ್ಟರೊಂದಿಗೆ ವರನ ಮನೆಗೆ "ಮನೆ ತಂಬಿಸಿಕೊಳ್ಳಲು" ಕರೆದುಕೊಂಡು

ಹೋಗುತ್ತಾರೆ. ತವರಿನವರು ಮಗಳಿಗೆ ಪಾತ್ರೆ-ಪರಡಿ, ಕುಂಕುಮಬಟ್ಟಲು, ದೀಪ, "ಸುರಗಿ ಸಾಮಾನು"ನ್ನು ಕೊಡುವರು. (ಇದೊಂದು ವೈಶಿಷ್ಟ್ಯಪೂರ್ಣವಾದ ಕೊಡುಗೆ. ಗಂಡನ ಮನೆಯಲ್ಲಿ ಹೆಮ್ಮೆಯಿಂದ ಇವುಗಳನ್ನು ಪ್ರದರ್ಶನಕ್ಕಿಡುವರು) ಇವೆಲ್ಲದರೊಡನೆ ಹೋದ ವಧುವು "ತನ್ನ ಮನೆ"ಯನ್ನು ಪ್ರವೇಶ ಮಾಡುವ ಮೊದಲು ಹೊಸ್ತಿಲ ಮೇಲೆ ತನ್ನ ಬಲಗಾಲನ್ನಿಡಬೇಕು. ಆಗ ವರನು ಬಲಗಾಲಿನ ಹೆಬ್ಬೆರಳು ಹಾಗೂ ಅದರ ಪಕ್ಕದ ಬೆರಳಿನ ಮಧ್ಯಭಾಗದಲ್ಲಿ ಮೊಳೆ ಇಟ್ಟು ಹೊಸಲಿಗೆ ಮೊಳೆ ಬಡಿಯುತ್ತಾರೆ. ಎಂದರೆ ಈಕೆ ಈ ಮನೆಗೆ ಮೊಳೆ ಬಡಿಸಿಕೊಂಡು ಸ್ಥಿರವಾಗಿ ಉಳಿಯಲು ಬಂದವಳು ಎಂಥರ್ಥ. ಬಾಗಿಲ ಒಳಗೆ ಕಾಲಿಡುತ್ತಲೇ ಅಲ್ಲಿಯೇ ಧಾನ್ಯವನ್ನು ಸೇರಿನಲ್ಲಿ ತುಂಬಿ ತಟ್ಟೆಯನ್ನು ಬೋರಲು ಹಾಕಿರುತ್ತಾರೆ. ಆಕೆ ಅದನ್ನು ಜೋರಾಗಿ, ಧಾನ್ಯವೆಲ್ಲಾ ಮನೆ ತುಂಬಾ ಚೆಲ್ಲಾಡಿ, ತಟ್ಟೆಯು ಜೋರಾಗಿ ಶಬ್ದಮಾಡುತ್ತಾ ದೂರಕ್ಕೆ ಹೋಗಿ ಬೀಳುವ ಹಾಗೆ ಒದೆಯಬೇಕು. ಹೊಸದಾಗಿ ಬಂದ ಸೊಸೆಯು ಕಾಲ್ಗುಣದ ಪರಿಣಾಮವಾಗಿ ಮನೆ ತುಂಬ ಚೆಲ್ಲಾಡುವಷ್ಟು ಧನ ಧಾನ್ಯ ಸಮೃದ್ಧಿಯಾಗಲಿ ಎಂದು ಕಾಳನ್ನು ಕಾಲಿನಿಂದ ಚೆಲ್ಲಿಸುತ್ತಾರೆ. ಮನೆಯಲ್ಲಿ ಆನಂದದ ಹೊನಲು ಹೊಮ್ಮಲಿ, ಸಂತೋಷದ ಗಂಟೆ ಬಾರಿಸಲಿ ಎಂದು ತಟ್ಟೆ ಸಪ್ಪಳ ಮಾಡಿಕೊಂಡು ಬೀಳುವಂತೆ ಮಾಡುವರು. ಹೀಗೆ ಮೂರು ಸಾರಿ ಒದೆದ ಮೇಲೆ ಬಲಗಾಲು ಮೊದಲು ಇಟ್ಟು ಮುಂದೆ ಸಾಗಿ ದೇವರ ಮನೆಗೆ ಹೋಗಿ ಮನೆ ದೇವರಿಗೆ ನಮಸ್ಕರಿಸುತ್ತಾಳೆ. ಹೀಗೆ ವಧುವನ್ನೂ ಮನೆ ತಂಬಿಸಿಕೊಳ್ಳುತ್ತಾರೆ. ನಂತರ ಅಲ್ಲಿಯೂ ಗಂಗಾ ಪೂಜೆ ಆರತಕ್ಷತೆ ಆಗುತ್ತದೆ. ನಿಷೇಕಪ್ರಸ್ತಕ್ಕೆ ಇಂತಹ ದಿನವೇ ಎಂಬ ನಿಯಮವಿಲ್ಲ.

**ಕುಬುಸ ಮಾಡುವುದು :**

ಮಹಿಳೆಯು ಗರ್ಭವತಿಯಾದ ಮೂರು ತಿಂಗಳಲ್ಲಿ ತವರಿನವರು "ಬಯಕೆಯೂಟ" ಮಾಡುತ್ತಾರೆ.

ಗರ್ಭವತಿಯಾದ ಐದು ಅಥವಾ ಏಳನೆಯ ತಿಂಗಳಲ್ಲಿ, ಒಂದು ಶುಭ ದಿವಸ "ಸೀಮಂತ ಕಾರ್ಯ" ಮಾಡುತ್ತಾರೆ. ಇದಕ್ಕೆ ಉತ್ತರ ಕರ್ನಾಟಕ ಭಾಗದಲ್ಲಿ "ಕುಬುಸ ಮಾಡುವುದು" ಎನ್ನುತ್ತಾರೆ. ಈ ಕಾರ್ಯವನ್ನು ಸಾಮಾನ್ಯವಾಗಿ ತವರಿನವರು ಮಗಳ ಗಂಡನ ಮನೆಗೆ ಹೋಗಿ ಮಾಡುತ್ತಾರೆ. ಅಂದಿನ ಖರ್ಚು ತವರಿನವರದ್ದು.

**ಗರ್ಭಸ್ಥ ಪಿಂಡಕ್ಕೆ ಲಿಂಗಧಾರಣೆ :**

ಎಂಟನೆಯ ತಿಂಗಳಲ್ಲಿ ಗರ್ಭಸ್ಥ ಶಿಶುವಿಗೆ ಜಂಗಮರನ್ನು ಕರೆಸಿ "ಲಿಂಗಧಾರಣೆ" ಮಾಡಿಸುತ್ತಾರೆ. ಆ ಲಿಂಗವನ್ನು ಹೆರಿಗೆಯಾಗುವವರೆಗೆ ತಾಯಿಯೇ

ಧರಿಸಬೇಕು, ಈ ಸಂಸ್ಕಾರಕ್ಕೆ ಕಾರಣ, ವೀರಶೈವರ ಮನೆಯಲ್ಲಿ ಭವಿಯ ಆಗಮವಾದರೆ ಸೂತಕವಾಗುತ್ತದೆ. ಹುಟ್ಟುವ ಮೊದಲೇ ಲಿಂಗಧಾರಣಾ ಸಂಸ್ಕಾರವಾದ ಮಗು ಜನ್ಮತಾಳಿದರೆ ಹೊಲೆಯಿಲ್ಲ. ಮತ್ತೊಂದು ಕಾರಣವೆಂದರೆ ಎಂಟನೆಯ ತಿಂಗಳಲ್ಲಿ ಮಗುವಿಗೆ ಪೂರ್ವಜನ್ಮದ ಅರಿವು ಮೂಡುವ ಸ್ಥಿತಿ ಬರುತ್ತದೆ. ಆಗ ಬೇರೊಂದು, ಅರಿವು ಬರುವ ಮೊದಲು ಲಿಂಗದ ಅರಿವುಂಟು ಮಾಡಬೇಕೆಂದು ಮೂಲೋದ್ದೇಶ. (ಈಗ ಇದನ್ನು ಬಹಳ ಸಂಪ್ರದಾಯಸ್ಥರು ಮಾತ್ರ ಉಳಿಸಿಕೊಂಡಿದ್ದಾರೆ) ಮಗುವು ಹುಟ್ಟಿದ ಮೇಲೆ ಪುನಃ ಲಿಂಗಧಾರಣಾ ಸಂಸ್ಕಾರ ಮಾಡಿ ಆ ಲಿಂಗವನ್ನು ಮಗುವಿಗೆ ಕಟ್ಟಿ ನಂತರ ತೊಟ್ಟಿಲ ಹಗ್ಗಕ್ಕೆ ಕಟ್ಟುತ್ತಾರೆ.

ಹನ್ನೊಂದನೆಯ ದಿನ ಅಥವಾ ಹದಿಮೂರನೆಯ ದಿನ ಅಂತೂ ತಿಂಗಳು ತುಂಬುವುದರೊಳಗಾಗಿ (ತುಂಬಾ ಅಪರೂಪ ಸಂದರ್ಭದಲ್ಲಿ ಮೂರು ತಿಂಗಳು ತುಂಬುವುದರೊಳಗಾಗಿ) ಸಾಮಾನ್ಯವಾಗಿ ಶುಕ್ರವಾರ ಅಥವಾ ಮಂಗಳವಾರ, ಶುಭದಿನದಂದು ನಾಮಕರಣ ಮತ್ತು ತೊಟ್ಟಿಲಲ್ಲಿಡುವ ಕಾರ್ಯಮಾಡುತ್ತಾರೆ. ಗಂಡುಮಗು ಹುಟ್ಟಿದರೆ ಹೆಣ್ಣು ಮಗುವಿನ ತಾಯಿಯನ್ನು, ಹೆಣ್ಣು ಮಗು ಹುಟ್ಟಿದರೆ, ಗಂಡು ಮಗುವಿನ ತಾಯಿಯನ್ನೂ ಕರೆಸಿ ಆಕೆಯಿಂದ ಗಂಗೆತರಿಸಿ, (ಇತರ ಸುವಾಸಿನಿಯರೂ ಹೋಗುತ್ತಾರೆ) ಆ ಕೊಡವನ್ನು ತೊಟ್ಟಿಲ ಬಳಿ ಇಟ್ಟು ಪೂಜಿಸುತ್ತಾರೆ. ಬಾವಿಯ ಹತ್ತಿರ ಒಡೆದ ಕಾಯಿಯಲ್ಲಿ ಜುಟ್ಟಿದ್ದ ಹೋಳು (ಬೀಜ ವಿರುವ) ಭಾಗ ಎಲೆ ಅಡಿಕೆ, ಹಣ್ಣು ಮುಂತಾದವುಗಳಿಂದ ತೊಟ್ಟಿಲ ಹಿಂದೆ ತಾಯಿಯನ್ನು ಕೂರಿಸಿ ಉಡಿತುಂಬುತ್ತಾರೆ. ಸುವಾಸಿನಿಯರು ತೊಟ್ಟಿಲ ಪೂಜೆ ಮಾಡಿ, ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುತ್ತ ಜೋಗುಳ ಹಾಡುತ್ತಾರೆ.

ನೆನೆಸಿದ ಕಡ್ಲೇಕಾಳನ್ನು (ಗುಗ್ಗರಿ) ಒಂದು ಸಣ್ಣ ಬಟ್ಟೆಯಲ್ಲಿ ಕಟ್ಟಿ ಮಗುವಿನ ಕಾಲಿನ ಕಡೆ ತೊಟ್ಟಿಲಲ್ಲಿ ಇಡುತ್ತಾರೆ. ಮಗುವಿನ ಸೋದರತ್ತೆ ಹೆಸರಿಡುತ್ತಾಳೆ. ಅದರ ಕಿವಿಯಲ್ಲಿ ಮೊದಲ ದೇವರ ಹೆಸರನ್ನೂ, ನಂತರ ಮಗು ಹುಟ್ಟಿದ ನಕ್ಷತ್ರಕ್ಕೆ ಸರಿ ಹೊಂದುವ ಹೆಸರನ್ನು, ಕಡೆಯದಾಗಿ ಪ್ರೀತಿನಾಮವನ್ನೂ, ಹೇಳುತ್ತಾರೆ. ಮೂರು ಸಾರಿ ಗಟ್ಟಿಯಾಗಿ ಹೇಳಿ ಗುಗ್ಗರಯ ಗಂಟನ್ನು ತೆಗೆದುಕೊಂಡು ಸೋದರತ್ತೆ ದೇವರಮನೆಯ ಕಡೆ ಓಡುತ್ತಾಳೆ. ಉಳಿದವರು ಆಕೆಯನ್ನು ಅಟ್ಟಿಸಿಕೊಂಡು ಹೋಗಿ ಬೆನ್ನಿಗೆ ಹೊಡೆಯುತ್ತಾರೆ. ಇದನ್ನು ತಮಾಷೆಯ ರೀತಿಯಲ್ಲಿ ಆಚರಿಸುತ್ತಾರೆ. ಆದರೆ ಈ ಸಂಪ್ರದಾಯ ಬೆಳೆಯಲು ಕಾರಣ ಶಿವಸ್ವರೂಪಿಯಾದ ಶಿಶುವು ನಾಮಾತೀತನು. ಅಂತಹವನಿಗೆ ಒಂದು ಹೆಸರಿಡುವುದು ಉದ್ಧಟತನ, ಆ ಸರ್ವಶಕ್ತನನ್ನು ಒಂದು ಹೆಸರಿನಿಂದ ಕರೆಯುವಳಲ್ಲಾ ಎಂದು ಹೊಡೆಯುತ್ತಾರಂತೆ. ಅನಂತರ ಮುತ್ತೈದೆಯರಿಗೆ ಉಡಿತುಂಬಿ ತಾಯಿಗೂ ಮಗುವಿಗೂ ಕಲಶ ದಾರತಿ ಮಾಡುತ್ತಾರೆ.

ದೀಕ್ಷಾ ಸಂಸ್ಕಾರ :

ಶಿವದೀಕ್ಷೆಯನ್ನು ಎಂಟನೆಯ ವಯಸ್ಸಿನಲ್ಲಿ ಕೊಡುತ್ತಾರೆ. ವೀರಶೈವ ತತ್ವದ ಪ್ರಕಾರ "ದೀ"ಎಂದರೆ ಶಿವಜ್ಞಾನ ಕೊಡುವುದೆಂತಲೂ, "ಕ್ಷಾ" ಎಂದರೆ ಲೌಕಿಕ ಬಂಧನಗಳನ್ನು ಕ್ಷಯಿಸುವುದೆಂತಲೂ ಅರ್ಥ ದೀಕ್ಷಾಧಾರಿಯು ಷಡ್ವರ್ಗ, ಸಪ್ತವ್ಯಸನಾದಿಗಳನ್ನು ತೊರೆಯಬೇಕು, ಇಷ್ಟ ಲಿಂಗವಲ್ಲದೆ ಅನ್ಯದೇವರನ್ನು ಉಪಾಸಿಸಬಾರದು, ಉಪವಾಸ, ಹರಕೆ, ತೀರ್ಥಯಾತ್ರೆ ಮಾಡದೆ, ಭವಿಸಂಗ ತ್ಯಜಿಸಿ, ಹಮ್ಮುಬಿಮ್ಮುಗಳನ್ನು ಸಂಹರಿಸಿ ಇಷ್ಟಲಿಂಗಕ್ಕೆ ನಿಷ್ಠನಾಗಿ ಬದುಕಬೇಕೆಂಬ ನಿಯಮವಿದೆ.

ದೀಕ್ಷೆಯನ್ನು ಶುಭದಿನದಂದು ಬ್ರಾಹ್ಮೀ ಮುಹೂರ್ತದಲ್ಲಿ ಪ್ರಾರಂಭಿಸುತ್ತಾರೆ. ಪಂಚ ಕಳಶ ಸ್ಥಾಪನೆ ಮಾಡಿ, ಗುರುವಿನ ಸಮ್ಮುಖದಲ್ಲಿ ಮಂಗಳ ಸ್ನಾನ ಮಾಡಿ ಬಂದ ವಟುವನ್ನು ಆಸನದಲ್ಲಿ ಕೂರಿಸುತ್ತಾರೆ. ಅನಂತರ ಗುರಪಾದೋದಕದಿಂದ ವಟುವನ್ನು ಪರಿಶುದ್ಧಗೊಳಿಸಿ ಭಸ್ಮಸ್ನಾನ ಮಾಡಿಸುತ್ತಾರೆ. ವಿಭೂತಿ ಅಥವಾ ಭಸ್ಮಕ್ಕೆ ಅಣಿಮಾಡಿ ಅಷ್ಟ ಸಿದ್ಧಿಗಳನ್ನು ಕೊಡುವ ಶಕ್ತಿ ಇದೆ. ಶಿವ ತತ್ವವನ್ನು ಭಾವಿಸಬಲ್ಲುದಾಗಿದೆ. ಅನಂತರ ಪರಿಶುದ್ಧಗೊಳಿಸಿದ ಲಿಂಗದಲ್ಲಿ ಶಿಷ್ಯನ ಚಿತ್ಕಲಾ ಚೈತನ್ಯವನ್ನು ಗುರುವು ತನ್ನ ಹಸ್ತಮಸ್ತಕ ಸಂಯೋಗದಿಂದ ತುಂಬುತ್ತಾನೆ. ಆಗ ಅದು "ಇಷ್ಟಲಿಂಗ"ವಾಗುತ್ತದೆ. ಈ ಇಷ್ಟಲಿಂಗವನ್ನು ದೀಕ್ಷಾರ್ಥಿಯ ಶರೀರದಲ್ಲಿ ಧರಿಸಿ ಬಾಹ್ಯ ಲಿಂಗಧಾರಣೆ ಮಾಡುತ್ತಾರೆ. ಅಂಗವೆ ಪುಷ್ಪ. ಲಿಂಗವೆ ಪರಿಮಳ. ಆದುದರಿಂದ ವೀರಶೈವನು ಅಂಗದಿಂದ ಲಿಂಗವನ್ನು ಬೇರ್ಪಡಿಸದಂತೆ ಧರಿಸಿರಬೇಕೆಂದು ಹೇಳಿ ಅದರ ಪೂಜಾ ವಿಧಾನವನ್ನೂ ಹೇಳಿಕೊಡುತ್ತಾರೆ. ಇಷ್ಟ ಲಿಂಗವಲ್ಲದೆ ಅನ್ಯದೈವವನ್ನು ಪೂಜಿಸಬಾರದೆಂಬ ನೇಮವಿದೆ. ಈ ನಿಯಮಗಳನ್ನು ತಿಳಿಸಿ ಷಡಕ್ಷರ ಮಂತ್ರೋಪದೇಶ ಮಾಡಿ ವಟುವಿನ ಸೂಕ್ಷ್ಮ ಶರೀರದಲ್ಲಿ "ಪ್ರಾಣಲಿಂಗ"ವನ್ನು ಸ್ಥಾಪಿಸುತ್ತಾರೆ. ಆಗ ದೀಕ್ಷಾಧಾರಿಯು ಈ ಇಷ್ಟಲಿಂಗ ಪ್ರಾಣಲಿಂಗದ ಅರಿವನ್ನು ಪಡೆದು ಅನುಭವಿಸುವ ಆನಂದದಿಂದ 'ಭಾವಲಿಂಗ' ಧಾರಣೆಯಾಗುತ್ತದೆ. ದೀಕ್ಷೆ ಕೈಗೊಂಡು ವ್ಯಕ್ತಿಯು ಲೌಕಿಕದಲ್ಲಿ ನ್ಯಾಯಬದ್ಧವಾದ ಯಾವ ಕಾರ್ಯವನ್ನಾದರೂ ಕೈಗೊಳ್ಳಬಹುದು. ಅದಕ್ಕಾಗಿಯೇ ವೀರಶೈವರು ಭಿಕ್ಷೆ"ಕ್ಕೆ ಹೋದಾಗ ಸಾಮಾನ್ಯ ಭಿಕ್ಷೆಯನ್ನು ಅವರು ಬೇಡುವುದಿಲ್ಲ. ಅದು ಧರ್ಮದ ಕಾಯಕ. ದೀಕ್ಷೆಯಾದ ಮೇಲೆ ವಟುವು ಐದು ಮನೆಗಳಿಗಾದರೂ ಹೋಗಿ "ಭಿಕ್ಷೆ" ಕೇಳಬೇಕು. "ಗುರುಧರ್ಮ, ಕೋರ ಧಾನ್ಯದ ಭಿಕ್ಷೆ" ಎಂದು ಕೇಳುತ್ತಾರೆ. ಅಂದರೆ ಗುರಧರ್ಮದ ಪ್ರತೀಕ, ನಿಮ್ಮ ಸಂಪತ್ತಿನ ಗುರು ಧರ್ಮದ ಪ್ರತೀಕ, ನಿಮ್ಮ ಸಂಪತ್ತಿನ ಗುರುವಿನ ಪಾಲನ್ನು (ಕೋರನ್ನು) ಕೊಡಿ ಎಂದು ಕೇಳುತ್ತಾರೆ.

ಈ ಕೋರನ್ನು ಸ್ವಾರ್ಥಕ್ಕೆ ಉಪಯೋಗಿಸದೆ ಗುರುವು ಸಮಾಜವನ್ನು ಉನ್ನತಿಗೊಳಿಸಲು ಉಪಯೋಗಿಸಬೇಕು.

ವೀರಶೈವರಲ್ಲಿ ಪೂಜೆಯಲ್ಲಿ ಸ್ತ್ರೀಗೆ ಸಮಾನ ಸ್ಥಾನವಿದೆ. ಆಕೆಗೂ ದೀಕ್ಷೆ ಪಡೆಯುವ ಅಧಿಕಾರವಿದೆ. ಹೆಣ್ಣಾಗಲಿ, ಗಂಡಾಗಲಿ ದೀಕ್ಷೆಯಿಲ್ಲದೆ ಮೋಕ್ಷವಿಲ್ಲ ಎಂಬ ನಾಣ್ಣುಡಿಯೇ ಬೆಳೆದು ಬಂದಿದೆ. ಇದೊಂದು ವೀರಶೈವದ ವಿಶೇಷ ವೈಶಿಷ್ಟ್ಯವೆಂದೇ ಹೇಳಬೇಕು.

ಅಂತ್ಯ ಸಂಸ್ಕಾರ :

ಮಾನವಜೀವ ಕೊನೆಗೊಳ್ಳುವುದನ್ನು ವೀರಶೈವರು ಸತ್ತರು ಎನ್ನುವುದಿಲ್ಲ. ಲಿಂಗದೊಳಗಾದರು. ಲಿಂಗೈಕ್ಯರಾದರು ಅಥವಾ ಶಿವಾಧೀನರಾದರು ಎನ್ನುತ್ತಾರೆ. ಇಲ್ಲಿಯೂ ಅಷ್ಟೆ. ಸ್ತ್ರೀ ಪುರುಷರಿಗೆ ಒಂದೇ ತೆರನಾದ ಸಂಸ್ಕಾರಗಳಿವೆ. ಜೀವ ಬಿಟ್ಟ ದೇಹ ಮೈಲಿಗೆಯಿಂದಾಗಲೀ, ಬಂಧುಗಳಿಗೆ ಸೂತಕ ಬಂದಿದೆಯೆಂದಾಗಲೀ ವೀರಶೈವರು ನಂಬುವುದಿಲ್ಲ. ಏಕೆಂದರೆ ಹುಟ್ಟಿದಂದಿನಿಂದ ಲಿಂಗಾಂಗಿಗಳಾಗಿ ಷಡಕ್ಷರ ಮಂತ್ರ ಪಠಣ ಮಾಡುತ್ತ ಇದ್ದವನಿಗೆ ಮೈಲಿಗೆ ಬರುವುದಿಲ್ಲವೆಂಬ ತತ್ವ. ಪ್ರಾಣ ಹೋದರೂ ಲಿಂಗದ ಸಂಸರ್ಗ ಪಡೆದ ದೇಹಕ್ಕೂ ಪೂಜ್ಯಸ್ಥಾನ. ಹೀಗಾಗಿ ಆ ದೇಹಕ್ಕೆ ಸ್ನಾನ ಮಾಡಿಸಿ, ಹೊಸಬಟ್ಟೆ ಧರಿಸಿ ಪೂಜೆ ಮಾಡುತ್ತಾರೆ. ಬಂಧು ಬಾಂಧವರೆಲ್ಲ ಸೇರಿ ಭಜನೆ ಮಾಡುತ್ತಾರೆ. ವಿಮಾನ ಕಟ್ಟಿ ಅದರಲ್ಲಿ ಲಿಂಗೈಕ್ಯರನ್ನು ಕೂಡಿಸಿ ಮೆರವಣಿಗೆಯಿಂದ ಸಮಾಧಿ ಸ್ಥಾನಕ್ಕೆ ಒಯ್ಯುತ್ತಾರೆ. ಈ ಉತ್ಸವ ಅಲ್ಲಿಗೆ ಬರುವುದರೊಳಗೆ ಇಲ್ಲಿ ಚೌಕಾಕಾರದ ಸಮಾಧಿ ನಿರ್ಮಿಸಿರುತ್ತಾರೆ. ಸಮಾಧಿಯೊಳಕ್ಕೆ ಹೋಗಲು ಉತ್ತರ ದಿಕ್ಕಿನಿಂದ ಮೆಟ್ಟಲು ಇರುತ್ತವೆ. ಸಮಾಧಿಯ ಮಧ್ಯದಲ್ಲಿ ಒಂದು ಪೀಠ ಮಾಡಿರುತ್ತಾರೆ. ದಕ್ಷಿಣದ ಗೋಡೆಯಲ್ಲಿ ದೇಹವನ್ನಿರಿಸಲು ಲಿಂಗಾಕಾರದಲ್ಲಿ ಗೂಡು ನಿರ್ಮಿಸಲ್ಪಟ್ಟಿರುತ್ತದೆ. ಅನಂತರ ಗುರು ಪಾದೋದಕದಿಂದ ಸಮಾಧಿ ಸ್ಥಾನವು ಪರಿಶುದ್ಧ ಮಾಡಲ್ಪಡುತ್ತದೆ. ವೀರಶೈವ ತತ್ವನಿಷ್ಠರೂ ಹಾಗೂ ಶಿವತತ್ವ ಪರಾಯಣರೂ ಆದ ಲೌಕಿಕರಿಗೂ ಸ್ವಾಮಿಗಳಿಗೂ "ಕ್ರಿಯಾ ಸಮಾಧಿ" (ವಿಶೇಷ ವಿಧಿ-ವಿಧಾನಗಳಿವೆ) ಮಾಡುತ್ತಾರೆ. ಆಗ ಮೇಲಿನಂತೆ ಪರಿಶುದ್ಧಗೊಳಿಸಿದ ಸಮಾಧಿಯಲ್ಲಿ ತಾಮ್ರದ ತಗಡಿನಲ್ಲಿ ಮಾಡಿದ ಲಿಂಗಗಳನ್ನು ನೇಮರೀತ್ಯ ಸ್ಥಾಪಿಸುತ್ತಾರೆ. ಆ ಮೇಲೆ ಗುರುಗಳನ್ನು ಸಮಾಧಿಯಲ್ಲಿ ಮಾಡಿದ ಪೀಠದಲ್ಲಿ ಕೂಡಿಸಿ ಅವರ ಪಾದಪೂಜೆ ಮಾಡುತ್ತಾರೆ. ಆಗ, ಆ ಸಮಾಧಿ ಕೈಲಾಸ, ಆ ಗುರುವೇ ಶಿವ. ಆ ಕೈಲಾಸಕ್ಕೆ ಶರಣನು ಬರುವವನಿದ್ದಾನೆ. ಈ ಕಡೆ ಮೆರವಣಿಗೆ ಬರುತ್ತದೆ. ಲಿಂಗೈಕ್ಯನನ್ನು ಹೊತ್ತಿರುವ ವಿಮಾನವನ್ನು, ಜೊತೆಯಲ್ಲಿ ಬಂದ ಆಪ್ತೇಷ್ಟರು, ಬಂಧು ಬಾಂಧವರು ಹೆಗಲು ಕೊಡಲು ಹೆಜ್ಜೆ ಹೆಜ್ಜೆಗೂ ಮುಂದೇ ಬರುತ್ತಾರೆ.

ಒಬ್ಬರಾದ ಮೇಲೊಬ್ಬರಂತೆ ಪ್ರತಿಯೊಬ್ಬರೂ ಹೆಗಲು ಕೊಡುತ್ತಾರೆ. ಲಿಂಗದೊಳಗಾಗಿ ಲಿಂಗವೇ ಆದ ಆ ವ್ಯಕ್ತಿಗೆ ಸಲ್ಲಿಸುವ ಕೊನೆಯ ಸೇವೆಯದು. ಇದಕ್ಕೆ 'ಶಿವನ ಬಿಟ್ಟ' ಎನ್ನುತ್ತಾರೆ. ಹೀಗೆ ಮೆರವಣಿಗೆಯು ಸಮಾಧಿ ಸ್ಥಾನಕ್ಕೆ ಬರುತ್ತಿದ್ದಂತೆ ಇಷ್ಟರಲ್ಲಿ ಇಬ್ಬರು ಮುಂದಾಗಿ ಸಮಾಧಿಯ ಕಡೆಗೆ ಹೋಗುತ್ತಾರೆ. ಆಗ ಕೈಲಾಸದ ಶಿವ ದೂತರೆಂಬಂತೆ ಇಬ್ಬರು ಸಮಾಧಿ ಕಡೆಯಿಂದ ಬಂದು ಯಾರು ಬಂದಿದ್ದಾರೆಂದು ಪ್ರಶ್ನಿಸುತ್ತಾರೆ. ಶಿವಪೂಜಾ ನಿಷ್ಠರೂ, ಗುರುಲಿಂಗ ಜಂಗಮ ಭಕ್ತರೂ ಆದ ಇಂಥವರು ದಯಮಾಡಿಸಿದ್ದಾರೆಂದು ಹೇಳಲು, ಶಿವದೂತರು, "ಕೈಲಾಸದ ಬಾಗಿಲು ತೆಗೆದಿದೆ, ಒಳಗೆ ಕರೆದುಕೊಂಡು ಬನ್ನಿ" ಎಂದು ಸ್ವಾಗತಿಸುತ್ತಾರೆ. ಆಗ ವಿಮಾನದಲ್ಲಿದ್ದ ದೇಹವನ್ನು ಇಳಿಸಿ, ಸಮಾಧಿಯಲ್ಲಿ ಆ ದೇಹವನ್ನು ಇಳಿಸಿ, ಗುರುವು ಕುಳಿತಿದ್ದ ಪೀಠದ ಮೇಲೆ ಕೂರಿಸಿ ಪೂಜೆ ಮಾಡುವರು, ಇದು ಅವರು ಲಿಂಗದೊಳಗೆ ಐಕ್ಯರಾದುದರ ಸಂಕೇತ. ಆಗ ಸ್ಥೂಲ ರೂಪ ಮಾಯವಾದುದರ ಸಂಕೇತವಾಗಿ ಆ ದೇಹವನ್ನು ಹಿಂದಿರುವ ಗೂಡಿಗೆ ಸರಿಸಿ ಬಟ್ಟೆಯಿಂದ ಮುಚ್ಚಿಬಿಡುತ್ತಾರೆ. ಕ್ರಿಯಾ ಸಮಾಧಿಯಾದಲ್ಲಿ ವಿಭೂತಿಯಿಂದಲೇ ಸಮಾಧಿಯನ್ನು ಮುಚ್ಚಿ, ಗೂಡಿನ ಬಾಯಿಯನ್ನು ಕಲ್ಲುಬಂಡೆಯಿಂದ ಮುಚ್ಚುತ್ತಾರೆ. ಯಾವ ಭಾಗದಿಂದಲೂ ಸ್ವಲ್ಪವೂ ಮಣ್ಣು ಗೂಡಿನೊಳಗೆ ಹೋಗದಂತೆ ಎಚ್ಚರಿಕೆ ವಹಿಸಲಾಗುತ್ತದೆ. ಆಗ ಗುರುಗಳ ದೇಹ ಏನಾಯಿತು ಎಂದು ಕೇಳುವರು. ಸೇರಿದ ಸ್ತ್ರೀಪುರುಷರೆಲ್ಲಾ ಮಾಹೇಶ ಭಕ್ತರು ಕೂಡಿ ಮಾಡಿದ್ದು ಲಿಂಗವಾಯಿತು ಎನ್ನುತ್ತಾರೆ. (ದೇಹದೊಡನೆ ಇಷ್ಟಲಿಂಗವೂ ಇರುತ್ತದೆ.) ಅನಂತರ ಎಲ್ಲರೂ ಮಣ್ಣು ಕೊಡುತ್ತಾರೆ. ಸಮಾಧಿ ಸಂಪೂರ್ಣವಾದ ಮೇಲೆ ಸಮಾಧಿಯ ಮೇಲೆ ಗುರುವನ್ನು ನಿಲ್ಲಿಸಿ ಪಾದಪೂಜೆ ಮಾಡುತ್ತಾರೆ. ಆಗ ಭಜನೆ ಮಾಡುವವರು :

"ಸತ್ಯತನದಿ ನಡೆದು ಶರಣಮಾರ್ಗವ ಪಿಡಿದು
ಮಾಯಾ ಪ್ರಪಂಚದಿ ಏನೂ ಹುರುಳಿಲ್ಲೆಂದು
ಬರುವಾಗ ತರಲಿಲ್ಲ !
ನೀ ಹೋಗುವಾಗ ಏನೂ ಒಯ್ಯಲಿಲ್ಲ
ಹರಸೇವೆ ಮಾಡುತ, ನರಜನ್ಮ ನೀಡುತ
ಸಂಸಾರ ಶರಧಿಯ ಪಾರಾಗಿ ಹೋದೆಯಾ"

ಎಂದು ಮುಂತಾಗಿ ತತ್ವ ಪದಗಳ ಭಜನೆ ಮಾಡುವರು.

**ವೀರಶೈವದ ಮುಖ್ಯ ಲಕ್ಷಣಗಳು :**

ವೀರಶೈವ ತತ್ವವನ್ನು ನಿಷ್ಠೆಯಿಂದ ಪಾಲಿಸುವವರು ನಕ್ಷತ್ರದೋಷ, ವಾರದೋಷ ತಿಥಿದೋಷ, ಮಾಸದೋಷಗಳನ್ನು ಎಣಿಸುವುದಿಲ್ಲ. ಶಿವನ ಸೃಷ್ಟಿಯಲ್ಲಿ ಎಲ್ಲಾ ಶುಭಮಯ. ಇಷ್ಟಲಿಂಗ ಹೊರತು ಮಾರ್ಗ ಹೊರತು ವ್ರತ, ಉಪವಾಸ, ತೀರ್ಥ ಸ್ನಾನಗಳಿಲ್ಲ. ಸವಿಮಾತು, ಸದುವಿನಯ, ನಿರಹಂಕಾರ ಆತ್ಮೋನ್ನತಿಯ ಮಾರ್ಗ, ಸತಿಪತಿಗಳೊಂದಾದ ಭಕ್ತಿಯಿಂದ ಶಿವ ಸಂತುಷ್ಟನಾಗುವನು. ಈ ಲೋಕದಲ್ಲಿ ಎಲ್ಲರ ಮೆಚ್ಚುಗೆಗೆ ಪಾತ್ರನಾಗುವಂತೆ ಬಾಳಿದವನು ಕೈಲಾಸದಲ್ಲಿಯೂ ಸಲ್ಲುವನು ಎಂದು ಇಲ್ಲಿಯ ಜೀವನಕ್ಕೂ ಮಹತ್ವ ಕೊಟ್ಟಿದ್ದಾರೆ. ಗುರುವಿಗೆ ಬದುಕಿನ ಎಲ್ಲಾ ಹಂತದಲ್ಲಿಯೂ ಮಹತ್ತರ ಸ್ಥಾನ. ಸ್ತ್ರೀಗೆ ಪುರುಷನಂತೆ ಎಲ್ಲ ರೀತಿಯಲ್ಲೂ ಸಮಾನತೆ ಉಂಟು. ಈ ಧರ್ಮವನ್ನು ಬೇಕಾದವರೆಲ್ಲರೂ ಸ್ವೀಕರಿಸಬಹುದು. ತತ್ವಗಳನ್ನು ಯಾರು ಬೇಕಾದರೂ ಪಾಲಿಸಬಹುದು. ವೀರಶೈವರ ತತ್ವಗಳು ವಿಶಾಲವಾದ ಮಾನವತೆಯ ತಳಹದಿಯ ಮೇಲೆ ರೂಪಿಸಲ್ಪಟ್ಟಿವೆ.

■

# ಮಠಗಳಿಗೊಂದು ನೀಲನಕ್ಷೆ

ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ

ಸಾಮಾಜಿಕ ಜೀವನವು ಯಾವಾಗಲೂ ಒಂದೇ ತೆರನಾಗುರುವುದಿಲ್ಲ. ಅದರ ಮೌಲ್ಯಗಳು ಕಾಲಕಾಲಕ್ಕೆ ಬದಲಾವಣೆ ಹೊಂದುತ್ತಿರುತ್ತವೆ–ಅದಕ್ಕೆ ತಕ್ಕಹಾಗೆ ಸಮಾಜದ ಜನರ ಜೀವನದಲ್ಲೂ, ನಡೆ–ನುಡಿಯಲ್ಲೂ–ಮೌಲ್ಯದಲ್ಲೂ ಬದಲಾವಣೆಯಾಗುವುದು ಸಹಜ, ಬದಲಾವಣೆಗೆ ತಕ್ಕ ಹಾಗೆ, ಸಾಮಾಜಿಕ ಘಟಕಗಳು ತಮ್ಮ ವಿಚಾರ ಹಾಗೂ ಕಾರ್ಯಕ್ರಮಗಳಲ್ಲಿ ಬದಲಾವಣೆ ಮಾಡಿಕೊಂಡು ಹೊಂದಿಕೊಳ್ಳದಿದ್ದರೆ, ಅವು ತಮ್ಮ ಅಸ್ತಿತ್ವವನ್ನೆ ಕಳೆದುಕೊಳ್ಳತ್ತವೆ. ಮನ್ನಣೆಯಾಗಲಿ, ಸ್ಥಾನಮಾನಗಳಾಗಲಿ ಉಳಿಯುವುದಿಲ್ಲ.

ಇತ್ತೀಚೆಗೆ ವೈಜ್ಞಾನಿಕ ಬೆಳವಣಿಗೆಯಿಂದಾಗಿ ದೇಶ, ವಿದೇಶಗಳು ನಿಕಟಗೊಳ್ಳುತ್ತಿವೆ. ಜಗತ್ತಿನ ಮೂಲೆ–ಮೂಲೆಗೆ ಸಂಪರ್ಕ ಸುಲಭವಾಗಿ, ಜನರ ಸಂಪರ್ಕ ಮಿಲನ, ವಿಚಾರವಿನಿಮಯ, ಸಹಕಾರ, ಪರಿಚಯಗಳು ಹೆಚ್ಚಾಗಿವೆ. ತತ್ಪರಿಣಾಮವಾಗಿ ಜನಜೀವನದಲ್ಲಿ ಬಹಳಷ್ಟು ಮಾರ್ಪಾಟುಗಳನ್ನು ಕಾಣುತ್ತಿದ್ದೇವೆ. ವೈಜ್ಞಾನಿಕ ಹಾಗೂ ತಾಂತ್ರಿಕ ಜ್ಞಾನದಲ್ಲಿ, ಹೆಚ್ಚಿನ ಸಾಧನೆಯನ್ನು ಸಾಧಿಸಲು ಹೊರಟಿರುವ ಭಾರತದ ಮೇಲಂತೂ ಆಧುನೀಕರಣ ಬಹುತೀವ್ರವಾದ ಪ್ರಭಾವವನ್ನು ಬೀರುತ್ತದೆ. ಈ ಪ್ರಭಾವ ಜನರ ಆಚಾರ–ವಿಚಾರ, ನಡೆ–ನುಡಿ, ಸಂಪ್ರದಾಯ, ಶಿಕ್ಷಣ, ಮೌಲ್ಯಗಳಲ್ಲಿ ಬಹಳಷ್ಟು ಮಾರ್ಪಾಟನ್ನು ಉಂಟುಮಾಡಿದೆ. ಇದು ಅನೇಕ ರೀತಿಯ ಒಳಿತುಗಳ ಜೊತೆಗೆ ದುಷ್ಪ ಪರಿಣಾಮಗಳನ್ನೂ ಉಂಟು ಮಾಡುತ್ತಿದೆ. ಇಡೀ ಸಮಾಜದಲ್ಲಿಯೇ ಇಂತಹ ಮಾರ್ಪಾಟು ಆಗಿರುವಾಗ ವೀರಶೈವ ಧರ್ಮದ ಸಮಾಜವು ಅದಕ್ಕೆ ಹೊರತಾಗಿ ಉಳಿಯದಿದ್ದರೆ ಅದೇನು ಅಸಹಜವಾದ ಸಂಗತಿಯೇನಲ್ಲ.

ಈ ಸನ್ನಿವೇಶದಲ್ಲಿ ಮಠಗಳ ಪಾತ್ರ ಅತ್ಯಂತ ಮಹತ್ವಪೂರ್ಣವಾದುದು, ಸಮಾಜವನ್ನು ಬಿಟ್ಟು ಜನರು (ವೀರಶೈವರೂ ಕೂಡಿ) ಬದುಕಲು ಸಾಧ್ಯವಿಲ್ಲ. ಸಮಾಜದ ಬದಲಾವಣೆಗೆ ಹೊಂದಿಕೊಂಡು, ತಮ್ಮ ತತ್ವಗಳನ್ನು ಉಳಿಸಿಕೊಂಡು, ಜನರು ನೆಮ್ಮದಿಯಿಂದ ಬದುಕಲು ಸಹಾಯಕವಾಗುವಂತೆ ಮಠಗಳು ತಮ್ಮ

ಕಾರ್ಯಕ್ರಮಗಳಲ್ಲಿ, ಧ್ಯೇಯೋದ್ದೇಶಗಳಲ್ಲಿ ಬದಲಾವಣೆಯನ್ನು ಮಾಡಿಕೊಳ್ಳಬೇಕು. ಇಲ್ಲದೆ ಹಿಂದಿನ ರೀತಿಗೇ ಅಂಟಿಕೊಂಡಿದ್ದರೆ ಅಥವಾ ಸಮಾಜದ ಬೆಳವಣಿಗೆಯನ್ನು ಸ್ಥಿತಿಗತಿಗಳನ್ನು ಬೇಕು ಬೇಡಗಳನ್ನು ಗಮನಿಸದೆ ತಮಗೆ ಹೇಗೆ ಬೇಕು ಹಾಗೆ ನಡೆದುಕೊಳ್ಳುತ್ತಾ ಹೋದರೆ ಮಠಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ. ಅಲ್ಲದೆ ಕಟು ಟೀಕೆಗೂ ಒಳಗಾಗಬೇಕಾದುದು ಅನಿವಾರ್ಯವಾಗುತ್ತದೆ.

ವೀರಶೈವ ಧರ್ಮದಲ್ಲಿ ಆಯಾಮಟ್ಟದವರಿಗೆ ಅನುಗುಣವಾಗಿ ಸಾಧನೆಯ ವಿವಿಧ ಹಂತಗಳಿವೆ. ಜನಸಾಮಾನ್ಯರಿಗೆ ಸುಲಭಸಾಧ್ಯವಾದ ಹಂತವನ್ನು ಜನಪ್ರಿಯಗೊಳಿಸಿದರೆ ಸಾಕು. ಜನರು ತಮ್ಮ, ತಮ್ಮಲ್ಲಿಯ ಒಳಭೇದಗಳನ್ನು ಮರೆತು ತಾವೆಲ್ಲಾ ಒಂದು ಧರ್ಮಕ್ಕೆ ಸೇರಿದವರೆಂಬ ಒಕ್ಕಟ್ಟಿನ ಮನೋಭಾವ ಉಂಟಾಗಲು ಮಠಗಳು ಸಹಾಯಕವಾಗಬೇಕು. ಅಲ್ಲದೆ ತಮ್ಮ ಧರ್ಮದ ಬಗೆಗೆ ಅಭಿಮಾನವಿದ್ದವರಾಗಿದ್ದುಕೊಂಡೂ ಬೇರೆಯವರ ಧರ್ಮದ ಬಗ್ಗೆ ದ್ವೇಷ ಮಾಡುವ ದುರಭಿಮಾನ ಬೆಳೆಯಿಸಿಕೊಳ್ಳದೇ ಸಹನೆ ಸಾಮರಸ್ಯ ಇರುವ ಮನೋಭಾವವನ್ನೂ ರೂಢಿಸಿಕೊಳ್ಳುವುದು ಅವಶ್ಯಕ. ಜನರಲ್ಲಿ ತಮ್ಮ ಧರ್ಮ ಇದು ಎಂದು ಹುಟ್ಟಿನಿಂದಷ್ಟೇ ಹೇಳಿಕೊಳ್ಳುವಂತಾಗದೆ ಧರ್ಮದ ಸಾಮಾನ್ಯ ರೀತಿ-ನೀತಿಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಯೋಗ್ಯರೀತಿಯಿಂದ ಸಮಾಜದಲ್ಲಿ ಬದುಕುವಂತಿರಬೇಕು.

ವೈಜ್ಞಾನಿಕ ಯುಗದ ಪ್ರಭಾವ ಹೆಚ್ಚಾಗಿರುವ ಈ ಸಮಾಜದ ಜನರಿಗೆ ಧರ್ಮ, ಮಠ, ಮುಂತಾದವುಗಳ ಬಗ್ಗೆ ಆಸಕ್ತಿ ಉಳಿಯಬೇಕಾದರೆ ಇಂದಿನ ಬದಲಾದ ಯುಗದಲ್ಲಿ ತಮ್ಮ ಜೀವನಕ್ಕೆ ಮಾರ್ಗದರ್ಶನ ದೊರೆಯುವಂತಿರಬೇಕು; ನೆಮ್ಮದಿ ದೊರೆಯಬೇಕು; ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುತ್ತಿರಬೇಕು; ಕುಂದುಕೊರತೆಗಳನ್ನು ತಗ್ಗಿಸಿಕೊಳ್ಳಲು ನೆರವು ದೊರೆಯುವಂತಿರಬೇಕು. ಆಗ ಮಾತ್ರ ಜನರು ಧರ್ಮ, ಧರ್ಮಸಂಸ್ಥೆ, ತತ್ವನಿಷ್ಠೆಗಳ ಬಗೆಗೆ ಆಸಕ್ತಿ ತಾಳುತ್ತಾರೆ.

ಆದುದರಿಂದ ಮಠಗಳು ಇಂದಿನ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಕೈಗೊಳ್ಳಬೇಕು. ಆಗ ಜನರಿಗೆ ಮಠಗಳ ಸಂಪರ್ಕ ಉಳಿಯುತ್ತದೆ. ವೀರಶೈವ ಧರ್ಮ ತತ್ವದ ಪ್ರಕಾರ ಯಾವ ಕಾಯಕವನ್ನೇ ಮಾಡಿದರೂ ಅದು ಸತ್ಯ, ಶುದ್ಧವಾಗಬೇಕು. ಲೌಕಿಕ ಜೀವನದಲ್ಲಿ ಇದ್ದುಕೊಂಡು ಸಹ ದೇವರ ಪ್ರೀತಿಗೆ ಪಾತ್ರನಾಗಿ, ಯೋಗ್ಯವಾಗಿ ಬದುಕಲು ಸಾಧ್ಯವಾಗುತ್ತದೆ ಎಂಬ ಮಾತನ್ನು ಸಿದ್ಧಗೊಳಿಸಿ ತೋರಿಸಬೇಕು. ತಮ್ಮ ಜೀವನದ ಸಮಸ್ಯೆಗಳಿಗೆ ಪರಿಹಾರವನ್ನು ಕೊಡದ ಯಾವುದನ್ನೂ ಜನ ಈಗ ನಂಬುವುದಿಲ್ಲ. ಆದುದರಿಂದ ಇಂದಿನ

ಜನರ ಮುಖ್ಯ ಸಮಸ್ಯೆಗಳಾದ ಬಡತನ, ನಿರುದ್ಯೋಗ, ಮಕ್ಕಳ ವಿವಾಹ ಸಮಸ್ಯೆ, ಶಿಕ್ಷಣ, ಸುಧಾರಣೆ ಇವುಗಳತ್ತ ಮೊದಲು ಗಮನಕೊಡಬೇಕು.

ವೀರಶೈವ ಸಮಾಜದಲ್ಲಿ ಅತ್ಯಂತ ಸುಧಾರಿಸಿದವರೂ, ಅತ್ಯಂತ ವಿದ್ಯಾವಂತರೂ, ಉನ್ನತ ಮಟ್ಟದ ಅಧಿಕಾರಗಳೂ, ಶ್ರೀಮಂತರೂ, ರಾಜಕೀಯ ಮುತ್ಸದ್ಧಿಗಳೂ ಇರುವರಾದರೂ ಅವರ ಸಂಖ್ಯೆ ಬಹಳ ಕಡಿಮೆ; ಬೆರಳೆಣಿಸುವಷ್ಟು ಮಾತ್ರ, ಕನಿಷ್ಠಪಕ್ಷ ನೂರಕ್ಕೆ ತೊಂಬತ್ತು ಜನರಾದರೂ ಬಹಳ ದಾರುಣ ಸ್ಥಿತಿಯಲ್ಲಿದ್ದಾರೆಂದರೆ ತಪ್ಪಾಗಲಿಕ್ಕಿಲ್ಲ. ವೀರಶೈವರಲ್ಲಿ ಬಹಳಷ್ಟು ಜನ ಹಳ್ಳಿಗಾಡಿನಲ್ಲಿ ವಾಸಿಸುವರು. ಒಕ್ಕಲುತನವೇ ಮುಖ್ಯ ಉದ್ಯೋಗವಾಗಿದ್ದುಕೊಂಡು, ಒಂದೆರಡು ಎಕರೆ ಭೂಮಿಯ ಮೇಲೆ ಇಡೀ ಕುಟುಂಬವೇ ಅವಲಂಬಿಸಿ, ಹೊಟ್ಟೆಗೆ ಅರೆಗಂಜಿ ಹಾಕಿಕೊಂಡು, ಮೈಗೆ ಹರಕಲು ಬಟ್ಟೆಯುಟ್ಟು, ಶಿಕ್ಷಣವನ್ನಾಗಲೀ ಸುಧಾರಣೆಯನ್ನಾಗಲೀ ಕನಸಿನಲ್ಲೂ ಬಯಸದೆ ತಾವಿರುವುದೇ ಜೀವನದ ರೀತಿ ಎಂದುಕೊಂಡಂತೆ ಬದುಕುತ್ತಿರುವವರಿಗೂ ಲೆಕ್ಕವಿಲ್ಲ. ಹಳ್ಳಿಗಳಲ್ಲಿ ಬದುಕುತ್ತಿರುವ ಅನೇಕ ವೀರಶೈವ ಬಡಕುಟುಂಬಗಳ ಸ್ಥಿತಿ-ಗತಿ, ಶಿಕ್ಷಣ, ಜ್ಞಾನ, ಸಂಸ್ಕೃತಿ, ಆರ್ಥಿಕ ಸ್ಥಿತಿ, ಜೀವನದ ವಿಧಾನ ನಮ್ಮ ಭಾರತದ ಅತ್ಯಂತ ಹಿಂದುಳಿದ ಜನಾಂಗದ ಜನರಿಗಿಂತ ಎಳ್ಳಷ್ಟೂ ಭಿನ್ನವಿಲ್ಲ. ಅವರ ಸ್ಥಿತಿ ಅತ್ಯಂತ ಚಿಂತಾಜನಕ, ಕರುಣಾಜನಕ, ಹೀಗಿದ್ದರೂ ವೀರಶೈವರು ತಮ್ಮ ತಮ್ಮಲ್ಲೇ ಭೇದಭಾವನೆಗಳನ್ನು ಮಾಡಿಕೊಳ್ಳುತ್ತಾ, ಒಬ್ಬರಿಗೊಬ್ಬರು ಸಹಾಯಕರಾಗದೆ, ಕೆಳಗೆ ಬಿದ್ದವರಿಗೆ ಮೇಲೆದ್ದಿರುವವರು ಸಹಾಯಕರಾಗದೆ, ಅಸಹನೆಯಿಂದ ನಡೆಯುವುದು ಅತೀ ವಿಷಾದನೀಯವಾದ ಸಂಗತಿ. ಈ ದಿಸೆಯಲ್ಲಿ ಜನರನ್ನು ಒಂದುಗೂಡಿಸಲು, ಸಹಕಾರ ದೊರೆಯುವಂತೆ ಮಾಡಲು ಮಠಗಳು ಮಹತ್ತರವಾದ ಪತ್ರವಹಿಸಬುದಾಗಿದೆ. ವೀರಶೈವ ಸಮಾಜದ ಎಲ್ಲ ವರ್ಗಗಳ ಜನರೂ ಜವಾಬ್ದಾರಿಯಿಂದ ವರ್ತಿಸುವ ಹಾಗೆ, ಸಮಾಜದ ಅಭಿವೃದ್ಧಿಗೆ ತಮ್ಮ ಕೈಲಾದ ನೆರವು ನೀಡುವ ಹಾಗೆ ಮಾಡಲು ಮಠಗಳಿಗೆ ಸಾಧ್ಯವಿದೆ. ಹಾಗೆ ಮಾಡಿದರೆ ಮಾತ್ರ ಜನರಿಗೆ ಮಠಗಳ ಬಗೆಗೆ ಈಚೆಗೆ ಮೂಡಿರುವ ನಿರ್ಲಕ್ಷ್ಯ ಭಾವನೆ ತೊಲಗಿ ನೆರವಿಗಾಗಿ, ತಾವಾಗಿಯೇ ಮಠಗಳ ಕಡೆಗೆ ನೋಡತೊಡಗುತ್ತಾರೆ.

ವೀರಶೈವ ಮಠಗಳು ಕರ್ನಾಟಕದಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಕೆಲವು ಬಹಳ ಮಹತ್ಕಾರ್ಯಗಳನ್ನೂ ಮಹತ್ಸೇವೆಯನ್ನೂ ಮಾಡುತ್ತಾ ಬಂದಿವೆ. ಮತ್ತು ಕೆಲವು ಇದ್ದೂ ಇಲ್ಲದಂತಿವೆ ಅನೇಕ ಜನರು ಮಠಗಳನ್ನು, ಸ್ವಾಮಿಗಳನ್ನು ಟೀಕೆ ಮಾಡುತ್ತಿದ್ದರೂ, ಬಹುಸಂಖ್ಯಾತರು ಈಗಲೂ ಬಹಳ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದಾರೆ. ಧರ್ಮಕ್ಕಾಗಿ, ಮಠಗಳಿಗಾಗಿ, ಸ್ವಾಮಿಗಳಿಗಾಗಿ ಏನು ಸೇವೆ

ಮಾಡಲು ಸಿದ್ಧರಾದ ಭಕ್ತಜನರಿಗೂ ಈ ಸಮಾಜದಲ್ಲಿ ಕೊರತೆಯಿಲ್ಲ. ಸ್ವಾಮಿಗಳ ಒಂದು ದರ್ಶನ, ಒಂದು ಆಶೀರ್ವಾದಕ್ಕಾಗಿ ಹಾತೊರೆದು ಸಾವಿರಾರು ಜನ ಒಂದೆಡೆ ಕೂಡುವುದನ್ನು ನೋಡಿದಾಗ ಈ ಅಂಶ ಎಲ್ಲರಿಗೂ ಗೋಚರವಾಗಬಹುದು. ಅನೇಕ ಸ್ವಾಮಿಗಳು ತಮ್ಮ ಕ್ಷೇಮವನ್ನು ಸುಖವನ್ನು ಬದಿಗಿರಿಸಿ ಸಮಾಜದ ನೆಮ್ಮದಿಗಾಗಿ, ಸುಖಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದಾರೆ. ಕಾವಿಯ ಹೆಸರಿಲ್ಲಿ ಮುಗ್ಧ ಭಕ್ತರ ಸುಲಿಗೆ ಮಾಡಿ ತಮ್ಮ ವೈಭವ ಜೀವನ ನಡೆಸುತ್ತಿರುವ ಸ್ವಾಮಿ, ಸ್ವಾಮಿನಿಯರು ಬಹುಶಃ ಕಾವಿಧರಿಸಿದವರ ಬಗೆಗೆ ಕಲಂಕ ಬರುವಂತೆ, ಜನರು ಸ್ವಾಮಿಗಳ ಬಗ್ಗೆ ಬೆಲೆ ಕಳೆದುಕೊಳ್ಳುವಂತೆ ಮಾಡಿದ ಅಪರಾಧಿಗಳು ಎನ್ನಲಡ್ಡಿಯಿಲ್ಲ.

ಇಂತಹ ಅಕ್ರಮಗಳಿಗೆ ಅವಕಾಶವಾಗದಂತಹ ಯೋಜನೆಯೊಂದನ್ನು ಮಠಗಳು ಹಾಕಿಕೊಳ್ಳಬೇಕು. ಸಮಾಜದ ಏಳಿಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಠಾಧಿಪತಿಗಳು ತಮ್ಮ ತಮ್ಮ ಭಿನ್ನಾಭಿಪ್ರಾಯಗಳನ್ನು ಮರೆತು, ಮೇಲೆ -ಕೆಳಗೆ ಎಂಬ ಭಾವನೆಗಳನ್ನು ಬಿಟ್ಟು ಕಾರ್ಯ ಪ್ರವೃತ್ತರಾಗಬೇಕು. ಯಾವ ಸ್ವಾಮಿಗಳು ಪ್ರತಿಭಾವಂತರೂ, ತಪಸ್ವಿಗಳು, ದಕ್ಷರೂ, ಕಾರ್ಯಕ್ಷಮತೆಯುಳ್ಳವರೂ ಸಮಾಜದ ಬಗ್ಗೆ ಅತ್ಯಂತ ಕಳಕಳಿ ಉಳ್ಳವರೂ, ಸಮಾಜಕ್ಕೆ ಅಹರ್ನಿಶಿ ದುಡಿಯುವವರೂ, ಉನ್ನತ ರೀತಿಯಲ್ಲಿ ಎಲ್ಲರಿಗೂ ಮಾದರಿಯಾಗುವಂತೆ ಬದುಕುವವರೂ, ನುಡಿದಂತೆ ನಡೆಯುವವರೂ, ನಡೆದಂತೆ ನುಡಿಯುವವರೂ ಆಗಿರುತ್ತಾರೆ. ಅವರ ವ್ಯಕ್ತಿತ್ವಕ್ಕೆ ಸಮಾಜದ ಜನರೂ, ಉಳಿದ ಸ್ವಾಮಿಗಳೂ ತಲೆಬಗ್ಗಿಯೇ ಬಗ್ಗುತ್ತಾರೆ. ಸ್ವಾಮಿಗಳಾದವರು ಹೀಗೆ ದೊಡ್ಡವರಾದಾಗ ಮಾತ್ರ ಮಠಗಳಿಗೆ ಒಂದು ಬೆಲೆ, ಗೌರವ ಬರಲು ಸಾಧ್ಯ. ಮಠದ ಐಶ್ವರ್ಯದಿಂದ, ಅದರ ವೈಭವದಿಂದ ಬೆಲೆ ಬರುವ ಕಾಲ ಹಿಂದಕ್ಕಾಯಿತು. ಈಚೆಗೆ ಕೆಲವರು ತಮ್ಮ ಮಾತಿನ ಮೋಡಿಯಿಂದ ಜನರನ್ನು ಮರುಳು ಮಾಡುವ ಪ್ರಯತ್ನ ನಡೆಸಿದ್ದಾರೆ. ಮಾತಿನ ಮೋಡಿ ಬಹಳ ಕಾಲ ಉಳಿಯುವುದಿಲ್ಲ. ನಡೆಯೊಂದು-ನುಡಿಯೊಂದಾದುದನ್ನು ಜನ ಒಂದಿಲ್ಲ ಒಂದು ಸಾರಿ ಗಮನಿಸಿಯೇ ಗಮನಿಸುತ್ತಾರೆ. ಇದರಿಂದ ಅಂತಹ ಡಾಂಭಿಕ ಸ್ವಾಮಿಗಳು ತಮ್ಮ ಗೌರವಕ್ಕೆ ಹಾನಿಮಾಡಿಕೊಳ್ಳುವುದಲ್ಲದೆ ಕಾವಿ ತೊಟ್ಟವರ ಗೌರವಕ್ಕೇ ಕುಂದುಂಟು ಮಾಡುತ್ತಾರೆ. ಇಂತಹವುಗಳೂ ಒಂದು ಅಂಕಿತಕ್ಕೊಳಗಾಗುವಂತಹ ವ್ಯವಸ್ಥೆ ಬೇಕು.

ಸುಧಾರಣಾ ಕಾರ್ಯವನ್ನು ಮಠಗಳು ಒಂದು ಯೋಜಿತ ರೀತಿಯಲ್ಲಿ ಒಕ್ಕಟ್ಟಿನಿಂದ, ವ್ಯವಸ್ಥಿತವಾಗಿ ಮಾಡಬೇಕಾಗುತ್ತದೆ. ನಮ್ಮ ಸಮಾಜದಲ್ಲಿ ಅನೇಕ ದೊಡ್ಡ ಪುಟ್ಟ ಮಠಗಳಿವೆ. ಆ ಮಠಗಳೆಲ್ಲವೂ ಇಂತಿಷ್ಟು ಪ್ರದೇಶವನ್ನು (area) ತಮ್ಮ ಮಠದ ವ್ಯಾಪ್ತಿಗೆ ಇಟ್ಟುಕೊಳ್ಳಬೇಕು. ಪ್ರತಿ ವೀರಶೈವ ಕುಟುಂಬವು ಸಂಬಂಧಿಸಿದ

ಮಠದ ಸದಸ್ಯ ಕುಟುಂಬವಾಗಿರಬೇಕು. ಮಠಕ್ಕೆ ಒಳಪಡುವ ಪ್ರದೇಶದ ವ್ಯಾಪ್ತಿ ಆ ಮಠದ ಆದಾಯ, ಅಲ್ಲಿ ದೊರೆಯಬಹುದಾದ ಸಹಾಯ, ಸಹಕಾರ, ಸೌಲಭ್ಯಗಳನ್ನು ಗಮನಿಸಿಕೊಂಡು ನಿರ್ಧರಿಸಲ್ಪಡಬೇಕು. ಹೆಚ್ಚಾಗಿ ವೀರಶೈವರು ಕರ್ನಾಟಕದಲ್ಲೇ ಇರುವುದರಿಂದ ಇಡೀ ಕರ್ನಾಟಕದ ಭಾಗವನ್ನು, ಇಲ್ಲಿರುವ ಮಠಗಳಿಗೆ ಅನುಗುಣವಾಗಿ ವಿಭಾಗಿಸಿಕೊಳ್ಳಬೇಕು. ಪ್ರತಿ ಮಠವು ತನ್ನ ವ್ಯಾಪ್ತಿಗೆ ಒಳಪಡುವ ಪ್ರದೇಶದಲ್ಲಿ ಇರತಕ್ಕ ವೀರಶೈವ ಕುಟುಂಬಗಳ ಪಟ್ಟಿಯನ್ನು ಮೊದಲು ಮಾಡಿಕೊಳ್ಳಬೇಕು. ನಂತರ ಪ್ರತಿ ಕುಟುಂಬದಲ್ಲಿರುವ ಜನರ ಸಂಖ್ಯೆ ಅದಕ್ಕೆ ಸಂಬಂಧಿಸಿದ ವಿವರವನ್ನು ಸಂಗ್ರಹಿಸಬಹುದು. ಅಲ್ಲಿ ಇರುವ ವಿದ್ಯಾವಂತರು, ಅವಿದ್ಯಾವಂತರು, ನಿರುದ್ಯೋಗಿಗಳು, ಅವಿವಾಹಿತರು ಅವರ ಆರ್ಥಿಕ ಪರಿಸ್ಥಿತಿ, ಆರೋಗ್ಯ ಸ್ಥಿತಿ, ಅವರ ಸಂಸ್ಕೃತಿಯ ಮಟ್ಟ ಇವುಗಳೆಲ್ಲದರ ಸಮಗ್ರ ವಿವರ ಸಂಗ್ರಹವಾಗಬೇಕು. ಆ ವಿವರವೆಲ್ಲ ವ್ಯವಸ್ಥಿತವಾದ ರೀತಿಯಲ್ಲಿ ಯಾವಾಗ ಬೇಕೆಂದರೆ ಆವಾಗ ದೊರೆಯುವಂತಿರಬೇಕು. ಇಂತಹ ವ್ಯವಸ್ಥೆ ಪ್ರತಿಯೊಂದು ಮಠದಲ್ಲೂ ಇರಬೇಕು.

ನಂತರ ಆಯಾ ಪ್ರದೇಶದಲ್ಲಿರುವ ನಿರುದ್ಯೋಗಿಗಳು ಎಷ್ಟು ಮಂದಿ? ಯಾವ ಕ್ಷೇತ್ರದಲ್ಲಿ ಕೆಲಸ ಮಾಡಬಲ್ಲವರು ಎಂಬ ಒಂದು ಪ್ರತ್ಯೇಕ ಪಟ್ಟಿಯು ಸಿದ್ಧವಾಗಿ ಇರಬೇಕು. ಹೀಗೆಯೇ ಅವಿವಾಹಿತ ಗಂಡು –ಹೆಣ್ಣು ಅವರ ಮಟ್ಟ ಅವರಿಗೆ ಯಾವ ರೀತಿಯ ವಧು, ವರರು ಬೇಕು ಎಂಬುದರ ವಿವರವನ್ನು ಸಿದ್ಧವಿರಬೇಕು. ಅಶಿಕ್ಷಿತ ಮಕ್ಕಳ ಯಾದಿ ಹಾಗೂ ನೆರವಿನ ಅವಶ್ಯಕವಿರುವ ಬಡವರ ಪಟ್ಟಿಯೂ ಇರಬೇಕು. ಹೀಗೆಯೆ ಆ ಪ್ರದೇಶದಲ್ಲಿ ಇರುವ ಶ್ರೀಮಂತರು; ನೌಕರದಾರರು, ಸುಧಾರಿಸಿದ ಜನ, ರಾಜಕೀಯ ವ್ಯಕ್ತಿಗಳು ಇವರ ಯಾದಿಯನ್ನು ತಯಾರಿಸಿಟ್ಟಿರಬೇಕು. ಇವುಗಳ ವಿವರಗಳ ಪ್ರತಿಗಳನ್ನು ಮಾಡಿಸಿ, ಉಳಿದೆಲ್ಲಾ ಮಠಗಳಿಗೂ ಕಳಿಸಿ, ಸಮಾಜದ ಸಮಸ್ಯೆಗಳನ್ನು ಬಗೆಹರಿಸಲು ಬೇಕಾದ ಸಹಕಾರ, ನೆರವು, ಮಾರ್ಗದರ್ಶನ, ವಿಚಾರ–ವಿನಿಮಯಕ್ಕೆ ಅವಕಾಶ ಮಾಡಿಕೊಡಬೇಕು. ಸಮಾಜದಲ್ಲಿಯ ಉತ್ತಮ ಸ್ಥಿತಿಯ ಜನರು ತಮ್ಮ ಸ್ಥಿತಿಯನ್ನು ಚೆನ್ನಾಗಿಯೇ ಉಳಿಸಿಕೊಂಡು, ಸಮಾಜಕ್ಕೆ ಸಾಧ್ಯವಿದ್ದಷ್ಟು ತ್ಯಾಗ ಮಾಡಿ, ಸಹಾಯಕರಾಗಿ, ಬೆಂಬಲ ಕೊಡುವವರಾಗಿ ನಿಲ್ಲಬೇಕು. ಬಡವರು ಶ್ರೀಮಂತರಿಗೆ ತಮಗಾಗುವ ರೀತಿಯಲ್ಲಿ ಸಹಕಾರ ಮನೋಭಾವದಿಂದ ಸಹಾಯಕರಾಗಬೇಕು. ಶ್ರೀಮಂತರು ಬಡವರ ಸುಧಾರಣೆಗೆ ಕಳಕಳಿಯಿಂದ ಪ್ರಯತ್ನಿಸಬೇಕು. ವಿದ್ಯಾವಂತರು, ಉದ್ಯೋಗಿಗಳು, ಶ್ರೀಮಂತರು, ತಮಗಾಗುವ ರೀತಿಯಲ್ಲಿ ಸಮಾಜದ ಉದ್ಧಾರಕ್ಕೆ ತಮ್ಮ ಪಾಲಿನ ಹೊಣೆಯನ್ನು ನಿರ್ವಹಿಸುವಂತಹ ಭಾವನೆಯನ್ನು ಮೂಡಿಸಲು,

ಹಾಗೂ ಕಾರ್ಯಪ್ರವೃತ್ತರಾಗಲು ಮಠಗಳು ಅವಕಾಶ ಮಾಡಿಕೊಡಬೇಕು. ವಿವಾಹ ಸಮಸ್ಯೆ ಇರಲಿ, ಅದಕ್ಕೆ ಪರಿಹಾರ ಜನತೆಗೆ ಆಯಾ ಮಠದ ಮೂಲಕ ದೊರೆಯುವಂತಹ ವ್ಯವಸ್ಥೆಯಾಗಬೇಕು.

ಅಲ್ಲದೆ ಧಾರ್ಮಿಕ, ಸಾಮಾಜಿಕ, ರಾಜಕೀಯ, ಕೌಟುಂಬಿಕ ನೈತಿಕ, ರಾಷ್ಟ್ರೀಯ ವಿಷಯಗಳ ಬಗೆಗೆ ಜನರಿಗೆ ತಿಳಿವಳಿಕೆಯನ್ನುಂಟು ಮಾಡಲು ಬೇಕಾದಂತಹ ಉಪನ್ಯಾಸ ಕಾರ್ಯಕ್ರಮಗಳು ವ್ಯವಸ್ಥಿತ ರೀತಿಯಲ್ಲಿರಬೇಕು.

ಈ ಮೇಲೆ ಹೇಳಿದ ದಿಸೆಯಲ್ಲಿ ವಿವರವಾದ ಕಾರ್ಯಕ್ರಮವನ್ನು ಹಾಕಿಕೊಂಡು ಕಾರ್ಯಪ್ರವೃತ್ತವಾದರೆ ಮಠಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡದ್ದು ಸಾರ್ಥಕವಾಗುತ್ತದೆ. ಪ್ರತಿಯೊಬ್ಬ ವೀರಶೈವನೂ ಅಲ್ಲಮಪ್ರಭುವಿನ ವೈರಾಗ್ಯ, ಜ್ಞಾನಮಟ್ಟವನ್ನು ಮುಟ್ಟುವುದು ಸಾಧ್ಯವಿಲ್ಲ. ಅವಶ್ಯಕವಿಲ್ಲ. ಬಸವಣ್ಣನವರ ಸರ್ವಾರ್ಪಣ ಭಾವವನ್ನು ಎಲ್ಲರೂ ಸಾಧಿಸಲು ಅಳವಲ್ಲ. ಮೋಳಿಗೆ ಮಾರಯ್ಯ, ಯೋಗಿ ಸಿದ್ಧರಾಮರೂ ಆಗಬೇಕಿಲ್ಲ. ಹೀಗಾಗಲು ಪ್ರಯತ್ನಿಸುವುದೇ ವೀರಶೈವ ಧರ್ಮದ ಗುರಿ ಎಂದರೆ ಈಗಿನ ಬದಲಾದ ಸಮಾಜದಲ್ಲಿ ಅದಕ್ಕೆ ಮಹತ್ವ ಕೊಡುವವರು ಸಿಕ್ಕುವುದು ದುರ್ಲಭ. ಜನಸಾಮಾನ್ಯರಿಗೆ ಅಸಾಧ್ಯವಾದುದನ್ನು ಬೋಧಿಸಿ, ಆಚರಣೆಗೆ ತನ್ನಿ ಎಂದು ಪ್ರವಚನಗಳನ್ನು ಮಾಡುವದಕ್ಕಿಂತ, ಅವರ ನಿಜ ಜೀವನದಲ್ಲಿ ಒಳ್ಳೆಯವರಾಗಿ ಬದುಕಲು, ಧರ್ಮದ ಮೂಲತತ್ವಗಳನ್ನು ಆಚರಣೆಯಲ್ಲಿಟ್ಟುಕೊಂಡು ನಡೆಯುವಂತೆ ಮಾಡಿದರೆ ಅದು ಬಹು ದೊಡ್ಡ ಸಾಧನೆಯಾದೀತು.

ಈ ಖರ್ಚುಗಳಿಗೆ ಆದಾಯವನ್ನು ತನ್ನ ಸದಸ್ಯ ಕುಟುಂಬಗಳಿಂದ ವಸೂಲು ಮಾಡಿಕೊಳ್ಳಬೇಕು, ಅವರ ಆದಾಯಕ್ಕನುಗುಣವಾದ ಫೀಯನ್ನು ನಿಗದಿಮಾಡಬೇಕಲ್ಲದೆ. ಮಠದ ಮೂಲಕ ಮದುವೆಯಾಗಲೀ, ಉದ್ಯೋಗವಾಗಲೀ ವ್ಯವಸ್ಥೆಯಾದಾಗ ಇಂತಿಷ್ಟು ಹಣವನ್ನು ವಸೂಲು ಮಾಡುವ ಪರಿಪಾಠವಿಟ್ಟುಕೊಳ್ಳಬೇಕು. 'ಹಣ ದುರುಪಯೋಗವಾಗದೆ ಸದುಪಯೋಗವಾ--ಗುತ್ತದೆ' ಎಂಬ ಭರವಸೆ ಮೂಡುವಂತೆ ಮಠಗಳು ಕಾರ್ಯ ಪ್ರವೃತ್ತವಾದರೆ ವೀರಶೈವ ಧರ್ಮದವರಲ್ಲಿ ದಾನಿಗಳಿಗೂ ಕೊರತೆಯಿಲ್ಲ.

ಈ ರೀತಿ ಕೆಲಸ ಮಾಡುವುದು, ಅದರ ವ್ಯಾಪ್ತಿ ಹಾಗೂ ವಿಷಯಗಳನ್ನು ನೋಡಿದರೆ ಬಹು ದೊಡ್ಡ ಹೊಣೆಗಾರಿಕೆ ಹೌದು. ಸ್ವಲ್ಪ ಒಳಹೊಕ್ಕು ನೋಡಿದರೆ ಅಸಾಧ್ಯವೇನೋ ಎಂದು ಹಿಂಜರಿಯುವಂತೆಯೂ ಆಗಬಹುದು. ಇದೆಲ್ಲಾ ಅವ್ಯಾವಹಾರಿಕ ಎನ್ನಿಸಿದರೂ ಆಶ್ಚರ್ಯವೇನಿಲ್ಲ. ಪ್ರಾರಂಭದಲ್ಲಿ ಬಹುಮುಖವಾದ

ಅಸಾಧ್ಯವೆನಿಸುವಂತಹ ಸಮಸ್ಯೆಗಳೂ ಎದುರಾಗಬಹುದು. ಆದರೂ ಈ ದಿಶೆಯಲ್ಲಿ ಕೆಲಸ ಮಾಡಿದಾಗ ಮಾತ್ರ ಸಮಾಜದ ಕಲ್ಯಾಣ, ಉದ್ಧಾರ ಸಾಧ್ಯ. ಕಂಗೆಟ್ಟಿರುವ, ತಪ್ಪು ದಾರಿ ತುಳಿಯುತ್ತಿರುವ ಸಮಸ್ಯೆಗಳ ಸರಮಾಲೆಯಲ್ಲಿ ಒದ್ದಾಡುತ್ತಿರುವ ಸಮಾಜಕ್ಕೆ ಬದುಕಲು ಮಾರ್ಗ ದೊರೆಯುತ್ತದೆ. ಇಲ್ಲದಿದ್ದಲ್ಲಿ, ಅನಂತ ಸಾಗರದಲ್ಲಿ ಗುರಿ ಇಲ್ಲದೆ ತೇಲಾಡುವ ಹುಲ್ಲುಗರಿಯಂತೆ ದಿಕ್ಕುಗಾಣದಾಗುತ್ತದೆ. ಈ ಯೋಜನೆ ಕಾರ್ಯಗತವಾಗುವುದಕ್ಕೆ ಬಹಳಷ್ಟು ಹಣ, ಸಮಯ ಬೇಕು. ಆದರೂ ಈ ದಿಶೆಯಲ್ಲಿ ವಿಚಾರ ಮಾಡಿ, ಸಣ್ಣದಾಗಿ ಕಾರ್ಯ ಆರಂಭಿಸಿ, ಎಲ್ಲರೂ ಈ ಬಗ್ಗೆ ಚಿಂತಿಸಿ ಕಾರ್ಯಪ್ರವೃತ್ತರಾಗುವಂತೆ ಮಾಡುವ ಕಾರ್ಯ ಮೊದಲಾಗಬೇಕು. ಆಗ ಹಂತ ಹಂತವಾಗಿ ಯೋಜನೆಗಳನ್ನು ಕೈಗೊಳ್ಳಲು ಅನುಕೂಲವಾಗುತ್ತದೆ. ಈ ಬಗೆಗೆ ಬರೀ ಮಠಗಳೇ ಅಲ್ಲ; ಸಮಾಜದ ಪ್ರತಿಯೊಬ್ಬರೂ ಜಾಗ್ರತರಾಗಬೇಕು; ಕಾರ್ಯಪ್ರವೃತ್ತರಾಗಬೆಕು, ಕೆಲವರು ಮಾತ್ರ ಮಾಡಿ ಮುಗಿಸುವ ಕೆಲಸವಲ್ಲ ಇದು.

ಈ ಕಾರ್ಯಸಾಧನೆಯಲ್ಲಿ ಸ್ವಾಮಿಗಳು ಹಾಗೂ ಮಠಗಳ ಹೊಣೆಗಾರಿಕೆ ಹಿರಿಯದು. ಆದರದು ಅತ್ಯಂತ ಕಷ್ಟಕರ ಕೆಲಸ. ಹಿಂದುಳಿದ ಸಮಾಜದವರ ಸುಖಕ್ಕಾಗಿ ನೆಮ್ಮದಿಗಾಗಿ ಸ್ವಂತಸುಖವನ್ನು, ತಮ್ಮ ಸರ್ವಸ್ವವನ್ನು ಅರ್ಪಿಸಬೇಕು. ಅದಕ್ಕಾಗಿ ಕಂಕಣತೊಟ್ಟ ಅವರು ಈ ಬಗ್ಗೆ ಕಾರ್ಯಪ್ರವೃತ್ತರಾಗಲು ಹಿಂಜರಿಯಲಾರರು-ಹಿಂಜರಿಯಬಾರದು. ಈಗೀಗ ವೀರಶೈವ ಸಮಾಜದಲ್ಲಿ ತುಂಬಾ ವಿದ್ಯಾವಂತರೂ, ಉತ್ಸಾಹಿಗಳೂ, ಇಂದಿನ ಸಮಾಜದ ನಿಕಟಪರಿಚಯ ಉಳ್ಳವರೂ ಮಠಾಧೀಶರಾಗುತ್ತಿದ್ದಾರೆ. ಮೇಲಾಗಿ ಹಿಂದಿನಂತೆ ಬರೀ ಧಾರ್ಮಿಕ ಶಿಕ್ಷಣವನ್ನಷ್ಟೇ ಅಲ್ಲದೆ ಸಾರ್ವಜನಿಕ ಶಿಕ್ಷಣದಲ್ಲಿ ಹೆಚ್ಚಿನ ವಿದ್ಯಾಭ್ಯಾಸವನ್ನು ಪಡೆದಿರುವುದರಿಂದ ಇಂದಿನ ಜೀವನ, ಸಮಸ್ಯೆ ಸ್ಥಿತಿ-ಗತಿಗಳ ಬಗ್ಗೆ ಹೆಚ್ಚು ಸೂಕ್ತವಾಗಿ ಕೆಲಸ ಮಾಡಲು ಅವರಿಗೆ ಸಾದ್ಯವಾಗಬಹುದು. ಸಮಾಜೊನ್ನತಿಯ ಕಾರ್ಯಕ್ಕೆ ಇದೊಂದು ನೀಲನಕ್ಷೆ (Blue print) ಈ ದಿಶೆಯಲ್ಲಿ ಮಠಗಳು ಕಾರ್ಯಪ್ರವೃತ್ತವಾಗಲಿ ಎಂದು ಹಾರೈಸುವೆ.

(ಶಿವಮೊಗ್ಗ ಬೆಕ್ಕಿನಕಲ್ಮಠದ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಶ್ರೀಗಳ ಅಧಿಕಾರದ ಬೆಳ್ಳಿ ಹಬ್ಬದ ಸ್ಮರಣ ಸಂಚಿಕೆಯಿಂದ (ಕ್ರಿ. ಶ. ೨೦೦೫))

## ಶರಣರ ದೃಷ್ಟಿಯಲ್ಲಿ ಅರಿವು ಆಚಾರಗಳ ಸಮನ್ವಯವೇ ದೇವರ ಒಲುಮೆ

ಲೇ. ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ

ದೇವರನ್ನು ಕುರಿತ ನಂಬುಗೆ ಇಂದಿನದಲ್ಲ; ನಿನ್ನೆಯದಲ್ಲ; ಶತ ಶತಮಾನಗಳಿಂದ ಮಾನವನ ಬದುಕಿನೊಂದಿಗೆ ಬೆಳೆದುಬಂದಿದೆ. ಇದು ಒಂದು ದೇಶದ, ಒಂದು ಜನಾಂಗದ ನಂಬುಗೆಯಲ್ಲ. ಜಗತ್ತಿನ ಎಲ್ಲ ದೇಶಗಳ ಜನರೂ ದೇವರ ಇರುವಿಕೆಯಲ್ಲಿ ನಂಬಿಕೆ ಹೊಂದಿದ್ದಾರೆ, ಜೊತೆಯಲ್ಲಿ ಅಲ್ಲಲ್ಲೇ ಕೆಲವರು ನಿರೀಶ್ವರವಾದಿಗಳೂ ಇದ್ದಾರೆ. ಆದರೆ ನಂಬಿಕೆ ಇರುವವರ ಸಂಖ್ಯೆಯೇ ಹೆಚ್ಚು. ದೇವರ ಬಗೆಗೆ ನಾನಾ ಬಗೆಯ ನಂಬುಗೆಗಳಿವೆ; ವಿವಿಧ ರೀತಿಯ ಕಲ್ಪನೆಗಳಿವೆ. ಅವನನ್ನು ಪೂಜಿಸುವ ವಿಧಾನಗಳಲ್ಲಿಯೂ ವೈವಿಧ್ಯತೆ ಇದೆ. ಕೆಲವರು ದೇವರನ್ನು ತಮ್ಮಂತೆಯೇ ಶರೀರಿಯನ್ನಾಗಿ ಭಾವಿಸಿ ಅವನಿಗೆ ನಾನಾ ಹೆಸರುಗಳನ್ನಿಟ್ಟು ಆರಾಧಿಸುತ್ತಾರೆ. ಕೆಲವರಿಗೆ ಏಕದೇವೋಪಾಸನೆಯಲ್ಲಿ ನಂಬುಗೆ ಮತ್ತೆ ಕೆಲವರ ಪ್ರಕಾರ ಅನೇಕ ದೇವರುಗಳಿದ್ದಾರೆ. ಹೀಗೆ ದೇವರಿಗೆ ಮನುಷ್ಯನ ಆಕಾರ ಕೊಟ್ಟು ಕೆಲವರು ಆರಾಧಿಸಿದರೆ, ಕೆಲವರು ಶಕ್ತಿಯೇ ದೇವರು; ದೇವರು ಶಕ್ತಿ ಸ್ವರೂಪ ಎನ್ನುತ್ತಾರೆ. ಪ್ರಕೃತಿಯೇ ದೇವರು ಎಂದು ತಿಳಿಯುವವರೂ ಹಲವರು ಮತ್ತೆ ಕೆಲವರು ದೇವರು ಜ್ಯೋತಿ ಸ್ವರೂಪನೆನ್ನುತ್ತಾರೆ. ಅಂತೂ ಅವರವರ ಭಾವಕ್ಕೆ ಅನುಭವಕ್ಕೆ ವಿಚಾರಕ್ಕೆ ತಕ್ಕಂತೆ ಅವನನ್ನು ಕಾಣುತ್ತಾರೆ. ಶರಣರಿಗೂ ದೇವರ ಬಗ್ಗೆ ತಮ್ಮದೇ ಆದ ವಿಚಾರಗಳಿವೆ. ಅವನ ವಿರಾಟ್ ಸ್ವರೂಪವನ್ನು

ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ,
ಅಪ್ರಮಾಣ, ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೆ
ಕೂಡಲ ಸಂಗಮದೇವಯ್ಯಾ
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ ಎಂದು ಬಣ್ಣಿಸಿದ್ದಾರೆ.

ಮಾನವ ಏನನ್ನೇ ವರ್ಣಿಸಬೇಕಾದರೂ ತನ್ನ ಅನುಭವದಲ್ಲಿರುವ ಉಪಮೆಗಳನ್ನು ಮಾತ್ರ ಕೊಡಬಲ್ಲ. ಅದರ ಹೊರತು ಬೇರೆ ರೀತಿಯಲ್ಲಿ ವಿವರಿಸಲು ಸಾಧ್ಯವೇ ಇಲ್ಲ. ಭಗವಂತನ ಸ್ವರೂಪ ಮಾನವನ ಅನುಭವಕ್ಕೆ ಮಿಗಿಲಾದುದು. ಮಾನವನಿಗೆ ಅತ್ಯಂತ ಎತ್ತರದಲ್ಲಿರುವುದು ಬ್ರಹ್ಮಾಂಡ ಎಂಬ ಕಲ್ಪನೆಯಿದೆ, ಕೆಳಗಡೆ ಅತ್ಯಂತ ದೂರವೆಂದರೆ ಪಾತಾಳ ಎಂಬುದು ಅವನ ತಿಳಿವಳಿಕೆ. ಆದುದರಿಂದ ವಿರಾಟ್ ಸ್ವರೂಪನಾದ ಭಗವಂತನು ಪಾತಾಳದಿಂದ ಬ್ರಹ್ಮಾಂಡದವರೆಗಿನ ಎತ್ತರಕ್ಕಿಂತಲೂ ಹೆಚ್ಚು ಎತ್ತರವಿದ್ದಾನೆ. ಅದೆಷ್ಟು ಎತ್ತರ ಎಂಬುದು ಗೊತ್ತಿಲ್ಲ. ಅವನ ಅಳತೆ, ಆಕಾರ ಅಗಲ ಅರಿವಿಗೆ ಮೀರಿದುದು ಎಂದು ಮಾತ್ರ ಗೊತ್ತು ಅದಕ್ಕಾಗಿ ಅವನ ಅಗಲವನ್ನು ಜಗದಗಲ ಮುಗಿಲಗಲವೆಂದು ಬಣ್ಣಿಸಿದ್ದಾನೆ. ಅಷ್ಟೆ ಅಲ್ಲ; ಮಿಗೆಯಗಲ ಎಂದು ಹೇಳುತ್ತ ಜಗ ಹಾಗೂ ಮುಗಿಲಿಗಿಂತಲೂ ಅಗಲ ಎನ್ನುವುದನ್ನು 'ಮಿಗೆಯಗಲ' ಎಂಬ ಮಾತುಗಳಿಂದ ಹೇಳಿದ್ದಾನೆ. ಅವನ ಎತ್ತರವನ್ನು ಹೇಳುವಾಗ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ ಎಂದು ಅವನು ಅಳತೆಗೆ ಮೀರಿದವನು, ಕೈಗೆ ನಿಲುಕದವನು, ದೃಷ್ಟಿಗೆ ಕಾಣದವನು ಹೋಲಿಕೆಗೆ ಸಿಗದವನು ಎಂಬುದನ್ನುಅಪ್ರಮಾಣ, ಅಗಮ್ಯ, ಅಗೋಚರ, ಅಪ್ರತಿಮ ಎಂದು ಬಣ್ಣಿಸಿದ್ದಾರೆ. ಅಂತಹ ವಿರಾಟ ಸ್ವರೂಪನು ಭಕ್ತರಿಗಾಗಿ ಇಷ್ಟಲಿಂಗದ ಚಿಕ್ಕ ರೂಪದಲ್ಲಿ ಕರಸ್ಥಳದಲ್ಲಿ ಆಸೀನನಾಗಿದ್ದಾನೆ ಎಂದು ವರ್ಣಿಸುತ್ತಾರೆ. ಇದು ಭಗವಂತನ ಬಗೆಗೆ ಶರಣರಿಗಿರುವ ಅಭಿಪ್ರಾಯ.

ಭಗವಂತನ ಒಲುಮೆಯನ್ನು ಮಾನವರೆಲ್ಲರೂ ಬಯಸುತ್ತಾರೆ. ಅವನ ಒಲುಮೆ ಪಡೆದು, ತಮ್ಮ ಕಷ್ಟಗಳನ್ನು ನೀಗಿಸಿಕೊಳ್ಳಬೇಕು. ಬೇಕಾದುದನ್ನು ಪಡೆಯಬೇಕು ಎಂಬುದು ಮಾನವನ ಇಚ್ಛೆ. ಅದಕ್ಕಾಗಿ ದೇವರನ್ನು ಒಲಿಸಿಕೊಳ್ಳಲು ನಾನಾ ರೀತಿಯ ಭಕ್ತಿ ಮಾರ್ಗದಲ್ಲಿ ನಡೆದಿದ್ದಾನೆ. ಮಾನವ ಕೆಲವರು ತಪಸ್ಸು ಮಾಡಿದರೆ, ಕೆಲವರು ವ್ರತೋಪವಾಸಗಳೇ ದೇವರ ಒಲುಮೆಗೆ ಮಾರ್ಗವೆಂದು ತಿಳಿದು, ಆ ಮಾರ್ಗವನ್ನು ಅನುಸರಿಸಿದ್ದಾರೆ. ಗುಡಿ ಗುಂಡಾರಗಳಿಗೆ ಹೋಗಿ, ಜಾಗೃತ ಸ್ಥಳಗಳನ್ನು ಸಂದರ್ಶಿಸುವವರೂ ಇದ್ದಾರೆ. ತೀರ್ಥಯಾತ್ರೆಯಿಂದ ದೇವರು ಒಲಿಯುವನೆಂದು ಬಗೆದು ಹಾಗೆಯೂ ಮಾಡಿದ್ದಾರೆ. ದಿಂಡುರುಳು, ಕೆನ್ನೆಗೆ ಶಸ್ತ್ರ ಹಾಕುವುದು ಮುಳ್ಳು ಆವುಗೆಯ ಮೇಲೆ ನಿಲ್ಲುವುದು ಮುಂತಾದ ಮಾರ್ಗಗಳಿಂದ ದೇಹವನ್ನು ದಂಡಿಸಿದರೆ ದೇವರು ತೃಪ್ತನಾಗಿ ಒಲಿಯುವನೆಂದು ತಿಳಿದವರು ಸಾಕಷ್ಟು ಮಂದಿ. ಪ್ರಾಣಿಬಲಿಯಿಂದ ಮಕ್ಕಳನ್ನು ದೇವಸ್ಥಾನಕ್ಕೆ ಒಪ್ಪಿಸಿ 'ದೇವದಾಸಿ'ಯರನ್ನಾಗಿ ಮಾಡುವುದರಿಂದ ದೇವರನ್ನು ಒಲಿಸಬಹುದೆಂದು ಆ ತಪ್ಪು ದಾರಿ ತುಳಿದವರಿಗೂ ಲೆಕ್ಕವಿಲ್ಲ. ಧರ್ಮಚಿಂತಕರು, ಮತ ಸ್ಥಾಪಕರು,

ತತ್ತ್ವಜ್ಞಾನಿಗಳು, ಜ್ಞಾನಪಿಪಾಸುಗಳು, ಈ ಬಗೆಗೆ ಆಳವಾಗಿ ಯೋಚಿಸಿದ್ದಾರೆ. ಖಚಿತ ನಿಲುವಿಗೆ ಬರಲು ಹಗಲಿರುಳೂ ಚಿಂತನ ಮಾಡಿದ್ದಾರೆ. ಸಾಧನೆಗೈದಿದ್ದಾರೆ. ತಮ್ಮ ಸಾಧನೆಯ ಹಾದಿಯಲ್ಲಿ ಸ್ವಾನುಭವದಿಂದ ತಾವು ಕಂಡುಂಡ ಸತ್ಯವನ್ನು ನಂಬಿ ಅದರ ಆಧಾರದ ಮೇಲೆ, ದೇವರ ಒಲುಮೆಗೆ ತಮ್ಮದೇ ಆದ ಮಾರ್ಗವನ್ನು ರೂಪಿಸಿಕೊಳ್ಳುತ್ತ ನಡೆದಿದ್ದಾರೆ. ಈ ಸಾಧಕರು ತಮಗೆ ಸರಿ ಎಂಬ ಮಾರ್ಗವನ್ನು ಸೂಚಿಸಿದ್ದರೂ, ಅವು ಸರಿಯೆಲ್ಲವೆಂಬ ತೀರ್ಮಾನ ಕೊಡಲು ಸಾಧ್ಯವಿಲ್ಲ. ಏಕೆಂದರೆ ಒಂದು ಊರು ಸೇರಲು ನಾನಾ ಮಾರ್ಗಗಳಿರುತ್ತವೆ. ಆ ಮಾರ್ಗಗಳಿಂದಲೂ ಊರು ಸೇರಬಹುದು. ಅದೇ ರೀತಿ ಒಂದು ರೋಗ ಗುಣಪಡಿಸಲು ಆಯುರ್ವೇದ, ಹೋಮಿಯೋಪತಿ, ಅಲೋಪತಿ, ನ್ಯಾಚುರೋಪತಿ ಕಾಸ್ಮಿಕ್ ಹೀಲಿಂಗ್, ಅಕ್ಯೂಪ್ರೆಶರ್ ಅಕ್ಯುಪಂಕ್ಚರ್ ಮುಂತಾದ ಮಾರ್ಗಗಳಿವೆ. ಯಾರಿಗೆ ಯಾವ ಚಿಕಿತ್ಸೆಯಲ್ಲಿ ನಂಬಿಕೆಯಿದೆಯೋ; ಆ ವಿಧದ ಮೂಲಕ ಚಿಕಿತ್ಸೆ ಪಡೆದು, ರೋಗ ಗುಣಪಡಿಸಿಕೊಂಡವರಿದ್ದಾರೆ. ಯಾರಿಗೆ ಯಾವ ಚಿಕಿತ್ಸೆಯಿಂದ ಗುಣವಾಗುವುದೋ ಅದೇ ಅವರಿಗೆ ಸರಿಯಾದ ಚಿಕಿತ್ಸೆ, ಅದರಂತೆ ದೇವರ ಒಲುಮೆಗೂ, ದೇವರ ಅನ್ವೇಷಣೆಗೆ ಹೊರಟವರು ಹೇಳುವ ವಿವಿಧ ಮಾರ್ಗಗಳೂ ಸತ್ಯವೇ. ಆದರೆ ಈ ಮಾರ್ಗಗಳಲ್ಲಿ ಬಹುಪಾಲು ಮಾರ್ಗಗಳು, ಅತ್ಯಂತ ಬಡವರಾದವರು, ಅಂದಂದಿನ ಖರ್ಚನ್ನು ಅಂದಂದೇ ದುಡಿದುಕೊಳ್ಳಬೇಕಾದವರು, ಹೊಟ್ಟೆಗೆ ಇದ್ದರೆ ಬಟ್ಟೆಗಿಲ್ಲ, ಬಟ್ಟೆಗಿದ್ದರೆ ಹೊಟ್ಟೆಗಿಲ್ಲ ಎಂಬ ಸ್ಥಿತಿಯಲ್ಲಿ ಇರುವವರು, ಅಶಕ್ತರು, ಅನಾರೋಗ್ಯವಂತರು ಅನುಸರಿಸಲು ಆಗದಂಥವುಗಳಾಗಿವೆ. ಆದುದರಿಂದ ಶರಣರು, ಅದಕ್ಕಾಗಿ ಹಣ, ಪ್ರತ್ಯೇಕವಾದ ಸಮಯ ಉಪಯೋಗಿಸದೇ ತಮ್ಮ ದಿನನಿತ್ಯದ ಕಾಯಕದಲ್ಲಿ ತೊಡಗಿಕೊಂಡೇ, ಶಕ್ತಿ ಸಾಮರ್ಥ್ಯಗಳನ್ನು ವ್ಯಯ ಮಾಡದೆ ತಮ್ಮ ಕಾರ್ಯಗಳನ್ನು ಮಾಡಿಕೊಳ್ಳುತ್ತಲೇ ಭಗವಂತನನ್ನು ಒಲಿಸುವ, ಸಾಕ್ಷಾತ್ಕಾರ ಮಾಡಿಕೊಳ್ಳುವ ಮಾರ್ಗಗಳನ್ನು ಸೂಚಿಸಿ ಮಹದುಪಕಾರ ಮಾಡಿದ್ದಾರೆ.

ಶರಣರ ಮಾರ್ಗಗಳು ಜಾತೀಯವಾಗಿರದೆ ನೀತಿಯುತವಾಗಿದೆ. ನೈತಿಕ ನಡುವಳಿಕೆಯೇ ದೇವರೊಲುಮೆಗೆ ಮಾರ್ಗ ಎಂದಿದ್ದಾರೆ. ಶರಣರ ಈ ಮಾರ್ಗಗಳನ್ನು ಅವರುಗಳ ವಚನಗಳಲ್ಲಿ ಕಾಣಬಹುದಾಗಿದೆ. ಇವು ಅತ್ಯಂತ ಸರಳ ಸುಲಭವಾಗಿ, ಹಣ ಸಮಯ ಶಕ್ತಿಗಳನ್ನು ವ್ಯಯಿಸದೆ, ತಮ್ಮ ದಿನನಿತ್ಯದ ಕಾಯಕಗಳಿಗೆ ಯಾವುದೇ ರೀತಿಯ ಅಡ್ಡಿ ಆತಂಕಗಳಿಲ್ಲದೆ ದೇವರನ್ನು ಒಲಿಸಿಕೊಳ್ಳುವ ಮಾರ್ಗಗಳಾಗಿವೆ.

ಈ ಮಾರ್ಗಗಳನ್ನು ವಿವಿಧ ಶರಣರು, ವಿವಿಧ ರೀತಿಯಲ್ಲಿ ತಮ್ಮ ವಚನಗಳ ಮೂಲಕ ನಮ್ಮ ಮುಂದಿಟ್ಟಿದ್ದಾರೆ. ಈ ವಚನಗಳು ಕನ್ನಡದ ಉಪನಿಷತ್‌ಗಳಾಗಿವೆ.

ದೇವರೊಲುಮೆಗೆ ಏನು ಮಾಡಬೇಕು. ಏನು ಮಾಡಬಾರದೆಂಬುದನ್ನು ಶರಣರು ತಮ್ಮ ತಮ್ಮ ರೀತಿಗಳಲ್ಲಿ ಬೋಧಿಸಿದ್ದಾರೆ.

ದೇವರ ಒಲುಮೆಗಾಗಿ ಗುರು ಕೊಟ್ಟ ಲಿಂಗದ ಬಲ ಕಡಿಮೆ ಎಂದು ಭಾವಿಸಿ, ತೀರ್ಥ ಕ್ಷೇತ್ರಕ್ಕೆ ಹೋದರೆ ಅಲ್ಲಿಯ ದೇವರು ಹೆಚ್ಚು ತನ್ನ ಕೈಯಲ್ಲಿರುವ ಲಿಂಗ ಕಡಿಮೆಯೆಂದು ಭಾವಿಸಿದಂತಾಗುತ್ತದೆ ಹಾಗೆ ಮಾಡಿದರೆ ಅಘೋರ ನರಕ ತಪ್ಪದು ಎಂದು ಅಕ್ಕಮಹಾದೇವಿ ಹೇಳಿದ್ದಾಳೆ. ಅದಕ್ಕಾಗಿಯೇ ಒಂದು ಕ್ಷಣ ನಿರ್ಮಲ ಮನಸ್ಸಿನಿಂದ, ದೃಢ ಭಕ್ತಿಯಿಂದ, ತನ್ಮಯಳಾಗಿ ಪ್ರಾರ್ಥಿಸಿದರೆ ದೇವರು ಸಾಕ್ಷಾತ್ಕಾರವಾಗುತ್ತಾನೆ ಎಂಬ ಅಕ್ಕನ ಬೋಧನೆಯನ್ನು ಈ ವಚನ ವ್ಯಕ್ತಪಡಿಸುತ್ತದೆ.

ವೇದಾಗಮಗಳೆಲ್ಲ ಕೊಟ್ಟವ ಕುಟ್ಟುತ್ತ ನುಚ್ಚು ತೌಡು ಕಾಣಿಭೊ
ಇದ ಕುಟ್ಟಲೇಕೆ ಅತ್ತ ಇತ್ತ ಹರಿವಮನದ ಶಿರವ ಹರಿದೊಡೆ
ಬಚ್ಚಬಯಲು ಮಲ್ಲಿಕಾರ್ಜುನಾ

ಸದುವಚನವೇ ಸದಾಶಿವನ ಒಲುಮೆಯಯ್ಯಾ; ಅಯ್ಯಾ ಎಂದೊಡೆ ಸ್ವರ್ಗ, ಎಲವೊ ಎಂದರೆ ನರಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಎಂಬ ಶರಣರ ನುಡಿಗಳಲ್ಲಿ ಅಹಂಕಾರರಹಿತ, ವಿನಯ ಪೂರಿತ ಉತ್ತಮ ನಡೆ ನುಡಿಗಳು ದೇವರ ಒಲುಮೆಗೆ ದಾರಿ ಎಂಬ ಅರ್ಥ ಕೊಡುತ್ತವೆ.

ಭಕ್ತನಾದವನು ಪ್ರಾರಂಭದಲ್ಲಿ ಗುರುವಿನ ಮೂಲಕ ಭಕ್ತಿ ಮಾರ್ಗದ ದಾರಿಯನ್ನು ಕಂಡುಕೊಳ್ಳಬೇಕೆಂಬುದು ಶರಣರ ಅಭಿಪ್ರಾಯವು,

ಮಡಿಕೆಯ ಮಾಡುವೆಡೆ ಮಣ್ಣೇ ಮೊದಲು
ತೊಡಿಗೆಯ ಮಾಡುವೊಡೆ ಹೊನ್ನೇ ಮೊದಲು
ಶಿವಪಥವನರಿವೊಡೆ ಗುರುವೇ ಮೊದಲು
ಕೂಡಲಸಂಗಮದೇವನರಿವೊಡೆ ಶರಣರ ಸಂಗವೇ ಮೊದಲು
ಎಂಬ ವಚನದಲ್ಲಿ ವ್ಯಕ್ತವಾಗಿದೆ.

ದೇವರ ಒಲುಮೆ ಬೇಕಾದವರು, ಮೊದಲು ದೇವರ ಅಸ್ತಿತ್ವದಲ್ಲಿ, ದೇವರ ಕೃಪೆಯಲ್ಲಿ ನಂಬಿಕೆಯಿಟ್ಟಿರಬೇಕು. ಸಂಶಯ ಮನಸ್ಕರಾಗಿ, ಪೂರ್ಣ ನಂಬಿಕೆಯಿಲ್ಲದೆ ಅರ್ಧ ಮನಸ್ಸಿನಿಂದ, ಅದೂ ಕಷ್ಟ ಬಂದ ಸಮಯದಲ್ಲಿ, ಕಷ್ಟಗಳ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಿದರೆ, ದೇವರ ಒಲುಮೆಗಿಂತ ಅವನ ಶಾಪ ದೊರೆಯುತ್ತದೆ ಎಂಬ ಅಭಿಪಾಯವು

ನಂಬರು, ನೆಚ್ಚರು, ಬರಿದೆ ಕರೆವರು
ನಂಬಿ ಕರೆದರೆ ಓ ಎನ್ನನೇ ಶಿವನು
ನಂಬದೆ ನೆಚ್ಚದೆ ಬರಿದೆ ಕರೆವವರ
ಕೊಂಬ ಮೆಟ್ಟಿ ಕೂಗೆಂದ ಕೂಡಲ ಸಂಗಮದೇವಾ

ಎಂಬ ಬಸವಣ್ಣನವರ ವಚನದಲ್ಲಿ ಕಾಣಬರುತ್ತದೆ.

ದೇವರ ಒಲುಮೆಯನ್ನು ಪಡೆಯಲು ಮಾನವ ನಡೆ ನುಡಿಗಳಲ್ಲೊಂದಾದ ಪರಿಶುದ್ಧ ಜೀವನ ಬದುಕಬೇಕು ಭ್ರಷ್ಟತನದಲ್ಲಿ ಬದುಕಿ, ಕಾಮ, ಕ್ರೋಧಾದಿಗಳ ವಶರಾಗಿ ತಮ್ಮ ಯಾವುದೋ ಇಷ್ಟಾರ್ಥ ಸಿದ್ಧಿಗಾಗಿ ನೀರು, ನಿದ್ದೆ, ಆಹಾರವನ್ನು ತೊರೆದು ದೇಹವನ್ನು ದಂಡಿಸಿದರೂ ಒಳಗಿನ ಆತ್ಮ ಪರಿಶುದ್ಧವಾಗದೇ, ದೇವರ ಒಲುಮೆ ಸಾಧ್ಯವಾಗುವುದಿಲ್ಲ. ಬರೀ ದೇಹ ದಂಡನೆಯಾಗುತ್ತದೆ. ಅಷ್ಟೇ. ಒಳಗಿನ ಭಾವನೆಗಳನ್ನು ಪರಿಶುದ್ಧ ಮಾಡಿಕೊಳ್ಳದೆ ಈ ಬಾಹ್ಯವಾದ ಆಚರಣೆಗಳು ಎಷ್ಟೇ ಕಠಿಣವಾಗಿದ್ದರೂ ಒಳ ಆತ್ಮವು ಪರಿಶುದ್ಧಿಯಾಗುವುದಿಲ್ಲ. ಹುತ್ತದೊಳಗೆ ಹಾವು ಸೇರಿಕೊಂಡಿದ್ದಾಗ ಆ ಹಾವನ್ನು ಕೊಲ್ಲಲು ಹುತ್ತವನ್ನೇ ಬಡಿದು ಪುಡಿ ಪುಡಿ ಮಾಡಿದರೂ ಒಳಗಿನ ಹಾವು ಸಾಯುವುದಿಲ್ಲ. ಅದು ಒಳಗೆ ಸುರಕ್ಷಿತವಾಗಿರುವಂತೆ ಘೋರ ತಪಸ್ಸು ಮಾಡಿ ದೇಹ ದಂಡಿಸಿದರೂ ಒಳಗಿನ ವಿಷಪೂರಿತ ಭಾವನೆಗಳು ನಾಶವಾಗುವುದಿಲ್ಲ. ನಾಶವಾಗದ ಹೊರತು ದೇವರ ಒಲುಮೆ ಸಾಧ್ಯವಿಲ್ಲವೆಂಬ ಅಂಶವು

ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ?
ಅಘೋರ ತಪವ ಮಾಡಿದೊಡೇನು?
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು
ನಂಬುವನಯ್ಯಾ ಕೂಡಲ ಸಂಗಮದೇವ ಎಂಬ ವಚನದಲ್ಲಿ ವ್ಯಕ್ತವಾಗಿದೆ.

ಕೆಲವರು ದೇವರ ಒಲುಮೆಗೆ, ಬ್ರಹ್ಮಚರ್ಯದಲ್ಲಿ ಬದುಕಬೇಕು ಎಂದು ನಂಬಿ ಇಂದ್ರಿಯಗಳು ಕಾಡುತ್ತಿದ್ದರೂ ಬಲವಂತವಾಗಿ ಅವುಗಳನ್ನು ಹತ್ತಿಕ್ಕಿಕೊಂಡು, ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲಿಕ್ಕಾಗಿಯೇ ಕಾಲ ಕಳೆಯುತ್ತಾರೆ. ಮನಸ್ಸಿನ ಚಂಚಲತೆಯನ್ನು ಗೆದ್ದಲ್ಲದೆ ಬಲವಂತದ ಬ್ರಹ್ಮಚರ್ಯದಿಂದ ಪ್ರಯೋಜನವಿಲ್ಲ. ಅದಕ್ಕಿಂತ ವಿವಾಹವಾಗಿ, ಸತಿ ಪತಿಗಳೊಂದಾದ ಹಿತವಾದ ಬದುಕನ್ನು ಬದುಕುತ್ತ ಪರಸತಿಯನ್ನು ಮಹಾದೇವಿಯಂತೆ ಭಾವಿಸಿ ಪರಿಶುದ್ಧ ಗೃಹಸ್ಥಾಶ್ರಮದಲ್ಲಿ ಬದುಕಿದರೆ ದೇವರೊಲುಮೆಗೆ ಪಾತ್ರರಾಗಬಹುದು ಎಂಬ ಅಭಿಪ್ರಾಯವು.

ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವುವು ದೋಷಂಗಳು
ಮುಂದೆ ಬಂದು ಕಾಡುತಿವುವು ಪಂಚೇಂದ್ರಿಯಂಗಳು
ಸತಿಪತಿ ರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು
ಸತಿಪತಿ ರತಿಸುಖೋಪಭೋಗೋಪಭೋಗ ವಿಳಾಸವನು
ಬೆಟ್ಟನೆ ಸಿಂಧು ಬಲ್ಲಾಳನು
ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದರೆ
ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ

ಎಂಬ ವಚನದಲ್ಲಿ ಅಡಕವಾಗಿದೆ.

ಮನುಷ್ಯನ ಜೀವನ ಕ್ಷಣಿಕ, ಅಲ್ಲದೆ ನಾವು ಕಟ್ಟಿಟ್ಟದ್ದು. ಒಂದಿಲ್ಲ ಒಂದು ದಿನ ಸಾಯಲೇಬೇಕು. ಸಾಯುವ ಮುನ್ನ ಭಗವಂತನನ್ನು ಪೂಜಿಸಬೇಕು. ನಾಳೆ ಎಂದು ಮುಂದೂಡಬಾರದು. ಮೃತ್ಯು ಒಯ್ಯುವ ಮುನ್ನ ದೇವರ ಪೂಜೆ ಮಾಡಬೇಕು ಎಂದು ಬಸವಣ್ಣನವರು

ಹೊತ್ತಾರೆ ಎದ್ದು ಅಗ್ಘವಣಿಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದಬಳಿಕ ನಿನ್ನನ್ನಾರು ಬಲ್ಲರು?
ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ
ತೊತ್ತು ಗೆಲಸವ ಮಾಡು ಕೂಡಲ ಸಂಗಮದೇವಾ

ಎಂದು ಬಸವಣ್ಣನವರು ಬುದ್ಧಿವಾದ ಹೇಳಿದ್ದಾರೆ.

ಭಕ್ತನಾದವನು ಧಾರ್ಮಿಕ ಕಾರ್ಯಗಳನ್ನು ದೇವರ ಸೇವೆಯನ್ನು ಭಕ್ತಿಗಾಗಿ, ದೇವರ ತೃಪ್ತಿಗಾಗಿ, ಸ್ವ ಸಂತೋಷಕ್ಕಾಗಿ ಮಾಡಬೇಕು. ಲೋಕವನ್ನು ಮೆಚ್ಚಿಸಲಿಕ್ಕಾಗಲಿ, ತನ್ನ ದೊಡ್ಡಸ್ತಿಕೆಯನ್ನು ಪ್ರದರ್ಶಿಸಲಿಕ್ಕಾಗಲಿ ಅಹಂಕಾರದಿಂದಾಗಲಿ ಮಾಡಬಾರದು. ಅಲ್ಲೆ ವಿನಯವಿರಬೇಕು. ವಿವೇಕವಿರಬೇಕು. 'ಅಹಂ' ಇರಬಾರದು. ತಾನು ಇಷ್ಟೆಲ್ಲ ಮಾಡಬಲ್ಲವನು, ನಾನೊಬ್ಬ ದೊಡ್ಡ ಭಕ್ತ ಎಂಬ ಭಾವನೆ ಮನಸ್ಸಿನಲ್ಲಿಯೂ ಹೊಳೆಯಬಾರದು. ಹಾಗೇನಾದರೂ ಅಹಂಕಾರ ಅವನ ಮನಸ್ಸಿನಲ್ಲಿ ಹೊಳೆದರೂ ದೇವರು ಅಂತಹವರನ್ನು ಕಾಡಿಸಿ ಸೊಕ್ಕು ಅಡಗಿಸುತ್ತಾನೆ. ಆದುದರಿಂದ ದೇವರ, ಸಮಾಜದ ಸೇವೆಯನ್ನು ಸರ್ವಾರ್ಪಣ ಭಾವದಿಂದ ವಿನಯಪೂರ್ವಕ ಮಾಡಿದರೆ ದೇವರು ಬೇಡಿದುದನ್ನು ಭಕ್ತನಿಗೆ ಕರುಣಿಸುತ್ತಾನೆ ಎಂಬ ವಿವೇಕದ ಮಾತನ್ನು

ಮಾಡಿದೆನೆಂಬುದು ಮನದಲ್ಲಿ ಹೊಳೆದೊಡೆ
ಏಡಿಸಿ ಕಾಡಿತ್ತು ಶಿವನ ಡಂಗುರ

ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲೆಲ್ಲದೊಡೆ
ಬೇಡಿದ ನೀವ ಕೂಡಲ ಸಂಗಮದೇವಾ
ಎಂಬ ವಚನದ ಮೂಲಕ ತಿಳಿಸಿದ್ದಾರೆ ಬಸವಣ್ಣ.

ಶರೀರದ ಗುಣಗಳನ್ನು ಕಳೆದುಕೊಳ್ಳದೆ, ಆಸೆಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲಾರದೆ, ಕಾಮವನ್ನು ನಿಗ್ರಹಿಸುವ ಶಕ್ತಿಯಿಲ್ಲದೆ, ಬಾಹ್ಯ ರೀತಿಯಲ್ಲಿ ಇವುಗಳನ್ನೆಲ್ಲ ತೊರೆದಿದ್ದಾರೆನೋ ಎಂಬುವ ಭಾವನೆ ಬರುವ ರೀತಿಯಲ್ಲಿ ಕೆಲವರು ತಲೆಯನ್ನು ಬೋಳಿಸಿಕೊಂಡು, ಬಟ್ಟೆಯನ್ನು ಧರಿಸದೆ, ಕೌಪೀನಧಾರಿಗಳಾಗಿ, ಅವಿವಾಹಿತರಾಗಿ ಇರುತ್ತಾರೆ. ಇಂತಹ ಡಂಭಾಚಾರಿಗಳಿಗೆ ದೇವರು ಒಲಿಯಲು ಸಾಧ್ಯವಿಲ್ಲ ಎಂಬ ಅಂಶವು

ಮಂಡೆ ಬೋಳಾದರೇನು ಹುಟ್ಟು ಬೋಳಾಗದನ್ನಕ್ಕರ
ತನು ನಿರ್ವಾಣವಾದರೇನು ಆಸೆ ನಿರ್ವಾಣವಾಗದನ್ನಕ್ಕರ
ಇಂದ್ರಿಯ ನಿಗ್ರಹ ಮಾಡಿದೊಡೇನೋ ಷಟ್‌ಸ್ಥಲಾಗ್ರಹವಾಗದನ್ನಕ್ಕರ
ಸೌರಾಷ್ಟ್ರ ಸೋಮೇಶ್ವರ ಲಿಂಗ ಬರಿದೆ ಒಲಿವನೆ

ಎಂಬ ವಚನದಲ್ಲಿ ವ್ಯಕ್ತಗೊಂಡಿರುವುದು ಗೋಚರವಾಗುತ್ತದೆ.

ಜಗತ್ತಿನಲ್ಲಿ ಡಾಂಭಿಕರೇ ಹೆಚ್ಚು. ದೇವರ ಒಲುಮೆಗೆ ಬೇಕಾದ ಭಕ್ತಿ, ನಿಷ್ಠೆ, ಸ್ಥಿರಮನಸ್ಸಿನ ಪ್ರಾರ್ಥನೆಯಿಲ್ಲದೆ ತಮ್ಮ ಇಷ್ಟಾರ್ಥದ ಸ್ವಾರ್ಥ ಇಚ್ಛೆಗಳನ್ನು ಪೂರೈಸಿಕೊಳ್ಳುವ ಸಲುವಾಗಿ ದೇವರ ಒಲುಮೆ ಬೇಕೆಂದು ಜಪ ಮಾಡುತ್ತಾರೆ. ಕಣಿ ಕೇಳುತ್ತಾರೆ. ಆದರೆ ಮನಸ್ಸು ಮಾತ್ರ ಲೌಕಿಕ ವಿಚಾರಗಳಿಂದಲೇ ತುಂಬಿರುತ್ತದೆ. ಇಂತಹ ರೀತಿಗಳಿಂದ ಪ್ರಯೋಜನವಿಲ್ಲ. ದಿನಗಟ್ಟಲೆ ಜಪಮಾಲೆ ಹಿಡಿಯುವುದಕ್ಕಿಂತ, ಕಣಿಯ ಪೂಜಿಸಿ ಫಲಪ್ರಾಪ್ತಿ ಬೇಡುವುದಕ್ಕಿಂತ, ನಿಶ್ಚಲ ಮನಸ್ಸಿನಿಂದ ಒಂದು ಕ್ಷಣ, ಕೊನೆಗೆ ಅರ್ಧ ಕ್ಷಣ ಪ್ರಾರ್ಥಿಸಿದರೂ ದೇವರಿಗೆ ಸಂತೋಷವಾಗುತ್ತದೆ. ಆದುದರಿಂದ ಬಿಸಿ ಬೇಕಾದಲ್ಲಿ ಬೆಂಕಿಯಿಂದ ಪಡೆಯಬೇಕಲ್ಲದೆ ನೀರಿನಲ್ಲಿ ಹುಡುಕಿದರೆ ದೊರೆಯುವುದಿಲ್ಲ. ಹಾಗೆಯೇ ಭಗವಂತನ ಒಲುಮೆ ಬೇಕಾದಲ್ಲಿ ನಿಜವಾದ ಭಕ್ತಿಯ ಪ್ರಾರ್ಥನೆ ಮಾಡಬೇಕೇ ಹೊರತಾಗಿ, ಮಣಿಯನ್ನೆಣಿಸುವುದಾಗಲಿ ಕಣಿಯನ್ನು ಪೂಜಿಸುವುದಾಗಲೀ ಅವಶ್ಯವಿಲ್ಲ ಎಂಬ ಮಾತನ್ನು,

ಮಣಿಯನೆಣಿಸಿ ದಿನ ಕಳೆಯಲು ಬೇಡ
ಕಣಿಯ ಪೂಜಿಸಿ ದಿನವ ಕಳೆಯಲು ಬೇಡ

ಕ್ಷಣವಾದರೂ ನಿಜದ ನೆನಹೇ ಸಾಕು
ಕ್ಷಣದೊಳಗಣ ಅರ್ಧವಾದರೂ ನಿಜದ ನೆನಹೇ ಸಾಕು
ಬೆಂಕಿಯೊಳಗುಳ್ಳ ಬಿಸಿ ನೀರೊಳಗುಂಟೇ ಗುಹೇಶ್ವರ ಎಂಬ
ವಚನದಿಂದ ಅರಿತು ನಮ್ಮನ್ನು ನಾವೇ ತಿದ್ದಿಕೊಳ್ಳಬಹುದಾಗಿದೆ.

ಸಾಕಾರದಲ್ಲಿ ನಂಬಿದೆ. ನಿರಾಕಾರದಲ್ಲಿ ತನ್ಮಯತೆ ಹಾಗೂ ಪಾರಮಾರ್ಥದಲ್ಲಿ ಸಾಧನೆಗಳಿಲ್ಲದೆ, ಜಟೆ ಬಿಟ್ಟರೂ ವ್ಯರ್ಥ ತಲೆ ಬೋಳಿಸಿಕೊಂಡರೂ ಪ್ರಯೋಜನವಿಲ್ಲ; ಕಾಷಾಯ ಹಾಕಿಕೊಂಡು, ವಿಭೂತಿ, ರುದ್ರಾಕ್ಷಿ ಧರಿಸಿಕೊಂಡರೂ ಉಪಯೋಗ ಅಷ್ಟಕ್ಕಷ್ಟೆ. ಮುಖ್ಯವಾಗಿ ಅಂತರಂಗದಲ್ಲಿ ಅರಿವು, ಬಹಿರಂಗದಲ್ಲಿ ಅಂತರಂಗದ ವಿಚಾರಕ್ಕೆ ಹೊಂದುವ ನಡತೆ ಇದ್ದರೆ, ಪರಮಾತ್ಮನ ಒಲುಮೆ ಸಾಧ್ಯ ಎಂಬ ವಿಚಾರವು.

ಕೇಶ ಕಾಶಾಂಬರವ ನಿಕ್ಕದೊಡೇನು?
ವಿಭೂತಿ ರುದ್ರಾಕ್ಷಿ ಧರಿಸಿದೊಡೇನು?
ಸಾಕಾರದಲ್ಲಿ ನಮ್ಮತನಲ್ಲೆ, ನಿರಾಕಾರದಲ್ಲಿ ನಿರುತನಲ್ಲ
ಪರಮಾರ್ಥದಲ್ಲಿ ಪರಿಣಾಮಿಯಲಲ, ಇದು ಕಾರಣವಾಗಿ
ಕೂಡಲ ಚೆನ್ನಸಂಗಮದೇವಾ, ತುರುಚಾಗಲೆ, ಜಡೆಯಾಗಲೆ
ಬೋಳಾಗಲೆ, ಅರಿವು ಆಚಾರವುಳ್ಳೊಡೆ ಜಂಗಮ ಎಂಬ
ವಚನದಲ್ಲಿ ಮನವರಿಕೆಯಾಗುತ್ತದೆ.

ದೇವರನ್ನು ಕಾಣಲು ಕೆಲವರು ಕಾಶಿ ಮುಂತಾದ ತೀರ್ಥಕ್ಷೇತ್ರಗಳಿಗೆ ಹೋಗಿ, ಪ್ರಯಾಣ ದರಸ್ಥಳವಾಸದಿಮದ ಬಳಲುತ್ತಾರೆ. ಅಂತಹ ನಡೆಗಳ ಅವಶ್ಯಕವಿಲ್ಲ. ತನ್ನನ್ನು ಅರಿದು, ಪರಮಾತ್ಮನನ್ನು ತಮ್ಮ ಉತ್ತಮ ನಡೆ ನುಡಿಗಳಿಂದ ಸತ್ಕಾರ್ಯ-ಸಾಧನೆಗಳ ಮೂಲಕ, ಕಾಣಲು ಸಾಧ್ಯ ಎಂಬ ಅನುಭವವಾಗುತ್ತದೆ ಎಂಬ ತಿಳಿವಳಿಕೆ,

ಈಶ್ವರನ ಕಾಂಬುದೊಂಬಾಸೆಯಳ್ಳೊಡೆ ಪರದೇಶಕ್ಕೆ ಹೋಗಿ ಬಳಲದಿರು
ಕಾಶಿಯಲ್ಲಿ ಕಾಯುವ ವಿನಾಶವ ಮಾಡಬೇಡ
ನಿನ್ನಲ್ಲಿ ನೀ ತಿಳಿದು ನೋಡಾ ಜಗವು ನಿನ್ನೊಳಗೆಂದಾತ ಅಂಬಿಗರ
ಚೌಡಯ್ಯಾ ಎಂಬ ವಚನದಿಂದ ಉಂಟಾಗುತ್ತದೆ.

ಲೌಕಿಕರು ಸಾಮಾನ್ಯವಾಗಿ ತಮ್ಮಲ್ಲಿರುವ ದೋಷಗಳ ಕಡೆಗೆ ಗಮನ ಕೊಡುವುದಿಲ್ಲ ತಾವು ಬಹಳ ಒಳ್ಳೆಯವರು ಎಂದುಕೊಂಡು ಪರರ ದೋಷಗಳನ್ನೇ ಗಮನಿಸಿ ಟೀಕಿಸುತ್ತಾರೆ. ಇತರರ ದೋಷಗಳನ್ನು ತಿದ್ದಲು ಮುಂದಾಗುತ್ತಾರೆ

ಅದು ಬಿಟ್ಟು ಪ್ರತಿಯೊಬ್ಬರೂ ತಮ್ಮ ತಮ್ಮ ದೋಷಗಳ ಕಡೆಗೆ ಗಮನಕೊಟ್ಟು ಅವುಗಳನ್ನು ಹೋಗಲಾಡಿಸಿಕೊಳ್ಳಬೇಕು. ಅದಿಲ್ಲದೆ ಬೇರೆಯವರ ದೋಷಗಳನ್ನು ನೋಡಿ, ದುಃಖಿಸುವವರ ಬಗೆಗೆ ದೇವರಿಗೆ ಪ್ರೀತಿಯೆಲ್ಲ ಎಂಬ ವಿವೇಕದ ನುಡಿಯನ್ನು ಶರಣರು.

■

## ಪುಸ್ತಕ ವಿಮರ್ಶೆ

ವಚನಾಂಜಲಿ : ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ,
'ಶಿವಪ್ರಸಾದ' ಪ್ರಕಾಶನ, ಕಲ್ಯಾಣನಗರ, ಧಾರವಾಡ-೦೭
ಪ್ರಥಮ ಮುದ್ರಣ ೧೯೯೫
ಪುಟಗಳು : ೨೪೧ + ೧೧
ಬೆಲೆ: ನಲವತ್ತು ರೂಪಾಯಿಗಳು.

ಇಂದು ಶರಣರ ವಚನಗಳನ್ನು ಅರ್ಥೈಸುವ ಕಾರ್ಯ ಬೇರೆ ಬೇರೆ ರೀತಿಯಿಂದ ನಡೆಯುತ್ತಿದೆ. ಅವುಗಳ ಮುಖಗಳನ್ನು ವಿಭಿನ್ನ ರೀತಿಯಲ್ಲಿ ಹಲವಾರು ಬರಹಗಾರರು ಪರಿಚಯಿಸುತ್ತಲಿದ್ದಾರೆ. ವಚನಗಳನ್ನು ಅಕ್ಷರಶಃ ಅರ್ಥಮಾಡಿ ಅವುಗಳಲ್ಲಡಗಿದ ವಿಷಯ ನಿರೂಪಣೆ ಮಾಡುವದು ಒಂದು ರೀತಿಯಾದರೆ ಅವುಗಳ ಅಂತರಂಗವನ್ನು ಪ್ರವೇಶಿಸಿ ಒಟ್ಟಾರೆ ಅರ್ಥವನ್ನು ಗ್ರಹಿಸಿ ಅವುಗಳನ್ನು ವಿವೇಚಿಸುವದು ಇನ್ನೊಂದು ರೀತಿ. ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿಯವರ 'ವಚನಾಂಜಲಿ' ಎರಡನೆಯ ವರ್ಗಕ್ಕೆ ಸೇರುತ್ತದೆ.

ವೃತ್ತಿಯಲ್ಲಿ ಪ್ರಾಧ್ಯಾಪಕರಾದ ಪ್ರೊ. ಲಲಿತಾಂಬ ಅವರು ನಿವೃತ್ತಿಯ ನಂತರ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ಹಂಬಲ ಈ ಕೃತಿ ರಚನೆಗೆ ಪ್ರೇರೇಪಿಸಿದೆ. ಶರಣ ಸಾಹಿತ್ಯ ಅದರಲ್ಲಿಯೂ ವಿಶೇಷವಾಗಿ ವಚನ ಸಾಹಿತ್ಯದಲ್ಲಿ ಅವರಿಗಿರುವ ಆಸಕ್ತಿ ಹಾಗೂ ಅಧ್ಯಯನದ ಹಾಸು ಬೀಸುಗಳನ್ನು ಈ ಕೃತಿ ಪರಿಚಯ ಮಾಡಿಕೊಡುತ್ತದೆ.

ಅವರು ತಮ್ಮ ಈ ಕೃತಿಯಲ್ಲಿ ಜೇಡರ ದಾಸಿಮಯ್ಯನಿಂದ ಪ್ರಾರಂಭಿಸಿ ಶ್ರೀ ಪಂಚಾಕ್ಷರಿ ಗವಾಯಿಗಳವರೆಗೆ ಆಯ್ದ ೯ ಶರಣೆಯರ ಹಾಗೂ ೨೪ ಶರಣರ ೧೩೩ ವಚನಗಳನ್ನು ವಿವೇಚಿಸಿದ್ದಾರೆ. ಇವುಗಳಲ್ಲಿ ಒಂದೆರಡು ನಿಜಗುಣ ಶಿವಯೋಗಿಗಳ, ಸರ್ಪಭೂಷಣ ಶಿವಯೋಗಿಗಳ ಸ್ವರ ವಚನಗಳು ಮತ್ತು ಸರ್ವಜ್ಞ ಕವಿಯ ತ್ರಿಪದಿಗಳು ಸೇರಿಕೊಂಡಿರುವದೊಂದು ವಿಶೇಷ. ಜನಸಾಮಾನ್ಯರು ಶರಣ ವಚನಗಳಲ್ಲಿರುವ ವೀರಶೈವ ಮಾನವೀಯ ಮೌಲ್ಯಗಳನ್ನು ಅರಿತು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಂತಾಗಬೇಕೆಂಬ ಪವಿತ್ರ ಉದ್ದೇಶದಿಂದ ಬಹಳ ಸರಳವಾದ

ಶೈಲಿಯಲ್ಲಿ ಸರಳವಾದ ಭಾಷೆಯಲ್ಲಿ ಈ ಕೃತಿ ರಚನೆ ಮಾಡಲಾಗಿದೆಯೆಂದು ತಮ್ಮ 'ಆಶಯ'ದಲ್ಲಿ ಹೇಳಿಕೊಂಡಿದ್ದಾರೆ. ಈ ಮಾತು ಈ ಕೃತಿಯುದ್ದಕ್ಕೂ ಅರ್ಥವಂತಿಕೆಯನ್ನು ಪಡೆಯುತ್ತದೆ.

ಬಸವಣ್ಣನವರ ವಚನಗಳಲ್ಲಿರುವಷ್ಟು ಜೀವನ ವಿಮರ್ಶೆ ಹಾಗೂ ಸಮಾಜ ವಿಮರ್ಶೆ ಇನ್ನಾವ ಶರಣರ ವಚನಗಳಲ್ಲಿಯೂ ಕಂಡು ಬರುವುದಿಲ್ಲ. ಇವರು ತಮ್ಮ ವಚನಗಳಲ್ಲಿ ತಮ್ಮ ಆತ್ಮವಿಮರ್ಶೆಯ ಧಾಟಿಯಲ್ಲಿ ಸಾಮಾಜಿಕ ವಿಮರ್ಶೆಯನ್ನು ಮಾಡಿ ಅವರ ರೋಗ ರುಜಿನಗಳಿಗೆ ಮದ್ದನ್ನು ನೀಡಿದ್ದಾರೆ. ಸರಳತೆಯ ದೃಷ್ಟಿಯಿಂದಲೂ ಸಾಮಾನ್ಯ ಜನರ ಮನಸ್ಸನ್ನು ಸೆರೆಹಿಡಿದು ಅವರಿಗೆ ಮಾರ್ಗದರ್ಶನವನ್ನೀಯುವ ರೀತಿ ಬಸವಣ್ಣನವರ ವಚನಗಳಲ್ಲಿ ವಿಶೇಷವಾಗಿರುವದರಿಂದ ಹೆಚ್ಚಾಗಿ ಅವರ ವಚನಗಳನ್ನು ಕೃತಿಕಾರರು ಆಯ್ದುಕೊಂಡಿದ್ದಾರೆ. ಇಲ್ಲಿಯ ಒಟ್ಟು ೧೭೪ ವಚನಗಳಲ್ಲಿ ಬಸವಣ್ಣನವರ ೭೫ ವಚನಗಳು ಅಕ್ಕನ ೧೮ವಚನಗಳು, ಅಲ್ಲಮರ ೧೫ ವಚನಗಳು ಹಾಗೂ ಇನ್ನುಳಿದ ಶರಣರ ೬೬ ವಚನಗಳು, ಅರ್ಥವಿವರಣೆಯನ್ನು ಕಂಡಿವೆ. ಈ ಕೃತಿಯ ಇನ್ನೊಂದು ವಿಶೇಷವೆಂದರೆ ಅಷ್ಟು ಪ್ರಸಿದ್ಧವಲ್ಲದ ಆದರೆ ಮೌಲ್ಯಗಳ ದೃಷ್ಟಿಯಿಂದ ಯಾರಿಗೂ ಕಡಿಮೆಯೆನಿಸದ ವಚನಕಾರರ ಬಹಳ ಮಹತ್ವದ ವಚನಗಳನ್ನು ಇದರಲ್ಲಿ ಸೇರಿಸಿರುವದು. ಉದಾಹರಣೆಗಾಗಿ ಬೊಂತಾದೇವಿ, ಬಿಬ್ಬಬಾಚಯ್ಯ, ಮೆರೆಮಿಂಡ, ಕೋಲಶಾಂತಯ್ಯ, ತುರುಗಾಹಿ ರಾಮಣ್ಣ ಘನಲಿಂಗಿ ಶಿವಯೋಗಿ, ಲಿಂಗಮ್ಮ, ರೇಕಮ್ಮ, ಕೇತಲದೇವಿ, ಸತ್ಯಕ್ಕ ಹಾಗೂ ಗಂಗಮ್ಮ ಇವರ ವಚನಗಳ ಮನೋಜ್ಞ ಅರ್ಥವಿವರಣೆಯನ್ನು ನಾವು ಇಲ್ಲಿ ಕಾಣಬಹುದಾಗಿದೆ.

ಎಂಥ ಕೀಳುವೃತ್ತಿಯೆ ಆಗಲಿ ಅದನ್ನು ಶಿವಾರ್ಪಣ ಭಾವನೆಯಿಂದ ಮಾಡಿ ಬಂದುದನ್ನು ಜಂಗಮ ದಾಸೋಹಕ್ಕರ್ಪಿಸಿದರೆ ಅದರಿಂದ ಜೀವನ ಸಾರ್ಥಕತೆಯನ್ನು ಪಡೆಯುತ್ತದೆಯೆಂಬುದು ಕಾಯಕ ದಾಸೋಹತತ್ತ್ವದ ಮೂಲ ಸೂತ್ರ. ಇದು ಶರಣರು ವಿಶ್ವಸಂಸ್ಕೃತಿಗೆ ನೀಡಿದ ಅಮೋಘ ಕಾಣಿಕೆ. ಹಾದರದಂಥ ಕಾಯಕವನ್ನು ಕೈಕೊಂಡು ತನ್ನ ಜೀವನವನ್ನು ಪ್ರಸಾದ ಜೀವನವನ್ನಾಗಿಸಿದ ಹಾದರದ ಗಂಗಮ್ಮನ ವಚನ ಇಲ್ಲಿ ಅರ್ಥೈಯಿಸಲ್ಪಟ್ಟು ಕಾಯಕ ದಾಸೋಹ ತತ್ವದ ಮಹತ್ವವನ್ನು ಎತ್ತಿ ಹಿಡಿಯುವಂತಾಗಿದೆ. ಕಾಯಕದಿಂದ ಜೀವನಕ್ಕೆ ಪಾವಿತ್ರ್ಯತೆಯನ್ನು ತಂದುಕೊಟ್ಟ ಈ ಉದಾಹರಣೆ ವಿಶ್ವದ ಇನ್ನೊಂದು ಸಂಸ್ಕೃತಿಯಲ್ಲಿ ನಮಗೆ ಕಂಡು ಬರುವುದಿಲ್ಲ. ಅಂಗ ಕ್ರಿಯೆಗಳೆಲ್ಲವು ಲಿಂಗಕ್ರಿಯೆಗಳಾದಾಗ ಇಂಥ ಸ್ಥಿತಿ ಉಂಟಾಗುವದು ಒಂದು ಸಹಜ ಕ್ರಿಯೆಯಾಗಿ ಪರಿಣಮಿಸುವ ಸಂದೇಶವನ್ನು ಹಾದರ ಕಾಯಕದ ಗಂಗಮ್ಮನ ಜೀವನ ನೀಡುತ್ತದೆ. ಇದನ್ನು ಈ ಕೃತಿಯಲ್ಲಿ ವೈಶಿಷ್ಟಪೂರ್ಣವಾಗಿ ವಿವೇಚಿಸಿದ ಕೃತಿಕಾರರು ಅಭಿನಂದನಾರ್ಹರು.

ಹೀಗೆ ಲೇಖಕರು ವೈವಿಧ್ಯಮಯ ವಿಷಯಗಳನ್ನಾದರಿಸಿಕೊಂಡು ಶರಣರ ಮಾನವ ಕುಲೋದ್ಧಾರಕ ತತ್ತ್ವಗಳನ್ನು ಸರಳ ಹಾಗೂ ಸುಂದರವಾದ ಶೈಲಿಯಲ್ಲಿ ಹಿತವಾದ ಭಾಷೆಯಲ್ಲಿ ಅವುಗಳನ್ನು ನಿತ್ಯ ಜೀವನದ ಸಮಸ್ಯೆಗಳಿಗೂ ಅನ್ವಯಿಸುತ್ತಾ ಸಾಮಾನ್ಯ ಜನರಿಗೂ ಅರ್ಥವಾಗುವಂತೆ ನಿರೂಪಿಸಿರುವದು ನಿಜಕ್ಕೂ ಸ್ತುತ್ಯವಾದ ಪ್ರಯತ್ನ.

ಇಲ್ಲಿ ವಿವೇಚಿಸಲಾದ ಕೆಲವು ತೀರ ಸರಳವಾದ ವಚನಗಳನ್ನು ಕೈಬಿಟ್ಟು ಅವುಗಳ ಬದಲಾಗಿ ಕಠಿಣವಾದ ವಚನಗಳನ್ನು ಆರಿಸಿಕೊಂಡಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಕೆಲವೊಂದು ವಚನಗಳಲ್ಲಿ ಬರುವ ಒಗ್ಗಟ್ಟಿನಂತಿರುವ ಕಠಿಣ ಶಬ್ಧಗಳನ್ನು ಉದಾಹರಣೆಗಾಗಿ-ಮುಕ್ತಾಯಕ್ಕನ ವಚನದಲ್ಲಿ ಬರುವ ಅರಳ್ದತಲೆ, ಇಂಥ ಶಬ್ಧಗಳ ಅರ್ಥವಿವರಣೆ ನೀಡಿದ್ದರೆ ಚೆನ್ನಾಗಿತ್ತು. ಮತ್ತೆ ಕೆಲವು ವಚನಗಳಲ್ಲಿ ಅರ್ಥವ್ಯತ್ಯಾಸ ಉಂಟಾಗುವ ರೀತಿಯಲ್ಲಿ ಅಭಿಪ್ರಾಯ ಮೂಡಿಬರುವಂತಿದೆ. ಇದೇನೇ ಇದ್ದರೂ ಜನಸಾಮಾನ್ಯರನ್ನು ಲಕ್ಷ್ಯದಲ್ಲಿಟ್ಟುಕೊಂಡು ಶರಣರ ವಚನಗಳಲ್ಲಡಗಿರುವ ಉದಾತ್ತ ಮಾನವೀಯ ಮೌಲ್ಯಗಳನ್ನು ಸರಳ ಹಾಗೂ ಮನೋಜ್ಞ ಶೈಲಿಯಲ್ಲಿ ಸರಳ ಸುಂದರ ಭಾಷೆಯಲ್ಲಿ ನಿರೂಪಿಸಿರುವದು ಶ್ಲಾಘನೀಯ ವಿಷಯವಾಗಿದೆ. ಇದಕ್ಕಾಗಿ ಇವರು ಅಭಿನಂದನಾರ್ಹರು. ಇವರಿಂದ ಇಂಥ ಅನೇಕ ಕೃತಿಗಳು ಹೊರ ಬರಲೆಂದು ಹಾರೈಸಲಾಗಿದೆ.

– ಪ್ರೊ. ಬಿ. ವಿರೂಪಾಕ್ಷಪ್ಪ
(ಬಸವಪಥ – ಬೆಂಗಳೂರು)

■

# ಪ್ರೊ. (ಶ್ರೀಮತಿ) ಲಲಿತಾಂಬಾ ವೃಷಭೇಂದ್ರಸ್ವಾಮಿ

## ವ್ಯಕ್ತಿ ವಿವರ ಮತ್ತು ಸಾಹಿತ್ಯ-ಸೇವೆ-ಸಾಧನೆಯ ಮಾಹಿತಿ

ಹೆಸರು : ಪ್ರೊ. (ಶ್ರೀಮತಿ)ಲಲಿತಾಂಬಾ ವೃಷಭೇಂದ್ರಸ್ವಾಮಿ
ಎಂ.ಎಡ್;ಡಿ.ಟಿ.ಇ. ಶಿವಪ್ರಸಾದ' ಕಲ್ಯಾಣ ನಗರ,
೮ನೇ ಕ್ರಾಸ್, ಧಾರವಾಡ-೫೮೦ ೦೦೭
ದೂರವಾಣಿ (೦೮೩೬)೪೪೪೮೫೭೦

ಹುಟ್ಟಿದ ದಿನ : ೨೩-೮-೧೯೩೦

ಜನ್ಮ ಸ್ಥಳ : ಬೀರೂರು – ಚಿಕ್ಕಮಂಗಳೂರು ಜಿಲ್ಲೆ

ತಂದೆ=ತಾಯಿ : ಲಿಂ॥ ಶ್ರೀಶ್ರೀಕಂಠಶರ್ಮ ಉಬ್ರಾಣಿಮಠ
ಶ್ರೀಮತಿ ಗಿರಿಜಾಂಬಾ

ಶಿಕ್ಷಣ : ಬಿ.ಎ; (ಮಹಾರಾಜ ಕಾಲೇಜು, ಮೈಸೂರು)
ಎಂ.ಇಡಿ; (ಕ.ವಿಶ್ವವಿದ್ಯಾಲಯ, ಧಾರವಾಡ)
ಡಿ.ಟಿ.ಇ;(ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲೀಷ್
ಆ್ಯಂಡ್ ಫಾರಿನ್ ಲ್ಯಾಂಗ್ವೇಜಸ್, ಹೈದರಾಬಾದ್)

ಪತಿ + ಮಕ್ಕಳು

೧. ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ ಎಂ.ಎ. ಪಿಎಚ್.ಡಿ
(ನಿವೃತ್ತ) ಮುಖ್ಯಸ್ಥರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೫೮೦ ೦೦೩

೨. ಡಾ.ಎಸ್.ಎಂ. ಶಿವಪ್ರಸಾದ ಎಂ.ಎಸ್‌ಸಿ. ಪಿಎಚ್‌ಡಿ
ವಿಜ್ಞಾನಿ, ಬೆಂಗಳೂರು

ಉದ್ಯೋಗ : ನಿವೃತ್ತ ಪ್ರವಾಚಕರು, ಕರ್ನಾಟಕ ವಿಶ್ವವಿದ್ಯಾಲಯ
ಶಿಕ್ಷಣ ಮಹಾವಿದ್ಯಾಲಯ, ಧಾರವಾಡ

(ಶಿಕ್ಷಣ ಕ್ಷೇತ್ರದ ವಿವಿಧ ಹಂತಗಳಲ್ಲಿ (೧೯೫೩-
೧೯೯೦) ೩೭ ವರ್ಷಗಳ ಸೇವೆ.

ಗೌರವ ಸೇವೆಗಳು :

ಸಂಸ್ಥಾಪಕ ಸದಸ್ಯೆ : ಉತ್ತರ ಕರ್ನಾಟಕ ಲೇಖಕಿಯರ ಸಂಘ. ಹುಬ್ಬಳ್ಳಿ-ಧಾರವಾಡ

ಆಜೀವ ಸದಸ್ಯೆ : ಉತ್ತರ ಕರ್ನಾಟಕ ಲೇಖಕಿಯರ ಸಂಘ(ಹುಬ್ಬಳ್ಳಿ -ಧಾರವಾಡ)

ಆಜೀವ ಸದಸ್ಯೆ : ಅಖಿಲ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

ಸಂಸ್ಥಾಪಕಿ : ಪ್ರಸಾದ ಪ್ರಕಾಶನ, ಧಾರವಾಡ.

೧೯೭೨ರಲ್ಲಿ ದಾನಚಿಂತಾಮಣಿ ಅತಿಮಬ್ಬೆ ಆಯ್ಕೆ ಸಮಿತಿ ಸದಸ್ಯೆ (ಸರಕಾರದ ನೇಮಕಾತಿ)

೧೯೮೦ರಲ್ಲಿ ಒಂಬತ್ತನೆಯ ತರಗತಿಯ ಇಂಗ್ಲೀಷ ಪಠ್ಯಪುಸ್ತಕ ನಿರ್ಮಾಣ ಸಮಿತಿಯ ಸದಸ್ಯೆ (ಶಿಕ್ಷಣ ಇಲಾಖೆಯಿಂದ).

ದಿಲ್ಲಿಯಲ್ಲಿ ೧೯೭೪ರಲ್ಲಿ ನಡೆದ 'ಕನ್ನಡಿಗ' ಪತ್ರಿಕೆಯವರು ನಡೆಸುತ್ತಿರುವ ರಾಷ್ಟ್ರೀಯ ಕನ್ನಡ ಸಮ್ಮೇಳನದ ಮಹಿಳಾ ಗೋಷ್ಠಿಯ ಅಧ್ಯಕ್ಷೆ

ಹುಬ್ಬಳ್ಳಿಯ ಮೂರು ಸಾವಿರ ಮಠದಲ್ಲಿ ನಡೆದ ಉ.ಕ. ಮಹಿಳಾ ಸಾಹಿತ್ಯ ಸಮ್ಮೇಳನ:

(ಮೊದಲನೆಯದು) ಮಹಿಳಾ ಗೋಷ್ಠಿಯ ಅಧ್ಯಕ್ಷೆ -೧೯೮೫ರಲ್ಲಿ

ಬಳ್ಳಾರಿಯಲ್ಲಿ ನಡೆದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಭಾಷಣ.

ಬಳ್ಳಾರಿ ಜಿಲ್ಲೆಯ ಕೂಡ್ಲಗಿ ತಾ||ಅಯ್ಯನ ಹಳ್ಳಿಯಲ್ಲಿ ನಡೆದ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಉದ್ಘಾಟನೆ.

ಬೆಂಗಳೂರಿನ ಜಂಗಮ ಮಠ ನಡೆಸಿದ ಶರಣ ಸಮ್ಮೇಳನದ ಶರಣೆಯರ ಗೋಷ್ಠಿಯ ಅಧ್ಯಕ್ಷತೆ.

ಧಾರವಾಡದ 'ಅವನಿರಸಿಕರಂಗ'ದ ಪ್ರಥಮ ವಾರ್ಷಿಕೋತ್ಸವ ಸಂದರ್ಭದಲ್ಲಿ ನಡೆದ ಮಹಿಳೆಯ ಸಾಹಿತ್ಯ-ಸಾಧನೆಗಳ ಗೋಷ್ಠಿಯ ಅಧ್ಯಕ್ಷೆ-೨೦೦೧

ಬೆಳಗಾಂವಿಯಲ್ಲಿ ನಡೆದ ಕದಳಿ ಮಹಿಳಾ ಸಮಾವೇಶದಲ್ಲಿ 'ಗೋಷ್ಠಿಯ - ಅಧ್ಯಕ್ಷತೆ. (೮-೧೨-೯೦೩)

ದಾನ -ದತ್ತಿ ಕೊಡುಗೆ:

ಅ) ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೫,೦೦೦/ -ರೂ ದಂಪತಿಗಳ ದತ್ತಿ (ಪ್ರತಿವರ್ಷ ಕನ್ನಡ ಸಾಹಿತ್ಯದಲ್ಲಿ ವಿಶೇಷ ಸಾಧನೆ ಮಾಡಿರುವ "ದಂಪತಿ"ಗಳಿಗೆ "ಸಾಹಿತ್ಯ ದಂಪತಿ" ಪುರಸ್ಕಾರ ನೀಡಿ ಗೌರವಿಸುವುದಕ್ಕಾಗಿ ದತ್ತಿ).

ಆ) ಉತ್ತರ ಕರ್ನಾಟಕ ಲೇಖಕಿಯರ ಸಂಘ, ಧಾರವಾಡ ಇವರಲ್ಲಿ ೧೫೦೦೦/ -ರೂಗಳ ದತ್ತಿ. (ಪ್ರತಿವರ್ಷ ಶ್ರೇಷ್ಠಮಹಿಳಾ ಸಾಹಿತ್ಯ ಕೃತಿಗಳಿಗೆ ಪುರಸ್ಕಾರ ನೀಡುವ ಉದ್ದೇಶಕ್ಕಾಗಿ)

ಇ) ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರಲ್ಲಿ ದಂಪತಿಗಳ ರೂ. ೧೦,೦೦೦/-ದತ್ತಿ. (ಧಾರವಾಡ-ಬಳ್ಳಾರಿ-ಚಿಕ್ಕಮಗಳೂರು ಜಿಲ್ಲೆಯಳಲ್ಲಿ ಶರಣ ಸಾಹಿತ್ಯ ಚಿಂತನ ಕುರಿತ ಭಾಷಣ ಕಾರ್ಯಕ್ರಮ ವ್ಯವಸ್ಥೆಗಾಗಿ)

ಈ) ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನ ಮಠ ಹೊಸಪೇಟೆ-ಬಳ್ಳಾರಿ ಶರಣ ಸಾಹಿತ್ಯ ಪ್ರಸಾರ-ಪ್ರಸಾರಕ್ಕಾಗಿ ೧೦.೦೦೦/-ರೂಗಳ ದಂಪತಿಗಳ ದತ್ತಿ.ಇ.ಇ.

ಉ) ಸುತ್ತೂರ ಮಠದ ಬಡಮಕ್ಕಳ ವಸತಿ ಶಾಲೆಗೆ ೧ಲಕ್ಷ ರೂ. ದೇಣಿಗೆ

ಲೇಖನಗಳ ಕೊಡುಗೆ

೧) ಮೊದಲನೆಯ ಮಹಿಳಾ ವರ್ಷದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ 'ಮಹಿಳೆಯ ಸಮಸ್ಯೆಗಳು -ಸಾಧನೆಗಳು' ಎಂಬ ಪುಸ್ತಕಕ್ಕೆ ಮರೆಯಲಾರದ ಮಹಿಳೆಯರು ಎಂಬ ಲೇಖನ. ೧೯೭೬

೨) ಮೈಸೂರಲ್ಲಿ ನಡೆದ ವಿಶ್ವ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಪ್ರಕಟವಾದ 'ಮಹಿಳೆಯರ ಸಣ್ಣ ಕಥೆಗಳು' ಪುಸ್ತಕ 'ಹಸಿರು ಸೀರೆ' ಎಂಬ ಕಥೆ.

೩) ರಾಯಚೂರಿನ ಎಂ.ಪಿ. ಜಾಲಿಯವರ ಸ್ಮರಣ ಸಂಚಿಕೆಗೆ ಲೇಖನ

೪) ಬಸವರಾಜ ಕಟ್ಟೀಮನಿಯವರ ಸ್ಮರಣ ಸಂಚಿಕೆಗೆ ಲೇಖನ.

೫) ವಿ.ವಿ. ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾದ Western Educators &Eastern Educators ಎಂಬ ಪುಸ್ತಕಕ್ಕೆ ಲೇಖನಗಳು.

೭) ಪಿ.ವಿ. ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾಗುತ್ತಿದ್ದ ಬುಲೆಟಿನ್‌ಗೆ ಅನೇಕ ಶೈಕ್ಷಣಿಕ ಲೇಖನಗಳು .

೭) ಪ್ರಜಾಮತ ವಿಶೇಷ ಸಂಚಿಕೆಗೆ ವೀರಶೈವ ಸಂಪ್ರದಾಯ ವಿವಾಹ ವೈಶಿಷ್ಟ ಮತ್ತು ಸಮಾಜ ಎಂಬ ವಿಶೇಷ ಲೇಖನ.

೮) ಬಾದಾಮಿಯ ವೀರ ಪುಲಕೇಶಿ ಕಾಲೇಜಿನ ವಜ್ರಮಹೋತ್ಸವ ಗ್ರಂಥಕ್ಕೆ ಲೇಖನ.

೯) ಶ್ರೀಮಾಮನಿಯವರ "ಗುಡದೂರ ಶಿವಚೇತನ" (ಸಜ್ಜಲ ಗುಡ್ಡದ ಶರಣಮ್ಮನವರ ಜೀವನ ಚರಿತ್ರೆ) ಗ್ರಂಥಕ್ಕೆ ಮುನ್ನುಡಿ.

೧೦) ಬೆಳಗಾಂವಿಯ ಶರಣೆಯಾದ ರವಿದೇವಿ – ಸುಗ್ಗಲಾದೇವಿಯರ ಅಮೃತ ಮಹೋತ್ಸವ ಗ್ರಂಥಕ್ಕೆ ಲೇಖನ.

೧೧) ಅಕ್ಕನ ಬಳಗ ಬೆಳಗಾವಿ 'ಶಿವಶರಣೆಯರ ಚರಿತಾಮೃತ' ಕ್ಕೆ ಲೇಖನ.

೧೨) ಬೀರೂರಿನಲ್ಲಿ ನಡೆದ ರಂಭಾಪುರಿ ಜಗದ್ಗುರುಗಳ ಒಂಬತ್ತನೆಯ ದಸರಾ ಮಹೋತ್ಸವ ಮತ್ತು ಭಾವೈಕ್ಯ ಧರ್ಮ ಸಮ್ಮೇಳನದಲ್ಲಿ ಪ್ರಕಟವಾದ "ಧರ್ಮಸೌರಭ" ಸಂಚಿಕೆಗೆ ಲೇಖನ.

೧೩) ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ "ಸಂವೇದನೆಗೆ" ಲೇಖನ ಇತ್ಯಾದಿ –ಇತ್ಯಾದಿ–

**ಪತ್ರಿಕೆಗಳು ಲೇಖನಗಳು:**

ಸುಧಾ, ತುಷಾರ, ವನಿತಾ, ಕರ್ಮವೀರ, ಮಯೂರ, ಲೇಖಿಕಿ, ಮಂಜುವಾಣಿ, ಪ್ರಜಾಜ್ಯೋತಿ, ಪರಂಜ್ಯೋತಿ, ಸಂಯುಕ್ತ ಕರ್ನಾಟಕ, ಕನ್ನಡಮ್ಮ, ಹೇಮಕೂಟ, ಮಹಾಮನೆ, ವಿವೇಕ ಹಂಸ ಕರ್ನಾಟಕ, ದೀಪಾವಳಿ ಸಂಚಿಕೆಗಳು, ಗೋಕಾಕ್ ಪತ್ರಿಕೆ, ಕ.ವಿ. ವಿದ್ಯಾಲಯದಿಂದ ಪ್ರಕಟವಾಗುತ್ತಿದ್ದ ಮಾನವಿಕ ವಿಜ್ಞಾನ, ಬೆಂಗಳೂರಿನ ವಿನೋದ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

**ಆಕಾಶವಾಣಿ :**

ಈಗ ೩೫ವರ್ಷಗಳಿಂದ ಧಾರವಾಡದ ಆಕಾಶವಾಣಿಯಲ್ಲಿ ಚಿಂತನೆ – ಚರ್ಚೆ –ಭಾಷಣ –ಸಣ್ಣ ಕಥೆಗಳು, ಮಕ್ಕಳ ಕಥೆಗಳು, ರೂಪಕಗಳು ಬಿತ್ತರಿಸಲ್ಪಟ್ಟಿವೆ. ಹೊಸಪೇಟೆ ಆಕಾಶವಾಣಿಯವರು ೧೯೯೫ ನಡೆದ, ಜಿಲ್ಲಾ ಸಾಹಿತ್ಯ ಸಮ್ಮೇಳನ ಸಂದಂರ್ಭದಲ್ಲಿ ವಿಶೇಷ ಸಂದರ್ಶನ ಬಿತ್ತರಿಸಿದ್ದರು.

ಭಾಷಣಗಳು :

ಉತ್ತರ ಕರ್ನಾಟಕದ ಅನೇಕ ಶಾಲೆ– ಕಾಲೇಜುಗಳಲ್ಲಿ ಮಠಗಳಲ್ಲಿ ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ ರೋಟರಿ, ಲಯನ್ಸ್‌ನ ಇನ್ನರ್‌ವೀಲ್‌ಗಳಲ್ಲಿ ಅಕ್ಕನ ಬಳಗಗಲ್ಲಿ ಧರ್ಮ, ಶಿಕ್ಷಣ, ಮಹಿಳೆ, ಸಮಾಜ ಮುಂತಾದ ವಿಷಯಗಳ ಬಗೆಗೆ ನೂರಾರು ಭಾಷಣಗಳು.

ಪ್ರಕಟಿತ ಗ್ರಂಥಗಳು :

೧. ಸಜ್ಜಲ ಗುಡ್ಡದ ಶರಣಮ್ಮನವರು – (ಜೀವನ ಚರಿತ್ರೆ)

೨. ಪತ್ರೆ ಚನ್ನವೀರಪ್ಪಯ್ಯನವರು – ಜೀವನ ಸಾಧನೆ– ಕೊಡುಗೆ (ಜೀವನಚರಿತ್ರೆ)

೩. ಮನದ ಮಲ್ಲಿಗೆ – (ವೈಚಾರಿಕ ಲೇಖನಗಳು)

೪. ವಚನಾಂಜಲಿ – ಆಯ್ದ ಶಿವಶರಣ ವಚನಗಳ ವಿಶ್ಲೇಷಣೆ

೫. ಮುನಿದೆ ಏಕಮ್ಮ ನೆಲದಾಯಿ (ಕವನ ಸಂಗ್ರಹ )

೬. ಮಕ್ಕಳ ಶಿಕ್ಷಣ – ಚಿಂತನೆಗಳು – (ಪ್ರಬಂಧಗಳು)
(ಮಾ॥ ಶ್ರೀ॥ ರತ್ನಮ್ಮ ಹೆಗ್ಗಡೆಯವರ ಬಹುಮಾನ ವಿಜೇತ ಕೃತಿ

೭. ಪುಟ್ಟನಿಗೆ ಹಿತೈಷಿಯ ಪತ್ರಗಳು– ಮಕ್ಕಳಿಗೆ ಜೀವನ ಶಿಕ್ಷಣದ ಕೃತಿ.

೮. ಶಿವ ಶರಣೆಯರು –ಜೀವನ, ಸಾಧನೆ (ಸಂಶೋಧನಾತ್ಮಕ ಗ್ರಂಥ)

೯. ರಚನಾತ್ಮಕ ಚಿಂತನೆಗಳು – (ಪ್ರಸ್ತುತ ಸಮಾಜಕ್ಕೆ ಸಂಬಂಧಿಸಿದ ವೈಚಾರಿಕ ಲೇಖನಗಳು.)

೧೦. ಬೇರೊಂದು ಮರವೆರಡು – (ಸಣ್ಣಕಥೆಗಳು)

೧೧. ಕಿವಿಗೊಟ್ಟುಕೇಳು – ಮನವಿಟ್ಟು ಮಾಡು ಮಗುವೇ. (ಮಕ್ಕಳಿಗೆ ಜೀವನ ಶಿಕ್ಷಣ)

ಪ್ರಕಟಣಗೆ ಸಿದ್ಧವಿರುವ ಕೃತಿಗಳು :

೧. ಉದಾತ್ತ ಮಹಿಳೆಯರ ಬಗ್ಗೆ ಲೇಖನಗಳು.

೨. ಧಾರ್ಮಿಕ ಲೇಖನಗಳು

೩. ವೈಚಾರಿಕ ಪ್ರಬಂಧಗಳು

೪. ಸಣ್ಣಕಥೆಗಳು

೫. ಮೌಲ್ಯ ಬೋಧಿಸುತ್ತಾ ಮಕ್ಕಳಿಗೆ ಕಥೆಗಳು
(ಕಥೆಗಳ ಮೂಲಕ ಮಕ್ಕಳಿಗೆ ಮೌಲ್ಯ ಬೊಧನೆ)

೭ ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳು

೮. ರೂಪಕಗಳು

೯. ಶರಣರ ವೈಶಿಷ್ಟ್ಯ ಚಿಂತನೆಗಳು

೧೦. ಸಮಾಜದ ಸಮಸ್ಯೆಗಳಿಗೆ ಸಂಬಂಧಿಸಿದ ಲೇಖನಗಳು
(ಸ್ತ್ರೀಪರವಾದ/ ಶಿಕ್ಷಣ ಮಾಧ್ಯಮ/ ಮೀಸಲಾತಿ/ ರಾಷ್ಟ್ರಭಾಷೆ ಇ.ಇ......)

ಪ್ರಶಸ್ತಿ ಗೌರವಗಳು

೧) ಕಾವ್ಯಾನಂದ ಪ್ರಶಸ್ತಿ

೨) ರತ್ನಮ್ಮ ಹೆಗ್ಗಡೆಯವರ ಬಹುಮಾನ

೩) ಮಕ್ಕಳ ಸಾಹಿತ್ಯ ಸಮ್ಮೇಳನ (ಧಾರವಾಡ)ದಲ್ಲಿ ಸನ್ಮಾನ

೪) ಉತ್ತರ ಕರ್ನಾಟಕ ಲೇಖಕಿಯರ ಸಂಘದಿಂದ ಸನ್ಮಾನ

೫) ಕದಳಿ ಮಹಿಳಾ ವೇದಿಕೆ ಮೈಸೂರು-ಯಿಂದ 'ಕದಳಿ' ಶ್ರೀ ಪ್ರಶಸ್ತಿ.

## ೧. ಅಬ್ದುಲ್ ಕಲಾಂ .....ನಿನಗೆ ಸಲಾಂ

ಭಾರತ ರತ್ನ ಕಲಾಂ
ಭಾರತದ ರಾಷ್ಟ್ರಪತಿ ಅಬ್ದುಲ ಕಲಾಂ
ನಿನಗಿದೋ, ನಮ್ಮೆಲ್ಲರ ಗೌರವದ ಸಲಾಂ.
ನೀ ಭಾರತೀಯರಿಗೊಂದು ಶ್ರೇಷ್ಠ ಆದರ್ಶ
ನಿನ್ನ ದಾರಿಯಲಿ ನಡೆದವರ್ಗೆ ಇಹುದು ಉತ್ಕರ್ಷ
ಭ್ರಷ್ಟಾಚಾರಿಗಳು, ದೇಶದ್ರೋಹಿಗಳು, ಜಾತೀಯವಾದಿಗಳು
ತಲೆಬಾಗಬೇಕು ನಿನ್ನ ಮೇರುವ್ಯಕ್ತಿತ್ವದ ಮುಂದೆ
ನಿನ್ನ ಭಾರತೀಯತೆ ಜಗತ್ತಿನ ತುಂಬ ಪ್ರಚಲಿತ
ನಿನ್ನ ಜಾತಿಯ ಆಚಾರ-ವಿಚಾರ ಕುಟುಂಬದೊಳಗೆ ಸೀಮಿತ
ಈ ನಿನ್ನ ನಿಲುವು ಆಗಬೇಕು ಭಾರತೀಯರೆಲ್ಲರ ವ್ರತ
ಆಗ ದೇಶದ ತುಂಬ ಚಲ್ಲವರಿಯುವುದು ಶಾಂತಿ, ಅಬಾಧಿತ ॥

ಭಾರತ ಕಲಾಂ, ಭಾರತ ರತ್ನ ಕಲಾಂ
ನಿನ್ನ ಮೌಲ್ಯಕೆ, ನಿನ್ನ ಜ್ಞಾನಕೆ, ವಿದ್ಯೆಗೆ
ಪ್ರೀತಿಯ ಭಾವಕ್ಕೆ, ದೇಶ ಪ್ರೇಮಕ್ಕೆ
ಭಾರತದ ಪೀಳಿಗೆಯ ನಿನ್ನ ಕಾಳಜಿಗೆ
ನಿನ್ನ ದೂರದೃಷ್ಟಿಗೆ, ಸರಳ-ಸಜ್ಜನಿಕೆಗೆ
ನಾನೆಲ್ಲಾ ಹೇಳುವೆವು ತಲೆಬಾಗಿ ಸಲಾಂ-ಸಲಾಂ
ನಂಬಿಕೆ-ನಿಷ್ಠೆ... ರಾಷ್ಟ್ರಪತಿ ಕಲಾಂ
ದೂರುತಿಹರು ಇಂದು
ಧರ್ಮ, ದೇವರು, ದೇವಸ್ಥಾನಗಳು
ಜನ-ಮನ ಒಲೆಯುವ, ಒಗ್ಗೂಡಿಕೆಯ
ಬಗ್ಗು ಬಡಿಯುವ ಮಾಧ್ಯಮಗಳು ಎಂದು!

ಒಳಹೊಕ್ಕು ನೋಡದಯ, ದೂರಿದರೇನು ಬಂತು?

ಜನ-ಮನವನು ಒಡೆಯಲು
ದೇವ, ಧರ್ಮ, ಗುಡಿಗಳೆಂತು ಸಾಧ್ಯ? ಹೇಳು ನೀ
ಧರ್ಮಕೆ, ದೇವರಿಗೆ, ಮಾನವರೆಲ್ಲ ಒಂದೆ,
ಅಲ್ಲಿ ಭಿನ್ನ-ಭೇದಗಳಿಗೆಡೆಯೇ ಇಲ್ಲ.

ಗಾಳಿ-ಮಳೆಗಳನು, ಬಿಸಿಲು ಬೇಗೆಗಳನು
ದೇವರೆಲ್ಲರಿಗೆ ಸಮನಾಗಿ ಹಂಚುತಿಹನು
ಹಂಚಿಕೆಯಲಿ ಭಿನ್ನ-ಭೇದವ
ಮಾಡಿಕೊಳ್ಳುವವರು ನಾವಲ್ಲದೆ ದೇವರಿಲ್ಲ!....... ಅಲ್ಲವೇ ಕಲಾಂ ?

ಧರ್ಮವನೆ ಜಾತಿಯಾಗಿ ಮಾಡಿಕೊಂಡು
ನಾ ಹೆಚ್ಚು, ನೀ ಕಡಿಮೆ ಎಂದು ಬಡಿದಾಡುತ್ತ
ಮಾನವರನೊಂದುಗೂಡಿಸುವಾ ಧರ್ಮಕೆ
ನಾವೇ ಮಸಿಯ ಬಳಿಯುತಿಹೆವು

ಧರ್ಮದಲಿ ನಯವುಂಟು, ನೀತಿಯುಂಟು
ಬೋಧೆಯ ಒಳಗಿಹುದು
ನಮ್ಮ ನಮ್ಮೊಳಗಿನ ನಂಟು
ಅದರ ಒಳಹೋಗುವುದ ಬಿಟ್ಟು, ದೂರುತಿಹೆವು ಸುಮ್ಮನೆ.!

ಅರ್ಥವ ಅನರ್ಥವಮಾಡಿಕೊಂಡು
ತಮಗೆ ಬೇಕಾದಂತೆ ಅರ್ಥಹೇಳಿಕೊಂಡು
ಸ್ವಾರ್ಥಕಾಗಿ ಧರ್ಮದಲ್ಲಿ ಅಧರ್ಮವ ಬೆರೆಸಿ
ಧರ್ಮದಲ್ಲೂ ಮೋಸ, ದ್ವೇಷಗಳು
ತಾರತಮ್ಯಗಳು ತುಂಬಿವೆಯೆಂದು ಬಿಂಬಿಸಿ
ಇಂದಿನ ಧರ್ಮದ ದಾರಿಯಲಿ ಹೋದವರ್ಗೆ
ಧರ್ಮವೇ ಬೇಡವೆನಿಸುವಂತೆ ಮಾಡುತಿಹರು॥

ಅದರಿಂದ ದೂರವಿರುವುದೇ ಜಾಣತನ
ವೆಂದು ಬಗೆವಂತೆ ಮಾಡಿ,

ಜನ, ದೇವರನು ಕಡೆಗಣಿಸಿ,
ಮನಬಂದಂತೆ ಮೆರೆಯಲು
ದಾರಿ ಮಾಡಿಹರು... ನೋಡು ಕಲಾಂ ।

ದುರ್ಜನರ ಮೋಸದಾಟದಿಂದ
ಜನ ಧರ್ಮವನೆ ದೂರುತಿಹರಲ್ಲ!
ಜಾತಿ ವೈಷಮ್ಯಕೆ, ದ್ವೇಷಕೆ
ಧರ್ಮವೇ ಕಾರಣವೆಂದು ಜನಕ್ಕಿಂದು
ನೀತಿಗೆ ನೆಲೆಯೇ ಇಲ್ಲವಾಗುತ್ತಿದೆ ಇಲ್ಲಿ
ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡುವ
ತಾಳ್ಮೆ ಜನಕಿಲ್ಲವಾಗುತಿದೆಯಲ್ಲಾ..........

ಧರ್ಮ ವೃಕ್ಷದ ಸುತ್ತ ಇರುವ
ಮುಳ್ಳು-ಕಂಟಿಗಳ, ಕಲ್ಲು-ಮುಳ್ಳುಗಳ
ಸವರಿ, ಕಳೆ-ಕಸವನೆಲ್ಲಾ ಕಿತ್ತು
ವೃಕ್ಷದ ಸುತ್ತ ಬಯಲು ಮಾಡಿದೊಡೆ
ನಿಜ, ಬಯಲಾಗಿ ಸಾಲಿಡುವರು ಜನ
ಧರ್ಮದ ಸುತ್ತ; ನೀತಿಯತ್ತ ಗುಡಿ-ಗುಂಡಾರಗಳತ್ತ ॥
ಅಲ್ಲವೇ......... ಕಲಾಂ .......... ನಿನಗೆ ಸಲಾಂ ॥

■

## ೨. ಸದ್ಧರ್ಮವಾಗಿದೆ ಅಧರ್ಮ !

ಸದ್ಧರ್ಮ ಬೇಕೇಬೇಕು
ದೂರುತಿಹರು ಇಂದು
ಧರ್ಮ, ದೇವರು ದೇವಸ್ಥಾನಗಳು
ಜನ–ಮನ ಒಡೆಯುವ, ಒಗ್ಗೂಡಿಕೆಯ
ಬಗ್ಗು–ಬಡಿಯುವ ಮಾಧ್ಯಮಗಳು ಎಂದು !

ಒಳಹೊಕ್ಕು ನೋಡದೆ, ದೂರಿದರೇನು ಬಂತು?
ಜನ–ಮನ ಒಡೆಯಲು
ದೇವ, ಧರ್ಮ, ಗುಡಿಗಳೆಂತು ಸಾಧ್ಯ?
ಧರ್ಮಕೆ, ದೇವರಿಗೆ ಮಾನವರೆಲ್ಲ ಒಂದೇ:
ಅಲ್ಲಿ, ಭಿನ್ನ–ಭೇದಗಳಿಗೆಡೆಯಿಲ್ಲ

ಗಾಳಿ–ಮಳೆಗಳನು, ಬಿಸಿಲು ಬೇಗೆಗಳನು
ದೇವರೆಲ್ಲರಿಗೆ ಸಮನಾಗಿ ಹಂಚುತಿಹನು
ಹಂಚಿಕೆಯಲಿ ಭಿನ್ನ–ಭೇದವ
ಮಾಡಿಕೊಳ್ಳುವವರು ನಾವಲ್ಲದೆ ದೇವರಲ್ಲ !

ಧರ್ಮವನೆ ಜಾತಿಯಾಗಿ ಮಾಡಿಕೊಂಡು
ನಾ ಹೆಚ್ಚು, ನೀ ಕಡಿಮೆ ಎಂದು ಬಡಿದಾಡುತ್ತಾ,
ಮಾನವರನೊಂದುಗೂಡಿಸುವಾ ಧರ್ಮಕ್ಕೆ
ನಾವೇ ಮಸಿಯ ಬಳಿಯುತಿಹೆವು ॥

ಧರ್ಮದಲ್ಲಿ ನಯವುಂಟು, ನೀತಿಯುಂಟು
ಮೌಲ್ಯವುಂಟು, ನಂಟಿನಾ ಮಾಧುರ್ಯ ಉಂಟು,
ಅದರಲಿ ಮಿಂದು ಸಹಕಾರದಿ ಬಾಳುವುದ ಬಿಟ್ಟು
ದೂರುತಿಹೆವು ಸುಮ್ಮ ಸುಮ್ಮನೆ !!

ಸದ್ಧರ್ಮದ ಅರ್ಥವ ಅನರ್ಥ ಮಾಡಿಕೊಂಡು
ತಮಗೆ ಬೇಕಾದಂತೆ ಅರ್ಥ ಹೇಳಿಕೊಂಡು,
ಸ್ವಾರ್ಥಕ್ಕಾಗಿ ಧರ್ಮದಲಧರ್ಮವ ಬೆರೆಸಿ
ಧರ್ಮಗಳ ಮೋಸ-ದ್ವೇಷಗಳು, ತಾರತಮ್ಯಗಳು
ತುಂಬಿಹವೆಂದು ಬಿಂಬಿಸುತಿಹರು
ಎಲ್ಲರಿಗೂ ಸದ್ಧರ್ಮ ಬೇಕೇ ಬೇಕು
ಧರ್ಮವಿಲ್ಲದಾ ಬದುಕು ಸಾಕು, ಸಾಕು.
ಕುಟುಂಬದಾ ವ್ಯಕ್ತಿಗಿಹುದು ಕುಟುಂಬ ಧರ್ಮ;
ರಾಷ್ಟ್ರದಾ ಪ್ರಜೆ ಪಾಲಿಸಬೇಕು ರಾಷ್ಟ್ರ ಧರ್ಮ;
ಉದ್ಯೋಗಿ ಬಿಡಬಾರದು ವೃತ್ತಿ ಧರ್ಮ;
ಜೀವನದ ಎಲ್ಲ ಮಾರ್ಗಕೂ
ಇರುವುದು ಅದರದೇ ಆದ ಧರ್ಮ. !
ಆದ ಪಾಲಿಸದಿರುವುದೇ ಅಧರ್ಮ!!

ದೇವರು, ಗುಡಿ-ಗುಂಡಾರಗಳು
ಧರ್ಮ ಮಾರ್ಗಕೆ ಮೆಟ್ಟಿಲುಗಳು
ದೇವರು ಬೇಡ, ಗುಡಿಬೇಡ
ಗುಂಡಾರ ಬೇಡವೆಂದರೆ ಆದೀತೆ?
ದೈವ ನಿಷ್ಠೆ ಹುಟ್ಟಿಸುವುದು ಪಾಪ ಭೀತಿ,
ಪಾಲಿಸುವಂತೆ ಪ್ರೇರೇಪಿಸುವುದು ಸತ್ಯ-ನೀತಿ.
ಕೆಲ ದುರ್ಜನರು ಮಾಡುವ ಪಾಪ ಮಾಡುತ್ತ,
ಗುಡಿ-ಗುಂಡಾರಗಳಿಗೆ ಅಲೆಯುತ್ತಾ
ಜಾತಿ ಹೆಸರಲ್ಲಿ ದ್ವೇಷಮಾಡುತ್ತಾ
ಜನ ದಾರಿತಪ್ಪಿಸುತಿಹರು !
ಅವರೇ ದೈವ ದ್ರೋಹಿಗಳು, ಧರ್ಮದ್ರೋಹಿಗಳು !!

ಮಾನವತೆಯ ದಿಕ್ಕು ತಪ್ಪಿಸಿ,
ದೇವರನ್ನು ನಂಬಿಹನು,
ಇದ ನೋಡಿ, ಗುಡಿ-ಗುಂಡಾರಗಳ ಸುತ್ತುವವನೂ
ಪಾಪಿ ಇವನು, ದ್ರೋಹಿ ಇವನು
ಎಂಬ ಅನಿಸಿಕೆಯನ್ನುಂಟು ಮಾಡಿ
ದೇವರ ನಂಬಿಕೆಯಲಿ ಜಾತಿಯಡಗಿಹುದು
ಜಾತಿಯಲಿ ದ್ವೇಷತುಂಬಿಕದು

■

## ೩. ತಾಯಿ ಪಾರಿವಾಳದ ಹಂಬಲು

ಬಾ ಮುದ್ದಿನ ಪಾರಿವಾಳ
ಬಾ ಪಾರಿವಾಳವೆ ಬಾ
ಏಕಷ್ಟು ಅಂಜುವೆ?
ನಿನ್ನ ಮೊಟ್ಟೆಯ ಸನಯ
ಹೋಗಲಿಷ್ಟು ಹೆದರಿಕೆ ಏಕೆ?

ನೀನಿಟ್ಟ ಮೊಟ್ಟೆಗೆ ಕಾವುಕೊಟ್ಟು
ಮೊಟ್ಟೆಯೊಳಗಣ ಮರಿ ಹೊರಬಂದಾಗ
ಗುಟುಕನಿಕ್ಕಿ, ರೆಕ್ಕೆಬರುವವರೆಗೂ
ಕಣ್ಣರೆಪ್ಪೆಯಡಿಯಲಿ ಕಾಪಾಡಿ
ರೆಕ್ಕೆ ಬಲಿತು, ಗರಿಬಿಚ್ಚಿ
ಹಾರಿಹೋಗುವವರೆಗೂ
ನಿನ್ನ ಅಕ್ಕರೆಯೆಷ್ಟು
ಕಕ್ಕುಲಾತಿ ಇನ್ನೆಷ್ಟು
ನನಗೆ ತಿಳಿಯದೆ ಪಕ್ಷಿ

ಆದರೇಕಿಷ್ಟು ಭಯದಿಂದ
ಹೆಜ್ಜೆ ಮುಂದಕಿಟ್ಟು
ಮತ್ತೆ ಹಿಂದಕೆ ಸರಿಯುವಿಯಲ್ಲೆ
ಮೊಟ್ಟೆಯ ಬಳಿ ಹೋಗಲೂ ಆಗದೆ
ಅದ ಮರೆತು ದೂರವೂ ಇರಲಾರದೆ
ದೃಡಪಡಿಪ ನಿನ್ನ ಮನದ
ದುಗುಡವ ನೋಡಿ
ನನ್ನ ಮನ ಮುದುಡಿ ಹೋಗಹುದಲ್ಲೆ

ಯಾರು ತಾನೆ ನಿನಗೇನ ಮಾಡಿಯಾರು
ಧೈರ್ಯತಂದುಕೊಂಡು ನಡೆ ಮುಂದೆ

ಹಿಂದೆ ಸರಿಯದಿರು
ಮೊಟ್ಟೆ ಮರಿಯಾಗಿ ಹಾರಾಡಲು
ತಾಯಿ ಅಪ್ಪುಗೆಯ ಕಾವು ಬೇಕೇ ಬೇಕು
ಅದಕೆ ತಾಯಿ ಮಗುವ ಅಗಲಿಸಿ
ಶಾಪಕೆ ಗುರಿಯಾದೀಯ ಜೋಕೆ!

ಬೆಸೆದ ಕೊಂಡಿ
ಸರಪಳಿಗೆ ಹೊಸಕೊಂಡು
ಹೊಸೆದುಕೊಂಡಂತೆ ಹಳೆಕೊಂಡಿ
ಕಾಲಾನುಕ್ರಮದಲ್ಲಿ ಸವೆಯುತ್ತ
ಸವೆಯುತ್ತಾ ತಾನೆ ಕಳಚಿಕೊಳ್ಳುತ್ತ ಹೋಗುವುದಲ್ಲವೇ ?
ಹೊಸಕೊಂಡಿಗಲ್ಲಿಯ ತನಕ
ಕಾಯುವುದು ಕಷ್ಟಕರ;
ಅದಕಾಗಿ, ಸವೆಯದ
ಹಳೆಕೊಂಡಿಯ ಏನಾದರೂ
ಮಾಡಿ, ಎಂತಾದರೂ ಗೈದು
ಕಳಚಿ ಒಗೆಯಬೇಕು ದೂರ
ಅದರಿದ್ದರದು ಸುಮ್ಮಸುಮ್ಮನೆ
ಗಳಗಳ ಸದ್ದು, ಆ ಸದ್ದು
ನಮಗೆ ಅತ್ತ ಸದ್ದಿನಂತಾಗಿ
ಜಣ ಜಣವೆನಿಸುವ
ನಮ್ಮ ಸದ್ದಿನ ಸುದ್ದಿ ಇಲ್ಲದಂತೆ
ಅದರ ಇಂಪ ಸವಿಯದಂತೆ
ಬಂದೆ ನಾದವ ಮಾಡಿ
ನೂಪುರ ಸದ್ದಿನಂತ ನಮ್ಮ
ಇಂಪಾದ ಜಣಜಣಿಕೆಗೆ
ಸುಮ್ಮ ಸುಮ್ಮನೆ ಅಡ್ಡಿಯ
ಒಡ್ಡಿ, ಕಡ್ಡಿ ಗೀರಿದಂತೆ
ಮಾಡಿ ಸುಡುವುದು
ಅದಕಾಗಿ ಅದ ಕತ್ತರಿಸಿ
'ಕಿತ್ತೊಗೆಯುವುದೇ ಮೇಲು'
ಎಂದಿತು ಹೊಚ್ಚ ಹೊಸದಾಗಿ
ಬೆಸೆದ ಕೊಂಡಿ ॥

## ೪. ಓ ಭಾರತೀಯ ಹೆಣ್ಣೆ ....

ಓ ಹೆಣ್ಣೆ! ನಿನಗೆಂತಹ ಬಿರುದು ಬಾವಲಿಗಳು
ಮಾತೆ, ಗೃಹಲಕ್ಷ್ಮಿ, ಸಹನೆಯಲಿ ಭೂತಾಯಿ
ಎಂಬ ಪ್ರಶಂಸೆಗಳಿಗೆ ಮರುಳಾಗುತ್ತಾ
ಹೊಗಳಿದವರ ತುಳಿತಕ್ಕೆ ಒಳಗಾಗಿ ಬಸವಳಿದು ಬೆಂಡಾದೆ
ಚಂದದಾ ಮಾತಾಡಿ, ಸ್ವಚ್ಛಂದದಿಂದ ಶೋಷಿಸಿದರು ನಿನ್ನ
ಆದರೂ ಎಚ್ಚೆತ್ತುಕೊಳ್ಳದಿರುವಿ ಏಕೆ?
ಬೇರೆಯವರ ಅನುಭವದಿ ಪಾಠ ಕಲಿಯಲು ಬಾರದೆ ನಿನಗೆ?
ನಿನ್ನಂತೆ ಹಿಂದಿನಿಂದಲೂ ತುಳಿತಕ್ಕೆ ಒಳಗಾದವರು
ಎಲ್ಲೆಡೆ, ಎಲ್ಲರೂ ವಂಚಿತರಾಗಿ ಬದುಕಿದವರು
'ಶೂದ್ರ', 'ದಸ್ಯು', 'ದಲಿತ' ಎಂದು ಹೀನಾಯಗೊಂಡಿದ್ದವರು ।

ಬಿದ್ದು ಮಲಗಿದ್ದವರೆದ್ದು ನಿಂತಿಹರಿಂದು
ತುಳಿದವರ ಕಾಲನ್ನೇ ಕಚ್ಚುವ ಮಿಡಿನಾಗರವಾಗಿಹರು
ತಮ್ಮ ತುಳಿದವರ ತಲೆಮೆಟ್ಟಿ ನಡೆಯುತಿಹರು
ಬೀಸುವ ಬಿರುಗಾಳಿಯಾಗಿ ಸುರಿವ ಅಬ್ಬರದ ಮಳೆಯಾಗಿ
ಎಸಗಿದ ಅನ್ಯಾಯಕ್ಕೆ, ಬಸವಳಿವಂತೆ ಮಾಡುವೆವೆಂದು
ಪಣತೊಟ್ಟು ನಿಂದಿಹರು ।

ಹಳೆಯ ಕೊಳೆಯನೆಲ್ಲಾ ತೊಳೆಯುವೆವೆಂದು
ಮೈಕೊಡವಿ ನಿಂದಿಹರು, ಮೈದುಂಬಿ ನಡೆಯುತಿಹರು
ಅವರ ನೋಡೊಮ್ಮೆ, ನೋಡಿಯಾದರೂ ಎದ್ದೇಳು, ಮುನ್ನುಗ್ಗು
ನಿನ್ನ ತುಳಿದವರ ಬಗ್ಗು ಬಡಿದು, ಸಗ್ಗ ಮಾಡಿಕೋ ನಿನ್ನ ಜೀವನವ
ಓ ಭಾರತೀಯ ಹೆಣ್ಣೆ! ಮುಗಿಯಲಿಲ್ಲವೇ ಇನ್ನೂ ನಿನ್ನ ನಿದ್ದೆ ?
ಬುದ್ಧ, ಬಸವ, ಗಾಂಧಿ ಬಂದು ಹೋದರೂ, ಎಚ್ಚರಾಗಲಿಲ್ಲವೇ ನಿನಗೆ?
ಈಗಲಾದರೂ ಮೇಲೇಳು ಇನ್ನೂ ತಡವಾಗಿಲ್ಲ
ಹೇಡಿತನವ ಹೊಡೆದಟ್ಟಿ ಹೊರಗೆ ಬಾ
ನಿನ್ನ ಅಕ್ಷಿಗಳಲಿ ನೀರ ತರಿಸಿದವರ ಕಣ್ಣಲ್ಲಿ, ನೆತ್ತರು ಬಸಿವಂತೆ ಮಾಡು ಬಾ

ಏನೆಂದೆ? ನಾನೊಲ್ಲೆ ಎನ್ನುವೆಯಾ?
ಅದೆಲ್ಲಾ ಒಳಿತಲ್ಲವೆನ್ನುತಿಹೆಯಾ?
ದೂಡಿ, ಕಾಡಿ, ನಿನ್ನ ಕಣ್ಣೀರ ಕೋಡಿ ಹರಿಸಿದವರನೇ
ಬೇಡಿಕೊಂಡು ಬದುಕಬೇಕೆಂದು ಬಗೆದಿರುವೆಯಾ?
ನೀನೊಬ್ಬ ಹೇಡಿ! ನಿನ್ನ ಮೂರ್ಖತ್ವಕ್ಕೆ ಕೊನೆ ಇಲ್ಲ.

'ಇಲ್ಲ, ನಾ ಮೂರ್ಖಳಲ್ಲ ನನ್ನ ನಿಲುವೇ ಜಗದ ಬಲವು
ಮಿಗೆ ಶಾಂತಿಯಾ ಜಲವು ನನಗೇಕೆ ಸೇಡು? ನನಗೇಕೆ ಛಲ?
ಬರಲಿಹುದು ಹೊಸ ಬದುಕು, ಮೂಡಿಹುದು ನವ್ಯ ವಿಚಾರ ಧಾರೆ
ಸಮಾಜ ನಿಂತ ನೀರಲ್ಲ, ಹರಿವ ಹೊಳೆಯಹುದು
ಕಾಲವೇ ಸರಿಗೊಳಿಸುವುದೆಲ್ಲವನು, ಇದಕೆ ಸಂಶಯವಿಲ್ಲ,
ಶತಮಾನಗಳ ಶೋಷಣೆ, ಅಂದಂದಿನ ಯುಗಧರ್ಮದ ಶಾಪ
ಇಂದು ರಾಜಕಾರಣಿಗಳ, ಕುತಂತ್ರಿಗಳಿಂದ ಶೋಷಣೆ ನಡೆಯುತಿರುವಂತೆ
ಅಂದಿನ ಸ್ಥಿತಿಗೆ ಇಂದೇಕೆ ಕೇಡು? ........ ಸೇಡು ?

ಯಾರೋ ಮಾಡಿದರೆ ಮತ್ಯಾರನ್ನೋ ಹೀಗಳೆವುದೇ?
ಹೊಸ ಕಾಲ ಬಂದಿಹುದು; ಹೊಸ ದೃಷ್ಟಿ ತಳೆದಿಹುದು ಜನತೆ
ಪೂರ್ಣ ಪರಿಣಾಮಕೆ ಬೇಕಾಗಬಹುದು ಕೆಲಕಾಲ
ಆದರೂ ಸುದಿನಗಳು ಬರುವುದಕೆ ತಡವಿಲ್ಲ
ಸೇಡ ತೀರಿಸ ಹೊರಟೆನಾದರೆ ಆ ದಳ್ಳುರಿಯಲ್ಲಿ
ಕೆಡುಕಿನೊಡನೆ ಒಳಿತೂ ಹೋದಾವು ಉರಿದು, ।
ಬೆಂಕಿ ಬಿದ್ದಾಗ ಅವರೇನು, ನಾವೇನು ಎಲ್ಲರೊಂದಾಗಿ
ಸುಟ್ಟು ಕರುಕಾದೇವು!

ಅದಕಾಗಿ ಎಲ್ಲರೊಡನೆ ಸಹನೆ ತೋರಿಸಿ ಸಹಬಾಳ್ವೆ ನಡೆಸಿ
ತಮ್ಮ ತಪ್ಪನು ತಾವೇ ಅರಿವಂತೆ ಮಾಡಿ,
ಅವರೇ ನಾಚಿಕೊಳ್ವಂತೆಸಗ ಬೇಕೆಂದಿರುವೆಯಾ?
ಅಂತು ಮಾಡಿದೊಡೆ ಅಂದು ಕಣ್ಣಲಿ ನೀರ ತರಿಸಿದವರು,
ಇಂದು ಆನಂದ ಭಾಷ್ಪ ಸುರಿವಂತೆ ಮಾಡಿಯಾರೆಂಬ ನಿನ್ನ
ನಂಬುಗೆಯಲ್ಲಿ ನನಗೂ ಏಕೋ ವಿಶ್ವಾಸ ಮೊಳೆಯುತ್ತಿದೆ
ಹೌದು ನೀ ಬಗೆದಂತೆ 'ಕಾಲ'ವೆಲ್ಲವ ಸರಿಗೊಳಿಪಲ್ಲಿ ಸಂಶಯವಿಲ್ಲ
ನಿನ್ನ ಜಾಣ್ಮೆಗೆ, ನಿನ್ನ ತಾಳ್ಮೆಗೆ, ನಿನ್ನ ದೂರಾಲೋಚನೆಗೆ
ಯಾವ ಬಹುಮಾನ ಕೊಟ್ಟು, ಸನ್ಮಾನಿಸಲಿ, ಏ ಭಾರತೀಯ ಹೆಣ್ಣೇ!

## ೫. ಅಂಜದಿರು ಮೌಲ್ಯವೇ

ಮೌಲ್ಯವೇ ಮಾನವ ಸಮಾಜದ ಜೀವಾಳವೇ
ಎಲ್ಲಿ ಕುಳಿತಿರುವೆ ಅವಿತು ನೀನು?
ಸೌಜನ್ಯತೆಯ ಮುಖ ತೊಟ್ಟ ದುರ್ಯೋಧನರ
ನಯವಂಚನೆಗೆ ಬೆದರಿ, ಬದಿಗೆ ಸರಿದಿಹೆಯಾ?
ಎಲ್ಲಿ ಅಡಗಿರುವೆ ನೀನು? ನೀ ಹೆದರದಿರು
ನೀ ಹೆದರಿದರೆ ನಾವುಳಿವುದೆಂತು?
ನಿನ್ನ ಮಾತು ಒಮ್ಮೊಮ್ಮೆ ನಯವಿಲ್ಲೆಂದು
ಒಳಗೆ ಹಾಲಾಹಲ ತುಂಬಿಕೊಂಡು ಹೊರಗೆ
ಹಾಲಿನಂತಹ ಮಾತಿನಲಿ ವಂಚಿಪ ರಾವಣ ಸನ್ಯಾಸಿಗಳ
ವಂಚನೆಗೆ ಬೆರಗಾಗಿ ಹೌಹಾರಿದೆಯಾ?
ಅಂಜದಿರು, ನೀ ಅಂಜಿದರೆ ನಾವುಳಿವುದೆಂತು?

ವಂಚಕರು, ದ್ರೋಹಿಗಳು, ಕುಟಿಲ ನೀತಿಯಲಿ ಪ್ರವೀಣರು
ನಯ, ನೀತಿ, ಪ್ರೀತಿ, ಭೀತಿ ಎಂಬ ಸೋಗಿನ ಮಾತಲಿ
ನಿನ್ನ ಮುಖಕೆ ಮಂಗಳಾರತಿ ಹಿಡಿಯುವರೆಂಬ ಅಳುಕೇ ನಿನಗೆ?
ಮೌಲ್ಯವೇ ನೀ ಅಳುಕದಿರು
ನೀ ಅಳುಕಿದರೆ ಪಾಂಡವರಿಗೆಲ್ಲಿದೆ ಉಳಿಗಾಲ?
ಅಲ್ಲದೆ ಮೀರ್ ಸಾಧಕ, ಮಲ್ಲಪ್ಪ ಶೆಟ್ಟಿಗಳದೇ ಆದೀತು ಕಾರಭಾರ!

ಉಚ್ಛ್ವಾಸ-ನಿಶ್ವಾಸದಲಿ ಕುತಂತ್ರವನೆ ತುಂಬಿಕೊಂಡು
ಹಿಡಿದುಕೊಂಡು ಎಲ್ಲರನು ಶಕುನಿಯ ಕುತಂತ್ರದ ಹಿಡಿಯಲ್ಲಿ
ನಿನ್ನನೂ ವಂಚಕ ವಂಚಿಸಬಹುದೆಂದು,
ಕೈಗೊಂಡಿರುವೆಯಾ ಅಜ್ಞಾತವಾಸವನು ?
ಅದಕಾಗಿ ಮಲಗಿಹೆಯಾ ಮುಖವ ಮುಚ್ಚಿಕೊಂಡು?
ಮಲಗದಿರು, ನೀ ಮಲಗಿದರೆ ಸಜ್ಜನಕೆ ಗತಿ ಇನ್ನಾರು?

ನಿಜ, ಅನ್ಯಾಯ, ದ್ರೋಹ, ವಂಚನೆ, ಮೋಸ–ದ್ವೇಷಗಳು
ಹುಟ್ಟಿ ಬಂದಿಹವು ಜಗದೊಂದಿಗೇ,
ಅಂದಿನಿಂದಲೂ ಅವು ಬದುಕಿ ಉಳಿದಿಹವೆಂಬುದು ಸುಳ್ಳಲ್ಲ
ಮುಂದೂ ಬದುಕುವವು, ಸಾಯುವುದಿಲ್ಲ।
ಅದಕಾಗಿಯೇ ನೀನಿರಲೇಬೇಕು, ಮಾರಾಯಾ
ನೀನಿಲ್ಲದಿರೆ, ತಂತ್ರ–ಕುತಂತ್ರಗಳ, ವಂಚನೆ–ಸಂಚುಗಳ
ಮೋಸ–ದ್ವೇಷಗಳ ಮೇಲಾಟದಲಿ
ಒಳ–ಹೊರಗೆ ಒಂದಾಗಿ ನುಡಿವ, ನಡೆವ, ಬರೆವ,
ನಯ ವಂಚಕತನವಿರದ ಹರಿಶ್ಚಂದ್ರ–ಧರ್ಮರಾಯರ ಗತಿ ಏನು?
ನೀನೇ ಹಿಂದೆ ಸರಿದರೆ, ಅವರ ಬೆನ್ನಹಿಂದೆ ನಿಲ್ಲುವವರು ಯಾರು?
ಸಜ್ಜನಿಕೆ, ಸೌಜನ್ಯ, ವಿಶಾಲತೆಗಳನೆಲ್ಲಾ ಒಡಗೊಂಡ ಮೌಲ್ಯವೇ
ಮುಸುಕು ಸರಿಸಿ, ಸಂಕೋಚವ ಬದಿಗಿಟ್ಟು
ಗಾಬರಿಯ ಬಿಟ್ಟು, ಧೀರನಂತೆ ಹೊರಗೆ ಬಾ
ನೀ ಬಂದು ಗಟ್ಟಿಯಾಗಿ ನಿಂತರೆ ಕುತಂತ್ರದ ಮುಖವಾಡ ಕಳೆಯಬೇಕು!
ಬಿಂಕದ ಮಾಯಾ ಜಿಂಕೆಯ ಗುಟ್ಟು ರಟ್ಟಾದೀತು!
ಮೋಸಗಾರಿಕೆ ಮೌನ ತಾಳೀತು!
ಅನ್ಯಾಯ ಮುಕ್ಕೀತು ಮಣ್ಣು!
ದಕ್ಕೀತು ನ್ಯಾಯ! ಉಳಿದೀತು ಜೀವ!
ಈ ಸಮಾಜದಲಿ............. ಈ ವಿಶ್ವದಲ್ಲಿ।

ಮೌಲ್ಯವೇ ಮುನ್ನುಗ್ಗಿ ಬಾ ಬಿಡು ನಿನ್ನ ರಾಮ ಬಾಣ
ಸುಳ್ಳು ಸತ್ತು ಹೊರಬರಲಿ ನಿಜ ಸ್ವರೂಪ
ಆಗ ಅಪಮೌಲ್ಯ ಬದುಕಿದರೂ ಸತ್ತಂತೆ
ಸಾಯುವುದಿಲ್ಲೆಂದು ಚೀರಿದರೂ ನಾಶವಾದಂತೆ
ಬಾ ಮಹಾರಾಯ, ನೀ ಅಂಜಬೇಡ,
ಅಳುಕಬೇಡ, ತಡ ಮಾಡಲೂ ಬೇಡ
ನೀ ಮುಂದೆ ಬಂದರೆ ಮಾತ್ರ ಸತ್ಯಕುಂಟು ಉಳಿವು.
ಈ ಸಮಾಜದಲಿ............. ಈ ಜಗತ್ತಿನಲ್ಲಿ।

■

## ೬. ತಂಗಿಗೊಂದು ಹರಕೆ

ತಂದಿಹೆನಿಂದು ಹಿರಿಹರಕೆಯನೊಂದು
ತಂಗಿಯೆ, ನಿನಗೆ ತಂದಿಹೆನಿಂದು ಹಿರಿಹರಕೆಯನೊಂದು
ಐವತ್ತು ನೂರಾಗಲಿ ಎಂದು, ಕೊರತೆಯೇ ಇಲ್ಲದ ಬಾಳು ನಿನ್ನದಾಗಲಿಎಂದು
ಮನೆಗೆ ಮುತ್ತಾಗಿ, ಎಲ್ಲರೊಳೊಂದಾಗಿ, ಮನೆಯೊಡೆಯದೆ
ಮನೆಗೆ ಮಾಣಿಕವಾಗಿ ಎಲ್ಲರ ಕಣ್ಮಣಿಯಾಗುವ
ಸೊಸೆ ಬಂದು ನಿನ್ನ ಬಾಳು ಬೆಳಗಲಿ ಎಂದು ॥

ಮತ್ತೊಂದ ಆಶಿಸುವೆನು ಇಂದೆ,
ನಿನ್ನ ಮುದ್ದಿನ ಮೊಮ್ಮಕ್ಕಳು ಮುಂದೆ ಬರಲಿ ಎಂದು
ಅವರ ಪ್ರೀತಿಯು ಸತತ ನಿನಗೆ ದೊರೆಯಲಿ ಎಂದು
ಯಾವ ಕಲ್ಲು-ಮುಳ್ಳೂ ನಿನ್ನ ಹಾದಿಯಲಿ ಹರಡದಿರಲಿ ಎಂದು.
ಅಳಿಯಂದಿರು ಹಡೆದ ಮಕ್ಕಳಂತಿರಲಿ ಎಂದು,
ಮಕ್ಕಳೆಲ್ಲರ ಸುಖ ಅನವರತ ಇರಲಿ ಎಂದು,
ಪ್ರೀತಿಯಿಂದೆಲ್ಲರೂ ನಿನಗೆ ತಲೆಬಾಗುವಂತೆ ನೀ ಬಾಳೆಂದು
ಮರಿಮಕ್ಕಳ ಸುಖವನೂ ನೋಡಲು ನೀನಿರುವಂತಾಗಲೆಂದು

ಇದೆಲ್ಲದರ ಹಿಂದೆ, ಬೆನ್ನೆಲುಬಾಗಿ ನಿಂದ, 'ಸದಾಶಿವನ' ಒಲುಮೆ ಇರಲಿಎಂದು
ಜೀವನದುದ್ದಕ್ಕೂ ನಿನ್ನೊಡನೆ ಅವರಿರಲಿ ಎಂದು
ನಿಮ್ಮೀರ್ವರೊಲವು ಒಬ್ಬರಿಗೊಬ್ಬರಿಗೆ ರಕ್ಷೆಯಾಗಲಿ ಎಂದು
ಪರಮಾತ್ಮನಲಿ ಭಕ್ತಿಯಿಂದ ಪ್ರಾರ್ಥಿಸುವೆನು ಇಂದು
ನಿನ್ನ ಹಿತೈಷಿ ಅಕ್ಕ,
(ತಂಗಿ ಸುಕನ್ಯೆಗೆ ಐವತ್ತು ತುಂಬಿದ ಸಂದರ್ಭದ ಹರಕೆ)

■

## ೭. ಕೆಸರಿನ ಕಮಲ – ಕೆಲಸದ ಲಕ್ಷ್ಮಿ

ಹುಡಗಿ ಎಲ್ಲಾ ಸರಿ, ಬಣ್ಣ ಮಾತ್ರ ಕರಿ
ಎಂದು, ಬಣ್ಣದ ಸಲುವಾಗೇ ಎನಿತು
ಹುಡುಗಿಯರು ವರನಿಗಾಗಿ ಕಾಯುತ್ತಾ ಬೇಯುತ್ತಿಹರು

ನನಗೂ, ಕರಿಬಣ್ಣ, ಹುಡುಗಿಗೊಂದು
ಕೊರೆ ಎನ್ನಿಸಿತ್ತು, ಆದರೆ ಕೆಲಸದ
ಲಕ್ಷ್ಮಿಯ ಕಂಡಾಗ ಅವಳ ಚಲುವಿನಲ್ಲಿ
ಕರಿ ನನಗೆ ಕಾಣಿಸಲೇ ಇಲ್ಲ ॥
ಅಳತೆ ಮಾಡಿ ಸೃಷ್ಟಿಸಿದಂತಹ ನೀಳದೇಹ
ಆದರೆ ತಕ್ಕ ಮೈ ಕಟ್ಟು ।
ಮುತ್ತಿನಂತಹ ಹಲ್ಲುಗಳು
ಮಿಂಚುವಾ ಕಂಗಳು, ಕರಿಯನ್ನು
ಮರೆಯಾಗಿಸಿ, ನೋಡುವವರು ಮತ್ತೊಮ್ಮೆ
ತಿರುಗಿ ನೋಡುವಂತೆ ಮಾಡಿಹವು
ಇದೆಲ್ಲಕಿಂತ ಹೆಚ್ಚಾಗಿ, ಅವಳ ಹರೆಯದ ಹುಡುಗತನ
ಅದಕೆ ಪುಟವಿಟ್ಟಂತೆ ಉತ್ಸಾಹದ ಚೇತನ,
ಸದಾ ತುಟಿಯಲಿ ಮಿನುಗುವ ಮುಗುಳ್ನಗು,
ಎಲ್ಲರ ಕಣ್ಣಲಿ ಮೂಡಿಸಿದೆ ಬೆರಗು
ಕೆಸರಲಿ ಕಮಲ ಹುಟ್ಟುವುದಿಲ್ಲವೆ ಹಾಗೆ
ಗುಡಿಸಲಿನಲಿ ಹುಟ್ಟಿಬಂದಿಹಳು ಕೆಲಸದಾ ಲಕ್ಷ್ಮಿ
ಎಂದುಕೊಂಡು ಕೇಳಿದೆನವಳ
'ಹೇಳ ಸುಖಮಯ ಜೀವನದ ಕಥೆಯ'..........
ಆಗ ತಿಳಿಯಿತು, ಅವಳಿಗಿಲ್ಲ ತಾಯಿಯು
ಬಾಲ್ಯದಲ್ಲೆ ಆಗಿತ್ತವಳಿಗೆ ಮದುವೆಯು
ಕುಡುಕ ಗಂಡನೊಡಗೂಡಿ, ಉರುಳಿದವು ವರ್ಷಗಳು
ನಂತರ ಬಂದಿತು ಉಪವಾಸ, ವನವಾಸ
ತಣ್ಣೀರು ಬಟ್ಟೆ ಬೇಡವಾಯ್ತು ಹೊಟ್ಟೆಗೆ

ಒಂದು ದಿನ ತವರಿಗೆ ಬಂದು ಬಿಟ್ಟಳು
ವ್ಯಸನಿ ಗಂಡಗಿಂತ ಮಲತಾಯಿ
ಎಂದು ಬಂದು ಬಿದ್ದಳವಳ
ಹೊಟ್ಟೆಗಾಗಿ ಬಟ್ಟೆಗಾಗಿ ಮಾಡುತಿಹಳು
ಅವರಿವರ ಮನೆಯ ಕಸ-ಮುಸುರೆ
ಇವೆಲ್ಲಾ ನಗು ಮುಖದ ಹಿಂದಿರುವ ನೋವು
ಒಳಗೆಲ್ಲಾ ಕತ್ತಲೆ, ಮನವೆಲ್ಲ ಬತ್ತಲೆ
ಆದರೆ ನೋಡಿದವರಿಗೆ ಕಾಣಿಸುವುದು
ಲಕ್ಷ್ಮಿಯ ಹಸನ್ಮುಖ ।

ಈ ದೊಡ್ಡಪಾಠ ಕಲಿತರೆಷ್ಟು ಚೆನ್ನ
ವಿಚಿತ್ರ ಮಾನವಜೀವನ
ಈ ಜೀವನ ಶಾಶ್ವತವಲ್ಲ,
ಅಷ್ಟೆ ಏಕೆ?
ಈ ಜೀವವೇ ನಶ್ವರವಲ್ಲವೇ ।
ಈ ಮಾತು ನೂರಕ್ಕೆ ನೂರು ಸತ್ಯ ॥
ಆದರೂ, ಜನರು
ಸೊಕ್ಕಿ ಮೆರೆಯುತಿಹರು ದಿನನಿತ್ಯ
ಅಣ್ಣನಿಗೆ ಮೋಸಮಾಡಿದ ತಮ್ಮ ಇಲ್ಲಿ,
ತಮ್ಮನನೇ ಕೊಂದ ಅಣ್ಣ ಅಲ್ಲಿ ।
ಸೊಸೆಯರ ಹುಟ್ಟಡಗಿಸಿದ ಅತ್ತೆಯರಿಗೆ ಲೆಕ್ಕವಿಲ್ಲ
ಅತ್ತೆಯನು ಕತ್ತೆಗಿಂತ ಕಡೆಯಾಗಿ ಕಂಡ ಸೊಸೆಯರಿಗೇನು ಕೊರತೆ ಇಲ್ಲ
।

ತಾಯಿ-ತಂದೆಯರನೇ ಆಳುಗಳಂತೆ
ನಡೆಸಿಕೊಂಡ ಮಕ್ಕಳೂ ಅಪರೂಪವೇನಲ್ಲ ।
ಮಕ್ಕಳ ದುಡಿತದಿ ಮಜ ಮಾಡುವ
ತಂದೆ ತಾಯಿಯರು ವಿರಳವಾದರೂ
ಇಲ್ಲವೆಂದೇನಲ್ಲ ॥
ಬಂಧುಗಳಿಗೆ, ಸ್ನೇಹಿತರಿಗೆ, ಸಹೋದ್ಯೋಗಿಗಳಿಗೆ
ನೆರೆ-ಹೊರೆಯವರಿಗೂ ಈ ಪುಂಡ ಮಾನವ
ಕಂಡಕಂಡಂತೆ ಗೋಳಾಡಿಸುವನು
ಈ ಮಾನವರೆಲ್ಲಾ ಈ ಬದುಕು ಮೂರು
ದಿನದ ಆಟವೆಂಬುದ ಮರೆತು ಬಿಡುವರಲ್ಲಾ

■

## ೮. ಜೀವನ ಜೀ...ವ...ನ

ಕೆಲವರಿಗೆ ಬಾಳು ಬರಿಯ ಗೋಳಾದರೆ
ಹಲವರಿಗೆ ಇದೊಂದು ಘನಘೋರ ಹೋರಾಟ
ಮತ್ತೆ ಕೆಲವರಿಗೆ ಸುಮಧುರ ಸಂಗೀತ
ಇತಿಹಾಸ ಮಾಡಿಕೊಂಡವರನೇಕರು
ಹೀಗೆ ವೈವಿಧ್ಯಮಯ ಜೀವನ
ಬೇಕಿರಲಿ, ಬೇಡದಿರಲಿ, ಜಾಣರಿರಲಿ
ದಡ್ಡರಿರಲಿ, ಅದರ ಪಾಡಿಗದು
ಸುರುಳಿಯ ಬಿಚ್ಚಿ ಹರವುತ್ತಾ
ಹೋಗುವಾಗ, ಬೇಕಾದುದು, ಬೇಡವಾದುದು
ಸಹಿಸುವಂತಹುದು, ಆಗಲಾರದುದೆಲ್ಲವೂ
ಮೈದೋರುವುದು,
ಅದು ಜೀವನ ಅದರಮೇಲೆ
ಉರುಳುತ್ತಾ ಹೋಗುವಾಗ ಕೆಲವು
ಸಾರಿ ಮುಳ್ಳುಗಳು ಚುಚ್ಚಿದರೆ,
ಬಹಳ ಸಾರಿ ವೆಲ್ವೆಟ್ಟಿನ ಮೇಲುರುಳಿದ
ಅನುಭವ. ಮತ್ತೆ ಈ ಮಗ್ಗುಲಿಗೆ
ಹೊರಳಿದಾಗ ತಗ್ಗು ತಿಟ್ಟುಗಳ ಮೇಲೆ
ದಿಂಡುರುಳಿದಂತೆ, ಉರುಳುತ್ತಲೇ
ಇರಬೇಕು ಬೇಡದಿದ್ದರೂ,
ಕಡೆಗೆ ಮೈ ಜಡ್ಡುಗಟ್ಟಿ, ಎಂತಹದಿದ್ದರೂ
ಉರುಳಲು ಸಿದ್ಧವಿದ್ದಾಗ
ತಗ್ಗಿನೊಳಗೆ ಉರುಳಿ, ಮುಂದೆ
ಉರುಳಲು ಸಾಧ್ಯವಿಲ್ಲದೆ, ಅಲ್ಲೇ ಕೊನೆಯಾಯ್ತು ..........ಜೀವನ ॥

■

## ೯. ಎಲ್ಲಾಲಿಂಗನು ಎಲ್ಲಿಹನವ್ವ (ವಚನ)

ಇಷ್ಟಲಿಂಗನು ಎಲ್ಲೂ ಇಹನು
ಯಲ್ಲಾಲಿಂಗನು ಎಲ್ಲಿರುವನವ್ವಾ?
ಅವನೆಲ್ಲೆಲ್ಲೂ ಇರುವನೆ ಅವ್ವ
ಅವನ ಕಾಣುವ ಕಣ್ಣು ನಿನಗಿರಬೇಕವ್ವಾ
ಅವನು ಬರೀ ಯಲ್ಲಾ ಲಿಂಗನಲ್ಲವ್ವಾ
ಅವನಾಗಿಹನು ಎಲ್ಲರ ಲಿಂಗನವ್ವಾ
ಇದು ಸುಳ್ಳಲ್ಲ ಹೊರನಾಡ ಅನ್ನಪೂರ್ಣೇಶ್ವರಿಯವ್ವಾ ॥

ಮಗುಳುಖೋಡದಿ ಮುಗುಳುನಗೆ ಬೀರುತಿಹನವ್ವಾ
ಅಳುತ್ತಾ ಹೋದವರು, ನಗುತ್ತ ಬರುವಂತೆ ಮಾಡುವನವ್ವಾ
ಇವನಿಗೆ ಅಸಾಧ್ಯವೆಂಬುದೆ ಇಲ್ಲವವ್ವಾ,
ಭಕ್ತರನು ಕ್ಯಾನ್ಸರಿನಿಂದಲೂ ಮುಕ್ತ ಮಾಡಿಹನವ್ವಾ
ನಂಬಲಸಾಧ್ಯವಾದರೂ ಸುಳ್ಳಲ್ಲ, ಹೊ.ನಾಡ ಅನ್ನಪೂರ್ಣೇಶ್ವರಿಯವ್ವಾ॥

ಮುಗುಳಖೋಡದ ಸಿದ್ಧರಾಮನ ಪವಾಡ ಕೇಳಿಹೆ ಏನವ್ವಾ
ಇಲ್ಲದಿದ್ದರೆ ನೀನೇಹೋಗಿ ನೋಡಿಬಾರೆ, ಅವ್ವಾ
ವೈದ್ಯರ ಕೈಗೆ ಮೀರಿದುದೆಲ್ಲಾ, ಗುರು ಕರುಣೆಯ ಅಂಗಾರಕೆ
ಸಾಧ್ಯವಾಗಿಹುದವ್ವಾ
ಅದ ನೋಡಿದರೆ ನೀನು ಬೆರಳ ಕಚ್ಚುವೆಯವ್ವಾ
ಇದು ಅವರಿವರ ಮಾತಲ್ಲವ್ವಾ
ಅನುಭವಿಸಿದವರು, ಉಸುರಿದ ನಿಜಸಂಗತಿಯವ್ವಾ
ಇದು ಸುಳ್ಳಲ್ಲವ್ವ, ಹೊರನಾಡ ಅನ್ನಪೂರ್ಣೇಶ್ವರಿಯವ್ವಾ ॥

ಕುಡಿತದ ಚಟವನನೇಕರು ಬಿಟ್ಟಿಹರವ್ವಾ
ಸ್ವಾಮಿಯ ಕರುಣೆಯಲಿ, ಕಾಲುಶತಮಾನ

ಕಳೆದು ತಾಯಿಯಾಗಿಹರವ್ವಾ
ಹುಟ್ಟಿನಿಂದಲೇ ಕಿವಿಯೇ ಇಲ್ಲದ ಕಿವುಡಿಗೆ
ಕಿವಿ ಕೇಳುವಂತೆ ಮಾಡಿಹನವ್ವ
ಇದು ಸಟೆಯಲ್ಲ ದಿಟವವ್ವಾ ಹೊರನಾಡ ಅನ್ನಪೂರ್ಣೇಶ್ವರಿಯವ್ವಾ ॥

ಅವನ ಕರುಣೆಗೆ ನಿನ್ನ ಭಕ್ತಿ ಮಾತ್ರ ಬೇಕವ್ವಾ
ಭಕ್ತಿಯೊಂದಿದ್ದರೂ, ಮಾತನಾಡದಿದ್ದರೂ ನಿನ್ನ
ನೋವ ತಿಳಿದುಕೊಳ್ಳುವನವ್ವಾ, ಎದುರೇ
ಹೇಳುವನವ್ವಾ, ಇಲ್ಲದಿರೆ, ಕನಸಲಿ ಬಂದು
ಪೂರೈಸುವನವ್ವಾ, ಇದು ಖಂಡಿತಾ ನಿಜವವ್ವಾ
ಬೇಕಾದರೆ ಕನಸ ಬಿದ್ದವರನೆ ಕೇಳಿ ನೋಡವ್ವಾ
ಹೊರನಾಡ ಅನ್ನಪೂರ್ಣೇಶ್ವರಿಯವ್ವಾ ॥

ಭಕ್ತರ ನೋವವನಿಗೆ ಗೊತ್ತಿರುವುದವ್ವಾ
ಅದಕೆ ಪರಿಹಾರ ಹುಡುಕಿಡುವನವ್ವಾ
ಅವನ ಮನವು ಬಹಳ ಮಿದುವವ್ವಾ
ಅವನಿಗೆ ನಿನ್ನ ನೋವ ನೋಡಲಾಗದವ್ವಾ
ಅದಕೇ ಬೇಗ ನೀ ನಗುವಂತೆ ಮಾಡಿ
ತಾನೂ ಮುಗುಳುನಗುತಿರುವನವ್ವಾ, ಇದು,
ಹೊರನಾಡ ಅನ್ನಪೂರ್ಣೇಶ್ವರಿಯವ್ವಾ ॥

■

## ೧೦. ಕರುನಾಡಾಗಿದೆ ಕುರಿಗಳಬೀಡು

ಕರುನಾಡ–ನಾಡು–ನುಡಿ–ಜನ
ಕರುನಾಡು ಕರಿಗಳ ನಾಡು,
ಚಲುವಿನ ಬೀಡು, ಅಲ್ಲಲ್ಲೆ ಹಸುರಿನ ಕಾಡು
ಇಲ್ಲಿಪ್ಪ ಕುಸುರಿನ ಕೆಲಸವ ಮಾಡಿ
ಹಾಕಿರುವುದು ಎಲ್ಲರಾ ಮನಕ್ಕೆ ಮೋಡಿ

ಕಸ್ತೂರಿ ಕರುನಾಡ ಕನ್ನಡ, ಕಲಿವುದಕೆ ಸುಲಭ,
ಉಲಿವುದಕೆ ಮಧುರ,
ಬರೆವುದಕೆ ನದಿನೀರು ಹರಿದಂತೆ,
ಹಾಡುವುದಕೆ ಇಂಪು, ಕೇಳುವುದಕೆ ತಂಪು ।

ಕವಿ, ಕಲೆಗಾರರು ತುಂಬಿಹರಿಲ್ಲಿ
ಸಂಗೀತ–ಸಾಹಿತ್ಯ ಹರಿಯುತ್ತ ಇರಲಿಲ್ಲ ?
ವೀರರ ಶೂರರ ಗುಡಿಗಳು ಇಹವಿಲ್ಲಿ
ರಾಷ್ಟ್ರಕ್ಕಾಗಿ ಹೋರಾಡಿದವರು ಹೋಗಿಹರಿಲ್ಲಿ ॥

ಆಗಿಹುದು ಅಂದಿನ ಸಿಂಹಗಳ ನಾಡು
ಇಂದು ಕುರಿಗಳ ಬೀಡು,
ಸ್ವಾರ್ಥಿಗಳ, ಆಲಸಿಗಳ ನೆಲೆವೀಡು,
ಒಳಗೊಂದು ಹೊರಗೊಂದಾಗಿ ಇರುವ ಪಾಡು ॥

ಇಂದು ಈ ನಾಡ ಕಾಡಲಿ ಸಿಂಹಗಳು ಮಾಯವಾಗಿ
ನರಿಗಳೇ ಮೆರೆಯುತಿಹವು ಸಿಂಹವಾಗಿ,

ನರಿ–ಕುರಿಗಳೊಂದಾಗಿ
ಕರುನಾಡಿನ ಭವಿಷ್ಯ ಮಸುಕಾಗಿ,
ಜನತೆ ಮಂಕು ಕವಿದು ನೀರವವಾಗಿ !
ಓ ಎನ್ನ ಕರುನಾಡ ತಾಯೆ
ಕನ್ನಡಿಗರ ಕಣ್ಮಣಿಯೆ
ದುರ್ಮುಖಿಯಲಿ ಸಾಮುಚಿಯಾಗಿ ಬಂದೆ,
ಬಹುಧಾನ್ಯ ಸಂವತ್ಸರದಿ, ದುಷ್ಕಾಲ ತಂದೆ,
ಏಕಮ್ಮಾ ನಿನಗಿನಿತು ಮನಿಸು
ನಿನ್ನ ಕಂದಮ್ಮಗಳ ಮೇಲೆ
ಮಾತೃದೇವೋ ಭವವೆಂಬ ಮಂತ್ರವ ಮರೆತು
ನಿನ್ನ ಖಂಡ–ತುಂಡು ಮಾಡುವ ಮಾತ
ಆಡುತಿಹೆವೆಂದು, ಕನಲಿ, ರೊಚ್ಚಿನಿಂದ
ಮಳೆಯಲಿ ಎಲ್ಲ
ಕೊಚ್ಚಿ ಹೋಗುವಂತೆ ಮಾಡುತಿಹೆಯಾ ಮಾತೆ? ॥

ಓ ಎನ್ನ ಕರುನಾಡ ಬಂಧುಗಳೇ
ಕನ್ನಡ ನಾಡ ಬಾಂಧವರೆ,
ಕನ್ನಡಾಂಬೆ ಭಾರತಾಂಬೆಯ ಪುತ್ರಿ,
ತಮಿಳು, ತೆಲುಗು, ಮಲೆಯಾಳ, ಬೇರಲ್ಲ
ಮಹಾರಾಷ್ಟ್ರ, ಬೆಂಗಾಲಿ, ಉರಿಯ, ಹಿಂದಿ
ನಮಗೆ ದೂರವಲ್ಲ, ಇವೆಲ್ಲಾ
ಭಾರತಾಂಬೆಯ ಪುತ್ರಿಯರ ಸೊಲ್ಲುಗಳು ॥

ಅಕ್ಕತಂಗಿಯರಲಿ ಭೇದಭಾವ ಬಿಟ್ಟು,
ಕೊಟ್ಟು–ತರುವ ಸ್ನೇಹವಿಟ್ಟು
ಅವರ ಬೆಂಗಾವಲಿಗೆ ನಾವು ನಿಂತು
ನಮ್ಮ ಬೆನ್ನ ಅವರು ಕಟ್ಟಿ
ಪ್ರೀತಿಯಿಂದ ಹೆಗಲಿಗೆ ಹೆಗಲುಕೊಟ್ಟು,
ಮುನ್ನಡೆಯೋಣ ಬನ್ನಿ
ಎಲ್ಲರೊಂದಾಗಿ ದುಡಿಯೋಣ ಬನ್ನಿ ॥

■

## ೧೧. ಮದುವೆಯ ಪವಿತ್ರ ಬಂಧನ

ಬಿಡಿಸಲಾರದ ಬಂಧನ
ಮದುವೆಯೆಂಬುದೊಂದು ಬಂಧನ
ಆಗ ಮದುಮಗ ಮದವಣಗಿತ್ತಿಯ
ಕೊರಳಿಗೆ ಬಿಗಿಯುವನು ತಾಳಿಯೆಂಬ ಬಂಧನ ।

ಆ ಸರಪಳಿಯ ಕೊಂಡಿ ಬಲವಾಗಿರೆ
ಅವರಿಬ್ಬರ ಬಾಳ ದೋಣಿಯ, ಸಂತೋಷ
ಸಾಗರ ದಾಟುವಂತೆ ಮಾಳ್ಪುದು,
ಇಲ್ಲದಿರೆ, ಕಣ್ಣೀರ ಕೋಡಿಯನ್ನೆ ಹರಿಪುದು.
ಗಂಡ ಪುಂಡನಾಗಿರೆ ಹೆಂಡತಿಯ
ಗೋಳಿಗಿಲ್ಲವು ಎಲ್ಲೆಯು,
ಹೆಂಡತಿ ಚಂಡಿಯಾಗಿರೆ ಗಂಡನ
ನೆಮ್ಮದಿಗೆ ಭಂಗವೆಂದು ಬಲ್ಲೆವು।
ಬೇಡಿಯೊಬ್ಬರನೆ ಬಂಧಿಸಿದರೆ
ತಾಳಿಯೆಂಬ ಬೇಡಿ ಬಂಧಿಸುವುದಿಬ್ಬರನು।
ಕಟ್ಟಿಸಿಕೊಂಡವಳು ಕಟ್ಟಾಣಿಯಾಗದೆ
ಭ್ರಷ್ಟಳಾದರೆ, ಕಟ್ಟಿದವನ
ಪಾಡು, ನಾಯಿ ಪಾಡು,
ಕಟ್ಟಿದವನು ದುಷ್ಟನಾದರೆ
ಕಟ್ಟಿಸಿಕೊಂಡವಳಿಗೆ ತಾಳಿಯೊಂದು ಬಿರುಗಾಳಿಯು

ಒಲವವರ ನಿಲುವಾದಾಗ ಆಗುವುದು
ಸಗ್ಗವವರ ಜೀವನ !
ಯಾರೊಬ್ಬರು ಅವಿವೇಕಿಗಳಾದರೂ
ಗೋಳಾಗುವುದವರ ಬಾಳ ಕವನ !

ಅಪರಾಧಿಯ ತಪ್ಪಿಗೆ ನಿರಪರಾಧಿ
ಸಹಿಸಬೇಕು ಉಪಟಳ!
ಅಸಹಾಯಕತೆಯಿಂದ ।
ಅನುಭವಿಸಬೇಕು ಕಿರುಕುಳ !
ದುಷ್ಟ ಸಂಗಾತಿಯ ಮರೆ–ಮೋಸದ,
ಪಟ್ಟುಗಳಲಿ ಸಿಕ್ಕಿಹಾಕಿಕೊಂಡು,
ಕುಟಿಲತೆಯ ಅರಿಯದ ಸಂಗಾತಿ,
ಪಟ್ಟುಗಳ ಬಿಡಿಸಿಕೊಳಲಾಗದೆ
ವಿಲಿ–ವಿಲಿ ಒದ್ದಾಡಿ, ತಿಣುಕಾಡುತ್ತಾ,
ಉರುಳಾಡುವಾಗ, ಬಹಳ ಸಾರಿ ಬೆನ್ನು
ನೆಲಕ್ಕೆ ಹತ್ತಿದಾಗ, 'ರೆಫರಿ' ಒಂದು
ಎರಡು, ಮೂರು ಎಂದಾಗ,
ತಂತ್ರಗಾರಿಕೆಗೇ ಜಯ. ಆದರೆ
ಯಾವಾಗಲೋ ಒಮ್ಮೆ, ಆಕಸ್ಮಾತ್ತಾಗಿ
ಪಟ್ಟಾ ಸಡಲಿ, ಮೂರು ಹೇಳುವ ಮೊದಲೇ
ಇವ ಎದ್ದು ನಿಂತಾಗ, ಬಿಗಿದ ಸರಪಳಿ
ಬಂಧನ ಸಡಿಲಾಗಿತ್ತು! ಅವ
ಹಾಕಿದ ಪಟ್ಟು, ಮರೆ–ಮೋಸದ್ದೆಂದು
ಎಲ್ಲರಿಗೂ ಗೊತ್ತಾಗಿತ್ತು ಬಿಡಿ!
ಬಿಡಿಸಿಕೊಳ್ಳಲಾರದ ಬಂಧನದ ಕೊಂಡಿ
ತಾನೇ ಬಾಯ್ಬಿಟ್ಟುಕೊಂಡಿತ್ತು ॥

■

## ೧೨. ಗೋವಿನಂಥ ಗಂಡ–ಗಯ್ಯಾಳಿ ಹೆಂಡತಿ

ಎಲ್ಲಿಯದೋ ಗಂಡಿನ ಮದುವೆ
ಎಲ್ಲಿಯದೋ ಹೆಣ್ಣಿನೊಡಲಾಗಿತ್ತು
ಒಬ್ಬರಿಗೊಬ್ಬರ ಪರಿಚಯವಿರದ
ಗಂಡು–ಹೆಣ್ಣು ಒಂದಾಗಿ ಜೀವಿಸಬೇಕಾಯ್ತು ॥

ಬಾಲೆ ಬೆಳೆದ ಪರಿ, ವಿಚಿತ್ರವಾಗಿತ್ತು
ಮರೆ–ಮೋಸ ಕೊಂಕುಗಳವಳ ಸಂಗಾತಿಗಳು
ಕುಟಿಲ–ಕುತಂತ್ರಗಳವಳ ಜೊತೆಗಾತಿಯರು
ಸುಳ್ಳು, ಸ್ವಾರ್ಥ, ಹೊಟ್ಟೆಯಕಿಚ್ಚು, ದ್ವೇಷಗಳೇ
ಅವಳ ಒಡೆಯರುಗಳು ।
ನಾಟಕ, ಕಣ್ಣೀರು, ಸುಳ್ಳು ಆರೋಪಗಳು,
ಕಪಟ, ಬೆನ್ನಲಿ ಚೂರಿ ಇಡುವ ಗುಣಗಳವಳ
ಅಂಗರಕ್ಷಕರು ।
ಇವರೊಡನಾಡಿಯಾದವಳಿಗೆ, ಪ್ರಾಮಾಣಿಕರು
ಸರಳ ಜೀವಿಗಳು, ಮಮತಾ ಮಯಿಗಳು
ವೈರಿಗಳು, ಇವರ ಹೆಸರಿಗೆ ಕೆಸರ
ಚಲ್ಲುವ ಕುಯುಕ ಯುಕ್ತಿಗಳು ಇವಳ
ಮುಖ್ಯ ಕೆಲಸಗಳು
ಹೊಟ್ಟೆಯ ಕಿಚ್ಚಿನ ಇವಳಿಗೆ ತನಗಿಂತ
ಬುದ್ಧಿವಂತರನು ಕಂಡರಾಗದು,
ರೂಪವಂತರು ಕಂಡರೆ ತನ್ನಿನಿಯನ ಕಣ್ಣಿಗೆ
ಕಾಣದಂತೆ ವಹಿಸುವಳು ಎಚ್ಚರ.
ಐಶ್ವರ್ಯದಲಿ ಮಿಗಿಲೆಂದು ತಿಳಿದರೆ
ದ್ವೇಷಿಸಿ ದೂರ, ಉಳಿವಳು
ಗುಣವಂತರೆಂದು ಗೊತ್ತಾದರೆ

ದೋಷಾರೋಪಣೆಯವರ ಬಗೆಗೆ ಮಾಡಿ, ಸಾಬೀತುಮಾಡುವಳು ಅವರು ದುಷ್ಟರೆಂದು

ಎಲ್ಲರಲಿ ದುಷ್ಟತನವನೆ ಅರಸುವಳು
ಎಲ್ಲರಲಿ ಕಪಟತನವನೆ ಕಾಣುವಳು
ಹೆರವರ ಹಳಿವಲ್ಲಿ ಖುಷಿಯಿಂದ ಪಾಲ್ಗೊಳ್ಳುವಳು
ಬೇರೆಯವರ ಒಳ್ಳೆಯ ಗುಣವ ವರ್ಣಿಸುವ
ಸ್ಥಳದಲ್ಲಿ ನಿಲ್ಲಲಾರಳು ಅವಳು. ಒಂದು ಕ್ಷಣ.
ಅದನು ಕೇಳಿದಾಗ ಮೀರುವುದೆ
ಲ್ಲೆಯನು ಅವಳ ಸಿಟ್ಟು
ಒಳ್ಳಿಯ ಮಾತಾಡಿದವರೊಡನೆ, ಮಾತಾಡದೆ
ಮುನಿಸಿಕೊಂಡು ದೂರ ಸರಿಯುವಳು,
ಒಳ್ಳೆಯ ಗಂಡನಿಗೆ, ಸಿಕ್ಕಾಗಲೆಲ್ಲಾ ಸವುಡು,
ಆತನಿಗೆ ಪ್ರಿಯರಾದವರ ಬಗೆಗೆ,
ಒಂದೊಂದೆ ಹೇಳಿ, ಹೇಳಿ
ಅವನ ಮನವನೆ ರಸಕಸೆಗೆ ಈಡು ಮಾಡಿ
ಅವನು ತನ್ನ ನಂಬಿಕೆ ಬದಲಾಯಿಸಿದಾಗಲೇ
ಅವಳಿಗೆ ದೊರೆವುದು ನೆಮ್ಮದಿಯು ॥

■

## ೧೩. ಚುಟುಕಗಳು – ಮೊಟಕುಗಳು :

೧

ಎಲೆ, ಎಲೇ ಬೇವರ್ಸಿ
ಮೊದಲೇ ಗುರುತಿಸಿದ್ದಾಳಲ್ಲ ನಿನ್ನರಸಿ!
ಮೊನ್ನೆ ನೀ ಪತ್ರಮುಖೇನ ಹಾಕಿದ ಬರೆ
ಅರವತ್ತೈದು ತುಂಬಿದುದಕ್ಕೆ ನಿನ್ನ ಉಡುಗೊರೆ ॥

೨

ಅಂದೇ ಕರೆದಿದ್ದಳು ನಿನ್ನ ಅರಸಿ
ಆದರೆ ಇಂದಾದೆ ನೀನು ನಿಜವಾಗಿ ಬೇವರ್ಸಿ,
ಅಂದೂ ಅಣ್ಣ ತಮ್ಮಂದಿರು
ಅಕ್ಕತಂಗಿಯರು ಇಲ್ಲದಿದ್ದರೂ
ಅಪ್ಪ–ಅಮ್ಮ ಇದ್ದುದರಿಂದಾಗಿರಲಿಲ್ಲ ಬೇವರ್ಸಿ,
ಇಂದು ಅವರ ಕಳಕೊಂಡೆಯಾಗಿಯಾದೆ ನಿಜಕು ಬೇವರ್ಸಿ ॥

೩

ಅಂದೇ ನಿನ್ನ ಹೆಂಡತಿ ಗುರುತಿಸಿದಳಲ್ಲ ನೀನು
ಬೇವರ್ಸಿ ಎಂದು
ನನಗೂ ತಿಳಿದಿರಲಿಲ್ಲ ಅಂದು, ಗೊತ್ತಾಯ್ತು ಇಂದು
ಆದರೆ ಖಂಡಿತಾ ನೀನು ಬ್ಯಾಸ್ಟರ್ಡ್ ಅಲ್ಲ
ಅದು ನಿನಗೆ ಗೊತ್ತಿಲ್ಲದಿದ್ದರೂ ನನಗಂತೂ ಗೊತ್ತೆ ಗೊತ್ತು ।

೪

ಮಹಿಳೆ! ನಿನ್ನದೆಂತಹಾ ಶೋಚನೀಯ
ಸ್ಥಿತಿ ಅಲ್ಲವೇನೆ?
ಏನೋ ಒಂದು ಸಣ್ಣ ಕಾರಣವನೇ ನೆಪ ಮಾಡಿ

ಅರ್ಧರಾತ್ರಿಯಲಿ ಗಾಂಧೀಜಿ ಕಸ್ತೂರಿಬಾಳನ್ನು
ಮನೆಯಿಂದ ಹೊರಹಾಕಿದಂತೆ, ನಿನ್ನನೂ ಹಾಕಿದರೂ,
ಒಳಗೆ ಕರೆದರೆ ಸಾಕೆಂದು ಬೇಡಿಕೊಂಡು,
ಕಾಯಬೇಕಾದ ಅಸಹಾಯಕಳು ನೀನು!
ಇಲ್ಲದಿರೆ ನಿನ್ನ ಗತಿ ಏನು?
ಗಂಡಬಿಟ್ಟವಳೆಂಬ ಅಲಕ್ಷ್ಯಕ್ಕೆ
ಬೇಲಿ ಇಲ್ಲದಾ ಹೊಲ ನೋಡಿ
ಬಸವಗಳು ನುಗ್ಗಿ, ಹೊಲ ಮೇದು
ಹೊಲವನೆಲ್ಲಾ ಹದಗೆಡಿಸಿ ಹಾಕುವಂತೆ,
ನಿನ್ನನೂ ಮೇದು ಮಸಣದ ಹಾದಿ ಹಿಡಿವಂತೆ ಮಾಡಿಯಾರೆಂದು
ಕಟ್ಟಿಕೊಂಡವನ ಊಳಿಗದವಳಾಗಿ
ಜೀತದಾಳಿನಂತೆ ಬದುಕು ॥

೫

ಎಮ್ಮಂಗಳದಿ ಮಂಗಳ ಬರೆಯುವಾಕೆ
ತಿಂಗಳಮಾಮನ ವದನದಾಕೆ,
ತವರಿನಂಗಳದಿ ಬೆಳೆದು,
ಎಮ್ಮಂಗಳದಿ ಮಂಗಳವ ಬರೆಯುವಾಕೆ
ನಿನ್ನಡಿಗಳ ನಮ್ಮ ಹೊಸ್ತಿಲೊಳಗಿಟ್ಟು ಬಾ
ನಮ್ಮೊಲವಿನಲಿ ನಿನ್ನ ನಲಿವ ಕಾಣ ಬಾ॥

೬

ಮೊಬೈಲ್
ಸಭೆ ಸಮಾರಂಭಗಳಲ್ಲಿ
ಮಕ್ಕಳು ಅತ್ತರೆ
ತಾಯಂದಿರು ಮುಜುಗರ ಪಟ್ಟುಕೊಂಡು!
ಓಡುವರು ಹೊರಗೆ!
ಮೊಬೈಲ್‌ಗಳು
ಕಿರುಗುಡತೊಡಗಿದರೆ
ಪುರುಷರು ಬೀಗುತ್ತಾ
ನಡೆಯುವರು ಬಾಗಿಲ ಕಡೆಗೆ॥

೭

ಸ್ತ್ರೀ ಶೋಷಣೆ

ಮಹಿಳಾಮಣಿಯೊಬ್ಬಳು
ಮಹಿಳೆಯ ಶೋಷಣೆಯ ಬಗ್ಗೆ
ಉದ್ದುದ್ದ ಭಾಷಣ ಬಿಗಿಯುತ್ತಿರುವಾಗ,
ಸಭಿಕರಲ್ಲೊಬ್ಬರು ಎದ್ದುನಿಂತು
ನೀವು ಸಿಂಗಮ್ಮನ ಗಂಡ
ಗಂಗಯ್ಯನನ್ನು ಪ್ರೇಮಿಸಿ!
ಮದುವೆಯಾದದ್ದು
ಶೋಷಣೆಯಲ್ಲವೆ ಎಂದಾಗ
ಆಕೆಯ ನಾಲಿಗೆಯ ದ್ರವ ಒಣಗಿ
ಮುಂದೆ ಮಾತೇ ಹೊರಡದಾಗಬೇಕೆ!

೮

ಕರ್ನಾಟಕ ಕಾಡು – ಮೇಡು

ಮಳೆ ಚೆನ್ನಾಗಿ ಬರಲು ಬೆಳೆಸಬೇಕು ಕಾಡು
ಅನವಶ್ಯವಾಗಿ ಮರಗಳ ಕಡಿಯಬಾರದು ನೋಡು
ಕರ್ನಾಟಕವು ಕಾಡು–ಮೇಡುಗಳ ಸೊಬಗಿನ ಬೀಡು

೯

ಬಾಳುಗೋಳು

ಅವಿವೇಕಿಗಳ ಬಾಳು ಆಗುವುದು ಗೋಳು
ಇರುವಷ್ಟು ದಿನ ಚನ್ನಾಗಿ ಬಾಳಬೇಕು, ಕೇಳು
ಬೇಕೆಂದವರಿಗೆ ಮಾತ್ರ ಉಪದೇಶ ಹೇಳು,

೧೦

ಚುಟುಕಗಳಿಲ್ಲದ ಪತ್ರಿಕೆಯಿಲ್ಲ
ಆಡುಮುಟ್ಟದ ಸೊಪ್ಪಿಲ್ಲ ಎಂಬ ಗಾದೆಯಂತೆ
ಚುಟುಕುಗಳಿಲ್ಲದ ಪತ್ರಿಕೆಯಲ್ಲಿ ಅಲ್ಲದೆ
ವಿಷಯವೂ ಇಲ್ಲ ಎಂದು ಹೇಳಬಹುದು.

೧೧

ದುರ್ಗುಣ – ಸದ್ಗುಣ

ಮನುಷ್ಯನಲ್ಲಿ ಮನೆ ಮಾಡಿದರೆ ದುರ್ಗುಣ
ಅದು ಅಳಿಸಿ ಹಾಕುವುದು ಅವನೆಲ್ಲಾ ಸದ್ಗುಣ
ಆಗ ಕಾಣುವುದು ಅವನ ಬಾಳತುಂಬಾ ಅವಗುಣ

೧೨

ಗಟ್ಟಿಕಾಳು ಬೇಕು

ಜೊಳ್ಳು ಹಾರಾಡಿದರೆ
ಗಟ್ಟಿಕಾಳು ತಳಕಚ್ಚುವವು
ಜೊಳ್ಳನ್ನು ಗುಡಿಸಿ ಆಚೆಗೆಸೆದು
ನೀರಬಸಿದು ಗಟ್ಟಿಕಾಳ ಹೊರತರಬೇಕು ॥

೧೩

ಏನುಮಾಡಬೇಕು

ಸಹವಾಸ ಸನ್ಯಾಸಿ ಕೆಡಿಸ್ತು ಅಂತಾರೆ
ಹಂಗಾದ್ರೆ, ದುಷ್ಟ ಹೆಂಡತಿ ಸಿಕ್ಕರೆ
ಗಂಡ ಏನ್ಮಾಡ್ಬೇಕು?
ದುಷ್ಟ ಗಂಡ ಜೊತೆಗಾರನಾದಾಗ
ಹೆಂಡತಿ ಗತಿ ಏನಾಗ್ಬೇಕು? ॥

೧೪

ಬರೀಕೈಯ...ಮೂರ್ಖತನ

ಬರುವಾಗ ಬರೀಕೈಲಿ ಬರುವೆವಲ್ಲಾ
ಹೋಗುವಾಗ ಏನೂ ಒಯ್ಯಲು ಆಗುವುದೇ ಇಲ್ಲವಲ್ಲ?
ಇವೆರಡರ ಮಧ್ಯೆ ಇರುವಾಗ, ಮೈತುಂಬಾ ಇರಬೇಕೆಂದು
ಹೆಣಗಾಡುವ ಮೂರ್ಖತನ ಬಿಡಲಾರೆವಲ್ಲಾ! ॥

೧೫

ಬೇವು ಬೆಲ್ಲ
ಕಾಲಿಟ್ಟಲ್ಲಿ ಕಲ್ಲು ಮುಳ್ಳು
ಆಸರೆ ಇಲ್ಲದೆ ಬೇಸರವಾಗುವುದು ।
ಬೆಲ್ಲ ಬಯಸಿದರೆ ಬೇವು ದೊರೆಯುತಿಹುದಲ್ಲ
ಹಣತೆ ಹಚ್ಚಿ ಹುಡುಕುತಿಹೆನು
ಬೇಕಾಗುವುದೊಂದು ದೊರೆಯುವದಿನ್ನೊಂದು
ಕಂಡದ್ದು-ಉಂಡದ್ದು-ನೀಡಿದ್ದು ॥

೧೬

ಬೆನ್ನಮೇಲೆ ಬಾಸುಂಡೆ..
ಇಂದು ಮಹತ್ವದ ಸ್ಥಾನಗಳು ಸಿಕ್ಕಿದವರಿಗೆ ಸೀರುಂಡೆ
ದಕ್ಕುವಂತೆ ಮಾಡಿದವರಿಗೆ ನಂತರ ಲಾಡು ಉಂಡೆ
ದಕ್ಕಲು ಅಡ್ಡಬಂದವರ ಬೆನ್ನಮೇಲೆ ಬಾಸುಂಡೆ ॥

೧೭

ಸೊಸೆ ಬಂದಳು – ಬೈದಳು
ಹಿಂದಿನ ಪರಿಸರದಲಿ ಸೊಸೆಯಾಗಿ ಬೆಂದವಳು
ಇಂದಿನ ಪರಿಸ್ಥಿತಿಯಲಿ ಅತ್ತೆಯಾಗಿ ನೋವಿಗೀಡಾಗುವಳು !
ಹಿಂದಿನ ಸೊಸೆ, ಇಂದಿನ ಅತ್ತೆ, ಅಂದು ಬೆಂದಳು, ಇಂದು
ನೋಯುತ್ತಿರುವಳು ॥

೧೮

ಬರಿಗೈ ಭಾರತೀಯ
ಜಾತ್ಯಾತೀತ ರಾಜ್ಯದಲಿ ಜಾತಿಗಳದೇ ಮೇಲುಗೈ !
ತಮ್ಮ ತಮ್ಮ ಜಾತಿಯವರು ಮಾಡಿದುದಕ್ಕೆಲ್ಲಾ ಸೈ ಸೈ
ಗೊಂದಲದ ರಾಜಕೀಯದಲಿ ಆಗುತಿಹನು ಭಾರತೀಯ ಬರಿಗೈ ॥

೧೯

ಏರಿದ ಏಣಿ ನೂಕಿದವ ಗ್ರೇಟ್
ನೋಟುಕೊಟ್ಟವರಿಗೆ ಓಟು; ಲಂಚಕೊಟ್ಟವರಿಗೆ ಸೀಟು
ಮೇಲೆ ಹತ್ತಿದ ಮೇಲೆ ಏಣಿ ನೂಕಿದವರು ಇಂದು ಬಲು ಗ್ರೇಟು
ಮೌಲ್ಯ, ನೀತಿ, ತಪ್ಪು-ರೈಟು ಎಂದು ಕೂತವನಿಗೆ ಇಂದು ಮುಚ್ಚುವುದು
ಅದೃಷ್ಟದ ಗೇಟು ॥

೨೦

ನಿನ್ನಗತಿ ಮುಗಿಯಿತು :
ಒಬ್ಬರಿಗೊಬ್ಬರು ಬೆಂಬಲ ನೀಡುವ ಕಾಲವೆಲ್ಲೋ ಹೋಯ್ತು
ಯಾರಿಗೆ ಯಾರಿಲ್ಲ ಪುರಂದರ ವಿಠಲ ಎನ್ನುವಂತಾಯ್ತು
ಇಬ್ಬರ ನಡುವೆ ಮೂಗುತೂರಿಸಿದೆಯಾದರೆ ನಿನ್ನಗತಿ ಮುಗಿದೇ ಹೋಯ್ತು॥

೨೦

ಮಜಾಮಾಡುವ ತುಡಿತ..
ಈಗ ಯಾರಿಗೂ ಬೇಕಿಲ್ಲ, ಮೈಮುರಿವ ದುಡಿತ
ಅದರೆಲ್ಲರಿಗಿದೆ ಮಜಾ ಮಾಡವ ತುಡಿತ
ಅದಕಾಗಿ ನೀತಿಯ ಬದುಕಿನಲ್ಲಿ ಮಾಡುವರು ಕಡಿತ॥

ಪೂಜೆ...ಸ್ವಾರ್ಥಿಗಳ ಯೋಜನೆ :
ದಿನ ಬೆಳಗಾದರೆ ನಡೆಯುತ್ತವೆ ಗುಡಿಗೋಪುರಗಳ ಉದ್ಘಾಟನೆ
ಆದರೆಲ್ಲೂ ಕಾಣದು ನಿಜ ಭಕ್ತಿಯ ಸೂಚನೆ
ಇವುಗಳ ಹಿಂದೆಲ್ಲಾ ಇರುವುದು ಸ್ವಾರ್ಥ, ಸಾಧಿಸಿಕೊಳ್ಳುವ ಆಲೋಚನೆ॥

■

## ೧೪. ರಾಮರಾಜ್ಯ

೧

ಗಾಂಧೀಜಿ ಬಯಸಿದ್ದು
'ರಾಮರಾಜ್ಯ' ಎಂದರೆ
ನಡುರಾತ್ರಿ ಹೆಣ್ಣುಮಗಳೊಬ್ಬಳು
ಸ್ಟೇಷನ್ನಿನಿಂದ ಮನೆಗೆ
ಏಕಾಂಗಿಯಾಗಿ ಸುರಕ್ಷಿತ
ಹೋಗಿ ಮುಟ್ಟಬಹುದಾದ
ಸುಶಿಕ್ಷಿತ ಜನರ ರಾಜ್ಯ!
ಆದರಿಂದು ಹಗಲೂ ಆಕೆ
ಮನೆಯಲ್ಲೇ ಕ್ಷೇಮವಾಗಿರುವುದು
ಕಷ್ಟ ಎನ್ನಿಸುವಂತಹ
ರಾವಣರಾಜ್ಯ ಆಗಿದೆಯಲ್ಲ

೨

ಇಂದು ಭಕ್ತರಿಂದ ಶ್ರೀಕೃಷ್ಣನಿಗೆ
ವಜ್ರಕವಚ ಅರ್ಪಣೆ !
ಅಯ್ಯೋ ಇದುವರೆಗೂ
ದೇವರನ್ನೇ ನಾವು, 'ನಿನ್ನ ಆಶೀರ್ವಾದ ನಮ್ಮನ್ನು
ವಜ್ರಕವಚದಂತೆ ರಕ್ಷಿಸಲಿ' ಎಂದು ಬೇಡುತ್ತಿದ್ದೇವು,
ಈಗ ಕೃಷ್ಣನೇ ತನ್ನ ರಕ್ಷಣೆಗೆ ಭಕ್ತರಿಂದ ವಜ್ರಕವಚ
ಪಡೆದನೇ?.........ಕಲಿಕಾಲ...........

ಆದರೆ, ವಜ್ರ ಖಚಿತವಾದ
ಕವಚವನ್ನು ಮಾತ್ರವಲ್ಲ,
ಕೃಷ್ಣನನೇ ಇಂದು ಅಪಹರಿಸಬಹುದು
ಇದು ಕಲಿಯುವ ಕಾಲ. ಕಳ್ಳತನವನ್ನೂ ॥

೧೫. ಅವನಿ ರಸಿಕರ ರಂಗ

ಹುಟ್ಟಿದ ಬಳಿಕ
ಅವಿನಾಶಿ ಅವನೀಶನಲಿ
ನಂಬುಗೆ ಇಟ್ಟು, ಸತ್ಯಕ್ಕೆ ಇಂಬುಗೊಟ್ಟು!
ನಡೆದೊಡೆ ಅವನಗಧಿಪತಿಯಾಗ
ಬಹುದೆಂದ ಅವನಿಯಾಂಕಿತ ಹೋರ

ಅವನಿಯಲಿ 'ಅವನಿ' ಜನ್ಮತಾಳಿ
ಸಾಹಿತ್ಯ, ಸಂಗೀತ, ಕಲೆಗಳಿಗೆ
ಪ್ರೋತ್ಸಾಹ ನೀಡಿ, ಸಲಹುತಿಹುದು
ಸಂತೋಷ, ಸಮ್ಮಾನ ನೀಡಿ

'ಅವನಿ'ಯೊಂದು ಜನ್ಮತಾಳಿ
ರಸಿಕ ಜನಕೆ ಸಾಹಿತ್ಯ ಸಂಗೀತ ನೀಡಿ
ಉಣ್ಣಿಸುತಿಹುದು ಸಾರುವಹ ಬುತ್ತಿಯನು
ಹಸಿದ ದಸಿಕರಿಗೆ ॥

## ೧೬. ದಲಿತ ಮೇಲಿನವರ ತೊತ್ತು.....

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು
ಸಮಾಜ ಸ್ವಾಸ್ಥ
ನಿರ್ಮಿಸಿದ ಪಂಗಡಗಳು
ಬರುಬರುತ್ತಾ ಹುಟ್ಟಿನಿಂದಲೇ
ಪಟ್ಟಗಟ್ಟಿಸಿಕೊಂಡು, ಜನರಲ್ಲಿ
ಉಚ್ಚ-ನೀಚರೆಂಬ ಭಾವನೆಗೆ
ಬಲಿಯಾಗಿ, ಹುಟ್ಟಿನಲಿ ಉತ್ತಮರೆನಿಸಿ
ವೃತ್ತಿಯಲಿ, ಗುಣದಲ್ಲಿ ಶೂದ್ರರಾದರೂ
ಅವರ ಮೀಸೆಯೇ ಮೇಲಾಗಿ
ಕೆಳವರ್ಗವೆನಿಸಿಕೊಂಡ ಪಂಗಡದಲಿ
ಜನಿಸಿದ ಗುಣದಲಿ ಸ್ವಭಾವದಲಿ
ಮೇಲ್ವರ್ಗದವರ ಮೀರಿಸಿದರೂ
ಅವರಿಗಿರಲಿಲ್ಲ ಉತ್ತಮ ಸ್ಥಾನಮಾನ
ಮೇಲ್ವರ್ಗದಿ ಹುಟ್ಟಿದ ಧೂರ್ತರಾಗಿ, ತಮ್ಮ ಸೇವೆಗೆ
ಕೆಳವರ್ಗದಲಿ ಹುಟ್ಟಿದವರ ಸೇವೆ ಪಡೆಯುತ್ತಾ
ಯಾವ ಕಟ್ಟು-ನಿಟ್ಟು ಇಲ್ಲದೆ
ಅಟ್ಟಹಾಸದಿ ಮೆರೆಯಲು ಸಾಧ್ಯವಾಗಿ
ಅವರನು ಮೆಟ್ಟಿನಿಂತರೇ ತಮಗೆ
ನೆಟ್ಟಗಾಗುವಾಗ ಅವರನೆಲ್ಲ
ಮೇಲೇಳದಂತೆ ಬಹುಕಾಲ
ಮೆಟ್ಟಿಲ ಕೆಳಗೇ ಇಟ್ಟರು ॥

## ೧೭. ಹೆಂಡತಿ ಗಂಡನ ಸ್ವತ್ತು

ಇದರ ಜೊತೆಗೇ ಹುಟ್ಟಿದ
ಕೌಟುಂಬಿಕ ವ್ಯವಸ್ಥೆಯಲಿ ಪುರುಷನ
ಮೇಲ್ಮೆ ಹೆಚ್ಚಿ, ಸ್ತ್ರೀಯಳು ಕಡಿಮೆ ಎನಿಸಿ,
ಪುರುಷನ ತೊತ್ತಿನಂತೆ ದುಡಿಯಬೇಕಾಯ್ತು ಮಹಿಳೆ ॥
ಕೌಟುಂಬಿಕ ವ್ಯವಸ್ಥೆ ಮಾನವಗೆ
ಅನಿವಾರ್ಯವೆನಿಸಿ, 'ಜೀವನ ನಿರ್ವಹಣೆಗೆ
ಹೊರಗೆ ಹೋಗಿ ಪುರುಷ, ದುಡಿದು ತರಬೇಕು
ಮಹಿಳೆ ಅಟ್ಟು ಬಡಿಸಬೇಕು ಎಂಬ
ವ್ಯವಸ್ಥೆಯಲಿ ಮನೆಗೆಲಸ, ಮಕ್ಕಳ ಲಾಲನೆ
ಮಹಿಳೆಯ ಪಾಲಿಗೆ ಬಂದು,
ಪುರುಷ ಆದರೆ ಬೇಕಾದುದನೆಲ್ಲ
ಒದಗಿಸುವ ಜವಾಬ್ದಾರಿ ಹೊತ್ತು
ಕುಟುಂಬ ನಿರ್ವಹಣೆಯ ಕೆಲಸ
ಇಬ್ಬರೂ ಹಂಚಿಕೊಂಡು ಸುಖಿ
ಕುಟುಂಬ ಜೀವನ ನಡೆಸಲು ಪ್ರಾರಂಭವಾಯ್ತಾದರೂ ।
ಬರು-ಬರುತ್ತ, ತಂದು ಹಾಕುವ ಗಂಡಿನ
ಪ್ರಾಬಲ್ಯ ಹೆಚ್ಚಿನದೆನಿಸಿ, ಅವನು ತಂದಾಗ
ಮನೆಯಬಳಗೆ ಕೂತು ಉಣ್ಣುವ ಮಹಿಳೆ
ಮಾಡುವ ಮನೆಗೆಲಸಕ್ಕೆ ಬೆಲೆ ಇಲ್ಲದಾಗಿ
ಅವಳವನ ತೊತ್ತಾಗಿ ಬದುಕಬೇಕಾಯ್ತು ॥
ಅವನಿತ್ತರೆ ಆಕೆಗೆ ಹೊಟ್ಟೆ ಬಟ್ಟೆ
ಇಲ್ಲದಿರೆ ಉಪವಾಸ-ವನವಾಸ
ಎನ್ನುವ ಸ್ಥಿತಿ ಉಂಟಾಗಿ ಪುರುಷ
ಮೀಸೆಯ ಮೇಲೆ ಕೈ ಆಡಿಸುತ್ತ ।
ಗಂಡು 'ಗಂಡನಾಗಿ', ಹೆಣ್ಣು ಹೆಂಗಸಾಗಿ
ಬಾಳ ಬೇಕಾಯ್ತು, ಭಾರತದಲ್ಲಿ.

## ೧೮. ಓ ಮಾನವಾ, ನೀನೇಕಾದೆ ದಾನವ

ಓ ಮಾನವಾ, ನೀನೇಕಾಗಿರುವೆ ದಾನವ?
ಸೃಷ್ಟಿಯಲಿ ನೀನೇ ಆಗಿರುವಿ ಜ್ಯೇಷ್ಠ
ಕ್ರಿಮಿಕೀಟ, ಪಶು-ಪಕ್ಷಿಗಳಿಗಿಂತ ನೀ ಶ್ರೇಷ್ಠ
ಕೆಡುಕು-ಒಳಿತುಗಳ ನೀ ಬಲ್ಲೆ
ಯೋಚಿಸಬಲ್ಲೆ, ಮಾತಾಡಬಲ್ಲೆ
ಆಕಾಶಕೆ ಹಾರಬಲ್ಲೆ ಸಮುದ್ರದಾಚೆ ಇಳಿಯಬಲ್ಲೆ
ಒಳಿತ ಮಾಡಬಲ್ಲೆ, ಕೆಡುಕು ಮಾಡಬಲ್ಲೆ
ಒಳಿತು ಕೆಡುಕಿನ ಪರಿಣಾಮ ನೀ ಬಲ್ಲೆ,
ಒಳಿತ ಮಾಡುತ್ತ ದೇವ ಮಾನವನಾಗಬಲ್ಲೆ
ಕೆಡುಕನೇ ಎಸಗುತ್ತ ದುಷ್ಟ ದಾನವನಾಗಬಲ್ಲೆ
ದೇವನಾಗಬಲ್ಲೆಯಾದರೂ ದಾನವನಾಗುತ್ತಿ ಏಕೆ?
ನಿನ್ನ ದುಷ್ಟತನಕೆ, ಸ್ವಾರ್ಥಕ್ಕೆ ದ್ವೇಷಕ್ಕಿರುವೆ ಏಕೆ?
ರೋಷಕ್ಕೆ ಮಿತಿ ಹಾಕುತ್ತಿಲ್ಲವೇಕೆ?
ಎಲ್ಲಿ ನೋಡಿದಲ್ಲಿ ನಿನ್ನ ಕ್ರೌರ್ಯ
ಎಲ್ಲೆಂದರಲ್ಲಿ ದುಷ್ಟತನಗೈಯುತಿಹುದು ನಿನ್ನ ಶೌರ್ಯ
ನಿನ್ನ ಬುದ್ಧಿವಂತಿಕೆಯ ಹಾದಿಯೂ
ವಿನಾಶದೆಡೆಗೆ ಸಾಗುತಿಹುದಲ್ಲ
ಸ್ನೇಹ, ಪ್ರೀತಿ, ಸಹಕಾರ ನಿನ್ನಲ್ಲಿಲ್ಲವೇ ಇಲ್ಲ
ಒಳಿತೇಕೆ ನಿನಗೆ ಬೇಡವಾಗಿಹುದೇ ಒಳಿತು ನಿನ್ನ
ಹೊರ ನೆಮ್ಮದಿಯ ಬಾಳು, ಬೇಕಾಗದಿರಲು
ನಿನಗೆ, ಕಾರಣವೇನು ತೋರು?

(ಅ) ಒಳಿತಾದ ದಾರಿಯಲಿ ನಡೆದರೆ
ನಿನಗಾಗುವ ಕೆಡುಕೇನು ಹೇಳು ?
ಮಾನವಾ, ಆಳವಾಗಿ ಆಲೋಚಿಸಿ ನೋಡು

ಒಳಿತಮಾಡಿ, ಒಳಿತಾಗಿ ಬಾಳಿ
ಒಳಿತ ಕೊಟ್ಟು, ಒಳಿತ ಪಡೆವ
ಜೀವನದಲ್ಲಿ ಎಲ್ಲೆಲ್ಲೂ ಒಳಿತು
ನಿನಗೂ ಕೆಡುಕಿಲ್ಲ
ಇತರರಿಗೂ ನೋವಿಲ್ಲ
ನಾವು ನೀನು ಎಲ್ಲರೂ ಕೂಡಿ ಒಂದಾಗಿ
ಒಳಿತನೆ ಹಾಸಿ, ಒಳಿತನೆ ಹೊದೆದು
ಒಳಿತನೇ ಬಾಳಿದರೆ,
ಭುವಿಯು ಸ್ವರ್ಗವಾಗುವುದು ॥
ಆ ಸುಖ ಅದೇಕೆ ನಿನಗೆ ಬೇಡವಾಗಿದೆ
ಹೇಳು ಮಾನವಾ ಹೇಳು

## ೧೯. ಲೋಕಪ್ರಜ್ಞೆಗೆ ಹೊಸಹಾಡು – ಹಾಡು

ಹಿಂದಿರುಗಿ ನೋಡು! ಯುಗ–ಯುಗಾಂತರಗಳಿಂದ
ವಿವೇಕ ಪ್ರಜ್ಞೆ, ಸಲದಲಿ ಜಾಗೃತಗೊಂಡು
ಜನಮನವನು ಪರಿವರ್ತಿಸಿದುವುದ ಕಾಣು
ಎಚ್ಚತ್ತುಕೊಂಡು ಕಾರ್ಯತತ್ಪರನಾಗು
ಮಾನವ ಜನಾಂಗದಲಿ ಆಧ್ಯಾತ್ಮದ ಭಾವನೆ
ಮೂಡಿಸುವ ಹರಿಕಾರನಾಗು
'ಆಧ್ಯಾತ್ಮ'ವೆಂದರೆ, ಕೆಲವರು ತಿಳಿದಂತೆ
ಅಸಹಾಯಕತೆಯಿಂದ ಉಂಟಾಗುವ
ಫಲಾಯನ ಮನೋಭಾವವಲ್ಲ !
ಲೋಕ ಸಮತೋಲನದಿಂದ ಸಾಗುವುದು
ಆಧ್ಯಾತ್ಮಿಕ ಬಲದಿಂದಲೇ ಎಂಬುದನು ನೆನಪಿಸಿಕೋ
ನಿಜವಾದ ಆಧ್ಯಾತ್ಮ ಆತ್ಮಬಲಕ್ಕೆ ದಾರಿ !
ಆತ್ಮ ಬಲವುಳ್ಳವಗೆ ಆತ್ಮವಿಶ್ವಾಸ ಸ್ನೇಹಿ !
ಆತ್ಮಬಲವುಳ್ಳವನು ಕ್ರೌರ್ಯವನ್ನೂ
ಎದುರಿಸುವನು ಯಶಸ್ವಿಯಾಗಿ !
ಕಾರುಣ್ಯದ ಸ್ಥಿತಿಯಲ್ಲೂ ಅವನ ಕಾಲುಗಳು ಸ್ಥಿರವಾಗಿರುವುವು॥
ಅವನು ಜಾತಿ–ಮತಗಳಲ್ಲಿ
ಪಂಥ, ಪಕ್ಷ ಪ್ರದೇಶಗಳಲ್ಲೂ
ಪಕ್ಷಪಾತವಿಲ್ಲದೆ,
ದ್ವೇಷಬಿಟ್ಟು ಸಹನೆಯ ಹುಟ್ಟು ದಾಟುವನು
ಇತಿ–ಮಿತಿಗಳನರಿತು ಸರಾಗವಾಗಿ
ಅದಕಾಗಿ ಈಗ ಆಧ್ಯಾತ್ಮ ಸಾಧನೆಗೆ ಬೇಕಾದ
ಪರಿಸರ ನಿರ್ಮಾಣವಾಗಬೇಕು
ಅಂತಹ ಸಮಷ್ಟಿ ಕ್ಷೇಮದೃಷ್ಟಿಯ
ಹಿತಚಿಂತಕರು ಮುಂದೆ ಬರಬೇಕು ॥

ಉಳಿದೆಲ್ಲರೂ ಅವರ ಭುಜಕ್ಕೆ ಭುಜಕೊಟ್ಟು
ನಿಲ್ಲುವಂತಾಗಬೇಕು; ಲೋಕಪ್ರಜ್ಞೆ ಇರುವ
ಎಲ್ಲರೂ ಒಂದಾಗಬೇಕು
ಸಾಹಿತಿಗಳು, ವಿದ್ವಾಂಸರು, ಪೀಠಾಧಿಪತಿಗಳು
ಪೂಜಾರಿ-ಪುರೋಹಿತರು ರಾಜಕಾರಣಿಗಳು
ತಮ್ಮ ಹಳೆ ಹಾಡುಗಳ ಮರೆತು,
ಹೊಸಹಾಡು ಕಟ್ಟಬೇಕು
ಸಮುದಾಯದಿ ಸಾಮರಸ್ಯವೆಂಬ
ಮಾನವೀಯತೆಯ ಹಾಡಿಗೆ ಹೊಸ
ನವ ನೂತನ ರಾಗ ಸಂಯೋಜಿಸಬೇಕು ॥

(ಪ್ರೊ. ಲಲಿತಾಂಬ ಚಿರನಿದ್ರೆಗೆ ಹೋಗುವ ಹಿಂದಿನ ದಿನದ ರಚನೆ)

## ೨೦. ನಿದ್ದೆ ಬಂದಿದೆ.....

ಸದ್ದು ಮಾಡಬೇಡಿ, ನಿದ್ದೆ ಬಂದಿದೆ ನಿದ್ದೆ,
ನಿದ್ದೆ ಬಂದಾಗ ಹೆಚ್ಚು ಕಡಿಮೆಯಾದರೆ
ಆಗುವ ಪರಿಯ ಅನುಭವಿಕರನ್ನೇ ಕೇಳಿ!
ಬಂದು ನಿದ್ದೆ, ನಿದ್ದೆ ಮಾಡಬೇಕೆನ್ನಿಸಿದರೂ
ಮುಚ್ಚಿ ಬರುತ್ತಿದ್ದರೂ ಕಣ್ಣು, ಬಾರದು ನಿದ್ದೆ!
ಆಗಾಗುವ ಹಿಂಸೆ ಅನುಭವಿಸಿದವನೇ ಬಲ್ಲ
ಅದಕಾಗಿ, ನಿದ್ದೆ ಬಂದಾಗ ಅಡ್ಡಿಮಾಡಬೇಡಿ......
ಕೆಲವರಂತೂ ಪುಣ್ಯವಂತರೋ ಪುಣ್ಯವಂತರು;
ದಿಂಬಿನ ಮೇಲೆ ತಲೆ ಇಟ್ಟಿದ್ದೇ ಸಾಕು
ಸೊಂಪಾಗಿ ಮಾಡುವರು ನಿದ್ದೆ!
ಕೆಲವರಿಗಂತೂ ದಿಂಬೂ ಬೇಡ
ಕುಳಿತು ಕುಳಿತೇ ಹೊಡೆಯುವರು ನಿದ್ದೆ!!
ಪ್ರಯಾಣದಲ್ಲೂ ನಿದ್ದೆ; ಮದುವೆಯ
ಮನೆಯಲ್ಲೂ ನಿದ್ದೆ, ನಿದ್ದೆ ಬಾರದವರಿಗೆ
ಇವರನ್ನು ನೋಡಿದರೆ, ಹೊಟ್ಟೆಯಲ್ಲಿ ಉರಿಯೋ ಉರಿ !
ಎರಡು ಮೂರು ದಿನ ನಿದ್ದೆ ಮಾಡದವರುಂಟು
ನಿದ್ದೆ ಗುಳಿಗೆಗಳ ನುಂಗಿದವರೂ
ನಿದ್ದೆ ಬಾರದವರುಂಟು; ಎಷ್ಟೇ ಒದ್ದಾಡಿದರೂ
ಅತ್ತರೂ ಕರೆದರೂ ಅವರ ಸಮೀಪ
ನಿದ್ದೆ ಸುಳಿಯದವರುಂಟು !
ಅದಕಾಗಿ, ಅವರಿಗಾಗಿ, ಗದ್ದಲಮಾಡಬೇಡಿ
ನಡೆದ ಅಂಥವರ ಹತ್ತಿರ ಹೋದಾಗ
ನಿದ್ದೆಯಲ್ಲೂ ಎರಡು ವಿಧ
ಕೆಟ್ಟನಿದ್ದೆ, ಒಳ್ಳೆಯ ನಿದ್ದೆ
ಕೆಲವರಿಗಂತೂ ಕುಂಭಕರ್ಣನ ನಿದ್ದೆ

ಅವರಿಗೆ ಎಲ್ಲೆಂದರಲ್ಲಿ ನಿದ್ದೆ
ಯಾವಾಗೆಂದರೆ ಆಗ ನಿದ್ದೆ
ಮಾಡುವ ಕೆಲಸವಿದ್ದರೂ ನಿದ್ದೆ
ಮುದ್ದೆ ಇಲ್ಲದಿದ್ದರೂ ಅವರಿಗೆ ಬೇಕು ನಿದ್ದೆ
ಕೂತಲ್ಲಿ ನಿದ್ದೆ ನಿಂತಲ್ಲಿ ನಿದ್ದೆ
ಎಲ್ಲೆಂದರಲ್ಲಿ ನಿದ್ದೆ
ಆಡಿಕೊಂಡು ನಕ್ಕರೂ ನಿದ್ದೆ
ಮಾಡಿಯೇ ತೀರಬೇಕೆಂಬ ಕೆಲಸವಿದ್ದರೂ ನಿದ್ದೆ
ಮೊದಲು ನಿದ್ದೆ, ಆಮೇಲೆ ಉಳಿದದ್ದು
ಎಂಬುದವರ ನೀತಿ, ಕೆಲಸ ಕೆಟ್ಟರೆ
ಏಕಾದೀತೆಂಬ ಅವಿರಿಗಿಲ್ಲ ಭೀತಿ
ಇದರ ಫಲಿತಾಂಶ ಎಡವುತ್ತ
ಕುಂಟುತ್ತಾ ಮುಂದೆ, ಮುಂದೆ ನಡೆವಾಗ
ಕಾಲವು ಒಂದಕ್ಕೆ ಒಂಭತ್ತು ಕಲಿಸ ಬೇಕಾಗಿ
ಬಿಸಿಯಾದದ್ದು ಹೋಗುವುದು ಹಳಸಿ ।
ನಿದ್ದೆ ಬಾರದವರ ಪಾಡಂತೂ ಬೇಡವೇ ಬೇಡ
ದಕ್ಷರಿದ್ದರೂ, ಕೆಲಸ ಮುಗಿಸುವ ಮನಸ್ಸಿದ್ದರೂ
ನಿದ್ದೆಯೇ ಇಲ್ಲದ ಪರಿಣಾಮವಾಗಿ
ಇದ್ದರೂ ಇಲ್ಲದಾಗಿ
ಅವರ ಗೋಳ ನೋಡಲಾಸಲ್ಲ !
ಕುಂಭಕರ್ಣನ ನಿದ್ದೆಯವರು
ನಿದ್ದೆಯೇಬಾರದವರ ಸಾಧನೆ ಒಂದೇ ಅಲ್ಲ
ತೃಪ್ತಿಯಾಗುವಂತೆ ನಿದ್ದೆ ಮಾಡುವವದೇ
ಇರುವುದು ಮನಕ್ಕೆ ಶಾಂತಿ ಸಮಾಧಾನ
ಆಕಾಶ ಕಳಚಿಬಿದ್ದರೂ ಅವರಿಗಿಲ್ಲ ಚಿಂತೆ
ಅವರಿಗೆ ಮಾತ್ರ ನಿಶ್ಚಿಂತೆ !
ಮತ್ತೊಂದು ಗುಂಪುಂಟು
ಕಳೆದುಕೊಳ್ಳದವರು ಮನಃಶಾಂತಿ ।
ಇತಿಮಿತಿಯುಂಟವರ ನಿದ್ದೆಗೆ
ಸಮಯಕ್ಕೆ ಸರಿಯಾಗಿ ನಿದ್ದೆ
ಬಂದಿದೆ ನನಗೆ,
ಎಬ್ಬಿಸಬೇಡಿ !!!

■



ಪ್ರೊ. ಲಲಿತಾಂಬ ಅವರ ರೂವಾರಿಗಳು

ಶ್ರೀ ಯು.ಎಸ್. ಶ್ರೀಕಂಠಶರ್ಮ - ಶ್ರೀಮತಿ ಗಿರಿಜಾಂಬ



ಶ್ರೀಮತಿ ಲಲಿತಾಂಬ (೧೯೫೭)



ಅಕ್ಕ-ತಂಗಿಯರೊಡನೆ
ಅಕ್ಕ ಶಿವಲಿಂಗಾಂಬ, ಲಲಿತಾಂಬ
ತಂಗಿಯರು ಗಜಗೌರಾಂಬ, ಮನೋರಮಾ ಹಾಗೂ ಸುಕನ್ಯ



ಶ್ರೀಮತಿ
ಲಲಿತಾಂಬ
(ಪದವೀಧರೆ)



ಆರತಕ್ಷತೆಯಲ್ಲಿ ನವ-ವಧುವರರು (೨೫-೦೫-೧೯೫೬)



ಡಾ. ವೈ. ಸ್ವಾಮಿ ಮಗ ಶಿವಪ್ರಸಾದ್ ಹಾಗೂ ಶ್ರೀಮತಿ ಲಲಿತಾಂಬ



ಡಾ. ಶಿವಪ್ರಸಾದ್ ಹಾಗೂ ಶ್ರೀಮತಿ ಅನುಪಮಾ ಶಿವಪ್ರಸಾದ್
ಡಾ. ವೈ. ಸ್ವಾಮಿ, ಮೊಮ್ಮಗಳು ಕು. ಶರ್ವಾಣಿ ಹಾಗೂ ಪ್ರೊ. ಲಲಿತಾಂಬ



ಮನೆ 'ಶಿವಪ್ರಸಾದ್', ಕಲ್ಯಾಣ ನಗರ, ಧಾರವಾಡ



ಪೂಜ್ಯ ಶ್ರೀ ಸುತ್ತೂರು ದೇಶೀಕೇಂದ್ರ ಶ್ರೀಗಳ ನೇತೃತ್ವ
"ಕದಳಿ ಪ್ರಶಸ್ತಿ" ಪ್ರಧಾನ, ಮೈಸೂರು (೨-೧೨-೨೦೦೧)




ಬೆಂಗಳೂರಿನಲ್ಲಿ 'ಕಾವ್ಯಾನಂದ' ಪ್ರಶಸ್ತಿ ಸಮಾರಂಭ
ಶ್ರೀ ಜಿ. ನಾರಾಯಣರವರ ಅಧ್ಯಕ್ಷತೆಯಲ್ಲಿ



ಪ್ರೊ. ಲಲಿತಾಂಬಅವರ ಪುಸ್ತಕ ಬಿಡುಗಡೆ ಸಮಾರಂಭ
ಉತ್ತರ ಕರ್ನಾಟಕ ಲೇಖಕಿಯರ ಸಂಘ – ಧಾರವಾಡ




ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರೊ. ಲಲಿತಾಂಬಅವರ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಸಚಿವೆ ಶ್ರೀಮತಿ ರಾಣಿ ಸತೀಶ್, ಸಾಹಿತಿ ಶ್ರೀ ಬಸವರಾಧ್ಯ, ಡಾ. ಗಿರಡ್ಡಿ ಗೋವಿಂದರಾಜ ಹಾಗೂ ಪ್ರೊ. ಎಂ.ರಾಮಚಂದ್ರರವರೊಂದಿಗೆ



ತ್ರಿವೇಂದ್ರಂನಲ್ಲಿ ಶ್ರೀಮತಿ ಮತ್ತು ನ್ಯಾಮೂರ್ತಿ ಶ್ರೀ ಮಳಿಮಠರವರೊಂದಿಗೆ ಡಾ. ವೃಷಬೇಂದ್ರಸ್ವಾಮಿ ದಂಪತಿಗಳು



ವಿವಾಹ ಸುವರ್ಣ ಮಹೋತ್ಸವದಲ್ಲಿ ದಂಪತಿಗಳು



ಶ್ರೀಮತಿ ಲಲಿತಾಂಬ ತಾಯಿ ಶ್ರೀಮತಿ ಗಿರಿಜಾಂಬ ಹಾಗೂ
ತಂಗಿ ಶ್ರೀಮತಿ ಸುಕನ್ಯಾ ಸದಾಶಿವ




ರಾಷ್ಟ್ರೀಯ ಕನ್ನಡ ಸಮ್ಮೇಳನ, ನವದೆಹಲಿ ಸಮಾರಂಭದಲ್ಲಿ
ಶ್ರೀಮತಿ ಲಲಿತಾಂಬ ಅವರ ಉದ್ಘಾಟನೆ




ಡಾ. ವೃ.ಸ್ವಾಮಿ ಅವರ ವಜ್ರಮಹೋತ್ಸವದಲ್ಲಿ,
ರಸಿಕ ದಂಪತಿ
ಮಗ ಡಾ. ಶಿವಪ್ರಸಾದ್‌ರವರೊಂದಿಗೆ

# ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರಸ್ವಾಮಿ
# ಇವರ
# ವ್ಯಕ್ತಿ-ಸೇವೆ-ಸಾಧನೆಯ ಮಾಹಿತಿ

ಹೆಸರು : ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರಸ್ವಾಮಿ ಬಿ. ಎಡ್., ಎಂ.ಎಡ್., ಡಿ.ಟಿ.ಇ.

'ಶಿವಪ್ರಸಾದ' ಕಲ್ಯಾಣನಗರ; ೮ನೇ ಕ್ರಾಸ್, ಧಾರವಾಡ-೫೮೦ ೦೦೭. ದೂರವಾಣಿ - ೦೮೩೬-೨೪೪೮೫೭೦

ಹುಟ್ಟಿದ ದಿನ : ೨೩-೦೮-೧೯೩೦ ಲಿಂಗೈಕ್ಯ : ೧೩-೦೮-೨೦೦೭

ಜನ್ಮಸ್ಥಳ : ಬೀರೂರು - ಚಿಕ್ಕಮಗಳೂರು ಜಿಲ್ಲೆ

ತಂದೆ-ತಾಯಿ : ಲಿಂ॥ ಶ್ರೀ ಶ್ರೀಕಂಠಶರ್ಮ ಉಬ್ರಾಣಿಮಠ - ಲಿಂ॥ ಶ್ರೀಮತಿ ಗಿರಿಜಾಂಬ.

ಶಿಕ್ಷಣ : ಬಿ.ಎ. (ಮಹಾರಾಜ ಕಾಲೇಜು, ಮೈಸೂರು)
ಬಿ.ಎಡ್., ಎಂ.ಎಡ್. (ಕ. ವಿಶ್ವವಿದ್ಯಾಲಯ, ಧಾರವಾಡ)
ಡಿ.ಟಿ.ಇ; (ಸೆಂಟ್ರಲ್ ಇನ್ಸ್ಟಿಟೂಟ್ ಆಫ್ ಇಂಗ್ಲಿಷ್, ಹೈದರಾಬಾದ)

ಉದ್ಯೋಗ : ನಿವೃತ್ತ ಪ್ರವಾಚಕರು, ಕರ್ನಾಟಕ ವಿಶ್ವವಿದ್ಯಾಲಯ ಶಿಕ್ಷಣ ಮಹಾವಿದ್ಯಾಲಯ, ಧಾರವಾಡ (ಶಿಕ್ಷಣ ಕ್ಷೇತ್ರದ ವಿವಿಧ ಹಂತಗಳಲ್ಲಿ (೧೯೫೩-೧೯೯೦) ೩೭ ವರ್ಷಗಳ ಸೇವೆ.

ಪತಿ : ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ ಎಂ.ಎ. ಪಿ.ಎಚ್‌ಡಿ

(ನಿವೃತ್ತ) ಮುಖ್ಯಸ್ಥರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩.

ಮಕ್ಕಳು : ಡಾ. ಎಸ್. ಎಂ. ಶಿವಪ್ರಸಾದ ಎಂ.ಎಸ್.ಸಿ. ಪಿ.ಎಚ್‌ಡಿ

ವಿಜ್ಞಾನಿ – National Physical Laboratory
(N.P.L New Delhi)

Present : Scientist at Dr. C.N.R. Rao Guidence
J.N.C.A.S.R Science Institute, Jakkur Post Office,
B'lore - 560 064.

ಸೊಸೆ : ಶ್ರೀಮತಿ ಅನುಪಮಾ ಪ್ರಸಾದ – ಮೊಮ್ಮಗಳು ಕು। ಶರ್ವಾಣಿ

**ಶ್ರೀಮತಿ ಲಲಿತಾಂಬಾ ಅವರ ಗೌರವ ಸೇವೆಗಳು:–**

* ಸಂಸ್ಥಾಪಕ ಸದಸ್ಯೆ, ಉತ್ತರ ಕರ್ನಾಟಕ ಲೇಖಕಿಯರ ಸಂಘ – ಹುಬ್ಬಳ್ಳಿ-ಧಾರವಾಡ.

* ಆಜೀವ ಸದಸ್ಯೆ, ಉತ್ತರ ಕರ್ನಾಟಕ ಲೇಖಕಿಯರ ಸಂಘ (ಹುಬ್ಬಳ್ಳಿ-ಧಾರವಾಡ

* ಆಜೀವ ಸದಸ್ಯೆ, ಅಖಿಲ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

* ಸಂಸ್ಥಾಪಕಿ, ಪ್ರಸಾದ ಪ್ರಕಾಶನ, ಧಾರವಾಡ

* ೧೯೯೨ರಲ್ಲಿ ದಾನಚಿಂತಾಮಣಿ ಅತಿಮಬ್ಬೆ ಆಯ್ಕೆ ಸಮಿತಿ ಸದಸ್ಯೆ (ಸರಕಾರದ ನೇಮಕಾತಿ)

* ೧೯೮೦ರಲ್ಲಿ ಒಂಬತ್ತನೆಯ ತರಗತಿಯ ಇಂಗ್ಲಿಷ ಪಠ್ಯಪುಸ್ತಕ ನಿರ್ಮಾಣ ಸಮಿತಿಯ ಸದಸ್ಯೆ (ಶಿಕ್ಷಣ ಇಲಾಖೆಯಿಂದ)

* ದಿಲ್ಲಿಯಲ್ಲಿ ೧೯೯೪ರಲ್ಲಿ ನಡೆದ ದೆಹಲಿ 'ಕನ್ನಡಿಗ' ಪತ್ರಿಕೆಯವರು ನಡೆಸುತ್ತಿರುವ ರಾಷ್ಟ್ರೀಯ ಕನ್ನಡ ಸಮ್ಮೇಳನದ ಮಹಿಳಾ ಗೋಷ್ಠಿಯ ಅಧ್ಯಕ್ಷೆ.

* ಹುಬ್ಬಳ್ಳಿಯ ಮೂರು ಸಾವಿರ ಮಠದಲ್ಲಿ ನಡೆದ ಉ.ಕ. ಮಹಿಳಾ ಸಾಹಿತ್ಯ ಸಮ್ಮೇಳನ: (ಮೊದಲನೆಯದು) ಮಹಿಳಾ ಗೋಷ್ಠಿಯ ಅಧ್ಯಕ್ಷತೆ – ೧೯೮೫ರಲ್ಲಿ

* ಬಳ್ಳಾರಿಯಲ್ಲಿ ನಡೆದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಭಾಷಣ.

* ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾ॥ ಅಯ್ಯನ ಹಳ್ಳಿಯಲ್ಲಿ ನಡೆದ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಉದ್ಘಾಟನೆ.

* ಬೆಂಗಳೂರಿನ ಜಂಗಮ ಮಠ ನಡೆಸಿದ ಶರಣ ಸಮ್ಮೇಳನದ ಶರಣೆಯರ ಗೋಷ್ಠಿಯ ಅಧ್ಯಕ್ಷತೆ.

* ಧಾರವಾಡದ 'ಅಚನಿರಸಿಕರಂಗ'ದ ಪ್ರಥಮ ವಾರ್ಷಿಕೋತ್ಸವ ಸಂದರ್ಭದಲ್ಲಿ ನಡೆದ ಮಹಿಳೆಯ ಸಾಹಿತ್ಯ-ಸಾಧನೆಗಳ ಗೋಷ್ಠಿಯ ಅಧ್ಯಕ್ಷೆ - ೨೦೦೧.

* ಬೆಳಗಾಂವಿಯಲ್ಲಿ ನಡೆದ 'ಕದಳಿ' ಮಹಿಳಾ ಸಮಾವೇಶದಲ್ಲಿ 'ಗೋಷ್ಠಿ' ಅಧ್ಯಕ್ಷತೆ. (೮-೧೨-೨೦೦೪)

**ದಾನ - ದತ್ತಿ - ಕೊಡುಗೆ :**

* ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೫,೦೦೦/-ರೂ. ದಂಪತಿಗಳದತ್ತಿ (ಪ್ರತಿ ವರ್ಷ ಕನ್ನಡ ಸಾಹಿತ್ಯದಲ್ಲಿ ವಿಶೇಷ ಸಾಧನೆ ಮಾಡಿರುವ "ದಂಪತಿ"ಗಳಿಗೆ "ಸಾಹಿತ್ಯ ದಂಪತಿ" ಪುರಸ್ಕಾರ ನೀಡಿ ಗೌರವಿಸುವುದಕ್ಕಾಗಿ ದತ್ತಿ).

* ಉತ್ತರ ಕರ್ನಾಟಕ ಲೇಖಕಿಯರ ಸಂಘ, ಧಾರವಾಡ ಇವರಲ್ಲಿ ೫೦೦೦/-ರೂಗಳ ದತ್ತಿ. (ಪ್ರತಿವರ್ಷ ಶ್ರೇಷ್ಠ ಮಹಿಳಾ ಸಾಹಿತ್ಯ ಕೃತಿಗಳಿಗೆ ಪುರಸ್ಕಾರ ನೀಡುವ ಉದ್ದೇಶಕ್ಕಾಗಿ)

* ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರಲ್ಲಿ ದಂಪತಿಗಳ ರೂ.೧೦,೦೦೦/- ದತ್ತಿ. (ಧಾರವಾಡ - ಬಳ್ಳಾರಿ - ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಶರಣ ಸಾಹಿತ್ಯ ಚಿಂತನ ಕುರಿತು ಭಾಷಣ ಕಾರ್ಯಕ್ರಮ ವ್ಯವಸ್ಥೆಗಾಗಿ)

* ಎಚ್.ಎಫ್. ಕಟ್ಟೀಮನಿ ಸ್ಮಾರಕ ಮಕ್ಕಳ ಪುಸ್ತಕ ಸಹಾಯ ನಿಧಿಗೆ ಕಾಣಿಕೆ ರೂ.೧೦,೦೦೦/-

* ಕರ್ನಾಟಕ ವಿಧ್ಯಾವರ್ಧಕ ಸಂಘ ಧಾರವಾಡ, ದತ್ತಿನಿಧಿ - ಮಕ್ಕಳ ಪ್ರತಿಭಾ ಪುರಸ್ಕಾರ ಕಾರ್ಯಕ್ರಮಕ್ಕಾಗಿ.

* ಧಾರವಾಡದ ವಿವೇಕಾನಂದ ರಾಮಕೃಷ್ಣಾಶ್ರಮದ ಕಟ್ಟಡದ ನಿಧಿಗೆ ರೂ.೬,೦೦೦/-

* ಕಲ್ಯಾಣ ನಗರದ "ಸಮುದಾಯ ಭವನ"ಕ್ಕೆ ರೂ.೫,೦೦೦/- ದೇಣಿಗೆ

* ಬೀರೂರು ವೀರಭದ್ರಸ್ವಾಮಿ ದೇವಸ್ಥಾನಕ್ಕೆ ಭಕ್ತಿದಾನ ರೂ. ೧೦,೦೦೦/-

* ಧಾರವಾಡ ಗಣಪತಿ ದೇವಸ್ಥಾನಕ್ಕೆ ಕಾಣಿಕೆ ರೂ.೧೦,೦೦೦/- ಧಾರವಾಡ ಜಂಗಮನ  ಕಟ್ಟಡ ನಿಧಿಗೆ ರೂ.೧೦,೦೦೦/-

* ಶ್ರೀ ಜಗದ್ಗುರು ಕೊಟ್ಟುರು ಸ್ವಾಮಿ ಸಂಸ್ಥಾನ ಮಠ ಹೊಸಪೇಟೆ-ಬಳ್ಳಾರಿ ಶರಣ ಸಾಹಿತ್ಯ ಪ್ರಸಾರ - ಪ್ರಸಾರಕ್ಕಾಗಿ ರೂ.೧೦,೦೦೦/- ದಂಪತಿಗಳ ದತ್ತಿ.

* ಶ್ರೀ ಸುತ್ತೂರು ಸಂಸ್ಥಾನ, ಮೈಸೂರು ಇವರ ಬಡಮಕ್ಕಳ ವಿದ್ಯಾಸೇವೆಗಾಗಿ ರೂ. ೧,೦೦,೦೦೦-೦೦/- ದತ್ತಿ.

**ಲೇಖನಗಳ ಕೊಡುಗೆ :**

* ಮೊದಲನೆಯ ಮಹಿಳಾ ವರ್ಷದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ 'ಮಹಿಳೆ ಸಮಸ್ಯೆಗಳು - ಸಾಧನೆಗಳು' ಎಂಬ ಪುಸ್ತಕಕ್ಕೆ ಮರೆಯಲಾರದ ಮಹಿಳೆಯರು ಎಂಬ ಲೇಖನ. ೧೯೭೬

* ಮೈಸೂರಲ್ಲಿ ನಡೆದ ವಿಶ್ವ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಪ್ರಕಟವಾದ 'ಮಹಿಳೆಯರ ಸಣ್ಣ ಕಥೆಗಳು' ಪುಸ್ತಕದಲ್ಲಿ -'ಹಸಿರು ಸೀರೆ' ಎಂಬ ಕಥೆ ಪ್ರಕಟ.

* ರಾಯಚೂರಿನ ಎಂ.ಪಿ.ಜಾಲಿಯವರ ಸ್ಮರಣ ಸಂಚಿಕೆಗೆ ಲೇಖನ.

* ಬಸವರಾಜ ಕಟ್ಟೀಮನಿಯವರ ಸ್ಮರಣ ಸಂಪುಟಕ್ಕೆ ಲೇಖನ.

* ವಿ.ವಿ. ಶಿಕ್ಷಣ ಮಕಾವಿದ್ಯಾಲಯದಿಂದ ಪ್ರಕಟವಾಗಿತ್ತಿದ್ದ ಬುಲೆಟಿನ್‌ಗೆ ಅನೇಕ ಶೈಕ್ಷಣಿಕ ಲೇಖನಗಳು.

* ಪ್ರಜಾಮತ ವಿಶೇಷ ಸಂಚಿಕೆಗೆ ವೀರಶೈವ ಸಂಪ್ರದಾಯ ವಿವಾಹ ವೈಶಿಷ್ಟ್ಯ ಮತ್ತು ಸಮಾಜ ಎಂಬ ಲೇಖನಗಳು.

* ವಿ.ವಿ ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾದ Western Educators & Eastern Educators  ಎಂಬ ಪುಸ್ತಕಕ್ಕೆ ಲೇಖನಗಳು.

* ಬಾದಾಮಿಯ ವೀರ ಪುಲಕೇಶಿ ಕಾಲೇಜಿನ ವಜ್ರಮಹೋತ್ಸವ ಗ್ರಂಥಕ್ಕೆ ಲೇಖನ.

* ಶ್ರೀಮಾಮನಿಯವರ "ಗುಡದೂರ ಶಿವಚೇತನ" (ಸಜ್ಜಲ ಗುಡ್ಡದ ಶರಣಮ್ಮನವರ ಜೀವನ ಚರಿತ್ರೆ) ಗ್ರಂಥಕ್ಕೆ ಮುನ್ನುಡಿ.

* ಬೆಳಗಾವಿಯ ಶರಣೆಯರ ರವಿದೇವಿ-ಸುಗ್ಗಲಾದೇವಿಯರ ಅಮೃತ ಮಹೋತ್ಸವ ಗ್ರಂಥಕ್ಕೆ ಲೇಖನ.
* ಅಕ್ಕನ ಬಳಗ ಬೆಳಗಾವಿ 'ಶಿವಶರಣೆಯರ ಚರಿತಾಮೃತ'ಕ್ಕೆ ಲೇಖನ.
* ಬೀರೂರಿನಲ್ಲಿ ನಡೆದ ರಂಭಾಪುರಿ ಜಗದ್ಗುರುಗಳ ಒಂಬತ್ತನೆಯ ದಸರಾ ಮಹೋತ್ಸವ ಮತ್ತು ಭಾವೈಕ್ಯ ಧರ್ಮ ಸಮ್ಮೇಳನದಲ್ಲಿ ಪ್ರಕಟವಾದ "ಧರ್ಮ ಸೌರಭ" ಸಂಚಿಕೆಗೆ ಲೇಖನ.
* ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ "ಸಂವೇದನೆಗೆ" ಲೇಖನ.
* ಬೆಂಗಳೂರಿನ ಜಿ.ನಾರಾಯಣ ಅವರ "ವಿನೋದ" ಪತ್ರಿಕೆಗೆ ಲೇಖನಗಳು

**ಪತ್ರಿಕೆಗಳ ಲೇಖನಗಳು :**

ಸುಧಾ, ತುಷಾರ, ವನಿತಾ, ಕರ್ಮವೀರ, ಮಯೂರ, ಲೇಖಕಿ, ಮಂಜುವಾಣಿ, ಪ್ರಜಾಜ್ಯೋತಿ, ಪರಂಜ್ಯೋತಿ, ಸಂಯುಕ್ತ ಕರ್ನಾಟಕ, ಕನ್ನಡಮ್ಮ, ಹೇಮಕೂಟ, ಮಹಾಮನೆ, ವಿವೇಕ ಹಂಸ, ವಿಶಾಲ ಕರ್ನಾಟಕ, ದೀಪಾವಳಿ ಸಂಚಿಕೆಗಳು, ಗೋಕಾಕ್ ಪತ್ರಿಕೆ, ಕ.ವಿ. ವಿದ್ಯಾಲಯದಿಂದ ಪ್ರಕಟವಾಗಿತ್ತಿದ್ದ ಮಾನವಿಕ ವಿಜ್ಞಾನ, ಬೆಂಗಳೂರಿನ ವಿನೋದ ಮುಂತಾದ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿವೆ.

**ಆಕಾಶವಾಣಿ :**

ಈಗ ೩೫ ವರ್ಷಗಳಿಂದ ಧಾರವಾಡದ ಆಕಾಶವಾಣಿಯಲ್ಲಿ ಚಿಂತನೆ-ಚರ್ಚೆ-ಭಾಷಣ-ಸಣ್ಣ ಕಥೆಗಳು, ರೂಪಕಗಳು ಬಿತ್ತರಿಸಲ್ಪಟ್ಟಿವೆ. ಹೊಸಪೇಟೆ ಆಕಾಶವಾಣಿಯವರು ೧೯೯೫ ನಡೆದ, ಜಿಲ್ಲಾ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ವಿಶೇಷ ಸಂದರ್ಭದಲ್ಲಿ ವಿಶೇಷ ಸಂದರ್ಶನ ಬಿತ್ತರಿಸಿದ್ದರು. ಮಡಿಕೇರಿ ಆಕಾಶವಾಣಿ ವಚನಾಂಜಲಿ ಗ್ರಂಥದ ಕೆಲವು ವಚನಗಳನ್ನು ಪ್ರತಿದಿನ ಬೆಳಗಿನ ಸುಪ್ರಭಾತ ಚಿಂತನವಾಗಿ ಪ್ರಸಾರ ಮಾಡಿದೆ.

**ಭಾಷಣಗಳು :**

ಉತ್ತರ ಕರ್ನಾಟಕದ ಅನೇಕ ಶಾಲೆ-ಕಾಲೇಜುಗಳಲ್ಲಿ ಮಠಗಳಲ್ಲಿ ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ, ರೋಟರಿ, ಲಯನ್ಸ್ ಇನ್ನರ್ ವ್ಹೀಲ್‌ಗಳಲ್ಲಿ, ಅಕ್ಕನ ಬಳಗಗಳಲ್ಲಿ, ಧರ್ಮ, ಶಿಕ್ಷಣ, ಮಹಿಳೆ, ಸಮಾಜ ಮುಂತಾದ ವಿಶೇಯಗಳ ಬಗೆಗೆ ಹಲವಾರು ಭಾಷಣಗಳು.

ಪ್ರಕಟಿತ ಗ್ರಂಥಗಳು :

* ಸಜ್ಜಲ ಗುಡ್ಡದ ಶರಣಮ್ಮನವರು – (ಜೀವನ ಚರಿತ್ರೆ)
* ಪತ್ರೆ ಚನ್ನವೀರಪ್ಪಯ್ಯನವರು – ಸಾಧನೆ – ಕೊಡುಗೆ (ಪುಸ್ತಿಕೆ) ಗದಗಿನ ಮಠದ ಪ್ರಕಟಣೆ
* ಮನದ ಮಲ್ಲಿಗೆ – (ವೈಚಾರಿಕ ಲೇಖನಗಳು)
* ವಚನಾಂಜಲಿ – ಆಯ್ದ ಶಿವಶರಣ ವಚನಗಳ ವಿಶ್ಲೇಣೆ (ಕಾವ್ಯಾನಂದ ಪ್ರಶಸ್ತಿ ಬಂದಿದೆ).
* ಮುನಿದೆ ಏಕಮ್ಮ ನೆಲದಾಯಿ (ಕವನ ಸಂಗ್ರಹ)
* ಮಕ್ಕಳ ಶಿಕ್ಷಣ – ಚಿಂತನೆಗಳು – (ಪ್ರಬಂಧಗಳು) (ಮಾ॥ ಶ್ರೀ॥ ರತ್ನಮ್ಮ ಹೆಗ್ಗಡೆಯವರ ಬಹುಮಾನ ವಿಜೇತ ಕೃತಿ)
* ಪುಟ್ಟನಿಗೆ ಹಿತೈಷಿಯ ಪತ್ರಗಳು – ಮಕ್ಕಳಿಗೆ ಜೀವನ ಮೌಲ್ಯಗಳನ್ನು ಪರಿಚಯಿಸುವ ಕೃತಿ.
* ಶಿವಶರಣೆಯರು – ಜೀವನ, ಸಾಧನೆ, ವಚನ (ಸಂಶೋಧನಾತ್ಮಕ ಗ್ರಂಥ)
* ರಚನಾತ್ಮಕ ಚಿಂತನೆಗಳು – (ಪ್ರಸ್ತುತ ಸಮಾಜಕ್ಕೆ ಸಂಬಂಧಿಸಿದ ವೈಚಾರಿಕ ಲೇಖನಗಳು.)
* ಬೇರೊಂದು ಮರವೆರಡು – (ಸಣ್ಣ ಕಥೆಗಳು)
* ಕಿವಿಗೊಟ್ಟುಕೇಳಿ – ಮನವಿಟ್ಟು ಮಾಡು ಮಗುವೇ (೭೫ನೇ ವಯಸ್ಸಿನ ನೆನಪಿನ ಗ್ರಂಥ – ಮಕ್ಕಳಿಗೆ ಉಚಿತ ಸರಬರಾಜು)

ಪ್ರಕಟಿಸಲು ಸಿದ್ದವಿರುವ ಕೃತಿಗಳು :

* ಉದಾತ್ತ ಮಹಿಳೆಯರ ಬಗ್ಗೆ ಲೇಖನಗಳು
* ಧಾರ್ಮಿಕ ವಿಷಯ ಕುರಿತಾದ ಲೇಖನಗಳು
* ವೈಚಾರಿಕ ಪ್ರಬಂಧಗಳು
* ಸಣ್ಣಕಥೆಗಳು
* ಕವನ ಸಂಗ್ರಹ

* ಮೌಲ್ಯ ಬೋಧಿಸುವ ಮಕ್ಕಳ ಕಥೆಗಳು (ಕಥೆಗಳ ಮೂಲಕ ಮಕ್ಕಳಿಗೆ ಮೌಲ್ಯ ಬೋಧನೆ)
* ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳು
* ರೂಪಕಗಳು
* ಶರಣರ ವೈಶಿಷ್ಟ್ಯ ಚಿಂತನೆಗಳು
* ಸಮಾಜದ ಸಮಸ್ಯೆಗಳಿಗೆ ಸಂಬಂಧಿಸಿದ ಲೇಖನಗಳು (ಸ್ತ್ರೀಪರವಾದ / ಶಿಕ್ಷಣ ಮಾಧ್ಯಮ / ಮಿಸಲಾತಿ / ರಾಷ್ಟ್ರಭಾಷೆ ಇ. ಇ....)
* ಆದರ್ಶ ದಂಪತಿಯ ಪ್ರೇಮಪತ್ರಗಳು
* ಪ್ರೊ. ಲಲಿತಾಂಬ "ಸಮಗ್ರ ಕೃತಿ ಸಂಪುಟ – ೧,೨,೩"

ಪ್ರಶಸ್ತಿ ಗೌರವಗಳು :

* ಕಾವ್ಯಾನಂದ ಪ್ರಶಸ್ತಿ
* ರತ್ನಮ್ಮ ಹೆಗ್ಗಡೆಯವರ ಬಹುಮಾನ
* ಮಕ್ಕಳ ಸಾಹಿತ್ಯ ಸಮ್ಮೇಳನ (ಧಾರವಾಡದಲ್ಲಿ– ಸನ್ಮಾನ)
* ಉತ್ತರ ಕರ್ನಾಟಕ ಲೇಖಕಿಯರ ಸಂಘದಿಂದ ಸನ್ಮಾನ
* ಕದಳಿ ಮಹಿಳಾ ವೇದಿಕೆ ಮೈಸೂರು – ಇವರಿಂದ ಕದಳಿ ಶ್ರೀ ಪ್ರಶಸ್ತಿ



ಆದರ್ಶ ಮಹಿಳಾ ಸಾಹಿತಿ, ಶಿಕ್ಷಣ ತಜ್ಞೆ

ಡಾ॥ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ (ಕ.ವಿ.ವಿ. ಧಾರವಾಡ)

ಸಮಗ್ರ ಸಾಹಿತ್ಯದ ೩ ಬೃಹತ್ ಸಂಪುಟಗಳು

"ಶಿಕ್ಷಣ – ಸಾಹಿತ್ಯ – ಸಮಾಜ – ಚಿಂತನೆಗಳ ಹೊಸದೃಷ್ಟಿ"

**ಸಂಪುಟ – ೧ ವಚನಾಂಜಲಿ – ಕಾವ್ಯಾಂಜಲಿ**

ಪುಟ ೭೦೪, ಬೆಲೆ ರೂ. ೪೦೦.೦೦

ಶಿವಶರಣರ ಆಯ್ದ ೧೭೪ ವಚನಗಳ ಸರಳ ವ್ಯಾಖ್ಯಾನ, ಕಾವ್ಯಾನಂದ ಪ್ರಶಸ್ತಿ ಪಡೆದ ಕೃತಿ. ಮತ್ತು ಪ್ರೊ. ಲಲಿತಾಂಬ ಅವರ ಸೃಜನ ಶೀಲ ಕವನ – ಚುಟುಕುಗಳ ಸಂಗ್ರಹ. ಬಹು ಜನಪ್ರಿಯ ಕೃತಿ.

–ಡಾ. ಎಸ್. ವಿದ್ಯಾಶಂಕರ, ಶ್ರೀ ಸಿದ್ಧಯ್ಯ ಪುರಾಣಿಕ

**ಸಂಪುಟ – ೨ ಜೀವನ ಚರಿತ್ರೆ – ಶಿಕ್ಷಣಾಂಜಲಿ**

ಪುಟ ೫೧೬, ಬೆಲೆ ರೂ. ೩೦೦.೦೦

ಶಿವಶರಣೆಯರ ಚರಿತ್ರೆ ಮತ್ತು ಶಿಕ್ಷಣದ ಬಹುಮುಖ ಸಮಸ್ಯೆಗಳ ವಿಶ್ಲೇಷಣೆ – ಸಂಸ್ಕೃತಿ ಚಿಂತನೆಗಳ ಪ್ರಬಂಧಗಳು. ಎಲ್ಲ ಭಾರತೀಯ ಭಾಷೆಗಳಿಗೆ ಭಾಷಾಂತರವಾಗ ಬಹುದಾದ ಕೃತಿ

–ನ್ಯಾ. ಶ್ರೀ ವಿ.ಎಸ್.ಮಳಿಮಠ, ಡಾ. ಹಾ.ಮಾ.ನಾಯಕ

**ಸಂಪುಟ – ೩ ಕಥಾಂಜಲಿ – ಚಿಂತನಾಂಜಲಿ – ಸ್ಮರಣಾಂಜಲಿ**

ಪುಟ ೫೫೦, ಬೆಲೆ. ರೂ. ೩೦೦.೦೦

ಪ್ರೊ. ಲಲಿತಾಂಬ ಅವರ ಸ್ವತಂತ್ರ ಕಥೆ, ಸಾಹಿತ್ಯ ಪ್ರಬಂಧ – ಚಿಂತನಗಳು ಸಂಗ್ರಹ ಮನದ ಮಲ್ಲಿಗೆ ಇ.ಇ. ಮತ್ತು ಸ್ಮರಣಾಂಜಲಿ – ಶ್ರದ್ಧಾಂಜಲಿಗಳ ಸಂಗ್ರಹ – ಜೀವನ ಸಾಧನೆಗಳ ಸಮೀಕ್ಷೆ.

–ಡಾ. ಶಾಂತಾ ಇಮ್ರಾಪುರ

೩ ಸಂಪುಟಗಳ ಒಟ್ಟು ಬೆಲೆ–ರೂ.೧೦೦೦.೦೦

ಶಿಕ್ಷಣ ಸಂಸ್ಥೆಗಳಿಗೆ ರಿಯಾಯತಿ ಬೆಲೆ ರೂ.೭೫೦.೦೦

ಪ್ರಸಾದ ಪ್ರಕಾಶನ
ಕಲ್ಯಾಣ ನಗರ, ೬ನೇ ಅಡ್ಡರಸ್ತೆ,
ಧಾರವಾಡ – ೫೮೦ ೦೦
ದೂರವಾಣಿ : ೦೮೩೬ – ೨೪೪ ೮೫೭೦